BHĀRATĪYA JÑĀNAPĪṬHA MŪRTIDEVĪ

JAINA GRANTHAMĀLĀ

FOUNDED BY

SĀHU SHĀNTIPRASĀD JAIN

IN MEMORY OF HIS LATE BENEVOLENT MOTHER

SHRĪMATI MŪRTIDEVĪ

In this Granthamālā critically edited Jaina Āgamic, Philosophical, Purānic, Literary, Historical and other original texts available in Prākrit, Sanskrit, Apabhramśa, Hindi, Kannada, Tamil etc are being published in these respective languages with their translations in modern languages and catalogues of Jaina Bhandaras, Inscriptions, studies of competent scholars and popular Jaina Literature are also being published

*General Editors*

**Dr. Hiralal Jain,** M A, D Litt

**Dr. A. N Upadhye,** M A, D Litt

*Printed by*
**Sharada Press, Car Street, Mangalore-1**

*Published by*
**Bharatiya Jnanapitha, 9 Alipore Park Place, Calcutta-27**

*Copies of this book can be had from*
**Kannada Sahitya Parishat, Chamaraj Pete, Bangalore-18**

**Bharatiya Jnanapitha**

Head office 9 Alipore Park Place, Calcutta-27

Publication office Durgakund Road, Varanasi-5

Sales office 3620/21 Netaji Subhash Marg, Delhi-6

Founded on Phalguna Krishna 9, Vira Sam 2470, Vikrama Sam 2000 18th Febr 1944

ಜ್ಞಾನಪೀಠ ಮೂರ್ತಿದೇವೀ ಜೈನ ಗ್ರಂಥಮಾಲಾ: ಕನ್ನಡ ಗ್ರಂಥ-೧

ದೇವಪ್ಪಕವಿ ವಿರಚಿತ

# ರಾಮವಿಜಯ ಕಾವ್ಯ

(ಸಂಶೋಧನಾತ್ಮಕ ರೀತಿಯಿಂದ ಪಾಠಾಂತರ
ಮತ್ತು ಕನ್ನಡ ಅನುವಾದ ಇತ್ಯಾದಿ ಸಹಿತ ಸಂಪಾದಿತ)

ಸಂಪಾದಕರು:

**ಪ್ರೊ. ಟಿ. ಕೇಶವ ಭಟ್ಟ,** ಎಮ್. ಎ.

ಬೆಂಗಳೂರು

ಭಾರತೀಯ ಜ್ಞಾನಪೀಠ ಪ್ರಕಾಶನ

ಮೊದಲನೆಯ ಆವೃತ್ತಿ
೧೦೦೦ ಪ್ರತಿಗಳು

ವೀ. ನಿ. ಸ. ೨೪೯೫
ಇ. ಸ. ೧೯೬೯

ಬೆಲೆ
ರೂಪಾಯಿ ೨೦/-

ಸ್ವ. ಪುಣ್ಯಶ್ಲೋಕಾ ಮಾತಾ ಮೂರ್ತಿದೇವಿಯವರ ಪವಿತ್ರ ಸ್ಮಾರಕವೆಂದು
ಅವರ ಸುಪುತ್ರ ಸಾಹೂ ಶಾಂತಿಪ್ರಸಾದಜೀಯವರಿಂದ

## ಸಂಸ್ಥಾಪಿತ

# ಭಾರತೀಯ ಜ್ಞಾನಪೀಠ ಮೂರ್ತಿದೇವೀ ಜೈನ ಗ್ರಂಥಮಾಲಾ

ಈ ಗ್ರಂಥಮಾಲೆಯ ಅಂತರ್ಗತ, ಪ್ರಾಕೃತ, ಸಂಸ್ಕೃತ ಅಪಭ್ರಂಶ ಹಿಂದೀ, ಕನ್ನಡ, ತಮಿಳು ಮೊದಲಾದ
ಪ್ರಾಚೀನ ಭಾಷೆಗಳಲ್ಲಿ ಉಪಲಬ್ಧ, ಆಗಮಿಕ ದಾರ್ಶನಿಕ, ಪೌರಾಣಿಕ, ಸಾಹಿತ್ಯಿಕ, ಐತಿಹಾಸಿಕ
ಇತ್ಯಾದಿ ವಿವಿಧ ವಿಷಯಕ ಜೈನ ಸಾಹಿತ್ಯದ ಅನುಸಂಧಾನಪೂರ್ಣ ಸಂಪಾದನ, ತಥಾ ಅವುಗಳ
ಮೂಲ ಮತ್ತು ಯಥಾಸಂಭವ ಅನುವಾದ ಇವುಗಳ ಪ್ರಕಾಶನವಾಗುತ್ತಲಿದೆ
ಜೈನಭಂಡಾರಗಳ ಸೂಚಿ, ಶಿಲಾಲೇಖಸಂಗ್ರಹ, ವಿಶಿಷ್ಟ ವಿದ್ವಾಂಸರ ಅಧ್ಯಯನ
ಗ್ರಂಥ ಮತ್ತು ಲೋಕಹಿತಕಾರಿ ಜೈನಸಾಹಿತ್ಯ ಗ್ರಂಥಗಳೂ
ಈ ಗ್ರಂಥಮಾಲೆಯಲ್ಲಿ ಪ್ರಕಾಶಿತವಾಗುತ್ತಿವೆ

ಗ್ರಂಥಮಾಲಾ ಸಂಪಾದಕ

**ಡಾ. ಹೀರಾಲಾಲ ಜೈನ, ಎಮ್. ಎ. ಡಿ.ಲಿಟ್**

**ಡಾ. ಆ. ನೇ. ಉಪಾಧ್ಯೆ, ಎಮ್. ಎ. ಡಿ.ಲಿಟ್**


ಮುದ್ರಕ
ಶಾರದಾ ಪ್ರೆಸ್, ಕಾರಸ್ಟ್ರೀಟ್, ಮಂಗಳೂರು-೧
ಪ್ರಕಾಶಕ
ಭಾರತೀಯ ಜ್ಞಾನಪೀಠ, ೯ ಅಲಿಪೂರ ಪಾರ್ಕ ಪ್ಲೇಸ, ಕಲಕತ್ತಾ-೨೭
ಈ ಗ್ರಂಥ ದೊರೆಯುವ ಸ್ಥಳ
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು-೧೮

**ಪ್ರಕಾಶಕ–ಭಾರತೀಯ ಜ್ಞಾನಪೀಠ**

ಪ್ರಧಾನ ಕಾರ್ಯಾಲಯ—೯ ಅಲಿಪುರ ಪಾರ್ಕ ಪ್ಲೇಸ ಕಲಕತ್ತಾ–೨೭
ಪ್ರಕಾಶನ ಕಾರ್ಯಾಲಯ—ದುರ್ಗಾಕುಂಡ ಮಾರ್ಗ, ವಾರಾಣಸೀ–೫
ವಿಕ್ರಯ ಕೇಂದ್ರ—೩೬೨೦-೨೧ ನೇತಾಜಿ ಸುಭಾಷ ಮಾರ್ಗ, ದಿಲ್ಲೀ–೬

ಸ್ಥಾಪನೆ–ಫಾಲ್ಗುಣ ಕೃಷ್ಣ ೯, ವೀರ ನಿಂ ೨೪೭೦, ವಿಕ್ರಮ ಸಂ ೨೦೦೦
೧೮ ಫೆಬ್ರುವರಿ ಸನ್ ೧೯೪೪.

# ವಿಷಯಸೂಚಿ

# General Editorial

The Bhāratīya Jñānapīṭha is a premier academic Institution of our country which carries on cultural-literary activities of great significance. The object of this Institution is to conduct researches so as to bring out the forgotten, rare and unpublished works of knowledge and to give impetus to the creation of original literature for the benefit of the people. To fulfil these objects, the Jñānapīṭha has published, during the last 25 years, in its Mūrtidevī Granthamālā nearly 70 works in Sanskrit, Prākrit, Apabhraṁśa, Hindi, Pāli, Tamil etc. Besides these cultural publications, it has to its credit nearly 275 Hindi books in its Lokodaya Granthamalā. Their contents are not only interesting but also instructive and cover various aspects of Hindi literature.

Besides the Mūrtidevī Granthamālā, the Jñānapīṭha has continued publishing the Māṇikchandra Granthamālā in which some 50 volumes have appeared. Many rare works in Apabhraṁśa, Prākrit and Sanskrit are published, and they shed light on some of the neglected fields of Indological learning.

It is in this Mūrtidevī Jaina Granthamālā that the Jñānapīṭha has planned to publish critical editions of important Kannaḍa classics along with literal and fluent translation in modern Kannaḍa on an uniform plan. The ultimate object is to make available the contents of these Kannaḍa classics, in due course, in Hindi and other languages of our land. At present some 23 Kannaḍa classics have been undertaken for publication and entrusted to eminent Kannaḍa Scholars for critical editing and translation. It is hoped that the classics do not remain a secluded pasture for the learned only, but their contents become a common property and heritage of the entire nation.

The *Rāmavijayakāvya* published here is the First Volume of the Kannaḍa Series. It narrates the age-old story of Rāma in a popular style and catching manner. The author, Devappa Kavi, worthily continues that tradition of eminent Kannaḍa authors like Pampa and others. He was not only a gifted poet, but a minister as well of King Nañjuṇḍa of Nañjarāya Paṭṭana. He flourished sometime in the middle of the 16th century A. D. It will be seen that the text is critically presented with various Readings. It is accompanied by translation in modern Kannaḍa. The edition is

equipped with a critical Introduction and useful Appendices which will enable the reader to understand and appreciate this Kāvya in its various aspects.

Prof. T. KESHAVA BHATT has ably edited this work and thus enriched Kannaḍa literature which has many eminent works still to be critically published. Our thanks are due to him for placing this work in our hands for publication in the Kannaḍa Series of the Mūrtidevī Granthamālā of the Bhāratīya Jñānapīṭha.

We are grateful to our patron, Shriman SAHU SHANTI PRASADJI and to his enlightened wife, Smt. RAMADEVI, whose cosmopolitan outlook are exemplary. It is through their generosity that a number of works in Sanskrit, Prākrit etc. have seen the light of day, and it is through their munificence that the Kannada Series is inaugurated. We are sure, with the active cooperation of Kannada scholars many more works would soon see the light of day We are thankful to the authorities of the Sharada Press, Mangalore, for their cooperation in the publication of this work.

*Jabalpur* H. L. Jain
*Kolhapur* A. N. Upadhye
1-8-'69.

# ಗ್ರಂಥಮಾಲಾ ಸಂಪಾದಕೀಯ

**ಭಾರತೀಯ ಜ್ಞಾನಪೀಠವು** ಸಂಸ್ಕೃತಿ-ಸಾಹಿತ್ಯಗಳಿಗೆ ಸಂಬಂಧಿಸಿದ ಮಹತ್ವದ ಕಾರ್ಯಕ್ರಮಗಳನ್ನು ನಡಸುವ ನಮ್ಮ ದೇಶದ ಒಂದು ವಿದ್ಯಾಸಂಸ್ಥೆ. ಸಂಶೋಧನಗಳನ್ನು ನಡಸುವುದು, ವಿಸ್ಮೃತವೂ ಅಪೂರ್ವವೂ ಅಪ್ರಕಟಿತವೂ ಆಗಿರುವ ಜ್ಞಾನಮಯ ಕೃತಿಗಳನ್ನು ಪ್ರಕಾಶನಗೊಳಿಸುವುದು. ಜನತೆಗೆ ಪ್ರಯೋಜನಕರವಾದ ಮೌಲಿಕ ಸಾಹಿತ್ಯಗಳ ರಚನೆಗೆ ಉತ್ತೇಜನವೀಯುವುದು— ಇವು ಈ ಸಂಸ್ಥೆಯಿಟ್ಟುಕೊಂಡಿರುವ ಧ್ಯೇಯಗಳು. ಈ ಧ್ಯೇಯಸಾಧನೆಗಾಗಿ ಕಳೆದ ೨೫ ವರ್ಷಗಳಲ್ಲಿ ಜ್ಞಾನಪೀಠವು ತನ್ನ **ಮೂರ್ತಿದೇವೀ ಗ್ರಂಥಮಾಲೆಯ** ಮೂಲಕ ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಹಿಂದೀ, ಪಾಲೀ, ತಮಿಳು ಮುಂತಾದ ಭಾಷೆಗಳಲ್ಲಿ ಸುಮಾರು ೭೦ ಗ್ರಂಥಗಳನ್ನು ಪ್ರಕಟಿಸಿರುತ್ತದೆ. ಈ ಬಗೆಯ ಸಂಸ್ಕೃತಿಪ್ರಧಾನ ಪ್ರಕಾಶನಗಳನ್ನಲ್ಲದೆ ಜ್ಞಾನಪೀಠವು **ಲೋಕೋದಯ ಗ್ರಂಥಮಾಲೆಯ** ಮೂಲಕ ೨೭೫ ಹಿಂದೀ ಪುಸ್ತಕಗಳನ್ನು ಪ್ರಕಟಗೊಳಿಸಿರುತ್ತದೆ. ಈ ಪುಸ್ತಕಗಳಲ್ಲಿ ಅಡಕವಾಗಿರುವ ವಿಚಾರಗಳು ಪ್ರಬೋಧಕವೂ ಹೃದಯಂಗಮವೂ ಆಗಿದ್ದು ಹಿಂದೀಸಾಹಿತ್ಯದ ವಿವಿಧ ಮುಖಗಳನ್ನು ಒಳಗೊಂಡಿರುತ್ತವೆ.

ಮೂರ್ತಿದೇವೀ ಗ್ರಂಥಮಾಲೆಯನ್ನಲ್ಲದೆ, ಜ್ಞಾನಪೀಠವು **ಮಾಣಿಕಚಂದ್ರ ಗ್ರಂಥಮಾಲೆಯನ್ನೂ** ಪ್ರಕಾಶನ ಗೊಳಿಸುತ್ತ ಬಂದಿದೆ. ಈ ಮಾಲೆಯಲ್ಲಿ ಸುಮಾರು ೫೦ ಗ್ರಂಥಗಳು ಪ್ರಕಟವಾಗಿವೆ. ಈ ಪ್ರಕಟನದ ಕೆಲವು ಅಪೂರ್ವ ಪ್ರಾಕೃತ, ಅಪಭ್ರಂಶ ಮತ್ತು ಸಂಸ್ಕೃತ ವಿದ್ಯೆಯ ಗ್ರಂಥಗಳು ಭಾರತೀಯ ವಿದ್ಯೆಯ **(Indology)** ಅಧ್ಯಯನ ಕ್ಷೇತ್ರದಲ್ಲಿ ದುರ್ಲಕ್ಷಿತವಾದ ಹಲವಾರು ಅಂಶಗಳ ಮೇಲೆ ಬೆಳಕುಬೀರುವಂಥವಾಗಿವೆ.

ಜ್ಞಾನಪೀಠವು ಇದೇ ಮೂರ್ತಿದೇವೀ ಜೈನಗ್ರಂಥಮಾಲೆಯ ಮೂಲಕ, ಕನ್ನಡದ ಪ್ರಮುಖ ಕಾವ್ಯಪ್ರಬಂಧಗಳನ್ನು ವಿಮರ್ಶಾತ್ಮಕ ಸಂಸ್ಕರಣದೊಡನೆಯೂ ಹೊಸಗನ್ನಡದ ಸಾಹಿತ್ಯಭಾಷೆಯಲ್ಲಿ ಬರೆದ ಸರಳಾನುವಾದದೊಡನೆಯೂ ಏಕರೂಪತೆಯಿಂದ ಪ್ರಕಾಶಪಡಿಸುವ ಯೋಜನೆಯನ್ನು ಮಾಡಿಕೊಂಡಿದೆ. ಹೀಗೆ ಮಾಡುವುದರ ಕೊನೆಯ ಗುರಿ— ಕನ್ನಡದ ಈ ಕಾವ್ಯಗಳ ಸಾರವಿಷಯವನ್ನು ಕಾಲಾನುಭಾಗದಲ್ಲಿ ನಮ್ಮ ದೇಶದ ಹಿಂದಿಗೆ ಮತ್ತಿತರ ಭಾಷೆಗಳಿಗೆ ಪರಿವರ್ತಿಸಿ ಜನತೆಗೆ ಓದಲು ಒದಗಿಸಬಹುದೆಂಬುದೇ ಆಗಿದೆ. ಈಗ ತಾನೆ ಕನ್ನಡದ ಸುಮಾರು ೨೫ ಮಾರ್ಗಕಾವ್ಯಗಳನ್ನು ಪ್ರಕಾಶನಕ್ಕಾಗಿ ಆಯ್ಕೆಮಾಡಲಾಗಿದ್ದು, ಅವನ್ನು ಸವಿಮರ್ಶವಾಗಿ ಸಂಪಾದಿಸಲು ಮತ್ತು ಸರಳಾನುವಾದ ಮಾಡಲು ಪ್ರಸಿದ್ಧ ವಿದ್ವಜ್ಜನರಿಗೆ ವಹಿಸಿಕೊಡಲಾಗಿದೆ. ಈ ಬಗೆಯ ಪ್ರಕಾಶನದ ಮೂಲಕ, ಇಂತಹ ಪ್ರೌಢಕಾವ್ಯಗಳು ವಿದ್ವಜ್ಜನರ ಗ್ರಾಸಕ್ಕೆ ಮಾತ್ರವೆ ಅರ್ಹವೆನಿಸಿ ಉಳಿದುಕೊಳ್ಳದೆ, ಅವುಗಳ ಸಾರಸಂಸ್ಕೃತಿ ವಿಷಯಂಗಳು ಸಮಗ್ರ ರಾಷ್ಟ್ರಕ್ಕೆ ಸಾಮಾನ್ಯವಾದ ಸೊತ್ತಾಗುವುದೆಂದು ನಿರೀಕ್ಷಿಸಲಾಗಿದೆ.

ಈಗ ಪ್ರಕಟವಾಗುವ **ರಾಮವಿಜಯಕಾವ್ಯವು** ಈ ಗ್ರಂಥಮಾಲೆಯ ಕನ್ನಡದ ಪ್ರಕಾಶನ ಶ್ರೇಣಿಯಲ್ಲಿ ಮೊದಲನೆಯದು. ಇದು ಪ್ರಾಚೀನವಾದ ರಾಮಕಥೆಯನ್ನು ಜನಪ್ರಿಯ ಶೈಲಿಯಲ್ಲಿ ಚೇತೋಹಾರಿಯಾಗಿ ನಿರೂಪಿಸುತ್ತದೆ. ಇದನ್ನು ರಚಿಸಿರುವ **ದೇವಪ್ಪಕವಿ** ಇಂತಹದೊಂದು ಕಾವ್ಯರಚನೆಯ ಮೂಲಕ, ಹಿಂದಿನ ಪ್ರಸಿದ್ಧ ಕವಿಗಳಾದ ಪಂಪ ಮೊದಲಾದವರ ಪರಂಪರೆಯ ಮಾರ್ಗವನ್ನು ಸುಯೋಗ್ಯವಾಗಿ ಮುಂದುವರಿಸಿದ್ದಾನೆ. ದೇವಪ್ಪನು ಒಬ್ಬ ವರಕವಿ. ಆತನು **ನಂಜರಾಯ ಪಟ್ಟಣದ ನಂಜುಂಡರಾಜನ** ಮಂತ್ರಿಯೂ ಆಗಿದ್ದನು. ಕ್ರಿಸ್ತ ಶಕ ೧೬ನೆಯ ಶತಮಾನದ ಸುಮಾರು ಮಧ್ಯಭಾಗದಲ್ಲಿ ಅವನು ಬಾಳಿದವನು. ಆತನ ಕಾವ್ಯವು ಇಲ್ಲಿ ವಿವಿಧ ಪಾಠಾಂತರ ನಿರ್ದೇಶಗಳೊಡನೆ ವಿಮರ್ಶನ ಸಹಿತವಾಗಿ ಓದುಗರ ಸಮಕ್ಷಕ್ಕೆ ಬಂದಿದೆ. ಪದ್ಯಗಳಿಗೆ ಹೊಸಗನ್ನಡದ ಸರಳಾನುವಾದವಿದೆ. ವಿಮರ್ಶಾತ್ಮಕ ಪ್ರಸ್ತಾವನೆ, ಉಪಯುಕ್ತವಾದ ಅನುಬಂಧ— ಇವುಗಳಿಂದ ಕೂಡಿದ ಗ್ರಂಥಸಂಪಾದನವಿದು. ಈ ಕಾವ್ಯವನ್ನು ವಿವಿಧ ದೃಷ್ಟಿಕೋನಗಳಿಂದ ನೋಡುವ ಸಂಶೋಧಕ–ವಿಮರ್ಶಕ–ರಸಿಕ–ಕುತೂಹಲಿ ಪಾಠಕ ಶ್ರೋತೃಗಳಿಗೆ ಗುಣಗ್ರಹಣಮಾಡಲು ಸಹಾಯಕವಾಗುವಂತೆ ಇದು ಅಳವಟ್ಟಿದೆ.

ಕನ್ನಡದಲ್ಲಿ ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಬೇಕಾಗಿರುವ ಪ್ರಮುಖ ಕೃತಿಗಳು ಇನ್ನೂ ಅನೇಕವಾಗಿ ಉಳಿದುಕೊಂಡಿವೆ. ಅವುಗಳಲ್ಲಿ ಇದೊಂದು ಕಾವ್ಯವನ್ನು **ಪ್ರೊ. ಟಿ. ಕೇಶವ ಭಟ್ಟರು** ಸಮರ್ಥರೀತಿಯಲ್ಲಿ ಸಂಪಾದಿಸಿ

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿರುತ್ತಾರೆ ತಾವು ಸಂಪಾದಿಸಿದ ಈ ಕೃತಿಯನ್ನು ಮೂರ್ತಿದೇವೀ ಗ್ರಂಥಮಾಲೆಯ ಕನ್ನಡದ ಕೃತಿಶ್ರೇಣಿಯಲ್ಲಿ ಬೆಳಕಿಗೆ ತರಲು ನಮ್ಮ ಕೈಗಿತ್ತುದಕ್ಕಾಗಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ

ವಿಶಾಲದೃಷ್ಟಿಕೋನದಲ್ಲಿ ಆದರ್ಶರೂ ನಮ್ಮ (ಗ್ರಂಥಮಾಲೆಯ) ಪೋಷಕರೂ ಆಗಿರುವ ಶ್ರೀಮಾನ್ ಸಾಹು ಶಾಂತಿಪ್ರಸಾದಜೀಯವರಿಗೂ ಮತ್ತು ಅವರ ಪ್ರಬೋಧವತೀ ಪತ್ನಿಯವರಾದ ಶ್ರೀಮತಿ ರಮಾದೇವಿಯವರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ ಅವರ ಉದಾರತೆಯಿಂದಲೇ ಇಂದೀಗ ಸಂಸ್ಕೃತ–ಪ್ರಾಕೃತ ಮುಂತಾದ ಭಾಷೆಗಳಲ್ಲಿ ಹಲವಾರು ಕೃತಿಗಳು ಪ್ರಕಾಶನಗೊಳ್ಳುತ್ತಿವೆ ಅವರ ಕೊಡುಗೈತನದಿಂದಲೇ ಈ ರಾಮವಿಜಯಕಾವ್ಯ ಪ್ರಕಾಶನದ ಮೂಲಕ ಕನ್ನಡದ ಗ್ರಂಥಶ್ರೇಣಿ ಉದ್ಘಾಟನೆಗೊಳ್ಳುತ್ತಿದೆ ಕನ್ನಡದ ವಿದ್ವಜ್ಜನರ ಸಕ್ರಿಯ ಸಹಕಾರ್ಯದಿಂದ ಬೇಗನೆ ಇನ್ನೂ ಅನೇಕ ಸಾಹಿತ್ಯಕೃತಿಗಳು ಬೆಳಕಿಗೆ ಬರುವವೆಂದು ದೃಢವಾಗಿ ನಂಬುತ್ತೇವೆ. ಈ ಗ್ರಂಥಪ್ರಕಾಶನ ಕಾರ್ಯದಲ್ಲಿ ಸಹಕಾರ್ಯವನ್ನು ನೀಡಿದ ಶಾರದಾ ಮುದ್ರಣಾಲಯ, ಮಂಗಳೂರು, ಇದರ ವ್ಯವಸ್ಥಾಪಕರಿಗೆ ನಾವು ಆಭಾರಿಯಾಗಿದ್ದೇವೆ

ಜಬಲಪುರ
ಕೊಲ್ಹಾಪುರ
೧–೮–'೬೯.

ಹೀರಾಲಾಲ ಜೈನ
ಆ. ನೇ. ಉಪಾಧ್ಯೆ

# ಸಂಪಾದಕೀಯ

ಸ್ವಾಂತಸ್ಸುಖವನ್ನೇ ಧ್ಯೇಯವಾಗಿ ಭಾವಿಸುವ ಗ್ರಂಥಕರ್ತನಿಗೆ ಹೇಗೋ ಗ್ರಂಥಸಂಪಾದಕನಿಗೂ ಹಾಗೆಯೇ, ತಾನು ಶ್ರಮವಹಿಸಿ ಸಿದ್ಧಗೊಳಿಸಿದ ಗ್ರಂಥದ ಪಠನದಿಂದಾಗುವ ಅಂತಸ್ಸುಖವನ್ನು ತನ್ನ ಸಾಮಾಜಿಕರಿಗೆ ವಿಸ್ತರಿಸುವ ಹಂಬಲವು ಸಹಜವಾಗಿ ಇರುತ್ತದೆ. ಆದುದರಿಂದ ಗ್ರಂಥಪ್ರಕಾಶನದ ಬಗೆಗೂ ಈ ಕಾಲದಲ್ಲಿ ಆತ ಯತ್ನಿಸುತ್ತಾನೆ. ಈ ಸಂಗತಿಗೆ ಅನುಗುಣವಾಗಿ ಪ್ರಸ್ತುತ ಗ್ರಂಥವು ಮುದ್ರಣಕ್ಕೆ ಅಣಿಯಾದೊಡನೆ, ನಮ್ಮ ಕರ್ಣಾಟಕ ಸರಕಾರವೇ ಇದನ್ನು ಮುದ್ರಿಸಲೆಂದು ನಮ್ಮ ವಿದ್ಯಾ ಇಲಾಖೆಯ ಡೈರೆಕ್ಟರ್ ಶ್ರೀ ಟಿ. ವಾಸುದೇವಯ್ಯನವರಿಗೆ ಇದನ್ನು ತೋರಿಸಿ ವಿಜ್ಞಾಪಿಸಿದೆ. ಅವರು ನನ್ನೀ ಕೆಲಸಕ್ಕೆ ಮೆಚ್ಚಿ, ಈ ವಿಷಯದಲ್ಲಿ ಸಾಹಿತ್ಯ-ಸಂಸ್ಕೃತಿ ವಿಭಾಗದ ವಿಶೇಷಾಧಿಕಾರಿಗಳೂ, ಕನ್ನಡ ವಿಶ್ವಕೋಶ ಸಂಪಾದಕರೂ, ಶ್ರೇಷ್ಠ ಸಾಹಿತಿಗಳೂ ಆದ ಶ್ರೀ ಕೆ. ಎಸ್ ಧರಣೇಂದ್ರಯ್ಯನವರೊಡನೆ ವ್ಯವಹರಿಸಲು ಸೂಚಿಸಿದರು ಶ್ರೀ ಧರಣೇಂದ್ರಯ್ಯ ನವರು ಈ ಗ್ರಂಥವನ್ನೋದಿ, ಅರ್ಹತೆಯನ್ನರಿತು, ಸರಕಾರದ ಮೂಲಕವಿದನ್ನು ಪ್ರಕಾಶಪಡಿಸಲು ಸಾಧ್ಯವಾಗದಿದ್ದಲ್ಲಿ ಬೇರಾವುದಾದರೂ ಪ್ರಕಾಶನ ಸಂಸ್ಥೆಯ ಮೂಲಕ ಹೊರತರಲು ನೆರವಾಗುವ ನಂಬುಗೆಯಿತ್ತರು. ಅವರ ಪ್ರಯತ್ನದಿಂದ ಇದು "ಭಾರತೀಯ ಜ್ಞಾನಪೀಠ" ಎಂಬ ಮಹಾಸಂಸ್ಥೆಯ ಮೂರ್ತಿದೇವೀ ಜೈನಗ್ರಂಥಮಾಲೆಯ ಕನ್ನಡ ವಿಭಾಗದ ಪ್ರಕಾಶನಗ್ರಂಥವಾಗಿ ಪ್ರಕಟಗೊಳ್ಳಲು ಸ್ವೀಕೃತವಾಯಿತು. ಈ ಪ್ರಕಾಶನ ಸಂಸ್ಥೆಯ ಮುಖ್ಯ ಸಂಪಾದಕರಾಗಿರುವ ಡಾ॥ ಎ. ಎನ್. ಉಪಾಧ್ಯೆ-ಅವರು, ಶಾಸ್ತ್ರೀಯವಾಗಿ ಸಂಪಾದಿತವಾದ ಇದನ್ನು ಪ್ರಕಾಶಗೊಳಿಸುವ ನಿರ್ಣಯವನ್ನು ಸೂಚಿಸಿ, ಸಂಸ್ಥೆಯ ಪ್ರಕಾಶನ ನಿಯಮದಂತೆ ಇದಕ್ಕೆ ಸರಳಾನುವಾದ ಬರೆಯಲು ತಿಳಿಸಿದುದರಿಂದ ಹಾಗೆ ಮಾಡಲಾಗಿದೆ. 19-11-1962ರಲ್ಲಿ ಪ್ರಾರಂಭಮಾಡಿ 10-4-1965ರಲ್ಲಿ ಪೂರ್ಣಗೊಳಿಸಿದ ಗ್ರಂಥಸಂಪಾದನೆಯ ಸಾಹಸದ ಕಾರ್ಯವಿದು. ಈಗ ಅಚ್ಚಾಗಿ ಪ್ರಕಟಿತವಾಗಿದೆ.

ಈ ರಾಮವಿಜಯ ಕಾವ್ಯದ ಸಂಪಾದನ ಕಾರ್ಯಕ್ಕೆ ಪ್ರೇರಕರಾದವರಿಗೆ, ಶುಭಾಶಯದೊಡನೆ ಪ್ರೋತ್ಸಾಹಿಸಿದವರಿಗೆ, ಮಾತೃಕೆಗಳನ್ನು ಒದಗಿಸಿಕೊಟ್ಟವರಿಗೆ, ಪ್ರಕಾಶನಕ್ಕೆ ದಾರಿತೋರಿದವರಿಗೆ, ಗ್ರಂಥಪ್ರಕಾಶನವನ್ನು ಮಾಡಿದ "ಭಾರತೀಯ ಜ್ಞಾನಪೀಠ"ದ ಅಧಿಕಾರಿಗಳಿಗೆ, ಆ ಪ್ರಕಾಶನ ಸಂಸ್ಥೆಯ ಮಾನ್ಯ ಸಂಪಾದಕರಿಗೆ, ಮತ್ತು ಮುದ್ರಕರಿಗೆ ಹೃತ್ಪೂರ್ವಕವಾಗಿ ಅಭಿವಂದನೆಗಳನ್ನೂ ಅಭಿನಂದನೆಗಳನ್ನೂ ಸಲ್ಲಿಸುತ್ತೇನೆ

ಬೆಂಗಳೂರು,
ಶಕ ೧೮೯೧, ಸೌಮ್ಯ,
ಗುರುಪೂರ್ಣಿಮೆ, (29-7-1969)

**ಟಿ. ಕೇಶವ ಭಟ್ಟ**
ಸಂಪಾದಕ

# ಉಪೋದ್ಘಾತ

## ೧. ಗ್ರಂಥಸಂಸ್ಕರಣ

**ಮಾತೃಕೆಗಳು:** ಕನ್ನಡದಲ್ಲಿ ಜೈನಕವಿಗಳು ಬರೆದಿರುವ ರಾಮಾಯಣ ಕಥೆಯ ಸ್ವರೂಪದ ಮತ್ತು ಪರಂಪರೆಯ ದೃಷ್ಟಿಯಿಂದ ಮಹತ್ವವನ್ನೂ ವೈಶಿಷ್ಟ್ಯವನ್ನೂ ತಾಳಿರುವ ಈ "ರಾಮವಿಜಯ" ಕಾವ್ಯದ ಓಲೆಗರಿಯ ಒಂದು ಪ್ರತಿ ನನಗೆ ೧೯೫೪ರಲ್ಲಿ ಮೈಸೂರು ನಗರದ ಶ್ರೀ ಪಾರ್ಶ್ವನಾಥ ಜಿನಾಲಯದಲ್ಲಿ ದೊರಕಿತು. ಈ ಗ್ರಂಥ ಸಂರಕ್ಷಣೆಯ ಪುಣ್ಯದಿಂದ ಮತ್ತು ಶ್ರೀವೃದ್ಧಿಯ ನಿರೀಕ್ಷೆಯಿಂದ ರಾಜಪುರೋಹಿತ ಆಸ್ಥಾನ ವಿದ್ವಾನ್, ಶ್ರೀ ಎಸ್. ಪಿ. ಪಾರ್ಶ್ವನಾಥ ಶಾಸ್ತ್ರಿಗಳು ಮತ್ತು ಅವರ ಪುತ್ರರು ಗ್ರಂಥ ಸಂಸ್ಕರಣ ಕುತೂಹಲಿಯಾದ ನನಗೆ ಇದನ್ನಿತ್ತು, ನನ್ನೀ ಸಾಹಸಕ್ಕೆ ಭೂಮಿಕೆಯಾದರು. ಈ ಗ್ರಂಥವನ್ನು ಕರ್ಣಾಟಕದಲ್ಲಿ ಗ್ರಂಥಸಂಸ್ಕರಣ ಪಟುವೆನಿಸಿದ ಶ್ರೀ ಡಿ. ಎಲ್. ನರಸಿಂಹಾಚಾರ್ಯರಿಗೆ ತೋರಿಸಿ, ಸಲಹೆ ಕೇಳಿದಾಗ ಇದರ ಸಂಪಾದನ ಕಾರ್ಯದಲ್ಲಿ ಅವರಿಂದ ದಿಗ್ದರ್ಶನ ಆಶೀರ್ವಾದಗಳು ದೊರೆತವು. ಇದರ ಒಂದು ಪ್ರತಿಯನ್ನು ಹಿಂದೆ ರಾಯ ಚೂರು ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಅಲ್ಲಿ ಯಾರೋ ಪ್ರದರ್ಶನಕ್ಕಿಟ್ಟಿದ್ದರೆಂದೂ ಸೂಚಿಸಿದರು. ಗ್ರಂಥ ಸಂಪಾ ದನೆಯೂ ಕಾವ್ಯಸಾಹಿತ್ಯಾದಿ ರಚನೆಗಳಂತೆ ಒಂದು ಶಾಸ್ತ್ರೀಯ ವಿಷಯ ಅಥವಾ ಕಲೆ ಎಂದು ನಾನು ತಿಳಿದಿದ್ದು, ಆ ವಿಚಾರ ದಲ್ಲಿ ಪರಿಶೀಲನೆಯನ್ನೇ ಮಾಡುತ್ತಿದ್ದು, ವಿಚಾರವಕ್ತತೆಗಾಗಿ ಕಾಯುತ್ತಿದ್ದುದರಿಂದ ಸಂಸ್ಕರಣ ಕಾರ್ಯವಿದು ಆಗ ತಣ್ಣಗೆ ಉಳಿಯಿತು. ಆ ಮೇಲೆ ನನ್ನ ಕಾವ್ಯಕಪನಾದಿ ರಚನೆಗಳನ್ನೂ ಸಂಶೋಧ-ವಿಮರ್ಶ ಪ್ರಬಂಧಗಳನ್ನೂ ಕಂಡು, ಮನ ಸ್ಸಂಪರ್ಕಗೊಂಡು – ನಮ್ಮ ಸಂಸ್ಥಾನದ ವಿದ್ಯಾ ಇಲಾಖೆಯ ಡೈರೆಕ್ಟರವರೂ ಸಾಹಿತ್ಯಾಭಿಮಾನಿಗಳೂ ಆದ ಶ್ರೀ ಟಿ. ವಾಸು ದೇವಯ್ಯನವರು ಈ ಅಪ್ರಕಟಿತ ಗ್ರಂಥವನ್ನು ಸಂಪಾದಿಸಲು ಪ್ರೋತ್ಸಾಹಿಸಿದರು ಅವರು ಮೈಸೂರಿಗೆ ಬಂದಾಗಲೆಲ್ಲ ನನ್ನ ಈ ಕಾರ್ಯಪ್ರಗತಿಯನ್ನು ವಿಚಾರಿಸಿ, ಹುರಿದುಂಬಿಸುತ್ತ ಬಂದರು. ಈ ನಡುವೆ ನನ್ನ ಔದ್ಯೋಗಿಕ ಜೀವನದಲ್ಲಿ ಅಪರಿ ಹಾರ್ಯವಾಗಿ ಮಾರ್ಪಾಡಾಗಬೇಕಾಗಿ ಈಗಿನ ನಿಲವಿಗೆ ತಲಪುವ ವರೆಗಿನ ವಿಳಂಬಗತಿಗಳು, ವಿಘ್ನಗಳು ಈ ಗ್ರಂಥ ಸಂಸ್ಕರಣ ಕಾರ್ಯದ ಮೇಲೂ ಪ್ರಭಾವವನ್ನು ಬೀರದೆ ಬಿಡಲಿಲ್ಲ.

ಈಗ ಪ್ರಸ್ತಾವಿಸಿರುವ ಮಾತೃಕೆಯನ್ನು 'ಕ' ಎಂಬ ಸಂಜ್ಞೆಯಿಂದ ಕರೆದಿದೆ. ಇಂತಹ ಗ್ರಂಥವು ಮೂಲಪ್ರತಿಯಲ್ಲಿ ದಂಡಾಕಾರದಲ್ಲಿ ಬರೆದಿದ್ದು, ಲಿಪಿಕಾರನಿಂದ ಆಗಿರಬಹುದಾದ ಸ್ಖಾಲಿತ್ಯಗಳಿಂದ ಕೂಡಿರುವುದರಿಂದ ಈ ಪದ್ಯಸಾಹಿತ್ಯವನ್ನು ಕಣ್ಣಿಟ್ಟು ನೋಡಿ, ಪದ್ಯರೂಪವಿತ್ತು ಬರೆದುಕೊಳ್ಳುವುದೇ ದೊಡ್ಡ ಕೆಲಸ. ಸಂಪಾದಕನಿಗೆ ಸ್ವೋತ್ತೇಜಿತ ಮನೋಬಲ ವೊಂದೇ ಇಲ್ಲಿ ಸಾಲದು. ಧನಬಲ, ಜನಬಲ, ಸಮಯದ ಬಲವೂ ಬೇಕು. ತಾಳಿಕೆಗಾಗಿ ಇತರ ಪ್ರತಿಗಳನ್ನು ತಂದು, ಹೋಲಿಸಿ, ಪಾಠಾಂತರ ಯೋಜನೆಯಿಂದ ಶುದ್ಧಪಾಠನಿರ್ಣಯ ಮಾಡಲು ಈ ಬಲಗಳ ಬೆಂಬಲ ಬೇಕು. ಇವು ಇಲ್ಲದುದರಿಂದಲೇ ರಾಯಚೂರಿನ ಗ್ರಂಥಪ್ರತಿ ಎಲ್ಲಿದೆಯೆಂಬುದೂ ತಿಳಿಯದಾಯಿತು. ಈ ಗ್ರಂಥವನ್ನು ಪುನಸ್ಸಂಸ್ಕರಿಸು ವವರಿಗೆ ಅದು ದೊರಕಲಿ. ಹೀಗಿದ್ದರೂ ಸಾಹಿತ್ಯಾಭಿಮಾನಿಗಳ ಸನ್ನೇಹ ಸಹಾಯವು ಒದಗಿದುದರಿಂದ ಗ, ಚ-ಎಂಬ ಇನ್ನೆರಡು ಮಾತೃಕೆಗಳ ನೆರವು ದೊರಕಿದುದಕ್ಕಾಗಿ ಸಂತೋಷಪಡುತ್ತೇನೆ. ಗ ಪ್ರತಿಯನ್ನು ಮೈಸೂರಿನ ಪ್ರಾಕ್ತನ ಸಂಶೋಧನ ಸಂಸ್ಥೆಯ ಡೈರೆಕ್ಟರ್ ಶ್ರೀ ಎಚ್. ದೇವೀರಪ್ಪನವರು ಕೊಟ್ಟು ಉಪಕಾರಮಾಡಿದರು. ಚ ಪ್ರತಿಯನ್ನು ವಿದ್ಯಾಭೂಷಣ ಶ್ರೀ ಕೆ. ಭುಜಬಲಿ ಶಾಸ್ತ್ರಿಗಳು ಮೂಡುಬಿದರೆ ಚೌಟರ ಅರಮನೆಯಿಂದ ಪಡೆದು, ಪ್ರೀತ್ಯಭಿಮಾನಗಳಿಂದ ನನಗಿತ್ತರು. ಈ ಮೂರು ಮಾತೃಕೆಗಳಿಂದ ಗ್ರಂಥಸಂಸ್ಕರಣವನ್ನು ಮಾಡಲಾಗಿದೆ. ಇವೆಲ್ಲ ಪ್ರತಿಗಳ ರೂಪ-ವಿವರ ವನ್ನೂ ಶುದ್ಧಪಾಠನಿರ್ಣಯ ಕ್ರಮವನ್ನೂ ಇಲ್ಲಿ ಕೊಡಲಾಗಿದೆ.

**ಕ – ಪ್ರತಿ:** ಈಗ ತಿಳಿಸಿದಂತೆ ಇದು ಮೈಸೂರಿನ ಜಿನಾಲಯದಿಂದ ದೊರೆತ ಓಲೆಗರಿಯ ಪ್ರತಿ. ಗ್ರಂಥದಲ್ಲಿ ಒಟ್ಟು ಗರಿಗಳು ೧೫೧; ಎರಡೂ ಪುಟಗಳಲ್ಲಿ ಬರೆದಿದೆ—ಪುಟಗಳು ೩೦೨. ಪ್ರತಿ ಎರಡನೆಯ ಪುಟದಲ್ಲಿ ಗರಿಯ ಸಂಖ್ಯೆಯಿದೆ. ಗರಿಯ ಆಕೃತಿ—೯½ ಇಂಚು ಉದ್ದ, ೨½ ಇಂಚು ಅಗಲ. ದಾರರಂಧ್ರವೊಂದಾಗಿದ್ದು ನಟ್ಟನಡುವೆ ಇದೆ. ಒಂದೊಂದು ಪುಟದಲ್ಲಿ ಸಾಮಾನ್ಯವಾಗಿ ಪಂಕ್ತಿಗಳು ೧೩. ಪಂಕ್ತಿಯ ಉದ್ದ ೮½ ಇಂಚುಗಳು. ಪದ್ಯ ಸರಾಸರಿ ಸಂಖ್ಯೆ ೧೧. ಪಂಕ್ತಿ

ಯೊಂದರಲ್ಲಿ ಸರಾಸರಿ ಅಕ್ಷರಸಂಖ್ಯೆ ೩೮ ಪುಟಗಳ ಪ್ರತಿಯೊಂದು ಪಂಕ್ತಿಗೂ ಎರಡೂ ಬದಿಗಳಲ್ಲಿ ಸಂಖ್ಯೆಕೊಟ್ಟಿದೆ ಪಂಕ್ತಿಸಂಖ್ಯೆ ೯ ಆದ ಮೇಲೆ ಪುನಃ ಕ್ರಮಗತಿ ೧, ೨—ಈ ರೀತಿಯಿದೆ ಕೆಲವು ಅಕ್ಷರಗಳ ರೂಪದಲ್ಲಿ ಕಾಲಾನುಗುಣವೆನಿಸುವ ಲಿಪಿವೈಶಿಷ್ಟ್ಯವಿದೆ ಲಿಪಿ ಸುಂದರವಾಗಿದೆ ಸಂಪ್ರತಿಕಾರನ ಕೈಯಃ ತಪ್ಪು ಕಡಮೆ ಶಕಟರೇಫವಿಲ್ಲ ಪ್ರತಿಯೊಂದು ಸಂಧಿಯ ಶಿರೋನಾಮವನ್ನು ಆಯಾ ಸಂಧಿಪ್ರಾರಂಭದಲ್ಲಿ ಎಡಗಡೆಯ ರಿಕ್ತಸ್ಥಳದಲ್ಲಿ ಬರೆದಿದೆ ಗ್ರಂಥಾರಂಭದಲ್ಲಿ "ಬಿದುರೆ ಸುಪಾರಿಶ್ವನಾಥಸ್ವಾಮಿ ಪಾದವೇ ಗತೀ॥ "ಶ್ರೀ" ರಾಮವಿಜಯ ಬರಉದಕ್ಕೆ ಶುಭಮಸ್ತು ಶ್ರೀರಸ್ತು ತಥಾಸ್ತು" ಎಂದು ಬರೆದಿದೆ ಎಡಗಡೆಯ ರಿಕ್ತಸ್ಥಳದಲ್ಲಿ 'ರಾಮವಿಜಯ ಪ್ರಥಮ ಸಂಧಿ' ಎಂದು ಕೆಳಕೆಳಗಾಗಿ ಬರೆದಿದೆ ಸಂಧಿಗಳ ಕೊನೆಗೆ "ಪ್ರಥಮ ಸಂಧಿ (ದ್ವಿತೀಯ ಇತ್ಯಾದಿ) ಸಂಪೂರ್ಣ ಮಂಗಳಮಹಾ ಶ್ರೀ ಶ್ರೀ" ಎಂದಿದೆ ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ 'ಶ್ರೀ ವೀತರಾಗಾಯೆಂನ್ನಮಃ ಶ್ರೀ, ಶ್ರೀಆದಿನಾಥಾಯೆನ್ನಮಃ ಶ್ರೀ, ಶ್ರೀಶಾರದಾಗುರುಭ್ಯೋಂನ್ನಮಃ ಶ್ರೀ, ಶ್ರೀಮತ್ಪಂಚಗುರುಭ್ಯೋಂನಮಃ ಶ್ರೀ, ಸುಪಾರಿಶನಾಥಾಯೆನ್ನಮಃ, ಶ್ರೀಮದಾದಿಬ್ರಹ್ಮಣೇನಮಃ, ಶಾಂತಿನಾಥಾಯೆಂನ್ನಮಃ ಶ್ರೀ, ಶ್ರೀವಾಸುಪೂಜ್ಯಾಯೆಂನ್ನಮಃ ಶ್ರೀ" – ಇತ್ಯಾದಿಗಳಲ್ಲಿ ಒಂದು ನಮನವಾಕ್ಯವಿದೆ ಈ ನಮನ ವಾಕ್ಯಾನಂತರ ॥ ಪಲ್ಲವೀ ॥ ಎಂಬ ಉಲ್ಲೇಖಾನಂತರ ಪದ್ಯ ಪ್ರಾರಂಭವಾಗುತ್ತದೆ ಪ್ರತಿ ಸಂಧಿಯ ತುತ್ತತುದಿಯಲ್ಲಿ "ಅಂತೂ ಸಂಧಿ ಕ್ಕಂ ಪದನೂ . ಕ್ಕಂ ಮಂಗಳಮಹಾ" ಎಂದು ಬರೆದಿದೆ ಪ್ರತಿಯೊಂದು ಸಂಧಿಯ ಕೊನೆಯಲ್ಲಿ ಗದ್ಯದಂತೆ ಬರೆದಿರುವ "ಇದು ಭೂಸುರ ವಂಶೋದ್ಭವ. " ಎಂಬ ಕವಿ-ಕಾವ್ಯನಿರೂಪಣವಿದೆ ಪ್ರತಿಕಾರನ ಹೆಸರಾಗಲೀ ಪ್ರತಿಮಾಡಿದ ಕಾಲವಾಗಲೀ ಎಲ್ಲಿಯೂ ಸೂಚಿಸಿಲ್ಲ

ಈ ಪ್ರತಿಯಲ್ಲಿ ಒಟ್ಟು ೨೧ ಸಂಧಿಗಳಿವೆ ಆಯಾ ಸಂಧಿಯ ಕೊನೆಗೆ ಕೊಟ್ಟಿರುವ ಪದ್ಯಸಂಖ್ಯೆ ಸರಿಯಿಲ್ಲ ಇದರ ಇಪ್ಪತ್ತೊಂದನೆಯ ಸಂಧಿಯ ಕೊನೆಗೆ "ಅಂತು ಸಂಧಿ ೨೧ಕ್ಕಂ ೪೯೬೬ಕ್ಕಂ" ಎಂದು ಬರೆದಿದ ಆದರೆ ಈ ಪ್ರತಿಯ ಪದ್ಯಗಳ ಸಂಖ್ಯೆ ೨,೮೨೫ ಮಾತ್ರ ಪ್ರತಿಕಾರನು ತನ್ನ ಮೂಲಗ್ರಂಥದಲ್ಲಿ ಖಿಲವಾದ ಕೆಲವು ಪದ್ಯಗಳನ್ನು ಬರೆಯಲಾಗದೆ ಬಿಟ್ಟು, ಪದ್ಯಸಂಖ್ಯೆಯನ್ನು ಮಾತ್ರ ಮೂಲದಲ್ಲಿದ್ದಂತೆ ಕಾಣಿಸಿದನೋ ಏನೋ ! ಗ ಚ ಪ್ರತಿಗಳಿಗಿಂತ ಇದರಲ್ಲಿ ಅಧಿಕ ಪಾಠವಿರುವಂತೆ, ಇದರಲ್ಲಿಲ್ಲದ ಹಲವಾರು ಪದ್ಯಗಳು ಅವೆರಡರಲ್ಲಿವೆ ಈ ಪ್ರತಿಯಲ್ಲಿ ೧೯ನೆಯ ಸಂಧಿಯ ಕೊನೆವರೆಗೆ ಒಂದು ಕೈಯ ಬರೆಹವಿದೆ ೨೦ ಮತ್ತು ೨೧ನೆಯ ಸಂಧಿಗಳಲ್ಲಿ ಬೇರೆ ಕೈಬರೆಹವಿದೆ ಈ ಎರಡನೆಯ ಬರೆಹದಲ್ಲಿ ಕೈತಪ್ಪುಗಳು ಹೆಚ್ಚಾಗಿವೆ ಈ ಎರಡೂ ಸಂಧಿಗಳನ್ನು ವೇಣುಪುರದ ರಾಯಣ್ಣನೆಂಬ ಕವಿ ರಚಿಸಿ ಸೇರಿಸಿದುದು ಸ್ಪಷ್ಟವಾಗಿ ತಿಳಿಸಿದೆ ವೇಣುಪುರದ ಜಿನಬಸದಿಯಲ್ಲಿದ್ದ ರಾಮಚರಿತ ಪುಸ್ತಕವು ಜೀರ್ಣವಾಗಿರಲು ತಾನು ಅದನ್ನು ಜೀರ್ಣೋದ್ಧಾರ ಮಾಡಿದೆನೆಂದು ಈ ರಾಯಣ್ಣ ಕವಿ ಹೇಳಿಕೊಂಡಿದ್ದಾನೆ ಇದರಿಂದ 'ಕ' ಪ್ರತಿಗೆ ಮೂಲವಾದ ಮಾತೃಕೆಯಲ್ಲಿ ಕೆಲವು ಪದ್ಯಗಳು ಪಾತವಾಗಿರಬೇಕು, ಅಂತಹ ಕಡೆ ರಾಯಣ್ಣನು ಬರೆದು ಸೇರಿಸಿ ಅರ್ಥಪೂರ್ಣವಾಗುವಂತೆ ಮಾಡಿರಬೇಕೆಂದೂ ತೋರುತ್ತದೆ ಗ, ಚ, ಪ್ರತಿಗಳಿಗೆ ಹೋಲಿಸಿದಾಗ ಈ 'ಕ' ಪ್ರತಿ ಬೇರೊಂದು ಶಾಖೆಯ ಮಾತೃಕೆಯಾಗಿಯೇ ನೆಲಸಿಕೊಳ್ಳುತ್ತದೆ

**ಗ – ಪ್ರತಿ:** ಇದು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯ ಗ್ರಂಥಾಗಾರದಲ್ಲಿರುವ K A 316 ಎಂಬ ಅಂಕಿತವುಳ್ಳ ಕಾಗದದ ಪ್ರತಿ ಪೂರ್ಣಾಕೃತಿಯ ಕಾಗದ ಹಾಳೆಯಲ್ಲಿ (Foolscap) ೨೦೦ ಪುಟಗಳಿಂದ ಕೂಡಿದೆ ಎರಡೂ ಪುಟಗಳಲ್ಲಿ ಬರೆದಿದೆ ಪುಟವೊಂದರಲ್ಲಿ ಸಾಲುಗಳು ೨೧, ಪದ್ಯಗಳು ೧೦೩ ಒಂದೇ ಪಂಕ್ತಿಯಲ್ಲಿ ಅರ್ಧ ಪದ್ಯ ಹಿಡಿವಂತೆ ಬರೆದಿದೆ ಇದರಲ್ಲಿ ಶಕಟರೇಫವನ್ನು ಬಳಸಿಲ್ಲ ಇದರ ಮೂಲಮಾತೃಕೆಯ ಶಾಖೆಗೆ ಸೇರುವ 'ಚ' ಪ್ರತಿಯಲ್ಲಿ ಶಕಟರೇಫವಿರುವುದರಿಂದ ಇಲ್ಲಿ ಅದನ್ನು ಪ್ರತಿಕಾರರೇ ಬಿಟ್ಟರೋ ಇದರ ಮೂಲಪ್ರತಿಕಾರರೇ ಬಿಟ್ಟಿದ್ದರೋ ಹೇಳಲಾಗುವುದಿಲ್ಲ ಇದರ ಪ್ರತಿಕಾರರು ಕೆ ರಾಘವಾಚಾರ್ ಪ್ರತಿಯನ್ನು ಬರೆದ ಕಾಲವಾಗಲಿ ಮೂಲಗ್ರಂಥದ ಉಲ್ಲೇಖವಾಗಲಿ ಇದರಲ್ಲಿಲ್ಲ ಒಟ್ಟು ಇರುವ ಸಂಧಿಗಳು ಒಂದರಿಂದ ಹದಿನಾರರ ವರೆಗೆ ಮಾತ್ರ ಹದಿನಾರನೆಯ ಸಂಧಿ ಅಪೂರ್ಣವಿದೆ ಇತರ ಸಂಧಿಗಳಲ್ಲಿಯೂ ಅಲ್ಲಲ್ಲಿ ಹಲವು ಪದ್ಯಗಳೂ ಪದ್ಯಭಾಗಗಳೂ ಪಾತವಾಗಿವೆ ಬರೆದಿರುವ ಅಕ್ಷರಗಳು ಸ್ಪಷ್ಟವಾಗಿವೆ, ಆದರೂ ತಪ್ಪುಗಳು ಉಳಿದುಕೊಂಡಿವೆ ತಾಳಿಕೆಗೆ ಈ ಪ್ರತಿಯಿಂದ ಉಪಯೋಗ ಪಡೆಯಲಾಗಿದೆ

**ಚ – ಪ್ರತಿ:** ಇದು ಮೂಡುಬಿದರೆಯ ಚೌಟರ ಅರಮನೆಯ ೨೨ನೆಯ ಕ್ರಮಸಂಖ್ಯೆಯ ಓಲೆಗರಿಯ ಗ್ರಂಥ ಇದರಲ್ಲಿ ಗರಿಗಳ ಸಂಖ್ಯೆ ೧೪೯ ಗರಿಗಳಿಗೆ ಪ್ರತಿ ಎರಡನೆಯ ಪುಟದಲ್ಲಿ ಸಂಖ್ಯೆ ಕೊಟ್ಟಿದೆ ಎರಡೂ ಪುಟಗಳಲ್ಲಿ ಬರೆದಿದೆ ಒಟ್ಟು ಪುಟಗಳು ೨೧೮ ಗರಿಯ ಆಕೃತಿ—೧೧ ಇಂಚು ಉದ್ದ, ೨ ಇಂಚು ಅಗಲ ಎರಡು ದಾರರಂಧ್ರಗಳನ್ನುಳ್ಳದು

ಪುಟದಲ್ಲಿ ಸರಾಸರಿಯಾಗಿ ಪಂಕ್ತಿಗಳು ೧೦. ಪ್ರತಿ ಪಂಕ್ತಿಯಲ್ಲಿ ಸರಾಸರಿ ಅಕ್ಷರಗಳು ೭೨. ಪ್ರಾರಂಭದ ೨೬ ಗರಿಗಳ ಎಡದ ಕೊನೆ ಸವೆದುಹೋಗಿ ಅಲ್ಲಿನ ಪದ್ಯಾಕ್ಷರಗಳು ಇಲ್ಲವಾಗಿವೆ. ೨೬. ೨೭. ೨೮–ಎಂಬೀ ಗರಿಗಳಲ್ಲಿ ಬರೆಹದ ಕೈ ಬೇರೆಯಾಗಿ ಕಾಣುತ್ತದೆ ಈ ಪ್ರತಿಯಲ್ಲಿ ಅಕ್ಷರದೋಷಗಳೂ ಸ್ಖಾಲಿತ್ಯಗಳೂ ಬಹಳವಾಗಿವೆ. ಲಿಪಿಕಾರನಿಗೆ ತಾನು ಬರೆದ ಕಡೆ ತಪ್ಪು ಗೊತ್ತಾದಲ್ಲಿ, ಆಯಾ ತಪ್ಪಿನ ಅಕ್ಷರಗಳ ಮೇಲುಗಡೆ ಅಡ್ಡಗೆರೆಯೆಳೆದು ಒಪ್ಪನ್ನು ಬರೆದಿದ್ದಾನೆ. ಪದ್ಯಗಳ ಎಣಿಕೆಯನ್ನು ಕೆಲವೆಡೆ ಮಾತ್ರ ಕೊಟ್ಟಿದೆ ಪ್ರತಿಯೊಂದು ಪದ್ಯದ ಕೊನೆಯಲ್ಲಿ ಪದ್ಯಸಂಖ್ಯಾಸೂಚನೆಯಿಲ್ಲ. ಪದ್ಯದ ಕೊನೆಯನ್ನು ಸೂಚಿಸುವ ಚಿಹ್ನೆಯೂ ಕೆಲವೆಡೆ ಇಲ್ಲ. ಪುಟಗಳಲ್ಲಿರುವ ಪಂಕ್ತಿಗಳಿಗೂ ಸಂಖ್ಯೆ ಕೊಟ್ಟಿಲ್ಲ. "ಅಂತು ಸಂಧಿ. . . ." ಎಂಬ ಸಂಧ್ಯಂತ ಸೂಚನೆಯೂ ಇಲ್ಲ ಪ್ರತಿಯೊಂದು ಸಂಧಿಯ ಕೊನೆಗೆ 'ಕ' ಪ್ರತಿಯಲ್ಲಿರುವಂತೆ "ಇದು ಭೂಸುರವಂಶೋದ್ಭವಂ" ಎಂಬ ಕವಿ-ಕಾವ್ಯ ನಿರೂಪಣವೂ ಇಲ್ಲ. ಈ ಪ್ರತಿಯಲ್ಲಿ ಶಕಟರೇಫವನ್ನು ಪ್ರಯೋಗಿಸಿದೆ.

ಈ ಪ್ರತಿಯ ಮುಖಪತ್ರದಲ್ಲಿ ಒಂದು ಸ್ವಸ್ತಿಕ ರೇಖಾಬಂಧದಲ್ಲಿ "ಶ್ರೀ ಮುನಿಸೂರವ ಸ್ವಾಮಿಯವರ ದಿವ್ಯಶ್ರೀ ಪದಪದ್ಮಂಗಳಿಗೆ ನಮಹ ಮೂಡುಬಿ" ಎಂಬ ಲಿಖಿತವಿದೆ. ಈ ಬಂಧರೇಖೆಯ ಬಲಗಡೆ ಒಂದು ಗಿಳಿಯ ರೇಖಾಚಿತ್ರವಿದೆ. ಸಂಧಿಗಳ ಪ್ರಾರಂಭದಲ್ಲಿ 'ಕ' ಪ್ರತಿಯಲ್ಲಿರುವಂತೆ ನಮನವಾಕ್ಯಗಳಿಲ್ಲ. ಈ 'ಜ' ಪ್ರತಿಯ ಕೊನೆಗೆ ಇಟ್ಟಿರುವ ಒಂದು ಗರಿಯಲ್ಲಿ "ಭರಮ್ಮಯ್ಯನ ಪೊಸ್ತುಕಾ" ಎಂದು ಬರೆದಿದೆ. ಗರಿಯ ಮೊದಲನೆಯ ರಂಧ್ರದ ಎಡಗಡೆ ಬರೆದಿರುವ ಪ್ರಕಾರ ಇದನ್ನು "ರಾಕ್ಷಸ ಸಂವತ್ಸರದಲ್ಲಿ ಮೆಗುಂದದ ದೊಢಾನಿ ಚಿಕ್ಕಯ್ಯನ ಮಗ ಪದುಮ್ಮಯ್ಯನು ಭರಮ್ಮಯ್ಯಗೆ ಬರೆದುಕೊಟ್ಟ" ನೆಂಬ ಉಲ್ಲೇಖ ಕಾಣುತ್ತಿದೆ. ಶಕಟರೇಫವಿರುವುದರಿಂದ ಮತ್ತು ಲಿಪಿರೂಪದಲ್ಲಿ ಇನ್ನೂ ಪ್ರಾಚೀನತೆ ಕಂಡುಬರುವುದರಿಂದ ಇದು 'ಕ' ಪ್ರತಿಗಿಂತ ಹಿಂದಿನದೆನ್ನಲು ಅಡ್ಡಿಯಿಲ್ಲ

'ಜ' ಪ್ರತಿಯಲ್ಲಿ ೨೦ ಸಂಧಿಗಳಿವೆ. ರಾಯಣ್ಣ ಕವಿಯ ಪ್ರಕ್ಷಿಪ್ತ ಸಂಧಿಗಳಾಗಲೀ ಜೀರ್ಣೋದ್ಧಾರದ ಪದ್ಯಗಳಾಗಲೀ ಇದರಲ್ಲಿಲ್ಲ ಈ ಪ್ರತಿಯ ಸಹಾಯದಿಂದ ದೇವಪ್ಪಕವಿಕೃತ ರಾಮವಿಜಯದಲ್ಲಿ ಸಂಧಿಗಳು ಇಪ್ಪತ್ತು ಎಂದು ನಿರ್ಣಯಿಸಲು ಸಾಧ್ಯವಾಗಿದೆ. ೨೦ನೆಯ ಸಂಧಿಯ ಕೊನೆಯಲ್ಲಿ "ರಾಮವಿಜಯಕ್ಕೆ ಪದನ ಲೆಕ್ಕ ೨೫೯೧" ಎಂದು ಕಾಣಿಸಿದೆ. ಇದೇ ಸಂಧಿಯ ಕೊನೆಯಲ್ಲಿ "ಷಟ್ಪದಾ" ಎಂಬ ಹೆಸರಿನಿಂದ "ಇದು ಭೂಸುರವಂಶೋದ್ಭವನಭಿನವ . . . . ." ಎಂಬ ಕವಿಕಾವ್ಯ ನಿರೂಪಣವಿದೆ ಈ ಪ್ರತಿಯ ಪಾಠಗಳು 'ಗ' ಪ್ರತಿಯನ್ನು ಹೋಲುವಷ್ಟು 'ಕ' ಪ್ರತಿಯನ್ನು ಹೋಲುವುದಿಲ್ಲ. ಇದರಿಂದ ಗ, ಜ, ಪ್ರತಿಗಳು ಒಂದೇ ಮೂಲಮಾತೃಕೆಗೆ ಸೇರಿವೆಯೆಂದು ಸಂದೇಹವಿಲ್ಲದೆ ಹೇಳಬಹುದು.

**ಶುದ್ಧಪಾಠನಿರ್ಣಯ:** ಈಗ ಸಿದ್ಧಗೊಳಿಸಿರುವ ಈ ಸಂಪ್ರತಿಗೆ ಮೊದಲ ಮಾತೃಕೆಯಾಗಿ 'ಕ' ಪ್ರತಿಯನ್ನು ಇಟ್ಟು, ಆ ಮೇಲೆ ಒದಗಿಸಿಕೊಳ್ಳಲಾದ ಗ, ಜ, ಪ್ರತಿಗಳನ್ನು ತಾಳಿಕೆಗೆ ಉಪಯೋಗಿಸಿಕೊಂಡಿದೆ. ಭಿನ್ನಪಾಠಗಳಿರುವಲ್ಲಿ ಶುದ್ಧವೆಂದು ತೋರಬಹುದಾದುದೇ ಕವಿಯ ಪಾಠವೆಂದು ತಿಳಿದುಕೊಂಡು, ಅದನ್ನು ಬಳಸಲಾಗಿದೆ. ಆದರೆ ಸಂಪಾದಕನ ತೀರ್ಮಾನವನ್ನು ಸಂಶೋಧಕರು ಒಪ್ಪಲೇಬೇಕೆಂದಿಲ್ಲವಾದುದರಿಂದ. ಅಂಥವರ ಅವಗಾಹನೆಗಾಗಿ ಭಿನ್ನಪಾಠಗಳನ್ನು ಕೆಳಗೆ ಕೊಟ್ಟಿದೆ. ರಾಯಣ್ಣಕವಿ ಪ್ರಕ್ಷಿಪ್ತ ಸಂಧಿದ್ವಯವನ್ನು ಅನುಬಂಧದಲ್ಲಿ ಕೊಡಲಾಗಿದೆ. 'ಜ' ಪ್ರತಿಯಲ್ಲಿ ಮಾತ್ರವೇ ಕಾಣಿಸಿದ ೨೦ನೆಯ ಸಂಧಿಯನ್ನು ಈ ಶುದ್ಧಮಾತೃಕೆಗೆ ಸೇರಿಸಿ, ದೇವಪ್ಪಕವಿಯ ರಾಮವಿಜಯ ಕಾವ್ಯದಲ್ಲಿ ಸಂಧಿಗಳು ಇಪ್ಪತ್ತೆಂದೂ, ಪದ್ಯಗಳು ೨೫೧೩ ಎಂದೂ ನಿಶ್ಚಯಮಾಡಿದೆ. ಪಾಠಾಂತರಗಳಿರುವ ಅಕ್ಷರಕ್ಕೆ ಅಥವಾ ಅಕ್ಷರ ಸಮೂಹಕ್ಕೆ ಆದ್ಯಂತಗಳಲ್ಲಿ ಸಂಖ್ಯೆಯನ್ನು ಕೊಟ್ಟು ಕೆಳಗಡೆ ಪಾಠಾಂತರವೆನಿಸುವ ಅಕ್ಷರಗಳನ್ನು ಕೊಡುವ ರೂಢಿ ಎಲ್ಲೆಡೆ ಪ್ರಚಲಿತವಿರುವಂತೆ ತೋರುತ್ತದೆ ಆದರೆ ಈ ಗ್ರಂಥದಲ್ಲಿ ಪದದ ಅಂತ್ಯದಲ್ಲಿ ಮಾತ್ರ ಸಂಖ್ಯೆಯನ್ನಿತ್ತು ಪಾಠಾಂತರವನ್ನು ಅರ್ಥವಾಹಿಯಾಗುವಂತೆ ಪೂರ್ಣಪದವಾಗಿಯೇ ಕೊಡಲಾಗಿದೆ. ಉದಾ: 'ಬಂಧುಜನರುಗಳು' ಎಂಬಲ್ಲಿ ಪಾಠಾಂತರವು ಒಂದೇ ಅಕ್ಷರಕ್ಕಿದ್ದರೂ ಪೂರ್ಣಪದವಾಗಿ 'ಬಂಧುಜನಂಗಳು' ಎಂತಲೇ ಕೊಡಲಾಗಿದೆ. "ಸಮಯಗಾಯ್ದಿರ್ಪರೆಂದಾವ" ಇಲ್ಲಿ ಒಂದೇ ಅಕ್ಷರಕ್ಕೆ ಪಾಠಾಂತರವಿದೆ–ಇದಕ್ಕೆ "ಗಾದಿರ್ಪ" ಎಂದು ಮಾತ್ರ ಕೊಟ್ಟಿದೆ ಕೆಲವೆಡೆ ದೀರ್ಘಪಾಠಾಂತರಗಳಿದ್ದು ಭಿನ್ನಪಾಠದ ಪ್ರಾರಂಭಸ್ಥಾನವು ಅಸ್ಪಷ್ಟವೆಂದು ತೋರುವ ಕಡೆ ಆದ್ಯಂತಗಳೆಂಬ ಎರಡೂ ಕಡೆ ಸಂಖ್ಯೆಯನ್ನು ಕೊಟ್ಟಿದೆ. ಕೆಲವು ಪದ್ಯಭಾಗಗಳಲ್ಲಿ ಯಾವ ಮಾತೃಕೆಯಿಂದಲೂ ಶುದ್ಧಪಾಠ ದೊರೆಯದಿದ್ದಲ್ಲಿ ಯಥಾಸಾಧ್ಯವಾಗಿ ತಿದ್ದಿ, ಅದನ್ನು ಸೂಚಿಸಿರುವುದೂ ಉಂಟು. 'ರಾವಣ' ಎಂಬ ಸುಪ್ರಸಿದ್ಧವಾದ ಅಂಕಿತನಾಮವು ಮಾತೃಕೆಗಳಲ್ಲಿ ಕೆಲವು ಕಡೆ 'ರಾವಳ' ಎಂತಲೂ ಇದೆಯಾದರೂ ಅಂತಹ ಕಡೆಯಲ್ಲಿ ತಿದ್ದಿ 'ರಾವಣ' ಎಂಬ ಏಕರೂಪತೆಗೆ ತರಲಾಗಿದೆ 'ವಾಲಿ' ಎಂಬ ಪ್ರಸಿದ್ಧವಾದ ಹೆಸರು ಎಲ್ಲ ಮಾತೃಕೆಗಳಲ್ಲಿಯೂ 'ಬಾಲಿ' ಎಂತಲೇ ಇರುವುದರಿಂದ ಅದನ್ನು ಮಾರ್ಪಡಿಸಿಲ್ಲ. ಅಣುವ,

ಇಂದಗಿ, ಅಂಗಜ (ಹನುಮ, ಇಂದ್ರಜಿತು, ಅಂಗದ)–ಇವನ್ನೂ ಮಾರ್ಪಾಟು ಮಾಡಿಲ್ಲ ಕೆಲವು ಶಬ್ದಗಳನ್ನು ತಿದ್ದಿದರೂ ಆ ಬಗೆಗೆ ಸೂಚನೆ ಕೊಟ್ಟಿಲ್ಲ–ಅವು ಮುಖ್ಯವಾಗಿ, ಜಲ್ಮ (1-71), ಝುನ (4-82, 83), ಸುಇಲು (4-90), ಸುಗ್ನ್ಯಾನ (4-163), ಪತಿಯಾಗ್ನೆ (6-39) ಇವಲ್ಲದೆ ಕರ್ನ್ನ, ಕರ್ನ್ನಾಟ-ಇತ್ಯಾದಿ ಬರವಣಿಗೆಯ ತಪ್ಪುಗಳನ್ನು ಜನ್ಮ, ಜಸ, ಸುಯಿಲು, ಸುಜ್ಞಾನ, ಪತಿಯಾಜ್ಞೆ, ಕರ್ಣ, ಕರ್ಣಾಟ–ಎಂದು ಸರಿಪಡಿಸಲಾಗಿದೆ ನರರ್‍ರಿಗೆ, ಉ್ರದ್ಧ, ಕರ್ಉವಿಲ್ಲ, ಪ್ರಧುಮ, ಅರಿಎನು–ಹೀಗೆ ಇರುವವನ್ನು ನರರಿಗೆ, ವೃದ್ಧ, ಕರ್ವುವಿಲ್ಲ ಪ್ರತಿಮೆ, ಅರಿಯೆನು ಎಂದು ತಿದ್ದಿಕೊಳ್ಳಲಾಗಿದೆ ಇಂತಹ ತಿದ್ದುಪಡಿಗೆ ಪಾರಾಂತರ ಸೂಚನೆ ಕೊಟ್ಟಿಲ್ಲ

'ಕ' ಪ್ರತಿಯ ಪ್ರತಿಯೊಂದು ಸಂಧಿಯ ಕೊನೆಗೂ ಕೊಟ್ಟಿರುವ ಗದ್ಯರೂಪದಂತೆ ಕಾಣಿಸುವ "ಇದು ಭೂಸುರ ವಂಶೋದ್ಭವಂ " ಎಂಬ ಕವಿಕಾವ್ಯನಿರೂಪಣೆಯು 'ಜ' ಪ್ರತಿಯ ೨೦ನೆಯ ಸಂಧಿಯ ಕೊನೆಗೆ ಮಾತ್ರ ಕೊಟ್ಟಿದ್ದು, ಅಲ್ಲಿ ಅದನ್ನು 'ಷಟ್ಪದಾ' ಎಂದು ಸೂಚಿಸಿತ್ತು ಛಂದೋ ಲಕ್ಷಣದಿಂದ ಇದನ್ನು ನೋಡಿದಾಗ ಮೂರನೆಯ ಪಾದದಲ್ಲಿ ನಾಲ್ಕು ಮಾತ್ರೆ ಕಡಮೆಯಾಗಿರುವ "ಪರಿವರ್ಧಿನಿ ಷಟ್ಪದಿ"ಯಾಗಿ ಕಂಡುಬಂದಿದೆ ಇದರ ಪಾದಪೂರ್ತಿಗಾಗಿ 'ನಿರ್ಮಲ' ಎಂಬೊಂದು ಪದವನ್ನು ಸೇರಿಸಿಕೊಳ್ಳಲಾಗಿದೆ ಇತರ ಸಂಧಿಗಳ ಕೊನೆಗೂ ಈ ನಿರೂಪಣದಲ್ಲಿ ಕಂಡುಬಂದ ಛಂದಸ್ಸಿನ ನ್ಯೂನಾತಿರೇಕವನ್ನು ಸರಿಪಡಿಸಿ, ಭಿನ್ನಪಾರವನ್ನು ಕೊಡಲಾಗಿದೆ ದೇವಪ್ಪ ಕವಿಯ ಸಮಕಾಲೀನನಾದ ನಂಜುಂಡ ಕವಿಯ ರಾಮನಾಥ ಚರಿತವನ್ನು ಭಾವ-ರೀತಿ-ರಚನೆಗಳಲ್ಲಿ ಈ ಕಾವ್ಯವು ಹೋಲುವುದೂ ಅದರಲ್ಲಿ ಆಶ್ವಾಸಾಂತ್ಯದಲ್ಲಿ ಪರಿವರ್ಧಿನಿ ಷಟ್ಪದಿಯಲ್ಲಿ ಕವಿಕಾವ್ಯ ನಿರೂಪಣವಿರುವುದೂ–ಇದು ಕೂಡ ಪರಿವರ್ಧಿನಿಯಿರಬೇಕೆಂದು ನಿರ್ಣಯಿಸಲು ಮಾರ್ಗದರ್ಶಕ ವಾಯಿತು

ಈ ಗ್ರಂಥಸಂಸ್ಕರಣದಲ್ಲಿ ಬಳಕೆಮಾಡಿರುವ ಚಿಹ್ನೆಗಳು ಮತ್ತು ಅವುಗಳ ಸೂಚ್ಯಾರ್ಥಗಳಿವು.—

- ↓ ಗ್ರಂಥಪಾತ (ಗ್ರಂಥಪಾತಕ್ಕೆ ಆದಿ-ಅಂತ್ಯಗಳೆರಡೂ ಕಡೆಯಲ್ಲಿ ಸಂಖ್ಯೆಯನ್ನು ಕೊಡಲಾಗಿದೆ)
- × ಸೂಚಿಸಿದ ಮಾತೃಕೆಯಲ್ಲಿ ಒಂದು ಅಕ್ಷರವಿಲ್ಲ ಎಂಬ ನಿರೂಪಣೆ ಒಂದಕ್ಕಿಂತ ಹೆಚ್ಚು ಅಕ್ಷರಗಳಿಲ್ಲದಿದ್ದಲ್ಲಿ, ಆ ಅಕ್ಷರಸಂಖ್ಯೆಯಷ್ಟೆ ಚಿಹ್ನಗಳನ್ನಿಡಲಾಗಿದೆ ಉದಾ –"ಬಲ್ಲವರಿಂದೆ" ಇದಕ್ಕೆ × (ಗ) ಹೀಗೆ ಕೆಳಗಡೆ ಸೂಚಿಸಿದ್ದರೆ, 'ಗ' ಪ್ರತಿಯಲ್ಲಿ 'ದೆ' ಎಂಬ ಒಂದು ಅಕ್ಷರವಿಲ್ಲವೆಂದರ್ಥ ಇದು ಗ್ರಂಥಪಾತವಲ್ಲ–ಭಿನ್ನಪಾರ ವೆಂದೇ ತಿಳಿಯಬೇಕು
- * ಶಿಥಿಲೋಚ್ಚಾರಣೆಯ ಅಕ್ಷರಸೂಚಕ
- ? ಶಬ್ದರೂಪದಲ್ಲಿ ಅಥವಾ ಅರ್ಥದಲ್ಲಿ ಸಂಪಾದಕನಿಗೆ ಸಂದೇಹವಿದೆಯೆಂಬ ಸೂಚನೆ
- [ ] ಮಾತೃಕೆಗಳಾವುದರಲ್ಲಿಯೂ ಸಾಹಿತ್ಯಾಂಶವು ದೊರಕದೆ ಆಗಿರುವ ಕೊರತೆಯ ಬಗೆಹರಿಸಲು ಸಂಪಾದಕನು ಯಥಾಮತಿಯಾಗಿ ಸೇರಿಸಿದ ಭಾಗ

## ೨. ಕವಿಚರಿತ್ರೆ

ಈ ರಾಮವಿಜಯ ಕಾವ್ಯವನ್ನು ಬರೆದವನು ದೇವಪ್ಪನೆಂಬ ಜೈನಕವಿ ಗ್ರಂಥದಲ್ಲಿ ಇವನು ತನ್ನನ್ನು "ಕೋವಿದರುಗಳ ಹೃತ್ಕಮಲಭಾಸ್ಕರ ವಾಗ್ದೇವಿಯ ಮುಖ ಮಣಿಮುಕುರ, ಭಾವಕರುಗಳ ಸಂತಸಸಾಗರ, ಮಿತ್ರ, ವಿಪ್ರಕುಲಸರಸಿರುಹ ಮಾರ್ತಾಂಡ, ಮತಿರತ್ನಾಕರಚಂದ್ರ, ಕೋವಿದಾಮಾತ್ಯ, ಭೂಸುರವಂಶೋದ್ಭವ, ಜಿನಪಾದಾಂಬುಜ ಮದಮಧುಕರ, ಸಚಿವ"–ಎಂದು ಮುಂತಾಗಿ ವಿಶೇಷಿಸಿಕೊಂಡಿದ್ದಾನೆ ಕವಿಚರಿತೆಕಾರರು "ಇವನು ಆವ ಪ್ರಭುವಿನಲ್ಲಿ ಸಚಿವನಾಗಿದ್ದನೋ ತಿಳಿಯದು" ಎಂದಿದ್ದಾರ ಇವನು ಮಂಗರಸನ ಕಾಲಕ್ಕಿಂತ ಸ್ವಲ್ಪ ಈಚೆಯವನಾಗಿ, ಸುಮಾರು 1525ರಲ್ಲಿ ಇದ್ದಿರಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ ರಾಮವಿಜಯದಲ್ಲಿ ಸಂಧಿ 19. ಪದ್ಯ 2563 ಎಂದೂ ಕವಿಚರಿತೆಯಲ್ಲಿ ಹೇಳಿದೆ[೧] ಶ್ರೀ ಬಿ ಎಸ್ ಸಣ್ಣಯ್ಯನವರು ' ರಾಮವಿಜಯ ಕಾವ್ಯದಲ್ಲಿ 16 ಸಂಧಿ ಇವೆ–ಮುಂದೆ ಪ್ರತಿ ಅಸಮಗ್ರವಾಗಿದೆ" ಎಂದು

೧ ಕವಿಚರಿತೆ ಭಾಗ III, ಪುಟ 447

ಪ್ರಾಕ್ತನ ಸಂಶೋಧನ ಸಂಸ್ಥೆಯ ಪ್ರತಿಯ ('ಗ' ಪ್ರತಿಯ) ಆಧಾರದಿಂದ ತಿಳಿಸಿದ್ದಾರೆ.[೨] ಇದರಿಂದ ಕವಿಚರಿತೆಕಾರರಿಗೂ ತೊರವೆರಾಮಾಯಣ ಸಂಪಾದಕರಿಗೂ ಸಿಕ್ಕಿರುವ ಪ್ರತಿಗಳು ಅಸಮಗ್ರವಾಗಿದ್ದುದರಿಂದ ಕವಿಯ ವಿಚಾರವನ್ನು ಇದಕ್ಕಿಂತ ಹೆಚ್ಚು ಸಮಗ್ರವಾಗಿ ತಿಳಿಸಲಿಕ್ಕಾಗಲಿಲ್ಲವೆಂದು ತೋರುತ್ತದೆ ಈಗ ಸಂಸ್ಕರಣಗೊಳಿಸಲಾದ ಈ ಮಾತೃಕೆಯಲ್ಲಿ 20 ಸಂಧಿಗಳಿವೆ 2913 ಪದ್ಯಗಳಿವೆ. ಗ್ರಂಥಸ್ಥವಾದ ಕವಿಚರಿತ್ರೆಯೇ ಹೆಚ್ಚಿಗಿದೆ. ಇಲ್ಲಿ ದೇವಪ್ಪ ಕವಿಯೇ ಹೇಳಿಕೊಂಡ ತನ್ನ ಚರಿತ್ರೆ ಹೀಗಿದೆ:—

ಶೃಂಗಾರವಾದ ಹೊಯ್ಸಳ ದೇಶಕ್ಕೆ ಒಪ್ಪುವ ಚಂಗನಾಡ ನಡುವೆ ಮಂಗಳಮಯವಾಗಿ ರಮ್ಯವಾಗಿ 'ರಾವಂದೂರು' ಎಂಬ ಪಟ್ಟಣವಿದೆ. ಅದು ಜಾಣರ ಜನ್ಮಸದನ. ರಸಿಕರ ಮನೆ. ವಾಣಿಯ ನೆಲೆ, ಜಿನಮತದ ತಾಣ—ಎನಿಸಿದೆ. ಆ ಪಟ್ಟಣದಲ್ಲಿ ಸುಂದರನೂ, ದಾನಿಯೂ, ಜಿನಭಕ್ತನೂ, ಗುಣಭೂಷಣನೂ ಆದ ದೇವಪ್ಪನೆಂಬ ಸಚಿವನಿದ್ದನು ಅವನ ಮಗನು ಮನುಮಾರ್ಗಮನೋಹರನಾದ ಬುಕ್ಕರಸ. ಬುಕ್ಕರಸನ ಹೆಂಡತಿ ಪತಿಭಕ್ತೆಯೂ, ಲಲನಾಮಣಿಯೂ, ಸಮ್ಯಕ್ತ್ವದ ನೆಲೆಯೂ ಆದ 'ಪಾಯಮ್ಮ' ಎಂಬಾಕೆ. ಈ ಜಿನಭಕ್ತ ದಂಪತಿಗಳಿಗೆ ಸದ್ಗುಣನೂ ಅನಂಗರೂಪನೂ ಜಿನಭಕ್ತನೂ ಆದ ದೇವಪ್ಪ ಕವಿಯು ಮಗನು. ಇವನು ರಾವಂದೂರಿನಲ್ಲಿ ನಿಲ್ಲದೆ 'ನಂಜರಾಯ ಪಟ್ಟಣ'ಕ್ಕೆ ಹೋಗಿ ಅಲ್ಲಿ ಕರೆದುಕೊಡುವ ದಾನಿಯೂ, ಚೆಂಗಾಳ್ವ ವಂಶಾಬ್ಧಿಚಂದ್ರನೂ ಎನಿಸಿದ 'ನಂಜುಂಡ'ನೆಂಬ ರಾಜನಿಗೆ ಹಿತದವನಾಗಿ ಧರೆಗೊಳ್ಳಿದನಾಗಿ ಮಂತ್ರಿ ಪದವಿಯಲ್ಲಿದ್ದನು. ಹೀಗಿರುವಾಗ ಭವ್ಯರು ಇವನನ್ನು ಕರೆದು, ಒಂದು ಜಿನಕಥೆಯನ್ನು ಹೇಳು ಎನ್ನಲು, ದೇವಪ್ಪನು ಈ ರಾಮವಿಜಯವನ್ನು ಹೇಳಿದನು.[೩]

ಹೀಗೆ ಇಲ್ಲಿ ಚರಿತ್ರಾಂಶಗಳಾದ ಹೊಯ್ಸಳದೇಶ, ಚಂಗನಾಡು, ಚೆಂಗಾಳ್ವರಾಜರು. ಅವರ ಸಚಿವರು, ರಾವಂದೂರು, ನಂಜರಾಯಪಟ್ಟಣ, ಆ ಪಟ್ಟಣದ ಅರಸ ನಂಜುಂಡರಾಜ—ಎಂಬಿವು ಬಂದಿವೆ. ಕವಿ ಗ್ರಂಥರಚನೆಯ ಕಾಲವನ್ನು ಹೇಳಿಕೊಂಡಿಲ್ಲ.

ಇತಿಹಾಸದಿಂದ ತಿಳಿದುಬರುವಂತೆ, ಚೆಂಗಾಳ್ವರೆಂಬ ರಾಜವಂಶದವರು ಕ್ರಿ.ಶ. 10ನೆಯ ಶತಮಾನದಿಂದ 17ನೆಯ ಶತಮಾನದ ವರೆಗೆ ಮೈಸೂರು ಜಿಲ್ಲೆಯ ಪಡುವಣ ಭಾಗವನ್ನೂ ಕೊಡಗನ್ನೂ ಆಳಿದ್ದಾರೆ. ಇವರು ಮೊದಲು ಜೈನರಾಗಿದ್ದು ಆ ಮೇಲೆ ವೀರಶೈವರಾದರು ಹುಣುಸೂರು ಶಾಸನಗಳ ಪ್ರಕಾರ ಇವರು ಚಂದ್ರವಂಶದ ಯಾದವರಾಗಿದ್ದು ಇವರ ಮೂಲಪುರುಷನು ಶ್ರೀಕೃಷ್ಣನ ವಂಶದಲ್ಲಿ ಬಂದ ದ್ವಾರಾವತಿಯ ಚೆಂಗಾಳ್ವನೆಂಬಾತನು. ಇವರ 'ಚಂಗನಾಡು' ಎಂಬ ಸ್ಥಳವು ಈಗಿನ ಹುಣುಸೂರು ತಾಲೂಕಿನ ಪ್ರದೇಶ.[೪] ಈ ಚೆಂಗಾಳ್ವರು ಮೊದಲು ಚೋಳರ ಅಧೀನದಲ್ಲಿದ್ದರು. ಕ್ರಿ. ಶ. 1176ರಲ್ಲಿ ಹೊಯ್ಸಳರು ಬಂದು ಚೋಳರನ್ನು ಮೈಸೂರಿನಿಂದ ಓಡಿಸಲು, ಇವರು ಹೊಯ್ಸಳರ ಅಧೀನರಾದರು. ಬರುತ್ತ 14ನೆಯ ಶತಮಾನದಲ್ಲಿ ಚೆಂಗಾಳ್ವರು ವಿಜಯನಗರದ ಅಧೀನರಾದಂತೆಯೂ ಕೊನೆಗೆ 1614ರಲ್ಲಿ ಮೈಸೂರಿನ ರಾಜರಿಂದ ಪರಾಭೂತರಾಗಿ ಹೆಸರಿಲ್ಲದಾದಂತೆಯೂ ತಿಳಿದುಬರುತ್ತದೆ ಹೊಯ್ಸಳರ ಅಧೀನರಾಗಿದ್ದ ಕಾಲದಲ್ಲಿ ಕ್ರಿ. ಶ. 1245ರಿಂದ ಚೆಂಗಾಳ್ವರ ಮುಖ್ಯಪಟ್ಟಣವು ಕೊಡಗು ಜಿಲ್ಲೆಯ ಸಿದ್ಧಾಪುರದ ಸಮೀಪವಿರುವ ಶ್ರೀರಂಗಪಟ್ಟಣವಾಗಿತ್ತು. ಈ ಪಟ್ಟಣವು ಪಿರಿಯರಾಜನೆಂಬ ಚೆಂಗಾಳ್ವರಾಜನಿಂದ ಪಿರಿಯಪಟ್ಟಣವೆನಿಸಿತು. ಪ್ರಕೃತ ನಮಗಿಲ್ಲಿ ಆವಶ್ಯಕವೆನಿಸುವ 15ನೆಯ ಶತಮಾನದ ಮಧ್ಯಕಾಲದಿಂದ 17ನೆಯ ಶತಮಾನದ ಮಧ್ಯಕಾಲದ ವರೆಗೆ ಹುಣುಸೂರು ಕೊಡಗುಗಳನ್ನು ಆಳಿದ ಚೆಂಗಾಳ್ವರ ವಂಶ ವಿವರ ಹೀಗಿದೆ:—

1. ನಾಗ; 2. ರಂಗ; 3. ಪಿರಿಯ (ಪಿರಿಯಣ್ಣ), 4. ನಂಜರಾಜ ಕ್ರಿ ಶ. 1502-1533 (ನಂಜರಾಜನ ತಮ್ಮ ಮಹಾದೇವ); 5. ನಂಜುಂಡರಾಜ; 6. ಶ್ರೀಕಂಠರಾಜಯ್ಯ (ಶ್ರೀಕಂಠರಸು); 7. ವೀರರಾಜವೊಡೆಯರು ಕ್ರಿ. ಶ. 1559-1580; 8. ಪಿರಿಯ. ಪಿರಿಯ ರಾಜಯ್ಯದೇವ (ರುದ್ರಗಣ) 1586-1607; 9. ನಂಜುಂಡದೇವ; 10. ನಂಜರಾಜಯ್ಯದೇವ 1612-1619; 11. ಕೃಷ್ಣರಾಜದೇವ ಕ್ರಿ. ಶ. 1617; 12. ವೀರರಾಜಯ್ಯ ಕ್ರಿ. ಶ. 1619-1644.

ಈ ವಂಶದ ಮೊದಲಿನ ಮೂವರು ಕೊಡಗಿನ ಶ್ರೀರಂಗಪಟ್ಟಣದಲ್ಲಿ ಆಳಿದರು. ನಾಲ್ಕನೆಯವನಾದ ನಂಜರಾಜನು

---

೨. ತೊರವೆರಾಮಾಯಣ ಭಾಗ II, ಪೀಠಿಕೆ, ಪುಟ 28, 29. ೩. ರಾಮವಿಜಯಕಾವ್ಯ ಸಂಧಿ ೧, ಪದ್ಯ ೬೮-೭೮. ೪. Ep C. Vol I, 1914—Hs 63, 97 and Yedathore 26 ಮತ್ತು ಕನ್ನಡನಾಡಿನ ಚರಿತ್ರೆ ಭಾಗ I—ಕ ಸಾ. ಪರಿಷತ್ತು.

ನಂಜರಾಜಪಟ್ಟಣವೆಂಬ ಹೊಸ ರಾಜಧಾನಿಯನ್ನು ನಿರ್ಮಿಸಿ ಆಳಿದನು ಅವನ ಮಗ ನಂಜುಂಡರಾಜನೂ ಅಲ್ಲೇ ಆಳಿದಂತೆ ತೋರುತ್ತದೆ ಹುಣಸೂರು 15ನೆಯ ಶಾಸನದ ಪ್ರಕಾರ ಶ್ರೀರಂಗಪಟ್ಟಣವನ್ನು 'ಪಿರಿಯ ರಾಜಯ್ಯದೇವನು' ಪುನಃ ಕಟ್ಟಿ, ಅದಕ್ಕೆ 'ಪಿರಿಯಪಟ್ಟಣ' ಎಂದು ತನ್ನ ಹೆಸರನ್ನಿತ್ತನು ಹೀಗೆ ಚೆಂಗಾಳ್ವರಾಜರಿಗೆ ನಂಜರಾಯಪಟ್ಟಣ ಮತ್ತು ಪಿರಿಯಪಟ್ಟಣ ಎಂಬ ಎರಡು ರಾಜಧಾನಿಗಳಾಗಿದ್ದಂತೆ ತೋರುತ್ತದೆ ಇವರ ಆರಾಧ್ಯದೇವರು ಹುಣಸೂರು ತಾಲೂಕಿನ ಬೆಟ್ಟದಪುರದ "ಅನ್ನದಾನಿ ಮಲ್ಲಿಕಾರ್ಜುನ" ಚೆಂಗಾಳ್ವರು ಮತಸಹಿಷ್ಣುಗಳೂ, ಮಹಾದಾನಿಗಳೂ, ಆಶ್ರಿತವತ್ಸಲರೂ, ಪರಾಕ್ರಮಿಗಳೂ, ಆಗಿದ್ದರಲ್ಲದೆ ಕವಿಗಳಿಗೆ ಉದಾರಾಶ್ರಯ ಕೊಟ್ಟವರೆಂದು ಅವರನ್ನು ಕೊಂಡಾಡಿದ ಶಾಸನಗಳಿಂದಲೂ ಕವಿಗಳ ವಾಣಿಗಳಿಂದಲೂ ತಿಳಿಯುತ್ತದೆ ಜೈನನಾದ ಮೂರನೆಯ ಮಂಗರಸಕವಿಯೂ ವೀರಶೈವನಾದ ನಂಜುಂಡಕವಿಯೂ ಚೆಂಗಾಳ್ವರಾಜರ ಸಚಿವ ವಂಶದವರೇ ಆಗಿರುವರು ಆದರೆ ಶಾಸನಗಳಲ್ಲಿ ಈ ರಾಜರ ಮಂತ್ರಿಗಳ ಮನೆತನದ ವಿಷಯವಾಗಲೀ ಆಶ್ರಿತಕವಿಗಳ ಸಂಗತಿಯಾಗಲೀ ಕಾಣುವುದಿಲ್ಲ

**ಮಂಗರಸ ಮತ್ತು ನಂಜುಂಡಕವಿ:** "ದ್ವಾರಾವತಿಯ ಪುರಾಧೀಶ್ವರ ಲಕ್ಷ್ಮೀರಮಣಾನ್ವಯ ಚೆಂಗಾಳ್ವ" ರಾಜಸಚಿವ ವಂಶದವನೆಂದು ಹೇಳಿಕೊಂಡಿರುವ ಮೂರನೆಯ ಮಂಗರಸನು (ಕ್ರಿ ಶ 1509) ಜೈನಕವಿ ಇವನು ಜಯನೃಪಕಾವ್ಯ, ಸಮ್ಯಕ್ತ್ವಕೌಮುದಿ, ನೇಮಿಜಿನೇಶ ಸಂಗತಿ, ಪಾಕಶಾಸ್ತ್ರ, ಪ್ರಭಂಜನಚರಿತೆ, ಶ್ರೀಪಾಲಚರಿತೆ–ಮುಂತಾದ ಶ್ರೇಷ್ಠ ಗ್ರಂಥಗಳನ್ನು ಬರೆದು ಪ್ರಸಿದ್ಧನಾಗಿದ್ದಾನೆ ಇವನು ಹೊಯ್ಸಳದೇಶದ ಹೊಸವೃತ್ತಿಯ ನಾಡಿನ ಕಲ್ಲಹಳ್ಳಿಯ ಅಧಿಪನು (ಕಲ್ಲಹಳ್ಳಿಯ ಮೊದಲಿನ ಹೆಸರು ಧಾತುಪುರ) ಇದು ಹುಣಸೂರು ತಾಲೂಕಿನ ಚಿಲಕುಂದದ ಹೋಬಳಿಗೆ ಸೇರಿದ ಒಂದು ಗ್ರಾಮ ಮಂಗರಸನು ವಿಜಯಭೂಪಾಲನ ಮಗನು ಮಾಧವನ ಮೊಮ್ಮಗನು[೫] ನೇಮಿಜಿನೇಶ ಸಂಗತಿಯಲ್ಲಿ ಇವನು ತನ್ನ ಪರಿಚಯವನ್ನು ಹೇಳುತ್ತ – ಶ್ರೀರಮಣೀ ಪತಿಭಕ್ತ ವಿಜಯ ಭೂ । ನಾರೀಧವನಗ್ರಸೂನು ॥ ಧೀರ ಮಂಗರಸನೊರೆದನಾ ಸುಮತ । ಕ್ಷೀರವಾರಾಶಿ ಚಂದ್ರಮನು ॥[೬] ಎಂದಿದ್ದಾನೆ

ಈ ಹೇಳಿಕೆಯಿಂದ ವಿಜಯಭೂಪಾಲನು ವೈಷ್ಣವನೆಂದೂ ಅವನ ಮಗನಾದ ಮಂಗರಸನು ಜೈನನೆಂದೂ ಸ್ಪಷ್ಟವಿದೆ ಆದರೆ ಇವನ ಮನೆತನಕ್ಕೂ ದೇವಪ್ಪನ ಮನೆತನಕ್ಕೂ ಸಂಬಂಧವಿರುವ ಆಧಾರವೇನೂ ಸಿಕ್ಕಿಲ್ಲ ಮಂಗರಸನಿಗೂ ನಂಜುಂಡ ಕವಿಗೂ ಮನೆತನದ ಸಂಬಂಧವಿದೆ ನಂಜುಂಡಕವಿಗೂ ದೇವಪ್ಪನಿಗೂ ಕಾವ್ಯಶೈಲಿಯ ಸಂಬಂಧವಿದೆ–ಇದರ ವಿವರ ಮುಂದೆ ಕೊಡಲಾಗಿದೆ

ನಂಜುಂಡನು 'ರಾಮನಾಥಚರಿತ'ವನ್ನು ಬರೆದ ವೀರಶೈವ ಕವಿ ದೇವಪ್ಪ ಕವಿಗೆ ಆಶ್ರಯವನ್ನಿತ್ತ 'ನಂಜುಂಡ ಭೂಪರನು' ಇವನಲ್ಲ ತನ್ನ ಕಾವ್ಯದಲ್ಲಿ ಹೇಳಿರುವ ಪ್ರಕಾರ ನಂಜುಂಡಕವಿಯು ಯದುಕುಲಾಮಾತ್ಯ ವಂಶದ ಪ್ರಭು ಕುಲಾಗ್ರಗಣ್ಯನಾದ ವಿಜಯನೃಪಾಲನ ಮೊಮ್ಮಗನು "ಚಂಗಳನಾಡ ನಾಲ್ವತ್ತುಗಜ ಸಿಂಗವೆನಿಪ" ಯದುಕುಲಾಮಾತ್ಯರೆಂಬ ಕುಲಾಗತ ಬಿರುದುಳ್ಳ "ಚದುರ ಮಾಧವನು" ಇವನ ತಂದೆ ನಂಜುಂಡನ ಚಿಕ್ಕಪ್ಪನು ತನ್ನ ಸ್ವಾಮಿಯಾದ ನಂಜರಾಜನಿಗಾಗಿ (ಕ್ರಿ ಶ 1502-1533) ಶೌರ್ಯದಿಂದ ಕಾದಿ ವೀರಸ್ವರ್ಗವನ್ನೇರಿದ ವಿಜಯನು ನಂಜುಂಡನು ತನ್ನ ಹಿರಿಯಯ್ಯನು ಅತ್ಯಂತ ಪರಾಕ್ರಮಿಯೆನಿಸಿದ 'ರಾವುತನು' ಎಂದಿದ್ದಾನೆ ಎಲ್ಲಿಯೂ ಮಂಗರಸನ ನಾಮೋಲ್ಲೇಖ ಮಾಡಿಲ್ಲ ಇಲ್ಲಿ ಹೆಸರನ್ನು ಹೇಳದೆ 'ರಾವುತನು' ಎಂಬ ರೂಢನಾಮದಿಂದ ಹೇಳಿದುದು ಮಂಗರಸ ಕವಿಯನ್ನಿರಬಹುದೆ? ಇವನ ದೊಡ್ಡತಂದೆ ಬೇರೊಬ್ಬನಿದ್ದನೆ? ಅಥವಾ ಹಿರಿಯಯ್ಯನೆಂದುದು ತನಗೆ ಹಿರಿಯನಾದ ಅಯ್ಯ ಎಂಬ ಅರ್ಥದಲ್ಲಿ ತನ್ನ ತಂದೆಯಾದ ಮಾಧವನನ್ನೇ ಇರಬಹುದೆ? ಎಂಬ ಸಂಶಯಗಳು ತೀರ್ಮಾನವಾಗದೆ ಉಳಿದುಕೊಳ್ಳುತ್ತವೆ ಈ ವಿಚಾರವನ್ನು ಪ್ರೊ ದೇ ಜವರೇಗೌಡರು ತಮ್ಮ 'ನಂಜುಂಡಕವಿ ಎಂಬ ಗ್ರಂಥದಲ್ಲಿ ಚರ್ಚಿಸಿದ್ದಾರೆ

ಮಂಗರಸ ನಂಜುಂಡ ಕವಿಗಳಿಬ್ಬರು ಬರುವ ಈ ಚೆಂಗಾಳ್ವ ಸಚಿವರ ಮನೆತನದ ವಿವರವನ್ನಿಲ್ಲಿ ಕೊಡಬಹುದು. ಇವಕ್ಕೆ ಆಧಾರಗಳು ಈ ಕವಿಗಳ ಕೃತಿಗಳಲ್ಲಿ ಬಂದ ಉಲ್ಲೇಖಗಳು

---

೫ ಕ ಚ ಭಾಗ II ಪುಟ 179 ಮತ್ತು ನೇಮಿಜಿನೇಶಸಂಗತಿ—ಜಯನೃಪಕಾವ್ಯಗಳು ೬ ನೇಮಿಜಿನೇಶಸಂಗತಿ ಸಂಧಿ ೩೫, ಪದ್ಯ ೭೨

## ಉಪೋದ್ಘಾತ

### ಚೆಂಗಾಳ್ವ ಸಚಿವ ಶಾಖೆ I

ಮಾಧವ

|

ವಿಜಯಭೂಪಾಲ (ಪತ್ನಿ–ದೇವಿಲೆ)

(ಇವನು ವಿಷ್ಣುಭಕ್ತ, ಚೆಂಗಾಳ್ವನೃಪರ ದಂಡನಾಥ ಕುಲತಿಲಕ, ರಣಕಭಿನವವಿಜಯ, ಪ್ರಭುಕುಲದೀಪ, ವಿಜಯಾಂಗನೆಯಧಿರಾಜ, ಧಾತುಪುರದ ಅಧೀಶ)

|

| | | |
|---|---|---|
| (ಮಂಗರಸ ಕವಿ 1509) | ಮಾಧವ | ವಿಜಯ |
| (ಜೈನ) | (ವಿತರಣ. ವಿನಯ, ವಿಕ್ರಮ ವಿಭಾಸಿ) | (ನಂಜರಾಜನಿಗಾಗಿ ಕಾದಿ ಸತ್ತವನು) |

|

ನಂಜುಂಡಕವಿ

(ವೀರಶೈವ)

ನಂಜುಂಡನ ಚಿಕ್ಕಪ್ಪನಾದ ವಿಜಯನು 1502ರಿಂದ 1533ರ ವರೆಗೆ ಇದ್ದ ಚಂಗಾಳ್ವ ರಾಜನಿಗಾಗಿ ಕಾದಾಡಿ ಮಡಿದನೆಂದು ಹೇಳಿರುವುದರಿಂದ ನಂಜುಂಡಕವಿಯ ಕಾಲವು ಕ್ರಿ ಶ. 1525 ಆಗಬಹುದೆಂದು ಕವಿಚರಿತೆಕಾರರು ನಿರ್ಣಯ ಮಾಡಿದ್ದಾರೆ.[೭] ಪ್ರೊ. ಜವರೇಗೌಡರು ವಿಜಯನು ಸತ್ತು ಕೆಲವು ವರ್ಷಗಳಾದ ಮೇಲೆ ನಂಜುಂಡಕವಿಯು ರಾಮನಾಥ ಚರಿತವನ್ನು ಬರೆದಿರಬೇಕೆಂಬ ಕಾರಣವನ್ನು ಕೊಟ್ಟು, ಕ್ರಿ. ಶ.1540ನೆಯ ಹೊತ್ತಿಗೆ ರಚಿಸಿರಬೇಕೆಂದು ಊಹಿಸಿದ್ದಾರೆ. ಇದಲ್ಲದೆ ಕ್ರಿ. ಶ 1520ರಲ್ಲಿ ನಡೆದ ರಾಯಚೂರು ಯುದ್ಧದ ಕಾಲದ ವರೆಗೆ ದಕ್ಷಿಣ ದೇಶದವರಿಗೆ ತುಬಾಕಿಯಂತಹ ಮದ್ದಿನ ಆಯುಧ ಗೊತ್ತಿರಲಿಲ್ಲವೆಂದೂ ನಂಜುಂಡನು ಮೇಲಿಂದ ಮೇಲೆ ಪೆಟಲಂಬುಗಳನ್ನು ಹೆಸರಿಸುವುದರಿಂದ, ಅವನಿಗೂ ಅವುಗಳ ವಿಚಾರ ತಿಳಿದಿರಬೇಕೆಂದೂ ಈ ಕಾರಣವು ಮೇಲಿನ ಕವಿಕಾಲನಿರ್ಣಯಕ್ಕೆ ಪೋಷಕವಾಗುವುದೆಂದೂ ತಿಳಿಸಿದ್ದಾರೆ.[೮] ಆದರೆ ದೇವಪ್ಪಕವಿಯ ಕಾಲವನ್ನು ನಿರ್ಧರಿಸಿದಾಗ, ನಂಜುಂಡಕವಿಯ ಈ ಕಾಲನಿರ್ಣಯವು ಸ್ವಲ್ಪ ಅಲುಗಾಡುವಂತಿದೆ. ದೇವಪ್ಪಕವಿಯ ವಂಶಶಾಖೆಯನ್ನಿಲ್ಲಿ ಕೊಟ್ಟಿದೆ. ಇದನ್ನು ಶಾಖೆ II ಎಂದು ಕಾಣಿಸಿದೆ.

### ಚೆಂಗಾಳ್ವ ಸಚಿವ ಶಾಖೆ II

ದೇವಪ್ಪ

(ಇವನು ಜಿನಭಕ್ತ, ಹೊಯ್ಸಳದೇಶದ ಚಂಗನಾಡ ರಾಮಂದೂರು ಪಟ್ಟಣದಲ್ಲಿದ್ದ ಸಚಿವ ಶಿರೋಮಣಿ)

|

ಬುಕ್ಕರಸ (ಕುಲವಧು–ಪಾಯಮ್ಮ)

(ಜಿನಭಕ್ತ)

|

ದೇವಪ್ಪ ಕವಿ (ಜಿನಭಕ್ತ)

(ಇವನು ನಂಜರಾಯಪಟ್ಟಣದ ನಂಜುಂಡರಾಜನ ಮಂತ್ರಿ)

---

೭ ಕವಿಚರಿತೆ ಭಾಗ II, ಪುಟ ೨೦೨    ೮. ಪ್ರೊ. ದೇ. ಜವರೇಗೌಡ–ನಂಜುಂಡಕವಿ, 1964, ಪುಟ ೨೭, ೨೮.

ಪಿರಿರಾಜ ಪಟ್ಟಣದ ದೇವಪ್ಪನು ಸಂಸ್ಕೃತ-ಕನ್ನಡ ಪದಗಳಿಂದ ಕೂಡಿದ 'ಕುಮುದೇಂದು ಶತಕ'ವನ್ನು ಬರೆದಿದ್ದಾನೆಂದೂ ಬಹುಮಟ್ಟಿಗೆ ಇನ್ನೂ ಬೆಳಕು ಕಾಣದಿರುವ ಕೃತಿಯಿದೆಂದೂ ಈ ಕವಿಯು 'ಸಿರಿಭೂವಲಯ'ದಿಂದ ಪ್ರಭಾವಿತನಾದವನೆಂದೂ ಜೈನ ಬ್ರಾಹ್ಮಣ ಆತ್ರೇಯ ಗೋತ್ರದವನೆಂದೂ ದಿ ಕರ್ಲಮಂಗಲ ಶ್ರೀಕಂಠಯ್ಯನವರು ಹೇಳಿದ್ದಾರೆ[೯] ಈ ದೇವಪ್ಪನೂ ರಾಮವಿಜಯ ಕರ್ತೃ ದೇವಪ್ಪನ ಪಿತಾಮಹನೂ ಅಭಿನ್ನರೋ ಎಂಬುದು ಇನ್ನೂ ಪರಿಶೀಲಿಸಲಿಕ್ಕಿರುವ ಸಂಗತಿ ಕುಮುದೇಂದು ಶತಕವು ದೊರೆವ ತನಕ ಈ ವಿಚಾರವಾಗಿ ಏನನ್ನಲೂ ಬರುವುದಿಲ್ಲ

ಪ್ರಸ್ತುತ ರಾಮವಿಜಯದ ಕರ್ತೃವಾದ ದೇವಪ್ಪನು ಮಂತ್ರಿಯಾಗಿದ್ದುದು 'ನಂಜುಂಡಭೂವರ'ನಲ್ಲಿ ಎಂದು ಗ್ರಂಥಸ್ಥ ಆಧಾರವಿರುವುದರಿಂದ ಕಾಲನಿರ್ಣಯಕ್ಕೆ ಹೆಚ್ಚಿನ ತೊಡಕಿಲ್ಲ ಈ 'ನಂಜುಂಡ ಭೂವರನು 1502 ರಿಂದ 1533 ವರೆಗೆ ಆಳಿದ ನಂಜರಾಜನ ಮಗನೇ ಆಗಿರಬೇಕು ಹಿಂದೆ ಕಾಣಿಸಿರುವ ಚೆಂಗಾಳ್ವ ರಾಜವಂಶದಲ್ಲಿ ಒಂಬತ್ತನೆಯವನಿಗೆ 'ನಂಜುಂಡ ದೇವ' ಎಂಬ ಹೆಸರಿರುವುದರಿಂದ ಈ ಕವಿಯ ಪೋಷಕನು ಅವನಲ್ಲ ಅವನ ಆಳಿಕೆಯ ಕಾಲವೂ ತೀರಾ ಕಡಮೆಯದು ಆದುದರಿಂದ 'ನಂಜುಂಡ ರಾಜ' ಎಂಬ ಹೆಸರಿನವನೇ ಇವನ ಪೋಷಕನಿರಬೇಕು ನಂಜರಾಜನ ಮತ್ತು ಅವನ ಮಗನಾದ ನಂಜುಂಡರಾಜನ ಘನತೆಯನ್ನು ಶಾಸನದಲ್ಲಿ ಹೀಗೆ ಉಗ್ಗಡಿಸಿದೆ—

"ನಂಜರಾಜನೃಪತಿರ್ಮಿತಭಾಷಃ"

ಕಂಜಾರಾತಿ-ಮಹಾ-ಕುಲಾಂಬುಧಿ-ಲಸತ್-ಕಂಜಾರಿರಾತ್ಮ ಪ್ರಭಾ-
ಕಂಜಾರಿದ್ಯುತಿ-ಸಂಸ್ಫುರನ್ನಿಜಸುಹೃತ್-ಪುಂಜೋತ್ಪಲಃ ಸಂಬಭೌ
ಸಂಜಾತಸ್ತದನು-ಸ್ವ ವಿಕ್ರಮ-ಮಹಾ-ಕಂಜಪ್ರಿಯಾಂಶು-ಚ್ಛಟಾ-
ಭಂಜದ್ವೈರಿ-ನೃಪಾಲ-ಕರ್ದಮ-ರಸೋ ನಂಜುಂಡಭೂವಲ್ಲಭಃ ॥[೧೦]

ಈ ನಂಜುಂಡರಾಜನು ಕ್ರಿ ಶ 1533 ರ ನಂತರ ಎಷ್ಟು ವರ್ಷ ಆಳಿದನೆಂದು ತಿಳಿಯುವುದಿಲ್ಲ 1559 ವರೆಗೆ ಇವನ ಮತ್ತು ಇವನನಂತರ ಬಂದ ಶ್ರೀಕಂಠರರಸನ ಕಾಲವೆನಿಸುತ್ತದೆ ಇದರಿಂದ ನಂಜುಂಡನ ಮಂತ್ರಿಪದವಿಯನ್ನು ವಹಿಸಿ ಕೊಂಡು, ರಾಮವಿಜಯ ಕಾವ್ಯವನ್ನು ರಚಿಸಿ ಮುಗಿಸಿದ ಕಾಲ ಕ್ರಿ ಶ 1540 ಎಂದಿಟ್ಟುಕೊಳ್ಳಬಹುದು ನಂಜುಂಡ ಕವಿಯ 'ರಾಮನಾಥ ಚರಿತ' ಕಾವ್ಯದ ಹೆಚ್ಚಿನ ಮಟ್ಟಿನ ವಸ್ತುನಿರೂಪಣ ಕ್ರಮವೂ ಹಲವಾರು ಪದ್ಯಗಳ ಭಾವ ಪ್ರಕಟನವೂ ರಾಮವಿಜಯ ಕಾವ್ಯದಲ್ಲಿ ತೋರುತ್ತದೆ ದೇವಪ್ಪ ಕವಿಯು ರಾಮನಾಥ ಚರಿತದಿಂದ ಪ್ರಭಾವಿತನಾಗಿ ಕಾವ್ಯರಚನೆ ಮಾಡಿದ್ದರೆ, ರಾಮನಾಥ ಚರಿತವು ಕ್ರಿ ಶ 1540 ಕ್ಕೆ ಹಿಂದೆಯೇ ರಚಿತವಾಗಿರಬೇಕು. ಇಲ್ಲವಾದರೆ ನಂಜುಂಡಕವಿಯು ರಾಮವಿಜಯದ ಪದ್ಯಗಳ ಭಾವಗಳನ್ನು ತೆಗೆದುಕೊಂಡಿರಬೇಕು ಇವೆರಡೂ ಅಲ್ಲವಾದರೆ, ಸಮಕಾಲೀನ ರಾಗಿ ಮೈತ್ರಿಯಿಂದ ಕೂಡಿದ ಈ ಇಬ್ಬರು ಕವಿಗಳು ಭಾವವಿನಿಮಯ – ನಿರೂಪಣಕ್ರಮ ವಿನಿಮಯಗಳೊಡನೆ ಒಟ್ಟೊಟ್ಟಿಗೆ ಕೃತಿರಚನೆ ಮಾಡಿರಬೇಕಾಗುತ್ತದೆ ಹೀಗಿದ್ದರೆ ಅವರು ಒಬ್ಬರೊಬ್ಬರ ಹೆಸರನ್ನೇ ಹೇಳದಿದ್ದುದು ಆಶ್ಚರ್ಯಕ್ಕೆ ಎಡೆಕೊಡು ತ್ತದೆ ಈ ಮೂರು ಅಭಿಪ್ರಾಯಗಳಲ್ಲಿ ಸದ್ಯಕ್ಕೆ ಎರಡನೆಯದೇ ನಿಜವಿರಬಹುದು ಎನಿಸುತ್ತದೆ

**ರಾಯಣ್ಣ ಕವಿ:** ದೇವಪ್ಪಕವಿಯ ರಾಮವಿಜಯ ಕಾವ್ಯದ 'ಕ' ಪ್ರತಿಯಲ್ಲಿ ಇನ್ನೊಬ್ಬ ಅರ್ವಾಚೀನ ಕವಿಯ ಹಸ್ತಕ್ಷೇಪವಾಗಿದೆ ಅದು ಎಷ್ಟರ ಮಟ್ಟಿಗೆ ಎಂಬುದನ್ನು ಈ ಶುದ್ಧ ಮಾತೃಕೆಯ ಪದ್ಯಸಂಖ್ಯೆ, ಸಂಧಿಸಂಖ್ಯೆ, ಅನುಬಂಧ ಸೂಚನೆಗಳಿಂದ ನಿರ್ದೇಶಿಸಲಾಗಿದೆ ಈ 'ಕ' ಪ್ರತಿಯಲ್ಲಿ ೨೦ ನೆಯ ಮತ್ತು ೨೧ ನಯ ಸಂಧಿಗಳು ಪೂರ್ತಿಯಾಗಿ ಅನ್ಯ ಕವಿಕೃತಗಳು ಈಕವಿಯ ಹೆಸರು ರಾಯಣ್ಣ ಇವನು ಜೈನನು ಇವನ ಪಿತಾಮಹನು ನಾಗೇಂದ್ರನು, ತಂದೆ ಬೊಮ್ಮಣ್ಣ ಕವಿ ಬೊಮ್ಮಣ್ಣ ಕವಿಯ ಕಾವ್ಯವಾವುದೂ ಉಪಲಬ್ಧವಿಲ್ಲ ಬೊಮ್ಮಣ್ಣನು ನಯಸೇನ ಕವಿಯ ಧರ್ಮಾಮೃತವನ್ನು ಕ್ರಿ. ಶ 1749 ರಲ್ಲಿ ಜಿನಚಂದ್ರ ಬಸದಿಯಲ್ಲಿ ಪ್ರತಿಮಾಡಿದ್ದಾನೆ[೧೧] ಈ ಬೊಮ್ಮಣ್ಣನ ಮಗ ರಾಯಣ್ಣನು "ಪದ್ಮಾವತಿ ಕೊರವಂಜಿ" ಎಂಬ ಯಕ್ಷಗಾನ ಕೃತಿಯನ್ನೂ ಬರೆದಿದ್ದಾನೆ ಇವನ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ಕೃಷ್ಣರಾಜೇಂದ್ರನು ದೊರೆಯಾಗಿದ್ದನಂದು ಹೇಳುತ್ತಾನೆ ಈ ಕೃಷ್ಣರಾಜನು ಒಂದನೆಯವನಿರಬಹುದೆಂದು (1713–1731) ಊಹಿಸಿ, ಕವಿಚರಿತೆಕಾರರು ಇವನ ಕಾಲವು ಕ್ರಿ ಶ 1720 ಎಂದಿದ್ದಾರೆ[೧೨] ಮೇಲೆ ಕಾಣಿಸಿದಂತೆ ಇವನ ತಂದೆಯಾದ ಬೊಮ್ಮಣ್ಣ

---

೯ ಸಿರಿಭೂವಲಯ—ಮುನ್ನುಡಿ ೧೦ Ep C Vol I ಹುಣಸೂರು 24 ೧೧ ಕವಿಚರಿತೆ ಭಾಗ III, ಪುಟ 56
೧೨ ಅದರಲ್ಲೇ ಪುಟ 455

ಕವಿಯ ಕಾಲ ಕ್ರಿ. ಶ. 1749 ಆಗಿರುವಾಗ ಈ ಮಗನ ಕಾಲವು ಕ್ರಿ. ಶ. 1720 ಹೇಗಾದೀತು? ಆದುದರಿಂದಲೇ ರಾಯಣ್ಣಕವಿಯ ಕಾಲವು ಎರಡನೆಯ ಕೃಷ್ಣರಾಜನ ಕಾಲವೇ ಆಗಿರಬೇಕು. ಎರಡನೆಯ ಕೃಷ್ಣರಾಜನ ಕಾಲವು ಕ್ರಿ. ಶ. 1734–1766 ಆಗಿರುವುದರಿಂದ ರಾಯಣ್ಣಕವಿಯ ಕಾಲ ಕ್ರಿ. ಶ. 1750 ಎನ್ನಬೇಕಾಗುತ್ತದೆ. ಇವನ ಸ್ಥಳವು ವೇಣುಪುರ.

## ೩. ಕಾವ್ಯವಸ್ತು

ಭಾರತ ವರ್ಷದಲ್ಲಿ ಅದೆಷ್ಟೋ ಪ್ರಾಚೀನ ಕಾಲದಿಂದಲೇ ಜನತೆಗೆ ಆದರಣೀಯವೂ ಪವಿತ್ರವೂ ಪೂಜ್ಯವೂ ಆಗಿರುವ ಕಥಾವಸ್ತು 'ರಾಮಾಯಣ'. ಕಾವ್ಯ-ನಾಟಕ-ಪುರಾಣಾದಿ ಗ್ರಂಥರೂಪವನ್ನು ತಾಳುವ ಮೊದಲೇ ಈ ಕಥೆ ವೇದ ಸಾಹಿತ್ಯದಂತೆ ಅಥವಾ ಜನಪದ ಸಾಹಿತ್ಯದಂತೆ ಸಂಸ್ಕೃತಿನಿಷ್ಠ ಜನತೆಯ ಕಿವಿಯಿಂದ ಕಿವಿಗೆ ದಾಟುತ್ತಿದ್ದು ಮಾನ್ಯತೆ ಪಡೆದಿರಬೇಕು. ಕಥಾಸ್ವರೂಪದಲ್ಲಿಯೂ ವೈವಿಧ್ಯವಿದ್ದಿರಬೇಕು. ರಾಮಾಯಣಗಳು ಅಸಂಖ್ಯ — ಶತಕೋಟಿ ಸಂಖ್ಯೆ ಯಲ್ಲಿವೆ ಎಂಬ ಮಾತು ಪ್ರಚಲಿತವಾಗಿದೆ — "ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಂ". ಬ್ರಹ್ಮಲೋಕದಲ್ಲಿ ಶತಕೋಟಿ ರಾಮಾಯಣಗಳಿದ್ದು, ಅವುಗಳಲ್ಲಿ ಇಪ್ಪತ್ತೈದು ಸಾವಿರ ಲೆಕ್ಕದ ರಾಮಾಯಣಗಳು ಭೂಲೋಕಕ್ಕೆ ಬಂದವೆಂಬ ಹೇಳಿಕೆಯಿದೆ.[೧೩] ಈ ಹೇಳಿಕೆ ಅದ್ಭುತವೇ ಇರಬಹುದಾದರೂ ರಾಮಾಯಣದ ಪ್ರಚಲಿತ ಕಥೆಗಳು ವಿಪುಲವಾಗಿಯೇ ಇವೆಯೆಂದು ಸಾರಾಂಶವಿಟ್ಟುಕೊಳ್ಳಬಹುದು. ಇಷ್ಟೊಂದು ಜನಪ್ರಿಯವಾದ ಈ ರಾಮಾಯಣ ಕಥೆಯನ್ನು ಆಯ್ದು ಕೊಂಡು, ಸಂಸ್ಕೃತ-ಪ್ರಾಕೃತ ದೇಶೀಯ ಭಾಷೆಗಳಲ್ಲಿ ಬೇರೆಬೇರೆ ಕಾಲಗಳಲ್ಲಿ ಕವಿಗಳು ಕಾವ್ಯರಚನೆ ಮಾಡಿದರು. ಹಲವರು ಕವಿಗಳು ತಂತಮ್ಮ ಅಭಿರುಚಿಯ ಮತತತ್ವಗಳನ್ನು ಎತ್ತಿಹಿಡಿಯುವುದಕ್ಕಾಗಿ ಈ ಕಥಾವಸ್ತುವನ್ನು ಬಳಸಿಕೊಂಡರು. ಆದಿಕವಿಯೆನಿಸಿದ ವಾಲ್ಮೀಕಿ ಮಹರ್ಷಿಗಳು ಶ್ರೀರಾಮನನ್ನು ಮಾನವೀಯ ಗುಣಗಳಲ್ಲಿ ಉದಾತ್ತತೆಯ ಪರಾಕಾಷ್ಠೆಯನ್ನು ಮುಟ್ಟಿದ ಪಾತ್ರವಾಗಿ ನಾರದ ಮಹರ್ಷಿಗಳಿಂದ ಆತನ ಚರಿತ್ರವನ್ನು ಕೇಳಿ ಸಂಸ್ಕೃತದಲ್ಲಿ ಕಾವ್ಯರಚನೆಮಾಡಿ ಕೃತಕೃತ್ಯ ರಾದರು, ಸಂಸ್ತುತ್ಯರಾದರು. ಹಲವರು ಕವಿಗಳು ತಾವು ಕೇಳಿದಂತೆಯೋ ಭಾವಿಸಿದಂತೆಯೋ ರಾಮಾಯಣದ ಕಥಾ ಭಾಗಗಳನ್ನು ರೂಪಾಂತರಗೊಳಿಸಿ, ತಮ್ಮ ವಿಚಾರಗಳಿಗೆ ಸರಿಹೋಗುವಂತೆ ವಿವಿಧ ರಾಮಾಯಣ ಗ್ರಂಥಗಳನ್ನು ಬರೆದರು. ಇಂತಹ ರಾಮಾಯಣಗಳಲ್ಲಿ ಬೌದ್ಧರ ಮತ್ತು ಜೈನರ ರಾಮಾಯಣಗಳು ವೈಶಿಷ್ಟ್ಯ-ವೈಚಿತ್ರ್ಯಪೂರ್ಣವಾಗಿ ಕಂಗೊಳಿಸುತ್ತಿವೆ.

**ಬೌದ್ಧರ ರಾಮಾಯಣದ ಕಥೆ ಜಾತಕ ಕಥೆಗಳಲ್ಲಿ ಬರುತ್ತದೆ. ಅದರ ವೈಶಿಷ್ಟ್ಯಗಳಿವು:[೧೪]—**

ಬೌದ್ಧರ ರಾಮಾಯಣದಲ್ಲಿ ರಾವಣನಿಲ್ಲ, ಕೊನೆಗೆ ರಾಮ-ರಾವಣ ಯುದ್ಧವಿಲ್ಲ. ಸೀತಾಪಹರಣವೂ ಇಲ್ಲ. ರಾಮ ಲಕ್ಷ್ಮಣ ಸೀತೆಯರು ಒಂದೇ ತಾಯ ಮಕ್ಕಳು. ದಶರಥನ ಹದಿನಾರು ಸಾವಿರ ಹೆಂಡಿರಲ್ಲಿ ಒಬ್ಬಳ ಮಗ ಭರತ ಭರತನ ತಾಯಿಗೆ ದಶರಥನು ಕೊಟ್ಟಿದ್ದ ವರದ ನಿಮಿತ್ತ ರಾಮಲಕ್ಷ್ಮಣ ಸೀತೆಯರು ವನವಾಸ ಕೈಗೊಳ್ಳುವರು. ಭರತನು ಅಣ್ಣನ ಬಳಿಗೆ ಬಂದು ವನವಾಸವನ್ನು ಬಿಟ್ಟು ರಾಜ್ಯಸ್ವೀಕಾರಮಾಡಲು ಆಗ್ರಹಮಾಡಿದರೂ ರಾಮನು ಒಪ್ಪದೆ ವನವಾಸವನ್ನು ಮುಗಿಸಿ ಬಂದು, ಸೀತೆಯನ್ನು ಮದುವೆಯಾಗಿ ರಾಜ್ಯಭಾರಮಾಡುವನು. ಹೀಗೆ ಅಣ್ಣನು ತಂಗಿಯನ್ನು ವರಿಸುವುದು ನಮಗೆ ವಿಚಿತ್ರವಾಗಿ ತೋರಿದರೂ ಬುದ್ಧನು ಹುಟ್ಟಿಬಂದ ಶಾಕ್ಯಕುಲದಲ್ಲಿ ಇದು ರೂಢಿಯಲ್ಲಿದ್ದಿತೆಂದು ಹೇಳುತ್ತಾರೆ. ರಾಮನನ್ನು ಹಲವು ವಿಧದಲ್ಲಿ ಬುದ್ಧನಿಗೆ ಸದೃಶನಾಗಿ ಈ ರಾಮಾಯಣದಲ್ಲಿ ಚಿತ್ರಿಸಲಾಗಿದೆ. ಇದರಿಂದ ಬೌದ್ಧ ರಾಮಾಯಣವು ವಸ್ತುರಚನೆ-ಪಾತ್ರವಿನ್ಯಾಸಗಳ ದೃಷ್ಟಿಯಿಂದ ಅಷ್ಟೇನೂ ಬೆಳೆವಣಿಗೆ ಹೊಂದದೆ ಪ್ರಾಕೃತವಾಗಿದ್ದಂತೆ ತೋರುತ್ತದೆ.

ಜೈನರಾಮಾಯಣಗಳನ್ನು ನೋಡಿದರೆ ಕಥಾವಸ್ತುವಿನಲ್ಲಿ ಇವು ವಾಲ್ಮೀಕಿರಾಮಾಯಣದಿಂದ ಹಲವಾರು ಸಂಗತಿಗಳಲ್ಲಿ ಬೇರೆ. ಇವು ಪ್ರಾಚೀನಪರಂಪರೆಯ ಯಾವುದೋ ಒಂದು ಬೇರೆ ರಾಮಾಯಣವನ್ನು—ವಸ್ತು ಪಾತ್ರರಚನೆಗಳಲ್ಲಿ ಬೆಳೆವಣಿಗೆ ಯಾಗದ ಕಥೆಯನ್ನು, ಅವಲಂಬಿಸಿ ರಚಿತವಾದಂತಿವೆ. ಜೈನರಾಮಾಯಣಗಳಲ್ಲಿ ಈಗ ತಿಳಿದಿರುವಂತೆ ಎರಡು ಪರಂಪರೆ ಗಳಿವೆ. ಇವೆರಡಕ್ಕೂ ಕಥೆಯಲ್ಲಿ ಬಹಳ ವ್ಯತ್ಯಾಸಗಳಿವೆ. ಮೊದಲನೆಯದು ವಿಮಲಸೂರಿಯದು. ಎರಡನೆಯದು

೧೩. ಮುದ್ದಣ—ಅದ್ಭುತರಾಮಾಯಣ, ಪುಟ ೨.  ೧೪. ಪ್ರೊ. ಡಿ. ಎಲ್ ನರಸಿಂಹಾಚಾರ್—ಪಂಪರಾ ಸಂಗ್ರಹ ಪೀಠಿಕೆ.

ಗುಣಭದ್ರಾಚಾರ್ಯರದು ವಿಮಲಸೂರಿಯ ರಾಮಾಯಣಕ್ಕೆ ಹೆಸರು 'ಪಉಮಚರಿಯ' –ಇದು ಪ್ರಾಕೃತದಲ್ಲಿದೆ ಇದರ ರಚನೆಯಲ್ಲಿ ಮೂವರು ಕವಿಗಳ ಹಸ್ತಕ್ಷೇಪವಿದೆ ಆದರೂ ಕಥಾವಸ್ತುವನ್ನು ಲಕ್ಷಿಸಿ, ಈ ಶಾಖೆಗೆ ವಿಮಲಸೂರಿಯನ್ನು ಪ್ರವರ್ತಕನನ್ನಾಗಿ ವಿದ್ವಾಂಸರು ಗಣಿಸಿದ್ದಾರೆ ವಿಮಲಸೂರಿಗೆ ವಾಲ್ಮೀಕಿ ರಾಮಾಯಣದ ಪರಿಚಯವಿದ್ದಿತೆಂದೂ ಅವನು ಅದರಲ್ಲಿರುವುದನ್ನೆಲ್ಲ ನಂಬದೆ, ಜೈನ ಧರ್ಮಕ್ಕೆ ಅನುಸಾರವಾಗಿ ರಾಮಚರಿತೆಯನ್ನು ವಿವರಿಸಿದನೆಂದೂ ಅಭಿಪ್ರಾಯವಾಗಿದೆ[೧೫]

ಈ ಸಂಶೋಧನೆಯಿಂದ ಗುಣಭದ್ರಾಚಾರ್ಯರ ರಾಮಾಯಣದ ಪರಂಪರೆ ಇನ್ನಷ್ಟು ಮೌಲಿಕವೂ ಸಂಕರರಹಿತವೂ ಆಗಿದೆಯೆಂದು ಹೇಳಬಹುದು ಪಉಮಚರಿಯದ ರಚನಾಕಾಲವು ಕ್ರಿ ಶ ಮೂರನೆಯ ವರ್ಷವೆಂಬುದರಿಂದ ಅದು ಪ್ರಾಚೀನ ಕೃತಿ ಗುಣಭದ್ರಾಚಾರ್ಯರು ಪೂರ್ವಪುರಾಣವನ್ನು ಬರೆದ ಜಿನಸೇನಾಚಾರ್ಯರ ಶಿಷ್ಯರು, ಇವರ ಕಾಲ ಕ್ರಿ ಶ 898, ಆದುದರಿಂದ ಇವರ ಕೃತಿ ನವೀನ ಆದರೆ ಕಥಾವಸ್ತು ನವೀನವಲ್ಲವೆಂದು ತಿಳಿಯಬೇಕು ಇವರಿಗಿಂತ ಹಿಂದಿನವರು ಬರೆದು, ಇದಕ್ಕೆ ಆಧಾರವೆನಿಸುವ ಗ್ರಂಥವಾವುದೂ ಪ್ರಸಿದ್ಧಿ ಹೊಂದದಿರುವುದರಿಂದ ಈ ಶಾಖೆಗೆ ಗುಣಭದ್ರಾಚಾರ್ಯರದೇ ಹೆಸರು ಬಂದಿದೆ ಗುಣಭದ್ರಾಚಾರ್ಯರು ಬರೆದ ಉತ್ತರಪುರಾಣದ ೬೮ನೆಯ ಅಧ್ಯಾಯವು 'ಮುನಿಸುವ್ರತ ತೀರ್ಥಂಕರ ಪುರಾಣ"ವು ಮುನಿಸುವ್ರತ ಜಿನನ ಕಾಲದಲ್ಲೇ ನಡೆಯಿತೆನ್ನಲಾದ ರಾಮಾಯಣದ ಕಥೆ ಈ ಅಧ್ಯಾಯದಲ್ಲಿ ಬಂದಿದೆ ಪ್ರಾಯಃ ಗುಣಭದ್ರಾಚಾರ್ಯರಿಗೆ ಕಥಾಮೂಲ ಬೇರೆ ಇದ್ದಿರಬಹುದು, ಅದು ಪಉಮಚರಿಯವಲ್ಲ

ವಿಮಲಸೂರಿಯ 'ಪಉಮಚರಿಯ'ವನ್ನನುಸರಿಸಿ, ಸಂಸ್ಕೃತದಲ್ಲಿ ರವಿಷೇಣನು ಪದ್ಮಪುರಾಣವನ್ನು (ಅಥವಾ ಮಹಾ ರಾಮಾಯಣವನ್ನು) ಕ್ರಿ ಶ 678 ರಲ್ಲಿ ರಚಿಸಿದನು ಹೇಮಚಂದ್ರನೆಂಬ ಕವಿ ೧೨ನೆಯ ಶತಮಾನದಲ್ಲಿ ಬರೆದ 'ತ್ರಿಷಷ್ಟಿಶಲಾಕಾ ಪುರುಷ ಚರಿತ್ರ'ದ ಏಳನೆಯ ಪರ್ವದಲ್ಲಿಯೂ. 'ದೇವಗಣಿ' ಎಂಬಾತನು ಕ್ರಿ ಶ 1596 ರಲ್ಲಿ ಸಂಸ್ಕೃತ ಗದ್ಯರೂಪವಾಗಿ ಬರೆದ 'ರಾಮಚರಿತ'ದಲ್ಲಿಯೂ ಇದೇ ಪರಂಪರೆಯ ಕಥೆಯಿದೆ ಎನ್ನಲಾಗಿದೆ (ಪಂಪ ರಾ ಸಂ ಪೀಠಿಕೆ). ಕನ್ನಡದಲ್ಲಿ ನಾಗಚಂದ್ರನ (ಕ್ರಿ ಶ 1100) ರಾಮಚಂದ್ರಚರಿತ ಪುರಾಣ, ಕುಮುದೇಂದು ಕವಿಯ (1275) ರಾಮಾಯಣ, ದೇವಚಂದ್ರನ (1794) ರಾಮಕಥಾವತಾರ, ಚಂದ್ರಸಾಗರವರ್ಣಿಯ (1810) ಜಿನರಾಮಾಯಣ – ಎಂಬಿವು ವಿಮಲ ಸೂರಿಯ ಪರಂಪರೆಗೆ ಅನುಗುಣವಾಗಿರುವವು ದೇವಪ್ಪಕವಿಯ ರಾಮವಿಜಯವೂ ಇದೇ ಪರಂಪರೆಯದೆಂದು ಕಲ್ಪಿಸ ಲಾಗಿದೆ (ಪಂಪ ರಾ. ಸಂ ಪೀಠಿಕೆ ಪುಟ XXIII ನೋಡಿ). ಆದರೆ ವಾಸ್ತವವಾಗಿ ಇದು ವಿಮಲಸೂರಿಯ ಶಾಖೆಗೆ ಸೇರುವುದಿಲ್ಲ

**ವಿಮಲಸೂರಿಯ ಪರಂಪರೆಗೆ ಸೇರುವ ಪಂಪರಾಮಾಯಣ (ರಾಮಚಂದ್ರಚರಿತಪುರಾಣ) ದಲ್ಲಿ ಕಾಣುವ ವಸ್ತುವೈಶಿಷ್ಟ್ಯಗಳಿವು—**

೧ ದಶರಥನಿಗೆ ಅಪರಾಜಿತೆ, ಸುಮಿತ್ರೆ, ಕೈಕೆ, ಸುಪ್ರಭೆ ಎಂಬ ನಾಲ್ವರು ಹೆಂಡಿರಲ್ಲಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ವರು ಮಕ್ಕಳು ವಾಲ್ಮೀಕಿ ರಾಮಾಯಣದಲ್ಲಿ ಕಾಣುವ ಪುತ್ರಕಾಮೇಷ್ಟಿಯಾಗಲೀ ಮುಂದೆ ವಿಶ್ವಾಮಿತ್ರನು ಯಾಗರಕ್ಷಣೆಗಾಗಿ ರಾಮಲಕ್ಷ್ಮಣರನ್ನು ಕರೆದೊಯ್ವ ಪ್ರಸಂಗವಾಗಲೀ ಇಲ್ಲ ರಾಮನು ಬಲರಾಮನೆನಿಸುತ್ತಾನೆ, ಅವನು ಬಿಳಿ ಲಕ್ಷ್ಮಣನು ಕೃಷ್ಣ, ಕೇಶವ, ಅಚ್ಯುತ, ವಾಸುದೇವ – ಎಂಬ ಹೆಸರುಗಳುಳ್ಳವನು, ಅವನು ಕಪ್ಪು

೨ ರಾಮನು ಸೀತೆಯನ್ನಲ್ಲದೆ ಸುಗ್ರೀವನ ಹೆಣ್ಣುಮಕ್ಕಳನ್ನೂ ದಧಿಮುಖ ನಗರದ ಅರಸನ ಹೆಣ್ಣುಮಕ್ಕಳನ್ನೂ ರತ್ನಪುರದ ಅರಸುಗುವರಿಯನ್ನೂ ಮದುವೆಯಾಗುವನು

೩ 'ಜಾನಕಿಯ ನಿಮಿತ್ತ ರಾವಣನು ಅಳಿವನು' ಎಂಬ ಭವಿಷ್ಯವಾಣಿಯನ್ನು ವಿಭೀಷಣನು ನೈಮಿತ್ತಿಕನೊಬ್ಬನಿಂದ ಕೇಳಿ ದಶರಥ ಜನಕರಿಬ್ಬರನ್ನೂ ಕೊಲ್ಲಲು ಮುಂದಾಗುವನು ಈ ಸಂಗತಿಯನ್ನು ಮುಂದಾಗಿ ನಾರದನಿಂದ ತಿಳಿದ ಅವರಿಬ್ಬರೂ ತಲೆತಪ್ಪಿಸುವರು ವಿಭೀಷಣನು ಬಂದು ದಶರಥ-ಜನಕರೆಂದು ಭ್ರಮಿಸಿ, ಲೆಪ್ಪದ ಗೊಂಬೆಗಳ ತಲೆಕತ್ತರಿಸಿ ನಿಶ್ಚಿಂತನಾಗುವನು

೪ ಸೀತಾದೇವಿಗೆ ಪ್ರಭಾಮಂಡಲನು ಅಣ್ಣನು ನಾರದನು ಬರೆದ ಸೀತೆಯ ಚಿತ್ರವನ್ನು ನೋಡಿ, ಪ್ರಭಾ-ಮಂಡಲನು ಮೋಹಗೊಂಡು, ಕೊನೆಗೆ ಆಕೆ ತನ್ನ ತಂಗಿಯೆಂದು ತಿಳಿದ ಮೇಲೆ ವ್ಯಸನಪಡುವನು

೫ ರಾವಣನು ಸಹಸ್ರಬಾಹುವಾದ ಕಾರ್ತವೀರ್ಯನನ್ನು ಸೆರೆಹಿಡಿದಿದ್ದನು

---

೧೫ ಅದರಲ್ಲೇ

೭. ರಾವಣನ ತಂಗಿ ಚಂದ್ರನಖಿ. ಆಕೆಯ ಮಗಳಾದ ಅನಂಗಪುಷ್ಪೆಯನ್ನು ಹನುಮಂತನು ಮದುವೆಯಾಗಿ, ರಾವಣನು ಕೊಟ್ಟ 'ಕರ್ಣಕುಂಡಲ' ಎಂಬ ಪುರಕ್ಕೆ ರಾಜನಾಗಿ ರಾವಣನ ಸ್ನೇಹಿತನಾಗಿದ್ದನು. ರಾವಣನು ಸೀತಾಪಹರಣ ಮಾಡಿದನಂತರ ಹನುಮಂತನು ರಾವಣನ ವಿರೋಧಿಯಾಗಿ ಶ್ರೀರಾಮನಿಗೆ ಸಹಾಯಕನಾದನು. ಸುಗ್ರೀವನ ತಂಗಿಯಾದ ಶ್ರೀಪ್ರಭೆಯನ್ನು ರಾವಣನು ಮದುವಿದ್ದನು.

೮. ರಾವಣನು ರಾಕ್ಷಸನಲ್ಲ, ಸದ್ಗುಣಿ. ಕಾಲಪರಿಸ್ಥಿತಿವಶದಿಂದ ಪರಸ್ತ್ರೀ ಮೋಹಿತನಾಗಿ ಕೆಟ್ಟುಹೋದ. ಅವನ ತಂಗಿಯಾದ ಚಂದ್ರನಖಿಯ ಗಂಡನು ಪಾತಾಳಲಂಕೆಯ ಅರಸನಾದ ಖರನು. ಚಂದ್ರನಖಿಯ ಮಗನಾದ ಶಂಬುಕನನ್ನು ಲಕ್ಷ್ಮಣನು ಪ್ರಮಾದ ವಶದಿಂದ ಕೊಂದುದರಿಂದ ಚಂದ್ರನಖಿಯು ರಾವಣನಿಗೆ ದೂರುಕೊಟ್ಟು ಸೀತಾಪಹರಣಕ್ಕೆ ಪ್ರೇರಕ ಳಾಗುವಳು. ರಾವಣನು ಕೈಲಾಸಾದ್ರಿಯನ್ನೆತ್ತಿದಾಗ ವಾಲಿ ತನ್ನ ಹೆಬ್ಬೆರಲಿನಿಂದ ತುಳಿಯಲು ಅರಚಿಕೊಂಡ ರಾವಣನಿಗೆ ಆ ಹೆಸರು (ರಾವಣ ಎಂಬುದು) ಬಂತು.

೯. ಇಲ್ಲಿ ಕಪಟಮೃಗವಿಲ್ಲ ಲಕ್ಷ್ಮಣನು ಖರನೊಡನೆ ಯುದ್ಧಕ್ಕೆ ಹೋಗಿದ್ದಾಗ ರಾವಣನ ಅವಲೋಕಿನೀ ವಿದ್ಯೆಯು ಲಕ್ಷ್ಮಣನ ಧ್ವನಿಯಿಂದ ಸಿಂಹನಾದ ಮಾಡಿತು. ಲಕ್ಷ್ಮಣನ ಸಿಂಹನಾದ ಕೇಳಿದೊಡನೆ ರಾಮನು ಸೀತೆಯನ್ನು ಅಗಲಿ ಬಂದನು.

೯. ಸುಗ್ರೀವ ಹನುಮಾದಿಗಳು ಕಪಿಗಳಲ್ಲ, ಕಪಿಧ್ವಜರು.

೧೦. ಲಕ್ಷ್ಮಣನು ರಾವಣನನ್ನು ಕೊಲ್ಲುವನು. ರಾವಣವಧೆಯಿಂದ ಲಕ್ಷ್ಮಣನು ನರಕಕ್ಕೆ ಇಳಿಯುವನು. ರಾಮನು ಕರ್ಮಬಂಧವನ್ನು ಹರಿದು, ಸಿದ್ಧಪದವಿಗೆ ಏರುವ ಚರಮದೇಹಿ. ಅವನು ಕೊನೆಗೆ ಜಿನದೀಕ್ಷೆ ವಹಿಸಿ, ನಿರ್ವಾಣವನ್ನು ಸೇರುವನು.

ಜೈನರಾಮಾಯಣದ ಇನ್ನೊಂದು ಪರಂಪರೆಗೆ ಸೇರುವ ಕಥಾಸರಣಿ ಗುಣಭದ್ರಾಚಾರ್ಯರದು. ಈ ಸರಣಿಯನ್ನನು-ಸರಿಸಿ ಪುಷ್ಪದಂತನು (ಕ್ರಿ. ಶ. 965) ಅಪಭ್ರಂಶಭಾಷೆಯಲ್ಲಿ ಬರೆದ 'ತಿಸಟ್ಠಿಮಹಾಪುರಿಸಗುಣಾಲಂಕಾರ'ದಲ್ಲಿಯೂ ರಾಮಚಂದ್ರ ಮುಮುಕ್ಷು (14 ನೆಯ ಶತಮಾನ) ಸಂಸ್ಕೃತದಲ್ಲಿ ಬರೆದ 'ಪುಣ್ಯಾಸ್ರವ ಕಥಾಕೋಶ'ದಲ್ಲಿಯೂ ಕೃಷ್ಣಕವಿ (ಕ್ರಿ. ಶ. 1528) ತನ್ನ 'ಪುಣ್ಯಚಂದ್ರೋದಯ' ಕಾವ್ಯದಲ್ಲಿಯೂ ರಾಮಾಯಣದ ಕಥೆಯನ್ನು ನಿರೂಪಿಸಿದ್ದಾರೆ. ಕನ್ನಡದಲ್ಲಿ ಚಾವುಂಡರಾಯ ಪುರಾಣಾಂತರ್ಗತವಾದ ರಾಮಕಥೆಯೂ (ಕ್ರಿ. ಶ. 978), ನಾಗರಾಜನ (ಕ್ರಿ. ಶ. 1331) 'ಪುಣ್ಯಾಸ್ರವ' ದಲ್ಲಿ ಬರುವ ರಾಮಾಯಣ ಕಥೆಯೂ ಇದೇ ಪಂಗಡಕ್ಕೆ ಸೇರಿವೆಯೆನ್ನಲಾಗಿದೆ (ಪಂಪರಾಮಾಯಣ – ಪೀಠಿಕೆ). ದೇವಪ್ಪ ಕವಿಯ ರಾಮವಿಜಯ ಇದೇ ಪರಂಪರೆಯದು. ಇದರಲ್ಲಿಯೂ ರಾಮ-ಲಕ್ಷ್ಮಣರು ಬಲಾಚ್ಯುತರು. ವಾಲಿಯನ್ನೂ ರಾವಣನನ್ನೂ ವಧೆಮಾಡುವವ ಲಕ್ಷ್ಮಣ. ಈ ಹಿಂಸಾಕೃತ್ಯದ ಫಲವಾಗಿ ಕೊನೆಗೆ ಲಕ್ಷ್ಮಣನು 'ಪಂಕಪ್ರಭೆ' ಎಂಬ ನರಕಕ್ಕಿಳಿಯುವನು. ರಾಮನು ಶ್ರುತಕೇವಲಿಯಾಗುವನು. ಈ ಎರಡು ಪರಂಪರೆಯ ಜೈನರಾಮಾಯಣಗಳೊಳಗಿನ ಮುಖ್ಯವಾದ ಸಾಮ್ಯಗಳಿವು. ಇವೆರಡರೊಳಗೆ ವ್ಯತ್ಯಾಸಗಳು ಬಹಳವಿವೆ. ರಾಮವಿಜಯ ಕಾವ್ಯದ ಮುಖ್ಯ ವಸ್ತು ವೈಶಿಷ್ಟ್ಯಗಳನ್ನಿಲ್ಲಿ ಕೊಡಬಹುದು. —

೧. ಅಯೋಧ್ಯಾಧಿಪನಾದ ದಶರಥನ ಹಲವಾರು ಹೆಂಡಿರಲ್ಲಿ ಪಟ್ಟದರಸಿಯೆನಿಸಿದ ಸುಬಳಾದೇವಿಯ ಮಗನು ರಾಮನು. ಕೈಕೆಯ ಮಗ ಲಕ್ಷ್ಮಣ. (ಮುಂದೆ ಒಂದು ಕಡೆ ಲಕ್ಷ್ಮಣನು ಸುಮಿತ್ರೆಯ ಮಗನೆಂತಲೂ ಬಂದುಬಿಟ್ಟಿದೆ !). ಭರತ ಶತ್ರುಘ್ನರಿಗೆ ಏನೂ ಪ್ರಾಮುಖ್ಯವಿಲ್ಲ.

೨. ಭರತನ ತಾಯಿಗೆ ದಶರಥನ ವರವಾಗಲೀ, ಭರತನಿಗೆ ರಾಮನ ರಾಜ್ಯದಾನವಾಗಲೀ ರಾಮಲಕ್ಷ್ಮಣ ಸೀತೆಯರ ವನವಾಸ ಘಟನೆಯಾಗಲೀ ಇದರಲ್ಲಿಲ್ಲ.

೩. ರಾವಣನು ಸ್ತ್ರೀಲಂಪಟನು. ಮಾಯಾವಿ. ರಾವಣನು ಯೌವನ ಮದದಿಂದ 'ಮಣಿಮತಿ' ಎಂಬಾಕೆಯ ತಪಸ್ಸನ್ನು ಕೆಡಿಸಿದುದರಿಂದ ಆಕೆ ಅವನನ್ನು ಕೊಲ್ಲುವ ಸಂಕಲ್ಪದಿಂದ ಮಂಡೋದರಿಗೆ ಮಗಳಾಗಿ ಹುಟ್ಟುವಳು. ಆಕೆ ಹುಟ್ಟಿದಾಗ ಕಾಣಿಸಿದ ಅಪಶಕುನಗಳಿಂದ ಭಯಗೊಂಡು ರಾವಣನು ಆ ಮಗುವನ್ನು ತೊರೆಯುವನು. ಮಾರೀಚನು ಅದನ್ನು ಪೆಟ್ಟಿಗೆಯಲ್ಲಿಟ್ಟು ಮಿಥಿಳೆಯ ಸಮೀಪದ ತೋಟದಲ್ಲಿ ಹೂಳಿಟ್ಟು ಬರುವನು. ಜನಕನಿಗೆ ಆ ಶಿಶು ದೊರೆಯು ವುದು. ಅದೇ ಸೀತೆ. ಜನಕನ ಮಡದಿ ವಸುಧಾದೇವಿ ಸೀತೆಯನ್ನು ಸಲಹುವಳು.

೪ ರಾಮಲಕ್ಷ್ಮಣರು ತಮ್ಮ ಹಿರಿಯರು ಕಳೆದುಕೊಂಡಿದ್ದ ವಾರಣಾಸಿಯನ್ನು ಗೆದ್ದು, ಸೀತಾಸಹಿತ ಉದ್ಯಾನ ವಿಹಾರದಲ್ಲಿದ್ದರು ಆಗ ಮೊದಲೇ ನಾರದನಿಂದ ಸೀತೆಯ ಸೌಂದರ್ಯವನ್ನು ಕೇಳಿ, ಮೋಹಿತನಾಗಿದ್ದ ರಾವಣನು ಶೂರ್ಪನಖಿಯನ್ನು ಕಳುಹಿಸಿ ಪ್ರಯೋಜನವಾಗದಿರಲು ಮಾರೀಚ ಮಣಿಹರಿಣದ ಸುಳಿದಾಟದಿಂದ ರಾಮನನ್ನು ಅಗಲಿಸಿ ಸಖಿಯ ರೊಡನಿದ್ದ ಸೀತೆಯ ಬಳಿಗೆ ತಾನೇ ರಾಮನಾಗಿ ಬಂದು, ಸೀತೆಯನ್ನೊಯ್ಯುವನು

೫ ವಾಲಿಸುಗ್ರೀವ ಹನುಮಾದಿಗಳು ವಿದ್ಯಾಧರರು ವಿಜಯಾರ್ಧ ಪರ್ವತದ ದಕ್ಷಿಣಶ್ರೇಣಿಯ ಒತ್ತಿನಲ್ಲಿರುವ 'ಕಿಳ ಕಿಳ' ಪಟ್ಟಣದ ಅರಸನಾದ ಬಲೀಂದ್ರನಿಗೆ ಸೌಂದರಿ ಎಂಬ ಅರಸಿಯಲ್ಲಿ ಜನಿಸಿದವರು ವಾಲಿಸುಗ್ರೀವರು ಉದ್ಯತ್ಕಾಂತ ನಗರದ ರಾಜನಾದ ಪ್ರಭಂಜನನಿಗೆ ಅಂಜನಾದೇವಿಯಲ್ಲಿ ಜನಿಸಿದ ಖೇಚರಶಿರೋಮಣಿ ಹನುಮಂತನು ಇವನು ವಿದ್ಯಾಪ್ರದರ್ಶನದಲ್ಲಿ ತನ್ನ ದೇಹವನ್ನು ಅಣುರೂಪಗೊಳಿಸಿದುದರಿಂದ 'ಅಣುಪ' ಎಂಬ ಹೆಸರನ್ನಾಂತನು ಇವನು ಶ್ರೀರಾಮನ ಸೇನಾಪತಿ. ಇವನು ಲಂಕೆಗೆ ಮೊದಲ ಬಾರಿ ಹೋಗಿ ಸೀತಾನ್ವೇಷಣವನ್ನೂ, ಎರಡನೆಯ ಬಾರಿ ರಾವಣನಲ್ಲಿ ಸಂಧಿಪ್ರಸ್ತಾಪವನ್ನೂ, ಮೂರನೆಯ ಸಾರಿ ವನಭಂಗ – ಲಂಕಾದಹನಗಳನ್ನೂ ಮಾಡುವನು

೬ ಅಂಗದನನ್ನು 'ಅಂಗಜ' ಎಂತಲೂ ವಾಲಿಯನ್ನು 'ಬಾಲಿ' ಎಂತಲೂ ಕರೆದಿದೆ

೭ ಇಂದಗಿ (ಇಂದ್ರಜಿತು) ಸಂಹಾರಕನು ರಾಮನು ರಾಮನಿಗೆ ಎಂಟುಸಾವಿರ ಹೆಂಡಿರು, ಲಕ್ಷ್ಮಣನಿಗೆ ಹೆಂಡಿರು ಹದಿನಾರು ಸಾವಿರ. ಲಕ್ಷ್ಮಣನಿಗೆ ರಾಮನಿಗಿಂತ ಆಯುಷ್ಯ ಕಡಮೆ ಅಣುಪನು ಕೊನೆಗೆ ಶ್ರುತಕೇವಲಿಯಾಗುವನು

ದೇವಪ್ಪಕವಿಯ ರಾಮವಿಜಯವು ಗುಣಭದ್ರಾಚಾರ್ಯರ ಪರಂಪರೆಯದಾದರೂ ಅಲ್ಲಲ್ಲಿನ ಕೆಲವು ಸನ್ನಿವೇಶ ಸಂಗತಿಗಳಲ್ಲಿ ಸಣ್ಣ ವ್ಯತ್ಯಾಸಗಳೂ ಇವೆ ರಾಮವಿಜಯದಲ್ಲಿ ದಶರಥನು ಅಯೋಧ್ಯಾಧಿಪನು ರಾಮನು ಹುಟ್ಟಿದ ಸ್ಥಳ ಅಯೋಧ್ಯೆ. ಇವರ ಪೂರ್ವಿಕರ ಪಟ್ಟಣ ವಾರಣಾಸಿ. ಆದರೆ ಉತ್ತರಪುರಾಣದಲ್ಲಿ ದಶರಥನು ವಾರಾಣಸೀ ಪುರಾಧೀಶನು—

> ವಾರಾಣಸೀ ಪುರಾಧೀಶೋ ರಾಜ್ಞೋ ದಶರಥಶ್ರುತೇಃ ।
> ಸುತಃ ಸುಬಾಲಾಸಂಜ್ಞಾಯಾಂ ಶುಭಸ್ವಪ್ನಪುರಸ್ಸರಂ ॥ [೧೬]

ಉತ್ತರಪುರಾಣದ ಪ್ರಕಾರ ಲಕ್ಷ್ಮಣನು ಸುಮಿತ್ರೆಯ ಮಗನು ಕೈಕೆಯ ಮಕ್ಕಳು ಭರತ ಶತ್ರುಘ್ನರು ಜನಕನು ತನ್ನ ಯಾಗದ ರಕ್ಷಣೆಗಾಗಿ ರಾಮಲಕ್ಷ್ಮಣರನ್ನು ಕಳುಹಿಕೊಡಬೇಕೆಂದು ದಶರಥನಿಗೆ ಪತ್ರ ಕಳುಹಿಸುವನು ರಾಮನಿಗೆ ಸೀತೆಯನ್ನು ಕೊಡುವಾಗ ಬೇರೆ ಏಳುಮಂದಿ ಕನ್ನೆಯರನ್ನೂ, ಲಕ್ಷ್ಮಣನಿಗೆ ಪೃಥಿವೀದೇವಿ ಮೊದಲಾದ ಹದಿನಾರು ಮಂದಿ ಕನ್ನೆಯರನ್ನೂ ಜನಕರಾಜನು ಕೊಡಿಸಿದನಂತೆ—

> ತದಾನ್ಯಾಭಿಶ್ಚ ರಾಮಸ್ಯ ರಾಮಾಭಿಃ ಸಪ್ತಭಿರ್ನೃಪಃ ।
> ಪ್ರೇಕ್ಷ್ಯಾಭಿರ್ಲಕ್ಷ್ಮಣಸ್ಯಾಪಿ ಪೃಥಿವೀದೇವಿಕಾದಿಭಿಃ ॥
> ಪ್ರೀತ್ಯಾ ಷೋಡಶಮಾನಾಭಿರ್ಜಿನಪೂಜಾಪುರಸ್ಸರಂ ।
> ತನೂಜಾಭಿರ್ನರೇಂದ್ರಾಣಾಂ ವಿವಾಹಮಕರೋತ್ ಕೃತೀ ॥ [೧೭]

ಮಿಥಿಲೆಯಲ್ಲಿ ಈ ಹೆಚ್ಚಿನ ಮದುವೆಗಳು ನಡೆದಂತೆ ರಾಮವಿಜಯದಲ್ಲಿ ಹೇಳಿಲ್ಲ

ರಾಮವಿಜಯದ ಪ್ರಕಾರ ಅಣುಪನು ಲಂಕೆಯಲ್ಲಿ ಸೀತೆಯ ಬಳಿಗೆ ಬಂದು ಹೊಸ ಹೊನ್ನಮುದ್ರಿಕೆಯನ್ನೂ ರಾಮಚಂದ್ರನ ಹೆಸರ ಲೇಖನವನ್ನೂ ಮುಂದಿಡುವನು (ನಂ ೧೪–೧೭೬) ಆದರೆ ಉತ್ತರಪುರಾಣದಲ್ಲಿ ಶ್ರೀರಾಮನ ಲೇಖಗರ್ಭಿತವಾದ ಕರಂಡಕವನ್ನಿಟ್ಟನೆಂದು ಹೇಳಿದೆ ಆ ಕರಂಡಕದಲ್ಲಿ ಸೀತೆಯು ಶ್ರೀವತ್ಸಲಾಂಛನವನ್ನೂ ತನ್ನ ಪತಿಯ ನಾಮಾಕ್ಷರಾಂಕಿತ ರತ್ನದ ಉಂಗುರವನ್ನೂ ಲೇಖನವನ್ನೂ ಕಂಡಳೆಂದು ಹೇಳಿದೆ (೬೮–೪೪೧)

ರಾಮವಿಜಯದಲ್ಲಿ ಶ್ರೀರಾಮನು ಲಂಕೆಯನ್ನು ಗೆದ್ದು ಸೀತಾಸಮೇತನಾಗಿ ಬರುತ್ತ 'ಪೀವರಗಿರಿ'ಯಲ್ಲಿ ಸೀತೆಗೆ

೧೬ ಗುಣಭದ್ರ – ಉತ್ತರಪುರಾಣ, ಪರ್ವ ೬೮, ಶ್ಲೋಕ ೧೪೮ ೧೭ ಅದರಲ್ಲೇ ೬೮ – ೫೨೧, ೫೨೨.

ಅಭಿಷೇಕ ಮಾಡಿಸಿದಂತೆ ಹೇಳಿದೆ (ಸಂ. ೧೯–೨೬). ಉತ್ತರ ಪುರಾಣದ ಪ್ರಕಾರ (೬೮:–೧೧೨೦, ೧೧೨೧. ೧೧೨೨) ದೇವತೆಗಳೂ ವಿದ್ಯಾಧರರೂ ಶ್ರೀರಾಮನಿಗೆ 'ಕೋಟಿಗಿರಿ'ಯಲ್ಲಿ ಅಭಿಷೇಕ ಮಾಡುವರು.

ರಾಮವಿಜಯದಲ್ಲಿ (ಸಂಧಿ ೧೫ – ಪದ್ಯ ೧೦. ೧೧. ೧೨) ಅಂಗದನು ರಾಮನಿಗೆ ಹೇಳುವ ರಾಜನೀತಿಯಲ್ಲಿ ಅರ್ಥ ಸ್ಪಷ್ಟತೆಯಿಲ್ಲ. ಉತ್ತರಪುರಾಣದಲ್ಲಿ ಇದು ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ.[೧೮] ಅದರ ತಾತ್ಪರ್ಯವಿದು – ಅಂಗದನು ರಾಮನನ್ನು ಕುರಿತು. 'ದೇವ. ರಾಜರುಗಳು ಲೋಭವಿಜಯಿ. ಧರ್ಮವಿಜಯಿ, ಅಸುರವಿಜಯಿಗಳೆಂದು ಮೂರು ವಿಧ. ನಯಜ್ಞರು ತಮ್ಮ ಕಾರ್ಯಸಿದ್ಧಿಗಾಗಿ ಲೋಭವಿಜಯಿಯಲ್ಲಿ ದಾನೋಪಾಯವನ್ನೂ, ಧರ್ಮವಿಜಯಿಯಲ್ಲಿ ಸಾಮೋಪಾಯವನ್ನೂ, ಅಸುರವಿಜಯಿಯಲ್ಲಿ ಭೇದ-ದಂಡಗಳನ್ನೂ ಪ್ರಯೋಗಿಸುವರು. ರಾವಣನು ಅಸುರವಿಜಯಿಯಾದುದರಿಂದ ಭೇದೋಪಾಯ-ದಂಡೋಪಾಯಗಳನ್ನೇ ಬಳಸಬೇಕು. ಕ್ರಮವು ಹೀಗಿದ್ದರೂ ಪ್ರಥಮತಃ ಸಾಮೋಪಾಯವನ್ನು ಪ್ರಯೋಗಿಸುವುದು ಉಚಿತ.'

ರಚನಾದೃಷ್ಟಿಯಿಂದ ಈ ಎರಡು ಗ್ರಂಥಗಳೊಳಗೆ ವ್ಯತ್ಯಾಸವೆಂದರೆ, ಗುಣಭದ್ರಾಚಾರ್ಯರದು ಪುರಾಣ; ದೇವಪ್ಪ ಕವಿಯದು ಕಾವ್ಯ. ಆದುದರಿಂದ ಪುರಾಣದಲ್ಲಿ ಬರುವ ಹಲವಾರು ಪ್ರಾಸಂಗಿಕ ಧರ್ಮಕಥೆಗಳನ್ನೂ, ದೀರ್ಘವಾದ ಧರ್ಮೋಪದೇಶವನ್ನೂ ದೇವಪ್ಪನು ಕಡಮೆಮಾಡಿದ್ದಾನೆ. ಜೈನಪುರಾಣಗಳಲ್ಲಿ ಸಹಜವಾಗಿ ಬರುವ ಲೋಕಕಾಲಾದಿಗಳ ವಿಸ್ತಾರವರ್ಣನೆಯೂ ಪಂಚಕಲ್ಯಾಣ ವಿವರಣೆಗಳೂ ರಾಮವಿಜಯದಲ್ಲಿ ಬಂದಿಲ್ಲ.

**ರಾವಣನ ಪಾತ್ರ:** ಜೈನರಾಮಾಯಣಗಳಲ್ಲಿ ಬರುವ ರಾವಣನ ಪಾತ್ರ ವೈಶಿಷ್ಟ್ಯಪೂರ್ಣವಾದುದು. ರಾವಣನು ಪ್ರತಿನಾಯಕನಾಗಿರುವುದೂ. ಪರಸ್ತ್ರೀಯನ್ನು ಮೋಹಿಸಿದುದರಿಂದ ನಾಶವನ್ನೈದಿದನೆಂಬುದೂ ಎಲ್ಲದರಲ್ಲಿ ಸಾಮಾನ್ಯವಾಗಿರುವ ಸಂಗತಿ. ವಿಮಲಸೂರಿ ಚಿತ್ರಿಸಿರುವ ರಾವಣನು ಸಹಜವಾಗಿ ಸದ್ಗುಣಿ. ಶುಚಿ ಪ್ರವರಪುರುಷ. ಮಹಾ ಪರಾಕ್ರಮಿ, ಕೀರ್ತಿವೈಭವಸಂಪನ್ನ. ದಿಗ್ವಿಜಯಗಳಲ್ಲಿ ತಾನು ಯಾರನ್ನೂ ಸಂಹಾರಮಾಡದೆ. ತನ್ನ ದರ್ಪದಿಂದ ಎದುರಾಳಿಗಳನ್ನೆಲ್ಲ ತಲೆಬಾಗಿಸಿದನು. ಅವರು ಪಾದಾಕ್ರಾಂತರಾದಾಗ. ಶರಣಾದಾಗ, ಬೇಡಿಕೊಂಡಾಗ ಕರುಣಿಸಿದನು. ರಾವಣನು ಲೋಕಕಂಟಕನಲ್ಲ; ಶ್ರೇಷ್ಠನಾದ ಜೈನನು. ನಲಕೂಬರನ ಹೆಂಡತಿಯಾದ ಉಪರಂಭೆ ಕಾಮಿಸಿ ಅವನ ಬಳಿಗೆ ಬಂದಾಗ ಅವಳಲ್ಲಿ ಮೋಹಗೊಳ್ಳಲಿಲ್ಲ. ಅನಂತವೀರ್ಯಯತಿಗಳಿಂದ 'ಪರಮಹಿಲಾ ವಿರತಿ' ಎಂಬ ಅಣುವ್ರತವನ್ನು ಪಾಲಿಸಿಕೊಂಡು ಬಂದ ಸಂಯಮಚಿತ್ತನು. ಸೌಮ್ಯಾಕಾರ, ಸೌಜನ್ಯ. ಕ್ಷಮೆ, ದಯೆ ಧರ್ಮಭೀರುತ್ವ, ಗಾಂಭೀರ್ಯ – ಮುಂತಾದ ಸದ್ಗುಣಗಳಿಂದ ವಿಭೂಷಿತನು. ಇಂತಹ ರಾವಣನಿಗೆ 'ಜಾನಕಿಯ ಕಾರಣದಿಂದ ತನ್ನ ಅಳಿವು' ಎಂದು ಹೇಳಿದ ನೈಮಿತ್ತಿಕನ ಮಾತು ಅವನ ಜೀವನದ ಗತಿಯನ್ನೇ ಅಲುಗಾಡಿಸಿತು. ಲಕ್ಷ್ಮಣನಿಂದ ತನ್ನ ಅಳಿಯನು ಹತನಾದನೆಂಬುದು ಅವನಲ್ಲಿ ತಾನಾಗಿ ಕ್ರೋಧ-ಪ್ರತೀಕಾರ ಭಾವನೆಗಳನ್ನು ಕೆರಳಿಸಿತು. ಸೀತೆಯನ್ನು ಸ್ವತಃ ನೋಡಿದುದು ಅವನಲ್ಲಿ ಕಾಮಮೋಹವನ್ನು ಪ್ರಚೋದಿಸಿತು. ಹೀಗೆ ಕ್ರಮೋತ್ಕರ್ಷದಿಂದ ರಾವಣನಲ್ಲಿದ್ದ ನೀತಿ ಕುಸಿಯಿತು. ಹಿಂಸಾಪ್ರವೃತ್ತಿ ಹೆಡೆಯೆತ್ತಿತು. ಇದರಿಂದಲೇ ಅಧೋಗತಿ ಹೊಂದಿದನು. ವಿಮಲಸೂರಿಯ ರಾವಣನ ಪಾತ್ರ ಒಬ್ಬ ರುದ್ರನಾಯಕನದೆನ್ನಬಹುದು.

ಈ ಕಥಾವಸ್ತುವನ್ನೇ ಆಯ್ದುಕೊಂಡ ನಾಗಚಂದ್ರನು ರಾವಣನನ್ನು ಅಷ್ಟೊಂದು ಸಹಾನುಭೂತಿಯಿಂದ ನೋಡಲಿಲ್ಲ. ಇದಕ್ಕೆ ಕಾರಣ, ಆತನ ಮೇಲೆ ವಾಲ್ಮೀಕಿರಾಮಾಯಣವು ಬೀರಿದ ಪ್ರಭಾವವಿರಬಹುದು ನಾಗಚಂದ್ರನು ರಾವಣನಲ್ಲಿ ಸತ್ಯ. ಶೌಚ, ಸದ್ಗುಣಸಂಪತ್ತುಗಳಿದ್ದುವೆಂದು ಪ್ರತಿಪಾದಿಸಿ. ದುರ್ವಿಧಿಯಿಂದ ಆತನು ಸೀತೆಯಲ್ಲಿ ಮೋಹಿತನಾದನೆಂದು ಹೇಳುತ್ತ 'ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ' ಎಂದು ಸಹಾನುಭೂತಿಯನ್ನೇ ಒಮ್ಮೆಗೆ ವ್ಯಕ್ತಪಡಿಸಿದ್ದಾನೆ. ಮರುಕ್ಷಣದಲ್ಲೇ "ಪಳಿಗಂ ಪಾಪಕ್ಕಂ" ಅಂಜದವನೆಂದು ಆತನನ್ನು ನಿಂದಿಸಿದ್ದಾನೆ. ಆದರೂ ತೋರಮಟ್ಟಿಗೆ ವಿಮಲಸೂರಿಯ ಮಾರ್ಗವನ್ನೇ ಅವಲಂಬಿಸಿರುವುದರಿಂದ ಇಲ್ಲಿ ರಾವಣನು ಒಬ್ಬ ದುರಂತ ನಾಯಕನಂತೆ ಕಾಣಿಸುತ್ತಾನೆ

ಗುಣಭದ್ರಾಚಾರ್ಯರ ರಾವಣನಲ್ಲಿ ರುದ್ರನಾಯಕನ ಕಲ್ಪನೆಯಿಲ್ಲ. ರಾವಣನು ಇಲ್ಲಿ ಮನ್ಮಥನಿಗೆ ಪಂಚಗುಣ ಸೌಂದರ್ಯವುಳ್ಳವನು; ಪರಾಕ್ರಮಿ. ಆದರೆ ಸ್ತ್ರೀಲಂಪಟನು. ಅಳಕಾಪತಿಯ ಮಿತವೇಗನ ಕುಮಾರಿ ಮಣಿಮತಿಯ ಧಿಕ್ಕೃತಿಗೆ ಒಳಗಾಗುವನು ತನಗೆ ಮಗಳು ಜನಿಸಿದಾಗ ಉತ್ಪಾತಗಳಾದುವೆಂದು ಆಕೆಯನ್ನೇ ಪರಿತ್ಯಜಿಸುವವನು. ನಾರದನು ಬಂದು ಸೀತೆಯ ಸೌಂದರ್ಯವನ್ನು ಕುರಿತು ಮಾಡಿದ ಪರೋಕ್ಷವರ್ಣನೆಯಿಂದಲೇ ಮೋಹಪರವಶನಾಗಿ. ಆಕೆಯನ್ನು ಪಹರಿಸಲು

---

೧೮. ಉತ್ತರಪುರಾಣ ಪರ್ವ – ೬೮, ಶ್ಲೋಕಗಳು ೬೫-೭೦.

ಕುಟಿಲ ವಿದ್ಯೆಗಳನ್ನು ಉಪಯೋಗಿಸುವವನು ಸೀತೆಯನ್ನು ಅಪಹರಿಸಿ ಲಂಕೆಯಲ್ಲಿ ತಂದಿರಿಸಿದನಂತರ, ಆಕೆಯನ್ನು ಬಿಟ್ಟು ಕೊಡಬೇಕೆಂದು ಹೇಳಿದ ನೀತಿವಿದರನ್ನೆಲ್ಲ ಅಲಕ್ಷಿಸುವವನು. ಇದರಿಂದ ರಾವಣನು ದುರದೃಷ್ಟದಿಂದ ಕೆಟ್ಟುಹೋದನೆಂದೆ ನಿಸುವುದಿಲ್ಲ ಆತನು ಕಾಮುಕನು, ಕುಟಿಲನು, ವಂಚಕನು ಮತ್ತು ನೀತಿಬಾಹಿರನಾಗಿದ್ದು 'ಬಿತ್ತಿದುದನ್ನು ಉಂಡನು' – 'ಕರ್ಮಕ್ಕೆ ತಕ್ಕ ಫಲವನ್ನನುಭವಿಸಿದನು' ಎನಿಸುತ್ತದೆ.

## ೪. ಕಾವ್ಯಸರಣಿ

ಕನ್ನಡದ ಸಾಹಿತ್ಯವಲಯದಲ್ಲಿ ವೈಶಿಷ್ಟ್ಯಪೂರ್ಣವಾದ ಸ್ಥಾನದಲ್ಲಿ ವಿರಾಜಮಾನವಾಗಿರುವವು ಜೈನರಾಮಾಯಣಗಳು. ಅವುಗಳ ನಡುವೆ ತನ್ನದೇ ಆದ ನೆಲೆಯಲ್ಲಿ ಮೆರೆವ ಯೋಗ್ಯತೆಯನ್ನು ಈ ರಾಮವಿಜಯದಲ್ಲಿ ಕಾಣಬಹುದು ಈ ಯೋಗ್ಯತೆ ಮುಖ್ಯವಾಗಿ ಎರಡು ದೃಷ್ಟಿಗಳಿಂದ ಸಿದ್ಧಿಸಿದೆಯೆನ್ನಬಹುದು ಅವುಗಳಲ್ಲಿ ಮೊದಲನೆಯದು ಕಥಾವಸ್ತು, ಎರಡನೆಯದು ರಚನಾಸ್ವರೂಪ ಹಿಂದೆ ವಿವರಿಸಿರುವಂತೆ ಈ ಕಥಾವಸ್ತು ಜೈನರಾಮಾಯಣ ಕಥೆಗಳಲ್ಲಿ ಒಂದು ವಿಶಿಷ್ಟ ಪರಂಪರೆಗೆ ಸೇರಿ, ಮೌಲಿಕತೆಯಿಂದ ಕೂಡಿದೆ ಇದು ಇದುವರೆಗೆ ಕನ್ನಡಿಗರಲ್ಲಿ ಕಾವ್ಯವಾಗಿ ಪ್ರಕಾಶಗೊಂಡು ಪ್ರಚಾರ ಪಡೆದಿಲ್ಲ

ರಾಮವಿಜಯ ಕಾವ್ಯರಚನೆ ಸರಳವಾಗಿ, ಸುಲಭ ಗ್ರಾಹ್ಯವಾಗಿದೆ, ಭಾಷೆ ತಿಳಿಗನ್ನಡ ಅಲ್ಲಲ್ಲಿ ಬರುವ ಸರಸ ಸಂಭಾಷಣಗಳು ನಿರೂಪಣಕ್ರಮಕ್ಕೆ ಕಳೆ ತಂದಿವೆ. ಕನ್ನಡದಲ್ಲಿರುವ ಪೂರ್ವಕೃತಿಗಳಾದ ಚಾವುಂಡರಾಯ ಪುರಾಣ, ಪಂಪರಾಮಾಯಣ, ಕುಮುದೇಂದು ರಾಮಾಯಣ – ಇವುಗಳ ಶೈಲಿ ಪ್ರೌಢವಾಗಿರುವುದರಿಂದ ತಿಳಿಗನ್ನಡಿಗರಿಗೆ ತಿಳಿಯಲು ಕಠಿನವಾಗುತ್ತವೆ ಅವು ಹಳಗನ್ನಡದ ಗದ್ಯ, ಚಂಪು, ಪದ್ಯ ಮಾರ್ಗವನ್ನು ಅವಲಂಬಿಸಿದ್ದು, ವಿದ್ವಜ್ಜನರಿಗಾಗಿ ರಚಿತ ವಾದಂತಿವೆ ಕುಮುದೇಂದು ರಾಮಾಯಣವು ಸ್ವಲ್ಪ ಸರಳವೆನಿಸಬಹುದಾದರೂ ಉಳಿದವೆರಡೂ ಕಠಿಣವೇ ಅವುಗಳ ಸಾಹಿತ್ಯವು ಸಾಮಾನ್ಯ ಜನಮನಃಪ್ರವೇಶಕ್ಕೆ ದುರ್ಗಮವೆನಿಸುವ ವಿಂಧ್ಯಾಟವಿಯೆನಿಸಬಹುದು. ಆದರೆ ರಾಮವಿಜಯವು ಭಕ್ತಕವಿಯಾದ ದೇವಪ್ಪನ ಹೂದೋಟ ಪೂಜೆಗೆ ಸಲ್ಲುವ ಹೂಗಳನ್ನು ಅವನಿಲ್ಲಿ ಬೆಳೆಸಿದ್ದಾನೆ. ಮಾರ್ಗವು ಸರಳ; ಕಂಟಕಪ್ರಾಯವಾಗಿಲ್ಲ ಕಾವ್ಯವಂತೂ ಪೂರ್ಣವಾಗಿ ಜಾನಪದದ ಪದಕ್ರಮವುಳ್ಳುದು – ಸಾಂಗತ್ಯದಲ್ಲಿದೆ ಸ್ವರವೆತ್ತಿ ರಾಗ ವಾಗಿ ಎಳೆದು ಹಾಡಿಕೊಂಡು ಓದಿ ಆನಂದಪಡುವಂತಿದೆ ಜಿನಭಕ್ತಿವಶನಾದ ಕವಿ ತನ್ನ ಕಾವ್ಯವು ರಚನಾದೃಷ್ಟಿಯಿಂದ ಉತ್ತಮವೆಂದಾಗಲೀ ದೋಷರಹಿತವೆಂದಾಗಲೀ ಹೇಳುವುದಿಲ್ಲ. ಇತರರು ಅರಸಬಹುದಾದ ತಪ್ಪುಗಳ ಬಗೆಗೆ ಅವನು ಹೀಗೆ ಸವಾಲು ಹಾಕಿದ್ದಾನೆ—

> ತಪ್ಪುಬಹಳಮೀ ಕೃತಿಯೊಳು ಜಿನಕಥೆ । ಯೊಪ್ಪದೆಂದೆನವೇಡ ಮುತ್ತು ॥
> ಚಿಪ್ಪಿನೊಳೊಗೆದು ರಾಜಾಧಿರಾಜರ ಕೊರ । ಲೊಪ್ಪವಡೆದು ತೋರದಿಹುದೆ ॥ (೧–೧೧೧)

ಕೇವಲ ಆತ್ಮಸಂತೋಷಕ್ಕಾಗಿ ಅಥವಾ ಪಾಂಡಿತ್ಯ ಪ್ರದರ್ಶನಕ್ಕಾಗಿ ಈ ಕಾವ್ಯವನ್ನು ಹೇಳಲಿಲ್ಲ ತನ್ನ ಬಳಿಗೆ ಭವ್ಯರು ಬಂದು 'ಜಿನಕಥೆಯೊಳಗ ಒಂದು ಕಥೆಯನ್ನು ತಳುವಿಲ್ಲದೆ ಹೇಳು' ಎಂದು ಒತ್ತಾಯಮಾಡಿದುದರಿಂದ ಅವರಿಗಾಗಿ ಈ ಪುಣ್ಯಕಥೆಯನ್ನು ಹೇಳಿದೆನೆಂದಿದ್ದಾನೆ ತನ್ನ ಕಾವ್ಯೋದ್ದೇಶವನ್ನು ಕವಿ ಹೀಗೆ ನಿರೂಪಿಸಿದ್ದಾನೆ–

> ನಡೆನುಡಿಯಿಂದ ಸಕಲರ ಮೆಚ್ಚಿಸಿ ಹಾ । ಳೊಡಲ ಹೊರೆವುದೋಸುಗರ ॥
> ತೊಡಗಿದುದಲ್ಲವೀ ಕೃತಿಯ ಸದ್ಗತಿಯನು । ಪಡೆಯಬೇಕೆಂದಾನೊರೆದೆ ॥
> ಶಕ್ತಿಯಿಂದವೆ ಪೇಳಿದುದಿಲ್ಲ ಕವಿತೆಯ । ಯುಕ್ತಿಯೆಳ್ಳನಿತೆನಗಿಲ್ಲ ॥
> ಮುಕ್ತಿವಡೆದ ಪುರುಷರ ಚರಿತವ ಮನೋ । ಭಕ್ತಿಯಿಂದಾನು ಪೇಳಿದೆನು ॥ (೧–೧೧೯, ೧೨೦)

ಮುಕ್ತಿ ಮತ್ತು ಮುಕ್ತಿಸಾಧನಗಳು ರಾಜಾಧಿರಾಜರಿಗೆ, ವಿದ್ವಾಂಸರಿಗೆ ಕಟ್ಟಿಟ್ಟವಲ್ಲ ಅವು ಸಾಮಾನ್ಯ ಜನತೆಗೂ ಒದಗ ಬೇಕು – ಎಂದು ಕವಿಯ ಉದ್ದೇಶವಿದ್ದುದು ಸ್ಪಷ್ಟವಿದೆ ಈ ಉದ್ದೇಶಕ್ಕೆ ಸುಲಭಗ್ರಾಹ್ಯ ಭಾಷೆಯೂ, ಸಾಂಗತ್ಯದ ಛಂದವೂ, ಕಥಾವಸ್ತುವೂ ಪೋಷಕಗಳಾಗಿವೆ ಉದ್ದೇಶವು ಹೀಗಿದ್ದರೂ ಪ್ರಚಲಿತವಾದ ಕಾವ್ಯಲಕ್ಷಣಗಳನ್ನು ಕೈಬಿಟ್ಟಿಲ್ಲ. ನವರಸಗಳಿಂದಲೂ ಅಷ್ಟಾದಶವರ್ಣನೆಗಳಿಂದಲೂ ಕಾವ್ಯವನ್ನು ರಚಿಸುತ್ತೇನೆಂದು ಕವಿಯು ಹೇಳಿಕೊಂಡಿರುವನು

ಈ ಕಾವ್ಯದ ಕಥೆಯನ್ನು ಮಗಧದೇಶದ 'ರಾಜಗೃಹ' ಎಂಬ ನಗರದಲ್ಲಿ ಅರಸನಾಗಿದ್ದ ಶ್ರೇಣಿಕನು ತನ್ನ ಮಡದಿ ಯಾದ ಚೇಳಿನಿಗೆ ಹೇಳುತ್ತಿರುವಂತೆ ಕವಿಯು ವರ್ಣಿಸಿದ್ದಾನೆ. ಈ ಶ್ರೇಣಿಕನು ಕ್ರಿ. ಪೂ. ೬೦೦–೫೫೨ ಈ ಕಾಲದಲ್ಲಿ ಮಗಧ ದೇಶವನ್ನಾಳಿದ ಬಿಂಬಸಾರನೆಂಬ ಐತಿಹಾಸಿಕ ಮಹಾರಾಜನು †

ಇದರ ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ ರಸಿಕದಂಪತಿಗಳಾದ ಶ್ರೇಣಿಕ-ಚೇಳಿನಿಯರ ಸರಸಸಂವಾದವಿದೆ. ಅವರಿರ್ವರ ಸುರಸ ಶೃಂಗಾರದ ಸಂಬೋಧನೆಯ ನುಡಿಗಳು ಬಗೆಗೆ ಇಂಪನ್ನು ಬೀರುವಂತಿವೆ.

ಶ್ರೇಣಿಕನು ಹೇಳುವಂತೆ ದೇವಪ್ಪನು ವಿವರಿಸಿರುವ ಈ ಕಥೆ, ಪುಣ್ಯಕಥೆ; ಕಂತುವಿಜಯನ ಕಥೆ. ಕವಿ ಸ್ವತಃ ಜಿನ ಭಕ್ತ. ಆದುದರಿಂದಲೇ ಕಾವ್ಯಾರಂಭದಲ್ಲಿ ಜಿನಸ್ತುತಿ, ಜಿನಮುನಿಸ್ತುತಿ, ಜೈನಕವಿ ಸ್ತುತಿಗಳನ್ನು ಮಾಡಿ, ಜಿನಮತದ ಹಿರಿಮೆಯನ್ನು ಕೀರ್ತಿಸಿದ್ದಾನೆ. ಕಾವ್ಯಲಕ್ಷಣಾನುಸಾರವಾಗಿ ಅಷ್ಟಾದಶವರ್ಣನೆಯ ಕೋಲಾಹಲದಲ್ಲಿ ತಾನೆಲ್ಲಿ ಜೈನ ತತ್ವ ವನ್ನು ಬಿಟ್ಟು ಕವಲುದಾರಿಯಲ್ಲಿ ಹೋಗುವೆನೋ ಎಂಬ ಎಚ್ಚರಿಕೆ ವಹಿಸಿಕೊಂಡಿದ್ದಾನೆ. ಅದಕ್ಕೆ ಇಲ್ಲಿ ಉದಾಹರಣವಿದೆ. ಯುದ್ಧವೀರರು ರಿಪುಸಂಹಾರವನ್ನು ಮಾಡಿ, ಮಡಿದು, ತರಣಿಮಂಡಲವನ್ನೊಡೆದು ಸ್ವರ್ಗಕ್ಕೇರಿದರೆಂದೂ ಸುರಸ್ತ್ರೀಯರ ತೋಳ ತಕ್ಕೆಗೆ ಒಳಗಾದರೆಂದೂ ಸಾಂಪ್ರದಾಯಿಕವಾಗಿ ಕವಿಯು ವರ್ಣಿಸುವನು. ಆಗ ಕವಿಯಲ್ಲಿ ಜಿನಮತಪ್ರಜ್ಞೆ ಜಾಗೃತ ವಾಗಿ ಶ್ರೇಣಿಕನಿಂದ ಹೀಗೆ ಹೇಳಿಸುತ್ತಾನೆ –

ತರುಣಿ ಲಾಲಿಸು ಕವಿತಾಮಾರ್ಗಕೆ ನಾ । ನೊರೆವೆನಲ್ಲದೆ ದುರ್ಭಾವದಲಿ ॥
ಮರಣವ ಪಡೆದವರಿಗೆ ಸ್ವರ್ಗವುಂಟೆಂಬ । ಪರಿಯ ಜೈನರು ಮೆಚ್ಚುವರೆ ॥ (೧೮–೯೨)

ದೇವಪ್ಪನ ಕಾವ್ಯಸರಣಿಯನ್ನು ಸುಂದರಗೊಳಿಸುವ ಕೆಲವು ಪದ್ಯಗಳ ಉದಾಹರಣವನ್ನಿಲ್ಲಿ ಕೊಡಲಾಗಿದೆ. ಜನಕ ರಾಯನು ಸೀತೆಯನ್ನು ರಾಮನಿಗೆ ಕೊಟ್ಟು, ಕೊಟ್ಟ ಸಂದೇಶವಿದು – ಕಣ್ವನ ಸಂದೇಶವನ್ನು ಹೋಲುತ್ತಿದೆ –

ನೆನೆದು ನಿನ್ನನ್ವಯವನು ಕುವರಿಯ ನಿನ್ನ । ಘನತರಮಪ್ಪ ನೇಹವನು ॥
ನೆನೆದು ನಮ್ಮನು ನಮ್ಮ ನೆನೆದೆದೆಗೆಡದಂತೆ । ತನುಜೆಯ ಪಾಲಿಪುದೆಂದು ॥ (ಸಂ. ೮–೩೮)

ಸೀತೆಯನ್ನು ಮೋಸದಿಂದ ಅಪಹರಿಸಿ ತಂದ ರಾವಣನಿಗೆ ಮಂಡೋದರಿ ಹೇಳುವ ನೀತಿಯಿದು –

ಸುಂಡಲು ಪೋದ ಮಾರ್ತಾಂಡನಂದದಿ ನೀನು । ಮಂಡಲದೊಳು ಭೂಚರರ್ಗೆ ॥
ಲಂಡಿಯಾಗುವೆ ರಾವಣನೃಪ ನಿನ್ನೊಂದು । ಚಂಡಿಯ ಬಿಡು ಸೀತೆಯೊಡನೆ ॥ (೧೪–೧೪೦)

ಎರವಿನ ಸಿರಿ ಸಬದೊಡಿಗೆ ಗಾಳಿಯ ದೀಪ । ಸುರಚಾಪ ಕಾರ್ಗಾಲ ಮಿಂಚು ॥
ತೊರೆಯ ತಡಿಯ ಮರನಾಗದಿರದು ಮೂರ್ಖ । ನರನಾಥನ ಬಾಳ್ಕೆ ಕಡೆಗೆ ॥ (೧೪–೧೪೪)

ಶ್ರೀರಾಮನ ಮಹಿಮೆಯ ಉಲ್ಲೇಖವಿದು –

ಸಿರಿ ಜಸ ಜಯವೆಣ್ಣು ಪ್ರೌಢೆಯರಲ್ಲವೆ । ಪುರುಷಪಕ್ಷಕೆ ಸೋಲುವರೆ ॥
ವರಗುಣಪಕ್ಷಕೆ ಸೋಲ್ತು ಗುಣಿಯನಾ । ವರಿಸಿಕೊಂಡಿಹರನವರತ ॥ (೧೯–೧೧೧)

ಬೆಳ್ದಿಂಗಳ ವರ್ಣನೆಯ ಭಾಗದ ಒಂದು ಪದ್ಯವಿದು –

ಹರಿಣಾಂಕನೆಂಬ ಸೇವಗೆಯೊಳ್ಪೊರಲೊಳ । ಗಿರಿಸಿ ಸುಧೆಯ ಪಿಂಡವನು ॥
ಸರಸಿಜಭವನೊತ್ತಲೆಸೆವ ಸೇವಗೆಗಳ । ಸರವೆನಲೆಸೆದುದು ಜೊನ್ನ ॥ (೧೦–೨೦)

---

† ಶ್ರೇಣಿಕನೆಂದು ಜೈನಪುರಾಣಗಳಲ್ಲಿಯೂ, ಬಿಂಬಸಾರನೆಂದು ಇತಿಹಾಸದಲ್ಲಿಯೂ ಪ್ರಸಿದ್ಧನಾದ ಈತನು 'ಶಿಶುನಾಗ' ವಂಶದವನು. ಮೊದಲು ಬೌದ್ಧನಾಗಿದ್ದು ಚೇಟಕರಾಜನ ಕಿರಿಯ ಮಗಳಾದ ಚೇಳನಾದೇವಿ (ಚೇಳಿನಿ) ಯನ್ನು ಮದುವೆಯಾದನಂತರ ಆಕೆಯ ಪ್ರೇರಣೆಯಂತೆ ಜೈನನಾದನು ಜೈನಕ್ಷತ್ರಿಯ ವಂಶದ ರಾಜಕುಮಾರಿ ಚೇಳಿನಿಯು ೨೪ನೆಯ ತೀರ್ಥಂಕರನಾದ ಮಹಾವೀರಸ್ವಾಮಿಯ ತಾಯಿಯ ತಂಗಿ. ಈ ಶ್ರೇಣಿಕ-ಚೇಳನೀ ದಂಪತಿಗಳ ಮಗನು ಕುಣಿಕನು. ಕುಣಿಕನು ಪಟ್ಟಕ್ಕೆ ಬಂದನಂತರ ತನ್ನ ತಂದೆಯನ್ನು ಸೆರೆಯಲ್ಲಿಟ್ಟನು. ಚೇಳಿನಿಯಿಂದಾಗಿ ಕುಣಿಕನು ಪಿತೃವತ್ಸಲನಾಗಿ, ತಂದೆಯನ್ನು ಸೆರೆಯಿಂದ ಬಿಡಿಸಲು ಹೋದಾಗ, ಈತನು ತನ್ನನು ಕೊಲ್ಲಲು ಬರುತ್ತಿದ್ದಾನೆಂದು ಭಾವಿಸಿ, ಶ್ರೇಣಿಕನು ಕಟ್ಟೆಯ ಕಲ್ಲಿಗೆ ತಲೆಯನ್ನಪ್ಪಳಿಸಿ ಸತ್ತುಕೊಂಡನು (ಮಿರ್ಜಿ ಅಣ್ಣಾರಾಯ—ಜೈನಧರ್ಮ 1952–ಪುಟ 92–95).

ಸೀತೆಯ ಸೌಂದರ್ಯವರ್ಣನೆಯಲ್ಲಿ ಬಂದ ಒಂದು ಆಲಂಕಾರಿಕ ಪದ್ಯ –

ಉಸುರಿಕ್ಕುವ ಚಂಪಕ ನಲಿನಲಿದು ನಿ । ಟ್ಟಿಸುವ ಸ್ಮೈದಿಲು ನಸುನಗುವ ॥
ಪೊಸಮಲ್ಲಿಗೆ ಬಾಯಿದೆಜೀವ ಬಂದುಗೆಯೆನ್ನ । ದುಸುರುವುದೇನಂಗವಿರವ (೧೨–೬೨)

ತಮ್ಮ ಪೂರ್ವದ ಪಟ್ಟಣವಾದ ವಾರಣಾಸಿಯನ್ನು ಪರಕೀಯರು ಆಳುತ್ತಿರುವುದನ್ನು ಕೇಳಿ, ಸಹಿಸದೆ, ಶ್ರೀರಾಮನು ತಂದೆಯೊಡನೆ ಆಡುವ ದೇಶಭಕ್ತಿಯ ಮಾತುಗಳು ಕೆಳಗಿನ ಪದ್ಯಗಳಲ್ಲಿ ಬಂದಿವೆ –

ಜಿನಪತಿಯನು ಗುರುವನು ನಿಜಜನನಿಯ । ಜನಕನ ಜನ್ಮಭೂಮಿಯನು ॥
ಮನವೊಲಿದುಳಿದವರುಂಟೆ ಬಿನ್ನಪವಿದ । ಜನನಾಥ ಲಾಲಿಪುದೆನುತ ॥ (೯–೧೨)

ಏತಕೆ ಜನವೇತಕೆ ಭುಜಬಲ ನಮ । ಗೇತಕೆ ಜಯವೇತಕೆರವು ॥
ಏತಕೆ ವೀರವಾ ಪುರವನು ದಾಯಾದ್ಯ । ರೀ ತೆಜದೊಳಗಾಳುತಿರಲು (೯–೧೩)

ಷಟ್ಪದಿ ಸಾಂಗತ್ಯ ಮುಂತಾದ ಸರಳವಾದ ಛಂದಸ್ಸಿನಲ್ಲಿ ಅಥವಾ ಜಾನಪದ ಛಂದಸ್ಸಿನಲ್ಲಿ ಬರೆದ ಕಾವ್ಯಗಳಲ್ಲಿ ವ್ಯಾಕರಣ ಲಕ್ಷಣಗಳನ್ನು ಕಟ್ಟುನಿಟ್ಟಾಗಿ ನೋಡುವುದು ಸೂಕ್ತವಲ್ಲ ಹಾಗೆ ನೋಡಿದಾಗ ಕೆಲವು ಕೊರತೆಗಳು ಕಾಣುವುದೂ ಸಹಜ ಅಂತಹ ಕೊರತೆಗಳಲ್ಲಿ ಸಮಾಸ – ಸಂಧಿಗಳ ದೋಷಗಳು ಮುಖ್ಯವಾದವು

ಈ ಕಾವ್ಯದಲ್ಲಿ ಅಲ್ಲಲ್ಲಿ ಬಂದಿರುವ ಅಂತಹ ದೋಷಗಳು ಇವೆ **ಅರಿಸಮಾಸಗಳಲ್ಲಿ ಕೆಲವು:** ಉರುಸಂತಸ (೧–೧೪೪), ತಾವರೆಗೋಳನಿಜಯ (೨–೫೧), ಪುರ್ಬುಯುಗಲ (೪–೧೩೭), ಸೋಟಕಜನ (೩–೭೩) ಸ್ತ್ರೀರನ್ನೆ (೪–೧೧೬), ಸುರಸಿರಿ (೬–೫೦), ಅತಿಸಂತಸ (೬–೬೮), ಅಂಚೆಗಮನೆ (೧೨–೧೦೩), ಯುಗ್ಮಪಡೆ (೧೭–೧೧೧) **ಸಂಧಿದೋಷಗಳಲ್ಲಿ ಕೆಲವು:** ಮನಸರಸಿ (೧–೯೩) ಮನವಚನ (೧–೯೪), ಚದುರೋಕ್ತಿ (೨೦–೩೦) ದುರ್ಗೋನದುರ್ಗ (೧೯–೧೧೯) **ಗ್ರಾಮ್ಯರೂಪಗಳು:** ಎಂತ್ರ (೭–೩೧) ಯಂತ್ರ (ಶುದ್ಧರೂಪ) ಯುವತೇರು (೧೦–೧೦೫) – ಯುವತಿಯರು ನಾರೇರು (ಅನುಬಂಧ III ಸಂ ೨೧, ಪದ್ಯ ೩೧ ೭೯) – ನಾರಿಯರು **ಕೆಲವು ಪ್ರಯೋಗ ವೈಶಿಷ್ಟ್ಯಗಳು:** ಶ್ರೀರಾಮನನ್ನು ದೇವಪ್ಪನು 'ಕರ್ಣಾಟಪತಿ' ಎಂದು ಕರೆದಿದ್ದಾನೆ (೧೦–೬೪) 'ತುಳುವ ಪಾರಕರು' (೭–೮೦, ೧೦–೭೭) 'ಅರವಿಂದವನರ್ಚಿಸಿವರು' (೨೦–೧೩೫) ಇಲ್ಲಿ ಅರಪಿಂದದಿಂದ ಅರ್ಚಿಸಿದರು ಎಂಬ ತೃತೀಯಾರ್ಥದಲ್ಲಿ ದ್ವಿತೀಯೆ 'ದೇವರಂ ಪೂವಿಂದರ್ಚಿಸಿದನೆಂಬಲ್ಲಿ ಪೂವನರ್ಚಿಸಿದಂ ಎಂದಾಯ್ತು' [೧೯]

ಭಾಷಾಶಾಸ್ತ್ರ ಪರಿಶೀಲನೆಗೆ ಉಪಯುಕ್ತವೆನಿಸುವ ಕೆಲವು ಪ್ರಯೋಗಗಳು.

| ಪ್ರಯೋಗ | ವಿವರ |
|---|---|
| ಅಸಗ (೧೩–೧೪೭) | ಅಗಸ |
| ಕಿತ್ತು (ಧಾತುರೂಪ) (೧೬–೭೪) | ಕೀಳು (ಹೊದೆ-ಎಂಬುದು 'ಹೊದ್ದು' ಆದಂತೆ) |
| ಕೋಕಿರಾವೆ (೭–೭) | ಕೋಕಿಲಾಲಾಪೆ |
| ಗಳ (೧೯–೧೨೩) | ಗಣ |
| ಗೆಲಿದೊ (೪–೧೫೬) | ಗೆಲಿದವು |
| ಜಲ್ಮ (೨೦–೧೦೮) | ಜನ್ಮ |
| ತಳವಾಳ (೧೬–೭೩) | ತಳವಾಜ, ತಳಾರ |
| ಬಿಸಿಕೆ (ಅನು III ೨೦–೫೭) | ಶಿಬಿಕೆ |
| ರಾವಳ (೧೮–೧೮೦) | ರಾವಣ |
| ಸೋಮಹಾದೇವಿ (ಅನು III ೨೦–೧೪ ೨೪) | ಸೋಮಮಹಾದೇವಿ |
| ಸುಗ್ರೀವಿಭೀಷಣ | ಸುಗ್ರೀವ ವಿಭೀಷಣ |

೧೯ ಕೇಶಿರಾಜ-ಶಬ್ದಮಣಿದರ್ಪಣ, ಸೂತ್ರ ೧೪೬ – ಪ್ರಯೋಗ

| | |
|---|---|
| ಹರಗು (೧೦–೧೪೬) | ಹಗುರ |
| ಹಲಿನೀಲ (೩–೮೨) | ಹರಿನೀಲ |
| ಹಸು (೨೦–೯೬) | ಹಸಿವು |
| ಹೊಱಹೊಂಟು | ಹೊರಹೊರಟು. ಹೊರವಂಟು. |

‘ರಾಮವಿಜಯ’ ಕಾವ್ಯದಲ್ಲಿ ದೇವಪ್ಪಕವಿ ಪಂಪ. ರನ್ನ. ನಾಗಚಂದ್ರ ನೇಮಿಚಂದ್ರ ಮುಂತಾದ ಪೂರ್ವ ಕವಿಗಳನ್ನು ಸ್ತುತಿಸಿರುವುದು ಮಾತ್ರವಲ್ಲ, ತನ್ನ ಹಲವು ಪದ್ಯಗಳಲ್ಲಿ ಅವರ ಕೃತಿಪದ್ಯಗಳ ಭಾವಾನುವಾದವನ್ನೂ ತಂದಿರುವನು. ಅಂತಹ ಕೆಲವನ್ನಿಲ್ಲಿ ಕೊಡಬಹುದು –

**ರಾಮವಿಜಯ ಸಂಧಿ, ಪದ್ಯಸಂಖ್ಯೆ** — **ಅನ್ಯಕವಿ ಗ್ರಂಥಪದ್ಯಗಳು**

೧ – ೪೭ — ನೇಮಿ – ಲೀಲಾವತೀ ಪ್ರಬಂಧ ಆಶ್ವಾಸ ೧ – ಪದ್ಯ ೩೩.

ಪರಿಕಿಪೊಡೆ ಪಿಶುನನಗ್ಗದ । ಹರನೊಳ್ ಪುರುಡಿಸುವನೆಂದೊಡುಳಿದರ ಪುರುಳೇಂ ॥
ಕೊರಲೊಳ್ ತಳೆದೊಡೆ ವಿಷಮಂ । ಗಿರಿಶಂ ತಾಂ ತಳೆದನಲ್ತೆ ತುದಿನಾಲಗೆಯೊಳ್ ॥

೧೪ – ೧೫೪ — ನೇಮಿ – ಲೀ. ಆ ೪ – ೫೫.

ಉದಯಿಪ ನೇಸಱಿಂ ಕಿಡದ ಕಳ್ತಲೆ ಕಿತ್ತಲಗಿಂ ಕಱುತ್ತು ಕು ।
ತ್ತದ ಕಲಿವೇನೆಯಂತಕನ ಬಾರಿಗೆ ಬಾರದ ಸಾವು ಕಳ್ಳನು ॥
ಣ್ಣದ ಕಡುಸೊರ್ಕು ಕಿಚ್ಚಿಸುರಿ ಪತ್ತದೆ ಪೊತ್ತುವ ಬೇಗೆ ಪಾವು ತಿ ।
ನ್ನದ ಕಡು ನಂಜು ತನ್ನಿಯರೊಳಾದಳುಪಿಂ ಪಱಿತುಂಟೆ ಲೋಕದೊಳ್ ॥

೧೧ – ೬೯ — ನೇಮಿ – ಲೀ. ಆ ೧ – ೧೦೨.

ಭೂರಿಭುಜಪಂಬ ರಾಕ್ಷಸಿ । ವೈರಿಗಳಂ ನುಂಗಲೆಂದು ನೀಡಿದ ಜಿಹ್ವಾ ॥
ಕಾರಮೆನಿಸಿದುದು ರಿಪುರುಧಿ । ರಾರುಣ ಕರವಾಳಪಾ ನೃಪಾಲಕಸುತನಾ ॥

೫ – ೬೫ — ರನ್ನ – ಗದಾಯುದ್ಧ ೬ ೧ – ೩೦.

ಬೆಳಗುವ ಸೊಡರೊಳ್ ಸೊಡರಂ । ಬೆಳಗಿ ಪಲರ್ ಕೊಂಡುಪೋಗೆಯುಂ ಕುಂದದೆ ಪ ॥
ಜ್ಜಳಿಸುವವೊಲ್ . . .

೧ – ೫೫ — ನಾಗಚಂದ್ರ – ಮಲ್ಲಿನಾಥ ಪುರಾಣ ಆ. ೧ – ೨೮.

ರಸಮಂ ನಾಲಗೆ ಕವಿತಾ । ರಸಮಂ ಕವಿ ಕುಸುಮರಸಮನಳಿಮಾಲೆ ಸುಧಾ ॥
ರಸಮಂ ಸುರರಕ್ಷೆಯ ಸುಖ । ರಸಮಂ ಪರಮಾತ್ಮನಱಿಪನುಱಿದವರಱಿಯರ್ ॥

೩ – ೧೫೦ — ನಾಗಚಂದ್ರ – ಪಂಪರಾಮಾಯಣ ಆ ೩ – ೧೩.

ಕುಳಭೂಭೃತ್ ಕೂಟದೊಳ್ ಮಾಣಿಕವಿಸಿರ್ಪಂತಂತೆ ದಿಕ್ಕುಂಭಿ ಕುಂಭ ।
ಸ್ಥಳದೊಳ್ ಸಿಂದೂರಮಂತಂತಮರನದಿಯೊಳಾರಕ್ತ ನೀರೇಜ ಪತ್ರಾ ॥
ಪಳಿಯಿಂತಂತಬ್ಧಿಯೊಳ್ ವಿದ್ರುಮ ಸಮುಪಚಯಮೊಂತಂತೆ ಪರ್ವಿತ್ತು ರಾಗಾ ।
ವಿಳಮಪ್ಪಂತುರ್ವಿಯೆಲ್ಲಂ ದಶರಥ ವಸುಧಾಧೀಶ ತೇಜಃ ಪ್ರಕಾಶಂ ॥

ಸೀತೆಯ ಸೌಂದರ್ಯವರ್ಣನೆಯಲ್ಲಿ ಬಂದ ಒಂದು ಆಲಂಕಾರಿಕ ಪದ್ಯ –

ಉಸುರಿಕ್ಕುವ ಚಂಪಕ ನಲಿನಲಿದು ನಿ । ಟ್ಟಿಸುವ ನೈದಿಲು ನಸುನಗುವ ॥
ಪೊಸಮಲ್ಲಿಗೆ ಬಾಯಿದೆಱೆವ ಬಂದುಗೆಯೆನ್ನ । ದುಸುರುವುದೇಸಂಗದಿರವ (೧೨–೬೨)

ತಮ್ಮ ಪೂರ್ವದ ಪಟ್ಟಣವಾದ ವಾರಣಾಸಿಯನ್ನು ಪರಕೀಯರು ಆಳುತ್ತಿರುವುದನ್ನು ಕೇಳಿ, ಸಹಿಸದೆ, ಶ್ರೀರಾಮನು ತಂದೆಯೊಡನೆ ಆಡುವ ದೇಶಭಕ್ತಿಯ ಮಾತುಗಳು ಕೆಳಗಿನ ಪದ್ಯಗಳಲ್ಲಿ ಬಂದಿವೆ –

ಜಿನಪತಿಯನು ಗುರುವನು ನಿಜಜನನಿಯ । ಜನಕನ ಜನ್ಮಭೂಮಿಯನು ॥
ಮನವೊಲಿದುಳಿದವರುಂಟೆ ಬಿನ್ನಪವಿದ । ಜನನಾಥ ಲಾಲಿಪುದೆನುತ ॥ (೯–೧೨)

ಏತಱ ಜಸವೇತಱ ಭುಜಬಲ ನಮ । ಗೇತಱ ಜಯವೇತಱಿರವು ॥
ಏತಱ ವೀರವಾ ಪುರವನು ದಾಯಾದ್ಯ । ರೀ ತೆಱದೊಳಗಾಳುತಿರಲು (೯–೧೩)

ಷಟ್ಪದಿ, ಸಾಂಗತ್ಯ ಮುಂತಾದ ಸರಳವಾದ ಛಂದಸ್ಸಿನಲ್ಲಿ ಅಥವಾ ಜಾನಪದ ಛಂದಸ್ಸಿನಲ್ಲಿ ಬರೆದ ಕಾವ್ಯಗಳಲ್ಲಿ ವ್ಯಾಕರಣ ಲಕ್ಷಣಗಳನ್ನು ಕಟ್ಟುನಿಟ್ಟಾಗಿ ನೋಡುವುದು ಸೂಕ್ತವಲ್ಲ ಹಾಗೆ ನೋಡಿದಾಗ ಕೆಲವು ಕೊರತೆಗಳು ಕಾಣುವುದೂ ಸಹಜ ಅಂತಹ ಕೊರತೆಗಳಲ್ಲಿ ಸಮಾಸ–ಸಂಧಿಗಳ ದೋಷಗಳು ಮುಖ್ಯವಾದವು

ಈ ಕಾವ್ಯದಲ್ಲಿ ಅಲ್ಲಲ್ಲಿ ಬಂದಿರುವ ಅಂತಹ ದೋಷಗಳು ಇವೆ **ಅರಿಸಮಾಸಗಳಲ್ಲಿ ಕೆಲವು:** ಉರುಸಂತಸ (೧–೧೪೪), ತಾವರೆಗೊಳನಿಚಯ (೨–೫೧), ಪುರ್ಬುಯುಗಲ (೪–೧೩೭), ನೋಟಕಜನ (೩–೭೩). ಸ್ತ್ರೀರನ್ನೆ (೪–೧೧೬), ಸುರಸಿರಿ (೬–೫೦), ಅತಿಸಂತಸ (೬–೬೮), ಅಂಚೆಗಮನೆ (೧೨–೧೦೩) ಯುಗ್ಮವಡೆ (೧೭–೧೧೧) **ಸಂಧಿದೋಷಗಳಲ್ಲಿ ಕೆಲವು:** ಮನಸರಸಿ (೧–೯೩), ಮನವಚನ (೧–೯೪), ಚದುರೋಕ್ತಿ (೨೦–೫೦) ದುರ್ಗೋಸವರ್ಗ (೧೯–೧೧೯) **ಗ್ರಾಮ್ಯರೂಪಗಳು:** ಎಂತ್ರ (೭–೩೧) ಯಂತ್ರ (ಶುದ್ಧರೂಪ) ಯುವತೇರು (೧೦–೧೦೫)–ಯುವತಿಯರು ನಾರೇರು (ಅನುಬಂಧ III ಸಂ ೨೧ ಪದ್ಯ ೩೧, ೭೯)–ನಾರಿಯರು **ಕೆಲವು ಪ್ರಯೋಗ ವೈಶಿಷ್ಟ್ಯಗಳು:** ಶ್ರೀರಾಮನನ್ನು ದೇವಪ್ಪನು 'ಕರ್ಣಾಟಪತಿ' ಎಂದು ಕರೆದಿದ್ದಾನೆ (೧೦–೬೪) 'ತುಳುವ ವಾರಕರು' (೭–೮೦, ೧೦–೭೭) 'ಅರವಿಂದವನರ್ಚಿಸಿದರು' (೨೦–೧೫೫) ಇಲ್ಲಿ ಅರವಿಂದದಿಂದ ಅರ್ಚಿಸಿದರು ಎಂಬ ತೃತೀಯಾರ್ಥದಲ್ಲಿ ದ್ವಿತೀಯೆ 'ದೇವರಂ ಪೂವಿಂದರ್ಚಿಸಿದನೆಂಬಲ್ಲಿ ಪೂವನರ್ಚಿಸಿದಂ ಎಂದಾಯ್ತು' [೧೯]

ಭಾಷಾಶಾಸ್ತ್ರ ಪರಿಶೀಲನೆಗೆ ಉಪಯುಕ್ತವೆನಿಸುವ ಕೆಲವು ಪ್ರಯೋಗಗಳು

| ಪ್ರಯೋಗ | ವಿವರ |
|---|---|
| ಅಸಗ (೧೩–೧೪೭) | ಅಗಸ |
| ಕಿತ್ತು (ಧಾತುರೂಪ) (೧೬–೭೪) | ಕೀಳು (ಹೊದೆ-ಎಂಬುದು 'ಹೂದ್ದು' ಆದಂತೆ) |
| ಕೋಕಿಲಾವೆ (೭–೭) | ಕೋಕಿಲಾಲಾಪೆ |
| ಗಳ (೧೯–೧೨೩) | ಗಣ |
| ಗೆಲಿದೊ (೪–೧೫೬) | ಗೆಲಿದವು |
| ಜಲ್ಮ (೨೦–೧೦೮) | ಜನ್ಮ |
| ತಱವಾಳ (೧೬–೭೩) | ತಳವಾಱ, ತಳಾರ |
| ಬಿಸಿಕೆ (ಅನು III ೨೦–೫೭) | ಶಿಬಿಕೆ |
| ರಾವಳ (೧೮–೧೮೦) | ರಾವಣ |
| ಸೋಮುಹಾದೇವಿ (ಅನು III ೨೦–೧೪ ೨೪) | ಸೋಮಮಹಾದೇವಿ |
| ಸುಗ್ರೀವಿಭೀಷಣ | ಸುಗ್ರೀವ ವಿಭೀಷಣ |

---

೧೯ ಕೇಶಿರಾಜ-ಶಬ್ದಮಣಿದರ್ಪಣ, ಸೂತ್ರ ೧೪೬–ಪ್ರಯೋಗ

| | |
|---|---|
| ಹರಗು (೧೦–೧೪೬) | ಹಗುರ |
| ಹಲಿನೀಲ (೩–೮೨) | ಹರಿನೀಲ |
| ಹಸು (೨೦–೯೬) | ಹಸಿವು |
| ಹೊಱಹೊಂಟು | ಹೊರಹೊರಟು. ಹೊರವಂಟು. |

'ರಾಮವಿಜಯ' ಕಾವ್ಯದಲ್ಲಿ ದೇವಪ್ಪಕವಿ ಪಂಪ, ರನ್ನ, ನಾಗಚಂದ್ರ, ನೇಮಿಚಂದ್ರ ಮುಂತಾದ ಪೂರ್ವ ಕವಿಗಳನ್ನು ಸ್ತುತಿಸಿರುವುದು ಮಾತ್ರವಲ್ಲ, ತನ್ನ ಹಲವು ಪದ್ಯಗಳಲ್ಲಿ ಅವರ ಕೃತಿಪದ್ಯಗಳ ಭಾವಾನುವಾದವನ್ನೂ ತಂದಿರುವನು. ಅಂತಹ ಕೆಲವನ್ನಿಲ್ಲಿ ಕೊಡಬಹುದು –

| ರಾಮವಿಜಯ ಸಂಧಿ, ಪದ್ಯಸಂಖ್ಯೆ | ಅನ್ಯಕವಿ ಗ್ರಂಥಪದ್ಯಗಳು |
|---|---|
| ೧ – ೪೭ | ನೇಮಿ – ಲೀಲಾವತೀ ಪ್ರಬಂಧ ಆಶ್ವಾಸ ೧ – ಪದ್ಯ ೩೩. |
| | ಪರಿಕಿಪೊಡೆ ಪಿಶುನನಗ್ಗದ । ಹರನೊಳ್ ಪುರುಡಿಸುವನೆಂದೊಡುಳಿದರ ಪುರುಳೇಂ ॥ |
| | ಕೊರಲೊಳ್ ತಳೆದೊಡೆ ವಿಷಮಂ । ಗಿರಿಶಂ ತಾಂ ತಳೆದನಲ್ತೆ ತುದಿನಾಲಗೆಯೊಳ್ ॥ |
| ೧೪ – ೧೫೪ | ನೇಮಿ – ಲೀ. ಆ ೪ – ೫೫. |
| | ಉದಯಿಪ ನೇಸಱಿಂ ಕಿಡದ ಕಳ್ತಲೆ ಕಿತ್ತಲಗಿಂ ಕಱುತ್ತು ಕು । |
| | ತ್ತದ ಕಲಿವೇನೆಯಂತಕನ ಬಾರಿಗೆ ಬಾರದ ಸಾವು ಕಳ್ಳನು ॥ |
| | ಣ್ಣದ ಕಡುನೊರ್ಕು ಕಿಚ್ಚಿನುರಿ ಪತ್ತದೆ ಪೊತ್ತುವ ಬೇಗೆ ಪಾವು ತಿ । |
| | ನ್ನದ ಕಡು ನಂಜು ತನ್ವಿಯರೊಳಾದಳುಪಿಂ ಪಱಿತುಂಟೆ ಲೋಕದೊಳ್ ॥ |
| ೧೧ – ೬೯ | ನೇಮಿ – ಲೀ ಆ ೧ – ೧೦೨ |
| | ಭೂರಿಭುಜಪೆಂಬ ರಾಕ್ಷಸಿ । ವೈರಿಗಳಂ ನುಂಗಲೆಂದು ನೀಡಿದ ಜಿಹ್ವಾ ॥ |
| | ಕಾರಮೆನಿಸಿದುದು ರಿಪುರುಧಿ । ರಾರುಣ ಕರವಾಳವಾ ನೃಪಾಲಕಸುತನಾ ॥ |
| ೫ – ೬೫ | ರನ್ನ – ಗದಾಯುದ್ಧ ( ) ೧ – ೩೦ |
| | ಬೆಳಗುವ ನೊಡರೊಳ್ ನೊಡರಂ । ಬೆಳಗಿ ಪಲರ್ ಕೊಂಡುಪೋಗೆಯುಂ ಕುಂದದೆ ಪ ॥ |
| | ಜ್ಜಳಿಸುಪವೊಲ್ . . |
| ೧ – ೫೫ | ನಾಗಚಂದ್ರ – ಮಲ್ಲಿನಾಥ ಪುರಾಣ ಆ. ೧ – ೨೮ |
| | ರಸಮಂ ನಾಲಗೆ ಕವಿತಾ । ರಸಮಂ ಕವಿ ಕುಸುಮರಸವನಳಿಮಾಲೆ ಸುಧಾ ॥ |
| | ರಸಮಂ ಸುರರಕ್ಷಯ ಸುಖ । ರಸಮಂ ಪರಮಾತ್ಮನಱಿವನುಱಿದವರಱಿಯರ್ ॥ |
| ೩ – ೧೫೦ | ನಾಗಚಂದ್ರ – ಪಂಪರಾಮಾಯಣ ಆ. ೩ – ೧೩ |
| | ಕುಳಭೂಭೃತ್ ಕೂಟದೊಳ್ ಮಾಣಿಕವಿಸಿಲೆಂತಂತೆ ದಿಕ್ಕುಂಭಿ ಕುಂಭ । |
| | ಸ್ಥಳದೊಳ್ ಸಿಂದೂರಮೆಂತಂತಮರನದಿಯೊಳಾರಕ್ತ ನೀರೇಜ ಪತ್ರಾ ॥ |
| | ವಳಿಯೆಂತಂತಬ್ಧಿಯೊಳ್ ವಿದ್ರುಮ ಸಮುದಯಮೆಂತಂತೆ ಪರ್ವಿತ್ತು ರಾಗಾ । |
| | ವಿಳಮಪ್ಪಂತುರ್ವಿಯೆಲ್ಲಂ ದಶರಥ ವಸುಧಾಧೀಶ ತೇಜಃ ಪ್ರಕಾಶಂ ॥ |

೭ – ೧೭೬ ಪಂಪರಾ. ಆ. ೩, ಪದ್ಯ ೫೮.

ಗಜಿಯಿಂ ನೊಚ್ಚಿದರೆನೆ ಕೆಂ । ಗಜಿಯುಂಬೆಟ್ಟಿಟ್ಟೆ ರಾಜಸುತಸಂದೋಹಂ ॥
ಗಜಿಸೋಂಕದೆ ಬೆಳ್ಳಿರಲೆಗೆ । ಗಜಿಮೂಡಿದ ತೆಱದಿನೋಡಿ ಪೋದತ್ತಾಗಳ್ ॥

೧೩ – ೨೨ ಪಂ ರಾ ಆ ೯ – ೧೦೮.

ಕಳಹಂಸಾಲಸ ಯಾನೆಯುಂ ಮೃಗಮದಾಮೋದಾಸ್ಯನಿಃಶ್ವಾಸೆಯುಂ ।
ತಳಿರೇ ತಾವರೆಯೋ ಮದಾಳಿಕುಳಮೋ ಕನ್ನೆಯ್ದಿಲೋ ಮತ್ತಕೋ ॥
ಕಿಳಮೋ ಕಂಡಿರೆ ಪಲ್ಲವಾಧರೆಯುಮಂಭೋಜಾಸ್ಯೆಯುಂ ಭೃಂಗಕುಂ ।
ತಳೆಯುಂ ಕೈರವನೇತ್ರೆಯುಂ ವಿಕರವ ಪ್ರಖ್ಯಾತೆಯುಂ ಸೀತೆಯುಂ ॥

೧೬ – ೨೫ ಪಂಪರಾ ಆ ೯ – ಪದ್ಯ ೯೨

ಅನ್ನೆಯದಿಂ ನಡೆವವರಂ । ನೀನ್ನಿಯಮಿಸುವಯ್ ವಶಾಸ್ತ್ರ ಪೆಜನಾವಂ ೧ ॥
ನ್ನನ್ನಿಯಮಿಸುವಂ ಮುನ್ನೀರ್ । ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ ॥

ದೇವಪ್ಪಕವಿಯು ತನ್ನ ಪೂರ್ವ ಕವಿಗಳ ಪದ್ಯಗಳ ಭಾವಗಳನ್ನಾಯ್ದು ಬರೆದಂತೆ. ದೇವಪ್ಪನ ಪದ್ಯಗಳನ್ನೂ ಅವನ ಸಮಕಾಲೀನರು ಹಾಗೂ ಅವನಿಗಿಂತ ನವೀನರು ಅನುಸರಿಸಿದಂತೆ ಕಂಡುಬರುವ ಅಂಶಗಳಿವೆ ಅವಕ್ಕೆ ಇಲ್ಲಿ ಉದಾಹರಣಗಳನ್ನು ಕೊಡಬಹುದು –

೧೬ – ೫
೧೯ – ೮ ರತ್ನಾಕರವರ್ಣಿ – ಭರತೇಶವೈಭವ, ಆಸ್ಥಾನಸಂಧಿ. ಪದ್ಯ ೫೦

ಹೆಂಗಳ ರೂಪು ಗಂಡರಿಗೆ ಗಂಡರ ರೂಪು । ಹೆಂಗಳ ಸೋಲಿಪುದೆಂಬ ॥
ಪಾಂಗಲ್ಲವವನ ಚೆಲ್ವಿಕೆ ಗಂಡಂಪೆಣ್ಗಳ । ಕಂಗಳ ಸೆರೆವಿಡಿದಿಹುದು ॥

೨೦ – ೧೨೪ ಸರ್ವಜ್ಞಕವಿ (ಕಾಲ. ೧೭೦೦)

ಆರಯ್ದು ನಡೆವವ । ನಾರಯ್ದು ನುಡಿವವ ॥
ನಾರಯ್ದು ಪದವನಿಡುವವ – ಜಗಕೆಲ್ಲ ।
ಆರಾಧ್ಯನಕ್ಕು – ಸರ್ವಜ್ಞ.

ರಾಮವಿಜಯದಲ್ಲಿ ಮತ್ತು ರಾಮನಾಥಚರಿತದಲ್ಲಿ ಪರಸ್ಪರವಾಗಿ ಭಾವನಾಮ್ಯಗಳಿರುವ ಪದ್ಯಗಳ ವಿವರವನ್ನಿಲ್ಲಿ ಕೊಡಲಾಗಿದೆ ಇವರಲ್ಲಿ ಯಾರು ಯಾರಿಗೆ ಋಣಿಯೆಂಬ ಅಂಶವು ಇನ್ನೂ ವಿಚಾರಮಂಥನಕ್ಕೆ ಬಿಡಬಹುದು –

| ರಾಮವಿಜಯ ಸಂಧಿ – ಪದ್ಯ | ರಾಮನಾಥ ಚರಿತ ಆಶ್ವಾಸ – ಸಂಧಿ – ಪದ್ಯ |
|---|---|
| ೧ – ೫ | ೧ ೧ ೯ |

ತಂದೆತಾಯಿಗಳುಂಟು ಬಂಧುಬಳಗವುಂಟು । ನಂದನರುಂಟಂಗನೆಯರ ॥
ಸಂದಣಿಯುಂಟದನಱಿದಾನವರ್ಗೆಂತು । ವಂದನೆಯನು ಮಾಡುವೆನು ॥

| ರಾಮವಿಜಯ | ರಾಮನಾಥ ಚರಿತ |
|---|---|
| ೧೮ – ೧೦೦ | ಆ ೩ – ೩ – ೪೨ |

ತುರಗ ನೆಗಳು ಕರಿ ನೀರಾನೆಯಾಳಂಬು । ಚರ ಪೊಳಗುವ ವಾದ್ಯ ನಿನದ ॥
ವರ ಘುಳುಘುಳು ರವವಾಗೆ ಸೇನಾಚಕ್ರ । ಶರನಿಧಿಯಂತೆ ಮೆಱೆದುದು ॥

ಇದೇ ರೀತಿ ಸಾಮ್ಯವಿರುವ ಇತರ ಪದ್ಯಗಳ ಕೆಲವು ಸಂಖ್ಯಾಸೂಚಿಯನ್ನಿಲ್ಲಿ ಕೊಡಲಾಗಿದೆ—

| ರಾಮವಿಜಯ | | ರಾಮನಾಥ ಚರಿತ | | |
|---|---|---|---|---|
| ಸಂಧಿ | ಪದ್ಯ | ಆಶ್ವಾಸ | ಸಂಧಿ | ಪದ್ಯಸಂಖ್ಯೆ |
| ೧ | ೬, ೭ | ೧ | ೧ | ೧೦ |
| ೧ | ೪೨ | ,, | ,, | ೩೧ |
| ೧ | ೬೦ | ,, | ,, | ೪೯ |
| ೧ | ೮೨ | ,, | ,, | ೫೯ |
| ೧ | ೮೭ | ,, | ,, | ೫೮ |
| ,, | ೮೩ | ,, | ,, | ೬೦ |
| ,, | ೯೦ | ,, | ,, | ೬೧ |
| ,, | ೧೩೧ | ,, | ,, | ೯೦ |
| ೨ | ೧೩ | ೧ | ೨ | ೭ |
| ,, | ೨೦ | ,, | ೨ | ೫೪ |
| ,, | ೨೨ | ,, | ,, | ೫೪ |
| ೩ | ೧೨ | ,, | ೪ | ೮೨ |
| ,, | ೧೨೪ | ,, | ೫ | ೨ |
| ,, | ೧೩೧ | ,, | ೫ | ೮ |
| ,, | ೧೬೧ | ,, | ,, | ೨೬ |
| ,, | ೧೬೪ | ,, | ,, | ೨೫ |
| ,, | ೧೬೫ | ,, | ,, | ೨೭ |
| ,, | ೧೬೮ | ,, | ,, | ೨೮ |
| ೪ | ೮೧ | ೨ | ೨ | ೭೨ |
| ೫ | ೧೩ | ೨ | ೩ | ೩೫ |
| ,, | ೩೮ | ,, | ,, | ೩೮ |
| ೧೨ | ೫೦ | ೨ | ೫ | ೩೬ |

ದೇವಪ್ಪ ಕವಿಯು ರಾಮವಿಜಯದಲ್ಲಿ ಪೂರ್ವಕವಿಗಳ ಅನುಸರಣೆಯಿದೆ, ಅನುಕರಣೆಯಿದೆ, ಪದ್ಯಗಳ ಭಾವಪರಿವರ್ತನೆಯೂ ಇದೆ. ಇಷ್ಟೆಲ್ಲ ಇದ್ದರೂ ಸ್ವಕೀಯತೆಯೂ ಇರುವುದರಿಂದ ನವ್ಯತೆಯೂ ಇದೆ. ಇದಕ್ಕೆ ಕಾರಣ ಕವಿಯಲ್ಲಿರುವ ಗ್ರಥನ ಕೌಶಲ. ಇದು ವಸ್ತುವಿನ್ಯಾಸದಲ್ಲಿಯೂ ಹೌದು; ನಿರೂಪಣ ಕ್ರಮದಲ್ಲಿಯೂ ಹೌದು.

> ತ ಏವ ಪದವಿನ್ಯಾಸಾಃ ತಾ ಏವಾರ್ಥವಿಭೂತಯಃ ।
> ತಥಾಪಿ ನವ್ಯಂ ಭವತಿ ಕಾವ್ಯಂ ಗ್ರಥನಕೌಶಲಾತ್ ॥

ಎಂಬ ಸುಭಾಷಿತವು ಇಲ್ಲಿಗೆ ಹೊಂದಿಕೆಯಾಗುತ್ತದೆ. ಈ ಕಾವ್ಯದ ಕೊನೆಯಲ್ಲಿ ಚೇಳಿನಿಯು ಶ್ರೇಣಿಕನಿಗೆ ಹೇಳುವ ರೀತಿಯಲ್ಲಿ ಈ ಕಾವ್ಯದ ವಿಮರ್ಶೆಯನ್ನು ಕವಿ ಈ ರೀತಿ ಮಾಡಿರುವನು —

ಎಂತಪ್ಪ ಚೆನ್ನಾದುದೊ ನೃಪವರ ನಿ । ನ್ನಂತಪ್ಪರಾರೀ ತೆರದಿ ।
ಇಂತಪ್ಪ ಕಥೆಯ ನಿರವಿಪರಾರಿದ ಕೇಳಿ । ಮುಂತಪ್ಪ ಕರ್ಮ ಪೋದಪುದು ॥
ತುದಿಯಿಂದ ಮೊದಲಿಗೆ ಸವಿಯನು ಕಬ್ಬು ತಾ । ನೊದವಿಸಿ ಕೊಡುವುದಚ್ಚರಿಯೆ ॥
ಮೊದಲಿಂದ ತುದಿಗೆ ಪೇಳಿದ ಕಥೆಯನು ಕೇಳಿ । ಮುದವನಾಳಿಸುವುದು ಚಿತ್ರ ॥
ತೊಲಗಿತು ದುಷ್ಕರ್ಮದೆಳೆ ನನ್ನನು ಬಿಟ್ಟು । ತೊಲಗಿತು ಮಿಥ್ಯಾಂಧಕಾರ ॥
ತೊಲಗಿತು ಮಾಯೆ ನಿಮ್ಮಡಿಗಳಿಂ ಸಮ್ಯಕ್ತ್ವ । ನೆಲಸಿತು ಸುಖಿಯಾಯಿತಾತ್ಮ ॥ (೨೦–೨೦೩)

ಕಾವ್ಯಾರಂಭದಲ್ಲಿ ಭವ್ಯಜನರ ಮೂಲಕ ಕವಿಪ್ರಶಂಸಾತ್ಮಕ ಸಂಭಾಷಣೆ. ಸಂಧಿಗಳ ಆದ್ಯಂತಗಳಲ್ಲಿ ಶ್ರೇಣಿಕ ಚೇಳಿನಿಯರ ಸರಸಸಂವಾದ, ಈ ಸಂವಾದವೇ ಸಂಧಿಪ್ರಸ್ತಾಪನೆ–ಪರಿಸಮಾಪ್ತಿರೂಪವಾಗಿ ಕಾಣಿಸಿರುವುದರಿಂದ ಆಗಿರುವ ಶ್ರೋತೃಗಳ ಅವಧಾನ ನಿರ್ವಹಣೆ. ಕಾವ್ಯದಲ್ಲಿ ಅಲ್ಲಲ್ಲಿ ಬರುವ ಪಾತ್ರಗಳ ಸ್ವಭಾವೋನ್ಮೀಲನವನ್ನೆಸಗುವ ಸಹಜ ವಾಕ್ಸರಣಿಯ ನಾಟಕೀಯತೆ. ಸರಳಭಾಷೆಯಿಂದಾಗಿರುವ ಸುಂದರ ನಿರೂಪಣೆ – ಮುಂತಾದುವು ಈ ಕಾವ್ಯಕ್ಕೆ ಶ್ರಾವ್ಯತೆಯನ್ನೂ ಸೊಬಗನ್ನೂ ತಂದಿವೆ. ಇಷ್ಟೆಲ್ಲಾ ಇರುವಾಗ ಈ 'ರಾಮವಿಜಯ'ವನ್ನು ಅತಿ ಶ್ರೇಷ್ಠ ಕಾವ್ಯಗಳ ಪಂಕ್ತಿಗೆ ಸೇರಿಸಬಹುದೆ? ಎಂದು ಕೇಳುವುದಾದರೆ ಉತ್ತರವೇನೂ ಸುಲಭವಲ್ಲ. ಶ್ರೇಷ್ಠ ಕಾವ್ಯದ ಕೆಲವು ಗುಣಗಳು, ಲಕ್ಷಣಗಳು ಇದರಲ್ಲಿವೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ಲಾಕ್ಷಣಿಕರು ಕಾವ್ಯದ ಪ್ರಯೋಜನಗಳಾಗಿ ಹೇಳುವ 'ಶಿವೇತರಕ್ಷತಿ' ಎಂದರೆ, ಅಮಂಗಲ ಪರಿಹಾರ ಈ ಕಾವ್ಯದಿಂದ ಆಗುವುದು. ನೀತಿ, ಸಂಯಮ, ಕ್ಷಮೆ, ಕರುಣೆ, ಶೌರ್ಯ – ಮುಂತಾದ ಸದ್ಗುಣಗಳನ್ನು ಸಾರುವ ತತ್ತ್ವಪ್ರತಿಪಾದನೆ ಅಮಂಗಲನಾಶವನ್ನು ಮಾಡಬಲ್ಲುದು. ಎರಡನೆಯ ಪ್ರಯೋಜನ "ಸದ್ಯಃ ಪರನಿರ್ವೃತಿ" ಅಂದರೆ, ಓದಿದೊಡನೆ ಮನಸ್ಸಿಗೆ ಆನಂದವನ್ನು ತರತಕ್ಕ ಗುಣ. ಈ ಲಕ್ಷಣವು ಇದರಲ್ಲಿ ಇದೆಯೆಂಬುದು ಹಿಂದಿನ ಉದಾಹರಣಗಳಿಂದ ತಿಳಿಯಬಹುದು. ಮೂರನೆಯದು ಕಾಂತಾಸಮ್ಮಿತವೆನಿಸುವ ಉಪದೇಶ. ಇದೂ ಇದರಲ್ಲಿದೆ. ಈ ಕಾವ್ಯಪಠನವು ಆನಂದ ಪ್ರದಾನದೊಡನೆ ಸನ್ಮಾರ್ಗದರ್ಶನವನ್ನೂ ಮಾಡಬಲ್ಲುದು. ಪಾಪಪುಣ್ಯಗಳ, ಹಿತಾಹಿತಗಳ, ಸುಖದುಃಖ ಕರ್ಮಗಳ ಪ್ರಜ್ಞೆಯನ್ನು ನೀಡುವುದು. ಆದುದರಿಂದಲೇ ಸ್ವತಃ ಕವಿಯೇ ಇದನ್ನು ಕರೆದಿರುವಂತೆ ಈ 'ರಾಮವಿಜಯ' ಎಂಬುದು ಒಂದು "ಸತ್ಕಾವ್ಯ".

## ೫. ಪಾತ್ರಪರಿಚಯ

೧. **ಅಣುವ:** ಉದ್ಯತ್ಕಾಂತ ನಗರದಲ್ಲಿ ವಿದ್ಯಾಧರ ವಂಶದ ರಾಜನಾದ 'ಪ್ರಭಂಜನ'ನಿಗೆ 'ಅಂಜನಾದೇವಿ' ಎಂಬ ಅರಸಿಯಲ್ಲಿ ಜನಿಸಿದವ; ಅಮಿತವೇಗ, ವಿದ್ಯಾಬಲಯುತ, ಖೇಚರ ಶಿರೋಮಣಿ. ಆದಿತ್ಯಮಂಡಲವನ್ನು ಒದೆದು, ತನ್ನ ದೇಹವನ್ನು ಅಣುರೂಪಗೊಳಿಸಿ "ಅಣುವ" ಎಂಬ ಹೆಸರನ್ನಾಂತನು. ಕಾಮರೂಪಿಣೀ ವಿದ್ಯೆಯಿಂದ ಮಧುಕರನಾಗಿ ಲಂಕೆಗೆ ಹೋಗಿ ಶ್ರೀರಾಮನ ಮುದ್ರಿಕೆಯನ್ನೂ ಲೇಖನವನ್ನೂ ಸೀತೆಗೆ ಕೊಟ್ಟು ಬಂದನು. ಎರಡನೆಯ ಬಾರಿ ಲಂಕೆಗೆ ಹೋಗಿ ಸಂಧಿಪ್ರಸ್ತಾಪವನ್ನೂ, ಮೂರನೆಯ ಬಾರಿ ವನಭಂಗವನ್ನೂ, ಲಂಕಾದಹನವನ್ನೂ ಮಾಡಿದನು. ಯುದ್ಧದಲ್ಲಿ ಶ್ರೀರಾಮನ ಸೇನಾಪತಿ.

೨. **ಅಜಿತಂಜಯ:** ಇವನು ಶ್ರೀರಾಮನ ಕಿರಿಯ ಮಗ. ಶ್ರೀರಾಮನಿಂದ ಯುವರಾಜ ಪಟ್ಟವನ್ನು ಸ್ವೀಕರಿಸಿ, ಜನಕರಾಜನನಂತರ ಮಿಥಿಳೆಗೆ ಒಡೆಯನಾದ.

೩. **ಅತಿಬಳ:** ಜನಕರಾಜನ ಸೇನಾಪತಿ.

೪. **ಅತಿಶಯಮತಿ:** ದಶರಥನ ಮಂತ್ರಿ ಮತ್ತು ಸೇನಾಪತಿ (೬–೧೭, ೭–೯)

೫. **ಅಂಗಜ:** ಶ್ರೀರಾಮನ ಅನುಯಾಯಿ ವಿದ್ಯಾಧರರಲ್ಲಿ ಒಬ್ಬನು. ಲಂಕೆಗೆ ಹೋಗಿ ಬರಲು ಅಣುವನೇ ಸಮರ್ಥನೆಂದು ಇವನು ರಾಮನಿಗೆ ಸೂಚಿಸಿದವನು.

೬. **ಆಗಮಸಾರ:** ದಶರಥನ ಮಂತ್ರಿ. ರಾಮಲಕ್ಷ್ಮಣರನ್ನು ಜನಕರಾಜನಲ್ಲಿಗೆ ವಿವಾಹಕ್ಕೆ ಕಳುಹಿಸುವುದು ಒಳ್ಳೆಯದೆಂದು ತಿಳಿಸಿದವನು.

೭. **ಇಂದಗಿ:** ರಾವಣನಿಗೆ ಮಂಡೋದರಿಯಲ್ಲಿ ಜನಿಸಿದ ಜ್ಯೇಷ್ಠಪುತ್ರ, ಇಂದ್ರಜಿತು. ಯುದ್ಧದಲ್ಲಿ ಲಕ್ಷ್ಮಣ ನೊಡನೆ ಕಾದಿ, ಕೊನೆಗೆ ರಾಮನಿಂದ ಹತನಾಗುವನು.

೮. **ಕುಸುಮಾವಳಿ:** ಚಿತ್ರಕಾರನ ಮಡದಿ. ದಶರಥನ ಮಡದಿಯಾದ ಸುಬಳಾದೇವಿಗೆ ಪುತ್ರದೋಹಳ ವನ್ನುಂಟುಮಾಡುವ ಚಿತ್ರಪಟ ಕೊಟ್ಟವಳು.

೯. **ಕೈಕೆ:** ದಶರಥನ ಒಬ್ಬಳು ರಾಣಿ; ಲಕ್ಷ್ಮಣನ ತಾಯಿ.

೧೦. **ಖರದೂಷಣರು:** ರಾವಣನ ಪಕ್ಷದ ನರಪತಿಗಳು.

೧೧. **ಚಂದ್ರಚೂಳ:** ರತ್ನಪುರದ ರಾಜನಾದ ಪ್ರಜಾಪತಿಗೂ ಅವನ ಅರಸಿ ಗುಣಕಾಂತೆಗೂ ಜನಿಸಿದ ದುರ್ವ್ಯಸನಿ ಪುತ್ರ ಮಂತ್ರಿಕುಮಾರನಾದ ವಿಜಯನ ಗೆಳೆಯನು. ಕುಬೇರನ ಮಗಳನ್ನೆಳೆದು, ಶಿಕ್ಷೆಗೆ ಗುರಿಯಾಗಿ, ಮಹಾಬಳನೆಂಬ ಯತಿಯಿಂದ ದೀಕ್ಷೆಪಡೆದು ಮರುಹುಟ್ಟಿನಲ್ಲಿ 'ಮಣಿಚೂಳ'ನೆಂಬ ದೇವನಾಗಿ, ಅದರ ಮರುಜನ್ಮದಲ್ಲಿ ದಶರಥನ ಅರಸಿ ಯಲ್ಲಿ ಲಕ್ಷ್ಮಣನಾಗಿ ಜನಿಸಿದವನು.

೧೨. **ಚೇಳಿನಿ:** ಶ್ರೇಣಿಕ ರಾಜನ ಮಡದಿ. ಶ್ರೇಣಿಕನು ವಿವರಿಸಿದ ರಾಮವಿಜಯ ಕಥೆಯ ಶ್ರೋತೃ.

೧೩. **ಜನಕ:** ಮಿಥಿಳೆಯ ರಾಜ; ವೈದೇಹಿಯ ಗಂಡ, ಸೀತೆಯ ಸಾಕುತಂದೆ. ಇವನ ಇನ್ನೊಬ್ಬಳು ಮಡದಿ ವಸುಧಾದೇವಿ.

೧೪. **ಜಯಸೇನ:** ವಾರಣಾಸಿಯನ್ನು ಆಳುತ್ತಿದ್ದ ರಾಜ. ದಶರಥನ ದಾಯವಾದಿ. ರಾಮನು ಇವನನ್ನು ಗೆದ್ದು ವಾರಣಾಸಿಯನ್ನು ವಶಪಡಿಸಿದನು.

೧೫. **ದಶರಥ:** ಸಾಕೇತ, ವಿನೀತೆ, ಕೌಶಲ – ಎಂಬ ಇತರ ಹೆಸರುಗಳುಳ್ಳ ಅಯೋಧ್ಯೆಯ ರಾಜ. ಇಕ್ಷ್ವಾಕು ವಂಶಜ. ಇವನ ಹಿರಿಯ ಹೆಂಡತಿ ಸುಬಳಾದೇವಿ. ರಾವಣನು ಸೀತೆಯನ್ನು ಒಯ್ದ ಸಮಯದಲ್ಲಿ ಇವನು ದುಃಸ್ವಪ್ನ ಕಾಣುವನು. ರಾಮನು ಸಮವಶ್ರುತಿಯಿಂದ ಬಂದನಂತರ ಇವನು ಚಾರಣರಿಂದ ದೀಕ್ಷೆ ತಾಳುವನು.

೧೬. **ನರದೇವ:** ನಾಗಪುರದ ಅರಸ; ಸುಲೋಚನೆಯ ಗಂಡ. ಅನಂತ ಗಣಧರರಿಂದ ವೈರಾಗ್ಯ ತಾಳಿ, ಜಿನದೀಕ್ಷೆ ವಹಿಸಿ, ಮರುಹುಟ್ಟಿನಲ್ಲಿ ರಾವಣನಾಗಿ ಜನಿಸಿದನು.

೧೭. **ನಾರದ:** ರಾವಣನಿಗೆ ಸೀತೆಯ ಸೌಂದರ್ಯವನ್ನು ವರ್ಣಿಸಿದವನು. ಅಣುವ – ಸುಗ್ರೀವರು ಶ್ರೀರಾಮನಿಗೆ ಸಹಾಯಕರಾಗುವಂತೆ ಮಾರ್ಗದರ್ಶನ ಮಾಡಿದವನು.

೧೮. **ಪೃಥ್ವೀಚಂದ್ರ:** ಲಕ್ಷ್ಮಣನ ಮಗನು. ಪೃಥ್ವೀಸೌಂದರಿಯಲ್ಲಿ ಜನಿಸಿದವನು. ರಾಮನಿಂದ ರಾಜ್ಯಪಟ್ಟ ವನ್ನು ಪಡೆದುಕೊಂಡವನು

೧೯. **ಪ್ರಜಾಪತಿ:** ರತ್ನಪುರದ ರಾಜನು; ಗುಣಕಾಂತೆಯ ವಲ್ಲಭನು ಚಂದ್ರಚೂಳನ ತಂದೆ. ಅಪರಾಧಿಯಾದ ಚಂದ್ರಚೂಳನನ್ನೂ ಮಂತ್ರಿಪುತ್ರನಾದ ವಿಜಯನನ್ನೂ ಶೂಲಕ್ಕೆ ಇಕ್ಕುವಂತೆ ಆಜ್ಞೆಮಾಡಿದವನು. ವನಗಿರಿಯಲ್ಲಿ ಕುಮಾರಕ ಮುನಿಗಳಿಂದ ದೀಕ್ಷೆ ತಾಳಿದವನು.

೨೦. **ಪ್ರಭಾಸನ:** ಸಿಂಧುಗೋಪುರದ ಅರಸ. ರಾವಣವಧಾನಂತರ ಅಯೋಧ್ಯೆಗೆ ಹಿಂದಿರುಗುತ್ತಿದ್ದ ರಾಮನಿಗೆ ಇವನು ಆಶ್ರಿತನಾಗುವನು

**೨೧. ಬಾಲಿ (ವಾಲಿ):** ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಒತ್ತಿನ 'ಕಿಳಿಕಿಳಿ' ಪಟ್ಟಣದಲ್ಲಿ ವಿದ್ಯಾಧರ ವಂಶದ ಅರಸನಾದ ಬಲೀಂದ್ರನಿಗೆ 'ಸೌಂದರಿ' ಎಂಬ ಅರಸಿಯಲ್ಲಿ ಜನಿಸಿದ ಜ್ಯೇಷ್ಠ ಪುತ್ರ. ಸುಗ್ರೀವನ ಅಗ್ರಜ; ಅಧಿರಾಜ. ಇವನು ಲಕ್ಷ್ಮಣನಿಂದ ಹತನಾಗುವನು. ರಾಯಣ್ಣಕವಿ ಪ್ರಕ್ಷಿಪ್ತ ಪದ್ಯಭಾಗದ ಪ್ರಕಾರ ರಾಮನಿಂದ ಕೊಲ್ಲಲ್ಪಡುವನು. ಬಾಲಿಯ ಆನೆ "ಮಹಾಮೇಘ".

**೨೨. ಭರತ ಶತ್ರುಘ್ನರು** ರಾಮನ ತಮ್ಮಂದಿರು; ಇವರ ತಾಯಿಯ ಹೆಸರು ಉಕ್ತವಾಗಿಲ್ಲ ರಾಮಲಕ್ಷ್ಮಣರು ಇವರಿಗೆ ಮುಂದೆ ಸಾಕೇತದ ಅರಸುತನವನ್ನು ಕೊಡುವರು.

**೨೩. ಮಣಿಮತಿ:** ಅಳಕಾವತಿಯನ್ನಾಳುತ್ತಿದ್ದ ಅಮಿತವೇಗನೆಂಬಾತನ ಮಗಳು. ತನ್ನ ವಿದ್ಯಾಸಾಧನೆಗೆ ವಿಘ್ನವನು ಮಾಡಿದ ರಾವಣನಿಗೆ ಮಗಳಾಗಿ ಮಂಡೋದರಿಯಲ್ಲಿ ಜನಿಸಿ, ಪರಿತ್ಯಕ್ತಳಾಗಿ, ಜನಕರಾಜನ ಸಾಕುಮಗಳಾಗಿ "ಜಾನಕಿ" ಎನಿಸಿದಳು

**೨೪. ಮಂಜರಿಕೆ:** ರಾವಣನ ದೂತಿ ಸೀತೆಯು ರಾವಣನಿಗೆ ಒಲಿಯುವಂತೆ ಯತ್ನಿಸಿ ವಿಫಲಳಾಗುವಳು

**೨೫. ಮಂಡೋದರಿ:** ರಾವಣನ ಪಟ್ಟದ ರಾಣಿ; ಸೀತೆಯ ಹೆತ್ತ ತಾಯಿ.

**೨೬. ಮಹಾಬಳ:** ಗಿರಿಶಿಖರದಲ್ಲಿದ್ದ ಒಬ್ಬ ಯೋಗಿ ಚಂದ್ರಚೂಳ – ವಿಜಯ ಎಂಬಿಬ್ಬರಿಗೆ ದೀಕ್ಷೆಯಿತ್ತವನು

**೨೭. ಮಾರೀಚ:** ಸೀತೆಯನ್ನು ತರುವ ಉಪಾಯವನ್ನು ರಾವಣನಿಗೆ ಸೂಚಿಸುವನು. ಬಣ್ಣದ ಮೃಗವಾಗಿ ರಾಮನನ್ನು ದೂರಕ್ಕೆ ಒಯ್ದು ಅದೃಶ್ಯನಾಗುವನು.

**೨೮. ರಾಮ:** ದಶರಥ-ಸುಬಳಾದೇವಿಯರ ಮಗ; ಸೀತಾವಲ್ಲಭ ಇಂದಗಿ ಸಂಹಾರಕ. ಅಪರಾಜಿತವೆಂಬ ನೇಗಿಲು, ಕೌಮುದಿ ಗದೆ, ರತ್ನಾವತಂಸವೆಂಬ ಮಾಲಿಕೆ – ಉಳ್ಳವನು ಇವನಿಗೆ ಹದಿನಾರು ಸಾವಿರ ವರ್ಷದ ಆಯುಷ್ಯ ಸೀತೆಯಲ್ಲಿ ಇವನಿಗೆ ಎಂಟು ಮಕ್ಕಳು ರಾಮನು ಕೊನೆಗೆ ಶ್ರುತಕೇವಲಿಯಾಗಿ ಸಮ್ಮೇದ ಗಿರಿಯಲ್ಲಿ ಮೋಕ್ಷ ಪಡೆಯುವನು

**೨೯. ರಾವಣ (ರಾವಳ):** ಪೂರ್ವಜನ್ಮದಲ್ಲಿ ನಾಗಪುರದ ಅರಸ 'ನರದೇವ'. ನರದೇವನ ಪತ್ನಿ ಸುಲೋಚನೆ ನರದೇವನು ಅನಂತ ಗಣಧರರಿಂದ ದೀಕ್ಷಿತನಾಗಿ, ಆಯು ತೀರಲು, ಸುರನಾಗಿ ಸುಖಿಸಿ, ಕಾಲಾವಸಾನದಲ್ಲಿ ರಾವಣನಾಗಿ ಜನಿಸಿದನು ಲಂಕೆಯನ್ನಾಳುವ ಪೌಲಸ್ತ್ಯ ನೃಪನ ಪಟ್ಟದಂಗನೆಯಾದ ಮೇಘಶ್ರೀಯಲ್ಲಿ ಜನಿಸಿದನು. ಇವನಿಗೆ ಐನೂರು ಹೆಂಡಿರು, ಮಂಡೋದರಿ ಪಟ್ಟದರಸಿ ಇವನು ಕುಂಭಕರ್ಣ, ವಿಭೀಷಣ, ಶೂರ್ಪನಖಿಯರ ಅಣ್ಣ. ಕಾಮರೂಪಿಣೀ ವಿದ್ಯೆಯಿಂದ ರಾಮನ ರೂಪತಾಳಿ ಸೀತಾಪಹರಣ ಮಾಡಿದನು. ಗಗನವಿದ್ಯಾವಿಶಾರದ. ಇವನ ಮಕ್ಕಳು ಕುಂಭ, ನಿಕುಂಭ, ಇಂದ್ರಜಿತು (ಇಂದಗಿ), ಇಂದ್ರವರ್ಮ ಮುಂತಾದವರು. 'ಕಾಳಮೇಘ' ಇವನ ಆನೆ. ಅಳಕಾಪುರದ ರಾಜನಾದ ಅಮಿತವೇಗನ ಮಗಳಾದ ಮಣಿಮತಿಯ ವಿದ್ಯೆಗೆ ವಿಘ್ನವನ್ನುಂಟುಮಾಡಿ, ಆಕೆಯನ್ನೇ ಮಗಳಾಗಿ – ಸೀತೆಯಾಗಿ ಪಡೆದನು

**೩೦. ಲಕ್ಷ್ಮಣ:** ದಶರಥ ಕೈಕೆಯರ ಮಗ ವಾಲಿ-ರಾವಣರ ಸಂಹಾರಕ ಜಗತ್ಪಾದ ಗಿರಿಯಲ್ಲಿ ಶಿವ-ಕೇವಲಿಗಳ ನಿರ್ವಾಣಸ್ಥಾನದಲ್ಲಿ ಉಪವಾಸವಿದ್ದು "ಪ್ರಜ್ಞಪ್ತಿ" ವಿದ್ಯೆಯನ್ನು ಪಡೆದನು ಇವನಿಗೆ ಹದಿನಾರು ಸಾವಿರ ಹೆಂಡಿರು, ಸುದರ್ಶನ ಚಕ್ರ, ಅಮೋಘ ಶಕ್ತಿ, ಸೌನಂದಕ ಖಡ್ಗ, ಶಾರ್ಙ್ಗ ಧನುಸ್ಸು, ಪಂಚಮುಖ ಶಂಖ, ಕೌಸ್ತುಭ ರತ್ನ, ವಿಜಯಪರ್ವತವೆಂಬುದು ಆನೆ, ಹನ್ನೆರಡು ಸಾವಿರ ವರ್ಷದ ಆಯುಷ್ಯ. ಇವನು ಕೊನೆಗೆ ರುಜೆಯುಡಸಿ 'ಪಂಕಪ್ರಭೆ' ಎಂಬ ನರಕಕ್ಕೆ ಇಳಿವನು

**೩೧. ವರತನು:** ವೈಜಯಂತಿಯ ರಾಜ ರಾವಣವಿಜಯಾನಂತರ ಅಯೋಧ್ಯೆಗೆ ಬರುತ್ತಿದ್ದಾಗ ರಾಮನಿಗೆ ಆಶ್ರಿತನಾದನು

**೩೨. ವರ್ಣಿ:** ಒಬ್ಬ ಜಿನಮುನಿ ಸುಬಳಾದೇವಿಗೆ ಮಕ್ಕಳಾಗುವಂತೆ ಹರಸಿದವನು

**೩೩. ವಸುಧಾದೇವಿ:** ಈಕೆ ಜನಕರಾಜನ ಮಡದಿ; ಸೀತೆಯ ಸಾಕುತಾಯಿ.

೩೪. **ವಿಜಯ:** ಪ್ರಜಾಪತಿಯ ಮಂತ್ರಿಯ ಮಗ. ಚಂದ್ರಚೂಳನ ಗೆಳೆಯ. ಮಹಾಬಳ ಯೋಗಿಯಿಂದ ದೀಕ್ಷೆತಾಳಿ, ಪುನರ್ಜನ್ಮದಲ್ಲಿ 'ಕನಕಚೂಳ'ನೆಂಬ ದೇವನಾದನು. ಮತ್ತಿನ ಜನ್ಮದಲ್ಲಿ ಸುಬಳಾದೇವಿಯಲ್ಲಿ ರಾಮನಾಗಿ ಹುಟ್ಟಿದನು.

೩೫. **ವಿಜಯ:** ರಾಯಣ್ಣಕವಿ ಪ್ರಕ್ಷಿಪ್ತಭಾಗದಲ್ಲಿ ಬರುವ ಪಾತ್ರ. ಮುನಿಸುವ್ರತನು ರಾಜ್ಯವಾಳಿ, ಕೊನೆಗೆ ಈತನಿಗೆ ಪಟ್ಟಕಟ್ಟುವನು.

೩೬. **ವಿಜಯರಾಮ:** ಶ್ರೀರಾಮನ ಹಿರಿಯ ಮಗ. ತಂದೆಯು ತನಗೆ ರಾಜ್ಯಪಟ್ಟವನ್ನು ಕೊಡಲು ಬಂದಾಗ ಇವನು ಸ್ವೀಕರಿಸಲಿಲ್ಲ.

೩೭. **ವಿಭೀಷಣ:** ರಾವಣನ ತಮ್ಮ. ಅಣುವನನ್ನು ರಾವಣನ ಸಭೆಗೆ ಕರೆದುಕೊಂಡು ಹೋದವನು. ಶ್ರೀರಾಮನನ್ನು ಆಶ್ರಯಹೊಂದಿದವನು.

೩೮. **ಶಿವಗುಪ್ತ:** ಅಯೋಧ್ಯೆಯಲ್ಲಿ ಶ್ರೀರಾಮಲಕ್ಷ್ಮಣರಿಗೆ ಧರ್ಮಕಥೆಗಳನ್ನು ಹೇಳುತ್ತಿದ್ದವನು. ರಾಮನಿಗೆ ದೀಕ್ಷೆ ಕೊಟ್ಟವನು.

೩೯. **ಶ್ರೀದತ್ತ:** ವೈಶ್ಯಶ್ರೇಷ್ಠನಾದ ಗೌತಮನ ಮಗ. ಕುಬೇರನ ಸುತೆಯನ್ನು ವರಿಸಿದವ. ಚಂದ್ರಚೂಳ-ವಿಜಯರಿಂದ ತೊಂದರೆಗೆ ಈಡಾದವನು.

೪೦. **ಶ್ರುತಮತಿ ಮತ್ತು ಕಂತಿಕೆ:** ಸೀತೆಗೂ ಪೃಥ್ವೀಸೌಂದರಿಗೂ ದೀಕ್ಷೆ ಕೊಟ್ಟ ಯೋಗಿನಿಯರು.

೪೧. **ಶೂರ್ಪನಖಿ:** ರಾವಣನ ತಂಗಿ. ಮಾಯಾವೃದ್ಧೆಯಾಗಿ ಸೀತೆಯ ಬಳಿಗೆ ಬಂದು, ಆಕೆ ರಾವಣನನೊಡಂಬಡುವಂತೆ ಸಂಭಾಷಿಸಿ, ವಿಫಲಳಾದವಳು.

೪೨. **ಶ್ರೇಣಿಕ:** ಮಗಧಾಧಿಪನು; ಚೇಳಿನಿಯ ಗಂಡನು; ಬಿಂಬಸಾರನೆಂಬ ಚಾರಿತ್ರಿಕ ಪುರುಷನು. ಚೇಳಿನಿಗೆ ರಾಮವಿಜಯದ ಕಥೆ ಹೇಳಿದವನು.

೪೩. **ಸುಗ್ರೀವ:** ವಾಲಿಯ ತಮ್ಮನು, ಯುವರಾಜನು. ವಾಲಿಯಿಂದ ರಾಜ್ಯಭ್ರಷ್ಟನಾಗಿ ರಾಮನಿಗೆ ಸಹಾಯಕನಾಗಿ ನಿಂತನು. ಅಣುವನ ಮಿತ್ರನು.

೪೪. **ಸುಮಿತ್ರ:** ಮಗಧದೇಶದ ಕುಶಲಗ್ರಾಮದ ಅರಸ. ಹರಿವಂಶಾಗ್ರಣಿ, ಕಾಶ್ಯಪಗೋತ್ರದವ. ಸೋಮದೇವಿಯ ಗಂಡ; ಮುನಿಸುವ್ರತ ಜಿನನ ತಂದೆ. ರಾಯಣ್ಣಕವಿ ಪ್ರಕ್ಷಿಪ್ತ ಭಾಗದಲ್ಲಿ ಬರುವ ಒಂದು ಪಾತ್ರ.

೪೫. **ಹರಿಣಧ್ವಜ – ರವಿಕೀರ್ತಿ:** ಇವರಿಬ್ಬರೂ ರಾವಣನ ಸೇನಾಪತಿಗಳು.

## ಉಪೋದ್ಘಾತ – ಅನುಬಂಧ

**ರಾಮವಿಜಯ ರಾಯಚೂರು ಪ್ರತಿ:** 'ಜಯಕರ್ನಾಟಕ' ಪತ್ರಿಕೆ, ಸಂಪುಟ ೧೦, ಸಂಚಿಕೆ ೫ (1932) ಇದರಲ್ಲಿ ಪ್ರೊ. ಡಿ. ಕೆ. ಭೀಮಸೇನರಾವ್, ಎಂ. ಎ. – ಅವರು 'ದೇವಪ್ಪ ಕವಿ' ಎಂಬ ಶಿರೋನಾಮದ ಚಿಕ್ಕ ಲೇಖನವನ್ನು ಬರೆದು ಪ್ರಕಟಿಸಿದ್ದಾರೆ, ಆ ಲೇಖನಕ್ಕೆ ಆಧಾರವಾದುದು ರಾಯಚೂರಿನ ಆದಿತೀರ್ಥಂಕರ ಜಿನಾಲಯದ ಪೂಜಾರಿಗಳಲ್ಲಿದ್ದ ತಾಳೆಯೋಲೆಯ ಪ್ರತಿಯೆಂದೂ ಅದನ್ನು ನೋಡಲು ತಮಗೆ ಆ ಪೂಜಾರಿಗಳು ಅನುಮತಿಕೊಟ್ಟಿದ್ದರೆಂದೂ ಲೇಖಕರು ತಿಳಿಸಿದ್ದಾರೆ. ಆ ಲೇಖನದ ಇತರ ಮುಖ್ಯಾಂಶಗಳಿವು—

ಈ ಪ್ರತಿ ಸಂಪೂರ್ಣವಾದುದು; ಇದರಲ್ಲಿ ಸಂಧಿಗಳು ೨೦, ಪದ್ಯಗಳು ೩೦೦೦ (ಮೂರುಸಾವಿರ). ಪ್ರತಿಯೊಂದು ಸಂಧಿಯ ಕೊನೆಯಲ್ಲಿ 'ಇದು ಭೂಸುರವಂಶೋದ್ಭವಂ . . . .' ಎಂಬ ಸಮಾಪ್ತಿ ಪದ್ಯ ಪರಿವರ್ಧಿನಿರೂಪದಲ್ಲಿದೆ.

ಈ ಪರಿವರ್ಧಿನಿಯ ಮೂರನೆಯ ಪಾದದಲ್ಲಿ ನಾಲ್ಕು ಮಾತ್ರೆಗಳ ಒಂದು ಗಣ ಕಡಮೆಯಾಗಿರುತ್ತದೆ ಹೊಯ್ಸಳ ದೇಶದ ಚೆಂಗನಾಡಿನಲ್ಲಿರುವ 'ದಂದೂರು' ಎಂಬುದು ಈ ಕವಿಯ ವಾಸಸ್ಥಳ ಈ ಪ್ರತಿಯಲ್ಲಿ ದೇವಪ್ಪನು ಭಟ್ಟಾಕಲಂಕನನ್ನು (1604) ಸ್ತುತಿಸಿರುವ ಒಂದುಂ ಪದ್ಯವಿದೆ—

ಅವರಿವರೆನ್ನದೆ ಜಿನಮುದ್ರೆಯನು ಪೊತ್ತು । ಭುವನದೊಳಗೆ ಕೀರ್ತಿವಡೆದು ॥
ತವೆ ರಾರಾಜಿಪ ಭಟ್ಟಾಕಲಂಕನ । ತವ (ಕ) ದಿಂ ನಾನೆಜಿಗುವೆನು ॥

ಈ ಪದ್ಯದ ಆಧಾರದಿಂದ ದೇವಪ್ಪನ ಕಾಲ ೧೭ನೆಯ ಶತಮಾನದ ಪ್ರಥಮಪಾದವಿರಬೇಕು.

ಮೇಲಿನ ಹೇಳಿಕೆಗಳಲ್ಲಿ ಕವಿಯ ಊರು 'ದಂದೂರು' ಎಂದಾದುದು 'ರಾಮಂದೂರು' ಎಂಬುದನ್ನು ತಪ್ಪಿ ಓದಿದುದರಿಂದ ಆಗಿರಬೇಕು. "ರಾ" ಎಂಬುದನ್ನು ಹಿಂದಕ್ಕೆ ಯೋಜಿಸಿ, 'ಮಂ' ಎಂಬುದನ್ನು 'ದಂ ಎಂದು ತಿಳಿದುದರ ಪರಿಣಾಮವಾಗಿರಬೇಕು (ರಾಮವಿಜಯ ಸಂಧಿ ೧, ೭೧ ನೋಡಿ) ಭಟ್ಟಾಕಳಂಕನನ್ನು ಸ್ತುತಿಸಿದಂತಿರುವ ಪದ್ಯದ ಉತ್ತರಾರ್ಧದ ಪಾಠಾಂತರವು ಪ್ರಕಟಿತ ಗ್ರಂಥದಲ್ಲಿ (ಸಂ ೧–೪೦) ಹೀಗಿದೆ—

"ತವೆ ರಾಜಿಪ ತಪಸ್ವಿಗಳ ಪಾದಕೆ ನಾ । ತವಕದಿಂದೊಲಿದೆಜಿಗುವೆನು" ॥

ಈ ಪದ್ಯದ ಪೂರ್ವಾರ್ಧದ ವಿಶೇಷಣವು ಭಟ್ಟಾಕಳಂಕನಿಗೆ ಒಪ್ಪುವುದಕ್ಕಿಂತ ಅಧಿಕವಾಗಿ ತಪಸ್ವಿಗಳಿಗೆ ಒಪ್ಪುವಂಥದು ಇತರ ಪ್ರತಿಗಳಲ್ಲಿ ಭಟ್ಟಾಕಳಂಕನ ಸ್ತುತಿರೂಪವಾದ ಪಾಠಾಂತರವಿಲ್ಲ ಆದುದರಿಂದ ಮೇಲಿನ ಸ್ವೀಕೃತಪಾಠವೇ ಸರಿಯಿರಬೇಕಾಗುತ್ತದೆ ಆಗ ಹಿಂದೆ ಆಧಾರಪೂರ್ವಕ ನಿರ್ಣಯಮಾಡಿರುವ ಕವಿಕಾಲವೇ ಸರಿಯಾಗುತ್ತದೆ

**ರಾಮವಿಜಯದ ಇನ್ನೊಂದು ಪ್ರತಿ:** ಪ್ರಸ್ತುತ ಗ್ರಂಥವು ಅಚ್ಚಾಗುತ್ತಿದ್ದಾಗ, ಶ್ರೀ ಪಂಡಿತ ಭುಜಬಲಿ ಶಾಸ್ತ್ರಿಗಳು ರಾಮವಿಜಯ ಕಾವ್ಯದ ಇನ್ನೊಂದು ಓಲೆಯ ಪ್ರತಿಯನ್ನು ಒದಗಿಸಿಕೊಟ್ಟರು ಅದರಲ್ಲಿ ೧೪ ಸಂಧಿಗಳು ಮಾತ್ರ ಇದ್ದವು ಆ ಮೇಲೆ ಎರಡು ಓಲೆಗಳಿದ್ದವು ಆ ಎರಡನೆಯದು ಗ್ರಂಥಸಮಾಪ್ತಿಯ ಓಲೆಗರಿ. ಅದರಲ್ಲಿ ಕೊನೆಗೆ ಸಂಧಿ ೨೦, ಪದನು ೩೦೦೦ (ಮೂರು ಸಾವಿರ) ಎಂದು ಕಾಣಿಸಲಾಗಿತ್ತು. ಈ ಪ್ರತಿಯನ್ನು ಬರೆದವನು 'ಹಾಸನದ ಬ್ರಹ್ಮೈಯನ ಚಿಗ (ಮಗ ?) ಪೊಂಮ್ಮೈಯನು' ಎಂದು ಸೂಚಿಸಲಾಗಿದೆ ಬರೆದು ಮುಗಿಸಿದ ದಿನ 'ಶಾಲಿವಾಹನ ಶಕ ೧೬೩೬ ಕುಂದ ವರ್ತಮಾನ ಜಯ ಸಂವತ್ಸರದ ಶ್ರಾವಣ ಶುದ್ಧ ೫ ಗುರುವಾರ' ಎಂದು ಕಾಣಿಸಿದೆ. ಈ ದಿನವು ಕ್ರಿ ಶ 4–8–1714 ಆಗುವುದೆಂದು ಪಂಡಿತ ಭುಜಬಲಿ ಶಾಸ್ತ್ರಿಗಳು ತಿಳಿಸಿದ್ದಾರೆ ಈ ಪ್ರತಿಯಲ್ಲಿ ಶಕಟರೇಫವಿದೆ.

ಇದರಲ್ಲಿ ಕವಿಯ ಸ್ವಚರಿತ್ರೆಯ ಪದ್ಯಗಳಿಲ್ಲ ಕೆಲವು ಸಂಧಿಗಳ ಪ್ರಾರಂಭದಲ್ಲಿ ದೇವಪ್ಪಕವಿ ಪ್ರಶಸ್ತಿಯ ವೃತ್ತಪದ್ಯಗಳಿವೆ ಈ ವೃತ್ತಗಳಲ್ಲಿ ಕೆಲವು ತುಂಬ ತಪ್ಪುಗಳಿಂದ ಕೂಡಿವೆ ಎರಡನೆಯ ಸಂಧಿಪ್ರಾರಂಭದ ವೃತ್ತವಿದು, ಸಂಸ್ಕೃತ ಭಾಷೆಯಲ್ಲಿದೆ—

ವಿಬುಧಜನವಿನೂತಃ ಸತ್ಕಲಾಭಿಃ ಸಮೇತಃ ।
ಸುರುಚಿರಗುಣಯೂಥಃ ಸತ್ಕವಿತ್ವಾದಿನಾಥಃ ॥
ಸದಮಲಗುಣಜಾತಃ ಕಾಮಸಾಮ್ಯೈರು [ಸಾಮ್ಯೋರು] ಗಾತ್ರಃ ।
ಸ ಜಯತು ಭುವನೇಸ್ಮಿನ್ ದೇವರಾಜ ಪ್ರಧಾನಃ ॥

೪ನೆಯ ಸಂಧಿ ಪ್ರಾರಂಭದ ವೃತ್ತ:—

ಶಾರದೆಗೆವ್ವನಂ ಸಿರಿಗುದಯಿ [ಗುದಾರತೆಯುಂ] ಶ್ರುತಕೀರ್ತಿಗುನ್ನತಂ ।
ಧೀರಜನಂಗಳಿಷ್ಟಮೆನಲೊಂದಿತು ಪೊರ್ದಿತು ಪೆರ್ಚಿದತ್ತು ಗಂ ॥
ಭೀರನ ಬುಕ್ಕದೇವನುದರಾಂಬುಧಿ ಚಂದ್ರನ ದೇಪಮಂತ್ರಿಯಾ ।
ಸಾರತರೋಕ್ತಿಯಿಂ ವಿಪುಲ ದಾನದಿನೊಪ್ಪುವ ಸಚ್ಚರಿತ್ರದಿಂ ॥

೯ ನೆಯ ಸಂಧಿಪ್ರಾರಂಭದ ಪದ್ಯವಿದು; ಮೂರನೆಯ ಪಂಕ್ತಿಯ ವರೆಗೆ ಅರ್ಥವಾಗುವುದಿಲ್ಲ—

ಆ ಶಖಿವಹವೇ ಗತಿಯಿಂದುವಿನೊಳ್ ವಿಷ ಮಾಘ ಬಹುಳ ।
ಭಾಸುರ ರುದ್ರಪಂ . . . , ಪತಿಯೊಳ್ಪಿನ ಸೋಗೆ ಚಂದ್ರನಂ ॥
ನಾ ಸದಮಲ ಜೀರ್ಣ . . . . ಮುದರಣಮೆಂದೆಳೆ ಕೀರ್ತಿವುದೇನ ಬಣ್ಣಿಪೆಂ ।
ಭೂಸುರ ಬುಕ್ಕರಾಯ ಸುತನಂ ಸಚಿವೋತ್ತಮ ದೇವಪಾಖ್ಯನಂ ॥

೧೦ ನೆಯ ಸಂಧಿ ಪ್ರಾರಂಭದಲ್ಲಿ ಕೆಳಗಿನ ವೃತ್ತವಿದೆ:—

ಶ್ರೀಮದ್ಭವ್ಯ ಮುನೀಂದ್ರ ಮಂಜುಳ ಮಹಾ ನಿರ್ವಾಸ್ತ (?) ಪಾದಾಂಬುಜಂ ।
ಕಾಮೋದ್ದಂಡ ವಿಘಾತ ಕರ್ಮಗಳನಂ ದಿಙ್ಮಂಡಳಾಚ್ಛಾದನಂ ॥
ಪ್ರೇಮಂ ಮುಕ್ತಿಪರಂ ಜಿನೇಶನಮಲಂ ರತ್ನತ್ರಯಾಲಂಕೃತೋ ।
ದ್ದಾಮಂ ಪಾಲಿಸುನೋಲ್ದು [ಪಾಲಿಪುದೊಲ್ದು] ಬುಕ್ಕಸಚಿವ ಶ್ರೀದೇವಯಾ [ಭಿಖ್ಯನಂ] ॥

೧೪ ನೆಯ ಸಂಧಿಪ್ರಾರಂಭದ ಪದ್ಯ ತೀರಾ ತಪ್ಪುಗಳುಳ್ಳುದಾದ ಕಾರಣ ಇಲ್ಲಿ ಕೊಟ್ಟಿಲ್ಲ.

ಈ ಪ್ರತಿಯಿಂದ ದೊರೆವ ಮುಖ್ಯ ಪಾಠಾಂತರ ಪ್ರಯೋಜನವೊಂದನ್ನಿಲ್ಲಿ ಕೊಡಬಹುದು:—ಸಂಧಿ ೧, ಪದ್ಯ ೨– ಇದರಲ್ಲಿ "ಭವಸಾಗರ ವಿತರಣ" ಎಂಬ ಪಾಠಾಂತರವಿದೆ "ವಿತರಣ" ಎಂಬ ಶಬ್ದಕ್ಕೆ ವಿಶೇಷವಾಗಿ ದಾಟಿದವನು, ದಾಟಿಸುವವನು ಅಥವಾ ವಿಶೇಷವಾದ ನಾವೆ (ಹಡಗು) ಎಂಬ ಅರ್ಥಗಳಿರುವುದರಿಂದ ಈ ಪಾಠಾಂತರವೇ ಹೆಚ್ಚು ಸಮಂಜಸವಾಗಿ ತೋರುತ್ತದೆ.

---

॥ ಶ್ರೀ ವೀತರಾಗಾಯ ನಮಃ ॥

## ದೇವಪ್ಪ ಕವಿ ಕೃತ

# ರಾಮವಿಜಯ ಕಾವ್ಯ

### ೧. ಪೀಠಿಕಾ ಸಂಧಿ

[1]ಶ್ರೀಪೌಲೋಮೀಶ-ನತ-ಪಾದ-ಪದ್ಮನ[2] । ಶ್ರೀಪತಿಸುತ[1] ಮದಹರನ ॥
ಶ್ರೀಪಂಚಕಲ್ಯಾಣಯುತ ಜಿನರಾಜನ । ಶ್ರೀಪಾದವೆ ಶರಣೆನಗೆ ॥ ೧ ॥

ನಾಗ-ನರ-ಸುರ[3]-ವಂದಿತನಿಗೆ[4] ಭವ । [5]ಸಾಗರ-ವಿತತನಾ[6] ಕಮಠ ॥
ಆಗಲೆಸಗಿದುಪಸರ್ಗ-ವಿಜ[5]ಯ ಸೀ । ನಾಗು ಶಂಕರ ಶರಣೆನಗೇ ॥ ೨ ॥

ಎಱಗುವೆ ನಾನಳ್ತಿಯಿಂದ ಮುಪ್ಪುರವನು । ನೆಱೆ[7] ಸುಟ್ಟುರುಪಿ ತ್ರೈಜಗಕೆ ॥[8]
ಎಱೆಯ ತಾನೆನಿಸಿ ಮೆ[9]ಱೆವ ವೀತರಾಗನ । ಮಿಱುಗುವ ಮಿಱುಪಂಘ್ರಿಗ[9]ಳಿಗೆ[10] ॥ ೩ ॥

ಹರಿ ಗಡ ಹತ್ತು ಭವದೊಳು[11] ಬಂದನು ಗಡ । ಹರ ಗಡ ತಿರಿದುಂಡ ಗಡ ॥
ಸರಸಿಜೋದ್ಭವ ಗಡ ಸುತೆಗೊಲಿದ ಗಡೆಂಬ । ಪರಿಯನದಾರು[12] ಮೆಚ್ಚುವರು ॥ ೪ ॥

[13]ಜನನಿ-ಜನಕರುಂಟನುಜ-ತನುಜರುಂಟು[13] । ಘನವಾದ ಬಂಧುನಿಕರವು ॥
ಅನುದಿನವುಂಟವರಿಗೆ ದೇವರೆಂದೆನ್ನ । ಮನವೊಲಿದೆಂತೆಱಗುವೆನು[14] ॥ ೫ ॥

---

[ಅನುವಾದ]

ಶ್ರೀಯುತನಾದ ದೇವೇಂದ್ರನಿಂದ ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳವನೂ, ಮನ್ಮಥನ ಮದವನ್ನು ನಾಶಮಾಡಿದವನೂ, ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ, ಪರಿನಿರ್ವಾಣ—ಎಂಬ ಐದು ಕಲ್ಯಾಣಗಳಿಂದ ಕೂಡಿದವನೂ ಆದ ಶ್ರೀ ಜಿನೇಶ್ವರನ ಕಾಂತಿಯುಕ್ತವಾದ ಪಾದವೇ ನನಗೆ ಶರಣವಾಗಿದೆ. ॥ ೧ ॥ ಭವನಾಮರ ಲೋಕದ ನಾಗರಿಂದ, ಮನುಷ್ಯರಿಂದ, ದೇವತೆಗಳಿಂದ ನಮಸ್ಕರಿಸಲ್ಪಟ್ಟವನೂ ಭವಸಾಗರದಲ್ಲಿ ಹರಡಿಕೊಂಡು ಕಮಠನೆಂಬ ಶತ್ರುವು ಕೊಟ್ಟ ಉಪಸರ್ಗಗಳನ್ನು ಜಯಿಸಿದವನೂ ಆದ ಶ್ರೀ ಪಾರ್ಶ್ವನಾಥನೆಂಬ ತೀರ್ಥಂಕರ ಮಹಾಪ್ರಭುವೇ ನನಗೆ ಸುಖವನ್ನು ಕೊಟ್ಟು ಸಂರಕ್ಷಿಸು. ॥ ೨ ॥ ಮೂರು ಪುರಗಳನ್ನು ಅಂದರೆ ಜನನ, ಜರೆ, ಮರಣಗಳೆಂಬ ತಾಪತ್ರಯಗಳನ್ನು ಸುಟ್ಟುಹಾಕಿ ಮೂರು ಲೋಕಗಳಿಗೆ ಒಡೆಯನೆನಿಸಿ ಮೆರೆಯುವ, ಪ್ರಾಪಂಚಿಕವಾದ ಅನುರಾಗಗಳನ್ನು ತೊರೆದ ಜಿನದೇವನ ಶೋಭಾಯಮಾನಪಾದಗಳಿಗೆ ನಾನು ಭಕ್ತಿಯಿಂದ ನಮಸ್ಕರಿಸುತ್ತೇನೆ. ॥ ೩ ॥ ವಿಷ್ಣು ಹತ್ತು ಜನ್ಮಗಳನ್ನು ತಾಳಿ ಬಂದಿದ್ದಾನಂತೆ. ಶಿವನು ತಿರಿದು ಉಂಡಿದ್ದಾನಂತೆ ಬ್ರಹ್ಮನಾದರೋ ತನ್ನ ಮಗಳನ್ನೇ ಮೋಹಪಟ್ಟಿದ್ದಾನಂತೆ. ಈ ವಿಷಯವನ್ನು ಯಾರು ತಾನೇ ಮೆಚ್ಚುವರು? ॥ ೪ ॥ ಆ ದೇವರುಗಳಿಗೆ ಮನುಷ್ಯರಂತೆ ತಾಯಿತಂದೆಗಳೂ ಅಣ್ಣತಮ್ಮಂದಿರೂ, ಮಕ್ಕಳು ನಂಟರೂ ಇದ್ದಾರೆ. ಹೀಗಿರುವಾಗ ಅವರು ದೇವರೆಂದು ತಿಳಿದು ಮನಮೆಚ್ಚಿ ಹೇಗೆ ತಾನೇ ನಮಸ್ಕರಿಸಲಿ! ॥ ೫ ॥

---

[1] ↓ (ಗ). [2] ಯುಗಲನ (ಚ). [3] ನರಾಸುರ (ಕ) [4] ಭೂಷಣ ನರಸುರವಂದಿತ (ಚ). [5] ↓ (ಗ). [6] ವಿತಥನಾ (ಕ). [7] ನೆರೆದು (ಕ). [8] ತ್ರಿಜಗಕೆ (ಗ). [9] ↓ (ಗ). [10] ಮಿಱುಪಂಘ್ರಿಗಳಿಗೆಱಗುವೆನು (ಚ). [11] ಭವದಿ (ಗ) [12] ಪರಿಯನಿದಾರು (ಗ). [13] ↓ (ಗ) [14] ತೆಱಗುವುದು (ಗ).

ಜಾತಿ-ಜರಾಮರಣಾದಿಗಳಿಂ ಬರ್ಪ । ಭೀತಿ ಸಕಲವಸ್ತುಗಳೊಳು ॥
ಪ್ರೀತಿಯುಮುಳ್ಳ[1] ದೇವರ ದೇವನೆಂದವ । ಗೆಱಗುವರೆಗ್ಗರಲ್ತೆ[2] ॥ ೬ ॥

ಕಾಲಕವನಿಗೊಳಗಾದ ದೇವಗೆ[3] ಪಾದ । ಸೋಲ[4]ವೆನುತ ವೇದಗಳು ॥
ಮೂಲೋಕವಱಿಯೆ ಸಾರುತ[4]ಲಿವೆ ಕಂಡಾನು[5] । ಕಾಲಿಗೆಱಗುವೆನೆಂತವನ[6] ॥ ೭ ॥

ಸಲ್ಲದು ಮುಕ್ಕೊಡೆ ಮೂಜಗದೊಡೆತನ । ಸಲ್ಲದವನಿಗೆ ದೇವತ್ವ ॥
ಸಲ್ಲದು ಜರೆ ಜಾತಿ ಮರ[7]ಣವ ಗೆಲಿದವ । ಗಲ್ಲದುಳಿದ ದೇವರಿಗೆ[7] ॥ ೮ ॥

[8]ಇಂತು ಮೆರೆವ[8] ದೇವರ[9] ನಂಬಿದವರಿಗೆ । ಯಂತಕನಟ್ಟುಳಿ[10] ಬಿಡದು ॥
ಸಂತಾಪ ಸಂಸೃತಿ[11] ಕೆಡದದಱಿಂ ನಂಬಿ । ಯಂತಕಾಂತಕನ[12] ಚರಣವ ॥ ೯ ॥

ಖಲ್ಲಣೆ[13]ಸದೆ ಕಾಲ ಕರ್ಮವಿಜಯ ಭವ[14] । ಮಲ್ಲನ ತುಳಿದು[13] ಚಿತ್ತಜನ[15] ॥
ಸಲ್ಲದೆ[16] ಗೆಲಿದಕ್ಷಯ ಸುಖ ಪಡೆದನ । ಮೆಲ್ಲಡಿಗಾನೆಱಗುವೆನು ॥ ೧೦ ॥

ಅವ್ಯಯ ಸುಖ ಸಾಗರ ರಾಜಹಂಸನೆ[17] । ಸೇವ್ಯನೆ ನಿನ್ನ ಭಜಿಸುವ ॥
ಭ[18]ವ್ಯರ ಭವರೋಗ ವೈದ್ಯನೆ ಪಾಲಿಸು । ಅವ್ಯಯ ಸು[18]ಖವನಿತ್ತೆನ್ನ ॥ ೧೧ ॥

ಚಿತ್ತಜನನು ಗೆಲಿದಪ್ಪ[19] ಕರ್ಮಂಗಳ । ನುತ್ತರಿಸಿಯೆ[20] ಲೋಕಗಳ ॥
ತುತ್ತತುದಿಯೊಳಿಪ್ಪ ಜಿನಪತಿ ವೈರಾಗ್ಯ । ವಿತ್ತು ಸಲಹು ನೀನೆನ್ನ ॥ ೧೨ ॥

---

ಹುಟ್ಟು ಮುಪ್ಪು ಸಾವುಗಳಿಂದ ಬರುವ ಭಯದಿಂದಲೂ ಎಲ್ಲ ವಸ್ತುಗಳಲ್ಲಿ ಪ್ರೀತಿಯಿಂದಲೂ ಕೂಡಿದ ದೇವರುಗಳನ್ನು ದೇವರೆಂದು ತಿಳಿದುಕೊಂಡು ಅವರಿಗೆ ಪ್ರೀತಿಯಿಂದ ವಂದಿಸತಕ್ಕವರು ಬುದ್ಧಿಹೀನರೇ ಸರಿ. ॥ ೬ ॥ ದೇಶಕ್ಕೂ ಕಾಲಕ್ಕೂ ಕಟ್ಟುಬಿದ್ದಿರುವ ದೇವ ತಮ್ಮ ಪಾದಕ್ಕೂ ಕಟ್ಟುಬಿದ್ದಿದ್ದಾನೆಂದು ವೇದಗಳು ಸಾರುತ್ತಿವೆ ಈ ಮಾತು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ. ಅಂದಮೇಲೆ ಅಂತಹ ದೇವನ ಕಾಲಿಗೆ ಎಂತೆರಗಲಿ? ॥ ೭ ॥ ಮುಪ್ಪು ಹುಟ್ಟು ಸಾವುಗಳನ್ನು ಗೆದ್ದಂತಹ ದೇವನಿಗಲ್ಲದೆ ಉಳಿದ ದೇವನಿಗೆ ಮೂರು ಲೋಕಗಳ ಮುಕ್ಕೊಡೆ ಹಾಗೂ ಒಡೆತನವಾಗಲೀ ದೇವತ್ವವಾಗಲೀ ಸಲ್ಲದು ॥ ೮ ॥ ಈ ರೀತಿಯಾಗಿ ಮೆರೆಯುವ ದೇವರಲ್ಲಿ ವಿಶ್ವಾಸವಿಟ್ಟವರಿಗೆ ಯಮನ ಬಾಧೆಯು ಬೆನ್ನುಬಿಡದು, ಅಲ್ಲದೆ ಅಂಥವರ ದುಃಖವಾಗಲೀ ಪುನರ್ಜನ್ಮವಾಗಲೀ ಕೆಟ್ಟುಹೋಗದು ಆದುದರಿಂದ ಮೃತ್ಯುವಿಗೆ ಮೃತ್ಯುವೆನಿಸಿದ ಜಿನರಾಜನ ಪಾದದಲ್ಲಿ ವಿಶ್ವಾಸವನ್ನಿಡಿ ॥ ೯ ॥ ಕಾಲ ಕರ್ಮಗಳನ್ನು ಜಯಿಸಿ ಪುನರ್ಜನ್ಮವನ್ನು ಕೆಡಹಿ ಮನ್ಮಥನನ್ನು ಗೆದ್ದು ನಾಶವಿಲ್ಲದ ಸೌಖ್ಯವನ್ನು ಪಡೆದಾತನ ಮೃದುಪಾದಕ್ಕೆ ನಾನೇನೂ ದಿಗ್ಭ್ರಮೆ ತಾಳದೆ ವಂದಿಸುತ್ತೇನೆ ॥ ೧೦ ॥ ನಾಶವಿಲ್ಲದ ಸುಖವೆಂಬ ಸಮುದ್ರಕ್ಕೆ ಚಂದ್ರನಂತಿರುವವನೆ, ಸೇವೆಗೆ ಯೋಗ್ಯನೆ, ನಿನ್ನನ್ನು ಭಜಿಸುವ ಸತ್ಪುರುಷರ ಜನ್ಮವೆಂಬ ರೋಗವನ್ನು ಪರಿಹಾರಮಾಡತಕ್ಕ ವೈದ್ಯನೆ, ನನಗೆ ನಾಶವಿಲ್ಲದ ಸೌಖ್ಯವನ್ನು ಕೊಟ್ಟು ಕಾಪಾಡು. ॥ ೧೧ ॥ ಮನಸ್ಸಿನಲ್ಲಿ ಹುಟ್ಟಿದವನಾದ ಮನ್ಮಥನನ್ನು ಗೆದ್ದು, ಘಾತಿಕರ್ಮಗಳು ನಾಲ್ಕು ಅಘಾತಿಕರ್ಮಗಳು ನಾಲ್ಕು–

---

[1] ಪ್ರೀತಿಯುಮುಳ (ಗ), ಪ್ರೀತಿಯುಮಾ (ಕ) [2] ರೆಗ್ಗರಲ್ತೆ (ಗ) [3] ದೇವಳ (ಗ) [4] ↓ (ಗ) [5] ಕಂಡನು (ಗ) [6] ನಿಂತವನ(ಗ) [7] ↓ (ಗ) [8] ↓ (ಗ). [9] ಇಂತಪ್ಪ ದೇವರುಗಳ (ಚ) [10] ನಟ್ಟಾಳಿ (ಗ) [11] ಸಂಸೃತಿ (ಗ) [12] ಯಂತಕವೈರಿ (ಚ) [13] ↓ (ಗ) [14] ಮಲ ಮದ ಸೋಲದೆ ಮೋಹ (ಚ) [15] ಜವನ ಚಿತ್ತವನು (ಚ) [16] ನಿಲ್ಲದೆ (ಗ) [17] ಅವ್ಯಾಬಾಧನ ಚಿಂತನೆ ಮೂಜಗ (ಗ) ಅವ್ಯಯ ಸಾಧನ ಚಿಂತನ ಮೂಜಗ (ಚ) [18] ↓ (ಗ) [19] ಗೆಲ್ದಪ್ಪ (ಗ) [20] ನೊತ್ತರಿಸಿಯೆ (ಚ)

[1]ನಿರವದ್ಯ ನಿಶ್ಚಲ ನಿರ್ಮಲ ನಿರ್ಮಾ[1]ಯ[2] । ನಿರುಪಮ ನಿರಹಂಕಾರ ॥
ನಿರಪೇಕ್ಷ ನಿತ್ಯಾನಂದ ನಿರಾಮಯ । ನಿರಘ ಪಾಲಿಸು ನೀನೆನ್ನ ॥ ೧೩ ॥

ಅಕ್ಷಯನನಮಲ ಚರಿತ[3] ನಾನಾ ಶುಭ । ಲಕ್ಷಣಾನ್ವಿತ ದಿವ್ಯ ದೇಹ ॥
ಲಕ್ಷಿತ[3] ಸಾಸಿರನಾಮನೆ ನನ್ನ[4] ನಿ । ರೀಕ್ಷಿಸು[5] ಕರುಣದಿಂದೊಲಿದು[6] ॥ ೧೪ ॥

ಪಿರಿದು ಸ್ತುತಿ[7]ಗಳಿಂದ ಫಲವೇನು ಸುಖ ನಿನ್ನ । ಸ್ಮರಣೆಯಿಂದಪ್ಪುದೆಂತೆನಲು ॥
[8]ಇರದಣು[9]ಮಾತ್ರ ಸುಧೆಯನುಂ[8]ಡರಜರಾ । ಮರತೆಯ ಪಡೆವರೆಂತಂತೆ ॥ ೧೫ ॥

ಘಾತಿಯಘಾತಿಯನೆಲ್ಲವ ಕ್ಷಣದೊಳು । ಘಾತಿಸಿ ತ್ರಿಜಗದಗ್ರದೊಳು ॥
ಖ್ಯಾ[10]ತಿವಡೆದು ನಿಂದ ಸಿದ್ಧರ ಪದ ವನ । ಜಾತಕೆಱಗು[10]ವೆನಳ್ತಿಯೊಳು ॥ ೧೬ ॥

ಮೂಲೋಕದೊಳಗಾ[11]ಚಾರ ಪಂಚಕದಿಂದ । ಮೇಲಱಿದಿರದಾಚರಿಸಿ ॥
ಲೀಲೆಯೊಳಿರುತಿರ್ಪಾಚಾರ್ಯರ ಪದ । ಮೂಲಕೆಱಗುವೆನಳ್ತಿಯೊಳು [12] ॥ ೧೭ ॥

ಜ್ಞಾನಾಂಭೋಧಿ ಶಶಾಂಕರೆನಿಸಿಯ । ಜ್ಞಾನದೊಳಿರ್ಪ ಜನರನು ॥
ಜ್ಞಾನ ಬೋಧನೆಯನು ಪೇಳಿದುಪಾಧ್ಯರ್ಗೆ[13] । ಮೌನದಿಂದಾನೆಱಗುವೆನು ॥ ೧೮ ॥

[14]ಲೌಕಿಕದೊಳಗೆ ವರ್ತಿಸುವ ಕರ್ಮಂಗ[14]ಳ । ನೇಕ ಚಿತ್ತದೊಳು ತಾ ಗೆಲಿದು[15] ॥
[16]ಲೋಕ ಮೂಱಱೊಳು ವರ್ತಿಪ ಸಾಧು ಪದಪಂಕ । ಜಾಕರಕಾಱಡಿಯುಹೆನು[16] ॥ ೧೯ ॥

---

ಎಂಬೀ ಎಂಟು ಕರ್ಮಗಳನ್ನೂ ದಾಟಿ, ಲೋಕಗಳ ತುತ್ತತುದಿಯಲ್ಲಿ ಇರತಕ್ಕ ಜಿನೇಶ್ವರನೇ, ನೀನು ನನಗೆ ವೈರಾಗ್ಯವನ್ನು ನೀಡಿ, ಕಾಪಾಡು. ॥ ೧೨ ॥ ಅನಿಂದ್ಯನಾದ, ಚಲಿಸದ, ಪರಿಶುದ್ಧನಾದ, ಮಾಯೆಯಿಲ್ಲದವನಾದ, ಹೋಲಿಕೆಯಿಲ್ಲದ, ಗರ್ವವಿಲ್ಲದ, ಬಯಕೆಯಿಲ್ಲದ, ನಿತ್ಯವೂ ಸಂತೋಷಮಯನಾದ, ರೋಗ-ಪಾಪಗಳಿಲ್ಲದ ಜಿನೇಶ್ವರನೇ ನನ್ನನ್ನು ಕಾಪಾಡು. ॥ ೧೩ ॥ ನಾಶರಹಿತನೂ ಪರಿಶುದ್ಧವಾದ ಆಚರಣೆಯುಳ್ಳವನೂ ಹಲವಾರು ಶುಭಲಕ್ಷಣಗಳಿಂದ ಕೂಡಿದ ದಿವ್ಯವಾದ ಶರೀರವುಳ್ಳವನೂ ಸಾವಿರ ಹೆಸರುಗಳುಳ್ಳವನೂ ಆದ ನೀನು ನನ್ನನ್ನು ಕೃಪೆಯಿಂದ ಮೆಚ್ಚಿ ನೋಡುವವನಾಗು. ॥ ೧೪ ॥ ಒಂದು ಅಣುವಿನಷ್ಟು ಮಾತ್ರವೇ ಅಮೃತವನ್ನು ಸೇವಿಸಿದವರು ಮುಪ್ಪು-ಸಾವುಗಳನ್ನು ಗೆಲ್ಲುವರು. ಅದೇ ರೀತಿ ನಿನ್ನನ್ನು ನೆನೆದುದರಿಂದಲೇ ಸುಖವು ಲಭಿಸುವಾಗ ಹೆಚ್ಚಾದ ಸ್ತುತಿಗಳ ಆವಶ್ಯಕತೆ ಏನಿದೆ? ॥ ೧೫ ॥ ಜ್ಞಾನಾವರಣೀಯ, ದರ್ಶನಾವರಣೀಯ. ಅಂತರಾಯ, ಮೋಹನೀಯ—ಎಂಬ ನಾಲ್ಕು ಘಾತಿಕರ್ಮಗಳನ್ನೂ ಆಯು, ನಾಮ, ಗೋತ್ರ. ವೇದನೀಯ—ಎಂಬ ನಾಲ್ಕು ಅಘಾತಿಕರ್ಮಗಳನ್ನೂ ನಾಶಮಾಡಿ, ಮೂರುಲೋಕಗಳ ತುದಿಯಲ್ಲಿ ಕೀರ್ತಿಯನ್ನು ತಾಳಿ ನಿಂತ ಸಿದ್ಧರ ಪಾದಕಮಲಕ್ಕೆ ಭಕ್ತಿಯಿಂದ ವಂದಿಸುತ್ತೇನೆ. ॥ ೧೬ ॥ ಮೂರು ಲೋಕಗಳಲ್ಲಿಯೂ ದರ್ಶನ. ಜ್ಞಾನ, ಚಾರಿತ್ರ, ತಪ, ವೀರ್ಯ—ಎಂಬೀ ಐದು ವಿಧವಾದ ಆಚಾರಗಳಿಂದ ಒಳ್ಳಿತಾಗುವುದೆಂದು ತಿಳಿದು ಅವನ್ನು ಆಚರಿಸಿ ಸಂತೋಷದಿಂದ ಇರತಕ್ಕ ಆಚಾರ್ಯರ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸುತ್ತೇನೆ ॥ ೧೭ ॥ ಜ್ಞಾನವೆಂಬ ಸಮುದ್ರವನ್ನು ಉಕ್ಕೇರಿಸುವ ಚಂದ್ರ

---

[1] ↓ (ಗ). [2] ನಿರ್ಮಾಯ (ಕ) [3] ↓ (ಗ). [4] ನಾಮ ನೀನೆನ್ನ (ಗ). [5] ನಾಮ ನೀವರವನಿತ್ತೀಕ್ಷಿಸು (ಚ) [6] ದಿಂದೆನ್ನ (ಚ). [7] ವಸ್ತು (ಗ) [8] ↓ (ಗ) [9] ಇದರಣು (ಕ). [10] ↓ (ಗ) [11] ದೊಳಗಾ (ಚ). [12] ಈ ಪದ್ಯ 'ಗ'ದವಲ್ಲಿಲ್ಲ [13] ಆನದೆ ಬೋಧಿಪುಪಾಧ್ಯಾಯರಡಿಗೆ ಸನ್ (ಗ ಚ.). [14] ↓ (ಗ) [15] ಉಪಶಮಿಸಿ (ಗ ಚ) [16] ಲೋಕೋಪಕಾರಿಗಳೆನಿಪ ಸಾಧುಗಳಿಗಾ ॥ ನೇಕ ಚಿತ್ತದೊಳೆಱಗುವೆನು (ಗ.ಚ)

ದುರ್ಧರತರವೆನಿಪಷ್ಟಕರ್ಮಂಗಳ । ನಿರ್ದಹಿಸಿಯೆ ಮೋಕ್ಷವನು ॥
ನಿರ್ಧರವನು ಮಾಡಿ ಭವ್ಯರ ಪಾಲಿಪ । ವರ್ಧಮಾನರಿಗೆಱಗುವೆನು[1] ॥ ೨೦ ॥

ಬದ್ಧಕರ್ಮವ ಗೆಲ್ದರುಹಂತ ಶ್ರೀ ಜಿನ । ಸಿದ್ಧ ಸೂರಿಯು ಪಾರಕರ ॥
ಹೊದ್ದಿ ಶ್ರೀ ಸರ್ವಸಾಧುಗಳ ಶ್ರೀ ಪದಪದ್ಮ । ಹೊದ್ದಿದಳಿಯೊಲೆಱಗುವೆನು[2] ॥ ೨೧ ॥

ಅಡಿಗಡಿಗೆಱಗುವೆ ಪಂಚಕಲ್ಯಾಣದ । ಕಡೆಯ ಕಲ್ಯಾಣವನೆನಗೆ ॥
ಬಿಡದೆ ಮಾಡುವ ಪಂಚ ಪರಮೇಷ್ಠಿಗಳಂಘ್ರಿ । ಯುಡುನಖಗಳಿಗನವರತ[3] ॥ ೨೨ ॥

ನಾಕ ನರೋರಗ ಲೋಕದೊಳೊಪ್ಪುವ । ನೇಕ ಚೈತ್ಯಾಲಯಂಗಳೊಳು ॥
ಶ್ರೀಕರವಪ್ಪ ಪೀಠದೊಳಿರ್ಪ ಜಿನರಿಗಾ । ನೇಕಚಿತ್ತದೊಳೆಱಗುವೆನು ॥ ೨೩ ॥

ವರ ರತ್ನತ್ರಯ ಭೂಷಣ ಮನ ಮೊಲಿ । ದಿರಲೆನ್ನಂತ[4]ರಂಗದೊಳು ॥
ಪರಮನ[5] ಕರುಣದೊಳ್[6] ಮುಕುತಿವೆಣ್ಣೊಲಿದೆನ್ನ । ವರಿಸುವಳೆಂದಂದುವರ[7] ॥ ೨೪ ॥

ಜಿನಮತದೊಳು[8] ಭಾವಕ ಕೋವಿದ ಮುನಿ । ಜನವಂದಿತೆ[9] ಮುಕ್ತಿರಮೆಯ[10] ॥
ಮನ ಮೆಚ್ಚಿನ ಸಖಿಯಾದ ಶಾರದೆಯಂಘ್ರಿ । ವನಜಾತಕಾನೆಱಗುವೆನು ॥ ೨೫ ॥

ಸಾರದೆ ದುರ್ಜನ ಕೃಪೆಹೀನರ ಭೂ । ಭಾರರ ಶಠರ ವಂಚಕರ ॥
ಸಾರದೆ ಶಾರದೆ ಸಾರೆನ್ನಯ ಮುಖ । ವಾರಿಜವನು ಲೀಲೆಯೊಳು ॥ ೨೬ ॥

---

ಸ್ವರೂಪರೆನಿಸಿ ಅಜ್ಞಾನದಲ್ಲಿರುವ ಜನರಿಗೆ ಜ್ಞಾನೋಪದೇಶವನ್ನು ಮಾಡಿದ ಉಪಾಧ್ಯಾಯರಿಗೆ ನಾನು ಮೌನವಾಗಿ ನಮಸ್ಕರಿಸುತ್ತೇನೆ ॥ ೧೮ ॥ ಈ ಲೋಕದಲ್ಲಿ ಅನುಸರಿಸಿ ಬರತಕ್ಕ ಕರ್ಮಗಳೆಲ್ಲವನ್ನೂ ತಮ್ಮ ಏಕಮನಸ್ಕತೆಯಿಂದ ಗೆದ್ದು, ಮೂರು ಲೋಕಗಳಲ್ಲಿಯೂ ಪ್ರವರ್ತಿಸಿಕೊಂಡಿರುವ ಸಾಧುಗಳ ಪಾದಕಮಲಕ್ಕೆ ನಾನು ವಂದಿಸುತ್ತೇನೆ ॥ ೧೯ ॥ ಅತ್ಯಂತ ಕಷ್ಟತರವೆನಿಸುವ ಎಂಟು ಕರ್ಮಗಳನ್ನು ಸುಟ್ಟು, ಮೋಕ್ಷವನ್ನು ಸಂಪಾದಿಸಿ, ಧರ್ಮಾಭಿಮಾನಿಗಳಾದ ಜನರನ್ನು ಕಾಪಾಡುವ ವರ್ಧಮಾನಸ್ವಾಮಿಗೆ ನಮಸ್ಕರಿಸುತ್ತೇನೆ ॥ ೨೦ ॥ ಬಂಧನಕ್ಕೆ ಕಾರಣಗಳಾದ ಕರ್ಮಗಳನ್ನು ಗೆದ್ದು, ಅರ್ಹಂತ ಶ್ರೀ ಜಿನಸಿದ್ಧರನ್ನೂ ಸೂರಿಗಳನ್ನೂ ಪಾರಕರನ್ನೂ ಆಶ್ರಯಿಸಿ, ಕಾಂತಿಯುತರಾದ ಎಲ್ಲಾ ಸಾಧುಗಳ ಪಾದ ಕಮಲಗಳಿಗೆ ತುಂಬಿಯ ರೀತಿಯಲ್ಲಿ ಎರಗುತ್ತೇನೆ ॥ ೨೧ ॥ ಐದು ಕಲ್ಯಾಣಗಳಲ್ಲಿ ಕೊನೆಯದಾದ ಮುಕ್ತಿಯನ್ನು ನನಗೆ ಕೊಡತಕ್ಕ ಅರ್ಹತ್, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು—ಎಂಬೀ ಪಂಚ ಪರಮೇಷ್ಠಿಗಳ ನಕ್ಷತ್ರಗಳಂತಿರುವ ಉಗುರುಗಳಿರುವ ಪಾದಕ್ಕೆ ಆಗಾಗ ವಂದಿಸುವೆನು. ॥ ೨೨ ॥ ಮೂರು ಲೋಕಗಳಲ್ಲಿಯೂ ಶೋಭಿಸಿಕೊಂಡಿರುವ ಚೈತ್ಯಾಲಯಗಳಲ್ಲಿ ಕಾಂತಿಯುಕ್ತವಾದ ಪೀಠದಲ್ಲಿ ಇರುವ ಜಿನರಿಗೆ ನಾನು ಒಂದೇ ಮನಸ್ಸಿನಿಂದ ನಮಸ್ಕರಿಸುತ್ತೇನ ॥ ೨೩ ॥ ಪರಮ ಜಿನೇಂದ್ರನ ಕೃಪೆಯಿಂದ ಮೋಕ್ಷವೆಂಬ ಹೆಣ್ಣು ನನ್ನನ್ನು ಎಂದು ಮದುವೆಯಾಗುವಳೋ ಅಂದುವರೆಗೆ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ—ಎಂಬೀ ಮೂರು ರತ್ನಗಳೆಂಬ ತೊಡಿಗೆ ನನ್ನ ಹೃದಯದಲ್ಲಿ ನೆಲಸಿರಲಿ. ॥ ೨೪ ॥ ಜೈನಮತದಲ್ಲಿ ಭಾವಕರಿಂದಲೂ ವಿದ್ವಾಂಸರಿಂದಲೂ ಮುನಿಗಳಿಂದಲೂ ವಂದಿಸಲ್ಪಡುವವಳು ಮತ್ತು ಮೋಕ್ಷ ಲಕ್ಷ್ಮಿಯ ಮನಸ್ಸಿಗೆ ಮೆಚ್ಚಿಗೆಯಾದ ಗೆಳತಿ ಎಂದೆನಿಸಿದ ಸರಸ್ವತೀದೇವಿಯ ಪಾದಕಮಲಕ್ಕೆ ನಮಸ್ಕರಿಸುತ್ತೇನೆ ॥ ೨೫ ॥

---

[1] ೨೦ನೇ ಪದ್ಯ ಕದಲ್ಲಿಲ್ಲ [2] ಯೊಳೆಱಗುವೆನು (ಕ), ೨೧ನೇ ಪದ್ಯ ಗಚದಲ್ಲಿಲ್ಲ [3] ಗಿಡುವೆನು ಮಣಿಮಕುಟವನು (ಕ) [4] ದಿರಲಿಯೆನ್ನಂತ (ಚ) [5] - × (ಗ ಚ ) [6] ಕರುಣದೊಳು (ಗ) [7] ಳೆಂದೆಂದುವರ (ಚ) [8] ಜಿನಮತಗರಿಕೆ (ಗ) [9] ವಂದಿತ(ಕ ಚ ) [10] ರಮೆಗೆ (ಗ ಚ )

ಒಲ್ಲೆನೆಂಬೆಯು[1] ಜಾರ ಚೋರರ ಕಥೆಗಳಂ । ತಲ್ಲ ಭಾವಿಸಿ ಮುಕ್ತಿರಮೆಯು[2] ॥
ವಲ್ಲಭರಾದರ ಕಥೆಯ ಪೇಳಲು ತಳು । ವಿಲ್ಲದೆ ಬರಬೇಕೆನಗೆ ॥ ೨೭ ॥

ದೇವರು ದಶರಥ ಸುತರಘಪುಣ್ಯದ[3] । ಭಾವವ ಪೇಳ್ವೊಡಿನ್ನೆನಗೆ ॥
ದೇವಿ ನೀನಲ್ಲದಿಲ್ಲದಱಿಂದ ನಿನ್ನಡಿ । ದಾವರೆಗಳಿಗೆಱಗುವೆನು ॥ ೨೮ ॥

ಹೆಣ್ಣೆಂಬರು ಲೋಕದೊಳು ಶಾಸ್ತ್ರ ಶಬ್ದವ[4] । ಪೆಣ್ಣೆಂದಱಿಯದೆ ಮುಕ್ತಿ ॥
ಪೆಣ್ಣ ತೋಱಿಸುವ ಭಾರತಿ ನೀನು ಭವ್ಯರ । ಕಣ್ಣೆ ಕೊಡೆನಗೆ ಸನ್ಮತಿಯ[5] ॥ ೨೯ ॥

ರಾಜ್ಯಾಂಗನೆ[6] ಮೊದಲಾದ ಸತಿಯರನು । ತ್ಯಾಜ್ಯವ ಮಾಡಿ ಲೋಕದೊಳು ॥
ಪೂಜ್ಯರೆನಿಸಿಕೊಂಡ ಮುನಿಕುಲತಿಲಕ । ಶ್ರೀ ಪೂಜ್ಯ ಪಾದರಿಗೆಱಗುವೆನು ॥ ೩೦ ॥

ಸಕಲಾಗಮ ಕೋವಿದರೆಂದೆನಿಸಿ[7]ಕೊಂಡು । ಮಕರಾಂಕನನೆದೆಗೆಡಿಸಿ ॥
ಸುಕವಿಗಳಿಂದ ಸ್ತುತಿಸಿಕೊಂಡು[8] ಜಸವ । ತ್ತಕಲಂಕ[9] ಮುನಿಗೆಱಗುವೆನು ॥ ೩೧ ॥

ಮುದ್ರಿತ ವಾದಿ ವದನ[10] ಧೈರ್ಯದಿಂದ ಹೇ । ಮಾದ್ರಿ ಸನ್ನಿಭನನ್ಯ ಮತಕೆ ॥
ವಿದ್ರಾವಣನೆನಿಸೆಸೆವ ಸಮಂತಸು । ಭದ್ರ ಮುನಿಪಗೆಱಗುವೆನು[11] ॥ ೩೨ ॥

ಬಿಟ್ಟ[12] ಬಳಿಕ ಲಲನೆಯರ ಭೂಸತಿಯನು । ಮುಟ್ಟಲಿಲ್ಲೆಂದು[13] ನಾಲ್ಕೆರಲ ॥
ಮುಟ್ಟದೆಸೆವ ಕೊಂಡಕುಂದಾಚಾರ್ಯರ । ನೆಟ್ಟನೊಲ್ದಭಿ[14]ವಂದಿಸುವೆನು ॥ ೩೩ ॥

---

ಎಲೇ, ಶಾರದೆಯೆ, ನೀನು ದುಷ್ಟಜನರನ್ನೂ ದಯಾಹೀನರನ್ನೂ ಭೂಮಿಗೆ ಭಾರವಾಗಿರುವವರನ್ನೂ ಕುತ್ಸಿತರನ್ನೂ ಮೋಸಗಾರರನ್ನೂ ಸೇರದೆ, ನನ್ನ ಮೊಗದಾವರೆಯನ್ನು ಸಂತೋಷದಿಂದ ಬಂದು ಸೇರುವವಳಾಗು. ॥ ೨೬ ॥ ಎಲೆ ಶಾರದೆಯೆ, ಏನು ನೀನು ನನ್ನ ಮೊಗದಾವರೆಯಲ್ಲಿ ನೆಲಸಲು ಒಪ್ಪುವುದಿಲ್ಲವೆ? ನಾನು ಹೇಳಲಿರುವುದು ಹಾದರ ಮಾಡುವವರ ಅಥವಾ ಕಳ್ಳರ ಕಥೆಗಳ ಹಾಗಿರುವಂಥವಲ್ಲ. ಭಕ್ತಿಯನ್ನು ಮಾಡಿ ಮೋಕ್ಷವೆಂಬ ಲಕ್ಷ್ಮಿಗೆ ಪತಿಯಾದಂಥವರ ಕಥೆಯನ್ನು ತಡವಿಲ್ಲದೆ ಹೇಳಲು ನನಗೆ ಸಾಧ್ಯವಾಗಬೇಕು ॥ ೨೭ ॥ ಎಲೈ ದೇವಿಯೆ, ದೇವರಾದ ರಾಮಲಕ್ಷ್ಮಣರ ಪಾಪ ಪುಣ್ಯದ ವಿಚಾರವನ್ನು ಹೇಳಬೇಕಾದರೆ ನನಗೆ ನಿನ್ನ ಸಹಾಯವಿಲ್ಲದೆ ಸಾಧ್ಯವಾಗದು. ಆದುದರಿಂದ ನಿನ್ನ ಪಾದಕಮಲಗಳಿಗೆ ನಮಸ್ಕರಿಸುತ್ತೇನೆ. ॥ ೨೮ ॥ ಲೋಕದಲ್ಲಿ ಶಾಸ್ತ್ರ ಶಬ್ದ ಮುಂತಾದ ವಿದ್ಯೆಯನ್ನು ಹೆಣ್ಣೆನ್ನುವರು. ಅದನ್ನು ಐಹಿಕವಾದ ಬಂಧನಕ್ಕೆ ಕಾರಣವಾದ ಹೆಣ್ಣೆಂದು ಭಾವಿಸುವುದಿಲ್ಲ ಎಲೇ ಸರಸ್ವತೀದೇವಿಯೆ, ನೀನು ಮೋಕ್ಷವೆಂಬ ಹೆಣ್ಣನ್ನು ತೋರಿಸಿ ಕೊಡುವವಳೂ ಮೋಕ್ಷಾಪೇಕ್ಷಿಗಳಿಗೆ ಕಣ್ಣೂ ಆಗಿರತಕ್ಕವಳು. ನೀನು ನನಗೆ ಒಳ್ಳೆಯ ಬುದ್ಧಿಯನ್ನು ಕರುಣಿಸು. ॥ ೨೯ ॥ ರಾಜ್ಯಾಂಗನೆ ಮುಂತಾದ ಸ್ತ್ರೀಯರನ್ನು ಬಿಟ್ಟು, ಲೋಕದಲ್ಲಿ ಪೂಜ್ಯರೆನಿಸಿದ ಮುನಿಗಳ ವಂಶಕ್ಕೆ ತಿಲಕಪ್ರಾಯರಾದ ಶ್ರೀ ಪೂಜ್ಯಪಾದರಿಗೆ ನಮಸ್ಕರಿಸುವೆನು. ॥ ೩೦ ॥ ಎಲ್ಲಾ ಶಾಸ್ತ್ರಗಳನ್ನು ತಿಳಿದವರಾಗಿ ಮನ್ಮಥನ ಧೈರ್ಯವನ್ನ ಕೆಡಿಸಿ. ಸುಕವಿಗಳಿಂದ ಹೊಗಳಿಸಿಕೊಂಡು ಕೀರ್ತಿಗಳಿಸಿದ ಅಕಲಂಕಮುನಿಗೆ ನಮಸ್ಕರಿಸುತ್ತೇನೆ. ॥ ೩೧ ॥ ವಾದಿಗಳನ್ನು ಬಾಯಿಮುಚ್ಚಿಸತಕ್ಕವನೂ ಧೈರ್ಯದಲ್ಲಿ ಹಿಮಾಚಲದಂತಿರುವವನೂ ಅನ್ಯಮತಗಳನ್ನು ಬೆನ್ನಟ್ಟತಕ್ಕವನೂ ಎಂಬಂತೆ

---

[1] ಪೊಲ್ಲೆನೆಂದೊಡೆ (ಚ) [2] ರಮೆಗೆ (ಗ.ಚ). [3] ದೇವನಾವದ ಗುರುವಾ ರಘುಪುಣ್ಯದ (ಗ ಚ.). [4] ಜಪ್ಪನ (ಗ) ಜನಜಿನ (ಚ). [5] ಸುಮತಿಯು (ಚ) [6] ರಾಜಾಂಗನೆ (ಗ) [7] ನೆಂದೆನಿಸಿ (ಗ ಚ). [8] ತುತಿಸಿಕೊಂಡು (ಚ) [9] ಜಸವತ್ತ ನಿಕಲಂಕ (ಕ) [10] ವಾದನ (ಕ) ವರ್ಧನ (ಗ). [11] ಮುನಿಗೆಯೆಱಗುವೆನು (ಗ) [12] ಬಿಟ್ಟು (ಗ.ಚ) [13] ಮುಟ್ಟಿಸಿಲ್ಲೆಂದು (ಗ ಚ) [14] ನೆಟ್ಟನೆಯಭಿ (ಚ)

ಮಂಡಲದೊಳು ಚಾರುಕೀರ್ತಿಯೆನಿಪ ಬಲು । ಗಂಡು[1]ಪೆಸರನಾಂತು ಜಗಕೆ ॥
ಮಂಡನನಾದ ಪಂಡಿತರಾಯನ ಪಾದ । ಪುಂಡರೀಕಕೆ[2] ನಮಿಸುವೆನು ॥ ೩೪ ॥

ಇಂದುವೆನಿಸಿಯನ್ಯಮತ ಕಮಲಕೆ ತಾ । ನಿಂದುವೆನಿಸಿ ನಿಜಮತದ ॥
ಇಂದೀವರಕಾನಂದವನೀವ ಪ್ರ । ಭೇಂದು ಮುನಿಪಗೆಱಗುವೆನು[3] ॥ ೩೫ ॥

ಚಿಕ್ಕ ಹರಯದೊಳಿಂತಪ್ಪ ತಪಕೆ ಮೆಯ್ಯ । ನಿಕ್ಕಿಯಂಗಜನ್ನಪವರನ ॥
ಸೊಕ್ಕ ಮುಱಿದ ಶ್ರುತಮುನಿಯ[4] ಪದಾಂಬುಜ । ಕಿಕ್ಕುವೆನೆನ್ನ ನೊಸಲನು[5] ॥ ೩೬ ॥

ಜನಮತ-ಶರಧಿ-ಶಶಾಂಕನೆಂದೆನಿಸುವ[6] । ಕುನಯ-ಕುಮುದ-ತೀವ್ರಕರನ[7] ॥
ಅನುಪಮ-ಚರಿತ ವಿಮಲ ಕೀರಿತಿ[8] ಮುನಿ । ಪನ ಪಾದಕಾನೆಱಗುವೆನು ॥ ೩೭ ॥

ಧರೆಯೊಳು ಚರಿಸುವ ನವಕೋಟಿ ಮುನಿಗಳ । ಚರಣಕೆಱಗಿ ಕಲಿಕಾಲ ॥
ದೊರೆಯೆನಿಸುವ ಶ್ರೀ ಲಕ್ಷ್ಮೀಸೇನಾಚಾರ್ಯ । ಚರಣಕೆಱಗಿಯರ್ಥಿಯೊಳು[9] ॥ ೩೮ ॥

ಬಂಧುರತರವಾಗಿ ಧರೆಯೊಳು ಕವಿತೆಗ । ಳೊಂದಿದ ಸವಿನುಡಿಯಿಂದ ॥
ಅಂದವಡೆದ ಕಾವ್ಯವನ್ನುಸುರುವ ನಾಗ । ಚಂದಿರನನು ಪಾಡುವೆನು [10] ॥ ೩೯ ॥

ಅವರಿವರೆನ್ನದೆ ಜಿನಮುದ್ರೆಯ ಪೊತ್ತು । ಭುವನದೊಳಗೆ ಕೀರ್ತಿವಡೆದು ॥
ತವೆ ರಾಜಿಪ ತಪಸ್ವಿಗಳ ಪಾದಕೆ ನಾ । ತವಕದಿಂದೊಲಿದೆಱಗುವೆನು[11] ॥ ೪೦ ॥

---

ಶೋಭಿಸುವ ಸಮಂತಭದ್ರಮುನಿಗಳಿಗೆ ನಮಸ್ಕರಿಸುತ್ತೇನ. ॥ ೩೨ ॥ ಸ್ತ್ರೀಯರನ್ನು ಬಿಟ್ಟನಂತರ ಭೂಮಿಯೆಂಬ ಸ್ತ್ರೀಯನ್ನೂ ಮುಟ್ಟಲಿಲ್ಲವೆನ್ನುವಂತೆ ನಾಲ್ಕು ಬೆರಳುಗಳನ್ನೂ ಮುಟ್ಟದ ಇದ್ದ ಕೊಂಡಕುಂದಾಚಾರ್ಯರನ್ನು ನೇರವಾಗಿ ನಮಸ್ಕರಿಸುತ್ತೇನೆ ॥ ೩೩ ॥ ಭೂಮಂಡಲದಲ್ಲಿ ಚಾರುಕೀರ್ತಿ ಎಂಬ ಹೆಸರನ್ನು ತಾಳಿ ಲೋಕಕ್ಕೆ ಅಲಂಕಾರಪ್ರಾಯನಾದ ಪಂಡಿತರಾಜನ ಪಾದಕಮಲಕ್ಕೆ ನಮಸ್ಕಾರಮಾಡುತ್ತೇನೆ. ॥ ೩೪ ॥ ಅನ್ಯಮತವೆಂಬ ತಾವರೆಗೂ ತನ್ನ ಮತವೆಂಬ ನೈದಿಲೆಗೂ ಚಂದ್ರನೆನಿಸಿ ಸಂತೋಷವನ್ನು ಕೊಡುವ ಪ್ರಭೇಂದು ಮುನೀಂದ್ರನಿಗೆ ನಮಸ್ಕರಿಸುತ್ತೇನೆ ॥ ೩೫ ॥ ಚಿಕ್ಕ ವಯಸ್ಸಿನಲ್ಲಿಯೇ ತಪವನ್ನು ಮಾಡಿ ಮನ್ಮಥನ ಗರ್ವವನ್ನು ಮುರಿದ ಶ್ರುತಮುನಿಯ ಪಾದಕ್ಕೆ ನಮಸ್ಕರಿಸುತ್ತೇನೆ ॥ ೩೬ ॥ ಜೈನಮತವೆಂಬ ಸಮುದ್ರವನ್ನು ಉಕ್ಕಿಸತಕ್ಕ ಚಂದ್ರನೂ ಕೆಟ್ಟ ನಡತೆಯೆಂಬ ನೈದಿಲೆಯನ್ನು ಬಾಡಿಸುವ ಸೂರ್ಯನೂ ಹೋಲಿಸಲು ಸಾಧ್ಯವಾಗದ ಚರಿತ್ರವುಳ್ಳವನೂ ಆದ ವಿಮಲಕೀರ್ತಿ ಮುನೀಶ್ವರನ ಪಾದಕ್ಕೆ ನಮಸ್ಕರಿಸುತ್ತೇನೆ ॥ ೩೭ ॥ ಲೋಕದಲ್ಲಿ ಸಂಚರಿಸುತ್ತಿರುವ ಒಂಬತ್ತು ಕೋಟಿ ಮುನಿಗಳ ಪಾದಕ್ಕೆರಗಿ, ಕಲಿಯುಗದ ಮುನಿಗಳಿಗೆ ಅರಸನೆನಿಸುವ ಶ್ರೀ ಲಕ್ಷ್ಮೀಸೇನಾಚಾರ್ಯರ ಪಾದಕ್ಕೆ ಭಕ್ತಿಯಿಂದ ವಂದಿಸುತ್ತೇನೆ ॥ ೩೮ ॥ ವಿಶೇಷ ಸೌಂದರ್ಯದಿಂದ ಕೂಡಿ ಕವಿತೆಗಳಿಗೆ ಹೊಂದಿಕೆಯಾಗುವ ಸವಿಯಾದ ಮಾತಿನಿಂದ ಚೆಲ್ವಾದ ಕಾವ್ಯವನ್ನು ರಚಿಸತಕ್ಕ ನಾಗಚಂದ್ರಕವಿಯನ್ನು ಕೊಂಡಾಡುತ್ತೇನೆ ॥ ೩೯ ॥ ಅವರು ಇವರು ಎಂದು ಹೆಸರನ್ನೆತ್ತದೆ ಜೈನರಾಗಿ ಲೋಕದಲ್ಲಿ ಕೀರ್ತಿಹೊಂದಿ ಶೋಭಿಸುವ ತಪಸ್ವಿಗಳ ಪಾದಕ್ಕೆ ಆತುರದಿಂದ ನಮಿಸುತ್ತೇನೆ. ॥ ೪೦ ॥ ಶ್ರೇಷ್ಠವೆನಿಸುವ ಕರ್ಣಾಟ ಸಂಸ್ಕೃತವೆಂಬ ಎರಡೂ ಭಾಷೆಗಳ

---

[1] ಖಂಡು (ಕ) ದಂಡು (ಚ) [2] ಪುಂಡರೀಕಾಕ್ಷಿ (ಗ) [3] ಮುನಿಗೆ ನಮಿಸುವೆನು (ಚ) [4] ಕೀರ್ತಿಯ (ಚ) [5] ಪಣೆಯನು (ಚ) [6] ಸಂಪೂರ್ಣ ಶಶಾಂಕನ (ಗ ಚ) [7] ಕಿರಣ (ಚ) [8] ಕೀರ್ತಿ (ಕ) [9] ೩೮, ೩೯, ಇವುಗ ಚ.ದಲ್ಲಿಲ್ಲ [10] ೪೦, ೪೧, ೪೨, ೪೩, ಇವು ಕದಲ್ಲಿಲ್ಲ. [11] ದಾನೆಱಗುವೆನು (ಗ)

ವರ ಕರ್ಣಾಟ ಸಕ್ಕದ[1]ವನಱಿದು ತಾ । ನೊರೆದು ಕನ್ನಡ ಕಾವ್ಯವನು ।
ಉರು ಕೀರ್ತಿಕಾಂತೆಯು ಬೆನ್ನ ಬಿಡದೆಯಾ । ಚರಿಪ ಪಂಪನ ಸ್ತುತಿಸುವೆನು ॥ ೪೧ ॥

ಸುಟ್ಟು ಕಾದಂಬರಿಯನು ಲೀಲಾವತಿ । ಗಿಟ್ಟು ಕಪ್ಪನು ಲೋಕವಱಿಯೆ[2] ॥
ದಿಟ್ಟ ವಾದಿಯ ಗೆಲ್ದ ನೇಮಿಚಂದ್ರನ ಮನ । ಮುಟ್ಟ ನೆನೆವೆ ನನ್ನಿಯೊಳು ॥ ೪೨ ॥

ಚಂದದ ಮೃದುಬಂಧದ ನ್ಯೆಸಿರಿಯೊಡ । ನೊಂದಿದ ಸವಿನುಡಿಯಿಂದ ॥
ಅಂದವಡೆದ ಕಾವ್ಯವನುಸುರಿದ[3] ನಾಗ । ಚಂದಿರನನು ಪಾಡುವೆನು ॥ ೪೩ ॥

ಗಜಗನ ಗುಣವರ್ಮನ[4] ಶಾಂತಿವರ್ಮನ । ವಿಜಯನ ಪೊನ್ನನಗ್ಗಳನ ॥
ಸುಜನೋತ್ತಂಸ ರನ್ನನ ಮಧುರನ ಮನ । ಸಿಜನಿವರನು ಸ್ತುತಿಸುವೆನು ॥ ೪೪ ॥

ಅವರಿವರೆನ್ನದೆ ಸವಿನುಡಿಯನು ತೋರಿ[5] । ಕವಿತೆಯ ಪೇಳ್ದು ಸಕಲರ ॥
ಕಿವಿಗೆ ಪೀಯೂಷ ಪಿಂಡವನುಣಲೀವ ಸ । ತ್ಕವಿಗಳ ನಾ ಸ್ತುತಿಸುವೆನು ॥ ೪೫ ॥

ಹೇಳಲಂಜಿದೆನೀ ಕೃತಿಯನು ಸುಜನರು । ಕೇಳಿ ಲಾಲಿಸುತಿರೆ ಕಂಡು ॥
ತಾಳಲಾರದೆ ಹೆಚ್ಚು ಕುಂದೆಂಬ ಕುಜನರ । ಕಾಳುನುಡಿಯ ಕೇಳಿ ಕೇಳಿ ॥ ೪೬ ॥

ಶೂಲಧರನು ಕೊರಲೊಳಗಂದು ತಾಳ್ದಾ । ಹಾಲಾಹಲವ ಮತ್ತೀಗ ॥
ನಾಲಗೆ ಕೊನೆಯೊಳು[6] ತಾಳಿದ ಕುಜನರ । ಜಾಲಕಂಜರೆ ಸಜ್ಜನರು ॥ ೪೭ ॥

ಒಡಲೊಳು ಜನಿಸಲವನ[7] ಬಾಯೊಳು ಪ । ಲ್ಲೊಡನೆ ಪುಟ್ಟಿದುದಱಿಂ ಖಳನ ॥
ಪಡೆದ ಜನನಿ ಬದುಕಿದಳೇಂದಡೆ ಮಿಕ್ಕ । ಪೊಡವಿಯ ಜನಕುಂಟೆ ಸುಖವು ॥ ೪೮ ॥

---

ನ್ನರಿತು ಕನ್ನಡದಲ್ಲಿ ಕಾವ್ಯರಚನೆಮಾಡಿ ಕೀರ್ತಿಯೆಂಬ ಹೆಣ್ಣಿನ ಬೆನ್ನು ಬಿಡದೆ ವರ್ತಿಸುವ ಪಂಪಕವಿಯನ್ನು ಸ್ತುತಿಸುತ್ತೇನೆ. ॥ ೪೧ ॥ ಕಾದಂಬರೀ ಕಾವ್ಯವನ್ನು ಸುಟ್ಟು, ಲೀಲಾವತೀ ಕಾವ್ಯಕ್ಕೆ ಗೌರವವನ್ನು ಸಲ್ಲಿಸಿ. ಲೋಕವೇ ತಿಳಿವಂತೆ ಗರ್ವಿಗಳಾದ ವಾದಿಗಳನ್ನು ಗೆದ್ದ ನೇಮಿಚಂದ್ರಕವಿಯನ್ನು ನಿಜವಾದ ಮನಃಪೂರ್ವಕ ಸ್ಮರಿಸುತ್ತೇನೆ. ॥ ೪೨ ॥ ಸೌಂದರ್ಯ-ಮಾರ್ದವಗಳಿಂದ ಕೂಡಿದ ರಚನೆಯ ಶೋಭೆಯುಳ್ಳ ಸವಿಯಾದ ನುಡಿಗಳಿಂದ ಯೋಗ್ಯವಾದ ಕಾವ್ಯವನ್ನು ಹೇಳಿರುವ ನಾಗಚಂದ್ರನನ್ನು ಕೊಂಡಾಡುತ್ತೇನೆ. ॥ ೪೩ ॥ ಗಜಗ. ಗುಣವರ್ಮ, ಶಾಂತಿವರ್ಮ, ವಿಜಯ, ಪೊನ್ನ, ಅಗ್ಗಳ, ಸುಜನೋತ್ತಂಸ, ರನ್ನ, ಮಧುರ, ಮನಸಿಜ—ಈ ಕವಿಗಳನ್ನು ಸ್ತುತಿಸುತ್ತೇನೆ. ॥ ೪೪ ॥ ಅವರು ಇವರು ಎಂದು ಹೆಸರನ್ನೆತ್ತದೆ ಸವಿಯಾದ ನುಡಿಗಳಿಂದ ಕವಿತೆಯನ್ನು ರಚಿಸಿ ಶ್ರೋತೃಗಳೆಲ್ಲರ ಕಿವಿಗೂ ಅಮೃತದ ಮುದ್ದೆಯನ್ನು ಉಣಿಸತಕ್ಕ ಸತ್ಕವಿಗಳನ್ನು ಸ್ತುತಿಸುತ್ತೇನೆ. ॥ ೪೫ ॥ ನನ್ನ ಈ ಕಾವ್ಯವನ್ನು ಸಜ್ಜನರು ಮನಸ್ಸಿಟ್ಟು ಕೇಳುತ್ತಿರಲು ದುರ್ಜನರು ಕಂಡು ಸಹಿಸಲಾರದೆ 'ಇದರಲ್ಲಿ ಕೊರತೆ ಹೆಚ್ಚಾಗಿದೆ' ಎಂದು ನಿಂದಿಸುವ ಕೆಟ್ಟ ಮಾತುಗಳನ್ನು ಕೇಳಿ ಕೇಳಿ ನಾನು ಅದನ್ನು ಹೇಳಲು ಅಂಜುತ್ತಿದ್ದೇನೆ ॥ ೪೬ ॥ ಆ ಪರಮೇಶ್ವರನು ತನ್ನ ಕೊರಳಿನಲ್ಲಿ ಧರಿಸಿರುವ ಹಾಲಾಹಲವೆಂಬ ಮಹಾವಿಷವನ್ನು ದುರ್ಜನರು ತಮ್ಮ ನಾಲಗೆಯ ತುದಿಯಲ್ಲಿ ಧರಿಸಿದ್ದಾರೆ. ಹೀಗಿರುವಾಗ ಅಂತಹ ದುರ್ಜನರ ಸಮೂಹಕ್ಕೆ ಸಜ್ಜನರು ಹೆದರದಿರುವರೆ? ॥ ೪೭ ॥

---

[1] ಸಕ್ಕಜ (ಚ). [2] ಗೊಪ್ಪಿಟ್ಟು ಲೋಕದೆ ಮೆಚ್ಚಯಿಸಿದ (ಕ) [3] ಸುಸುರುವ (ಗ) [4] ಸುಜನಕಾನಂವನೆನಿಪ (ಕ). ೪೦ ೪೧, ೪೨, ೪೩ ಇವು ಕ ದಲ್ಲಿಲ್ಲ [5] ನುಡಿಯಿಂ ಜಿನ (ಚ) [6] ಮೊನೆಯೊಳು (ಗ) ಗೊನೆಯೊಳು (ಚ) [7] ಲವರ (ಕ).

ತಪ್ಪಿಲ್ಲವೆಂದು ಸುಜನರಾಲಿಸಿ ಕೇಳಿ । ಯೊಪ್ಪಿದ ಕೃತಿಯ ಕುತರ್ಕಿ ॥
ತಪ್ಪೆಂದು ಮುಪ್ಪುರಿಗೊಂಡು[1] ಬಾಯಳಿದೊಳ । ಉಪ್ಪು ಸೊಪ್ಪೇನಾದಪುದೋ[2] ॥ ೪೯ ॥

ನೋಡಿ ಚದುರರು[3] ಕೋವಿದರೀ ಕೃತಿಯ ಕೊಂ । ಡಾಡೆ ಕುಕವಿ ಮೋನವಿರದೆ ॥
ಆಡುತ ತಪ್ಪೆಂದು ಚೆಲುವ[4] ಕನ್ನಡಿಯ ತಾ । ನೇಡಿಸಿ ನೋಡುವಂದದೊಳು ॥ ೫೦ ॥

ಉರಗಗೆ[5] ಗರಳವಿರಲು ಪಲ್ಗಳೊಳು ಚೇಳಿ । ಗಿರಲು[6] ಪುಚ್ಛದೊಳು ಮುಳ್ಳುಗಳಾ ॥
ವರ ದುರ್ಜನಗಿರೆ ನಾಲಗೆಯೊಳು ಸರ । ಸಿರುಹಜನೇಕೆ ಪುಟ್ಟಿಸಿದ ॥ ೫೧ ॥

ಪಲ್ಲಿನೊಳಗೆ ಪುಚ್ಛದೊಳಗೆ ಗರಳ ತಲೆ । ಯಲ್ಲಿ ಕೆಲವಕುಂಟವಕೆ ॥
ಬಲ್ಲೆನು ಪರಿಹರವನು ಕಾಣೆನು ಮೈ । ಯೆಲ್ಲ ವಿಷದ ದುರ್ಜನಗೆ[7] ॥ ೫೨ ॥

ಬಂದೋರ್ವನ ಕಿವಿಯನು ಕಚ್ಚಲೋರ್ವಗೆ । ಬಂದುದು ಜೀವದ ಕಡೆಗೆ ॥
ಎಂದೆನೆ ದುರ್ಜನನೆಂಬ ಕಾಳೋರಗ । ನಂದವನೇನ ಬಣ್ಣಿಪೆನು[8] ॥ ೫೩ ॥

ಇಂದುವುದಯ[9] ಕಿಂಗಡಲು ಪೆರ್ಚುವ ತೆಱ । ದಂದದಿ ಬೆಂಚೆ ಪಳ್ಳಗಳು[10] ॥
ಅಂದು ಪೆರ್ಚುಗುಮೆ ಸತ್ಕೃತಿಯ ಸುಜನರಾಲಿ । ಪಂದದೊಳ್ ಕುಜನರೊಲಿವರೆ[11] ॥ ೫೪ ॥

ರಸವ ನಾಲಗೆ ಕವಿತಾರಸವನು ಕವಿ । ಕುಸುಮರಸವನಳಿ ವಿತತಿ ॥
ಒಸೆದಱಿವಂದದೊಳಱಿವವೆ[12] ಕರಮುಕ್ಸ[13] । ಪಿಸುಣ ಬಲ್ಲನೆ ಲೋಕದೊಳು ॥ ೫೫ ॥

---

ದುರ್ಜನನು ತನ್ನ ತಾಯ ಹೊಟ್ಟೆಯಲ್ಲಿ ಹುಟ್ಟಿದೊಡನೆ ಅವನ ಬಾಯಲ್ಲಿ ಹಲ್ಲು ಹುಟ್ಟಿದೆ. ಇದರಿಂದ ಅವನ ಆಹಾರವನ್ನು ಅವನೇ ಜಗಿದು ಉಣ್ಣಬಲ್ಲವನಾದುದರಿಂದ ಅವನ ತಾಯಿಗೆ ಕಷ್ಟವಾಗಿರಲಿಕ್ಕಿಲ್ಲ ಇದರಿಂದಲೇ ಆಕೆ ಬದುಕಿಕೊಂಡಳು ಎನ್ನುವಾಗ ಲೋಕದ ಇತರ ಜನರಿಗೆ ಸುಖವೆಲ್ಲಿದೆ? ॥ ೪೮ ॥ ಸಜ್ಜನರು ಈ ಕೃತಿಯನ್ನು ಮನಸ್ಸಿಟ್ಟು ಕೇಳಿ ತಪ್ಪಿಲ್ಲವೆಂದು ಒಪ್ಪಿದಮೇಲೆ, ಕುತರ್ಕಿಯು ತಪ್ಪಿದೆಯೆಂದು ಹುರಿಗೊಂಡು ಬೊಬ್ಬಿಟ್ಟು ಬೊಗಳಿದರೆ ಇದಕ್ಕೇನಾದರೂ ಕೊರತೆ ಬರುವುದೆ? ॥ ೪೯ ॥ ಕವಿತೆಯಲ್ಲಿ ಚತುರರೂ ವಿದ್ವಾಂಸರೂ ಈ ಕಾವ್ಯವನ್ನು ನೋಡಿ ಕೊಂಡಾಡಿದಾಗ ಕುಕವಿಯು ಸುಮ್ಮನಿರದೆ ಇದು ತಪ್ಪುಗಳನ್ನುಳ್ಳದೆಂದು ಆಡುವುದು ಸುಂದರವಾದ ಕನ್ನಡಿಯನ್ನು ಮುಖವಿಕಾರಮಾಡಿ ನೋಡುವಂತೆಯೇ ಆಗುವುದು, ಅಂದರೆ, ಅದು ಅವನ ಕೊರತೆಯನ್ನೇ ತಿಳಿಸಿದಂತಾಗುವುದು ॥ ೫೦ ॥ ಹಾವಿಗೆ ಹಲ್ಲಿನಲ್ಲಿ ವಿಷವಿರುವಂತೆಯೂ ಚೇಳಿಗೆ ಬಾಲದಲ್ಲಿ ವಿಷವಿರುವಂತೆಯೂ ದುರ್ಜನನಿಗೆ ನಾಲಗೆಯಲ್ಲಿ ವಿಷದ ಮುಳ್ಳುಗಳಿರುವಂತೆಯೂ ಆ ಬ್ರಹ್ಮನು ಯಾಕೆ ಸೃಷ್ಟಿಮಾಡಿದನೋ! ॥ ೫೧ ॥ ಕೆಲವು ಜೀವಿಗಳಿಗೆ ಹಲ್ಲಿನಲ್ಲಿಯೂ ಕೆಲವಕ್ಕೆ ಬಾಲದಲ್ಲಿಯೂ ಇನ್ನೂ ಕೆಲವಕ್ಕೆ ತಲೆಯಲ್ಲಿಯೂ ವಿಷವಿರುತ್ತದೆ ಈ ವಿಷಕ್ಕೆ ಪರಿಹಾರವನ್ನು ಬಲ್ಲೆನು ಆದರೆ ಮೈಯೆಲ್ಲ ವಿಷ ತುಂಬಿರುವ ದುರ್ಜನನ ವಿಷಕ್ಕೆ ಪರಿಹಾರವನ್ನು ಕಾಣೆನು ॥ ೫೨ ॥ ದುರ್ಜನನೆಂಬ ಕಾಳಸರ್ಪವು ಬಂದು ಒಬ್ಬನ ಕಿವಿಯನ್ನು ಕಚ್ಚಿದೊಡನೆ ಅವನ ಪ್ರಾಣವೇ ಕೊನೆಯನ್ನೆಯ್ದುವುದು ಹೀಗಿರುವಾಗ ದುರ್ಜನನೆಂಬ ಕಾಳೋರಗನ ಸಂಗತಿಯನ್ನು ಏನೆಂದು ವರ್ಣಿಸಲಿ ॥ ೫೩ ॥ ಚಂದ್ರನು ಉದಯಿಸಿದೊಡನೆ ಕ್ಷೀರಸಾಗರವು ಉಬ್ಬರ ತಾಳುವಂತೆ ಕೆರೆ ಹಳ್ಳಗಳು ಉಕ್ಕೇರಲಾರವು. ಅದರಂತೆ ಸತ್ಕಾವ್ಯವನ್ನು ಸಜ್ಜನರು ಕೇಳುವಂತೆ ದುರ್ಜನರು ಕೇಳಿ ಮೆಚ್ಚಲಾರರು ॥ ೫೪ ॥ ರಸರುಚಿಯನ್ನು ನಾಲಗೆಯೂ

---

[1] × (ಕ) [2] ಸೊಪ್ಪೇನಾಪುದೇನು (ಗ) ×[3] (ಗ ಚ) [4] ತಪ್ಪೆಂದುಡಿವ (ಗ) ತಪ್ಪೆಂದು ನುಡಿವ (ಚ) [5] ಉರಗಾದ್ಯ (ಗ) [6] ಪಲ್ಲನು ತೆಗೆದಿರದೆ (ಗ) ಪಲ್ಗಳೊಳು ಕೇಳಿಗಿರಲು (ಚ) [7] ದುರ್ಜನಗೆ ಮೈಯೆಲ್ಲ ಗರಳ ಹರದಿಲ್ಲಾ (ಕ) [8] ದುರ್ಜನರಿಗೆ ಸಾಹಜಗುಣವೆಂದು ಪೇಳ್ವರು ಬಲ್ಲವರು (ಕ) [9] ಇಂದುವಿನುದಯ (ಗ ಚ) [10] ವಳ್ಳಗಳು (ಚ) [11] ಸುಜನರಾಲಿಪರೆ (ಗ ಚ) [12] ಅಱಿವದೆ (ಗ) [13] ಕರಮಕ್ಷ (ಗ ಚ)

ನೋಡೆನವರ ಮುಖವನು ನುಡಿಸೆನು ನೇಹ[1] । ಮಾಡೆನು ಮನವಚನದೊಳು ॥
ನಾಡೆ ಸೂಕರನಿದಿರೊಳು ಕಂಡಾನೆಯು । ಪಾಡೆನುತಿಹೆನು ದೂರದೊಳು[2] ॥ ೫೬ ॥

ಇಂತೀ ಗುಣದ[3] ದುರ್ಜನನಿರೆ ಸುಜನರ[4] । ಸಂತತಿಗುಂಟೆ[5] ಲೇಸೆಂದು ॥
ನಾಂ ತಡೆಯದೆ ಕೊಂಡಾಡಿದೆ ಪಿಸುಣರ । ಸಂತಸದಿಂ ಮನವೊಲಿದು ॥ ೫೭ ॥

ನಾಲುವಿಡಿದು ಪುದಿದಿಹ ದೋಷಂಗಳ । ಚೀಲಿತವನು ಮಾಡಿ ಗುಣವ ॥
ಪಾಲಿಸಿ ಕೃತಿಯ ಕೊಂಡಾಡುವ ಸುಜನರ । ಜಾಲವ ನಾ ಸ್ತುತಿಸುವೆನು ॥ ೫೮ ॥

ಗಣನೆಯಿಲ್ಲದ ದೋಷದೊಳು ತಿಲದನಿತು ಸು[6] । ಗುಣವಿರಲಾ ದೋಷವನು ॥
ಎಣಿಸದೆ ಬಿಟ್ಟು ಕೃತಿಯ ನಡೆಸುವ ಗುಣ । ಮಣಿಗಳ ನಾ ಸ್ತುತಿಸುವೆನು[7] ॥ ೫೯ ॥

ಕೆಡಿಪುದಘವ ತಾಪವ ದೈನ್ಯವ ಗಂಗೆ । ಯುಡುಪತಿ ಸುರತರುವಿರದೆ ॥
ಕೆಡಿಪರಾ ಮೂಱವಗುಣವ[8] ಸಜ್ಜನರಿಗೆ । ಪಡಿದೊರೆ ಯಾರು ಲೋಕದೊಳು ॥ ೬೦ ॥

ರಸಮಯವಹ ಕಾವ್ಯರಸವ ಸೇವಿಸಿ ನೀ । ರಸಕೃತಿಯನು ಬಂಡು[9] ಮಾಳ್ಪ ॥
ಎಸೆವ ಸಜ್ಜನ ದುರ್ಜನ ಚಂಪಕವ[10] ಛೇ । ದಿಸುವ ತುಂಬಿಯೊಲಾಡಿದರೆ ॥ ೬೧ ॥

ಸರಸಿಜೋದ್ಭವನು ಸುಜನರ ಲೆಕ್ಕಣಿಕೆಯಿಂ । ಬರೆವಂದು ರಸ ಬೀಳೆ ಧರೆಗೆ ॥
ವರ ಪಾಲ್ಗಡಲಿಂದು ಮಲಯಜವಾಯ್ತೆನ । ಲಿರವನೇನೆಂಬೆ ಸಜ್ಜನರ ॥ ೬೨ ॥

---

ಕಾವ್ಯರಸವನ್ನು ಕವಿಯೂ ಹೂವಿನ ರಸವನ್ನು ತುಂಬಿಗಳ ಹಿಂಡೂ ಪ್ರೀತಿಸಿ ತಿಳಿಯುವಂತೆ ವಿಶೇಷವಾಗಿ ಕೀಟಪತಂಗಗಳು ತಿಳಿಯಬಲ್ಲವೆ? ಅವರಂತೆ ಚಾಡಿಕಾರನು ಕೃತಿಯನ್ನೇನಾದರೂ ತಿಳಿಯಬಲ್ಲನೆ? ॥ ೫೫ ॥ ಅಂತಹ ಚಾಡಿಕೋರರ ಮುಖವನ್ನೇ ನಾನು ನೋಡೆನು, ಅವರೊಡನೆ ಮಾತನಾಡೆನು. ಮನಸ್ಸಿನಲ್ಲಾಗಲೀ ಮಾತಿನಲ್ಲಾಗಲೀ ಸ್ನೇಹವನ್ನೂ ಮಾಡೆನು. ಅವರೊಡನೆ ಮಾತಾಡುವುದಕ್ಕಿಂತ ಹಂದಿಯನ್ನು ಕಂಡು ಅದರೊಡನೆ ನೀನು ಕಂಡ ಆನೆಯನ್ನು ದೂರದಿಂದ ಹಾಡೆಂದು ಹೇಳುವೆನು. ॥ ೫೬ ॥ ಈ ರೀತಿಯ ಗುಣಗಳಿಂದ ಕೂಡಿ ದುರ್ಜನನಿರುವಾಗ ಸಜ್ಜನರ ಸಮೂಹಕ್ಕೆ ಎಲ್ಲಾದರೂ ಕ್ಷೇಮವೇ ದೊರೆಯದೆಂದು ನಾನು ಮನಃಪೂರ್ವಕವಾಗಿ ತಡವಿಲ್ಲದೆ ಅಂತಹ ಚಾಡಿಗಾರರನ್ನು ಸಂತೋಷದಿಂದ ಕೊಂಡಾಡಿರುತ್ತೇನೆ. ॥ ೫೭ ॥ ಸಾಲುನಾಲಾಗಿ ಸೇರಿಕೊಂಡಿರುವ ಕೊರತೆಗಳನ್ನೆಲ್ಲ ಮರೆಮಾಡಿ ಗುಣವನ್ನು ಮಾತ್ರ ಗ್ರಹಣಮಾಡಿ ಕಾವ್ಯವನ್ನು ಮೆಚ್ಚಿ ಹೊಗಳತಕ್ಕ ಸಜ್ಜನರ ಸಮೂಹವನ್ನು ಸ್ತುತಿಸುತ್ತೇನೆ. ॥ ೫೮ ॥ ಅಸಂಖ್ಯಾತವಾದ ದೋಷಗಳ ಎಡೆಯಲ್ಲಿ ಎಳ್ಳಿನಷ್ಟು ಒಳ್ಳಿತಿದ್ದರೆ ಆ ದೋಷವನ್ನು ಲೆಕ್ಕಿಸದೆ ಬಿಟ್ಟು ಕಾವ್ಯವು ಮುಂದೆ ಬರುವಂತೆ ಮಾಡುವ ಸದ್ಗುಣ ರತ್ನರನ್ನು ನಾನು ಸ್ತುತಿಸುತ್ತೇನೆ. ॥ ೫೯ ॥ ಗಂಗೆಯು ಪಾಪವನ್ನೂ ಚಂದ್ರನು ತಾಪವನ್ನೂ ಕಲ್ಪವೃಕ್ಷವು ಬಡತನವನ್ನೂ ಹೋಗಲಾಡಿಸುವವು ಈ ಮೂರು (ಪಾಪ, ತಾಪ, ದೈನ್ಯ) ಅವಗುಣಗಳನ್ನೂ ಕೆಡಿಸತಕ್ಕ ಸತ್ಪುರುಷರಿಗೆ ಲೋಕದಲ್ಲಿ ಸಮಾನರಾರೂ ಇಲ್ಲ. ॥ ೬೦ ॥ ರಸದಿಂದ ತುಂಬಿದ ಕಾವ್ಯದ ರಸವನ್ನು ಕುಡಿದು, ರಸಹೀನವಾದ ಕಾವ್ಯವನ್ನು ಅಯೋಗ್ಯವೆಂದು ಅಲ್ಲಗಳೆಯುವ ಸಜ್ಜನನೆಂಬ ತುಂಬಿಗೆ ದುರ್ಜನನೆಂಬ ಸಂಪಗೆಯನ್ನು ತುಂಡರಿಸಲು ಸಾಧ್ಯವಾಗದು. ॥ ೬೧ ॥

---

[1] ನವರೊಳನುವಡಿಸೆನು ಸ್ನೇಹವ (ಗ.ಚ). [2] ಪಾಡಿನಂತಿಹೆನುದರದೊಳು (ಕ). [3] × (ಗ.ಚ). [4] ಸಜ್ಜನ (ಗ.ಚ). [5] ಸಂತತಿ ಗುಂಟು (ಗ.ಚ). [6] ತಿಲದೊಂದಿಷ್ಟು (ಚ). [7] ನುತಿಸುವೆನು (ಗ ಚ) [8] ಕೆಡಿಸರಾಮವರ ಗುಣಸ (ಕ) [9] ಜೋಡು (ಗ) ಬೋಡು (ಚ). [10] ಬುಧರು ಪೂರಸವೀಂಟಿ ಬಿದಿರ (ಚ)

ರತ್ನದೊಳ್ನಾಟದಧಿಕವನೆ[1] ವನಿತಾ । ರತ್ನ ಮಾಯೆಯ ಮಡು ನಿರಸ[2] ॥
ರತ್ನ ಬಾವಿಸಿ ನೋಡಲು ಜಗದೊಳು ಜೀವ । ರತ್ನವಲ್ಲವೆ ಸಜ್ಜನರು ॥ ೩೩ ॥

ಇರುಳಾಣ್ಮನಂತೆ ದೋಷಾಕರರಲ್ಲ ಸಾ । ಗರದಂತೆ ವಿಷವಿತ್ತರಲ್ಲ ॥
ಗಿರಿಯಂತೆ ಪರಿಭವವಡೆಯದ ಸಜ್ಜನ । ರಿರವ ನಾನೇನ ಬಣ್ಣಿಪೆನು ॥ ೩೪ ॥

ಕಲ್ಲು ಕನಕ ಗಿರಿ ತೃಣ ಜಲ ವಹ್ನಿಗ । ಳ್ಗಿಲ್ಲದ[3] ಗುಣಗಳ ಪೊಱಿಸಿ ॥
ನಿಲ್ಲದೆ ಕೊಂಡಾಡುವ ಕವಿಗಳು[4] ಗುಣ । ವಲ್ಲಭರನು ಬಿಟ್ಟಪರೇ ॥ ೩೫ ॥

ಕೊಲ್ಲಲಿ ಬಯ್ಯಲಿ ನುಡಿಯಲಿ ಸಜ್ಜನ । ರಲ್ಲಿ ನೇಹವ ಬಿಡದವರ ॥
ಪಲ್ಲವಿಗಳ ಸ್ತುತಿಸುವನಿಗೆ ಲೋಕದೊ । ಳಿಲ್ಲೆಣೆಯಾದ ಮಾನವರು ॥ ೩೬ ॥

ಇಂತು ನಾನಾ ಪರಿಯೊಳಗಾ ಸಜ್ಜನ । ಸಂತತಿಯನು[5] ಕೊಂಡಾಡಿ ॥
ಸಂತಸದಿಂ ಮನವೊಲಿದು ಪೇಳಿದೆನೀ । ಕಂತುವಿಜಯನ ಕಥೆಯನು ॥ ೩೭ ॥

ಸಿಂಗರವಡೆದ ಹೊಯಿಸಳ[6] ದೇಶಕೊಪ್ಪುವ । ಚೆಂಗನಾಡದರ ಮಧ್ಯದೊಳು ॥
ಮಂಗಲಮಯವಾಗಿಹುದಾ ಪೊಳಲ ಚೆ । ಲಂಗ ನಾನೇನ ಬಣ್ಣಿಪೆನು ॥ ೩೮ ॥

ಕಡುರಯ್ಯವಡೆದ ತಾವರೆಯ ದಳದ[7] ನಟ್ಟ । ನಡುವಣ ಕರ್ಣಿಕೆಯಂತೆ ॥
ಬಿಡದೆ ಬಳಸಿ ತೋರ್ಪ ಗ್ರಾಮತತಿಯ ನಟ್ಟ । ನಡುವೆ ರಾಜಿಪುದಾ ಪೊಳಲು ॥ ೩೯ ॥

---

ಕಮಲ ಸಂಭೂತನಾದ ಬ್ರಹ್ಮನು ತನ್ನ ಲೇಖನಿಯಿಂದ ಸತ್ಪುರುಷರನ್ನು ಬರೆಯುತ್ತಿರುವಾಗ ರಸವು ಭೂಮಿಗೆ ಬಿದ್ದು, ಕ್ಷೀರಸಾಗರವೂ ಶ್ರೀಗಂಧವೂ ಆದವು ಹೀಗಿರುವಾಗ ಸಜ್ಜನರ ಮಹತಿಯ ಸ್ಥಿತಿಯನ್ನು ಏನನ್ನಲಿ! ॥ ೩೨ ॥ ರತ್ನವು ಘನವಾಗಿರುವುದರಿಂದ ಅದಕ್ಕೆ ಯಾವುದೂ ನಾಟುವಂತಿಲ್ಲ ಸ್ತ್ರೀಯೆಂಬ ರತ್ನವು ಮಾಯೆಯ ಮಡುವಾಗಿರುವುದು ರತ್ನವಂತೂ ರಸಹೀನವಾಗಿದೆ. ಆದರೆ ಲೋಕದಲ್ಲಿ ಸಜ್ಜನರು ಜೀವರತ್ನದಂತೆ ಇರುತ್ತಾರೆ ॥ ೩೩ ॥ ಸತ್ಪುರುಷರು ಚಂದ್ರನಂತೆ ತಂಪಾಗಿದ್ದರೂ ದೋಷಕ್ಕೆ (ಕತ್ತಲೆಗೆ. ಅಜ್ಞಾನಕ್ಕೆ) ಆಶ್ರಯರಲ್ಲ ಸಮುದ್ರದಂತೆ ಗಂಭೀರರಾದರೂ ವಿಷವನ್ನು ಕೊಟ್ಟವರಲ್ಲ ಬೆಟ್ಟದಂತೆ ಎತ್ತರವಾಗಿದ್ದರೂ ನೋವುಹೊಂದಿದವರಲ್ಲ ಅಂತಹ ಸಜ್ಜನರ ಸ್ಥಿತಿಯನ್ನು ಏನೆಂದು ವರ್ಣಿಸಲಿ! ॥ ೩೪ ॥ ಕವಿಗಳು ತಮ್ಮ ಕಾವ್ಯಗಳಲ್ಲಿ ಕಲ್ಲು, ಚಿನ್ನ, ಬೆಟ್ಟ ಹುಲ್ಲು, ನೀರು, ಬೆಂಕಿ ಮುಂತಾದವಕ್ಕೆ ಇಲ್ಲದ ಗುಣಗಳನ್ನು ಆರೋಪಿಸಿ ಬಿಡದೆ ಹೊಗಳತಕ್ಕವರು. ಹೀಗಿರುವಾಗ ಅವರು ಗುಣಗಳಿಗೆ ಒಡೆಯರಾದ ಸಜ್ಜನರನ್ನು ವರ್ಣಿಸದೆ ಬಿಡುವರೆ? ॥ ೩೫ ॥ ಕೊಂದರೂ ನಿಂದಿಸಿದರೂ ಏನಾದರೂ ಆಡಿಕೊಂಡರೂ ಸತ್ಪುರುಷರಲ್ಲಿ ಸ್ನೇಹವನ್ನು ಬಿಡದೆ ಅವರ ಮೃದು ಪಾದಗಳನ್ನು ಸ್ತುತಿಮಾಡುವವನಿಗೆ ಸಮಾನರಾದ ಮನುಷ್ಯರು ಲೋಕದಲ್ಲಿಲ್ಲ ॥ ೩೬ ॥ ಈ ರೀತಿಯಾಗಿ ಹಲವಾರು ವಿಧವಾಗಿ ಸತ್ಪುರುಷರ ಸಮೂಹವನ್ನು ಸ್ತುತಿಸಿ ಸಂತೋಷದಿಂದ ಮನಮೆಚ್ಚಿ ನಾನು ಈ ''ಕಂತುವಿಜಯನ ಕಥೆ''ಯನ್ನು ಹೇಳಿರುತ್ತೇನೆ ॥ ೩೭ ॥ ಸುಂದರವಾಗಿರುವ ಹೊಯಿಸಳದೇಶದಲ್ಲಿ ಚೆಂಗನಾಡು ಇದೆ ಅದರ ನಡುವೆ ಶುಭಮಯವಾದ ಒಂದು ಪಟ್ಟಣವಿದೆ. ಆ ಪಟ್ಟಣದ ಬೆಡಗನ್ನು ನಾನೇನು ವರ್ಣಿಸಲಿ! ॥ ೩೮ ॥ ಸುತ್ತಲೂ ಹಲವಾರು ಗ್ರಾಮಗಳಿಂದ ಕೂಡಿ ಬಹು ರಮಣೀಯವಾದ ತಾವರೆಯ ಎಸಳುಗಳ ನಡುವಣ ಮೊಗ್ಗಿನಂತೆ ಆ ಪಟ್ಟಣವು ಶೋಭಿಸುವುದು. ॥ ೩೯ ॥

---

[1] ರತ್ನದ ಮಯುಖದಧಿಕವನೆ (ಕ) [2] ಮಯಮಯುಡುನಿಕರ (ಗ) [3] ಕನಕಗಿರಿ ತೃಣಜಲಂಗಳಿಗಿಲ್ಲದ (ಗ) ಕನಕ ತರುಗಿರಿ ತೃಣ ಜಲಗಳಿಗಿಲ್ಲದ (ಜ) [4] ಕವಿಗಳ(ಗ) [5] ಸಂತಾನವ (ಜ) [6] ಹೊಯಿಸಳ (ಚ) [7] ನಾಳದ (ಗ ಜ)

ಬಳಸಿ ಪರಿವ ಪನಿನೀರ ಕಾಲುವೆ[1] ಪೂ । ಗೊಳ ಪೂದೋಂಟ[2] ವಾರಾವು ॥
ವಿಲಸಿತ ಶಾಲಿವನಗಳಿಂದಾ ಪೊಳ । ಲಿಳೆಗೆ ಕೌತುಕವಾಗಿಹುದು ॥ ೭೦ ॥

ಜಾಣರ ಜನ್ಮಸದನ ರಸಿಕರ ಮನೆ । ವಾಣಿಯು ನೆಲೆ ಜಿನಮತದ ॥
ತಾಣವೆಂದೆನಿಪ ರಾವಂದೂರೊಳು ಪಂಚ । ಬಾಣನ ರೂಪನಲ್ಲೆಂಬ ॥ ೭೧ ॥

ಕಮಲಜ[3] ರೂಪ ಕಮಲದಳ ಲೋಚನ । ವಿಮಲಾಂಗ ವಿತರಣಶೀಲ ॥
ಸುಮನಸರಾಯುಧ ಜಿತಜಿನಪದಪದ್ಮ । ಭ್ರಮರನೆನಿಸಿ ಜಸವಡೆದ ॥ ೭೨ ॥

ಸಚಿವ ಶಿರೋಮಣಿ ಗುಣಭೂಷಣನುರು । ಶುಚಿಯಕಲಂಕ ಚರಿತನು ॥
ಅಚಲಿತ ಚಲ ಧೈರ್ಯ ದೇವಪ್ಪಗಳತಿ । ಪ್ರಚುರತೆವಡೆದಿಹನವನ ॥ ೭೩ ॥

ನಿಜನಂದನ ಮನುಮಾರ್ಗಮನೋಹರ । ವೃಜಿನಾರಿ ಜಿನಪದ ಭಕ್ತ ॥
ಸುಜನಾಸ್ಯದರ್ಪಣ ಬುಕ್ಕರಸನು ಮನ । ಸಿಜರೂಪನಿಹನಂತವನ ॥ ೭೪ ॥

ಕುಲವಧು ಪಾಯಮ್ಮ ನಿಜವಾಣಿ ಜಿನ ಭಕ್ತೆ । ಚೆಲುವೆ ಸಿಂಗರಕಾತಿ ಗರುವೆ ॥
ಲಲನಾಮಣಿ ಪತಿಭಕ್ತೆ ಸಮ್ಯಕ್ತ್ವದ । ನೆಲೆಯಾದಳಂತವರುಗಳ[4] ॥ ೭೫ ॥

ಅಂಗೋದ್ಭವ ನಾನಂಗಜ ರೂಪ ದಿ । ವ್ಯಾಂಗನಮಲ ಗುಣಯುತನು ॥
ಅಂಗಜಹರ ಜಿನಭಕ್ತ ದೇವಪ್ಪ ಸು । ಸಂಗತಿಯಿಂದಿರುತಿರ್ದು[5] ॥ ೭೬ ॥

---

ಸುತ್ತಲೂ ಹರಿಯುತ್ತಿರುವ ಪನ್ನೀರಿನ ಕಾಲುವೆಯಿಂದಲೂ ಸರೋವರ, ಹೂದೋಟ, ಉದ್ಯಾನ, ಬತ್ತದ ಗದ್ದೆಗಳಿಂದಲೂ ಆ ಪಟ್ಟಣವು ಲೋಕಕ್ಕ ಆಶ್ಚರ್ಯಕರವಾಗಿ ಇರುವುದು. ॥ ೭೦ ॥ ಬುದ್ಧಿವಂತರಿಗೆ ಜನ್ಮಗೃಹವೂ ರಸಿಕರಿಗೆ ಮನೆಯೂ ವಿದ್ಯಾದೇವಿಗೆ ಆಶ್ರಯವೂ ಜೈನಮತಕ್ಕೆ ಸ್ಥಾನವೂ ಎನಿಸುವ ರಾವಂದೂರಿನಲ್ಲಿ ಮನ್ಮಥನ ರೂಪವನ್ನು ಅಲ್ಲಗಳೆಯತಕ್ಕವನೊಬ್ಬನಿದ್ದನು. ॥ ೭೧ ॥ ಬ್ರಹ್ಮಸ್ವರೂಪನೂ ತಾವರೆಯೆಸಳಿನಂತೆ ಕಣ್ಣುಳ್ಳವನೂ ನಿರ್ಮಲವಾದ ಅಂಗಗಳನ್ನುಳ್ಳವನೂ ದಾನಶೀಲನೂ ದೇವತೆಗಳ ಆಯುಧದಂತಿರುಪವನೂ ಜಿನದೇವನ ಪಾದಕಮಲಕ್ಕೆ ತುಂಬಿಯಂತಿರುವವನೂ ಆಗಿ ಕೀರ್ತಿಗಳಿಸಿದ್ದನು. ॥ ೭೨ ॥ ಆತನು ಮಂತ್ರಿಗಳಲ್ಲಿ ಶ್ರೇಷ್ಠನೂ ಒಳ್ಳೆಯಗುಣವೆಂಬ ತೊಡಿಗೆಯುಳ್ಳವನೂ ಅತ್ಯಂತ ಶುದ್ಧನೂ ಕಳಂಕವೇನೂ ಇಲ್ಲದ ನಡತೆಯುಳ್ಳವನೂ ಸ್ವಲ್ಪವೂ ಕದಲದಿರುವ ಚಲವುಳ್ಳವನೂ ಧೈರ್ಯಶಾಲಿಯೂ ಆಗಿ ದೇವಪ್ಪಗಳು ಎಂಬ ಹೆಸರಿನಿಂದ ಕೀರ್ತಿಶಾಲಿಯಾಗಿದ್ದನು. ॥ ೭೩ ॥ ಆ ದೇವಪ್ಪ ಸಚಿವನ ಮಗನಾದ ಬುಕ್ಕರಸನು ಮನುವಿನ ಧರ್ಮಮಾರ್ಗದಲ್ಲಿ ವರ್ತಿಸುವವನೂ ಸುಂದರನೂ ಪಾಪರಹಿತನೂ ಜಿನಭಕ್ತನೂ ಸತ್ಪುರುಷರ ಮುಖಕ್ಕೆ ಕನ್ನಡಿಯಂತಿರುವವನೂ ಸೌಂದರ್ಯದಲ್ಲಿ ಮನ್ಮಥನಂತೆ ಇರುವವನೂ ಆಗಿದ್ದನು. ॥ ೭೪ ॥ ಆ ಬುಕ್ಕರಸನ ಮಡದಿ ಪಾಯಮ್ಮ ಎಂಬಾಕೆ ಜಿನಭಕ್ತೆ, ಚೆಲುವೆ, ಶೃಂಗಾರವುಳ್ಳವಳು, ಗೌರವಾನ್ವಿತೆ, ಸ್ತ್ರೀಯರಿಗೆ ರತ್ನಪ್ರಾಯಳು, ಪತಿವ್ರತೆ ಮತ್ತು ಜಿನಧರ್ಮಕ್ಕೆ ಆಶ್ರಯಳಾಗಿದ್ದಳು. ॥ ೭೫ ॥ ಬುಕ್ಕರಸ-ಪಾಯಮ್ಮ ಎಂಬೀ ದಂಪತಿಗಳಿಗೆ ಮಗನಾಗಿ ಜನಿಸಿ, ಮನ್ಮಥನಂತೆ ಸುಂದರವಾದ ರೂಪವುಳ್ಳ ದಿವ್ಯವಾದ ದೇಹವುಳ್ಳ ಕಲಂಕರಹಿತವಾದ ಗುಣಗಳಿಂದ ಕೂಡಿದ ಮನ್ಮಥನನ್ನು ನಾಶಗೊಳಿಸಿದ ಜಿನನ ಭಕ್ತನಾದ ದೇವಪ್ಪ ಎಂಬ ಹೆಸರುಳ್ಳ ನಾನು ಸತ್ಪುರುಷರ ಒಡನಾಟದಲ್ಲಿರುತ್ತಿದ್ದೆನು. ॥ ೭೬ ॥ ನಾನು ರಾವಂದೂರು ಪಟ್ಟಣದಲ್ಲಿ ನಿಲ್ಲದೆ

---

[1] ಕಾಲುವೆ ಬಳ್ಳೆಗಿಟ್ಟ (ಗ.ಚ). [2] ಪೂದೋಟ (ಗ). [3] ಕಮನೀಯ (ಚ) [4] ೭೫,೭೭,೭೮ ಈ ಪದ್ಯಗಳು ಗ ಚ ದಲ್ಲಿಲ್ಲ. [5] ನೀ ಸಂಗತಿಯನು ಪೇಳ್ವೆನು (ಚ)

ಇರದಲ್ಲಿಂ ನಂಜರಾಯ ಪಟ್ಟಣಕ್ಕೈದಿ । ಕರೆದೀವ ದಾನಿ ಜೆಂಗಾಳ್ವ ॥
ವರ ವಂಶಾಬ್ಧಿ ಚಂದಿರ ನಂಜುಂಡ ಭೂ । ವರಗತಿಹಿತವನೆಂದೆನಿಸಿ ॥ ೨೭ ॥

ಧರೆಗೊಳ್ಳಿದನಾಗಿ ಮಂತ್ರಿಪದವನಾಂ । ತಿರುತಿರ್ದೆ ವಿಭವದೊಳಿನ್ನ ॥
ಕರೆದು ಭವ್ಯರು ಜಿನಕಥೆ ಪೇಳೆನಲಾ । ನೊರೆದೆನೀ ರಾಮವಿಜಯವ ॥ ೨೮ ॥

ತಿಂಗಳ ಜೊನ್ನದೊಳಾಡಿ ವಸಂತನೊ । ಳಂಗೀಕರಿಸಿ ಕಾಂತೆಯರ[1] ॥
ಕಂಗಡೆಯೊಡನಾಡಿ ಕಾಮಬಾಣದೊಳೋದಿ[2] । ದಂಗದಂತಿವೆ[3] ನಿನ್ನ ಮಾತು ॥ ೨೯ ॥

ಶಶಿವದನೆಯರೊಲ್ದು ತಮ್ಮ ಬಂದುಗೆವಾಯ । ರಸದಂಬುಲವ ಸಂತಸದಿ[4] ॥
ಹೊಸಹರೆಯದ ಪ್ರಿಯತಮರ್ಗೀವಂತಿವೆ । ಕುಸುಮೇಷುನಿಭ ನಿನ್ನ ಮಾತು ॥ ೩೦ ॥

ಒಸರುವ ಸುಧೆಯ ಕೊಡನೊ ಮುನಿದಗಲಿದ । ಶಶಿವದನೆಯ ಕೂಟ[5] ದಿರವೊ ॥
ಪೊಸಜವ್ವನೆಯ ಜೇಟದ ಸುಗ್ಗಿಯಂತೆ ಸಂ । ತಸವೀವುತಿವೆ[6] ನಿನ್ನ ಮಾತು ॥ ೩೧ ॥

ತಿಂಗಳ ತಂಗದಿರ್ದೊಂಗಲ ಸಿರಿಯಂ । ತಿಂಗಡಲಿನ ರಸದಂತೆ ।
ರಂಗುವಡದ ಮಾಣಿಕದ ಮಂಜರಿಯ ಬೆ । ಡಂಗಿನಂತಿವೆ[7] ನಿನ್ನ ಮಾತು ॥ ೩೨ ॥

ತನಿಗೆನೆವಾಲೊಳೊಂದಿಸಿದ ಸಕ್ಕರೆಯದೊಂ । ದಿನಿಸಗಲಿರ್ದಂ[8] ಗನೆಯ ॥
ಮನವೊಲ್ದು ಕೂಡುವ ಸುಖವೆಂತುಟಂತುಟು । ಮನಕೀವುತಿವೆ ನಿನ್ನ ಮಾತು[9] ॥ ೩೩ ॥

---

ನಂಜರಾಯಪಟ್ಟಣಕ್ಕೆ ಹೋದೆನು ಅಲ್ಲಿ ಕರೆದುಕೊಡುವ ದಾನಿಯೆನಿಸಿದ ಜೆಂಗಾಳ್ವರ ವಂಶವೆಂಬ ಸಮುದ್ರಕ್ಕೆ ಚಂದ್ರನೆಂದೆನಿಸಿದ ನಂಜುಂಡರಾಜನಿಗೆ ಅತ್ಯಂತ ಹಿತವನೆಂದೆನಿಸಿದೆನು ॥ ೨೭ ॥ ಅಲ್ಲಿ ನಾನು ಲೋಕಕ್ಕೆ ಒಳ್ಳೆಯವನಾಗಿ ಮಂತ್ರಿಪದವಿಯನ್ನು ವಹಿಸಿಕೊಂಡಿದ್ದೆನು ಹೀಗಿರುವಾಗ ಭವ್ಯರು ನನ್ನನ್ನು ವೈಭವದಿಂದ ಕರೆದು ಜಿನಕಥೆಯನ್ನು ಹೇಳಬೇಕೆಂದು ಕೇಳಿಕೊಂಡುದರಿಂದ ನಾನು ಈ ರಾಮವಿಜಯವನ್ನು ಹೇಳಿದೆನು ॥ ೨೮ ॥ ಭವ್ಯರು ನನ್ನೊಡನೆ ಹೇಳಿದ ಮಾತುಗಳಿವು–ಎಲೈ ದೇವಪ್ಪ ಕವಿಯೇ, ನಿನ್ನ ಮಾತುಗಳು ಚಂದ್ರನ ಬೆಳ್ದಿಂಗಳ ಒಡನಾಡಿದಂತೆಯೂ ವಸಂತನಲ್ಲಿ ಸ್ವೀಕಾರವಾದಂತೆಯೂ ಸ್ತ್ರೀಯರ ಕಡೆಗಣ್ಣಿನೊಡನಾಡಿದಂತೆಯೂ ಮನ್ಮಥನ ಬಾಣಗಳಿಂದ ಕವಿದಂತೆಯೂ ಮನೋಹರವಾಗಿವೆ ॥ ೨೯ ॥ ಮನ್ಮಥನಂತಿರುವ ನಿನ್ನ ಮಾತುಗಳು ಚಂದ್ರನಂತಹ ಮೊಗವುಳ್ಳ ಸುಂದರಿಯರಾದ ಸ್ತ್ರೀಯರು ಬಂದುಗೆ ಹೂವಿನಂತೆ ಕೆಂಪಾದ ಬಾಯಿಯ ರಸ ತಾಂಬೂಲವನ್ನು ಸಂತೋಷದಿಂದ ತಮ್ಮ ಹೊಸಹರಯದ ನಲ್ಲರಿಗೆ ಕೊಡುವಂತಿವೆ ॥ ೩೦ ॥ ಒಸರುತ್ತಿರುವ ಅಮೃತದ ಕೊಡವೆಂಬಂತೆಯೂ ಸಿಟ್ಟಾಗಿ ಒಮ್ಮೆ ಅಗಲಿ ಹೋಗಿ ಪುನಃ ಬಂದ ಮಡದಿಯ ಒಡನಾಟದ ಸ್ಥಿತಿಯೋ ಎಂಬಂತೆಯೂ ಹೊಸತಾದ ಯೌವನವತಿಯ ಪ್ರೇಮದ ಸುಗ್ಗಿಯೋ ಎಂಬಂತೆಯೂ ನಿನ್ನ ಮಾತುಗಳು ಸಂತೋಷವನ್ನು ಕೊಡುತ್ತಿವೆ ॥ ೩೧ ॥ ನಿನ್ನ ಮಾತುಗಳು ಚಂದ್ರನ ಬೆಳ್ದಿಂಗಳ ಕಾಂತಿಯಂತೆಯೂ ಕ್ಷೀರಸಮುದ್ರದ ನೀರಿನಂತೆಯೂ ಒಳ್ಳೆಯ ಬಣ್ಣದಿಂದ ಕೂಡಿದ ಮಾಣಿಕ್ಯರತ್ನದ ಗೊಂಚಲಿನ ಚೆಲುವಿನಂತೆಯೂ ಮೋಹಕವಾಗಿವೆ ॥ ೩೨ ॥ ಪರಿಪಕ್ವವಾದ ಕೆನೆಹಾಲಿಗೆ ಸಕ್ಕರೆ ಸೇರಿಸಿದಂತೆಯೂ ಸ್ವಲ್ಪಕಾಲ ಅಗಲಿದ ಮಡದಿಯನ್ನು ಮನಮೆಚ್ಚಿ ಒಡನಾಡುವ ಸುಖದಂತೆಯೂ ನಿನ್ನ ಮಾತುಗಳು ನಮ್ಮ ಮನಸ್ಸಿಗೆ ಸುಖ ಕೊಡುತ್ತಿವೆ ॥ ೩೩ ॥

---

[1] ಳಂಗಿನ ನಿಜರಮಣಿಯರ (ಕ) [2] ಬಾಣದೊಳಂದಿ (ಗ) [3] ದಂತಿದೆ (ಚ) [4] ಕೊಡುವಂತು (ಕ) [5] ಕೂಚ (ಗ) [6] ಸಂತಸವೀರುತಿವೆ (ಚ) [7] ಜುಂಗಿನಂತಿವೆ (ಗ ಚ) [8] ದಿನಿಸನಿದಗಲಿದಂ (ಕ) [9] ೩೩. ಗ ದಲ್ಲಿಲ್ಲ

ರಸದಾಳಿಯಂತಿನಿಮಾವಿನ ಪಣ್ಣಿಂ । ತಸಿಯಳ ನಗೆಮೊಗದಿಂದ[1] ॥
ಒಸರುವ ಲಾವಣ್ಯರಸವೆಂಬಂದದೊ। ಳೆಸೆದಿವೆ ಮೇಲ್ಮಾತು[2] ನಿನ್ನ ॥ ೫೪ ॥

ಕೆಂಬರಲಿನ[3] ತೊಡವನು ಬಿರಿಮುಗುಳ ತೊ । ಡಂಬೆಯನಂಬುಜಾಕ್ಷಿಯರ ॥
ಕಂಬುಕಂಧರದಾಲಿಂಗನವನು ಮಾಱು । ಗೊಂಬವೊಲಿವೆ[4] ನಿನ್ನ ಮಾತು ॥ ೫೫ ॥

ಚಂದನದಿಂದ ತಂಬೆಲರಿಂದ ಪನಿನೀ । ರಿಂದಿಂದುರುಚಿ[5]ತತಿಯಿಂದ ॥
ಅಂದವಡೆದ ತಣ್ಪಾಗುತ್ತ[6]ಲಿವೆ ನಿನ್ನ । ಸಂದ ಜಾಣ್ನುಡಿ ಚದುರರಿಗೆ ॥ ೫೬ ॥

ಸಕ್ಕರೆಯಂತೆಳಜವ್ವನೆಯರ ಪೊಸ । ತಕ್ಕೆಯಂತಿನಿರಸದಂತೆ ॥
ಮಕ್ಕಳ ತೊದಲಂತೆ ಮಮತೆಯನೆಮ್ಮ ಮ । ನಕ್ಕೀವುತಿವೆ ನಿನ್ನ ಮಾತು ॥ ೫೭ ॥

ಸವಿ ಬಲುಜವ್ವನೆಯರ ನುಡಿಗಿಮ್ಮಡಿ । ಸವಿ ತಕ್ಕರ ನುಡಿಯದಕೆ ॥
ಸವಿ ಮಕ್ಕಳ ತೊದಲ್ನುಡಿಯಾ ನುಡಿಯಿಂದ[7] । ಸವಿ ನಿನ್ನಯ ಸವಿಮಾತು[8] ॥ ೫೮ ॥

ಸೋನೆ ಪೀಯೂಷಾಬ್ಧಿಯ ಮಧುವಿನ ಬಲು । ಸೋನೆಯಿಂದುವಿನಿಂದೊಸರುವ ॥
ಸೋನೆ ಕೇಳುವ ಭಾವಕರಿಗೆ ಸೊಬಗಿನ । ಸೋನೆಯಲ್ಲವೆ ನಿನ್ನ ಮಾತು[8] ॥ ೫೯ ॥

ಎಂದು ಭವ್ಯರು ಸಂತಸದೊಳೆನ್ನೊಡನಿಂ । ತೆಂದರು ಜಿನಕಥೆಯೊಳಗೆ ॥
ಒಂದು ಕಥೆಯ ತಳುವಿಲ್ಲದೆ ಪೇಳೆನ । ಲೆಂದೆ ನಾನವರೊಡನಿಂತು ॥ ೬೦ ॥

ಬಲ್ಲವನಲ್ಲ ಶಾಸ್ತ್ರವ[9] ಕಬ್ಬದ ಹೊಲ । ಬಿಲ್ಲಯೆಳ್ಳನಿತೆನಗಿಂದು[10] ॥
ಸೊಲ್ಲಿಸಲಾ[11]ನವರಿಗೆ ಕೇಳ್ದವರು ತಳು । ವಿಲ್ಲದೆ ಪೇಳ್ದರಿಂತೆಂದು ॥ ೬೧ ॥

---

ನಿನ್ನ ಶ್ರೇಷ್ಠವಾದ ಮಾತುಗಳು ಉತ್ತಮವಾದ ಜಾತಿಯ ಕಬ್ಬಿನಂತೆಯೂ ಸಿಹಿಯಾದ ಮಾವಿನ ಹಣ್ಣಿನಂತೆಯೂ ಪ್ರೇಯಸಿಯ ನಗೆಮೊಗದಿಂದ ಪ್ರವಹಿಸುವ ಸೌಂದರ್ಯವೆಂಬ ರಸದಂತೆಯೂ ಶೋಭಿಸಿವೆ. ॥ ೫೪ ॥ ನಿನ್ನ ಮಾತುಗಳು ಕೆಂಪುರತ್ನದ ಆಭರಣವನ್ನೂ ಬಿರಿಮುಗುಳಿನ ಹೂಗೊಂಚಲನ್ನೂ ಸುಂದರಿಯರ ಕೊರಳ ಅಪ್ಪುಗೆಯನ್ನೂ ಸೋಲಿಸುವಂತಿವೆ. ॥ ೫೫ ॥ ನಿಪುಣರಾದವರಿಗೆ ನಿನ್ನ ಬುದ್ಧಿವಂತಿಕೆಯ ಮಾತುಗಳು ಶ್ರೀಗಂಧ, ತಂಗಾಳಿ, ಪನ್ನೀರು, ಬೆಳ್ದಿಂಗಳು–ಮುಂತಾದವುಗಳಿಗಿಂತಲೂ ಅಂದವಾಗಿ ತಂಪೆನಿಸುತ್ತಿವೆ. ॥ ೫೬ ॥ ಸಕ್ಕರೆಯಂತೆಯೂ ನವಯುವತಿಯರ ಹೊಸತಾದ ಆಲಿಂಗನದಂತೆಯೂ ಸಿಹಿಯಾದ ರಸದಂತೆಯೂ ಮಕ್ಕಳ ತೊದಲುಮಾತಿನಂತೆಯೂ ನಿನ್ನ ಮಾತುಗಳು ನಮ್ಮ ಮನಸ್ಸಿಗೆ ಪ್ರೀತಿಯನ್ನು ಒದಗಿಸುತ್ತಿವೆ. ॥ ೫೭ ॥ ಅತಿ ಯೌವನದಿಂದ ಕೂಡಿದ ಸ್ತ್ರೀಯರ ಮಾತು ಸವಿ, ಅದಕ್ಕಿಂತ ಇಮ್ಮಡಿ ಸವಿಯಾದುದು ಯೋಗ್ಯತೆಯುಳ್ಳವರ ಮಾತು. ಅದಕ್ಕಿಂತಲೂ ಸವಿಯಾದುದು ಮಕ್ಕಳ ತೊದಲುನುಡಿ. ಆ ತೊದಲು ನುಡಿಗಿಂತಲೂ ನಿನ್ನ ಸವಿಮಾತು ಸವಿಯಾಗಿದೆ. ॥ ೫೮ ॥ ಕೇಳತಕ್ಕ ಭಾವನಾಜೀವಿ ರಸಿಕರಿಗೆ ನಿನ್ನ ಮಾತು ಕ್ಷೀರಸಾಗರದಿಂದ ಬರುವ ಮಳೆ, ಜೇನಿನ ದೊಡ್ಡಮಳೆ, ಚಂದ್ರನಿಂದ ಹರಿದುಬರುವ ಮಳೆ, ಮಾತ್ರವೇ ಅಲ್ಲ ಸೌಂದರ್ಯದ ಸೋನೆಯೇ ಆಗಿರುವುದು. ॥ ೫೯ ॥ ಭವ್ಯರು ಹೀಗೆ ನನ್ನ ಮಾತನ್ನು ಕೊಂಡಾಡುತ್ತ ‘‘ಜಿನಕಥೆಗಳಲ್ಲಿ ಯಾವುದಾದರೊಂದು ಕಥೆಯನ್ನು

---

[1] ಮೊಗದಂತೆ (ಚ). [2] ಮೆಲ್ಮಾತು (ಗ ಚ.) [3] ಕೆಂಬಲರಿನ [4] ಮಾಱುದೊಂಬವಲಿವೆ (ಗ). [5] ನೀರಿಂದುರುಚಿಯ (ಚ). [6] ತಣ್ಪನೀವುತ (ಚ). [7] ನುಡಿಯಂತೆ (ಚ). [8] ೫೮ ಪದ್ಯ ಗ.ದಲ್ಲಿಲ್ಲ, ೫೯ ಗ.ಚದಲ್ಲಿಲ್ಲ. [9] ಶಾಸ್ತ್ರವ (ಚ). [10] ತೆನಗಿಲ್ಲ (ಗ) [11]ಸೊಲ್ಲಿಸನಾ (ಗ ಚ.).

ಅಹುದು ನೀನಾಡಿದ ಮಾತು ನಿಶ್ಚಯಮದು । ಬಹುಶಾಸ್ತ್ರಿಯಲ್ಲ[1]ವೆಂಬುದನು ॥
ಸಹಜದಿಂ ಬಲ್ಲೆವಂತಾದೊಡಾಗಲಿಯುವ । ಗ್ರಹಿಸಿ[2] ಕೇಳೆಮ್ಮ[3] ಸೊಲ್ಲುಗಳ ॥ ೪೨ ॥

ಜಿನಮತಕಮಲವ ಮನಸರಸಿಯೊಳಿಟ್ಟು । ನೆನೆಯೆ ತ್ರಿಕಾಲದೊಳ್ ಮುಕ್ತಿ ॥
ವನಿತೆಯ ನೆರೆವರು[4] ನಿಶ್ಚಯಮಿದು[5] ನವ । ಮನಸಿಜರೂಪ ನಿನ್ನಾಣೆ ॥ ೪೩ ॥

ಜೋಡಿಸಿ ಪುಣ್ಯಕವಿತೆ ಬರೆ ಪೆಱರ[6] ಕೊಂ । ಡಾಡದೆ ಮನವಚನದೊಳು ॥
ಪಾಡಲು ಜಿನರಡಿಯನು ಮುಕ್ತಿವೆಣ್ಣೆಯ್ದಿ[7] । ಕೂಡಳೆ ಮನದೊಳ್ಪಾಗಿ[8] ॥ ೪೪ ॥

ಕಲಿಗಳ ಗುಣಿಗಳ ಶುಚಿಗಳ ಜಿನಪದ । ಛಲಿಗಳ[9] ಭಾವಿಸೆ ಮುಕ್ತಿ ॥
ಲಲನೆಗ[10] ಯಾಣ್ಮರಾದರ ಕಥೆಯೊರೆ ವಿಪ್ರ । ಕುಲ ಸರಸಿರುಹ ಮಾರ್ತಾಂಡ ॥ ೪೫ ॥

ನೆನೆಯೆ ನುಡಿಯಲಱಿಯೆಡೆ ಜಿನರಡಿಗಂಡ । ಮನುಜನ ಪುಣ್ಯಪಾದಪವು[11] ॥
ನನೆ ಕೊನೆ ಪುಷ್ಪ ಫಲಗಳಾಹವೆನಲದ । ಱನುವ ಪೇಳುವುದೇನ[12]ನೆಂದು ॥ ೪೬ ॥

ಆಡಿದ ನುಡಿಗೇಳಿ ಯೆನ್ನಂಗ ಪುಳಕದ । ಬೀಡಾದುದಾನಂದ ಬಾಷ್ಪ ॥
ಕೋಡಿವರಿದುದೆನೆ ಮನದೊಸಗೆಯ ನಾ । ನಾಡುವೆನೇನ ಬಾಯೊಳಿದು[13] ॥ ೪೭ ॥

ಮನದೊಳು ಪುಟ್ಟಿದೊಸಗೆಯ ತೆಱನನಾ । ಮನಬಲ್ಲುದಾ[14] ಜಿನಮತದ ॥
ಅನುವ ಭವ್ಯಾತ್ಮ[15]ಗಲ್ಲದೆ ಪೇಳ್ವೊಡೆ ಮಿಕ್ಕ । ಮನುಜರುಗಳಿಗೆ ಗೋಚರವೆ ॥ ೪೮ ॥

---

ತಡಮಾಡದೆ ಹೇಳು ' ಎಂದರು ಆಗ ನಾನು ಅವರೊಡನೆ ಹೀಗೆಂದೆನು. ॥ ೪೦ ॥ ''ನಾನು ಶಾಸ್ತ್ರಗಳನ್ನು ತಿಳಿದವನಲ್ಲ. ಕಾವ್ಯದ ಹೊಲಬು ನನಗೆ ಎಳ್ಳಿನಷ್ಟೂ ಗೊತ್ತಿಲ್ಲ'' ಎಂದು ನಾನು ಅವರಿಗೆ ಹೇಳಿದೆನು ಆಗ ಅವರು ಒಡನೆ ಹೀಗೆಂದರು. ॥ ೪೧ ॥ ಹೌದು ನೀನು ಹೇಳಿದ ಮಾತು ನಿಶ್ಚಯವೇ ಸರಿ. ನೀನು ಬಹಳ ಶಾಸ್ತ್ರಗಳನ್ನು ತಿಳಿದವನಲ್ಲವೆಂಬುದನ್ನು ಸಹಜವಾಗಿಯೇ ನಾವು ತಿಳಿದಿರುತ್ತೇವೆ ಹಾಗಿದ್ದರೂ ನಮ್ಮ ಮಾತುಗಳನ್ನು ಸರಿಯಾಗಿ ಅರ್ಥಮಾಡಿ ಕೇಳು. ॥ ೪೨ ॥ ಮನಸ್ಸೆಂಬ ಸರೋವರದಲ್ಲಿ ಜೈನಮತವೆಂಬ ತಾವರೆಯನ್ನು ನೆಲೆಗೊಳಿಸಿ ತ್ರಿಕಾಲಗಳಲ್ಲಿಯೂ ಧ್ಯಾನಮಾಡುತ್ತಿದ್ದರೆ. ಅಂಥವರು ಮೋಕ್ಷವೆಂಬ ಸ್ತ್ರೀಯನ್ನು ವರಿಸುವರು ಎಲೈ ಮನ್ಮಥಸ್ವರೂಪನೇ. ಇದು ನಿಜವಾದುದು. ॥ ೪೩ ॥ ಪುಣ್ಯಕರವಾದ ಕವಿತೆಯು ಹೊಂದಿಕೆಯಾಗಿ ಬರಲು ಅನ್ಯರನ್ನು ಹೊಗಳದೆ ಮನಸ್ಸು ಮಾತುಗಳಲ್ಲಿ ಜಿನೇಶ್ವರರ ಪಾದವನ್ನು ಕುರಿತು ಹಾಡಬೇಕು. ಆಗ ಮೋಕ್ಷವೆಂಬ ಸ್ತ್ರೀಯು ಮನಮೆಚ್ಚಿ ಬಂದು ಸೇರದೆ ಇರಲಾರಳು. ॥ ೪೪ ॥ ಎಲೈ ಬ್ರಾಹ್ಮಣ ವಂಶವೆಂಬ ತಾವರೆಯನ್ನು ಅರಳಿಸುವ ಸೂರ್ಯನಂತಿರುವವನೇ ನೀನು ನಮಗೆ ಪರಾಕ್ರಮಿಗಳೂ ಸದ್ಗುಣಿಗಳೂ ಪರಿಶುದ್ಧರೂ ಜಿನಭಕ್ತಿಯಲ್ಲಿ ಅವಿಚಲರೂ ಆಗಿದ್ದು ಮೋಕ್ಷವನ್ನು ಗಳಿಸಿದವರ ಕಥೆಯನ್ನು ತಿಳಿಸು. ॥ ೪೫ ॥ ಜಿನರನ್ನು ಸ್ಮರಿಸಿದರೆ, ಮಾತಾಡತೊಡಗಿದರೆ. ಪಾದದರ್ಶನ ಮಾಡಿದರೆ ಅಂತಹ ಮನುಷ್ಯರ ಪುಣ್ಯವೆಂಬ ಮರವು ಮೊಗ್ಗು, ಹೂ ಹಣ್ಣುಗಳಿಂದ ತುಂಬುವುದನ್ನು ಹಾಗ ಆ ಸಂಗತಿಯನ್ನು ಏನೆಂದು ಹೇಳಲಿ! ॥ ೪೬ ॥ ಭವ್ಯರು ಹೀಗೆ ಆಡಿದ ಮಾತನ್ನು ಕೇಳಿ ನನ್ನ ಅಂಗಗಳು ರೋಮಾಂಚನವನ್ನು ತಾಳಿದವು ಕಣ್ಣಲ್ಲಿ ಸಂತೋಷದ ಬಾಷ್ಪವು ಪ್ರವಾಹವಾಗಿ ಹರಿಯಿತು ನನ್ನ ಮನಸ್ಸಿಗಾದ

---

[1] ಯೆಲ್ಲ (ಕ) [2] ಯುವಗಹಿಸಿ (ಚ) [3] ಕೇಳೆನ್ನ (ಕ) [4] ನೆನವರು. (ಗ ಚ). [5] ನಿಶ್ಚಯವದು (ಬ). [6] ಬಾರದೊಡೆ (ಚ)
[7] ವಣ್ಣೆಯ್ದೆ (ಚ) [8] ಮನದೊತ್ತಾಗಿ (ಚ) [9] ವಲಿಗಳ (ಗ) [10] × (ಗ) [11] ಪಾಪವನು (ಗ). [12] × (ಗ) [13] ೪೭ ಈ ಒಂದು ಪದ್ಯ ಗ ಚ.ದಲ್ಲಿಲ್ಲ [14] ಒಲ್ಲುದು (ಚ) [15] ಅನುಭವಿಯಾತ್ಮ (ಕ) ಅನುವ ಭವ್ಯಾ (ಗ)

ಸುರನರೋರಗರು ಜಿನೇಶಗೆಱಗಿಯುರು । ಸಿರಿಯು ಪಡೆದರಾ ಜಿನರ[1] ॥
ಚರಣವ ತನುಮನದಿಂ ನಂಬಿದವರಿ[2]ಗಾ । ಸುರನರೋರಗರೆಱಗುವರು ॥ ೯೯ ॥

ಆವ ಬಗೆ[3]ಯೊಳಾದಡಾಗಲಿ ಜಿನರಡಿ । ದಾವರೆಗಳನನವರತ ॥
ಭಾವಸರಸಿಯೊಳಿಂಬಿಟ್ಟ ಮಾನವನವ । ದೇವತಪ್ಪುದು ಜಿನರಾಣೆ ॥ ೧೦೦ ॥

ಅತನುವ ಮೋಹಮಲ್ಲನ ಕಾಲನ ವೇದ । ಗತಿಗಳ ತ್ರಿಪುರವ ಗೆಲಿದು ॥
ಹತಿಸಿಯುಱುಪಿದಭವನ ಕಥೆಯನು ಪೇಳು । ಮತಿರತ್ನಾಕರಚಂದ್ರ ॥ ೧೦೧ ॥

ಗುಣ-ರೂಪು-ಜಾತಿ-ಯೌವನ-ಯಶ-ಬಹುಶ್ರುತ । ಗಣನೆಯಿಲ್ಲದ ಧನ ಜಿನರ್ಗೆ ॥
ಮಣಿದು ಮುನ್ನವೆ[4] ನಂಬಿದವರಿಗಲ್ಲದೆ ಮಿಕ್ಕ । ಬಣಗುಗಳಿಗೆ ಬಂದಪುದೆ[5] ॥ ೧೦೨ ॥

ನಾಕ-ನರೋರಗ-ನತ-ಪಾದ-ಪದ್ಮನ । ನೇಕಚಿತ್ತದೊಳು ಪೂಜಿಸದೆ ॥
[6]ಬೇಕವು ಬೇಕಿವು ಬೇಕೆಂದು ಬಯಸಿದೊ । ಡೇಕೆ[6] ಬಪ್ಪುದು ಮನುಜರಿಗೆ ॥ ೧೦೩ ॥

ಸೊಲ್ಲುಸೊಲ್ಲಿಗೆ ಜಿನ ಜಿನ ಶರಣೆಂದೆಂಬ[7] । ಸೊಲ್ಲೊಗೆದಿರೆ[8] ಮುಕ್ತಿರಮೆಗೆ ॥
ವಲ್ಲಭನಪ್ಪ ಮನುಜನಿಗೆ ಸರಿದೊರೆ । ಯಲ್ಲ[9] ಲೋಕದ ಮಾನವರು ॥ ೧೦೪ ॥

ಎಂದಿವು ಮೊದಲಾದ ಹಲವು ನಿಜೋಕ್ತಿ[10]ಗ । ಳಿಂದೊಡಬಡಿಸಿ[11] ಮೇಲೆನ್ನ ॥
ಮಂದಬುದ್ಧಿಯ ನೀರ ಸೂಸಿ ಬಿಡಿಸಿ ಬಿಡ । ಲೆಂದರೆನ್ನೊಡನವರಿಂತು ॥ ೧೦೫ ॥

---

ಸಂತೋಷವನ್ನು ನಾನು ಬಾಯಿಯಿಂದ ಹೇಗೆ ತಾನೆ ಹೇಳುವೆನು! ॥ ೯೭ ॥ ಆಗ ಮನಸ್ಸಿನಲ್ಲಿ ಉಂಟಾದ ಸಂತೋಷವನ್ನು ಮನಸ್ಸೇ ಬಲ್ಲುದು. ಜೈನಮತದ ಸಂಗತಿಯನ್ನು ಭವ್ಯಾತ್ಮನಿಗಲ್ಲದೆ ಇತರ ಮನುಷ್ಯರಿಗೆ ಹೇಳಿದರೆ ಗೊತ್ತಾಗುವುದೆ? ॥ ೯೮ ॥ ದೇವತೆಗಳೂ ಮಾನವರೂ ನಾಗರೂ ಜಿನೇಶ್ವರರಿಗೆ ನಮಸ್ಕರಿಸಿ ಶ್ರೇಷ್ಠಸಂಪತ್ತನ್ನು ಗಳಿಸಿದ್ದಾರೆ. ಆ ಜಿನೇಶ್ವರರ ಪಾದವನ್ನು ತನುಮನದಿಂದ ನಂಬಿದವರಿಗೆ ದೇವತೆಗಳೂ ಮನುಷ್ಯರೂ ನಾಗರೂ ನಮಸ್ಕರಿಸುವರು. ॥ ೯೯ ॥ ಯಾವ ವಿಧದಲ್ಲೇ ಆಗಲಿ, ಜಿನರ ಪಾದಕಮಲಗಳನ್ನು ಯಾವಾಗಲೂ ಭಾವವೆಂಬ ಸರೋವರದಲ್ಲಿ ಇಂಬಾಗಿ ಇಟ್ಟುಕೊಂಡ ಮನುಷ್ಯನು ಜಿನರ ಆಣೆಯಾಗಿಯೂ ದೇವತೆಯಾಗುವನು. ॥ ೧೦೦ ॥ ಬುದ್ಧಿಯೆಂಬ ಸಾಗರಕ್ಕೆ ಚಂದ್ರನಂತಿರುವವನೇ, ಮೋಹಮಲ್ಲನೆನಿಸಿದ ಮನ್ಮಥವನ್ನೂ ಯಮನನ್ನೂ ವೇದಗತಿಗಳನ್ನೂ (ನಾಲ್ಕು ಗತಿಗಳನ್ನೂ) ತ್ರಿಪುರರನ್ನೂ ಗೆದ್ದು, ಕೊಂದು, ಸುಟ್ಟುಹಾಕಿದ ಜನ್ಮರಹಿತನಾದ ದೇವನ ಕಥೆಯನ್ನು ಹೇಳುವವನಾಗು. ॥ ೧೦೧ ॥ ಜಿನರನ್ನು ನಂಬಿ ನಮಸ್ಕರಿಸಿದವರಿಗೆ ಗುಣ, ಸೌಂದರ್ಯ, ಜಾತಿ, ಯೌವನ, ಕೀರ್ತಿ, ಜ್ಞಾನ, ಅಗಣಿತವಾದ ಐಶ್ವರ್ಯ—ಇವು ಬರುವುವಲ್ಲದೆ ಮಿಕ್ಕಿನ ಅಲ್ಪರಿಗೆ ಇವು ಬರಲಾರವು. ॥ ೧೦೨ ॥ ದೇವ-ಮನುಷ್ಯ-ಉರಗರಿಂದ ನಮಸ್ಕರಿಸಲ್ಪಡುವ ಪಾದಕಮಲವುಳ್ಳ ಜಿನನನ್ನು ಒಂದೇ ಮನಸ್ಸಿನಿಂದ ಪೂಜೆಮಾಡದೆ ಅವು ಬೇಕು, ಇವು ಬೇಕು—ಎಂದು ಬಯಸಿದರೆ ಮನುಷ್ಯರಿಗೆ ಅವು ಸಿಗಲಾರವು. ॥ ೧೦೩ ॥ ಮಾತುಮಾತಿಗೂ ಯಾವನು ಜಿನ, ಜಿನ, ಶರಣು ಎನ್ನುತ್ತಾನೋ ಆತನು ಮೋಕ್ಷವೆಂಬ ಲಕ್ಷ್ಮಿಗೆ ಅರಸನಾಗುವನು. ಅವನಿಗೆ ಲೋಕದ ಮನುಷ್ಯರು ಯಾರೂ ಸರಿಯಲ್ಲ. ॥ ೧೦೪ ॥ ಭವ್ಯರು

---

[1] ಪಡೆದು ಜಿನರಾಜ (ಗ). [2] × (ಗ). [3] ಬಾಧೆ (ಗ). [4] ಮುನ್ನುಱೆ (ಕ). [5] ವಂದಿಪೆನೆ (ಚ). [6] ಬೇಕಾದ ಸುಖವು ಬೇಕೆಂದು ಬಯಸಿದೊಡೆಯೇಕೆ (ಚ). [7] ಜಿನರೇ ಶರಣೆಂದು (ಗ). [8] ಸೊಲ್ದೋರದಿರೆ (ಗ) [9] ಸರಿಯಹುದಿಲ್ಲ (ಗ. ಚ.) [10] ನೀತಿ (ಗ). [11] ದೊಡಂಬಡಿಸಿ

ಕೇಳೊಂದು ಮಾತ ಮೀಱಿದಿರಪು ಬಪ್ಪುದ । ಹೇಳುವುದಿಲ್ಲಾವು ನಿನಗೆ ॥
ಕಾಳುನುಡಿಯ ಬಿಟ್ಟು ಜಿನಕಥೆಯನು ಹೇಳು । ಹೇಳು ನಮ್ಮಾಗೆಯೆಂದೆನಲು ॥ ೧೦೬ ॥

ಅಯ್ಯ ಹಸಾದವೆಂದೆನುತಲವರಿಗೆನ್ನ । ಕಯ್ಯ ಮುಗಿದು ಕೇಳ್ವರಿಗೆ ॥
ರಯ್ಯವಪ್ಪಂದದೊಳ್ ಜಿನಕಥೆಯ ನಾ । ನೊಯ್ಯನೊರೆದೆ[1] ಲಾಲಿಪುದು ॥ ೧೦೭ ॥

ಛಂದೋಲಂಕಾರ ಯತಿ ಪದಬಂಧಗ । ಳೊಂದಿ ಮೆಱೆವ ಕೃತಿಯೊಳಗೆ ॥
ಸಂದ ಶ್ರೀ ಜಿನರ ಚರಿತವಲ್ಲದಿರಲದ । ಱಿಂದೇನು ಫಲ ಭವ್ಯರಿಗೆ ॥ ೧೦೮ ॥

ಅದು ಕಾರಣವೀ ಕೃತಿಯೊಳು ಲಕ್ಷಣ । ದೊದವಿಲ್ಲದಿರೆ ಭವ್ಯಜನರು ॥
ಹೃದಯಶುದ್ಧಿಯೊಳಿದನೊಲಿದು ಕೇಳ್ವುದು ಮುಕ್ತಿ । ಸುದತಿ ಮುನಿಯದೆ ಸೋಹಿಸಳು ॥ ೧೦೯ ॥

ನೋವಿಲ್ಲವೆನ್ನ[2] ಮನದೊಳೆನ್ನ ಕೃತಿಯೊಳು । ಭಾವಿಸೆ[3] ದೋಷತತಿಯನು ॥
ನೋವುಂಟು ಜಿನಚರಿತವ ಪೇಳ್ದರ ಮೇಲೆ । ಭಾವ ನಾನಾಪರಿಯಲ್ತೆ ॥ ೧೧೦ ॥

ತಪ್ಪು ಬಹಳವೀ ಕೃತಿಯೊಳು ಜಿನಕಥೆ । ಯೊಪ್ಪದೆಂದೆನಬೇಡ ಮುತ್ತು ॥
ಚಿಪ್ಪಿನೊಳ್[4]ಒಗೆದು ರಾಜಾಧಿರಾಜರ ಕೊರ । ಲೊಪ್ಪವಡೆದು ತೋರದಿಹುದೆ[6] [5] ॥ ೧೧೧ ॥

ಹೊತ್ತು ಗಳಿಗೆಗಳಿಗಗೆ ಹೋಗುತಿದೆಯೆನ್ನ । ಚಿತ್ತ ಸದ್ಭಾವತತಿಯೊಳು ॥
ನಿತ್ತರಿಸಿದರದಱಿಂ[7] ಜಿನಕಥೆಯನು । ಬಿತ್ತರಿಸಿದೆ ಲಾಲಿಪುದು ॥ ೧೧೨ ॥

---

ಇವೇ ಮೊದಲಾದ ಹಲವು ಸ್ವಕೀಯವಾದ ಮಾತುಗಳಿಂದ ನನ್ನನ್ನು ಒಡಂಬಡಿಸಿ ಬುದ್ಧಿಮಾತ್ರವನ್ನು ತಿಳಿಸುವುದಕ್ಕಾಗಿ ಹೀಗೆಂದರು ॥ ೧೦೫ ॥ "ನಮ್ಮದೊಂದು ಮಾತನ್ನು ಕೇಳು ಮಾತನ್ನು ಮೀರಬೇಡ ಪಾಪಕರವಾದುದನ್ನು ನಾವು ನಿನಗೇನೂ ಹೇಳುವುದಿಲ್ಲ ಕೆಟ್ಟ ಮಾತುಗಳನ್ನು ಬಿಟ್ಟು ನಮ್ಮಾಗೋಸ್ಕರವಾಗಿಯೂ ನೀನು ಪುಣ್ಯಕರವಾದ ಜಿನಕಥೆಯನ್ನು ಹೇಳಬೇಕು" ಎಂದರು ॥ ೧೦೬ ॥ ಆಗ ನಾನು ಆ ಭವ್ಯರಿಗೆ 'ಅಯ್ಯ, ಹಸಾದ' ಎಂದು ಹೇಳಿ ಕೈಮುಗಿದು ಕೇಳತಕ್ಕವರಿಗೆ ರಮ್ಯವಾಗುವ ರೀತಿಯಲ್ಲಿ ನಿಧಾನವಾಗಿ ಹೇಳಿದೆನು, ಇದನ್ನೆಲ್ಲರೂ ಕೇಳಬೇಕು ॥ ೧೦೭ ॥ ಕಾವ್ಯದಲ್ಲಿ ಛಂದಸ್ಸು, ಅಲಂಕಾರ, ಯತಿ ಪದರಚನ ಮುಂತಾದವು ಸೇರಿರಬಹುದು ಆದರೆ ಅದರಲ್ಲಿ ಜಿನರ ಚರಿತ್ರೆಯಿಲ್ಲದಿದ್ದರೆ ಅದರಿಂದ ಭವ್ಯರಿಗೆ ಏನು ತಾನೇ ಪ್ರಯೋಜನ? ॥ ೧೦೮ ॥ ಆದುದರಿಂದ ಈ ಕಾವ್ಯದಲ್ಲಿ ಕಾವ್ಯಲಕ್ಷಣವಿಲ್ಲವಾದರೂ ಭವ್ಯಜನರು ಮನಶ್ಶುದ್ಧಿಯಿಂದ ಮೆಚ್ಚಿ ಕೇಳುವುದು ಅವರಿಗೆ ಮೋಕ್ಷವು ಕೈಸೇರುವುದು ॥ ೧೦೯ ॥ ನನ್ನ ಮನಸ್ಸಿನಲ್ಲಿ ಏನೂ ನೋವಿಲ್ಲ. ಆದರೆ ನನ್ನ ಕಾವ್ಯದಲ್ಲಿ ದೋಷಗಳನ್ನು ಭಾವಿಸಿದಾಗ ನೋವುಂಟಾಗುವುದು ಜಿನಚಾರಿತ್ರವನ್ನು ಹೇಳಿದವರ ಮೇಲೆ ನಾನಾವಿಧವಾದ ಅಭಿಪ್ರಾಯಗಳಿರುತ್ತವೆ ॥ ೧೧೦ ॥ ಈ ಕಾವ್ಯದಲ್ಲಿ ತುಂಬಾ ತಪ್ಪುಗಳಿವೆಯೆಂದೂ ಆದುದರಿಂದ ಇದು ಯೋಗ್ಯವಾದುದಲ್ಲವೆಂದೂ ಯಾರೂ ಹೇಳುವುದು ಬೇಡ ಚಿಪ್ಪಿನಲ್ಲಿ ಹುಟ್ಟಿದ ಮುತ್ತು ಮಹಾರಾಜರ ಕೊರಳನ್ನು ಸೇರಿ ಅಲ್ಲಿ ಸುಂದರವಾಗಿ ಕಾಣುವುದಿಲ್ಲವೆ? ॥ ೧೧೧ ॥ ಪ್ರತಿಯೊಂದು ಗಳಿಗೆಗೂ ಸಮಯವು ಮುಂದುವರಿಯುತ್ತಲೇ ಇದೆ ನನ್ನ ಮನಸ್ಸು ಒಳ್ಳೆಯ ಭಾವನೆಗಳಲ್ಲಿ ಸಮಯ ಕಳೆಯುತ್ತಿರುವುದರಿಂದ ಈ ಜಿನಕಥೆಯನ್ನು ವಿವರಿಸಿರುತ್ತೇನೆ. ಇದನ್ನು ಕೇಳಿ ॥ ೧೧೨ ॥ ಫಲವು ಒಳ್ಳೆಯದೆಂದು ಸತ್ಪುರುಷರು ಕೊಂಡಾಡಿದರೆ ಮಾತ್ರ ನನ್ನ

---

[1] ನೊರೆದೆ (ಕ), [2] ನೋವಿಲ್ಲದೆನ್ನ (ಗ. ಚ) [3] ಕೃತಿಯೊಳುದ್ಭಾವಿಸೆ (ಚ) [4] ಸಿಪ್ಪಿನೊ (ಚ) [5] ೧೧೧ ಈ ಪದ್ಯ ಗದ್ಯದಲ್ಲಿಲ್ಲ
[6] ರಾಜಸದೆ (ಚ) [7] ನಿತ್ತರಿಸರುಮದಱಿಂ (ಚ)

ನಡೆಯೊಳ್ಳಿತು ನುಡಿ ಲೇಸೆಂದು ಸುಜನರು । ಬಿಡದೆ ಕೊಂಡಾಡೆ ಸಫಲವ[1] ॥
ಪಡೆವುದಲ್ಲದೆ ಪರಿಕಿಪೊಡೆನ್ನಯ ನುಡಿ । ನಡೆಯೊಡಲಿದ್ದೇನು[2] ಫಲವು ॥ ೧೧೩ ॥

ಶಿರವನೊಲೆದು ಸಂತಸದೊಳೊಲಿದು ಭಾ । ಪುರೆ ಎಂದು ಸಕಲ ಕೋವಿದರು ॥
ಇರದೆ ಕೊಂಡಾಡಲೆನ್ನಯ ಕೃತಿ ಸಫಲತೆ[3] । ಧರಿಸುವುದಲ್ಲದೊಡಿಲ್ಲ ॥ ೧೧೪ ॥

ಬಲ್ಲವರೊಲಿದಾಲಿಸಿ ಕೇಳಿ ಕವಿತೆಯ । ಸೊಲ್ಲಿನೊಳೆಡರಿಲ್ಲವೆಂದು ॥
ಸೊಲ್ಲಿಸೆ ಬಳಿಕಲೆನ್ನಯ ಕೃತಿ ಜಗದೊಳ । ಗೆಲ್ಲಿಯೂ ಸಲುವುದಚ್ಚರಿಯೆ ॥ ೧೧೫ ॥

ತಿಂಗಳ ಬೆಳತಿಗೆವೆಳಗಿನೊಳಗೆ ನೋಡ । ಲಿಂಗಡಲೆಸೆವಂದದೊಳು ॥
ಇಂಗಿತಜ್ಞರು ಮಮಳರಿಸಲೀ ಕವಿತೆ ಬೆ । ಡಂಗುವಡೆದು ತೋಱದಿಹುದೇ ॥ ೧೧೬ ॥

ಅಂಗದ ಪೆಸರಿನಿಸಿಲ್ಲದನಂಗ ಲೋ । ಕಂಗಳ ಮೋಹಿಪನಂತೆ ॥
ಅಂಗವ ಪದಿನೆಂಟೊಳು[4] ಸತ್ಕಾವ್ಯ ಜ । ನಂಗಳ ಮೋಹಿಪುದರಿದೆ ॥ ೧೧೭ ॥

ನುಡಿ ನಡೆಯಿಂದ ಸಕಲರ ಮೆಚ್ಚಿಸಿ ಹಾ । ಳೊಡಲ ಹೊರೆವುದೋಸುಗರ[5] ॥
ತೊಡಗಿದುದಲ್ಲವೀ ಕೃತಿಯ ಸದ್ಗತಿಯನು । ಪಡೆಯಬೇಕೆಂದಾನೊರೆದೆ ॥ ೧೧೮ ॥

ಶಕ್ತಿಯಿಂದವೆ[6] ಪೇಳಿದುದಿಲ್ಲ ಕವಿತೆಯ । ಯುಕ್ತಿಯೆಳ್ಳನಿತೆನಗಿಲ್ಲ ॥
ಮುಕ್ತಿವಡೆದ ಪುರುಷರ ಚರಿತವ ಮನೋ । ಭಕ್ತಿಯಿಂದಾನು ಪೇಳಿದೆನು ॥ ೧೧೯ ॥

ದೇವರು ದೇವರೆನಿಪ ನಾಮಮಾತ್ರದ । ದೇವರ ಕಥೆಗಳಂತಲ್ಲ ॥
ಭಾವಜವಿಜಯ ಭವಾಂತಕ ದೇವರ । ದೇವನ ಕಥೆಯಿದಾ[7]ಲಿಪುದು ॥ ೧೨೦ ॥

---

ನಡೆನುಡಿಗಳು ಸಫಲವಾಗುವವು. ಅಲ್ಲವಾದರೆ ನನ್ನ ನಡೆನುಡಿಗಳೂ ದೇಹವೂ ಇದ್ದು ಪ್ರಯೋಜನವಿಲ್ಲ. ॥ ೧೧೩ ॥ ವಿದ್ವಾಂಸರಾದವರೆಲ್ಲರೂ ತಲೆತೂಗಿ ಸಂತೋಷದಿಂದ ಮೆಚ್ಚಿ ಭಾಪುರೇ ಎಂದು ಉದ್ಗಾರವೆತ್ತಿ ಕೊಂಡಾಡಿದರೆ ನನ್ನ ಕಾವ್ಯವು ಸಫಲವಾಗುವುದು; ಇಲ್ಲವಾದರೆ ಆಗದು. ॥ ೧೧೪ ॥ ನನ್ನ ಕಾವ್ಯವನ್ನು ವಿದ್ವಾಂಸರು ಪ್ರೀತಿಯಿಂದ ಕೇಳಿ, ಕವಿತೆಯಲ್ಲಿ ಕೊರತೆಯಿಲ್ಲವೆಂದು ಹೇಳಿದರೆ, ನನ್ನ ಕಾವ್ಯವು ಲೋಕದಲ್ಲಿ ಎಲ್ಲಿಯೂ ಮೆಚ್ಚಿಕೆಗೆ ಪಾತ್ರವಾಗುವುದರಲ್ಲಿ ಏನೂ ಆಶ್ಚರ್ಯವಿಲ್ಲ. ॥ ೧೧೫ ॥ ಕ್ಷೀರಸಮುದ್ರವು ಚಂದ್ರನ ಬೆಳ್ಳಗಾದ ಬೆಳಕಿನಲ್ಲಿ ಮತ್ತಷ್ಟು ಚೆಲುವಾಗಿ ಶೋಭಿಸುವಂತೆ ನನ್ನ ಕಾವ್ಯವನ್ನು ಸಹೃದಯ ವ್ಯಕ್ತಿಗಳು ಪ್ರೀತಿಸಿದರಾದರೆ, ಇದು ಸೌಂದರ್ಯವನ್ನು ತಾಳಿ ತೋರದಿರದು. ॥ ೧೧೬ ॥ ಹೆಸರಿಗೆ ಅಂಗಗಳಿಲ್ಲದ ಮನ್ಮಥನು ಲೋಕಗಳನ್ನು ಮೋಹಗೊಳಿಸುತ್ತಾನೆ. ಹೀಗಿರುವಾಗ ಹದಿನೆಂಟು ಅಂಗಗಳಿಂದ ಕೂಡಿದ ಸತ್ಕಾವ್ಯವು ಜನರನ್ನು ಮೋಹಗೊಳಿಸುವುದು ಅಸಾಧ್ಯವಲ್ಲ. ॥ ೧೧೭ ॥ ಮಾತಿನಿಂದಲೂ ನಡತೆಯಿಂದಲೂ ಎಲ್ಲರನ್ನು ಮೆಚ್ಚುಗೆಗೊಳಿಸಿ ಈ ಹಾಳಾದ ಒಡಲನ್ನು ತುಂಬುವುದಕ್ಕಾಗಿ ಈ ಕಾವ್ಯವನ್ನು ರಚಿಸಲು ನಾನು ತೊಡಗಿಲ್ಲ. ಸದ್ಗತಿಯನ್ನು ಪಡೆಯಬೇಕೆಂಬ ಉದ್ದೇಶದಿಂದ ಇದನ್ನು ಹೇಳಿರುತ್ತೇನೆ. ॥ ೧೧೮ ॥ ನಾನು ಇದನ್ನು ಶಕ್ತಿಯಿಂದ (ಪ್ರತಿಭೆಯಿಂದ) ಹೇಳಿರುವುದಿಲ್ಲ. ಕವಿತಾರಚನೆಯ ಯುಕ್ತಿಯೂ ನನ್ನಲ್ಲಿ ಎಳ್ಳಿನಷ್ಟು ಇಲ್ಲ. ಮೋಕ್ಷವನ್ನು ಪಡೆದ ಪುರುಷರ ಚರಿತ್ರವೆಂದು ನಾನು ಇದನ್ನು ಮನದ ಭಕ್ತಿಯಿಂದ ಹೇಳಿರುತ್ತೇನೆ.' ॥ ೧೧೯ ॥ ದೇವರು ದೇವರೆನ್ನುವ ಹೆಸರಿಗೆ ಮಾತ್ರ

---

[1] ಸತ್ಫಲವ (ಗ). [2] ನಡೆಯೊಳವಿದೇನು (ಗ). [3] ಸಫಲವ (ಗ ಚ) [4] ಪದಿನೆಂಟನುಳ್ಳ (ಗ ಚ). [5] ಹೋಕಿನ ಗೋಸುಗರ (ಗ)
[6] ಶಕ್ತಿಯಿಂದಲಿ (ಗ) [7] ಕಥೆಯ ಲಾಲಿಪುದು (ಗ)

ರಸವೊಂಬತ್ತಂಗ[1] ಪದಿನೆಂಟಲ್ಲದೆ । ಯೆಸೆವುದೆ ಕೃತಿ ಲೋಕದೊಳು ॥
ವಸನಾಭರಣವಿಲ್ಲದ ಪೆಣ್ಗಳು ಮೋ । ಹಿಸಬಲ್ಲರೆ ವಸುಧೆಯೊಳು ॥ ೧೨೧ ॥

ಕೋವಿದರುಗಳ ಹೃತ್ಕಮಲ ಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ॥
ಭಾವಕರುಗಳ ಸಂತಸಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೧೨೨ ॥

ದಶರಥಭೂಪನ ಸುತರಾಮಚಂದ್ರನ । ಶಶಿಮುಖಿ ಸತಿ ಸೀತೆಯನು ॥
ದಶಕಂಠ ಕೊಂಡು[2] ಲಂಕೆಗೆ ಪೋಗಲೊಡನಂ । ದಸಮ ಬಲವ ಕೂಡಿಕೊಂಡು ॥ ೧೨೩ ॥

ಕಡುಗೋಪದಿಂದ ಶ್ರೀರಾಮ ಲಕ್ಷ್ಮಣಗೂಡಿ । ನಡೆದು ಲಂಕೆಗೆ ರಾವಣನ ॥
ಒಡನೆ ಯುದ್ಧವ ಮಾಡಿ ಸಗ್ಗದ ಗಣಿಕೆಯ । ಕಡೆಗೆ ಕಳುಹಿಯಂತವನ[3] ॥ ೧೨೪ ॥

ಬಳಿಕ ವಿಭೀಷಣಗಾ ರಾಜ್ಯವನಿತ್ತು । ತಳರ್ದು ಸೀತಾದೇವಿವೆರಸು ॥
ತಳುವದೆ ತನ್ನ ಪೊಳಲ ಬಂದು ಪೊಕ್ಕ[4]ನಂ । ದಿಳೆ ಬಾಯಗೂಡಿ ಬಣ್ಣಿಸಲು ॥ ೧೨೫ ॥

ಆ ಜಗನ್ಮಾತೆ ಜಾನಕಿಗೂಡಿ ಸುಖದೊಳು[5] । ರಾಜಶೇಖರನಿರುತಿರ್ದು ॥
ಓಜೆಯಿಂ ರಾಜ್ಯವನಾಳುತಲಿರೆ ರವಿ । ತೇಜಸನ್ನಿಭ ಸುತರವಗೆ ॥ ೧೨೬ ॥

ಪುಟ್ಟಲಂದವರೊಳು[6] ಕಿರಿಯ ಕುಮಾರಗೆ । ಕಟ್ಟಿ ಸಾಮ್ರಾಜ್ಯಪಟ್ಟವನು ॥
ಬಿಟ್ಟು ಭೋಗೋಪಭೋಗವ ಜಿನದೀಕ್ಷೆಯ । ನೆಟ್ಟನೆ ತಳೆದು ಬಳಿಯೊಳು ॥ ೧೨೭ ॥

---

ರೆನಿಸುವ ದೇವರ ಕಥೆಗಳ ಹಾಗಲ್ಲ ಇದು ಮನ್ಮಥನನ್ನು ಜಯಿಸಿದ, ಪುನರ್ಜನ್ಮಗಳನ್ನು ನಾಶಮಾಡಿದ ದೇವರ ದೇವನ ಕಥೆ ಇದನ್ನು ಕೇಳಿ. ॥ ೧೨೦ ॥ ಕಾವ್ಯವು ಲೋಕದಲ್ಲಿ ಶೋಭಿಸಬೇಕಾದರೆ ಅದರಲ್ಲಿ ಒಂಬತ್ತು ರಸಗಳೂ ಹದಿನೆಂಟು ಕಾವ್ಯಾಂಗಗಳೂ ಇರಬೇಕು ಅವಿಲ್ಲವಾದರೆ ಕಾವ್ಯವು ಶೋಭಿಸದು ಲೋಕದಲ್ಲಿ ಹೆಂಗುಸರು ವಸ್ತ್ರ ಆಭರಣಗಳಿಲ್ಲದೆ ಮೋಹಿಸಬಲ್ಲರೆ? ॥ ೧೨೧ ॥ ವಿದ್ವಾಂಸರ ಹೃದಯಕಮಲಕ್ಕೆ ಸೂರ್ಯನಂತಿರುವವನೂ ಸರಸ್ವತೀದೇವಿಯ ಮುಖಕ್ಕೆ ರತ್ನದ ಕನ್ನಡಿಯಂತಿರುವವನೂ ಭಾವನಾತ್ಮಕರ ಸಂತೋಷಕ್ಕೆ ಸಮುದ್ರದಂತಿರುವವನೂ ಗೆಳೆಯನೂ ಆದ ದೇವಪ್ಪನು ರಚಿಸಿದ ಸತ್ಕಾವ್ಯವಿದು. ॥ ೧೨೨ ॥ ಈ ಕಾವ್ಯದ ಕಥಾಮೂಲ ಹೀಗಿದೆ—ದಶರಥರಾಜನ ಮಗನಾದ ರಾಮಚಂದ್ರನ ಮಡದಿಯಾದ ಸೀತೆಯನ್ನು ದಶಕಂಠನು ಲಂಕೆಗೆ ಒಯ್ದುಕೊಂಡು ಹೋಗಲು ಶ್ರೀರಾಮನು ವಿಶೇಷವಾದ ಸೈನ್ಯವನ್ನು ಕೂಡಿಕೊಂಡನು ॥ ೧೨೩ ॥ ಶ್ರೀರಾಮನು ಬಹಳ ಸಿಟ್ಟನ್ನು ತಾಳಿ ಲಕ್ಷ್ಮಣ ಸಹಿತನಾಗಿ ಲಂಕೆಗೆ ಹೋಗಿ ರಾವಣನೊಡನೆ ಯುದ್ಧಮಾಡಿ, ಆತನನ್ನು ಸ್ವರ್ಗಕ್ಕೆ ಕಳುಹಿದನು. ॥ ೧೨೪ ॥ ಆ ರಾವಣನನ್ನು ವಧಿಸಿದನಂತರ ಲಂಕಾರಾಜ್ಯವನ್ನು ವಿಭೀಷಣನಿಗೆ ಕೊಟ್ಟು, ಸೀತಾಸಮೇತನಾಗಿ ಲಂಕೆಯಿಂದ ಹೊರಟು, ತಡವಿಲ್ಲದೆ ಬಂದು ತನ್ನ ಅಯೋಧ್ಯಾಪಟ್ಟಣವನ್ನು ಪ್ರವೇಶಿಸಿದನು ಆಗ ಲೋಕವೆಲ್ಲವೂ ಇದನ್ನು ವರ್ಣನೆಮಾಡಿತು. ॥ ೧೨೫ ॥ ಆ ಲೋಕಮಾತೆಯಾದ ಸೀತೆಯೊಡನೆ ರಾಜರಿಗೆ ಶಿಖರಪ್ರಾಯನಾದ ರಾಮನು ಸುಖದಿಂದ ಇದ್ದುಕೊಂಡು ರಾಜ್ಯಭಾರಮಾಡುತ್ತಿದ್ದಾಗ ಅವನಿಗೆ ಸೂರ್ಯನಂತೆ ತೇಜಸ್ವಿಗಳಾದ ಮಕ್ಕಳಾದರು. ॥ ೧೨೬ ॥ ರಾಮನು ತನಗೆ ಜನಿಸಿದ ಮಕ್ಕಳಲ್ಲಿ ಕಿರಿಯ ಮಗನಿಗೆ ಸಾಮ್ರಾಜ್ಯದ ಅಧಿಕಾರವನ್ನು ಕೊಟ್ಟು, ಪ್ರಾಪಂಚಿಕ ಸುಖಗಳೆಲ್ಲವನ್ನೂ ತ್ಯಜಿಸಿ ಜೈನಧರ್ಮದೀಕ್ಷೆಯನ್ನು ವಹಿಸಿದನು ॥ ೧೨೭ ॥ ಆ ಮೇಲೆ

---

[1] ರಸವಂಗ ಭಂಗಗ (ಗ) [2] ಕಂಡು (ಗ) [3] ಕಳುಹಿಯಂದವನ (ಗ ಚ) [4] ಪೊಕ್ಕನು ತನ್ನ ಪೊಳಲ (ಗ ಚ) [5] ಸುಖದೊಳಾ (ಗ ಚ) [6] ಪುಟ್ಟಲಮ್ಮರೊಳು (ಗ) ಪುಟ್ಟಲಮ್ಮದರೊಳು (ಚ)

ಲೀಲೆಯಿಂದೊಲಿದುಗ್ರ ತಪವ ನೆಗಳಿ[1] ಬಲು । ಕಾಲವ[2] ಸಕಲ ಕರ್ಮಗಳ ॥
ಮೂಲವ ಕೆಡಿಸಿದುತ್ತಮ ನಾಯಕ ಕಥಾ[3] । ಮೂಲವಿದನು ನಾನೀಗ ॥ ೧೨೮ ॥

ರಸದಿಂದ[4] ಪುಟ್ಟಿಸಿ ಭಾವದಿಂ ಬಳೆಯಿಸಿ । ಎಸೆವಲಂಕೃತಿಯಿಂದ ಪೂರಿದು ॥
ವಸುಧೆಗತ್ಯಧಿಕವೆನಿಸಿ ಪೇಳಿದೆನಿದ । ರಸಿಕರೊಲಿದು ಲಾಲಿಪುದು ॥ ೧೨೯ ॥

ಮಗಧ ದೇಶದ ಮಧ್ಯದೊಳು ರಾಜಗೃಹವೆಂಬ । ನಗರಿಯನಾಳ್ವ ಶ್ರೇಣಿಕನು ॥
ಮೃಗನೇತ್ರೆ ಚೇಳಿನಿಗೂಡಿ ಕಳಿಯೆ ಪಲ । ವಗಲ ನೊಂದಾನೊಂದು ದಿವಸ ॥ ೧೩೦ ॥

ಮಂಡಳಿಕರ ಮಂತ್ರಿಗಳ ಮನ್ನೆಯರ ಬಲು । ದಂಡನಾಥರ ಕರಣಿಕರ ॥
ಮಂಡಳಿಯಿಂದ ಮನೋಹರ[5]ಮಾದುದಾ । ಮಂಡಲೇಶ್ವರನಾಸ್ಥಾನ ॥ ೧೩೧ ॥

ರಾಯಬಾರಿಗಳಿಂದ ರಾಯಸದವರಿಂದ । ಗಾಯಕ ಗಮಕಿಗಳಿಂದ ॥
ನಾಯಕ ವಾಯಕರಿಂದಾ[6] ಸ್ಥಾನ ವಿ । ಡಾಯವಡೆದುದೇನೆಂಬೆ ॥ ೧೩೨ ॥

ಉಲಿವ ವಂದಿಗಳಿಂದೋದುವ ಪಾರಕರಿಂದ । ನೆಲನನುಗ್ಗಡಿಸುವರಿಂದ ॥
ಬಲಯುತರಿಂದ ರಂಜಿಸಿದುದಂದಾ ಭೂ । ಲಲನೇಶನೋಲಗಶಾಲೆ ॥ ೧೩೩ ॥

ಇರಲಿಂತೋಲಗದೊಳಗಲ್ಲಿಗೆ ಜಾತಿ । ತುರಗವನೋರ್ವ ವಾಹಕನು ॥
ಹರುಷದಿಂ[7] ತಂದಿದ ಪರಿಕಿಪೊಡೇಳು ಭೂ । ವರ ವೈಹಾಳಿಯ ನೆಲಕೆ ॥ ೧೩೪ ॥

---

ರಾಮನು ಬಹುಕಾಲ ಘೋರವಾದ ತಪಸ್ಸನ್ನು ಆಚರಿಸಿ ಎಲ್ಲಾ ಕರ್ಮಗಳ ಬೇರನ್ನೂ ಕೆಡಿಸಿದನು. ಅಂತಹ ಉತ್ತಮನಾದ ನಾಯಕನ ಕಥಾಮೂಲವಿದು. ಇದನ್ನು ನಾನೀಗ ಕಾವ್ಯವಾಗಿ ರಚಿಸಿರುತ್ತೇನೆ. ॥ ೧೨೮ ॥ ಈ ಕಾವ್ಯವಸ್ತುವನ್ನು ನಾನು ರಸದಿಂದ ಹುಟ್ಟಿಸಿ, ಭಾವದಿಂದ ವೃದ್ಧಿಗೊಳಿಸಿ, ಅಲಂಕಾರದಿಂದ ತುಂಬಿ, ಲೋಕಕ್ಕೆ ಅತಿ ಶ್ರೇಷ್ಠವೆನಿಸುವಂತೆ ಹೇಳಿರುತ್ತೇನೆ. ಇದನ್ನು ರಸಿಕರು ಪ್ರೀತಿಯಿಂದ ಕೇಳಬೇಕು. ॥ ೧೨೯ ॥ ಮಗಧದೇಶದ ನಡುವೆ ರಾಜಗೃಹ ಎಂಬ ನಗರವಿದೆ. ಅದನ್ನು ಶ್ರೇಣಿಕನೆಂಬ ರಾಜನು ಆಳುತ್ತಿದ್ದನು. ಅವನು ಮಡದಿಯಾದ ಚೇಳಿನಿಯೊಡನೆ ಹಲವು ಕಾಲ ಕಳೆಯಲು, ಒಂದುದಿನ ಆಸ್ಥಾನದಲ್ಲಿದ್ದನು. ॥ ೧೩೦ ॥ ಶ್ರೇಣಿಕ ಮಹಾರಾಜನ ಆಸ್ಥಾನವು ಸಾಮಂತರ, ಮಂತ್ರಿಗಳ, ಜನನಾಯಕರ, ಸೇನಾಪತಿಗಳ, ಬರವಣಿಗೆಯವರ ಸಮೂಹದಿಂದ ಮನೋಹರವಾಗಿದ್ದಿತು ॥ ೧೩೧ ॥ ಆ ರಾಜಾಸ್ಥಾನವು ರಾಜದೂತರಿಂದಲೂ ರಾಜಕಾರ್ಯವಾಹಕರಿಂದಲೂ ಹಾಡುಗಾರರಿಂದಲೂ ಕಾವ್ಯವಾಚನಕಾರರಿಂದಲೂ ಮುಖಂಡರಿಂದಲೂ ಕಾಲುದಳದವರಿಂದಲೂ ಬಹಳ ಸಂಭ್ರಮವನ್ನು ತಾಳಿದ್ದಿತು. ಅದನ್ನು ನಾನೇನೆನ್ನಲಿ! ॥ ೧೩೨ ॥ ಆ ರಾಜನ ಓಲಗಶಾಲೆಯು ಹೊಗಳುವ ವಂದಿಗಳಿಂದಲೂ ಓದುವ ಪಾಠಕರಿಂದಲೂ ಹಾದಿಯನ್ನು ಉಗ್ಗಡಿಸಿ ಹೇಳುವವರಿಂದಲೂ ಬಲಶಾಲಿಗಳಿಂದಲೂ ಶೋಭಿಸಿತು. ॥ ೧೩೩ ॥ ಶ್ರೇಣಿಕನು ಹೀಗೆ ಒಡ್ಡೋಲಗದಲ್ಲಿದ್ದಾಗ ಒಬ್ಬ ಸವಾರನು ಉತ್ತಮ ಜಾತಿಯ ಒಂದು ಕುದುರೆಯನ್ನು ತಂದು ''ಎಲೇ ರಾಜನೇ ಇದನ್ನು ಪರೀಕ್ಷಿಸುವುದಾದರೆ ಈಗಲೇ ಕುದುರೆಪಂದ್ಯದ ಬಯಲಿಗೆ ಹೋಗಲು ಹೊರಡು'' ಎಂದನು ॥ ೧೩೪ ॥ ಆ ಮಾತನ್ನು ಕೇಳಿದ ರಾಜನು ವೈಹಾಳಿಯ ಬಯಲಿಗೆ ಬಂದು,

---

[1] ನೆಸಗಿ (ಗ. ಚ). [2] ಕಾಲನಾ (ಕ) ಕಾಲನ (ಗ). [3] ಕಟ್ಟಾ (ಗ) [4] × (ಗ ಚ.). [5] ಕಣ್ಗೆಡ್ಡ (ಚ). [6] ಪಾಲಕರಿಂದಾ (ಚ) ಗಾಯಕರಿಂದಾ (ಗ) [7] ಪರಿಸದಿಂ (ಚ)

ಆ ನುಡಿಗೇಳಿ ವೈಹಾಳಿಯು ಬಯಲಿಗಂ । ದಾ ನರನಾಥನೇಳ್ತಂದು ॥
ಮಾನಿತವಾದ ತುರಗವನೀಕ್ಷಿಸುತಿರ । ಲಾ ನರನಾಥನಂದಲ್ಲಿ ॥ ೧೩೫ ॥

ಸುರಗಿ ಸಂಪಗೆ ಸುರಹೊನ್ನೆ ಬಕುಲ ಪಾ । ದರಿ ಪದ್ಮ ವೊಲ್ಲೆ ಮಲ್ಲಿಗೆಯ ॥
ಬಿರಿಮುಗುಳ್ಗಳ ಪೊಟ್ಟಣವ ತಂದು ವನಪಾಲ । ನರನಾಥಗಿತ್ತನಲ್ಲಿಯೊಳು ॥ ೧೩೬ ॥

ಮಾವು ಮಾದಲ ಅರನೇಱಿಲು ಮೊದಲಾದ । ಪಾವನ ಪಕ್ವಫಲವನು ॥
ಆ ವಿಭುಗಿತ್ತು ಧರಣಿಗೆ ಬಿಳ್ದೆಳ್ದಿಲೆ । ದೇವ ಬಿನ್ನಪ ನಮ್ಮ ವನದ ॥ ೧೩೭ ॥

ಕೆಲದೊಳು ರಾರಾಜಿಸುತಿರ್ಪ ವಿಮಲಾ । ಚಲದೊಳು ವೀರ ಜಿನಪನ ॥
ವಿಲಸಿತ ಸಮವಸರಣ ಬಂದಿದೆ[1] ಭೂ । ಲಲನೇಶ ನೋಡ ಚಿತ್ತೈಸು ॥ ೧೩೮ ॥

ಹರಿ ಕರಿ ಪುಲಿ ಪುಲ್ಲೆ ಶಿಖಿ ಸರ್ಪಗಳು ತ । ಮ್ಮುರುತರ ವೈರವನುಳಿದು ॥
ಅರಸ ಚಿತ್ರದೊಳು ಬರೆದ ತೆಱದಂತಿವೆ । ಪರಮನ ಶಾಂತವಿನ್ನೆಂತೋ ॥ ೧೩೯ ॥

ಆ ನುಡಿಗೇಳುತಿಳಿದು ತೇಜಿಯನಂ । ದಾ ನರನಾಥನೇಳ್ತಂದು[2]
ಮಾನಿತ ಸಮವಸರಣವಿರ್ದ ತಾಣಕಾ[3] । ಮಾನನಿಧಾನನೈತಂದು ॥ ೧೪೦ ॥

ಕಾಣುತ ಪರಮನ ಬಲವಂದೊಯ್ಯನೆ । ಮಾಣದೆ ಮಣಿದು ಮಸ್ತಕವ ॥
ಕ್ಷೋಣೀಶ್ವರ ಸ್ತುತಿಸಿದನಂದಾ ಪಂಚ । ಬಾಣವಿಜಯನನಿಂತೆಂದು ॥ ೧೪೧ ॥

ಜಯ ಜಯ[4] ಮನ್ಮಥ ಜಯಕಾಲಾಂತಕ । ಜಯ ಭವಹರ ಸುರವಂದ್ಯ ॥
ಜಯ ಮೋಹಮಲ್ಲಮದಾಪಹರಣ ಜಯ । ಜಯ ಎಂದು ಸ್ತುತಿಸಿದನವನು ॥ ೧೪೨ ॥

---

ತನಗೆ ಬಹುಮಾನಿತವಾಗಿ ಬಂದ ಆ ಕುದುರೆಯನ್ನು ನೋಡುತ್ತಿದ್ದನು. ॥ ೧೩೫ ॥ ಆಗ ವನಪಾಲಕನು ಬಂದು—ಸುರಗಿ, ಸಂಪಗೆ, ಸುರಹೊನ್ನೆ, ಬಕುಳ, ಪಾದರಿ, ತಾವರೆ, ಕುಂದ, ಮಲ್ಲಿಗೆ ಮುಂತಾದ ಹೂಗಳ ಬಿರಿಮುಗುಳುಗಳ ಪೊಟ್ಟಣವನ್ನು ರಾಜನಿಗೆ ಕಾಣಿಕೆಯಿತ್ತನು ॥ ೧೩೬ ॥ ಆ ವನಪಾಲಕನು ಮಾವು, ಮಾದಳೆ, ಅರನೇರಳೆ—ಮೊದಲಾದ ಪವಿತ್ರವಾದ ಹಣ್ಣುಗಳನ್ನು ಶ್ರೇಣಿಕನಿಗೆ ಕೊಟ್ಟು, ಸಾಷ್ಟಾಂಗ ನಮಸ್ಕಾರಮಾಡಿ, ಹೀಗೆಂದನು—''ಎಲೇ ದೇವ, ವಿಜ್ಞಾಪನೆಗಳು. ನಮ್ಮ ಈ ಉದ್ಯಾನದ ॥ ೧೩೭ ॥ ಸಮೀಪದಲ್ಲೇ ಶೋಭಿಸುತ್ತಿರುವ ವಿಮಲಾಚಲದಲ್ಲಿ ವೀರ ಜಿನೇಶ್ವರನ ಧರ್ಮಸಭೆಯ ಮಂಟಪವು ಬಂದಿರುತ್ತದೆ ಅದನ್ನು ನೋಡುವುದಕ್ಕಾಗಿ ನೀನು ಹೋಗಬೇಕಾಗಿದೆ. ॥ ೧೩೮ ॥ ಎಲೇ ಅರಸನೇ, ಆ ವೀರ ಜಿನೇಶನ ಸನ್ನಿಧಿಯಲ್ಲಿ ಸಿಂಹ-ಆನೆ, ಹುಲಿ-ಜಿಂಕೆ, ನವಿಲು-ಹಾವು—ಇವೆಲ್ಲ ತಮ್ಮ ಜಾತಿವೈರವನ್ನು ಬಿಟ್ಟು, ಚಿತ್ರದಲ್ಲಿ ಬರೆದಂತೆ ಇವೆ. ಆ ಪರಮ ಜಿನೇಶನ ಶಾಂತತೆ ಎಷ್ಟೊಂದು ಹಿರಿದಾದುದೋ ಹೇಳಲು ಸಾಧ್ಯವಿಲ್ಲ. ॥ ೧೩೯ ॥ ವನಪಾಲಕನ ಮಾತನ್ನು ಕೇಳಿ ಶ್ರೇಣಿಕರಾಜನು ಕುದುರೆಯಿಂದಿಳಿದು ಗೌರವಿಸಲ್ಪಟ್ಟ ಸಮವಸರಣವಿದ್ದ ಸ್ಥಳಕ್ಕೆ ಬಂದನು ॥ ೧೪೦ ॥ ರಾಜನು ಜಿನೇಶನನ್ನು ಕಂಡೊಡನೆ ಪ್ರದಕ್ಷಿಣಾ ನಮಸ್ಕಾರಗಳನ್ನು ಮಾಡಿ, ಆ ಮನ್ಮಥನನ್ನು ಜಯಿಸಿದ ಮಹಾತ್ಮನನ್ನು ಹೀಗೆ ಸ್ತುತಿಸಿದನು. ॥ ೧೪೧ ॥ ಎಲೇ ಮನ್ಮಥಸ್ವರೂಪನೇ ಮೃತ್ಯುವನ್ನು ಸಂಹರಿಸಿದವನೇ ಪುನರ್ಜನ್ಮವನ್ನು ನಾಶಮಾಡಿದವನೇ ದೇವತೆಗಳಿಂದ ನಮಸ್ಕರಿಸಲ್ಪಡುವವನೇ ಮನ್ಮಥನ ಗರ್ವವನ್ನು ಸೆಳೆದವನೇ ಜಯ ಜಯ ಎಂದು ಆ

---

[1] ಬಂದದೆ (ಚ) [2] ನರ್ಧಿಯೊಳು (ಗ ಚ) [3] ತಾಣಕೆ (ಗ. ಚ) [4] ಜಯಜಿತ (ಗ ಚ)

ಬಳಿಕೊಯ್ಯನೆ ಗೌತಮಗಣಧರರಂಘ್ರಿ । ನಳಿನಕೆಱಗಲಾ ಮುನಿಪ ॥
ತಳುವದೆ ಪರಸಲು[1] ನೃಪನುಚಿತಾಸನ । ದೊಳಗೆ ಕುಳ್ಳಿರ್ದು ಬಳಿಯೊಳು ॥ ೧೪೩ ॥

ಕರವೆರಡನು ನಿಟಿಲಕೆ ಚಾಚಿ ಯೆಲೆ ಮುನಿ । ವರ ಧರ್ಮಕಥೆಯೊಂದನೆನಗೆ ॥
ನಿರವಿಸೆನಲು ಮುನಿ ಪೇಳಲಾ ನೃಪ ಕೇ । ಳ್ದುರುಸಂತಸವನೈದಿದನು ॥ ೧೪೪ ॥

ತದನಂತರ ಗಣಧರರ ಬೀಳ್ಕೊಂಡಾ । ಮದನಾರಿಗೆಱಗಿ ಲೀಲೆಯೊಳು ॥
ಮುದದಿಂದ ಬಂದು ಪೊಳಲ ಪೊಕ್ಕನಭಿನವ । ಮದನ ಶ್ರೇಣಿಕನೃಪವರನು ॥ ೧೪೫ ॥

ಕಳುಪಿದ ತನ್ನೊಡವಂದರ ಮಕ್ಕಳ । ಕಳುಪಿದ ನಳಿಯಂದಿರುಗಳ[2] ॥
ಕಳುಪಿದ[3] ಸಕಲ ಬಲವನು ಪೊಕ್ಕನು ತನ್ನ । ನಿಳಯುವನಾ ರಾಜೇಂದ್ರ ॥ ೧೪೬ ॥

ಸ್ನಾನ ಭೋಜನದಿಂದನುಲೇಪನದಿಂದ । ತಾನುಪಚರಿಸಿ ಪತಿಯನು ॥
ಮಾನಿನಿ ಬೆಸಗೊಂಡಳಿನಿತು ಪೊಳ್ತೇಕೆಂ । ದಾ ನರನಾಥ ಚಂದ್ರಮನ ॥ ೧೪೭ ॥

ಇಳಲೆ ಕೇಳಿಂದಿನುದಯದೊಳೊಲಿದು ವೈ । ಹಳಿಗೈದಿ ಬಪ್ಪ ವೇಳೆಯೊಳು ॥
ತಳುವದೆ ವನಪಾಲ ಸಮವಸರಣ ಬಂ । ದೆಳಸಿತೆಂದೊರೆದನೆನ್ನೊಡನೆ ॥ ೧೪೮ ॥

ಅಲ್ಲಿಗೆ ಪೋಗಿ ಶ್ರೀ ವೀರಜಿನರ ಪಾದ । ಪಲ್ಲವಗಳ ಪೂಜೆಮಾಡಿ ॥
ನಿಲ್ಲದೆ ಮಣಿದು ಗೌತಮಗಣಧರರ್ಗೆಳೆ । ಹುಲ್ಲೆ[4]ಗಣ್ಣಬಲೆ ಬಳಿಯೊಳು ॥ ೧೪೯ ॥

ಇನಿಯ್ಯಳೆ[5] ನಾವೀರ್ವರು ಪಿಂದೆ ಕೇಳ್ದೀ । ಳನೆಯ ಕೇಶವರ ಕಥೆಯನು ॥
ಮುನಿನಾಥನುಳಿದುಸುರಿದನಿಂದೆನ್ನೊಡನೆಂ । ಟನೆಯ ಕೇಶವರ ಕಥೆಯನು ॥ ೧೫೦ ॥

---

ಶ್ರೇಣಿಕನು ಸ್ತುತಿಸಿದನು. ॥ ೧೪೨ ॥ ಆ ಮೇಲೆ ಮೆಲ್ಲನೆ ಗೌತಮಗಣಧರರ ಪಾದಕಮಲಕ್ಕೆ ನಮಸ್ಕರಿಸಲು ಆ ಮುನೀಶನು ಒಡನೆ ಆಶೀರ್ವಾದ ಮಾಡಿದನು. ರಾಜನು ಉಚಿತವೆನಿಸುವ ಪೀಠದಲ್ಲಿ ಕುಳಿತನು. ಆಮೇಲೆ ॥ ೧೪೩ ॥ ಎರಡೂ ಕೈಗಳನ್ನು ಹಣೆಗೆ ಚಾಚಿ ''ಎಲೆ ಮುನಿಶ್ರೇಷ್ಠನೆ ನನಗೆ ಒಂದು ಧರ್ಮಕಥೆಯನ್ನು ಹೇಳುವವನಾಗು'' ಎನ್ನಲು ಆ ಮುನಿಯು ಧರ್ಮಕಥೆಯನ್ನು ಹೇಳಿದನು. ಇದನ್ನು ರಾಜನು ಕೇಳಿ ಬಹಳ ಸಂತೋಷವನ್ನು ತಾಳಿದನು. ॥ ೧೪೪ ॥ ನವೀನ ಮನ್ಮಥನೆನಿಸಿದ ಶ್ರೇಣಿಕನು ಆಮೇಲೆ ಗಣಧರರನ್ನು ಬೀಳ್ಕೊಂಡು ಜಿನೇಶ್ವರನಿಗೆ ನಮಸ್ಕರಿಸಿ, ಸಂತೋಷದಿಂದ ಬಂದು ತನ್ನ ಪಟ್ಟಣವನ್ನು ಪ್ರವೇಶಿಸಿದನು. ॥ ೧೪೫ ॥ ಆ ಶ್ರೇಣಿಕರಾಜನು ತನ್ನೊಡನೆ ಬಂದ ರಾಜಕುಮಾರರನ್ನೂ ಅಳಿಯಂದಿರನ್ನೂ ಎಲ್ಲ ಸೈನ್ಯವನ್ನೂ ಕಳುಹಿಸಿ ತನ್ನ ಅರಮನೆಯನ್ನು ಹೊಕ್ಕನು. ॥ ೧೪೬ ॥ ಶ್ರೇಣಿಕನ ಅರಸಿಯಾದ ಚೇಳಿನಿಯು ಸ್ನಾನ, ಭೋಜನ, ಅನುಲೇಪನಗಳಿಂದ ತನ್ನ ಗಂಡನನ್ನು ಉಪಚರಿಸಿ ''ಇಷ್ಟು ಹೊತ್ತೇಕಾಯಿತು?'' ಎಂದು ರಾಜನನ್ನು ಕೇಳಿದಳು. ॥ ೧೪೭ ॥ ಎಲೈ ಮಡದಿಯೆ, ಇಂದು ಬೆಳಗ್ಗೆ ನಾನು ಪ್ರೀತಿಯಿಂದ ಕುದುರೆಗಳ ಓಟದ ಪ್ರದರ್ಶನಸ್ಥಳಕ್ಕೆ ಹೋಗಿ ಬರುವ ವೇಳೆಗೆ ವನಪಾಲನು ಬಂದು ವೀರಜಿನೇಶನ ಧರ್ಮಸಭೆ ಬಂದಿರುವ ಸಂಗತಿಯನ್ನು ಕೂಡಲೆ ತಿಳಿಸಿದನು. ॥ ೧೪೮ ॥ ಎಲೇ ಮೃಗಾಕ್ಷಿ, ನಾನು ಅಲ್ಲಿಗೆ ಹೋಗಿ ಶ್ರೀ ವೀರಜಿನೇಶ್ವರರ ಪಾದಕ್ಕೆ ಪೂಜೆಮಾಡಿ, ಆಮೇಲೆ ಗೌತಮಗಣಧರರಿಗೆ ನಮಸ್ಕರಿಸಿದೆನು. ಆ ಮೇಲೆ ॥ ೧೪೯ ॥ ಎಲೈ ಪ್ರಿಯೆ, ಹಿಂದೆ ನಾವಿಬ್ಬರೂ ಕೇಳಿದ ಏಳನೆಯ ಕೇಶವರ ಕಥೆಯನ್ನು ಬಿಟ್ಟು

---

[1] ಪರಸಲಾ (ಚ)　[2] ನಳ್ಳಿಪಂದಿಗಳ (ಗ ಚ)　[3] × (ಚ).　[4] ಚಲ್ಲೆ (ಗ) ಚಲ್ಲ (ಚ)　[5] ಇನೆಯಳೆ (ಕ ಚ)

ಆ ಕಥೆ ಯಾವುದದಱ ವೃತ್ತಾಂತವ । ನೇಕಚಿತ್ತದೊಳು ನೀವೆನಗೆ[1] ॥
ಜೋಕೆದಪ್ಪದೆ ಪೇಳಿಮೆನೆ[2] ಪೇಳಿದನಾ । ಕೋಕಿಲಾಲಾಪೆಗಿಂತೆಂದು ॥ ೧೫೧ ॥

ವೃತ್ತ-ನಿಬಿಡ-ಘನ-ಕುಚೆ ಕುವಲಯನೇತ್ರೆ । ಮತ್ತ ಮತಂಗಜಗಮನೆ[3] ॥
ಬಿತ್ತರಿಸುವೆನಾ ಕಥೆಯ ನೀನದನೇಕ । ಚಿತ್ತದೊಳಗೆ ಲಾಲಿಪುದು ॥ ೧೫೨ ॥

ಬಲ್ಲವರೆದೆಯ[4] ಭಾವಕರ ಚಿತ್ತವ ನವ । ಪಲ್ಲವಾಧರೆಯರ ಮನವ ॥
ನಿಲ್ಲದೆ ಸೋಲಿಸುತಿವೆ ನೀಱ ನಿನ್ನಯ । ಸೊಲ್ಲುಗಳಿಂಪು ನಿನ್ನಾಣೆ ॥ ೧೫೩ ॥

ಇನಿಯನೆ ಸವಿ ನಿನ್ನ ನುಡಿಯಾ ನುಡಿಯೊಳು । ಜಿನಕಥೆ ಸೇರಿದೊಡದಱ ॥
ಇನಿದ[5]ನಂತಿಂತೆಂದು ಪೇಳ್ವೊಡೆ ನಾಲಗೆ । ಗೊನೆಗೆ ಬಂದಪುದೆ ಮಾನವರ ॥ ೧೫೪ ॥

ಎಂದು ನುಡಿದ ಚೇಳಿನಿದೇವಿಯ ವದ । ನೇಂದುವ ನೋಡಿ ಶ್ರೇಣಿಕನು ॥
ಅಂದಾ ಶ್ರೀರಾಮಚಂದ್ರನ ಕಥೆಯ ನಿಂ । ತೆಂದು ಪೇಳಿದನು ರಾಗದೊಳು ॥ ೧೫೫ ॥

ಇದು ಸರಸತಿಯಂಗಭೂಷಣ ಕೇಳ್ವರ[6] । ಹೃದಯಕಮಲ ದಿವಸೇಂದ್ರ ॥
ಇದು ರಸಿಕರ ಕಿವಿಗಮೃತರಸಾಯನ । ಇದು ಭವ್ಯಕುಮುದ ಚಂದ್ರಮನು ॥ ೧೫೬ ॥

ಕೋವಿದರುಗಳ ಹೃತ್ಕಮಲ ಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ॥
ಭಾವಕರುಗಳ ಸಂತಸಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೧೫೭ ॥

---

ಆ ಗೌತಮಗಣಧರ ಮುನಿನಾಥನು ನನಗೆ ಎಂಟನೆಯ ಕೇಶವರ ಕಥೆಯನ್ನು ಹೇಳಿದನು ॥ ೧೫೦ ॥ ಆಗ ಚೇಳಿನಿಯು ಶ್ರೇಣಿಕನೊಡನೆ—''ಆ ಕಥೆ ಯಾವುದು? ಮತ್ತು ಅದರ ಸಂಗತಿಯೇನು? ಎಂಬುದನ್ನು ನೀವು ಏಕಮನಸ್ಸಿನಿಂದ ತನ್ಮಯತೆಯಿಂದ ತಿಳಿಸಿ'' ಎಂದು ಹೇಳಿದಳು ಆಗ ಅವನು ಆಕೆಗೆ ಹೀಗೆಂದನು. ॥ ೧೫೧ ॥ ''ಆಕರ್ಷಕವಾದ ಪಯೋಧರವುಳ್ಳ, ನೈದಿಲೆಯಂತಹ ಕಣ್ಣುಗಳುಳ್ಳ, ಮದಗಜದಂತಹ ನಡಿಗೆಯುಳ್ಳ ಮಡದಿಯೇ, ನಿನಗೆ ಆ ಕಥೆಯನ್ನು ವಿಸ್ತಾರವಾಗಿ ತಿಳಿಸುವೆನು ನೀನು ಒಂದೇ ಮನಸ್ಸಿನಿಂದ ಕೇಳು'' ಎಂದು ಹೇಳಿದನು ॥ ೧೫೨ ॥ ಚೇಳಿನಿಯು ಶ್ರೇಣಿಕನೊಡನೆ ಹೀಗೆಂದಳು—''ಎಲ್ಲೈ ಸುಂದರನೆ, ನಿನ್ನ ಮಾತುಗಳು ಇಂಪಾಗಿದ್ದು, ನಿನ್ನಾಣೆಯಾಗಿಯೂ ಆ ಇಂಪು ವಿದ್ವಾಂಸರ ಹೃದಯವನ್ನೂ ಭಾವುಕರ ಮನಸ್ಸನ್ನೂ ನವಯುವತಿಯರ ಅಂತರಂಗವನ್ನೂ ಕ್ಷಣದಲ್ಲೇ ಸೋಲಿಸುತ್ತಿವೆ. ॥ ೧೫೩ ॥ ಎಲ್ಲೈ ಇನಿಯನೆ, ನಿನ್ನ ಮಾತು ಬಹಳ ಸವಿ. ಆ ಮಾತಿನಲ್ಲಿ ಜಿನಕಥೆ ಸೇರಿತೆಂದರೆ ಅದರ ಸವಿಯನ್ನು ಹಾಗೆ ಹೀಗೆ ಎನ್ನಲು ಮನುಷ್ಯರ ನಾಲಗೆಯ ತುದಿಗೆ ಸಾಧ್ಯವಾದೀತೆ?'' ಎಂದಳು ॥ ೧೫೪ ॥ ಹೀಗೆ ಹೇಳಿದ ಚೇಳಿನೀದೇವಿಯ ಚಂದ್ರನಂತಹ ಮೊಗವನ್ನು ನೋಡಿ ಶ್ರೇಣಿಕನು ಆಗ ಪ್ರೀತಿಪೂರ್ವಕವಾಗಿ ಆ ಶ್ರೀರಾಮಚಂದ್ರನ ಕಥೆಯನ್ನು ಈ ರೀತಿಯಾಗಿ ಹೇಳಿದನು ॥ ೧೫೫ ॥ ಈ ಕಾವ್ಯವು ವಿದ್ಯಾದೇವಿಯ ಅಂಗಕ್ಕೆ ತೊಡಿಗೆಯೂ, ಕೇಳತಕ್ಕವರ ಹೃದಯಕಮಲವನ್ನು ಅರಳಿಸುವ ಸೂರ್ಯನೂ, ರಸಿಕರ ಕಿವಿಗೆ ಅಮೃತದ ರಸಾಯನವೂ, ಮೋಕ್ಷಾರ್ಥಿಗಳೆಂಬ ನೈದಿಲೆಯನ್ನು ಅರಳಿಸುವ ಚಂದ್ರನೂ ಆಗಿದೆ ॥ ೧೫೬ ॥ ವಿದ್ವಾಂಸರ ಹೃದಯಕಮಲಕ್ಕೆ ಸೂರ್ಯನೂ ಸರಸ್ವತೀದೇವಿಯ ಮುಖಕ್ಕೆ ರತ್ನದ ಕನ್ನಡಿಯೂ ಭಾವನಾತ್ಮಕರ ಸಂತೋಷಕ್ಕೆ ಸಾಗರನೂ ಆದ ಮಿತ್ರನಾದ ದೇವಪ್ಪನು ರಚಿಸಿದ ಸತ್ಕಾವ್ಯವಿದು ॥ ೧೫೭ ॥ ''ಎಲ್ಲೈ ಚೇಳಿನಿಯೆ, ಈ ದಿನ ಮುಂದಣ ಕಥೆಗಳನ್ನು

---

[1] ನೀನೆನಗೆ (ಚ) [2] ಪೇಳೆನೆ (ಚ) [3] ಯಾನೆ (ಚ) [4] ರೆರ್ದೆಯ (ಚ). [5] ಇನಿದ (ಗ) [6] ಕೇಳ್ದರ (ಕ)

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳುವೆ । ಮುಂದಣ ಕಥೆಯ ಮೃಗಾಕ್ಷಿ ॥ ೧೫೮ ॥

ಇದು ಭೂಸುರವಂಶೋದ್ಭವನಭಿನವ ।
ಮದನನಮಲಗುಣ-ಜಿನ-ಪಾದಾಂಬುಜ ॥
ಮದಮಧುಕರನತ್ಯುನ್ನತವಾಣೀ [ನಿರ್ಮಲ] ಮಣಿಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ ॥
ಮುದದಿಂ ಪೇಳಿದ ರಾಮವಿಜಯದೊಳ ।
ಗೊದವಿ ರಚನೆಯಂ ಪಡೆದತಿಜಸವೆತ್ತುದು ಸಂಧಿ ಪ್ರಥಮಂ ॥ ೧೫೯ ॥

---

ಅವಲಂಬಿಸುತ್ತೇನೆಂದು ಮೆಲ್ಲನೆ ಮುಂದುವರಿದಿರುತ್ತೇನೆ. ಇಲ್ಲಿಗೆ ಈ ಸಂಧಿ ಪೂರ್ಣವಾಯಿತು. ಇನ್ನು ಇದರ ಮುಂದಿನ ಕಥೆಯನ್ನು ಹೇಳುವೆನು'' ಎಂದು ಶ್ರೇಣಿಕನು ತನ್ನ ಮಡದಿಗೆ ತಿಳಿಸಿದನು. ॥ ೧೫೮ ॥ ಬ್ರಾಹ್ಮಣಕುಲದಲ್ಲಿ ಹುಟ್ಟಿದವನೂ ಹೊಸ ಮನ್ಮಥನೂ ನಿರ್ಮಲಗುಣದಿಂದ ಕೂಡಿದವನೂ ಜಿನಪಾದಕಮಲಕ್ಕೆ ಸೊಕ್ಕಿದ ತುಂಬಿಯಂತಿರುವವನೂ ವಾಗ್ದೇವಿಗೆ ಅತ್ಯುನ್ನತವಾದ ಸ್ವಚ್ಛವಾದ ರತ್ನದ ಕನ್ನಡಿಯಂತಿರುವವನೂ ಪರಿಶುದ್ಧವಾದ ನಡತೆಯುಳ್ಳವನೂ ಸಚಿವನೂ ಆದ ದೇವಪ್ಪನು ಸಂತೋಷದಿಂದ ಭವ್ಯರಿಗೆ ಹೇಳಿದ ರಾಮವಿಜಯ ಕಾವ್ಯದಲ್ಲಿ ಸೇರಿದಂತೆ ವಿರಚಿತವಾಗಿ ಖ್ಯಾತಿಯನ್ನು ತಾಳಿದಂತಹ ಪ್ರಥಮ ಸಂಧಿಯಿದು. ॥ ೧೫೯ ॥

ತೆರೆ ನೊರೆ ಬುದ್ಬುದಾವರ್ತ ಸಂಕುಳ ಸೀ । ಕರ ಘೂತ್ಕಾರಗಳಿಂದ ॥
ಭರತದಿಂದಿಳಿತದಿಂ ಕಡಲು ನೋಳ್ಪರ ಕಣ್ಗೆ । ಕರವೊಪ್ಪುತಿಹುದಂಬುಜಾಕ್ಷೀ[1] ॥ ೮ ॥

ಪೊಸ ಪವಳವ ಕಾಣುತಡಗೆಂದನಿಮಿಷ । ನಿಸರ ಕರ್ದುಕಲ್ಕೆತಂದು[2] ॥
ಎಸೆವಗ್ಗಿಯುರಿಯೆಂದು[3] ಬಿಸುಟವೆಂದೆನಲದ । ಱಸಕವನೇನ ಬಣ್ಣಿಪೆನು ॥ ೯ ॥

ಸುಳಿ ನಾಭಿ ಬಲುವೀಚಿ ತೋಳು ಪವಳದುಟ । ಯೆಳೆಮೀನು ಕಣ್ಮುತ್ತು ರದನ ॥
ಪುಳಿಲೊಟ್ಟಲು ಪೊಱವಾಱಾಗೆ ವನಧಿಯಂ । ತೆಳವೆಣ್ಣಂತೆ[4] ರಾಜಿಪುದು ॥ ೧೦ ॥

ನೀರಿಂದ ಮೇಲಕೆ ನೆಗೆವ ಮೀನ್ಗಳು ಕ । ಣ್ಗೋರಂತೆಸೆದವಾ ಹರಿಯು ॥
ನಾರಿ ಮುದದೊಳಾಡುವಣ್ಣೆಕಲ್ಗಳ ಕೈ । ವಾರ[5]ವನಿರದೆ ಸೋಲಿಪುದಾ[6] ॥ ೧೧ ॥

ಕಡುಸೊಗಯಿಸುವ ಮಹಾಶರನಿಧಿಯೊಳ । ಗಡೆಯ ಜಂಬೂದ್ವೀಪವದಱ ॥
ನಡುವಣ ಮೇರು ನಭಾಬ್ಜದೆಲೆಯನಾಂತು[7] । ನಿಡಿದಪ್ಪ ನಾಳದಂತಿಹುದು ॥ ೧೨ ॥

ಧರೆಯ ಪುಟ್ಟಿಸುವಂದಜ ನಟ್ಟ ಕರುಗಂಬ[8] । ದಿರವೊ ವಿಯತ್ತಣ[9]ಮಿಳೆಗೇ ॥
ಭರದಿ[10] ಬಿದ್ದಪುದೆಂದಿಟ್ಟಾಂಕೆಗಂಭ[11]ದೊಂ । ದಿರವಾದುದಾ ಹೇಮಾದ್ರೀ ॥ ೧೩ ॥

ಕರಮೆಸೆದಿಹ[12] ಕನಕಾದ್ರಿಯ ಬಲದೊಳು । ಭರತಾರ್ಯಾಖಂಡ[13]ಮಿಹುದು ॥
ಸುರುಚಿರವಡೆದ ಚಪ್ಪನ್ನದೇಶದೊಳೊಂದಿ । ಸುರಲೋಕವೆಂಬಂದದೊಳು ॥ ೧೪ ॥

---

ಸಮೂಹದಿಂದಲೂ ಮೇಲಕ್ಕೆ ನೆಗೆದುಬರುವ ಮೀನು ಶಂಖಗಳಿಂದಲೂ ಸುಂದರವಾದ ರತ್ನಗಳಿಂದಲೂ ಹವಳಗಳಿಂದಲೂ ಶೋಭಿಸುತ್ತಿತ್ತು. ಅದನ್ನು ಏನೆಂದು ಹೇಳಲಿ! ॥ ೭ ॥ ನೋಡುವವರ ಕಣ್ಣಿಗೆ ಆ ಸಮುದ್ರವು ಅಲೆ, ನೊರೆ, ಗುಳ್ಳೆ, ಸುಳಿ—ಇವುಗಳಿಂದಲೂ, ತುಂತುರುಹನಿಗಳಿಂದಲೂ ಚೀರಾಟದಿಂದಲೂ ಉಕ್ಕುವಿಕೆ ಇಳಿವಿಕೆಗಳಿಂದಲೂ ವಿಶೇಷವಾಗಿ ಕಾಣಿಸುವುದು ॥ ೮ ॥ ಮೀನುಗಳು ಸಮುದ್ರದಲ್ಲಿರುವ ಹೊಸ ಹವಳಗಳನ್ನು ಕಂಡು, ಮಾಂಸದ ತುಂಡುಗಳೆಂದು ಭ್ರಮಿಸಿ, ಅದನ್ನು ಕಚ್ಚಿ ತಿನ್ನಲು ಹತ್ತಿರಬಂದು, ಅದನ್ನು ಮತ್ತೆ ಬೆಂಕಿಯ ಕೆಂಡಗಳೆಂದು ಭಾವಿಸಿ ಬಿಟ್ಟುಹೋದವು—ಎನ್ನುವಾಗ, ಆ ಸಮುದ್ರದ ರಚನೆಯನ್ನು ಏನೆನ್ನಲಿ! ॥ ೯ ॥ ಸಮುದ್ರದಲ್ಲಿ ಕಾಣಿಸುವ ಸುಳಿಯೇ ಹೊಕ್ಕುಳು, ದೊಡ್ಡ ಅಲೆಗಳೇ ತೋಳು, ಹವಳವೇ ತುಟಿ. ಎಳೆಮೀನೇ ಕಣ್ಣು, ಮುತ್ತುಗಳೇ ಹಲ್ಲುಗಳು, ಮಳಲದಿಣ್ಣೆಯೇ ನಿತಂಬ—ಎನಿಸುತ್ತಿರಲು, ಸಮುದ್ರವು ಎಳಹರಯದ ಹೆಣ್ಣಿನಂತೆ ಶೋಭಿಸುವುದು ॥ ೧೦ ॥ ನೀರಿನಿಂದ ಮೇಲಕ್ಕೆ ನೆಗೆದುಬರುವ ಮೀನುಗಳು, ಆ ಲಕ್ಷ್ಮೀದೇವಿಯು ಸಂತೋಷದಿಂದ ಆಡುವ ಅಣ್ಣೆಕಲ್ಲುಗಳ ಕೈವಾರವನ್ನು ಸೋಲಿಸುವಂತೆ ಕಾಣಿಸುತ್ತವೆ. ॥ ೧೧ ॥ ಚೆನ್ನಾಗಿ ಶೋಭಿಸುವ ಮಹಾಸಾಗರದ ನಡುವೆ ಜಂಬೂದ್ವೀಪವಿದೆ. ಅದರ ನಡುವೆ ಇರತಕ್ಕ ಮೇರುಪರ್ವತವು ಆಕಾಶವೆಂಬ ತಾವರೆಯೆಲೆಯನ್ನು ಧರಿಸಿಕೊಂಡು ದೀರ್ಘವಾಗಿ ಕಾಣಿಸುವ ತಾವರೆನಾಳದಂತಿದೆ. ॥ ೧೨ ॥ ಬ್ರಹ್ಮನು ಈ ಭೂಮಿಯನ್ನು ಸೃಷ್ಟಿಸುವಾಗ ನೆಟ್ಟ ಉದ್ದವಾದ ಕಂಬವೋ, ಆಕಾಶವು ಭೂಮಿಗೆ ಭರದಿಂದ ಬಿದ್ದುಹೋಗಬಹುದೆಂಬ ಭಾವನೆಯಿಂದ ಇಟ್ಟ ಆಧಾರಸ್ತಂಭವೋ, ಎಂಬಂತೆ ಆ ಹೇಮಾದ್ರಿಯಿದೆ. ॥ ೧೩ ॥ ಚೆನ್ನಾಗಿ ಶೋಭಿಸುವ ಆ ಮೇರುಪರ್ವತದ

---

[1] ಕರಮಸೆದಿಹುದನವರತ (ಚ) ಕರಮೊಪ್ಪುದಿಹುದನವರತ (ಗ). [2] ಕದುಕಲ್ಕೆತಂದು (ಗ). [3] ಯುಗಿಯೆಂದು (ಗ). [4] ವೆಳವೆಣ್ಣಂತೆ (ಗ ಚ.). [5] ಕೈವಾಡ (ಕ). [6] ಸೋಲಿಸುವ (ಗ) ಸೋಲಿಸುತ (ಚ). [7] ನಾಂತ (ಚ). [8] ತರುಗಂಬ (ಚ). [9] ವಿಯತ್ತಳ (ಗ) [10] ಧರೆಗೆ (ಕ. ಗ). [11] ದಿಟ್ಟಾಕೆಗಂಭ (ಚ) [12] ಮೆಸೆವಾ (ಗ). [13] ಖಾಂಡ (ಕ)

ಇಂತೆಸೆ ವಾರ್ಯಖಂಡದ[1] ನಟ್ಟ[2]ನಡುವೆ ಭೂ । ಕಾಂತೆಯ ನಗೆಮೊಗದಂತೇ ॥
ಸಂತಸದಿಂದಿರ್ಪುದು ಹೇಮಾಂಗಜ । ನಾಂತ ವ ನಾಂ ತ[3] ಸಿರಿಯೊಳು ॥ ೧೫ ॥

ಬಿತ್ತಲು ಭತ್ತವ ಬೆಳೆವುದಚ್ಚರಿಯಲ್ಲ । ಬಿತ್ತದೆ ಪೊನ್ನು ಕೆಂಗಲ್ಲ ॥
ಮೊತ್ತವ ಬೆಳೆದೀವ ನೆಲಕೆಯಾ ನೆಲನಲ್ಲ । ದೊತ್ತಿನ ನೆಲನು ಪಾಸಟಿಯೇ ॥ ೧೬ ॥

ಪರಿಪರಿದಾಡುವ ಮೃಗಮದವಿಳಿದುಱಿ । ಪೊರೆದರೆ[4] ಕುಂಕುಮವುದುರ್ದು ॥
ಪರಿದ ಕೆನ್ನೆಲನಲ್ಲದೆ ಪರಿಕಿಪೊಡಲ್ಲಿ । ಯೆರೆ[5] ಕೆನ್ನೆಲನೆಂಬುದಿಲ್ಲ ॥ ೧೭ ॥

ಶಶಿಕಾಂತೋಪಲ[6]ದೆಳನೀರುಗಳಿಂ । ದೊಸರಿ ಪರಿವ ಜಲದಿಂದ ॥
ಹಸನಾಗಿ ಶಾಲೀವನಗಳು ಬೆಳೆವವೆನೆ । ವಸುಧೆಗದಾವ[7] ಮಾತೃಕವೋ ॥ ೧೮ ॥

ಸರಸಿಜವಿಲ್ಲದ ಕೊಳ ರನ್ನವಿಲ್ಲದ । ಗಿರಿ ಚೂತವಿಲ್ಲದುದ್ಯಾನ ॥
ಕರಿಗಳಿಲ್ಲದ ಕಾನನವಿಲ್ಲವಾ ನಾಡ । ಸಿರಿಯ ನಾನೇನ[8] ಬಣ್ಣಿಪೆನು[9] ॥ ೧೯ ॥

ಪೊಡೆಯೆಂಬ ನುಡಿ ತುಱುಪಟ್ಟ[10]ಗಳೊಳು ಬಾಳೆ । ಯೆಡೆಯೊಳು ಶಾಲಿವನದೊಳು ॥
ಕಡುನೀಱಿಯರುದರದೊಳಲ್ಲದಾ ಮಾತ । ನುಡಿವವರಿಲ್ಲ ನಾಡೊಳಗೇ ॥ ೨೦ ॥

ಕಱೆಯೆಂಬ ನುಡಿ ತುಂಬುವೆಱೆಯೊಳು ಪಶುಗಳೊ । ಳಿಱಿಯೆಂಬ ನುಡಿ ಗಣಿತದೊಳು ॥
ತೊಱೆಮಱೆಯೆಂಬುದು ತೊಱೆನಾಡೊಳಲ್ಲದಾ[11] । ವುಱುವ ಜನಾಂತದೊಳಿಲ್ಲಾ ॥ ೨೧ ॥

---

ದಕ್ಷಿಣಭಾಗದಲ್ಲಿ ಭರತಾರ್ಯಾಖಂಡವಿದೆ. ಅದು ಶೋಭಾಯಮಾನವಾದ ಐವತ್ತಾರು ದೇಶಗಳಿಂದ ಕೂಡಿ ದೇವಲೋಕವೋ ಎಂಬಂತಿದೆ ॥ ೧೪ ॥ ಹೀಗಿರುವ ಆರ್ಯಖಂಡದ ನಟ್ಟನಡುವಣ ನಾಡು ಭೂಮಿಯೆಂಬ ಸ್ತ್ರೀಯ ನಗೆಮೊಗದಂತೆ ಕಾಣುತ್ತಿದೆ ಅದು ಚಿನ್ನದಿಂದಲೂ ಮನ್ಮಥನು ತಾಳಿರುವ ಉದ್ಯಾನವನಾದಿಗಳ ಸಿರಿಯಿಂದಲೂ ಮೆರೆಯುತ್ತಿರುವುದು. ॥ ೧೫ ॥ ಆ ನೆಲದಲ್ಲಿ ಬತ್ತವನ್ನು ಬಿತ್ತಿದರೆ ಅದು ಬೆಳೆಯುವುದು ಏನೂ ಆಶ್ಚರ್ಯವಲ್ಲ ಬಿತ್ತದೆಯೇ ಚಿನ್ನವನ್ನೂ ಕೆಂಪುರತ್ನದ ಸಮೂಹವನ್ನೂ ಬೆಳೆಸಿ ಕೊಡತಕ್ಕ ನೆಲವದು. ಅದಕ್ಕೆ ಅದರ ಸಮೀಪದ ಇತರ ನೆಲಗಳು ಎಣೆಯೆನಿಸಲಾರವು. ॥ ೧೬ ॥ ಅತ್ತಿತ್ತ ಸಂಚಾರಮಾಡತಕ್ಕ ಕಸ್ತೂರೀಮೃಗಗಳು ಇಳಿದುಬಂದ ನೆಲವೂ ಚೆನ್ನಾಗಿ ಬೆಳೆದ ಹೂಗಳ ಕುಂಕುಮ ಧೂಳಿಬಿದ್ದು ಹರಡಿರುವ ಕೆಂಪಾದ ನೆಲವೂ ಅಲ್ಲದೆ, ಅಲ್ಲಿ ಎರೆನೆಲ, ಕೆನ್ನೆಲಗಳೆಂಬ ಹಾಳುನೆಲವೇ ಇಲ್ಲ. ॥ ೧೭ ॥ ಆ ನೆಲದಲ್ಲಿ ಚಂದ್ರಕಾಂತಶಿಲೆಗಳಿಂದ ನೀರು ಒಸರಿ ಹರಿಯುವುದು ಆ ನೀರಿನಿಂದಲೇ ಬತ್ತದ ಪೈರು ಹುಲುಸಾಗಿ ಬೆಳೆಯುವುದು. ಹೀಗಿರುವಾಗ ಆ ನೆಲವು ಲೋಕದಲ್ಲಿ ಅದೆಂತಹ ಮಾತೃಕವಾಗಿದೆಯೋ ! ॥ ೧೮ ॥ ಆ ನಾಡಿನಲ್ಲಿ ತಾವರೆಯಿಲ್ಲದ ಕೊಳವಿಲ್ಲ, ರತ್ನವಿಲ್ಲದ ಬೆಟ್ಟವಿಲ್ಲ, ಮಾವಿಲ್ಲದ ಉದ್ಯಾನವಿಲ್ಲ, ಆನೆಗಳಿಲ್ಲದ ಕಾಡಿಲ್ಲ ಅಂತಹ ಆ ನಾಡಿನ ಶೋಭೆಯನ್ನು ನಾನು ಏನೆಂದು ವರ್ಣಿಸಲಿ. ॥ ೧೯ ॥ ಪೊಡೆ (ಹೊಡೆ) ಎಂಬ ಮಾತನ್ನು ಹಸುಗಳ ಹಟ್ಟಿಯಲ್ಲಿಯೂ ಬಾಳೆಯಲ್ಲಿಯೂ ಬತ್ತದಪೈರಿನಲ್ಲಿಯೂ ಸುಂದರಸ್ತ್ರೀಯರ ಉದರದಲ್ಲಿಯೂ ಪ್ರಯೋಗಿಸುವರಲ್ಲದೆ, ಆ ಮಾತನ್ನು 'ಬಡಿ' ಎಂಬ ಅರ್ಥದಲ್ಲಿ ಆ ನಾಡಿನಲ್ಲಿ ನುಡಿವವರೇ ಇಲ್ಲ ॥ ೨೦ ॥ 'ಕಱೆ' ಎಂಬ ಮಾತನ್ನು ಪೂರ್ಣಚಂದ್ರನಲ್ಲಿರುವ ಕಳಂಕ ಎಂಬ ಅರ್ಥದಲ್ಲಿಯೂ ಹಸುಗಳ ಹಾಲನ್ನು ಹಿಂಡುವಲ್ಲಿಯೂ ಪ್ರಯೋಗಿಸುವರು 'ಇಱಿ' ಎಂಬುದನ್ನು ಗಣಿತದಲ್ಲಿಯೂ 'ತೊಱೆಮಱೆ' ಎಂಬುದನ್ನು

---

[1] ವಾರ್ಯಾಖಾಂಡದ (ಕ) [2] × × (ಗ ಚ) [3] ವನಂತ (ಗ ಚ) [4] ಪೊರದಿರೆ (ಚ) [5] ಪರಿಕಿಪೊಡಲ್ಲಿಯರೆ (ಗ)
[6] ಕಾಂತೋತ್ಪಲ (ಗ ಚ) [7] ವಸುಧೆಗದಮಮ (ಚ) [8] ಸಿರಿಯನದಾರು(ಗ ಚ) [9] ಬಣ್ಣಿಪರು (ಚ) [10] ಪಟ್ಟಿಯೊಳಲ್ಲದೆ ಬಾಳೆ (ಗ)
[11] ನಾಡೊಳಲ್ಲದಾ (ಕ)

ಪಿಡಿಯೆಂಬ ನುಡಿ ಕರಿಣಿಯೊಳು ಖಡ್ಗದ ಮೊದ । ಲೆಡೆಯೊಳುಚಿತ ವುಡುಗೊಱೆಯಾ ॥
ಕೊಡುವೆಡೆಯೊಳಗಲ್ಲದೆ[1]ಯಾ ಮಾತನು । ನುಡಿವವರಿಲ್ಲವದರೊಳು[2] ॥ ೨೨ ॥

ಕಕ್ಕಸವೆಂಬುದಂಗನೆಯರ ಕುಚದೊಳು । ಸೊಕ್ಕೆಂಬುದಾನೆವಿಂಡಿನೊಳು ॥
ರಕ್ಕೆಂಬುದು ಗಣಿಕೆಯರೊಳಲ್ಲದೆಯುದ[3] । ಲೆಕ್ಕಿಸಲಾ[4] ನಾಡೊಳಿಲ್ಲ ॥ ೨೩ ॥

ಕಡಿ ಕೊಡೆ[5] ಮಡಿ ಜಡಿಯೆಂದೆಂಬ ನುಡಿ ಬಲು । ಗುಡಿಯರೊಳ್ ಧರ್ಮದೆಡೆಯೊಳು ॥
ಮಡಿವಾಳರೊಳುಯ್ಯಲೆಯೊಳಲ್ಲದೆಯಾ । ಪೊಡವಿಯ ಜನದೊಳಗಿಲ್ಲ ॥ ೨೪ ॥

ಉರಗಗತಿಯೊಳು ಪ್ರಸ್ತಾರ[6]ಗಳೆಡೆಯೊಳು । ತರುಣ ಹರಿಣಲೋಚನೆಯರ ॥
ಕುರುಳು ಶ್ರುತಿಯೊಳಲ್ಲದೆ ಕುಟಿಲವನಾ । ಚರಿಪ[7]ರಿಲ್ಲಾ ನಾಡೊಳಗೇ ॥ ೨೫ ॥

ಬಡತನವೆಂಬು ಲತೆಯೊಳಂಗನೆಯರ । ನಡುವಿನೊಳವರ ಬಾಸೆಯೊಳು ॥
ಕಡೆ ತಡೆ[8]ಯೆಂಬುದು ದಧಿಮಥನದೊಳು[9] ಪಾ । ವಡಿಗರೊಳಲ್ಲದಲ್ಲಿಲ್ಲ ॥ ೨೬ ॥

ಬಗರಗೆ ದೀರ್ಘಿಕೆ ಹೊಕ್ಕರಣಿಯು[10] ಬಾವಿ । ವಿಂಗೆ ಬೆಂಚೆ ತೊಱೆ ಬಲ್ಕೆಱೆಗಳಾ[11] ॥
ಸೊಗಯಿಪ ಕಾಲುವೆ ಪೂಗೊಳನಿಲ್ಲದ । ನಗರವಿಲ್ಲಾ ನಾಡೊಳಗೇ ॥ ೨೭ ॥

ಲಂಚ ಕವರ್ತೆ ಕಳವು ಭಯ ಮಾರಿ ಕೊ । ಳ್ವಂಚನೆ ಬಱ ಬಂದಿವಿಡಿತ[12] ॥
ಸಂಚಿನ ಮಾತು ಪಾದರವತಿಕಾಂಕ್ಷೆಯು[13] । ಸಂಚಯವಾ ನಾಡೊಳಿಲ್ಲ[14] ॥ ೨೮ ॥

---

ತೊಱೆನಾಡಿನಲ್ಲಿಯೂ ಪ್ರಯೋಗಿಸುವರಲ್ಲದೆ ಆ ನಾಡಿನ ಜನರಲ್ಲಿ ಇಂತಹ ಶಬ್ದಗಳಿಲ್ಲ. ॥ ೨೧ ॥ 'ಹಿಡಿ' ಎಂಬ ಮಾತು ಹೆಣ್ಣಾನೆಯಲ್ಲಿಯೂ ಖಡ್ಗದ ಬುಡದಲ್ಲಿಯೂ ಉಚಿತವಾದ ಉಡುಗೊರೆ ಕೊಡುವಲ್ಲಿಯೂ ಬರುವುದಲ್ಲದೆ, ಆ ಮಾತನ್ನು ಬೇರೆ ಕಡೆ ಮಾತಾಡುವವರೇ ಆ ನಾಡಿನಲ್ಲಿಲ್ಲ. ॥ ೨೨ ॥ ಕಠಿಣತೆಯೆಂಬುದು ಸ್ತ್ರೀಯರ ಕುಚದಲ್ಲಿಯೂ ಸೊಕ್ಕು ಎಂಬುದು ಆನೆಗಳ ಹಿಂಡಿನಲ್ಲಿಯೂ ರಕ್ಕು ಎಂಬುದು ಸೂಳೆಯರಲ್ಲಿಯೂ ಇರುವುದಲ್ಲದೆ ಅವು ಆ ನಾಡಿನಲ್ಲಿ ಇಲ್ಲ. ॥ ೨೩ ॥ ಕಡಿ ಎಂಬುದು ಕುಡಿಯರಲ್ಲಿಯೂ ಕೊಡೆ (ಕೊಡು) ಎಂಬುದು ಧರ್ಮದಲ್ಲಿಯೂ ಮಡಿ ಎಂಬುದು ಮಡಿವಾಳರಲ್ಲಿಯೂ ಜಡಿ ಎಂಬುದು ಉಯ್ಯಾಲೆಯ ಅಲುಗಾಟದಲ್ಲಿಯೂ ಇರುವುದಲ್ಲದೆ ಆ ನಾಡಿನ ಜನರ ವ್ಯವಹಾರದಲ್ಲಿಲ್ಲ. ॥ ೨೪ ॥ ವಕ್ರತೆಯು (ಕೊಂಕು) ಹಾವುಗಳಲ್ಲಿಯೂ ಪದ್ಯಗಳನ್ನು ಪ್ರಸ್ತಾರಮಾಡುವಲ್ಲಿಯೂ (ಗುರುಚಿಹ್ನೆಗಳನ್ನಿಡುವಲ್ಲಿಯೂ), ತರುಣಿಯರ ತಲೆಗೂದಲಿನಲ್ಲಿಯೂ ಕಿವಿಯ ತೂತಿನಲ್ಲಿಯೂ ಇರುವುದಲ್ಲದೆ ಆ ನಾಡಿನ ಜನರು ವಕ್ರತೆಯನ್ನು ಆಚರಿಸುವವರಲ್ಲ. ॥ ೨೫ ॥ ಬಡತನ (ಕೃಶತೆ) ಎಂಬುದು ಬಳ್ಳಿಯಲ್ಲಿಯೂ ಹೆಂಗುಸರ ಸೊಂಟದಲ್ಲಿಯೂ ಅವರ ರೋಮರಾಜಿಯಲ್ಲಿಯೂ ಇರುವುದು. ಕಡೆ ಎಂಬುದು ಮೊಸರು ಕಡೆಯುವಲ್ಲಿಯೂ ತಡೆ ಎಂಬುದು ಹಾವನ್ನು ದಿಗ್ಬಂಧಿಸತಕ್ಕ ಹಾವಡಿಗರಲ್ಲಿಯೂ ಬಳಕೆಯಲ್ಲಿರುವುದಲ್ಲದೆ ಆ ನಾಡಿನಲ್ಲಿ ಇತರ ಜನರಲ್ಲಿಲ್ಲ. ॥ ೨೬ ॥ ಆ ನಾಡಿನ ನಗರಗಳಲ್ಲಿ ನೀರಿನ ಗುಳಿ, ನೀರಿನ ಹೊಂಡ, ಸರೋವರ, ಬಾವಿ, ಚಿಕ್ಕ ಕೊಳ, ಹೊಳೆ, ದೊಡ್ಡ ಕೆರೆ, ಸೊಗಸಾದ ಕಾಲುವೆ, ಹೂವಿನ ಕೊಳಗಳು ಇದ್ದೇ ಇವೆ. ॥ ೨೭ ॥ ಲಂಚ, ಕೊಳ್ಳೆ ಹೊಡೆಯುವಿಕೆ, ಕಳ್ಳತನ, ಹೆದರಿಕೆ, ಮಾರಿ, ವಂಚನೆ, ಬರಗಾಲ, ಬಂಧಿಸುವಿಕೆ, ಮೋಸದ ಮಾತು, ಹಾದರ,

---

[1] ಗಳೊಳಲ್ಲದೆ (ಗ ಚ.) [2] ರಿಲ್ಲದಱೊಳಗೆ (ಚ) [3] ಗಣಿಕೆಯೊಳಲ್ಲದಾ ಮಾತು (ಗ ಚ). [4] ಲೆಕ್ಕಿಸದಾ (ಗ). [5] ಕೊರೆ (ಗ) ಕೊಱೆ (ಚ) [6] ಪ್ರಸಾದ (ಕ) ಪ್ರಸ್ತಾರ (ಚ) [7] ಕುಟಿಲವನುಚ್ಚರಿಪ (ಚ). [8] ಕಡೆ (ಚ). [9] ಮಧನದಿ (ಗ ಚ.). [10] ಪೊಕ್ಕರಣೆಯ (ಕ) [11] ಬಲ್ದಱೆಗಳಾ (ಗ) ಬಲ್ಗೆಱೆಗಳಾ (ಚ) [12] ಮಳೆತಗ್ಗು (ಕ) [13] ಮಂಚರ್ಸೆಱೆಯನ್ಯಾಯವನ್ಯತಗಳ (ಗ. ಚ) [14] ಸಂಚಯವಿಲ್ಲದಱೊಳಗೆ (ಗ) ಸಂಚಯವಿಲ್ಲವದಱೊಳು (ಚ).

ಕೊಂಡೆಯ ಕುಹಕಿ ದುರ್ಜನ ಜಾರ ಚೋರರು । ಲಂಡಪುಂಡರು ಪುಸಿವವರು ॥
ಕಂಡು ಪರರ ಸತಿ ಪರಧನ ಕಳುಪುವ । ಭಂಡ[1] ಬಾಳುವರಿಲ್ಲವಲ್ಲೀ ॥ ೨೯ ॥

ಉಂಡೆಡೆಗೆರಡ ಬಗೆದು ಕೂಡಿದವರೊಳು । ಪಿಂಡಿ ಪುಳಿಯ ಬಾಳುವವರ ॥
ಕಂಡು ಕರುಬಿ ಕಾಣಲಾರದೆ ನರಕದ । ಕೊಂಡಕಿಳಿವರಿಲ್ಲವಲ್ಲೀ[2] ॥ ೩೦ ॥

ಲಕ್ಷಣವಿಲ್ಲದ ಕಾವ್ಯ ನಾಟಕ ಮಹೀ । ರಕ್ಷಕ[3]ನಲ್ಲದ ನೃಪತಿ ॥
ಅಕ್ಷಯ ಜಿನಗೃಹವಿಲ್ಲದಾ ನಾಡೊಳ । ಗೀಕ್ಷಿಸಲಿಲ್ಲ ಮೃಗಾಕ್ಷಿ ॥ ೩೧ ॥

ಅಱಿಯದ ನರರಿಲ್ಲ ಚೌಷಷ್ಟಿ ಕಲೆಗಳ । ಮಱೆಯದರಿಲ್ಲ[4] ಜಾಣ್ಕೆಯೊಳು ॥
ತೊಱೆಯದ ಜನರಿಲ್ಲ ಪೆಱವಣ್ಣ ಪೆಱವೆಣ್ಣ । ನೆಱೆವವರಿಲ್ಲ[5] ನಾಡೊಳಗೇ ॥ ೩೨ ॥

ಬೇಡುವರಿಲ್ಲ ಬೇಡಲು ಪೊಂಗಟ್ಟಿಯ । ನೀಡದರಿಲ್ಲ ನೇಹವನು ॥
ಮಾಡಿದೆಡೆಗೆ ಕೇಡ ಬಗೆವವರಾ ನಾಡು । ಬೀಡು ಪುರದೊಳಿಲ್ಲವಬಲೇ ॥ ೩೩ ॥

ಪಡೆದು ಮಕ್ಕಳ ಕೃಶವಳಿಯದವರು ಜರೆ[6] । ಯಡಸಿ ಬೀಳದ ಕುಚ ಮುನಿದು ॥
ಕಡುಕಾಂತಿ[7] ಮಸುಳದ ನಗೆಮೊಗವಾ ನಾಡ । ಮಡದಿಯರಿಗೆ ನಿಜಗುಣವು ॥ ೩೪ ॥

ಅಸಿಯ ನಡುವಿನ ನಿಟ್ಟಿಸಳುಗಂಗಳ ಪೊಚ್ಚ । ಪೊಸ ಜವ್ವನ ಮುದ್ದುಮೊಗದ ॥
ಶಶಿಗೆರೆದುಟಿಯಂಚೆ ಗಮನದ ಪೆಣ್ಣುಗ । ಳೆಸೆದಿಹರಾ ದೇಶದೊಳು ॥ ೩೫ ॥

---

ಅತ್ಯಾಕಾಂಕ್ಷೆಯ ಸಂಚಯವು ಆ ನಾಡಿನಲ್ಲಿಲ್ಲ. ॥ ೨೮ ॥ ಚಾಡಿಹೇಳುವವರು, ಕಪಟಿಗಳು, ಕೆಟ್ಟವರು, ವ್ಯಭಿಚಾರಿಗಳು, ಕಳ್ಳರು, ಮೂರ್ಖರು, ಪುಂಡರು, ಸುಳ್ಳಾಡುವವರು, ಪರಸ್ತ್ರೀಗೂ ಪರಧನಕ್ಕೂ ಆಸೆಪಡುವಂತಹ ಬಂಡುತನದ ಜೀವನ ವನ್ನು ನಡೆಸುವವರು ಅಲ್ಲಿಲ್ಲ. ॥ ೨೯ ॥ ಉಂಡ ಮನೆಗೆ ಎರಡನ್ನು ಬಗೆದು ಸ್ನೇಹದಿಂದ ಕೂಡಿರುವವರೊಳಗೆ ಹುಳಿಯನ್ನು ಹಿಂಡಿ ಒಳ್ಳೆಯ ಬಾಳು ನಡೆಸುವವರನ್ನು ಕಂಡು ಮತ್ಸರಗೊಂಡು ಅವರನ್ನು ಕಾಣಲು ಸೈರಿಸಲಾರದೆ ನರಕದ ಕುಂಡಕ್ಕೆ ಇಳಿವ ಜನರು ಅಲ್ಲಿಲ್ಲ ॥ ೩೦ ॥ ಎಲೇ ಚೆಲುವಿನಿಯೇ ಆ ನಾಡಿನಲ್ಲಿ ಲಕ್ಷಣದಿಂದ ಕೂಡಿರದ ಕಾವ್ಯನಾಟಕಗಳೂ ಲೋಕ ರಕ್ಷಕನೆನಿಸದ ರಾಜನೂ ನಾಶರಹಿತನಾದ ಜಿನನ ಗೃಹವಿಲ್ಲದ ಪ್ರದೇಶವೂ ಎಲ್ಲಿ ನೋಡಿದರೂ ಕಾಣಿಸದು. ॥ ೩೧ ॥ ಆ ನಾಡಿನಲ್ಲಿ ಅರುವತ್ತನಾಲ್ಕು ಕಲೆಗಳನ್ನರಿಯದ ಮನುಷ್ಯರಿಲ್ಲ ಜಾಣ್ಮೆಯಿಂದ ಮೆರೆಯದವರಿಲ್ಲ ಪರಸ್ತ್ರೀಯರನ್ನು ತೊರೆಯದಿರುವ ಜನರಿಲ್ಲ ಪರಸ್ತ್ರೀಯರನ್ನು ಒಂದುಗೂಡುವವರೂ ಇಲ್ಲ. ॥ ೩೨ ॥ ಆ ನಾಡಿನಲ್ಲಾಗಲೀ ಬೀಡಿನಲ್ಲಾ ಗಲೀ ಪಟ್ಟಣದಲ್ಲಾಗಲೀ ಬೇಡುವವರಿಲ್ಲ ಬೇಡಿದಾಗ ಚಿನ್ನದ ಗಟ್ಟಿಯನ್ನೇ ಕೊಡದಿರುವವರಿಲ್ಲ ಸ್ನೇಹವನ್ನು ಮಾಡಿದಾಗ ಅಂಥಾ ಕಡೆ ಕೇಡನ್ನು ಬಗೆವವರೂ ಇಲ್ಲ. ॥ ೩೩ ॥ ಆ ನಾಡಿನ ಮಡದಿಯರು ಮಕ್ಕಳನ್ನು ಹೆತ್ತಮೇಲೂ ತೆಳ್ಳನಾಗಿಯೇ ಇರುವರು. ಮುಪ್ಪು ಅಡಸಿದರೂ ಅವರ ಕುಚಗಳು ಜೋತುಬೀಳವು. ಸಿಟ್ಟುಬಂದರೂ ಅವರ ಮುಖದ ಕಾಂತಿಯು ಮಸುಕಾಗದು. ಇವೆಲ್ಲವೂ ಅವರ ಸಹಜಗುಣಗಳು. ॥ ೩೪ ॥ ಆ ದೇಶದಲ್ಲಿರುವ ಹೆಂಗುಸರು ತೆಳುವಾದ ಸೊಂಟ ದಿಂದಲೂ ಉದ್ದವಾದ ಎಸಳುಗಳಂತಿರುವ ಕಣ್ಣುಗಳಿಂದಲೂ ಹೊಚ್ಚಹೊಸ ಯೌವನದಿಂದಲೂ ಮುದ್ದಾದ ಮುಖ ದಿಂದಲೂ ಚಂದ್ರರೇಖೆಯಂತಹ ತುಟಿಯಿಂದಲೂ ಹಂಸದಂತೆ ಮೆಲ್ಲನಾದ ನಡಿಗೆಯಿಂದಲೂ ಶೋಭಿಸುವರು. ॥ ೩೫ ॥

---

[1] ಕಳುಮಾಂಸವುಂಡು (ಕ) [2] ೩೦ನೆಯ ಪದ್ಯ ಗ ಜ ದಲ್ಲಿಲ್ಲ [3] ಶಿಕ್ಷಕ (ಜ) [4] ನೆರೆಯದರಿಲ್ಲ (ಕ) [5] ಮೆಚ್ಚುವವರಿಲ್ಲ (ಕ)
[6] ಕೃಶವಳಿಯದೆ ನಡುಬರೆ (ಕ) [7] ಗಾಡಿ (ಗ ಜ)

ಸಣ್ಣ ನಡುವಿನೆಳೆಮಿಂಚ ನಗುವ ನಗೆ । ಗಣ್ಣ ಸಂಜೆಯ ಕೆಮ್ಮುಗಿಲ ॥
ಬಣ್ಣವನಿಳಿಕೆಯ್ವ ರಂಗುದುಟಿಯ ಮುದ್ದು । ವೆಣ್ಣಲ್ಲದಿಲ್ಲವದಱೊಳು ॥ ೩೬ ॥

ಶುಱುಗೆವೆಗಂಗಳ ತುಂಬಿ[1]ಗುರುಳ ಚಿಕ್ಕ । ಹೆಱೆಯ[2] ನೊಸಲ ಬೀಗಿ ಬಳೆದ ॥
ಪೊಱವಾಱ ಪೊಂಬಳ್ಳಿಮೆಯ್ಯಬಲೆಯರಿಡಿ । ಗಿಱಿದಿಹರಾ ದೇಶದೊಳು[3] ॥ ೩೭ ॥

ಹಾವ ವಿಲಾಸ ವಿಭ್ರಮ ಭಾವಗಳಿಂದ । ತೀವಿದ ಪೊಸ ಜವ್ವನದ ॥
ಕೋವಿದೆಯರುಗಳ ತಂಡವಲ್ಲದೆ ಜಡ । ಜೀವಿ ಪೆಣ್ಣಿಲ್ಲವದರೊಳು[4] ॥ ೩೮ ॥

ಆಱಡಿವಸುಳಿಗುರುಳು ತುಂಬುವೆರೆಮೊಗ । ನೇಱಿಲ ದೋರೆವಣ್ದುಟಿಯ ॥
ಮೀಱುವ ಕಿವಿಯ ಕಂಗಳ ಸೊಬಗಿಂ ಕಡು । ನೀಱೆಯರೆಸೆದರಂದಲ್ಲಿ[5] ॥ ೩೯ ॥

ಅಂಗಜನಿನಿವಿಲ್ಲಿಗೆಣೆಯ[6] ಪುರ್ವವನ ಬಾ । ಣಂಗಳಿಗೆಣೆಯೆಂದೆನಿಪ ॥
ಕಂಗಳವನ ಪಾಶವಳಕವೆನಿಪ[7] ಕೋಮ । ಲಾಂಗಿಯರುಗಳೆಸೆದಿಹರು ॥ ೪೦ ॥

ನೀಲಗುರುಳು ನಿಡುಮುಡಿ ಕಾರ್ಮಿಂಚನು । ಸೋಲಿಪ ಕಣ್ ಬಲುಮೊಲೆಯ ॥
ಆಲವಣ್ದುಟಿಯಂಬರಮಧ್ಯದಬಲಾ । ಜಾಲವಾ ನಾಡೊಳೊಪ್ಪಿದುದು[8] ॥ ೪೧ ॥

ಕಡುಸಿರಿಯಿಂ ಪುರುಷರು ಪೊಱಮಡಿಸಲು । ಬಡತನವನು ಕೃಪೆಯಿಂದ[9] ॥
ಬಿಡದೆ ಮಧ್ಯದೊಳಿಟ್ಟು[10] ಸಲಹುವರಾ ನಾಡ । ಮಡದಿಯರಿಗೆ ಸರಿಯಾರು ॥ ೪೨ ॥

---

ಆ ನಾಡಿನಲ್ಲಿ ಸಣ್ಣದಾದ ನಡುವಿನಿಂದಲೂ ಎಳಮಿಂಚಿನ ಸೊಬಗನ್ನು ಮೀರುವ ನಗೆಗಣ್ಣಿನಿಂದಲೂ ಸಂಧ್ಯಾಕಾಲದ ಕೆಂಪು ಮೋಡದ ಬಣ್ಣವನ್ನು ಹೀನೈಸತಕ್ಕ ಬಣ್ಣದ ತುಟಿಯಿಂದಲೂ ಕೂಡಿದ ಮುದ್ದಾದ ಹೆಂಗುಸರು ಅಲ್ಲದಿಲ್ಲ. ॥ ೩೬ ॥ ಆ ದೇಶದಲ್ಲಿ ಒತ್ತೊತ್ತಾದ ಅಕ್ಷಿರೋಮಗಳಿಂದ ಕೂಡಿದ ಕಣ್ಣುಳ್ಳ, ತುಂಬಿಯಂತೆ ಕಪ್ಪಾದ ಕೂದಲುಳ್ಳ, ಅರ್ಧಚಂದ್ರನಂತಹ ಹಣೆಯುಳ್ಳ, ದಪ್ಪನಾಗಿ ಬಳೆದ ನಿತಂಬವುಳ್ಳ, ಚಿನ್ನದ ಬಳ್ಳಿಯಂತೆ ಶೋಭಾಯಮಾನವಾದ ದೇಹವುಳ್ಳ, ಸ್ತ್ರೀಯರು ತುಂಬಿರುವರು. ॥ ೩೭ ॥ ಕಣ್ಣಿನ ಸಂಕೇತ, ಒಯ್ಯಾರ, ಬೆಡಗು, ಭಾವಪ್ರಕಟಣೆ—ಮುಂತಾದುವುಗಳಿಂದ ಕೂಡಿದ ನವತಾರುಣ್ಯದ ವಿದ್ಯಾವತಿಯರಾದ ಸ್ತ್ರೀಯರ ಸಮೂಹವಲ್ಲದೆ ಚೇತನಹೀನರೆನಿಸುವ ಸ್ತ್ರೀಯರು ಅಲ್ಲಿಲ್ಲ. ॥ ೩೮ ॥ ಮರಿದುಂಬಿಯಂತೆ ಕಪ್ಪಾದ ಕುರುಳಿನ, ಪೂರ್ಣಚಂದ್ರನಂತಿರುವ ಮುಖದ, ನೇರಳೆಯ ದೋರೆಹಣ್ಣಿನಂತಿರುವ ತುಟಿಯ, ಕಿವಿಯನ್ನು ಮೀರುವಂತೆ ನಿಡಿದಾಗಿರುವ ಕಣ್ಣುಗಳ ಸೌಂದರ್ಯದಿಂದ ಅಲ್ಲಿನ ಸುಂದರಿಯರು ಶೋಭಿಸುತಿದ್ದರು. ॥ ೩೯ ॥ ಅಲ್ಲಿ ಶೋಭಿಸುವ ಸ್ತ್ರೀಯರ ಹುಬ್ಬು ಮನ್ಮಥನ ಕಬ್ಬುಬಿಲ್ಲಿಗೆ ಎಣೆಯಾದುದು. ಅವರ ಕಣ್ಣುಗಳು ಅವನ ಬಾಣಗಳಿಗೂ ತಲೆಗೂದಲು ಅವನ (ಮನ್ಮಥನ) ಹಗ್ಗಕ್ಕೂ ಹೋಲುವಂಥವಾಗಿವೆ. ॥ ೪೦ ॥ ಕಪ್ಪಾದ ಕೂದಲು, ಉದ್ದವಾಗಿರುವ ಮುಡಿ, ಮಳೆಗಾಲದ ಮಿಂಚನ್ನು ಸೋಲಿಸುವ ಕಣ್ಣು, ಗಟ್ಟಿಯಾಗಿರುವ ಮೊಲೆ, ಆಲದ ಹಣ್ಣಿನಂತೆ ಕೆಂಪಗಿರುವ ತುಟಿ, ಆಕಾಶದಂತೆ ತೆಳುವಾಗಿರುವ ಸೊಂಟ—ಇವುಗಳಿಂದ ಕೂಡಿದ ಸ್ತ್ರೀಯರು ಆ ನಾಡಿನವರು. ॥ ೪೧ ॥ ಆ ನಾಡಿನ ಗಂಡುಸರು ಹೆಚ್ಚಾದ ತಮ್ಮ ಐಶ್ವರ್ಯದಿಂದ ಬಡತನವನ್ನು ಹೊರಟುಹೋಗುವಂತೆ ಮಾಡಲು, ಆ ಬಡತನವನ್ನು ಅಲ್ಲಿನ ಸ್ತ್ರೀಯರು ಕರುಣೆ ತಾಳಿ, ತಮ್ಮ ಸೊಂಟದಲ್ಲಿ ಇಟ್ಟು ಕಾಪಾಡುವರು. ಅಂತಹ ಆ ನಾಡಿನ ಹೆಂಗುಸರಿಗೆ ಸರಿಯಾದವರು ಯಾರಿದ್ದಾರೆ? ॥ ೪೨ ॥ ಪ್ರತಿ

---

[1] ತುಂಬಿ (ಚ) [2] ಹರಿಯ (ಗ) [3] ಕಿಱಿದಿಹರಾ ನಾಡೊಳಗೆ (ಚ). [4] ವೆಣ್ಣುಗಳಿಲ್ಲವಲ್ಲಿ (ಗ. ಚ.). [5] ರೆಸೆದರಂತಲ್ಲಿ (ಚ).
[6] × (ಗ). [7] ವಳಕವೆಂದೆನೆ (ಗ. ಚ.) [8] ನಾಡೊಳಗಿಹುದು (ಗ). [9] ಕೃಪೆಯಿಂದೆ (ಚ). [10] ಮಧ್ಯದೊಳಿತ್ತು (ಚ).

ನಾಡುನಾಡೊಳು ಪುರ ಪುರದೊಳಗಾ ಬಲು । ಬೀಡು ಬೀಡೊಳು ರೂಪು ಗುಣದಿಂ[1] ॥
ಗಾಡಿವಡೆದ ಜಾಣಮಿಥುನವಲ್ಲದೆ ನಾ । ಡಾಡಿಯು ಪೆಣ್ಣುಗಂಡಿಲ್ಲ ॥ ೪೩ ॥

ಕಟ್ಟಕೊಂಡಾಯುಉ ತೀರಲು ಜೀವ[2]ವೊಡಲಿಂದ । ಬಿಟ್ಟು ಹೋಹುದು[3] ಭಾವಿಸಲು ॥
ಕಟ್ಟುಕುಟ್ಟಂ ಕವಳಿಯು[4] ಘಾತದಿಂ ಸತ್ತು । ಪುಟ್ಟುವ ಪಾಪಿಗಳಿಲ್ಲ[5] ॥ ೪೪ ॥

ಜಿನಮತವಲ್ಲದರಿಯರನ್ಯಮತವನು । ಕನಸಿನೊಳಗೆ ತಮತಮಗೇ ॥
ಅನುಕೂಲವಲ್ಲದೆ ಪ್ರತಿಕೂಲವೆಂಬುದ । ನೆನೆವವರಿಲ್ಲವದರೊಳು[6] ॥ ೪೫ ॥

ನುಡಿ ನಡೆ ರೂಪೈಸಿರಿ ಕಡು ಗಾಡಿಯು । ಪಡೆದು ಪುನ್ನವೆ ಜಿನರಡಿಯು ॥
ಬಿಡದೆ ಪೂಜಿಸಿ ಪುಟ್ಟಿದ ನರರಲ್ಲದೆ । ಜಡನರರಿಲ್ಲ ದೇಶದೊಳು[7] ॥ ೪೬ ॥

ಆ ನಾಡ ಜನದ ಪುಣ್ಯವೆ ರೂವು ರೂಪಾಗಿ । ಯಾನದೆ ನೆಲಸಿದಂದದೊಳು[8] ॥
ಆ ನಾಡು ಪುರ ಬೀಡುಗಳೆಲ್ಲೆಡೆಯೊಳು । ಮಾನಿತ ಜಿನಗೃಹವಿಹವು ॥ ೪೭ ॥

ಸಲೆ ಪಳುಕಿನ ನೆಲ ನಂದನ ನಗಲಾ । ಚಲ ನಿರ್ಝರ ಪನಿನೀರು ॥
ಬಲುನೆಲ ಜಿನಮಣಿ ಭವನವಲ್ಲದೆ ಪಾಳು । ನೆಲನಾ ದೇಶದೊಳಿಲ್ಲ[9] ॥ ೪೮ ॥

ಕೊಳನಿಲ್ಲದ ವನ ನವರತ್ನ ಪುಟ್ಟದಾ । ಚಲ ನಿರ್ಜರ ಪನಿನೀರು ॥
ಬಲುನೆಲ ಜಿನಮಣಿ ಭವನವಲ್ಲದೆ ಪಾಳು । ನೆಲನಿಲ್ಲವಾ ನಾಡೊಳಗೇ[10] ॥ ೪೯ ॥

---

ಯೊಂದು ನಾಡಿನಲ್ಲಿಯೂ ಪಟ್ಟಣದಲ್ಲಿಯೂ ಮನೆಯಲ್ಲಿಯೂ ಸೊಬಗಿನಿಂದಲೂ ಶೀಲದಿಂದಲೂ ಶೋಭಿಸುವ ಜಾಣರಾದ ದಂಪತಿಗಳೇ ಇರುವರು ಸಾಮಾನ್ಯರೆನಿಸುವ ಹೆಣ್ಣು ಗಂಡುಗಳು ಆ ನಾಡಿನಲ್ಲಿಲ್ಲ. ॥ ೪೩ ॥ ಆ ನಾಡಿನ ಜನರು, ಗಳಿಸಿದ ಆಯುಷ್ಯವು ತೀರಿದಾಗ ಮಾತ್ರ ಸಾಯುವರು ಏನಾದರೂ ಅಪಗಡ, ಮೂರ್ಛೆ, ಹೊಡೆತ—ಮುಂತಾದವುಗಳಿಗೆ ಸಿಕ್ಕಿ ಸತ್ತು ಹುಟ್ಟತಕ್ಕ ಪಾಪಿಗಳು ಅಲ್ಲಿಲ್ಲ ॥ ೪೪ ॥ ಅಲ್ಲಿರುವವರು ಜೈನಮತವನ್ನಲ್ಲದೆ ಬೇರೆ ಮತವನ್ನು ತಮ್ಮ ಕನಸಿನಲ್ಲಿಯೂ ತಿಳಿಯರು ಒಬ್ಬರು ಮತ್ತೊಬ್ಬರಿಗೆ ಅನುಕೂಲವನ್ನೇ ನೆನೆಯುವರಲ್ಲದೆ ವಿರೋಧವನ್ನು ಎಣಿಸರು. ॥ ೪೫ ॥ ಅಲ್ಲಿರುವ ಜನರು ಪೂರ್ವದಲ್ಲಿ ಜಿನೇಶ್ವರರ ಪಾದವನ್ನು ಎಡೆಬಿಡದೆ ಪೂಜಿಸಿ, ಒಳ್ಳೆಯ ನುಡಿ-ನಡತೆ-ರೂಪ-ಐಶ್ವರ್ಯ-ಹೆಚ್ಚಾದ ಸೌಂದರ್ಯ—ಇವನ್ನೆಲ್ಲ ಪಡೆದುಕೊಂಡೇ ಹುಟ್ಟಿದವರು ಚೇತನ ಹೀನರಾದ ಮನುಷ್ಯರು ಆ ನಾಡಿನಲ್ಲಿಲ್ಲ ॥ ೪೬ ॥ ಆ ನಾಡಿನ ಜನರ ಪುಣ್ಯವೇ ಪ್ರತ್ಯಕ್ಷವಾಗಿ ಬಂದು ಬೇಗನೆ ನೆಲಸಿತೋ ಎಂಬಂತೆ, ಆ ನಾಡು ಪಟ್ಟಣ ಮನೆ-ಮುಂತಾದ ಎಲ್ಲೆಡೆಗಳಲ್ಲಿಯೂ ಶ್ರೇಷ್ಠವಾದ ಜಿನಾಲಯಗಳು ಇರುವವು. ॥ ೪೭ ॥ ಆ ದೇಶದಲ್ಲಿ ಹೆಚ್ಚಾಗಿ ಸ್ಫಟಿಕದ ನೆಲವೂ ಉದ್ಯಾನವೂ, ಬೆಟ್ಟಗಳೂ, ಬೆಟ್ಟದಿಂದಿಳಿದು ಬರುವ ನೀರೂ ಘನವಾದ ಭೂಪ್ರದೇಶವೂ ಜಿನೇಶ್ವರನ ರತ್ನಮಯವಾದ ಮಂದಿರವೂ ಅಲ್ಲದೆ ಪಾಳುನೆಲವೆಂಬುದೇ ಇಲ್ಲ. ॥ ೪೮ ॥ ಕೊಳವಿಲ್ಲದ ವನವೂ ನವರತ್ನಗಳು ದೊರೆಯದಿರುವ ಪರ್ವತವೂ ಆ ನಾಡಿನಲ್ಲಿಲ್ಲ ಅಮೃತದಂತಹ ಹನಿನೀರು, ಗಟ್ಟಿಯಾಗಿರುವ ನೆಲ, ಜಿನೇಶನ ರತ್ನಮಯ ಮಂದಿರ—ಇವು

---

[1] ಗುಣದಿ (ಗ ಚ) [2] ವಸು (ಗ ಚ) [3] ಪೋಪುದು (ಗ ಚ) [4] ಕದಳಿಯ (ಗ ಚ) [5] ನರರಿಲ್ಲವಲ್ಲಿ (ಚ) [6] ಪ್ರತಿಕೂಲವಾನಾಡ ಮನುಜರೊಳಿಲ್ಲಂಬುಜಾಕ್ಷಿ (ಗ ಚ) [7] ಜಡರಿಲ್ಲ ತದ್ವಿಷಯದೊಳು (ಗ ಚ) [8] ನೆಲಸಿದಂತಲ್ಲಿ (ಗ ಚ) [9] ೪೮ನೇ ಪದ್ಯ ಕದಲ್ಲಿಲ್ಲ [10] ನೆಲವಾ ದೇಶದೊಳಿಲ್ಲ (ಚ) ೪೯ನೇ ಪದ್ಯ ಗ ಚ.ದಲ್ಲಿಲ್ಲ

ಕಾಡದೆ ಕಱೆವವು ಗೋಕುಲ ವಲ್ಲಿಯ । ಕಾಡೆಲ್ಲ[1] ನೆಲವಟ್ಟ[2]ಯಾಗಿ ॥
ಮೂಡಿದ ಸಸಿ ಫಲವೀಯದೆ ಕೆಡವಾ । ನಾಡ ಸಿರಿಯನೇನೆಂಬೆ ॥ ೫೦ ॥

ಪೊಳೆ ಕಾಲುವೆಗಳಿರ್ವಕ್ಕದೊಳಗೆ ಸಲೆ । ಬೆಳೆವ ನಾನಾ ಬೆಳೆಯಿಂದೆ ॥
ಕುಳಿರ್ವ[3] ತಾವರೆಗೊಳ ನಿಚಯದಿಂದಾ ನಾ । ಡೆಳಸಿಹುದತಿ ಸೊಬಗಾಂತು ॥ ೫೧ ॥

ಪೊಸಕರ್ವು ಶಾಲಿವನಗಳಿಂ ಮಿಗೆ ರಾ । ಜಿಸುವ ಪೂದೋಂಟಗಳಿಂದೆ ॥
ಮಿಸುನಿಗೇದಗೆಗಳಿಂ ದಾರಾಮದಿಂ ನಾ । ಡೆಸೆದಿಹುದಂಬುಜವದನೇ[4] ॥ ೫೨ ॥

ಇಂತು ರಾರಾಜಿಪ ನಾಡ ನಡುವೆ ಭೂ । ಕಾಂತೆಯ ನಗೆಮೊಗಕಜನು ॥
ಸಂತಸದಿಂದೊಲಿದಿಟ್ಟ ತಿಲಕವೆಂ । ಬಂತೆಸೆದಿಹುದೊಂದು ಪೊಳಲು ॥ ೫೩ ॥

ಬಳಸಿ ಪರಿವ ಪನಿನೀರ ಕಾಲುವೆ ಪೂ । ಗೊಳ ಶಾಲೀವನದಿಂದ ॥
ವಿಲಸಿತವಾಗಿ ರಂಜಿಸುವಾರಾಮದಿಂ[5] । ತಳೆದುದು ಪೊಳಲು ಚೆಲ್ವಿಕೆಯ ॥ ೫೪ ॥

ಲಲನೆ ಕೇಳಾ ಪಟ್ಟಣದ ಕಡುಗಾಡಿಯ । ಚೆಲುವ ಸಿರಿಯ ಸಂಪದವ ॥
ಬಲುಮೆಯ ನಂತಿಂತೆಂದು ಪೇಳ್ವೊಡೆಯಾ[6] । ಜಲಜ ಸಂಭವಗಳವಲ್ಲ ॥ ೫೫ ॥

ರಸದಾಳಿ[7]ಯೆಳನೀರು ಶಶಿಕಾಂತದಿಂದೊಡೆ । ದೊಸರಿ ಪರಿವ ಜಲದಿಂದ[8] ॥
ಹಸನಾಗಿ ಬೆಳೆವ ಶಾಲೀವನಗಳದೊಂ । ದೆಸಕವನೇನ ಬಣ್ಣಿಪೆನು ॥ ೫೬ ॥

ಅಗೆವೊಯ್ವ ನೀರನೂಡುವ ಸಸಿಯನು ಕೊಯ್ದು । ತೆಗೆವ ಪಳುವ ಕೊಬ್ಬ ನಿಲಿಪ ॥
ಸೊಗಸಿ ಬೆಳೆಯ ಕೊಯ್ದು ಪೊಱುವ ಜನಕೆ ತೆಗೆ । ಬಿಗಿಯಿಲ್ಲವಾವ ಕಾಲದೊಳು ॥ ೫೭ ॥

---

ಇರತಕ್ಕ ನೆಲವಲ್ಲದೆ ಪಾಳುನೆಲವಿಲ್ಲ ॥ ೪೯ ॥ ಆ ನಾಡಿನ ಹಸುಗಳು ಸುಲಭವಾಗಿ ಹಾಲನ್ನು ಕೊಡುವವು. ಕಾಡುಗಳ ನೆಲದಲ್ಲಿ ಒತ್ತೊತ್ತಾಗಿ ಹುಟ್ಟಿ ಬೆಳೆದ ಸಸ್ಯಗಳು ಹಣ್ಣುಗಳನ್ನು ಧಾರಾಳವಾಗಿ ಕೊಡುವವು. ಹೀಗಿರುವಾಗ ಆ ನಾಡಿನ ಸಂಪತ್ತನ್ನು ಏನೆನ್ನಲಿ! ॥ ೫೦ ॥ ಹೊಳೆ ಕಾಲುವೆಗಳ ಎರಡೂ ಪಾರ್ಶ್ವಗಳಲ್ಲಿ ವಿಶೇಷವಾಗಿ ಬೆಳೆದ ಹಲವಾರು ಬೆಳೆಗಳಿಂದಲೂ ತಣ್ಣಗಾದ ತಾವರೆಗೊಳಗಳ ಸಮೂಹದಿಂದಲೂ ಆ ನಾಡು ಬಹಳ ಸೊಗಸಾಗಿರುವುದು. ॥ ೫೧ ॥ ಎಲೇ ಚೆಲುವೆಯೇ, ಆ ನಾಡು ಹೊಸ ಕಬ್ಬಿನ ಬೆಳೆಯಿಂದಲೂ ಬತ್ತದ ಪೈರಿನಿಂದಲೂ ವಿಶೇಷವಾಗಿ ಶೋಭಿಸುವ ಹೂದೋಟಗಳಿಂದಲೂ ಹೊಂಗೇದಗೆಯಿಂದಲೂ ಉದ್ಯಾನಗಳಿಂದಲೂ ಶೋಭಿಸುವುದು. ॥ ೫೨ ॥ ಹೀಗೆ ಶೋಭಿಸತಕ್ಕ ನಾಡಿನ ನಡುವೆ ಒಂದು ಪಟ್ಟಣವಿದೆ ಅದು ಭೂಮಿಯೆಂಬ ಹೆಂಗುಸಿನ ನಗೆಮೊಗಕ್ಕೆ ಬ್ರಹ್ಮದೇವನು ಸಂತೋಷದಿಂದ ಇಟ್ಟ ಬೊಟ್ಟಿನಂತೆ ಶೋಭಿಸುವುದು. ॥ ೫೩ ॥ ಆ ಪಟ್ಟಣವು ಸುತ್ತಲೂ ಹರಿಯುವ ಹನಿನೀರ ಕಾಲುವೆಯಿಂದಲೂ ಹೂವಿನ ಕೊಳದಿಂದಲೂ ಬತ್ತದ ಪೈರಿನಿಂದಲೂ ಉದ್ಯಾನದಿಂದಲೂ ಚೆಲುವಾಗಿದೆ. ॥ ೫೪ ॥ ಮಡದಿಯೇ ಕೇಳು. ಆ ಪಟ್ಟಣದ ಹೆಚ್ಚಾದ ಸೊಬಗನ್ನೂ, ಕಾಂತಿಯನ್ನೂ ಐಶ್ವರ್ಯವನ್ನೂ ಘನತೆಯನ್ನೂ ವರ್ಣನೆಮಾಡಲು ಆ ಬ್ರಹ್ಮನಿಗೂ ಸಾಧ್ಯವಿಲ್ಲ. ॥ ೫೫ ॥ ರಸದಾಳಿ ಕಬ್ಬಿನ ನೀರು, ಎಳನೀರು, ಚಂದ್ರಕಾಂತಶಿಲೆಯಿಂದ ಒಸರಿ ಹರಿವ ನೀರು—ಇವುಗಳಿಂದ ಹುಲುಸಾಗಿ ಬೆಳೆಯುವ ಬತ್ತದ ಪೈರುಗಳ ಶೋಭೆಯನ್ನು ಏನೆಂದು ವರ್ಣಿಸಲಿ. ॥ ೫೬ ॥ ಆ ಊರಿನಲ್ಲಿ ಯಾವ ಕಾಲದಲ್ಲಿ ನೋಡಿ

---

[1] ಕಾಪೆಂಬುದಿಲ್ಲ ಸಕಲಫಲ ಬೆಳೆಯದ ನಾಡಿಲ್ಲ (ಕ). [2] ನೆಲವಟ್ಟೆಯಾಗಿ (ಚ) [3] ತಳಿತ (ಗ ಚ.) [4] ನೇತ್ರೆ (ಗ) [5] ವಾರವೆಯಿಂ (ಚ). [6] ಪೇಳುವೊಡಾ (ಚ) [7] ರಸದಾಳೆ (ಗ) [8] ಕಾಲುವೆಯೊಳು (ಚ)

ನೆಲ್ಲ ಮಡಿಗೆ ಬರ್ಪ ಗಿಳಿ ಗಿಜಗನ[1] ತಳು । ಗಿಲ್ಲದೆ[2] ಪಿಂಡಿವಿಲ್ಲಿಂದ[3] ।
ಕಲ್ಲ ಕವಣೆಗಳಿಂದಿರದೆ ಸೋವುತಲಲ್ಲಿ । ಗೊಲ್ಲವೆಣ್ಗಳ ತಂಡವಿಹುದು ॥ ೫೮ ॥

ಅಬ್ಬರಿಸಿಯೆ ಗಿಳಿಗಳ ಸೋವುವ ನಿಡು । ಹುಬ್ಬಿನಬಲೆಯರ ಸ್ವರವು[4] ॥
ಪರ್ಬಿತು ಪಾಂಥರುಗಳಿಗೆ[5] ಕಾವನ ಬಲು । ಬೊಬ್ಬೆಯಬ್ಬರವಿದೆಂಬಂತೆ ॥ ೫೯ ॥

ಕಾವುತ ಗದ್ದೆಯ ಸೋವುತ ಪಕ್ಕಿಯ । ನೋವುತ ದೀಹ[6]ದೆರಲೆಯ ॥
ತಾವರೆಗಣ್ಣ ಪಾಮರಿಯರುಗಳ[7] ಬಲು । ಗಾವಳಿಯೆಸೆದುದಂದಲ್ಲಿ[8] ॥ ೬೦ ॥

ಮುನಿದಗಲಿದ ವಿರಹಿಗಳಿಗಾಜ್ಞೆಯನಂ । ದಿನಿವಿಲ್ಲ ಮಾಡಿಸುವಂತೆ ॥
ಘನಕುಚೆಯರು[9]ಗಳುಗ್ಗಳಿಸುವಾರ್ಭಟೆಯ ಬ । ಲ್ದನಿಯೆಸೆದುದು ಪಾಂಥರಿಗೆ[9] ॥ ೬೧ ॥

ಕುಱಾಗಿ ಭಾರಕೆ ಬೆಳೆದೊಱಗುವ[10] ತೆನೆಗೆ ಬಂ । ದೆಱಗುವ ಗಿಳಿಯನೇಳಿಸುವ ॥
ಪಱಮೆಗುರುಳ ಪಾಮರಿಯ ನುಣ್ಬರಕೆ ಮೈ । ಮಱೆವರು ಕೇಳ್ದ ಬಟ್ಟೆಗರು ॥ ೬೨ ॥

ಕೆಯ್ಯ ಪರಿಗೆ ಗಿಳಿಯುಗಿದು[11] ಚಂಚುವಿನಿಂ । ದೊಯ್ಯನೆ ತೆನೆಗರ್ಚಿ ಪಾಱೆ ॥
ಅಯ್ಯಯ್ಯೊ ನಭಕ್ಕೈದುತಿವೆ ಗದ್ದೆಯೆಂದಾ । ರಯ್ಯ ದಿಟ್ಟಿಪರು[12] ಮುಗ್ಧೆಯರು ॥ ೬೩ ॥

ಸುಲಲಿತಾಂಗಿಯರರಗಿಳಿಯ[13] ಸೋವುತಲಿರ್ಪ । ಸುಲಲಿತಮಪ್ಪಟ್ಟಣೆಗಳು ॥
ಸಲೆ ಮೆಱೆದವು ಜಲಶಾಳಿಯಿಂ ಕಾವನ । ಜಲ ವನ ಗಿರಿ ದುರ್ಗದಂತೇ ॥ ೬೪ ॥

---

ವರೂ ಜನರು ಪೈರಿನ ಮೊಳಕೆಗಳನ್ನು ಮೊಳೆಯಿಸುತ್ತಲೂ ನೀರನ್ನು ಗದ್ದೆಗಳಿಗೆ ಹರಿಯಿಸುತ್ತಲೂ ಹಾಳು ಸಸ್ಯವನ್ನು ಕೊಯ್ಯುತ್ತಲೂ ಕೊಬ್ಬಿ ಬೆಳೆಯುವ ಕಾಡನ್ನು ಕಡಿಯುತ್ತಲೂ ಚೆಲುವಾಗಿ ಬೆಳೆದ ಬೆಳೆಯನ್ನು ಕೊಯ್ದು ಹೊತ್ತುಕೊಂಡು ಹೋಗುತ್ತಲೂ ಇರುವರು. ॥ ೫೭ ॥ ಅಲ್ಲಿ ಗೊಲ್ಲರ ಹೆಂಗುಸರು ತಂಡತಂಡವಾಗಿದ್ದುಕೊಂಡು ಬತ್ತದ ಮಡಿಗಳಿಗೆ ಬರತಕ್ಕ ಗಿಳಿಗಳನ್ನೂ ಗೀಜಗನ ಹಕ್ಕಿಗಳನ್ನೂ ತಮ್ಮ ಪಿಂಡಿಬಿಲ್ಲುಗಳಿಂದಲೂ ಕಲ್ಲುಕವಣೆಗಳಿಂದಲೂ ತಡವಿಲ್ಲದೆ ಓಡಿಸುತ್ತಲೇ ಇರುವರು. ॥ ೫೮ ॥ ಅಲ್ಲಿ ಬೊಬ್ಬಿಡುತ್ತ ಗಿಳಿಗಳನ್ನು ಓಡಿಸುವ ಸುಂದರಿಯರ ಸ್ವರವು, ದಾರಿಹೋಕರಿಗೆ ಆ ಮನ್ಮಥನ ಬೊಬ್ಬೆಯ ಅಬ್ಬರವೋ ಎಂಬಂತೆ ಕೇಳಿಸುವುದು. ॥ ೫೯ ॥ ಅಲ್ಲಿ ಗದ್ದೆಯನ್ನು ಕಾಯುತ್ತಲೂ ಹಕ್ಕಿಗಳನ್ನು ಓಡಿಸುತ್ತಲೂ ಬೇಟೆಯ ಹುಲ್ಲೆಯನ್ನು ಪ್ರೀತಿಸುತ್ತಲೂ ಇರುವ ಸುಂದರಿಯರಾದ ಪಾಮರಿಯರ ಧ್ವನಿ ಕೇಳಿಸುತ್ತ ಇರುವುದು ॥ ೬೦ ॥ ಘನಕುಚೆಯರಾದ ಆ ಪಾಮರಿಯರ ಬೊಬ್ಬೆಯ ಸ್ವರವು ದಾರಿಗರಿಗೆ ಕೇಳಿದಾಗ, ಅದು ಒಬ್ಬರಿಗೊಬ್ಬರು ಕೋಪಿಸಿ ಅಗಲಿದ ಪ್ರಣಯಿಗಳಿಗೆ ಮನ್ಮಥನು ಕೊಡುವ ಆಜ್ಞೆಯ ಮಾತುಗಳು ಎನಿಸುತ್ತಿದ್ದವು ॥ ೬೧ ॥ ಒಪ್ಪಾಗಿ ಬೆಳೆದು ಭಾರದಿಂದ ನೆಲಕ್ಕೆ ಎರಗುವ ತೆನೆಯನ್ನು ತಿನ್ನಲು ಬರುವ ಗಿಳಿಗಳನ್ನು ಓಡಿಸುವ ತುಂಬಿಗುರುಳಿನ ಪಲ್ಲೆಂಗುಸರ ಮೃದುಸ್ವರವನ್ನು ಕೇಳಿದ ದಾರಿಗರು ತಮ್ಮನ್ನು ತಾವೇ ಮರೆತುಬಿಡುವರು. ॥ ೬೨ ॥ ಮುಗ್ಧೆಯರಾದ ಆ ಹೆಂಗುಸರು ಕೈಚಪ್ಪಾಳೆ ಹೊಡೆದಾಗ ಗಿಳಿಗಳು ಹೆದರಿ, ತಮ್ಮ ಕೊಕ್ಕಿನಿಂದ ಕಚ್ಚಿದ ತೆನೆಯೊಡನೆ ಹಾರಿ ಹೋಗುವುವು. ಆಗ ಹೆಂಗುಸರು "ಅಯ್ಯಯ್ಯೋ" ಗದ್ದೆಯೇ ಆಕಾಶಕ್ಕೆ ಹೋಗುತ್ತಿದೆಯಲ್ಲಾ ಎಂದು ದಿಟ್ಟಿಸಿ ನೋಡುವರು ॥ ೬೩ ॥ ಆ ಹೆಂಗುಸರು ಅರಗಿಳಿಗಳನ್ನು ಓಡಿಸುವುದಕ್ಕಾಗಿ ತಮಗೆ ಇರಲು ಮಾಡಿಕೊಂಡ ಸುಂದರವಾದ ಅಟ್ಟಣೆಗಳು ನೀರಿನಿಂದ

---

[1] ಗಿಜಗ (ಗ) ಗಿಜಗನ (ಚ) [2] ತಱುವಿಲ್ಲದೆ (ಚ) [3] ಪಿಂಡಿಬಿಲ್ಲಿಂ (ಗ ಚ) [4] ಸರವು (ಚ) [5] ಪಾಂಥರ ಕಿವಿಗೆ (ಚ). [6] ದೇಸ (ಗ) [7] ತಾವರೆಗಣ್ ಪಾಮರಿಯರ (ಗ) [8] ಯೆಸೆದುವಲ್ಲಿ (ಚ) [9] ಗಿಳಿಸೋವ ಚಾಟಿಯ ಬಲ್ಧ್ವನಿಯೆನಿಸಿದುದು (ಕ) [10] ನೆಲಕೆ ಬಾಗಿಕೊಱಗುವ (ಗ ಚ) [11] ಗೀಱಿದು (ಗ ಚ) [12] ದಿಟ್ಟಿಪರು (ಚ) [13] ಸುಲಲಿತಾಂಗಿಯರೇರಿ ಗಿಳಿಯ (ಗ)

ಮುಡಿಯುಳಿಯಲು ತೋರಮೊಲೆ ಕುಣಿಯಲು ಸಣ್ಣ । ನಡು ಮಣಿಯಲು ಪರಿಪರಿದು ॥
ಬಿಡದೆ ಗದ್ದೆಗೆ ಬರ್ಪ ಗಿಳಿಯ ಸೋವುವ[1]ನು । ಣ್ಣುಡಿಯ ನೀಱೆಯರಿಹರಲ್ಲಿ ॥ ೬೫ ॥

ಹರಿಣಲೋಚನೆಯರು ಪಕ್ಕಿಯ ಸೋವೆಯಂ । ಬರವ ನಿಟ್ಟಿಸೆ ಕಣ್ಬೆಳಗು ॥
ಪರಿಯೆ ಬೆಳ್ವಲೆಯೆಂದು ತೆನೆ ಸಾರಲಂಜಿಯಂ । ಬರದೊಳಿಹವು ಗಿಳಿವಿಂಡು ॥ ೬೬ ॥

ನಲವಿಂದ ಬೆಳೆಗಾಯ್ವ ಕೋಮಲೆಯರ ಬಲು । ಮೊಲೆವೆಟ್ಟನೊಳಡಗಿರ್ದ ॥
ಅಲರಂಬನೆಂಬ ಚೋರನು ಬಟ್ಟೆಗರ ಕ । ಣ್ಗೊಲೆವೊಯ್ವನಂಬುಜನೇತ್ರೆ ॥ ೬೭ ॥

ಅರೆಯೆಡೆ ಮಂಚಿಗೆಗಳ ಮೇಲರೆಯೆಡೆ । ಸುರಹೊನ್ನೆಯ ನೆಳಲೊಳಗೆ ॥
ಅರೆಯೆಡೆ ಪರಿಪರಿದಾಡಿ ಪಕ್ಕಿಯ ಸೋವ । ತರುಣಿಯರುಗಳೆಸೆದಿಹರು[2] ॥ ೬೮ ॥

ಇಂತು ರಾರಾಜಿಪ ಶಾಲಿಯ ವನಗಳ । ಮುಂತೆಸೆವಱವಟ್ಟೆಯೊಳು[3] ॥
ಸಂತಸದಿಂ ಪಥಿಕರಿಗೆ ನೀರೆಱೆವ ಸು । ಕಾಂತೆ[4]ಯರುಗಳ ಪೇಳುವೆನು ॥ ೬೯ ॥

ನಸು ತೊಲಗಿಸಿ ತೋರ ಮೊಲೆಯ ಮೇಲುದ[5] ತ । ಮ್ಮೆಸಳುಗಣ್ಣಿಂದ ಬೇಟವನು ॥
ಎಸಗುತ ಪಾಂಥರುಗಳಿಗೆಱೆವರು[6] ನೀರ । ನೊಸೆದಗ್ಗಿಯ ಪುಟ್ಟಿಪರು[7] ॥ ೭೦ ॥

ತುಂಗಕುಚೆಯರು ಪೊಂಗಳಸದಂಬುವ ತೃಷೆ । ಪಿಂಗಲೀವರು ತೃಷೆಯೆಂದು ॥
ಪಿಂಗಿ ಪಿಂಗರು ತಾ ಬಿಟ್ಟಪೆ ಬಿಡದೆಂಬ । ಭಂಗಿ[8]ಗೀಡಾಗಿ ಬಟ್ಟೆಗರು ॥ ೭೧ ॥

---

ಕೂಡಿದ ಬತ್ತದ ಗದ್ದೆಗಳ ನಡುವೆ ಇದ್ದುವು. ಅವು ಮನ್ಮಥನ ಜಲದುರ್ಗ ವನದುರ್ಗ ಗಿರಿದುರ್ಗಗಳಂತೆ ಕಾಣುತ್ತಿದ್ದವು. ॥ ೬೪ ॥ ತಲೆಯ ಮುಡಿಗೂದಲು ಬಿಚ್ಚಿಹೋಗಲು, ತೋರಮೊಲೆ ಕುಣಿಯಲು, ಸಣ್ಣದಾದ ಸೊಂಟವು ಬಳುಕಲು ಓಡಾಡುತ್ತ, ಗದ್ದೆಗೆ ಎಡೆಬಿಡದೆ ಬರತಕ್ಕ ಗಿಳಿಗಳನ್ನು ಓಡಿಸುವ ಮೆಲ್ನುಡಿಯ ಸುಂದರಿಯರು ಅಲ್ಲಿರುವರು. ॥ ೬೫ ॥ ಹಕ್ಕಿಗಳನ್ನು ಓಡಿಸುವುದಕ್ಕಾಗಿ ಆ ಹೆಂಗುಸರು ಆಕಾಶದ ಕಡೆಗೆ ತಮ್ಮ ದೃಷ್ಟಿಯನ್ನು ಹಾಯಿಸಲು, ಅವರ ಕಣ್ಣಿನ ಪ್ರಕಾಶವು ಹರಡಲು, ಇದನ್ನು ನೋಡಿದ ಗಿಳಿಗಳು ಇದನ್ನು ಬಿಳಿದಾದ ಬಲೆಯೆಂದು ಭಾವಿಸಿ, ತೆನೆಯ ಬಳಿಗೆ ಬರಲು ಹೆದರಿ ಆಕಾಶ ದಲ್ಲೇ ನಿಲ್ಲುವವು. ॥ ೬೬ ॥ ಪುಷ್ಪಬಾಣ (ಮನ್ಮಥ) ನೆಂಬ ಕಳ್ಳನು ಅಲ್ಲಿ ಸಂತೋಷದಿಂದ ಬೆಳೆಕಾಯುವ ಹೆಂಗುಸರ ದೊಡ್ಡದಾದ ಮೊಲೆಯೆಂಬ ಬೆಟ್ಟದಲ್ಲಿ ಅಡಗಿಕೊಂಡಿದ್ದು ದಾರಿಗರ ಕಣ್ಣಿಗೆ ಗುರಿಯಿಟ್ಟು ಹೊಡೆಯುವನು. ॥ ೬೭ ॥ ಕೆಲವೆಡೆಗಳಲ್ಲಿ ಹೊಲಕಾವ ಅಟ್ಟಳೆಗಳ ಮೇಲೂ ಕೆಲವೆಡೆಗಳಲ್ಲಿ ಸುರಹೊನ್ನೆಮರಗಳ ನೆಳಲಲ್ಲೂ ಇದ್ದುಕೊಂಡು ಇನ್ನು ಕೆಲವೆಡೆ ಅತ್ತಿತ್ತ ಸಂಚರಿಸುತ್ತಲೂ ಹಕ್ಕಿಗಳನ್ನು ಓಡಿಸುವ ಸ್ತ್ರೀಯರು ಶೋಭಿಸುತ್ತಿರುವರು. ॥ ೬೮ ॥ ಹೀಗೆ ಶೋಭಿಸತಕ್ಕ ಬತ್ತದ ಗದ್ದೆಗಳ ಮುಂದುಗಡೆ ನೀರಿನ ಅರವಟಿಗೆಯಲ್ಲಿ ದಾರಿಗರಿಗೆ ಸಂತೋಷದಿಂದ ನೀರನ್ನು ಎರೆಯುತಕ್ಕ ಸುಂದರಿಯರ ಕುರಿತು ಹೇಳುವೆನು. ॥ ೬೯ ॥ ಆ ಅರವಟಿಗೆಯ ಹೆಂಗುಸರು ದಾರಿಗರಿಗೆ ನೀರನ್ನು ಎರೆಯುವಾಗ ತಮ್ಮ ತೋರಮೊಲೆ ಯನ್ನು ಮುಚ್ಚಿದ ಮೇಲುದನ್ನು ಓರೆಮಾಡಿ, ಎಸಳಿನಂತಿರುವ ಕಣ್ಣಿನಿಂದ ನೋಡಿ, ಆ ದಾರಿಗರಲ್ಲಿ ಕಾಮಪರವಶತೆಯನ್ನು ಉಂಟುಮಾಡುವರು, ತಾಪವನ್ನು ಹುಟ್ಟಿಸುವರು. ॥ ೭೦ ॥ ಉನ್ನತಸ್ತನೆಯರಾದ ಹೆಂಗುಸರು ಚಿನ್ನದ ಕೊಡನೀರನ್ನು ನೀರಡಿಕೆ ನಿವಾರಣೆಯಾಗುವಂತೆ ದಾರಿಗರಿಗೆ ಕೊಡುವರು. ಆಗ ಆ ದಾರಿಗರು ಬಾಯಾರಿಕೆ ಹೋದರೂ, ಅಲ್ಲಿಂದ ಹೋಗಲೂ

---

[1] ಸೋವುತ (ಗ) [2] ತರುಣಿಯ ರೆಸೆದರಂದಲ್ಲಿ (ಗ ಚ) [3] ಮಱವಟ್ಟಿಗೆಯೊಳು (ಗ. ಚ) [4] ಭೂಕಾಂತೆ (ಕ) [5] ಮೇಲುದ ತೋಳನೆತ್ತಿ (ಗ ಚ.) [6] ಪಾಂಥರೊಳವರಿಗೆಱೆಯೆ (ಗ) ಪಾಂಥರೊಳವರಿಗೆಱೆದು (ಚ). [7] ನೇಳಿಸುವರು (ಗ ಚ) [8] ಬಿಂಗಿ (ಗ)

ನಿಟ್ಟಿಸಿ ಪಥಿಕರು ನೀರನೆಱೆವ ಬಲು । ಬಟ್ಟಜವ್ವನೆಯರಂಗವನು ॥
ಬಿಟ್ಟು ಪೋಗದೆ ನಿಂದಿರ್ಪರು ಪಿಡಿತಂದು । ಕಟ್ಟಿದ ಕಱುವಿನಂದದೊಳು ॥ ೨೧ ॥

ನೀರನೆಱೆವ ನೀಱೆಯರ ಲಾವಣ್ಯಾಂಬು । ಪೂರದ ಸುಳಿಯೊಳು ಸಿಲುಕಿ ॥
ದಾರಿಗರತಿ ಸಿಡು[1]ಮಿಡಿಗೊಳುತಂಗಜ । ಮೀರಗೊಡಲನೊಪ್ಪಿಸಿದರು[2] ॥ ೨೨ ॥

ಶರವ ಬಟ್ಟೆಗರಿಗೆಱೆವ ತರುಣಿಯ ವಾಮ । ಕರದ ಪಳುಕಿನ ತಣ್ಗರಗ ॥
ಪಿರಿದೊಪ್ಪಿದುದು[3] ಶೋಣಾಂಬುಜದೊಳಗಿರ್ಪ । ವರಹಂಸನೆಂಬಂದದೊಳು ॥ ೨೩ ॥

ಪೋಗುವನಿವ ತೃಷೆ ಪಿಂಗ ಕರದ ವಾರಿ । ಸಾಗೆ ಪೋಗುವಳಿವಳೆಂದು ॥
ರಾಗದೊಳೆಱೆವೀಂಟುತಿರ್ಪಿರ್ವರನೊಂದು[4] । ಪೂಗೋಲೊಳೆಚ್ಚನಂಗಜನು ॥ ೨೪ ॥

ಶಶಿಕಾಂತದ ಕರಗದೊಳಿರ್ಪ ಜಲವನು । ಶಶಿಮುಖಿಯರು ಪಾಂಥರಿಗೇ ॥
ಒಸೆದೆಱೆಯಲು ತೀರೆ ನಿಜಮುಖರುಚಿಯಿಂ । ದೊಸರ್ವ ನೀರೆಱೆವರಬ್ಜಾಕ್ಷೀ ॥ ೨೫ ॥

ಎರೆದರ್ಗೆಱೆದು ನೀರನೀಕ್ಷಿಸಿ ಬಗೆ ಬಂ । ದರ ಬಿಟ್ಟು ಬಗೆಬಾರದಿರ್ಪ ॥
ನರರೊಳು ಮೋಹಿಪ ಸತಿಯರುಗಳ ಗಾಡಿ । ಗರುವಿಕೆಯನು ಪೇಳ್ವೆನೇನ ॥ ೨೬ ॥

ನಸುನೋಟ ನಸುನಾಣು ನಸುನಗೆಯಿಂ ಪೊಚ್ಚ । ಪೊಸಬೇಟದಿಂ ಬಟ್ಟೆಗರ ॥
ಅಸುವಿಗುಬ್ಬಸವ ಮಾಡುತ ನೀರನೆಱೆವರು । ಶಶಿಮುಖಿಯರು ಲೀಲೆಯೊಳು ॥ ೨೭ ॥

ಮಡದಿ ಕೇಳಿಂತೆಸೆವಱವಟಗೆಯ[5] ಮುಂ । ಗಡೆಯೊಳಗತಿಕೌತುಕವ ॥
ಪಡೆದು ರಾರಾಜಿಪ ವನನಿಚಯಂಗಳ[6] । ಕಡುಸಿರಿಯನು ಪೇಳುವೆನು ॥ ೨೮ ॥

---

ಹೋಗದಿರಲೂ ಸಾಧ್ಯವಿಲ್ಲದಾಗುವರು ॥ ೨೦ ॥ ಹಿಡಿದು ತಂದು ಕಟ್ಟಿಹಾಕಿದ ಕರುವಿನಂತೆ ಆ ದಾರಿಗರು ತಮಗೆ ನೀರನ್ನೆರೆವ ಯುವತಿಯರ ಅಂಗಾಂಗಗಳನ್ನು ನೋಡಿ, ಅವರನ್ನು ಬಿಟ್ಟು ಹೋಗಲಾರದೆ ನಿಂತುಕೊಂಡಿರುವರು. ॥ ೨೧ ॥ ತಮಗೆ ನೀರನ್ನೆರೆವ ಸುಂದರಿಯರ ಲಾವಣ್ಯವೆಂಬ ನೀರಿನ ಪ್ರವಾಹದ ಸುಳಿಗೆ ಸಿಕ್ಕಿದವರಾಗಿ ಆ ಪಥಿಕರು ತಬ್ಬಿಬ್ಬಾಗುತ್ತ ತಮ್ಮ ದೇಹವನ್ನೇ ಮನ್ಮಥನಿಗೆ ಒಪ್ಪಿಸುವರು. ॥ ೨೨ ॥ ದಾರಿಗರಿಗೆ ನೀರನ್ನೆರೆವ ಯುವತಿಯ ಎಡಗೈಯಲ್ಲಿರುವ ಚಂದ್ರಕಾಂತದ ಕೊಡವು ಕೆಂದಾವರೆಯಲ್ಲಿ ಇರುವ ಹಂಸಪಕ್ಷಿಯಂತೆ ಶೋಭಿಸುವುದು ॥ ೨೩ ॥ ಈ ದಾರಿಗನು ನೀರು ಕುಡಿದು ಬಾಯಾರಿಕೆ ನಿಂತೊಡನೆ ಹೋದಾನು, ನೀರನೆರೆವ ಈಕೆಯು ಕೈಯ ನೀರು ಮುಗಿದಾಗ ಹೋದಾಳು—ಎಂದು ಭಾವಿಸಿದ ಮನ್ಮಥನು ಹೀಗೆ ಪ್ರೀತಿಯಿಂದ ನೀರನ್ನೆರವ ಮತ್ತು ನೀರುಕುಡಿವ ಆ ಇಬ್ಬರಿಗೂ ಒಂದು ಹೂವಿನ ಬಾಣದಿಂದ ಹೊಡೆದನು. ॥ ೨೪ ॥ ಎಲೇ ಚೇಳಿನಿಯೇ ಕೇಳು ಆ ಚಂದ್ರಮುಖಿಯರು ತಮ್ಮ ಜಲಪಾತ್ರೆಯಲ್ಲಿರುವ ನೀರನ್ನು ಪ್ರೀತಿಯಿಂದ ದಾರಿಗರಿಗೆ ಎರೆದು ತೀರಲು, ತಮ್ಮ ಮುಖದ ಕಾಂತಿಯಿಂದ ಒಸರುವ ನೀರನ್ನು ಎರೆಯುವರು ॥ ೨೫ ॥ ಅಪೇಕ್ಷಿಸಿದವರಿಗೆ ನೀರನ್ನೆರೆದು, ಮನಕ್ಕೆ ಮೆಚ್ಚಿದವರನ್ನು ನೋಡಿ, ಮನಸ್ಸಿಗೆ ಮೆಚ್ಚುಗೆಯಾಗದವರನ್ನು ಬಿಟ್ಟು, ಹೀಗೆ ಗಂಡುಸರನ್ನು ಮೋಹಗೊಳಿಸುವ ಆ ಹೆಂಗುಸರ ಸೌಂದರ್ಯ ಗೌರವಗಳನ್ನು ಏನೆನ್ನಲಿ! ॥ ೨೬ ॥ ಆ ಸುಂದರಿಯರು ನಸುನೋಟದಿಂದಲೂ ನಸುನಾಚಿಕೆಯಿಂದಲೂ ಮುಗುಳುನಗೆಯಿಂದಲೂ ಹೊಸತಾದ ಕಾಮಪರವಶತೆಯಿಂದಲೂ ದಾರಿಗರ ಜೀವಕ್ಕೆ ಮೇಲುಸಿರನ್ನು ಉಂಟುಮಾಡುತ್ತ ಸಂತೋಷದಿಂದ ನೀರನ್ನೆರೆವರು ॥ ೨೭ ॥ ಮಡದಿಯೇ, ಹೀಗೆ ಶೋಭಿಸುವ

---

[1] ಸಿಡಿ (ಚ) [2] ನೊಪ್ಪಿಸಿಹರು (ಚ) [3] ಕರಮಸೆದುದು (ಗ ಚ) [4] ದೊಂದು (ಗ) [5] ವಱವಟ್ಟಿಯ (ಗ) [6] ನಿಚ್ಚೆಯಗಳ (ಗ)

ಓಲಗಸಾಲೆ ಪೂಗಿಡುಗಳೋಳಿಗೆ[1] ಜೇನ । ಸಾಲೆಯಂಗಜಗೆ ಜೇವಣದ[2] ॥
ಸಾಲೆಯಾಱಿಡಿಗೆ ತಂಬೆಲರಿಗೆ ನಾಟ್ಯದ । ಸಾಲೆಯಂತೆಸೆದುದಾರಾಮ ॥ ೮೦ ॥

ಆ ವನವೆಂಬಾಗಸದೊಳೊಗೆದು ರುಚಿ[3] । ತೀವಿರ್ದ ತಾರೆಗಳಂತೆ ॥
ಭಾವಜನುರುಕೀರ್ತಿಯ ಬೀಜದಂತೆ ಪೂ । ದೀವಿ[4] ಮಲ್ಲಿಗೆಗಳೊಪ್ಪಿದವು ॥ ೮೧ ॥

ಉರಿಗಣ್ಣಿಂದೀಶ ಸುಡುವಂದು ಕಾವ ತ । ನ್ನುರುತೇಜದ ಬಿತ್ತುಗಳನು ॥
ಇರದೆ[5] ಬೈತಿಟ್ಟನೆಂಬಂತೆ ಕೆಂಜಾಜಿಯ । ಬಿರಿಮೊಗ್ಗೆಯೊಪ್ಪಿದವಲ್ಲಿ ॥ ೮೨ ॥

ಸರಿ ಗಡ ನಾವಿರ್ಪ ವನಕೆ ನಂದನವೆಂದು । ಪರಿಹಾಸದಿಂ ನಗುವಂತೆ ॥
ಕರಮೆಸೆದವು ಬೀಗಿ ಬೆಳೆದ ದಾಳಿಂಬದ । ಬಿರಿವಣ್ಗಳಾ ಬನದೊಳಗೆ[6] ॥ ೮೩ ॥

ಅಲ್ಲಿಯ ಗಿಳಿತತಿ ನೋಡಿ ರುಚಿಯ ಕೆಂ । ಗಲ್ಲ ದಾಡಿಮದ ಬಿತ್ತೆಂದು ॥
ನಿಲ್ಲದೆ ಚಂಚುವಿಂ ಕಚ್ಚಿ ಬಿಸುಟು ಬಲು । ತಲ್ಲಣಗೊಂಬವೆದೆಯೊಳು ॥ ೮೪ ॥

ಸೊನೆ ಲೋಳೆ ಕಾಯಿ[7] ಮಾಗಾಯಿಯುಡೆಯ ಮಣಿ । ನನೆ ತಳಿರರಳೆಲೆಯಾಗೆ ॥
ವನದೊಳು ಮಾಕಂದ ವನದೇವಿಯ ವರ । ತನುಜನಂತಿಹುದು ನೋಳ್ಪರಿಗೆ ॥ ೮೫ ॥

ಅರಲ ಬಳಿಯೊಳು ಫಲವನಿತ್ತು ಬಾಳುವ । ತರು ಸರಿಯಲ್ಲೆನಗೆಂದು ॥
ಅರಗಿಳಿಯಿಂ ನುಡಿಸುತ ಬಕ್ಕೆವಲಸಿನ ಮರಗಳೆಸೆದವಂದಲ್ಲಿ[8] ॥ ೮೬ ॥

---

ಅರವಟಿಗೆಯ ಮುಂದುಗಡೆ ಅತ್ಯಂತ ಆಶ್ಚರ್ಯಕರವೆನಿಸಿ ಮೆರೆಯುತ್ತಿರುವ ಉದ್ಯಾನಗಳ ಶೋಭೆಯನ್ನು ತಿಳಿಸುತ್ತೇನೆ, ಕೇಳು. ॥ ೭೯ ॥ ಆ ಉದ್ಯಾನವು ಹೂಗಿಡಗಳ ಸಮೂಹಕ್ಕೆ ಓಲಗ ಶಾಲೆಯಾಗಿಯೂ, ಮನ್ಮಥನಿಗೆ ಜೇನಶಾಲೆಯಾಗಿಯೂ ತುಂಬಿಗಳಿಗೆ ಭೋಜನಶಾಲೆಯಾಗಿಯೂ ತಂಗಾಳಿಗೆ ನಾಟ್ಯದ ಶಾಲೆಯಂತೆಯೂ ಶೋಭಿಸುವುದು. ॥ ೮೦ ॥ ಆ ಉದ್ಯಾನವೆಂಬ ಆಕಾಶದಲ್ಲಿ ಮೂಡಿ ಹೊಳಪನ್ನು ಬೀರುವ ನಕ್ಷತ್ರಗಳೋ ಎಂಬಂತೆಯೂ ಮನ್ಮಥನ ಅತಿಶಯವಾದ ಕೀರ್ತಿಯ ಬೀಜಗಳೋ ಎಂಬಂತೆಯೂ ಹೂಗಳಿಂದ ತುಂಬಿದ ಮಲ್ಲಿಗೆಗಳು ಶೋಭಿಸುವುವು ॥ ೮೧ ॥ ಶಿವನು ತನ್ನ ನೇತ್ರಾಗ್ನಿಯಿಂದ ಸುಡುವ ಕಾಲದಲ್ಲಿ ಮನ್ಮಥನು ತನ್ನ ತೇಜಸ್ಸಿನ ಬೀಜಗಳನ್ನು ಬೈತಿಟ್ಟನೋ ಎಂಬಂತೆ ಅಲ್ಲಿ ಕೆಂಪಾದ ಜಾಜಿಯ ಬಿರಿಮುಗುಳುಗಳು ಶೋಭಿಸಿದವು. ॥ ೮೨ ॥ ನಾವು ಇರತಕ್ಕ ಬನಕ್ಕೆ ದೇವಲೋಕದ ನಂದನವನವೇ ಸಾಟಿಯೆಂದು ಪರಿಹಾಸದಿಂದ ನಗುವಂತೆ, ಆ ಉದ್ಯಾನದಲ್ಲಿ ಬಲಿತು ಬೆಳೆದು ಬಿರಿದ ದಾಳಿಂಬದ ಹಣ್ಣುಗಳು ಶೋಭಿಸಿದವು. ॥ ೮೩ ॥ ಆ ಉದ್ಯಾನದಲ್ಲಿ ಕೆಂಪಾದ ಕಲ್ಲುಗಳನ್ನು ಅವುಗಳ ಪ್ರಕಾಶದಿಂದ ದಾಳಿಂಬದ ಬೀಜಗಳೆಂದು ಭ್ರಮಿಸಿದ ಗಿಳಿಗಳು ತಮ್ಮ ಕೊಕ್ಕಿನಿಂದ ಕುಟುಕಿ ಬಿಸಾಡಿ, ದಿಗ್ಭ್ರಮೆಗೊಳ್ಳುವವು. ॥ ೮೪ ॥ ಮಾವಿನ ಸೊನೆಯೇ ಜೊಲ್ಲುರಸವಾಗಿಯೂ, ಮಾವಿನಕಾಯಿ ಮಾಗಾಯಿಯೆಂಬ ಆಭರಣವಾಗಿಯೂ ಮೊಗ್ಗುಗಳೇ ಉಡಿಯ ರತ್ನಗಳಾಗಿಯೂ, ಚಿಗುರು ಅರಳೆಲೆಯಾಗಿಯೂ ಕಾಣಿಸುತ್ತಿದ್ದಿತಂ. ಇದರಿಂದ ಆ ಉದ್ಯಾನದ ಮಾವು ವನದೇವಿಯ ಮಗನಂತೆ ತೋರುತ್ತಿತ್ತು. ॥ ೮೫ ॥ ಮೊದಲು ಹೂವು ಕಾಣಿಸಿ, ಆ ಮೇಲೆ ಅದು ಬೆಳೆದು ಫಲವಾಗಿ ಬಾಳುವ ಇತರ ಮರಗಳು ನನಗೆ ಸರಿಯಲ್ಲ – ಎಂದು ಅರಗಿಳಿಗಳಿಂದ ಹೇಳಿಸುತ್ತ ಅಲ್ಲಿ ಬಕ್ಕೆ ಹಲಸಿನ ಮರಗಳು ಶೋಭಿಸಿದವು. ॥ ೮೬ ॥ ವನದೇವಿಯು ಮನ್ಮಥನ ಆಜ್ಞಾನುಸಾರವಾಗಿ ನೀಲರತ್ನದ ಮಡಕೆಯಲ್ಲಿ

---

[1] ಗಿಡುಗಳೊಳಗೆ (ಕ) [2] ರ್ಘೋವಣದ (ಕ). [3] ಬಲು (ಗ. ಚ.). [4] ತೀವಿ (ಚ) [5] ಭರದಿ (ಚ). [6] ಆರಾಮದೊಳು (ಗ. ಚ ). [7] ಉಳಿಕಾಯಿ (ಗ). [8] ಯುದಯ (ಚ).

ಅರಲಂಬನಾಣತಿಯಿಂ ವನದೇವಿಯಿಂ । ಬರಚರಿಯರಿಗಿನಿರಸವ ॥
ಮರಕತ ಘಟ[1]ದೊಳಿತ್ತಪಳೆನೆ ತೆಂಗಿನ । ಮರಗಳೆಸೆದವಂದಲ್ಲೀ[2] ॥ ೮೭ ॥

ಅಂಗೋದ್ಭವ ಮುನಿದಗಲಿದ ಮೋಹಿಜ । ನಂಗಳನೆಸುವ ಮಿಂಟೆಗಳ ॥
ಜಂಗುಳಿಯಂತೆಸೆವಡಕೆಯ[3] ಕೊನೆಯ[4] ಬೆ । ಡಂಗ ನಾನೇನ ಬಣ್ಣಿಪೆನು ॥ ೮೮ ॥

ತರಣಿಗಗಿದ[5] ಕಳ್ತಲೆ ತನ್ನ ಸುತರ ತಂ । ದಿರಿಸಿದಳೆಂಬಂದದೊಳು[6] ॥
ಪಿರಿದು ರಂಜನೆ[7]ವಡೆದೆಸೆದವಾ ಬನದೊಳ । ಗರನೇಱಿಲ ತನಿವಣ್ಣು ॥ ೮೯ ॥

ನೆಲನನೊಡೆದು ಬಂದ ಕಾಳೋರಗನೊ ಕ । ಳ್ತಲೆಯ ಸಸಿಯೊ ಮೋಹಶಿಖಿಯೋ ॥
ಬಲು ಪೊಗೆಯಜ್ಞಾನದ ತರುವೆನಲಲ್ಲಿ । ನೆಲಸಿ ರಾಜಿಪುದು ತಮಾಲ ॥ ೯೦ ॥

ಪಾವಡರದ ಸಿರಿಕಂಡವೇಲಾಲತೆ[8] । ಶೀವದ ತೆಂಗೆಲೆವಳ್ಳಿ ॥
ಆವರಿಸದ ಕೌಂಗು ಮಲ್ಲಿಗೆ ಪರ್ವದ । ಮಾವಿಲ್ಲವಾ ಬನದೊಳಗೆ ॥ ೯೧ ॥

ಒಗೆದ ಬಳಿಕ ಜನನಿಯ ಪಾದಪಲ್ಲವ । ಯುಗಕೆಱಗಿದುದಿಲ್ಲವೆಂದು ॥
ಸೊಗಸಿ ಬೆಳೆದ ಬಾಳೆಯ ಗೊನೆ[9] ಕರಗಳ ॥ ಮುಗಿವಂತಿಹವು[10] ಮೇದಿನಿಗೇ ॥ ೯೨ ॥

ಮೂಗಿಲ್ಲವೆಂದು ನುಡಿವ ಜನರೆದೆಗನು । ರಾಗವನಿರದೆ ಪುಟ್ಟಿಸುತ[11] ॥
ನಾಗವಲ್ಲಿಗಳೊಪ್ಪಿದವಾ[12] ಬನದೊಳು ॥ ಪೂಗಣೆಯನ ಸಿರಿ[13]ಯಂತೆ ॥ ೯೩ ॥

---

ಸಿಹಿಯಾದ ರಸವನ್ನು ತುಂಬಿ ಖೇಚರಸ್ತ್ರೀಯರಿಗೆ ಕೊಡುತ್ತಾಳೋ ಎಂಬಂತೆ ಅಲ್ಲಿ ತೆಂಗಿನ ಮರಗಳು ಶೋಭಿಸಿದವು ॥ ೮೭ ॥ ಒಬ್ಬರಿಗೊಬ್ಬರು ಸಿಟ್ಟಾಗಿ ಅಗಲಿಹೋದ ಪ್ರಣಯಿಗಳಿಗೆ ಮನ್ಮಥನು ಹೊಡೆಯಲು ಪ್ರಯೋಗಿಸುವ ಮಿಡಿತೆಗಳ ಸಮೂಹದಂತೆ ಶೋಭಿಸುವ ಅಡಕೆಯ ಗೊನೆಗಳ ಸೊಬಗನ್ನು ನಾನು ಏನೆಂದು ವರ್ಣಿಸಲಿ ! ॥ ೮೮ ॥ ಸೂರ್ಯನಿಗೆ ಹೆದರಿದ ಕತ್ತಲೆಯು ತನ್ನ ಮಕ್ಕಳನ್ನು ಅಲ್ಲಿ ತಂದು ಇರಿಸಿದಳೋ ಎಂಬಂತೆ, ಆ ಬನದಲ್ಲಿ ಅರನೇರಿಲೆಯ ಪಕ್ವವಾದ ಹಣ್ಣುಗಳು ಹೆಚ್ಚಾಗಿ ಶೋಭಿಸಿದವು ॥ ೮೯ ॥ ಆ ಉದ್ಯಾನದಲ್ಲಿರುವ ತಮಾಲದ ಮರಗಳು ನೆಲವನ್ನು ಭೇದಿಸಿ ಹೊರಟುಬಂದ ಕೃಷ್ಣಸರ್ಪಗಳಂತೆಯೂ ಕತ್ತಲೆಯ ಸಸಿಯೋ ಎಂಬಂತೆಯೂ ಮೋಹದ ಬೆಂಕಿಯೋ ಎಂಬಂತೆಯೂ ಹೆಚ್ಚಾದ ಹೊಗೆಯೋ ಎಂಬಂತೆಯೂ ಅಜ್ಞಾನದ ವೃಕ್ಷವೋ ಎಂಬಂತೆಯೂ ಕಪ್ಪಾಗಿ ರಂಜಿಸುತ್ತಿದ್ದವು ॥ ೯೦ ॥ ಆ ವನದಲ್ಲಿ ಹಾವು ಹತ್ತದಿರುವ ಗಂಧದ ಮರವಿಲ್ಲ ಏಲಾಲತೆಯಿಂದ ತುಂಬಿಕೊಂಡಿರದ ತೆಂಗಿಲ್ಲ ಎಲೆಬಳ್ಳಿಗಳು ಮುತ್ತಿಕೊಂಡಿರದ ಅಡಕೆಮರವಿಲ್ಲ. ಮಲ್ಲಿಗೆ ಹಬ್ಬದಿರುವ ಮಾವಿನ ಮರವಿಲ್ಲ ॥ ೯೧ ॥ ನಾನು ಹುಟ್ಟಿದನಂತರ ತಾಯಿಯ ತಳಿರಡಿಗೆ ನಮಸ್ಕಾರವನ್ನೇ ಮಾಡಿಲ್ಲ, ಈಗಲಾದರೂ ಮಾಡುವೆನೆಂದು ಸೊಗಸಾಗಿ ಬೆಳೆದಿರುವ ಬಾಳೆಗೊನೆಯು ಭೂಮಿಗೆ ಕೈಮುಗಿಯುವಂತೆ ಶೋಭಿಸುವುವು. ॥ ೯೨ ॥ ಮೂಗಿಲ್ಲವೆಂದು ಹೇಳುವ ಜನರ ಮನಸ್ಸಿಗೆ ಪ್ರೀತಿಯನ್ನು ಉಂಟುಮಾಡುತ್ತ. ಆ ವನದಲ್ಲಿ ಮನ್ಮಥನ ಸಂಪತ್ತಿನಂತೆ ನಾಗವಲ್ಲಿ (ವೀಳ್ಯದೆಲೆ) ಗಳು ಶೋಭಿಸಿದವು ॥ ೯೩ ॥ ಉದ್ಯಾನವೆಂಬ ಸ್ತ್ರೀಯು ವಸಂತನೊಡನೆ ಕ್ರೀಡೆಯಾಡಲು ಉಂಟಾದ ದೇಹಾಯಾಸವನ್ನು ಹೋಗಾಡಿಸುವುದಕ್ಕಾಗಿ ಸಿಹಿಯಾದ ಪಾನಕವನ್ನು ಕುಡಿವ ಚಿನ್ನಬಟ್ಟಲೋ

---

[1] ಕೊಡ (ಚ) [2] ಳಿಸೆದವಂತಲ್ಲಿ (ಚ) [3] ಜಂಗುಳಿಯಂತಿಪ್ಪಡಕೆಯ (ಗ ಚ) [4] ಗೊನೆಯ (ಗ) [5] ತರಣಿಗಳಿದು (ಗ) [6] ತಂದಿರಿಸಿದುದೆಂಬಂದದೊಳು (ಚ) [7] ರಚನೆ (ಚ) [8] ಯೇಲಾಲತೆ (ಗ ಚ) [9] ನಗುತಿಹ ಬಾಳೆಯ ಕೊನೆಗೊನೆ (ಕ). [10] ಮುಗಿವಂತಿಪುದು (ಚ) [11] ಪುಟ್ಟಿಸುವ (ಚ) [12] ಳೊಪ್ಪಿದವಲ್ಲಿ (ಗ). [13] ಸಶಿ (ಕ)

ವನವಧು ಮಧುಮಾಸನೊಳು ಕ್ರೀಡಿಸಲಾದ । ತನುಶ್ರಮವನು ನೀಗಲೆಂದು ॥
ಇನಿರಸ[1]ವೀಂಟುವ ಕನಕದ ಬಟ್ಟಲೆಂ । ಬನುವಡೆದವು ಕರ್ಣಿಕಾರ ॥ ೯೪ ॥

ತರಣಿ ಶಶಿಯು ಬೆಳಕಿಲ್ಲ[2] ಕಾವನ ಚೆಲ್ವ । ಸಿರಿಯ ನಾ ನೋಡುವೆನೆಂದು ॥
ವರ ವನಲಕ್ಷ್ಮಿ ದೀಪಗಳನೆತ್ತಿದವೊಲು । ಬಿರಿದ ಚಂಪಕಗಳೊಪ್ಪಿದವು[3] ॥ ೯೫ ॥

ಅಳಿಯಂಚೆ ಕೋಗಿಲೆ ಗಿಳಿ ಸೋಗೆಯ ಕಳ । ಕಳದಿಂದ ಕಾಮಕಲಹದ ॥
ಕಳನೊ ಕಾಮುಕರಾಡುಂಬೊಲನೆನೆ[4] ಬನ । ತಳೆದುದು ಕಣ್ಗೆ ಕೌತುಕವ ॥ ೯೬ ॥

ವನದ ನಡುವೆ ವನದಿಂಬೆ ವನಜದಿಂದೆ । ವನರುಹಕೆರಪಳಿ[5]ಯಿಂದೆ ॥
ವನಜಾಕ್ಷನ ಸುತನುರುಸಿರಿಯೆಂಬಂತೆ । ವನಜಾಕರಗಳೊಪ್ಪಿದವು[6] ॥ ೯೭ ॥

ಸಿರಿಯುರಮನೆಯುರಲಂಬನ ಡೊಣೆ ಮರ । ಹರನಾತ್ಮಜನಾವಾಸ[7] ॥
ಸರಸಿಜೋದ್ಭವನ ಜನ್ಮಸ್ಥಾನವೆನೆ ಕಣ್ಗೆ । ಸರಸಿ ಮಾಳ್ಪುದು ಕೌತುಕವ ॥ ೯೮ ॥

ವಡಬಗಗಿದು ವರುಣನು ನೀರ ಭಂಡಾರ । ವಡಗಿಸಿದೆಡೆಯೊ ಮುರಾರಿ ॥
ಕಡುಪಿಂದ ಕಿಳ್ತ ನಗದ ತಾಣವೆನೆ ಕಣ್ಗೆ । ಕಡುಗುಂಪುವಡೆದುದಾ ಸರಸಿ ॥ ೯೯ ॥

ತುಂಬಿ ರಂಜಿಸುವ[8] ನೀರಮೃತ ಕಲಂಕು[9]ಕ । ಣ್ಗಿಂಬಾದ ಕುಮುದಾಳಿಯಾಗೆ ॥
ಅಂಬುಜಾಕರಮೆಸೆದುದು ನೋಳ್ಪರಿಗಿಂದು । ಬಿಂಬದ ಸೈಸಿರಿಯಂತೆ ॥ ೧೦೦ ॥

ಪುಳಿಲೊಟ್ಟಲು ಪೊಜಿವಾಱು ಕುಮುದ ನೇತ್ರ । ನಳಿನ ವದನವಳಿಗುರುಳು ॥
ಕಳಹಂಸ ಗತಿಯೆಣೆವಕ್ಕಿ ಕುಚಗಳಾಗೆ । ಕೊಳನಿಹುದೆಳವೆಣ್ಣಿನಂತೆ ॥ ೧೦೧ ॥

---

ಎಂಬಂತೆ ಕರ್ಣಿಕಾರ ಪುಷ್ಪಗಳು ಶೋಭಿಸಿದವು. ॥ ೯೪ ॥ ಮನ್ಮಥನ ಸೌಂದರ್ಯದ ಕಾಂತಿಯನ್ನು ನೋಡಲು, ಸೂರ್ಯಚಂದ್ರರ ಬೆಳಕೇ ಇಲ್ಲವಾಗಿದೆ. ಏನು ಮಾಡಲೆಂದು ಯೋಚಿಸಿ, ಶ್ರೇಷ್ಠಳಾದ ವನದೇವಿಯು ದೀಪಗಳನ್ನು ಎತ್ತಿಹಿಡಿದಂತೆ ಅರಳಿದ ಸಂಪಿಗೆಯ ಹೂಗಳು ಶೋಭಿಸಿದವು. ॥ ೯೫ ॥ ತುಂಬಿ, ಹಂಸೆ, ಕೋಗಿಲೆ, ಗಿಳಿ, ನವಿಲು – ಮುಂತಾದವುಗಳ ಕಲಕಲ ನಿನಾದದಿಂದ ಆ ಬನವು ಕಾಮಕಲಹದ ಕಳದಂತೆಯೂ ಕಾಮುಕರ ಆಟದ ಬಯಲಿನಂತೆಯೂ ಆಶ್ಚರ್ಯಕರವಾಗಿ ಕಾಣುತ್ತಿತ್ತು. ॥ ೯೬ ॥ ಆ ವನದ ಮಧ್ಯದಲ್ಲಿ ನೀರಿನಿಂದಲೂ ತಾವರೆಯಿಂದಲೂ ತಾವರೆಗೆ ಬಂದೆರಗುವ ತುಂಬಿಯಿಂದಲೂ ಮನ್ಮಥನ ವಿಶೇಷವಾದ ಸಂಪತ್ತೋ ಎಂಬಂತೆ ಸರೋವರಗಳು ಶೋಭಿಸಿದವು. ॥ ೯೭ ॥ ಆ ಸರೋವರವು ಲಕ್ಷ್ಮೀದೇವಿಯ ಅರಮನೆಯಂತೆಯೂ ಮನ್ಮಥನ ಬತ್ತಳಿಕೆಯಂತೆಯೂ ಆತನ ಮನೆಯಂತೆಯೂ ಬ್ರಹ್ಮನ ಹುಟ್ಟುನೆಲದಂತೆಯೂ ಕಣ್ಣಿಗೆ ಅಚ್ಚರಿಯನ್ನು ಉಂಟುಮಾಡುವುದು. ॥ ೯೮ ॥ ಸಮುದ್ರರಾಜನು ವಡವಾಗ್ನಿಗೆ ಹೆದರಿ ನೀರಿನ ಭಂಡಾರವನ್ನು ಅಡಗಿಸಿದ ಸ್ಥಳವೋ ಶ್ರೀಕೃಷ್ಣನು ಸಿಟ್ಟಿನಿಂದ ಕಿತ್ತ ಗೋವರ್ಧನಗಿರಿಯ ಸ್ಥಳವೋ ಎಂಬಂತೆ ಆ ಸರೋವರವು ಕಣ್ಣಿಗೆ ಬಹಳ ಗಂಭೀರವಾಗಿ ಕಾಣುತ್ತಿತ್ತು. ॥ ೯೯ ॥ ತುಂಬಿಕೊಂಡು ಶೋಭಿಸುವ ನೀರೇ ಅಮೃತ, ಕಣ್ಣಿಗೆ ಸೊಗಯಿಸುವ ನೈದಿಲೆಗಳ ಸಮೂಹವೇ ಕಳಂಕ – ಇವುಗಳಿಂದ ಆ ಸರೋವರವು ಚಂದ್ರಬಿಂಬದ ಶೋಭೆಯಂತೆ ಕಾಣಿಸುತ್ತಿತ್ತು. ॥ ೧೦೦ ॥ ಮಳಲ

---

[1] ಪನಿರಸ (ಚ). [2] ಬೆಳಗಿಲ್ಲ (ಚ). [3] ಚಂಪಕಗಳಲ್ಲಿಹವು (ಗ. ಚ). [4] ರಾಡುಂಬೊಲವೆನೆ (ಗ). [5] ವನಜಕೆರಗುವಳಿ (ಗ. ಚ) [6] ವನಜಾಕರವೊಪ್ಪುತಿಹುದು (ಗ. ಚ), [7] ನಾಡುವಾಸ (ಕ) [8] ರಂಜಿಪ (ಗ ಚ). [9] ಕಲಂಕ (ಗ).

ಸಾಗರದಂತೆ ಶಿಖಿಯ ದೆಸೆಯಂತದು । ಪೂಗಣೆಯನ ವಧುವಂತೆ[1] ॥
ಆಗಸದಂತರಸನ ಸಭೆಯಂತದು[2] । ರಾಗದೊಳಿಹುದಾ[3] ಸರಸಿ ॥ ॥ ೧೦೨ ॥

ಆ ವನದುರುಸಿರಿಯನು ನೋಡಲೆಂದು ಭೂ । ದೇವಿ ಹಲವು ಕಣ್ಣುಗಳಾ ॥
ಓವದೆ ಪಡೆದಳೆಂಬಂತೆ ಕುಮುದ ರಾ । ಜೀವಗಳೆಸೆದವದಱೊಳು ॥ ೧೦೩ ॥

ಕೆಳೆಯನ ಬಿಲ್ಗೆ ಚಂದಿರ ಸುಧೆಮಳೆಯನು । ತಳಿದು ಸಲಹಿದನೆಂಬಂತೆ ॥
ಬಿಳಿಯ ಕರ್ವಿನ ಕೈಗಳೆಸೆದವಾ ಬನದೊಳು । ನಳನಳಿಸುತ[4] ನಳಿನಾಕ್ಷಿ ॥ ೧೦೪ ॥

ಕಾತರದಿಂದ ಕಾದಲರೊಳಂಗನೆಯರು । ಸೋತು ಮೇಲಿಕ್ಕುತೊಲಿವುತ ॥
ಆತುರದಿಂ ಮುನಿದಗಲಿ ಕೂಡುತ ನಿ । ರ್ಭೀತಿಯೊಳಿಹರದಱೊಳಗೇ ॥ ೧೦೫ ॥

ತಿಳಿಗೊಳದೊತ್ತಿನ ತಳಿರ ಕಾವಣ[5]ದೊಳ । ಗೆಳವಾಳೆಯ ಪೊದಱೊಳಗೆ ॥
ವಿಲಸಿತಮಾದ ತಮಾಲದೋವರಿಯೊಳ । ಗೆಳಸಿ ದಂಪತಿಗಳೊಪ್ಪಿದರು[6] ॥ ೧೦೬ ॥

ಸುರತಾಂತ್ಯದ ಬಳಲಿಕೆಯನು ಮಾವಿನ । ಅರನೇಱಿಲ ಪಣ್ಗಳನು ॥
ಇರದೆ ಸವಿಯುತೆಳನೀರ ಕುಡಿದು[7] ಪರಿ । ಹರಿಸುವರಲ್ಲಿ ಕಾಮಿಗಳು ॥ ೧೦೭ ॥

ಪೂವಿನ ರಸದೆಳನೀರ[8] ಕೆಸಱುಬೆಂಚೆ । ಮಾವಿನ ಸೊನೆಯ ಸೋನೆಯೊಳು ॥
ಭಾವಜಕೇಳಿಗಿಂಬಿಲ್ಲ ದಿಟ್ಟಪಳೋರ್ವ[9] । ಭಾವಕಿ ಕೃತಕಾದ್ರಿಯನು ॥ ೧೦೮ ॥

---

ದಿಣ್ಣೆಯೇ ನಿತಂಬವಾಗಿ, ನೈದಿಲೆಯೇ ಕಣ್ಣೆನಿಸಿ, ತಾವರೆಯು ಮುಖವೆನಿಸಿ, ತುಂಬಿಗಳೆ ತಲೆಗೂದಲೆನಿಸಿ, ಹಂಸಗಳೆ ನಡಿಗೆಯೆನಿಸಿ, ಚಕ್ರವಾಕ ಪಕ್ಷಿಗಳೇ ಮೊಲೆಗಳೆನಿಸಿ, ಕೊಳವು ಓರ್ವ ಎಳೆಯ ಹೆಂಗುಸಿನಂತೆ ಇರುವುದು. ॥ ೧೦೧ ॥ ಆ ಸರೋವರವು ಸಮುದ್ರದಂತೆಯೂ ಆಗ್ನೇಯ ದಿಕ್ಕಿನಂತೆಯೂ ರತಿದೇವಿಯಂತೆಯೂ ಆಕಾಶದಂತೆಯೂ ರಾಜಸಭೆಯಂತೆಯೂ 'ರಾಗ'ದಿಂದ ಇರುವುದು. ॥ ೧೦೨ ॥ ಆ ಉದ್ಯಾನ ಶ್ರೇಷ್ಠವಾದ ಶೋಭೆಯನ್ನು ನೋಡುವುದಕ್ಕಾಗಿ ಭೂದೇವಿಯು ಹಲವು ಕಣ್ಣುಗಳನ್ನು ಪಡೆದಳೋ ಎಂಬಂತೆ ಆ ಸರೋರವರದಲ್ಲಿ ನೈದಿಲೆಗಳೂ ತಾವರೆಗಳೂ ಶೋಭಿಸಿದವು. ॥ ೧೦೩ ॥ ಚಂದ್ರನು ತನ್ನ ಸ್ನೇಹಿತನಾದ ಮನ್ಮಥನ ಬಿಲ್ಲಾಗಿರುವ ಕಬ್ಬನ್ನು ಅಮೃತದ ಮಳೆಯಿಂದ ಸಲಹಿದನೋ ಎಂಬ ಹಾಗೆ ಆ ವನದಲ್ಲಿ ಬಿಳಿಯ ಕಬ್ಬುಗಳ ಕೈಗಳು (ಸೋಗೆಗಳು) ಮನೋಹರವಾಗಿದ್ದವು ॥ ೧೦೪ ॥ ಆ ಉದ್ಯಾನದಲ್ಲಿ ಸ್ತ್ರೀಯರು ತಮ್ಮ ನಲ್ಲರೊಡನೆ ಪ್ರಣಯ ಕಾತರದಿಂದ ಮನಸೋತು, ಮೇಲೆ ಬಿದ್ದು, ವಿಯೋಗ ಸಂಯೋಗಗಳಿಂದ ಏನೂ ಭಯವಿಲ್ಲದೆ ವರ್ತಿಸುವರು. ॥ ೧೦೫ ॥ ಪ್ರಣಯಿ ದಂಪತಿಗಳು ಅಲ್ಲಿನ ತಿಳಿಗೊಳದ ಸಮೀಪವಿರುವ ಚಿಗುರಿನ ಚಪ್ಪರದೊಳಗೂ ಎಳತಾದ ಬಾಳೆಯ ಪೊದರೊಳಗೂ ಶೋಭಾಯಮಾನವಾದ ತಮಾಲ ವೃಕ್ಷದ ಒಳಮನೆಯಲ್ಲಿಯೂ ಒಬ್ಬರನ್ನೊಬ್ಬರು ಬಯಸಿಕೊಂಡಿರುವರು ॥ ೧೦೬ ॥ ಅಲ್ಲಿ ಕಾಮುಕರಾದ ಜನರು ಮಾವಿನ ಹಣ್ಣು ನೇರಿಳೆ ಹಣ್ಣುಗಳನ್ನು ತಿಂದು, ಎಳನೀರನ್ನು ಕುಡಿದು, ರತಿಕ್ರೀಡೆಯಲ್ಲಿ ತಮಗಾದ ಬಳಲಿಕೆಯನ್ನು ನೀಗುವರು ॥ ೧೦೭ ॥ ಎಲ್ಲಿ ನೋಡಿದರೂ ಹೂವಿನರಸ, ಎಳನೀರಿನ ಕೆಸರು, ಚಿಕ್ಕ ಸರೋವರ, ಮಾವಿನ ಸೊನೆಯ ಮಳೆ – ಇವುಗಳಿಂದ ರತಿಕ್ರೀಡೆಗೆ ಎಡೆಯೇ ಇಲ್ಲವೆಂದು ಓರ್ವ ರಸಿಕಳು ಕೃತಕಾದ್ರಿಯ ಕಡೆಗೆ ನೋಡುವಳು ॥ ೧೦೮ ॥ ಸುಂದರಿ ಸ್ತ್ರೀಯರು ಅಲ್ಲಿ ತುಂಬಿಗೆ ಗಾನವನ್ನೂ ಅರಗಿಳಿಗೆ ಮಾತನ್ನೂ ಹಂಸೆಗಳಿಗೆ ನಡೆಯುವುದನ್ನೂ ನವಿಲುಗಳಿಗೆ ನರ್ತನವನ್ನೂ

---

[1] ಪಡೆಯಂತೆ (ಚ) [2] ಸಭೆಯಂತನು (ಕ) [3] ರಾಗದಂತಿಹುದಾ (ಗ ಚ). [4] ನಳನಳಿಸುವ (ಕ) [5] ಕಾದಳ (ಗ) ಕಾವಳ (ಚ) [6] ದಂಪತಿಗಳಲ್ಲಿಹರು (ಗ ಚ) [7] ತೆಳನೀರಿ.ಂಟ:ತ (ಕ) [8] ಸರದೆಳನೀರು (ಗ). [9] ದಿಟ್ಟಪಳೋರ್ವ (ಗ)

ಅಳಿಗೆ ಗಾನಮನರಗಿಳಿಗೆ[1] ನುಡಿಯುಸಂಚೆ । ಗಳಿಗೆ ನಡೆಯು ನವಿಲ್ಗಳಿಗೆ ॥
ಕಳಶ ಕುಚೆಯರು ನರ್ತನವ ಕಲಿಸುತಲ್ಲಿ । ಕಳಿವರಾಸಱನನವರತ[2] ॥ ೧೦೯ ॥

ಸರಸೀಜಾನನ ಕುಮುದಾಕ್ಷಿ ತಳಿರ್ವಜ್ಞೆ । ವರಲತೆಯಂಗ ಚಂಪಕದ ॥
ಬಿರಿಮೊಗ್ಗೆ[3] ನಾಸಿಕವಾಗಲು ಬನಕ । ಣ್ಗೆರದೊಪ್ಪಿತು ಪೆಣ್ಣಂತೇ ॥ ೧೧೦ ॥

ಅಳಿಗಳ ಗಾನದಿಂ[4] ಶಿಖಿಯು[5] ನರ್ತನದಿಂದ । ತಳಿರುಲುಪಿನ ವಾದ್ಯದಿಂದ ॥
ಗಿಳಿ ನಟನಾಗಲಾ ಕಾವನ ನಾಟ್ಯದ । ನಿಳಯುದಂತೆಸೆದುದಾರಾಮು ॥ ೧೧೧ ॥

ಸೆಳೆಮಂಚ ತಳಿರ ಜಾಜಿಯು ಪಾಸು ಚಂಪಕ । ವೆಳಗು ಡವಕೆ ತಾವರೆಯು ॥
ಉಳಿದ ಪೂದೊಡವಾಗೆ ಕಾವನ ಸೆಜ್ಜೆಯು । ನಿಳಯುದಂತೆಸೆದುದಾರಾಮು[6] ॥ ೧೧೨ ॥

ಪರಪುಟ್ಟ ನವಿಲಂಚೆ ಗಿಳಿಯುರಲುಣಿಗೆ ನು । ಣ್ಚರ ನರ್ತನ ನಡೆ ನುಡಿಯು ॥
ವರಗಾನವ ಕಾವ ಕಲಿಸಲವನ ಬಲು । ಗರುಡಿಯುಂತೆಸೆದುದಾರಾಮು[6] ॥ ೧೧೩ ॥

ಬಂದ[7] ಮಾಮರನನಲೆದು ತಣ್ಗೊಳದೊಳು । ಮಿಂದು ಪೂವಿನ ಪರಿಮಳವ ॥
ಬಂದಿವಿಡಿದು ಮಂದಾನಿಲನಂದಾ । ನಂದನದೊಳಗೆ ಸುಳಿವುದು ॥ ೧೧೪ ॥

ಕುಸುಮಶರನು ಮೋಹದಿಂ ಮುನಿದಗಲ್ದ ಮಾ । ನಸರೆದೆಯನು ಸೀಳ್ವೆನೆಂಬ ॥
ಪೊಸ ಪೊನ್ನ ಗರಗಸವೆಂಬಂದದೊಳಲ್ಲಿ । ಮಿಸುನಿಗೇದಗೆವೇಲಿಯಿಹವು[8] ॥ ೧೧೫ ॥

ಅಡವಿಯುಂತಂಬರದಂತಂಗಜನ ಬಲು[9] । ಪಡೆಯುಂತೆ ಸವಿಗಡಲಂತೆ ॥
ಪೊಡವಿಪತಿಯ ಸಭೆಯುಂತಾ ಬನ ಕಣ್ಗೆ । ಕಡು ರಯ್ಯುವಡೆದುದಬ್ಜಾಕ್ಷಿ ॥ ೧೧೬ ॥

---

ಕಲಿಸುತ್ತ ತಮ್ಮ ಬೇಸರವನ್ನೂ ಕಳೆಯುವರು. ॥ ೧೦೯ ॥ ತಾವರೆಯು ಮುಖ, ನೈದಿಲೆ ಕಣ್ಣು, ಚಿಗುರು ಪಾದ, ಬಳ್ಳಿಯೇ ಅಂಗ, ಸಂಪಗೆಯ ಮುಗುಳು ಮೂಗು – ಇವುಗಳಿಂದ ಆ ಬನವು ಹೆಣ್ಣಿನಂತೆ ಕಾಣುತ್ತಿತ್ತು. ॥ ೧೧೦ ॥ ತುಂಬಿಗಳ ಹಾಡಿನಿಂದಲೂ ನವಿಲುಗಳ ನರ್ತನದಿಂದಲೂ ಚಿಗುರುಗಳ ಸದ್ದಿನ ವಾದ್ಯದಿಂದಲೂ ಕೂಡಿ, ಗಿಳಿ ನಾಟ್ಯಕಾರನೆನಿಸಲು ಆ ಉದ್ಯಾನವು ಮನ್ಮಥನ ನಾಟ್ಯಗೃಹದಂತೆ ಶೋಭಿಸಿತು. ॥ ೧೧೧ ॥ ಬೆತ್ತವೇ ಮಂಚ, ಚಿಗುರು ಜಾಜಿಗಳೇ ಹಾಸಿಗೆ, ಸಂಪಗೆಯೇ ದೀಪದ ಬೆಳಕು, ತಾವರೆಯು ಉಗುಳುಬಡ್ಡಿ, ಇತರ ಹೂಗಳೇ ಆಭರಣಗಳು – ಇವುಗಳಿಂದ ಉದ್ಯಾನವು ಮನ್ಮಥನ ಶಯನಾಗಾರದಂತೆ ಕಂಗೊಳಿಸಿತು ॥ ೧೧೨ ॥ ಕೋಗಿಲೆಗೆ ಇಂಪಾದ ಸ್ವರವನ್ನೂ ನವಿಲಿಗೆ ನರ್ತನವನ್ನೂ ಹಂಸೆಗೆ ನಡೆಯನ್ನೂ ಗಿಳಿಗೆ ನುಡಿಯನ್ನೂ ತುಂಬಿಗೆ ಗಾನವನ್ನೂ ಕಲಿಸಲೂ ಮನ್ಮಥನು ಏರ್ಪಡಿಸಿದ ವಿದ್ಯಾಶಾಲೆಯಂತೆ ಆ ಉದ್ಯಾನವಿದ್ದಿತು. ॥ ೧೧೩ ॥ ಆ ಉದ್ಯಾನದಲ್ಲಿ ಫಲಭರಿತವಾದ ಮಾವಿನ ಮರಗಳಲ್ಲಿ ಸುತ್ತಾಡಿ, ತಣ್ಣಗಾದ ಕೊಳದಲ್ಲಿ ಸ್ನಾನಮಾಡಿ, ಹೂವಿನ ಸುವಾಸನೆಯನ್ನು ಸೆರೆಹಿಡಿದು, ಮಂದಮಾರುತವು ಬೀಸುತ್ತಿರುವುದು. ॥ ೧೧೪ ॥ ಮೋಹದಿಂದ ಕೂಡಿ ಅಗಲಿದ ಮಾನವರ ಎದೆಯನ್ನು ಮನ್ಮಥನು ಸೀಳತಕ್ಕ ಗರಗಸವೋ ಎಂಬಂತೆ ಆ ಉದ್ಯಾನದಲ್ಲಿ ಹೊಂಗೇದಗೆಗಳ ಬೇಲಿ ಇದೆ. ॥ ೧೧೫ ॥ ಆ ಉದ್ಯಾನವು ಕಾಡಿನಂತೆಯೂ ಆಕಾಶದಂತೆಯೂ ಮನ್ಮಥನ ಸೈನ್ಯದಂತೆಯೂ ಕ್ಷೀರಸಾಗರ

---

[1] ಗಾನವನು ಗಿಳಿಗೆ (ಚ). [2] ರಾಸರವನವರತ (ಕ) [3] ಬಿರಿಮಗ್ಗೆ (ಗ). [4] ನಾದದಿಂ (ಚ). [5] ನವಿಲ (ಗ. ಚ) [6] ೧೧೨. ೧೧೩— ಇವು ಗ. ದಲ್ಲಿಲ್ಲ. [7] ಬಂದು (ಗ ಚ) [8] ಗೇದಗೆವೇರಿಹುದು (ಗ) ಗೇದಗೆ ವೇಲಿಯಿಹ.ದು (ಚ). [9] ಬಂಧು (ಕ).

ಕೋವಿದರುಗಳ ಹೃತ್ಕಮಲಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ॥
ಭಾವಕರುಗಳ ಸಂತಸಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೧೧೭ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೧೮ ॥

ಇದು ಭೂಸುರವಂಶೋದ್ಭವನಭಿನವ
ಮದನ ನಮಲಗುಣ-ಜಿನ-ಪಾದಾಂಬುಜ
ಮದಮಧುಕರನತ್ಯುತ್ತಮವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಜವಿಜಯದೊಳ
ಗೊದವಿ ರಚನೆಯಿಂ ಪಡೆದತಿ ಜಸವೆತ್ತುದು ಸಂಧಿದ್ವಿತಿಯಂ ॥ ೧೧೯ ॥

ಉಭಯಂ ಸಂಧಿ ೨ಕ್ಕಂ ಪದನು ೨೬೬

---

ದಂತೆಯೂ ರಾಜಸಭೆಯಂತೆಯೂ ರಮ್ಯವಾಗಿತ್ತು ॥ ೧೧೬ ॥ ವಿದ್ವಾಂಸರ ಹೃದಯವೆಂಬ ಕಮಲಕ್ಕೆ ಸೂರ್ಯನೂ ಸರಸ್ವತೀ ದೇವಿಯ ಮುಖಕ್ಕೆ ರತ್ನದ ಕನ್ನಡಿಯಂತಿರುವವನೂ ರಸಿಕರ ಸಂತೋಷಕ್ಕೆ ಸಾಗರದಂತಿರುವವನೂ, ಮಿತ್ರನೂ ಎನಿಸಿದ ದೇವಪ್ಪನಂ ರಚಿಸಿದ ಸತ್ಕಾವ್ಯವಿದು ॥ ೧೧೭ ॥ ಎಲೇ ಮೃಗನೇತ್ರೆಯಾದ ಚೇಳಿನಿಯೇ, ಈ ದಿವಸ ಮುಂದಿನ ಕಥೆಗಳನ್ನು ವಿವರಿಸುವೆನೆಂದು ಹೇಳಿದಂತೆ, ಮೆಲ್ಲಮೆಲ್ಲನೆ ತಿಳಿಸುತ್ತ ಈ ಸಂಧಿಯು ಇಲ್ಲಿಗೆ ಕೊನೆಗೊಂಡಿದೆ ಮುಂದಿನ ಕಥೆಯನ್ನು ನಾನು ಸಂತೋಷದಿಂದ ಹೇಳುವೆನು ॥ ೧೧೮ ॥ ಬ್ರಾಹ್ಮಣಕುಲದಲ್ಲಿ ಜನಿಸಿದವನೂ, ಅಭಿನವ ಮನ್ಮಥನೂ, ನಿರ್ಮಲವಾದ ಗುಣಗಳುಳ್ಳವನೂ ಜಿನೇಂದ್ರನ ಪಾದಕಮಲಕ್ಕೆ ಮದಿಸಿದ ತುಂಬಿಯಂತಿರುವವನೂ ಅತಿಶ್ರೇಷ್ಠನೆನಿಸಿದ ವಾಗ್ದೇವಿಯ ಮುಖಕ್ಕೆ ನಿರ್ಮಲವಾದ ಕನ್ನಡಿಯಂತಿರುವವನೂ ಶಾಶ್ವತವೂ ನಿರ್ಮಲವೂ ಆದ ನಡತೆಯುಳ್ಳವನೂ ಸಚಿವನೂ ಆದ ದೇವಪ್ಪನು ಸಂತೋಷದಿಂದ ಹೇಳಿದಂತಹ ರಾಮವಿಜಯ ಕಾವ್ಯದಲ್ಲಿ ಸೇರಿರುವಂತೆ ರಚಿತವಾಗಿ ಎರಡನೆಯ ಸಂಧಿಯು ಪ್ರಸಿದ್ಧವಾಯಿತು

# ೩. ಪುರವರ್ಣನೆ

ಅಮರಾಧೀಶವಂದಿತ ಪಾದಪದ್ಮನ । ವಿಮಲಾಂಗನ ಮುಕ್ತಿರಮೆಯ ॥
ರಮಣನ ಮುನಿಸುವ್ರತತೀರ್ಥೇಶನ । ಮಮತೆಯಿಂದಾನು ವಂದಿಪೆನು ॥ ೧ ॥

ಪಡೆವರು ಪರಮಪದವ[1] ಪಂಡಿತ್ವವ । ಪಡೆವರನಂತ[2] ಶಕ್ತಿಯನು ॥
ಪಡೆಮಾತೇನಿದ ಕೇಳಿದ ಭವ್ಯರು । ಪಡೆವರು ಪಂಚಮಗತಿಯ ॥ ॥ ೨ ॥

ಮುಂದಣ ಕಥೆಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೩ ॥

ಕೋವಿದೆ ಕೋಕಿಲಾಲಾಪೆ ಕೋಮಲೆ ಹೊಂ । ದಾವರೆ ಮೊಗ್ಗೆಮೊಲೆಯಳೇ ॥
ಭಾವೆ ಭಾವಜನಧಿದೇವತೆ ಲಾಲಿಸು । ಭಾವಜಾರಿಯ ಕಥನವನು ॥ ೪ ॥

ಸುಮನಾಯುಧರೂಪ ಸುಗುಣ ಸುಜಾಣ ಸು । ರಮಣಾನಿಮಿಷ ನತಚರಣ ॥
ಸುಮುಖ ಸುಲೋಚನ ಪೇಳು ಕೇಳುವೆನತಿ । ಮಮತೆಯಿಂ ಮುಂದಣ ಕಥೆಯಾ ॥ ೫ ॥

ಎಂದು ನುಡಿದ ಚೇಳಿನಿದೇವಿಯುರದೊಂ । ದಂದವಡೆದ ಸವಿಮಾತು ॥
ಅಂದು ನೃಪನ ಶ್ರುತಿಯನು ಸಾರಲೊಡನಿಂ । ತೆಂದು ಪೇಳಿದನು ಕಥೆಯನು ॥ ೬ ॥

ಆ ನಂದನವನದೊತ್ತಿನೊಳೆಸೆದಿರ್ಪು । ದಾ ನಗರದ ಪೊಱವೊಳಲು ॥
ನಾನದಱಿರವನು ಪೇಳುವೆನಿರದಂಬು । ಜಾನನೆ ಲಾಲಿಪುದೊಲಿದು ॥ ೭ ॥

---

ದೇವೇಂದ್ರನಿಂದ ನಮಿಸಲ್ಪಟ್ಟ ಪಾದಕಮಲವುಳ್ಳವನೂ ನಿರ್ಮಲವಾದ ಅವಯವಗಳುಳ್ಳವನೂ ಮೋಕ್ಷಲಕ್ಷ್ಮಿಯ ವಲ್ಲಭನೂ ಆದ ಮುನಿಸುವ್ರತತೀರ್ಥಂಕರನನ್ನು ನಾನು ಭಕ್ತಿಯಿಂದ ನಮಿಸುತ್ತೇನೆ. ॥ ೧ ॥ ಈ ಕಥೆಯನ್ನು ಕೇಳಿದ ಸತ್ಪುರುಷರು ಪರಮಪದವಿಯನ್ನೂ ಪಾಂಡಿತ್ಯವನ್ನೂ ಕೊನೆಯಿಲ್ಲದ ಶಕ್ತಿಯನ್ನೂ ಮೋಕ್ಷವನ್ನೂ ಪಡೆಯುವರು. ಇದು ನಮ್ಮದನ್ನು ನಾವೇ ಮೆಚ್ಚಿಕೊಂಡು ಆಡುವ ಮಾತಲ್ಲ. ॥ ೨ ॥ ಚೇಳಿನೀದೇವಿಯು ತನ್ನ ವಲ್ಲಭನಾದ ಶ್ರೇಣಿಕನೊಡನೆ—ಎಲೈ ಮನ್ಮಥಸ್ವರೂಪನೇ, ಮುಂದಣ ಕಥೆಯಾವುದು? ಅದರ ವೃತ್ತಾಂತವೇನೆಂಬುದನ್ನು ಪೂರ್ತಿಯಾಗಿ ನನಗೆ ತಿಳಿಸಬೇಕು ಎಂದು ಹೇಳಿದಳು ಆಗ ಶ್ರೇಣಿಕನು ಹೇಳುವೆನು ಕೇಳು ಎಂದನು. ॥ ೩ ॥ ತಿಳಿದವಳೂ, ಕೋಗಿಲೆಯಂತಹ ಮಾತುಗಳುಳ್ಳವಳೂ ಕೋಮಲವಾಗಿರುವವಳೂ ಹೊಂದಾವರೆ ಮುಗುಳಿನಂತಹ ಮೊಲೆಯವಳೂ, ರಸಿಕಳೂ, ಮನ್ಮಥನ ಆರಾಧ್ಯದೇವತೆಯೂ ಆದ ಚೇಳಿನಿಯೇ, ಮನ್ಮಥವೈರಿಯಾದ ಜಿನೇಶನ ಕಥೆಯನ್ನು ಕೇಳು. ॥ ೪ ॥ ಅದಕ್ಕೆ ಚೇಳಿನಿಯು—ಎಲೇ ಮನ್ಮಥ ಸ್ವರೂಪನೇ, ಸದ್ಗುಣವಂತನೇ, ಜಾಣ್ಮೆಯುಳ್ಳವನೇ, ದೇವತೆಗಳಿಂದ ನಮಿಸಲ್ಪಡುವ ಪಾದಗಳುಳ್ಳವನೇ, ಸುಂದರವಾದ ಕಣ್ಣುಮೊಗಗಳುಳ್ಳವನೇ, ರಮಣನೇ, ಮುಂದಣ ಕಥೆಯನ್ನು ಮಮತೆಯಿಂದ ಹೇಳು, ನಾನು ಮಮತೆಯಿಂದ ಕೇಳುವೆನು. ॥ ೫ ॥ ಹೀಗೆ ಹೇಳಿದ ಚೇಳಿನೀದೇವಿಯ ಚಂದವಾದ ಸವಿನುಡಿಯು ಶ್ರೇಣಿಕರಾಜನ ಕಿವಿಯನ್ನು ಸೇರಲು, ಅವನು ಒಡನೆ ಹೀಗೆ ಕಥೆಯನ್ನು ಹೇಳಿದನು. ॥ ೬ ॥ ಎಲೇ ಮಡದಿಯೇ, ನಾನು ಹಿಂದೆ ವಿವರಿಸಿರುವ ಆ ಉದ್ಯಾನದ ಸಮೀಪದಲ್ಲಿ ಆ ನಗರದ ಹೊರಭಾಗವು ಶೋಭಿಸುತ್ತಿರುವುದು. ಅದರ ವಿವರವನ್ನು ಹೇಳುತ್ತೇನೆ; ಕೇಳು. ॥ ೭ ॥

---

[1] ಸುಖವ (ಚ). [2] ಪಡೆವರುನ್ನತ (ಗ ಚ.)

ಎಸುವ[1] ಬಯಲು ಗುರಿಗಳ ಮಲ್ಲರ ಹೋ । ರಿಸುವ ಬಯಲು ಕೋಣ ಪುಲಿಯು ॥
ಒಸೆದು ಕಾದಿಸುವ ಬಯಲು ತತ್ಸ್ವರದ ನಾ । ಲ್ದಿಸೆಗಳೊಳಗೆ ರಾಜಿಸಿದವು[2] ॥ ೮ ॥

ಬಲುಬಕ್ಕಬಯಲೊಳು ನಿಂದು ತಗರುಗಳ । ತಲೆಗೆ ನಿಂಬೆಯು ಪುಳಿದೊಡೆದು ॥
ಎಲೆಯು ಮೆಲಿಸಿ[3] ಕಾದಿಸುವಳ್ಳಿಕಾಱರ[4] । ಕಲಕಲವೆಸೆದುದಂದಲ್ಲಿ ॥ ೯ ॥

ಕತ್ತಿಯು ಚರಣಕೆ ಕಟ್ಟಿ ಕೋಳಿಗಳಿಗೆ । ತುತ್ತಿ ಮದ್ದನು ಲೀಲೆಯೊಳು ॥
ಬಿತ್ತರದಿಂ ಕಾದಿಸುವಳ್ಳಿಗಾಱರ[4] । ವೊತ್ತವೆಸೆದುದಂದಲ್ಲಿ[5] ॥ ೧೦ ॥

ಕಬ್ಬಿನ ಹೊರೆಗಳ ಕಟ್ಟಿ ಜೂಜಿಗೆ ನೋಡ । ಲಬ್ಬರಿಸಿಯೆ ಖೋಯೆಂದು ॥
ಉಬ್ಬಿ[6] ಪೊಯ್ಯುವ ಜೂಜುಂಗಾಱರ[7] ಬೊಬ್ಬೆ । ಯಬ್ಬರವೆಸೆದುದಂದಲ್ಲಿ ॥ ೧೧ ॥

ಪರಿಪರಿದಾಡುವ ಹರಿಕಾಱರಿಂ ಕರಿ । ತುರಗಗಳಿಗೆ ಶಿಕ್ಷೆಗಳ ॥
ಇರದೆ ಮಾಡುವ ವೈಹಾಳಿ[8]ಕಾಱರ ಬ । ಲ್ಸರವೆಸೆದಿಹುದೂರ ಹೊರಗೆ ॥ ೧೨ ॥

ತೊಡೆಮಡ[9] ಕೈಸನ್ನೆಯಿಂದ ಸಹಣಿಗಳ । ನುಡಿಸನ್ನೆಯಿಂ ತುಟ್ಟದೆಡೆಗೆ ॥
ಬಿಡದೈದುವ ಕರಿತುರಗಂಗಳ ತಂಡ । ಬಿಡದೆಸೆದಿಹುದೂರ[10] ಹೊಱಗೆ ॥ ೧೩ ॥

ಅಲ್ಲಲ್ಲಿ ಜೂಜನಾಡುವರರೆಬರು[11] ಮ । ತ್ತಲ್ಲಲ್ಲಿ ಕೆಲರು ಕಾಳಗಕೆ[12]
ನಿಲ್ಲದುಲಿದು ಬಪ್ಪ ಮಾಸಾಳುಗಳ ಬಲು । ಸೊಲ್ಲೆಸೆದಿಹುದನವರತ[13] ॥ ೧೪ ॥

---

ಆ ಪಟ್ಟಣದ ನಾಲ್ಕೂ ದಿಕ್ಕುಗಳಲ್ಲಿ ಬೇರೆ ಬೇರೆ ಬಯಲುಗಳಿದ್ದುವು. ಅವುಗಳಲ್ಲಿ ಗುರಿಯಿಟ್ಟು ಹೊಡೆಯಲು ಅಭ್ಯಾಸಮಾಡುವ ಬಯಲು, ಜಟ್ಟಿ ಕಾಳಗ ಮಾಡುವ ಬಯಲು, ಕೋಣ, ಹುಲಿ ಮುಂತಾದ ಪ್ರಾಣಿಗಳನ್ನು ಕಾದಾಡಿಸುವ ಬಯಲು,— ಮುಂತಾದವು ಇದ್ದುವು ॥ ೮ ॥ ವಿಶಾಲವಾದ ಮೈದಾನಿನಲ್ಲಿ ನಿಂತುಕೊಂಡು ತಗರುಗಳ ತಲೆಗೆ ನಿಂಬೆಹುಳಿಯನ್ನು ಸವರಿ, ಸೊಪ್ಪು ತಿನಿಸಿ ಕಾದಾಡಿಸುವಂತಹ ವಿನೋದಪ್ರಿಯರ ಸ್ವರವು ಅಲ್ಲಿ ಕೇಳಿಸುತ್ತಿರುವುದು. ॥ ೯ ॥ ಕೋಳಿಗಳ ಕಾಲಿಗೆ ಕತ್ತಿಯನ್ನು ಕಟ್ಟಿ, ಅವುಗಳಿಗೆ ಮದ್ದನ್ನು ತಿನ್ನಿಸಿ ಕಾದಾಡಿಸುವ ಕೋಳಿಜೂಜುಗಾರರ ಸಮೂಹವೂ ಅಲ್ಲಿ ಶೋಭಿಸುತ್ತಿರುವುದು ॥ ೧೦ ॥ ಜೂಜಾಟಕ್ಕಾಗಿ ಕಬ್ಬಿನ ಹೊರೆಗಳನ್ನು ಕಟ್ಟಿ ಉತ್ಸಾಹದಿಂದ ಉಬ್ಬಿ ಖೋಯೆಂದು ಬೊಬ್ಬಿಟ್ಟು ಕಾಯಿಗಳನ್ನು ಹೊಡೆಯತಕ್ಕ ಜೂಜುಗಾರರ ಬೊಬ್ಬೆಯ ಅಬ್ಬರವೂ ಅಲ್ಲಿ ಕೇಳುತ್ತಿರುವುದು. ॥ ೧೧ ॥ ಅಲ್ಲಿ ಅತ್ತಿತ್ತ ಹೋಗುತ್ತಿರುವ ಹರಿಕಾರರ ಸ್ವರವೂ ಆನೆ ಕುದುರೆಗಳಿಗೆ ಶಿಕ್ಷಣವನ್ನು ಕೊಡುವ ವೈಹಾಳಿಕಾರರ ದೊಡ್ಡದಾದ ಸ್ವರವೂ ಊರಿನ ಹೊರಗೆ ಕೇಳುತ್ತಿರುವುದು ॥ ೧೨ ॥ ಆನೆ ಕುದುರೆಗಳನ್ನು ಪಳಗಿಸುವ ಸಹಣಿಗಳು ಮಾಡುವ ತೊಡೆ, ಮಡಿ, ಕೈಸನ್ನೆಗಳಿಂದಲೂ ಮಾತಿನ ಸನ್ನೆಯಿಂದಲೂ ತಾವು ನಿರ್ದೇಶಿಸಿದ ಕಡೆಗೆ ಹೋಗುವ ಆನೆಕುದುರೆಗಳ ಸಮೂಹವು ಆ ಊರಹೊರಗೆ ಶೋಭಿಸುವುದು ॥ ೧೩ ॥ ಅಲ್ಲಲ್ಲಿ ಕೆಲವರು ಜೂಜನ್ನಾಡುವರು. ಇನ್ನು ಕೆಲವರು ವೀರರು ಕಾದಾಟಕ್ಕಾಗಿ ಅರ್ಭಟಿಸಿಕೊಂಡು ಬರುವರು ಇವರ ಮಾತು ಅಲ್ಲಿ ಯಾವಾಗಲು ಕೇಳಿಸುತ್ತಿರುವುದು ॥ ೧೪ ॥

---

[1] ಎಸೆವ (ಗ). [2] ರಂಜಿಸಿದವು (ಗ. ಚ) [3] ತಲೆಯು ಮೇಲಿರಿಸಿ (ಗ) [4] ವರ್ಧಿಕಾಱರ (ಗ). [5] ವೆಸೆದುದೂರ ಹೊಱಗೆ (ಗ ಚ). [6] ಕೊಬ್ಬಿ (ಚ) ಜೂಮುಂಗಾಱರ (ಚ) [8] ವೈಯಾಳಿ (ಕ) [9] ತೊಡಮಡ (ಕ) [10] ವಂಗಡವೆಸೆದಿಹುದೂರ (ಚ). [11] ಜೂದನಾಡುವರರೆುರು (ಚ) [12] ಕಾಳಿಗವ (ಗ) [13] ಸೊಲ್ಲೆಸೆದಿಹುದೂರ ಹೊಱಗೆ (ಗ. ಚ).

ಕೊಡು ನನ್ನ ಮಗಳನೆನುತ ಕೋಪದಿಂದಿನಿ । ಗಡಲ್ಮೈತಂದಾ ಪೊಳಲ ॥
ಬಿಡದೆ ಬಳಸಿ ಮುತ್ತಿದಂತೆ ಮೆಱೆದುದಾ । ಕಡುಗುಣ್ಪುವಡೆದ ನೀರಗಳು ॥ ೧೫ ॥

ಅಱಿವುದು ನಾಲಗೆ ಲವಣಾಬ್ಧಿಯುಗಳೆಂಬ । ತೆಱನ ನಯನಚಿತ್ತಗಳಿಗೆ ॥
ಅಱಿಯಬಾರದು ಅಗಲಾಳದಿಂ ನಗರದ । ಹೊಱಗಳ[1] ನೀರಗಳಿರಲು[2] ॥ ೧೬ ॥

ಉರಗನಾರಿಯರಾ ಪುರದ ಪರಿಖೆಯೆಂಬ । ವರನಿಚ್ಚಣಿಗೆಯೊಳೈತಂದು ॥
ಪುರವೆಣ್ಗಳೊಳು[3] ಬಿನದಿಸಿ ಬರ್ಪ ಬಟ್ಟೆಯು । ನಿರದೆ ಪೋಲ್ತುದು ಖಾತಿಕೆಯು ॥ ೧೭ ॥

ಕಡೆಯದ ಮೊತ್ತ ಮೊದಲೆ ಮಂದರವಾ । ಕಡಲ ಮಧ್ಯದೊಳೊಪ್ಪುವಂತೆ ॥
ಬಿಡದೆ ಬಳಸಿದ ನೀರಗಳ ಮಧ್ಯದೊಳಂದು । ಕಡು ರಯ್ಯವಾಯ್ತು ಪೊಂಗೋಟೆ ॥ ೧೮ ॥

ವನಧಿಯು ನಡುವೆ ವರುಣದಿಕ್ಪತಿಯರ । ಮನೆಯ ಕನಕ ಭಿತ್ತಿಯಂತೆ ॥
ಘನತರಮಪ್ಪ ನೀರಗಳ ಮಧ್ಯದ ಕೋಂಟೆ । ಯನುಕರಿಸಿದುದು ಚೆಲ್ವಿಕೆಯ ॥ ೧೯ ॥

ಆ ನಗರದ ಸಿರಿ ಪೆಂಪು ಚೆಲ್ವಿಕೆಯನಂ । ದಾ[4] ನಳಿನಾಂಬಕ ನೋಡಿ ॥
ಆನದಂಬುಧಿಯೊಳು ಪುರವ ಕಟ್ಟಿದನದ । ನೇನೆಂಬೆನಂಬುಜನೇತ್ರೆ[5] ॥ ೨೦ ॥

ಸಂಜೆಮುಗಿಲ ಸಿರಿಯನು ತಂದೊಯ್ಯನೆ । ಕಂಜಜ ಬಿಡುಗಂಡರಣೆಯ[6] ॥
ರಂಜಿಸಿದನೊ ಎನಲಾ ಕೋಂಟೆಗೆಯಪ । ರಂಜಿಯ ತೆನೆಗಳೊಪ್ಪಿದವು ॥ ೨೧ ॥

---

ಕ್ಷೀರಸಾಗರರಾಜನು ಕೋಪದಿಂದ ಬಂದು, "ನನ್ನ ಮಗಳನ್ನು (ಲಕ್ಷ್ಮಿಯನ್ನು) ಕೊಡು," ಎಂದು ಆ ಪಟ್ಟಣವನ್ನು ಆವರಿಸಿ ನಿಂತನೋ ಎಂಬಂತೆ, ಅಲ್ಲಿನ ಆಳವಾದ ಕಂದಕವು ಮೆರೆಯುತ್ತಿರುವುದು. ॥ ೧೫ ॥ ಆ ನಗರದ ಹೊರಗಣ ನೀರಿನ ಕಂದಕವು ಸಮುದ್ರದಂತೆ ಬಹಳ ಆಳವಾಗಿದ್ದು, ಕಣ್ಣಿಗೂ ಮನಸ್ಸಿಗೂ ಇದು ಸಮುದ್ರವಲ್ಲ ಎನಿಸುವಂತೆ ಇರಲಿಲ್ಲ. ನಾಲಗೆ ಮಾತ್ರ ಇದು ಉಪ್ಪಿನ ಕಡಲಿನ ಅಗಳು, ಇದು ಇತರ ನೀರಿನ ಅಗಳು ಎನ್ನುವಂತಿತ್ತು. ॥ ೧೬ ॥ ನಾಗಸ್ತ್ರೀಯರು ಆ ಪಟ್ಟಣದ ಪರಿಖೆಯೆಂಬ ಏಣಿಯ ಮೂಲಕವಾಗಿ ಬಂದು, ಪಟ್ಟಣದ ಹೆಂಗುಸರೊಡನೆ ವಿನೋದವಾಡಿ ಬರತಕ್ಕ ದಾರಿಯೋ ಎಂಬಂತೆ ಆ ಕಂದಕವಿದ್ದಿತು. ॥ ೧೭ ॥ ಸಮುದ್ರಮಥನವನ್ನು ಪ್ರಾರಂಭಿಸುವುದಕ್ಕೆ ಮೊದಲು ಆ ಸಮುದ್ರದ ನಡುವೆ ಮಂದರಾದ್ರಿಯು ಶೋಭಿಸುವಂತೆ ಸುತ್ತಲೂ ಆವರಿಸಿಕೊಂಡಿರುವ ಆ ನೀರಕಂದಕದ ನಡುವಿನಲ್ಲಿ ಚಿನ್ನದ ಕೋಟೆ ಮನೋಹರವಾಗಿರುವುದು. ॥ ೧೮ ॥ ಸಮುದ್ರದ ನಡುವೆ ಇರುವ ವರುಣನ ರಾಜಭವನದ ಚಿನ್ನದ ಕೋಟೆಯೋ ಎಂಬಂತೆ, ಶ್ರೇಷ್ಠವಾದ ಆ ನೀರಿನ ಅಗಳಿನ ನಡುವೆ ಇರುವ ಕೋಟೆಯು ಚೆಲುವಾಗಿರುವುದು. ॥ ೧೯ ॥ ಆ ನಗರದ ಸಂಪತ್ತು, ಗೌರವ, ಸೌಂದರ್ಯಗಳನ್ನು ಆ ಶ್ರೀಕೃಷ್ಣನು ನೋಡಿ ಸಮುದ್ರದಲ್ಲೇ ತನ್ನ ಪಟ್ಟಣವನ್ನು ನಿರ್ಮಿಸಿಕೊಂಡನು. ಹೀಗಿರುವಾಗ ಆ ಪಟ್ಟಣವನ್ನು ಕುರಿತು ಏನೆನ್ನಲಿ! ॥ ೨೦ ॥ ಬ್ರಹ್ಮನು ಸಂಧ್ಯಾಕಾಲದ ಮೋಡಗಳ ಕಾಂತಿಯನ್ನು ಅಲ್ಲಿಗೆ ತಂದು ಇರಿಸಿದನೋ ಎಂಬಂತೆ, ಆ ಕೋಟೆಯಲ್ಲಿ ಅಪರಂಜಿಯ ತೆನೆಗಳಿದ್ದವು. ॥ ೨೧ ॥ ಆ ಪಟ್ಟಣಕ್ಕೆ ಅಧೀನವಾಗದೆ ಇರುವ ಅರಸರನ್ನು ಸೇರುವಂತೆ ನುಂಗಿಬಿಡುವೆನೆಂದು ರೆಪ್ಪೆಬಡಿಯದೆ ನೋಡುತ್ತಿರುವ ದೊಡ್ಡ ಮಾರಿದೇವತೆಯ ಕಣ್ಣುಗಳೋ ಎಂಬಂತೆ, ಆ ಕೋಟೆಯಲ್ಲಿ ಚೋರಗಂಡಿ

---

1 ಹೊಱಗಣ (ಚ)  2 ನೀರಗಳಿರವ (ಗ ಚ).  3 ಸುರಪಟ್ಟಣವೊಳು (ಗ) ಸುರವೆಣ್ಗಳೊಳು (ಚ).  4 ಆ ನೀರಗಳ ನಡುವಣ ಪುರವನಂದಾ (ಗ. ಚ).  5 ಕಟ್ಟಿದನೆನಲೇನೆಂಬೆನದಱ ಸಂಪದವ (ಚ) ಕಟ್ಟಿದನದನೇನೆಂಬೆನದಱ ಸಂಪದವ (ಗ).  6 × (ಚ)

ಚೋರಗಂಡಿಗಳೊಪ್ಪಿದವಾ ಪುರಕತಿ । ಸೇರದರಸುಗಳ ತನ್ನ ॥
ಸೇರೆ ನುಂಗುವೆನೆಂದೆವೆಯಿಕ್ಕದಿರ್ಪ ಹೆ । ಮ್ಮಾರಿಯ ಬಿಡುಗಣ್ಣಿನಂತೆ ॥ ೨೨ ॥

ಕನಕಕಲಶಗಳ ಕಿಂಕಿಣಿರವದಿಂದ । ಮನವೊಲ್ದು ಪೊಕ್ಕು ಪೊರಡುವ ॥
ಜನದುಲುಹಿಂದ ಗೋಪುರವಾ ಪುರವಧು । ನಿನಿಯ ನೂಪುರದಂತೆಸೆದುದು ॥ ೨೩ ॥

ಹರಿನೀಲ ಕೆಂಗಲ್ಲ ಪಳುಕಿನಟ್ಟಣೆಗಳು[1] । ಕರವೆಸೆದವು ನೀಲಾದ್ರಿ ॥
ವರರೋಹಣಾಚಲ ಸಿದ್ಧನಗಗಳಾ[2] । ಪುರಕೊಲ್ದು ಬಂದವೆಂಬಂತೆ ॥ ೨೪ ॥

ಆ ಪುರದೊಳಗೆಸೆದಿಹ ನೀಲರನ್ನದ । ಗೋಪುರ ನೆಲೆನೆಲೆಯೊಳಗೆ[3] ॥
ಆ ಪೊತ್ತಿಸೆವ ಪತಾಕಾಪವನನಿಂದ । ತಾಪವ ಕಳೆವನಾ ತರಣಿ[4] ॥ ೨೫ ॥

ರತ್ನದ ಭಿತ್ತಿ ಬಡಬ[5] ವಹ್ನಿಯಾಗಲಾ । ನೂತ್ನ ಹರ್ಮ್ಯಗಳು ನಾವಾಗೆ ॥
ಪತ್ನಿ ಲಾಲಿಸು ಝುಷಕೇತನವೆನೆ ಪುರ । ರತ್ನಾಕರದಂತೆಸೆದುದು ॥ ೨೬ ॥

ಹರಿನೀಲದ ಕಾಂತಿ ಕಳ್ತಲೆ[6] ಕೆಂಗಲ್ಲ । ವರರುಚಿಯೆಳವಿಸಿಲಾಗೆ ॥
ಇರುಳು ಪಗಲುಗೂಡಿರ್ಪವೆಂದೆನೆ[7] ಪುರ । ದಿರವ ನಾನೇನ ಬಣ್ಣಿಪೆನು ॥ ೨೭ ॥

ಅದು ಸಾಕೇತಮಯೋಧ್ಯೆಯೆ ಪರಿಕಿಪೊ । ಡದೆ ವಿನೀತೆಯುಂ ಭಾವಿಸಲು ॥
ಅದು ಕೌಶಲವೆಂಬ[8] ನಾಲ್ಕು ಪೆಸರನಾಂ । ತದು ಮೆಱೆದಿಹುದು ಚೆಲ್ವಿಂದ ॥ ೨೮ ॥

ಸಿರಿಗೆ ಸಿಂಗರಕೆ ಸುಖಕೆ[9] ವಿತ್ತಪತಿಯುರು । ಪುರವ ನಾಕವ ಭೋಗವತಿಯ ॥
ಇರದೆ ಚುನ್ನವನಾಡುವುದೆನಲಾ ಪುರ । ದಿರವ[10] ಪೇಳುವುದೇನನಬಲೆ[11] ॥ ೨೯ ॥

---

(ಕಳ್ಳದಾರಿ) ಗಳಿದ್ದವು ॥ ೨೨ ॥ ಆ ಪಟ್ಟಣದ ಗೋಪುರವು ಚಿನ್ನದ ಕಲಶಗಳ ಕಿರುಗೆಜ್ಜೆಗಳ ಶಬ್ದದಿಂದಲೂ ಪ್ರೀತಿಯಿಂದ ಹೊಕ್ಕುಹೊರಡುವ ಜನರ ಮಾತಿನಿಂದಲೂ ಆ ಪಟ್ಟಣವೆಂಬ ಹೆಂಗುಸಿನ ಕಾಲಿನ ತೊಡವಿನಂತೆ ಶೋಭಿಸುವುದು. ॥ ೨೩ ॥ ಆ ಪಟ್ಟಣದಲ್ಲಿ ನೀಲರತ್ನ, ಕೆಂಪುರತ್ನ ಮತ್ತು ಚಂದ್ರಕಾಂತಶಿಲೆಯ ಅಟ್ಟಳೆಗಳು ಇರುವವು. ನೀಲಗಿರಿ, ರೋಹಣ ಪರ್ವತ ಸಿದ್ಧಪರ್ವತಗಳು ಆ ಪಟ್ಟಣಕ್ಕೆ ಬಂದಂತೆ ಈ ಅಟ್ಟಳೆಗಳು ಶೋಭಿಸುವವು. ॥ ೨೪ ॥ ಆ ಪಟ್ಟಣದಲ್ಲಿರುವ ನೀಲರತ್ನದ ಗೋಪುರಗಳಲ್ಲೆಲ್ಲಾ ಸದಾ ಕಾಲವೂ ಪತಾಕೆಗಳು ಶೋಭಿಸುವವು ಆ ಪತಾಕೆಗಳ ಗಾಳಿಯಿಂದ ಸೂರ್ಯನು ತನ್ನ ಸೆಕೆಯನ್ನು ಹೋಗಲಾಡಿಸುವನು. ॥ ೨೫ ॥ ಆ ಪಟ್ಟಣದ ರತ್ನದ ಗೋಡೆಯು ವಡವಾಗ್ನಿಯೆನಿಸಲು, ಹೊಸ ಕಟ್ಟಡಗಳು ಹಡಗೆನಿಸಲು, ಧ್ವಜಗಳು ಮೀನೆಂದಿನಿಸಲು ಆ ಪಟ್ಟಣವು ಸಮುದ್ರದಂತೆ ಶೋಭಿಸಿತು. ॥ ೨೬ ॥ ನೀಲರತ್ನದ ಪ್ರಕಾಶವೇ ಕತ್ತಲೆ, ಕೆಂಪುರತ್ನದ ಪ್ರಕಾಶವೇ ಎಳೆಬಿಸಿಲು, ಇವೆರಡರಿಂದ ಇರುಳು ಹಗಲುಗಳೆರಡೂ ಒಂದುಗೂಡಿದಂತೆ ಆ ಪಟ್ಟಣವು ಇರುವುದೆನ್ನುವಾಗ ಅದನ್ನು ನಾನು ಏನೆಂದು ವರ್ಣಿಸಲಿ! ॥ ೨೭ ॥ ಆ ಪಟ್ಟಣವು ಸಾಕೇತ, ಅಯೋಧ್ಯೆ, ವಿನೀತೆ, ಕೌಶಲ—ಎಂಬ ನಾಲ್ಕು ಹೆಸರುಗಳಿಂದ ಮೆರೆಯುವುದು ॥ ೨೮ ॥ ಆ ಪಟ್ಟಣವು ಸಂಪತ್ತಿನಲ್ಲಿ ಕುಬೇರನ ಅಳಕಾ

---

[1] ಪಳುಕಿನಟ್ಟಳೆಗಳು (ಚ) [2] ರೋಹಣಾಂಬರ ಗದ್ಧನಗಗಳಾ (ಕ) ರೋಹಣಾಚಲ ಸಿದ್ಧರಸಗಳಾ (ಚ) [3] ನೆಲೆದೆಲೆಯೊಳಗೆ (ಕ). ನೆಲೆನೆಲದೊಳಗೆ (ಚ) [4] ಪತಾಕೆಯೆಸೆದವಾ ಭೂಪನ ಸಿರಿಯೆಂಬಂತೆ (ಗ ಚ) [5] ಹರ್ಮ್ಯಗೋಪುರ (ಕ) [6] ಕತ್ತಲೆ (ಗ) [7] ಗೂಡಿಹ ವೆನಲಾ (ಗ ಚ) [8] ಕೋಸಲವೆಂಬ (ಗ) [9] ಸಿರಿ ಸುಖಭೋಗದೊಳಗೆ (ಗ ಚ) [10] ಪೊಳಲಿರವ (ಗ ಚ). [11] ದೇನಬಲೆ (ಚ)

ಮೆಟ್ಟಿತುರಗನಗರಿಯನಳಕೆಯನಱಿ । ಯಟ್ಟಿತು ದೆಸೆಗೆ ನಾಕವನು ॥
ಮುಟ್ಟಲೀಯದೆ ಮೇಲಕೆ ನೂಕಿತೆನಲಾ । ಪಟ್ಟಣವನು ಪೇಳ್ವೆನೇನ ॥ ೩೦ ॥

ಕಿನ್ನರ ಪುರ[1] ಕಿಂಪುರುಷನಗರಿ ಸಂ । ಪನ್ನ ಗರುಡಪತ್ತನಗಳು ॥
ಮುನ್ನಿಣೆ ದೊರೆಯಲ್ಲವೆಂದೆನಲಾ ಪೊಳ । ಲುನ್ನತಿಕೆಯ ಪೇಳ್ವೆನೇನ ॥ ೩೧ ॥

ಸರಸ ಕೋವಿದ ಬುಧತತಿಗಳಾಡುಂಬೊಲ । ಸಿರಿಯರಮನೆ ಸರಸತಿಯ ॥
ಉರುತರ ಗೃಹ ಜಿನಮತದ ಬೀಡಾ ಪೊಳ । ಲಿರವ ನಾನೇನ ಬಣ್ಣಿಪೆನು ॥ ೩೨ ॥

ಮನ್ನೆಯ ಮಂಡಳಿಕರ ಹಳೆಯರ ಪೊಸ । ಬಿನ್ನಣಿಗರ ಜೋಯಿಸರ[2] ॥
ಚಿನ್ನವರದರ ಚಿಪ್ಪಿಗರ ಕೇರಿಗಳದೊಂ । ದುನ್ನತಿಕೆಯ ಪೇಳ್ವೆನೇನ[3] ॥ ೩೩ ॥

ಸಚಿವರ ದಳಪತಿಗಳ[4] ಕುವರರ ಬಲು । ಶುಚಿಗಳರಸುಮಕ್ಕಳುಗಳ ॥
ಅಚಲಿತ ಧೈರ್ಯರ ಕೇರಿಕೇರಿಯ ಬಲು । ನಿಚಯಮೆಸೆದುದಂದಲ್ಲಿ[5] ॥ ೩೪ ॥

ರಾಯಭಾರಿಗಳ ರಾಯಸದರ ಪಡಿಯಱ । ಗಾಯಕ ಗಮಕಿ ವಾದಿಗಳ ॥
ನಾಯಕ ಪಾಯಕರುಗಳ[6] ಕೇರಿಗಳು ವಿ । ಡಾಯವಡೆದು ರಾಜಿಪವು ॥ ೩೫ ॥

ಲೆಕ್ಕಿಗರುಗಳಕ್ಕರಿಗರ ಕವಿಗಳ । ಲಕ್ಕಣಿಗರ ಪಾಠಕರ ॥
ಎಕ್ಕಟಿಗರ[7] ತಕ್ಕರ ಕೇರಿಗಳಲ್ಲಿ । ಲೆಕ್ಕಕ್ಕೆ ನಿಲುಕದೆಸೆದವು ॥ ೩೬ ॥

ಹಿರಿಯರ ಮಾನ್ಯರ ಗರುವರ ಗುಣಿಗಳ । ಗರುಡಿಯಾಚಾರ್ಯರ ಬುಧರ ॥
ಸರಸಕೋವಿದರ ರಸಿಕರ ಕೇರಿಗಳು ಸಿಂ । ಗರವಡೆದೆಸೆದವಂದಲ್ಲಿ ॥ ೩೭ ॥

---

ವತಿಯನ್ನೂ, ಸೌಂದರ್ಯದಲ್ಲಿ ಅಮರಾವತಿಯನ್ನೂ, ಸೌಖ್ಯದಲ್ಲಿ ಭೋಗವತಿ (ನಾಗಲೋಕದ ರಾಜಧಾನಿ) ಯನ್ನೂ ಹೀನೈಸುವುದು. ಹೀಗಿರುವಾಗ ಆ ಪಟ್ಟಣದ ಸ್ಥಿತಿಯನ್ನು ಏನೆನ್ನಲಿ! ॥ ೨೯ ॥ ಆ ಪಟ್ಟಣವು ಭೋಗವತಿಯನ್ನು ಮೆಟ್ಟಿಬಿಟ್ಟಿತು, ಅಳಕಾವತಿಯನ್ನು ದಿಕ್ಕಿಗೆ ಓಡಿಸಿತು, ಅಮರಾವತಿಯನ್ನು ಮುಟ್ಟಲು ಕೂಡ ಬಿಡದಂತೆ ಮೇಲಕ್ಕೆ ನೂಕಿತು— ಎನ್ನುವಾಗ ಅದನ್ನು ಕುರಿತು ಏನು ಹೇಳಲಿ! ॥ ೩೦ ॥ ಕಿನ್ನರ, ಕಿಂಪುರುಷ, ಗರುಡರ ಪಟ್ಟಣಗಳು ಅದಕ್ಕೇನೂ ಎಣೆಯಲ್ಲವೆನ್ನುವಾಗ ಆ ಪಟ್ಟಣದ ಮೇಲ್ಮೆಯನ್ನು ಏನೆನ್ನಲಿ! ॥ ೩೧ ॥ ರಸಿಕ ವಿದ್ವಾಂಸರಿಗೆ ಆಡುವ ಹೊಲವೂ, ಸಂಪತ್ತಿಗೆ ಅರಮನೆಯೂ, ವಿದ್ಯಾದೇವಿಗೆ ಶ್ರೇಷ್ಠವಾದ ಮನೆಯೂ, ಜೈನಮತದ ಬೀಡೂ ಆದ ಆ ಪಟ್ಟಣದ ಸ್ಥಿತಿಯನ್ನು ಏನೆಂದು ವರ್ಣಿಸಲಿ! ॥ ೩೨ ॥ ಆ ಪಟ್ಟಣದಲ್ಲಿರುವ ಜನನಾಯಕರ, ಸಾಮಂತರಾಜರ, ಹಳಬರ, ಹೊಸ ವಿಜ್ಞಾನಿಗಳ, ಜೋಯಿಸರ, ಚಿನ್ನದ ವ್ಯಾಪಾರಿಗಳ, ಹೊಲಿಗೆಯವರ ಬೀದಿಗಳ ಮೇಲ್ಮೆಯನ್ನು ಏನೆನ್ನಲಿ! ॥ ೩೩ ॥ ಅಲ್ಲಿ ಮಂತ್ರಿಗಳ, ಸೇನಾಪತಿಗಳ, ಮಕ್ಕಳ, ಪವಿತ್ರರಾದವರ, ರಾಜಕುಮಾರರ, ಧೀರರ ಬೀದಿಗಳ ಸಮೂಹಗಳು ಎಸೆಯುತ್ತಿದ್ದವು. ॥ ೩೪ ॥ ರಾಯಭಾರಿಗಳ, ರಾಜಾಜ್ಞೆಯನ್ನು ಒಯ್ಯುವವರ, ಪ್ರತೀಹಾರಿಗಳ, ಹಾಡುವವರ. ಕಾವ್ಯವಾಚನಮಾಡುವವರ, ತಾರ್ಕಿಕರ, ನಾಯಕರಾದವರ, ಕಾಲಾಳುಗಳ ಬೀದಿಗಳು ಶೋಭಿಸಿಕೊಂಡಿವೆ. ॥ ೩೫ ॥ ಗಣಿತಜ್ಞರ, ವಿದ್ಯಾವಂತರ, ಕವಿಗಳ, ಲಾಕ್ಷಣಿಕರ, ಓದುಗರ, ಗುಪ್ತಾಲೋಚನೆ ಮಾಡತಕ್ಕವರ, ಯೋಗ್ಯವ್ಯಕ್ತಿಗಳ ಬೀದಿಗಳು ಅಸಂಖ್ಯವಾಗಿದ್ದವು. ॥ ೩೬ ॥ ಹಿರಿಯರಾದವರ,

---

[1] ಪುರಿ (ಚ). [2] ದೋಯಿಸರ (ಗ. ಚ) [3] ನೇನ ಪೇಳ್ವೆ (ಚ) [4] ದರಪತಿಗಳ (ಗ). [5] ಮೆಸೆದುದದಱೊಳಗೆ (ಗ ಚ.)
[6] ಸಾಯಕರುಗಳ (ಕ) [7] ಯಕ್ಕಟಿಗರ (ಗ) ಯೆಕ್ಕಟಿಗರ (ಚ).

ಅಡಪವಳರ[1] ಮಡಿವಳ ಮಾಲೆಗಾಱರ । ಗುಡಿಯರ ಗಡಿಯ ಮನ್ನೆಯರ ॥
ನಡೆವಳಿಕಾಱರ ಪರದರ ಕೇರಿಗ । ಳೊಡನೆಸೆದವು ಪುರದೊಳಗೆ ॥ ೩೮ ॥

ಕಂಚುಗಾಱರ[2] ಕಲ್ಲುಕುಟಿಗ ಕಮ್ಮಾಱರ । ಅಂಚುಗಾಱರ ಸಹಣಿಗಳ ॥
ಪಂಚುಗಾಱರ[3] ಬಣ್ಣಗಾಱರ ಕೇರಿಯ । ಸಂಚಯವೆಸೆದುದಬ್ಜಾಕ್ಷಿ ॥ ೩೯ ॥

ಮಜ್ಜನವಳ್ಳರ ಮಣಿಹಗಾಱರ ಬಲು । ಬೆಜ್ಜರ ಬೆಸದಾಳುಗಳ ॥
ಸಜ್ಜನರುಗಳ ಕೇರಿಗಳ ವಂಗಡದಿಂದ । ಪಜ್ಜಳಿಸಿದುದಾ ಪೊಳಲು ॥ ೪೦ ॥

ಗೊಲ್ಲರ ಗೊರವರ[4] ಗೋಪತಿಗಳ ಬಲು । ಮಲ್ಲರ ಮಾಸಾಳುಗಳ ॥
ಕೊಲ್ಲಟಗರ ಕೋಡಿಗರ[5] ಕೇರಿಗಳು ಲೆಕ್ಕ । ವಿಲ್ಲದೆಸೆವವದಱೊಳಗೆ[6] ॥ ೪೧ ॥

ಮನೆಯೊಳಗಿಂಬಿಟ್ಟ ಪೊನ್ನೇಸು ತಂತಮ್ಮ । ನೆನಹಿಗೆ ಬಂದುದೇಸೆಂದು ॥
ಮನವಚನದೊಳಱಿಯದೆ ಬಾಳುವ ಬಲು । ಧನಿಕರದಱೊಳೊಪ್ಪಿದರು[7] ॥ ೪೨ ॥

ಅರಲಂಬನ ರೂಪಿನಿಂದ ತಮ್ಮುರುತರ । ಸಿರಿಯಿಂದ ಸಿರಿವೆಣ್ಣವರು ॥
ಉರುಸುಖದಿಂದ ಸುರರುಗಳ ಪಳಿವರಾ । ಪುರದ ಸಕಲ ಜನರುಗಳು ॥ ೪೩ ॥

ಆ ಪಟ್ಟಣದ ಚೆಲ್ವ ನೋೞ್ಪೆನೆನುತ ಪುಷ್ಪ । ಚಾಪನರಸಿಯೊಲ್ದು ಹಲವು ॥
ರೂಪ ತಳೆದು ಬಂದಳೆಂಬಂತೆಸೆದರಲ್ಲಿ । ಚಾಪಲಾಕ್ಷಿಯರೇಣನೇತ್ರೇ ॥ ೪೪ ॥

ಹರನ ಶಿರದೊಳು ಬಿದಿಯ ಬಾಯೊಳು ಮುರ । ಹರನ ಪೇರುರದ[8] ಮಧ್ಯದೊಳು ॥
ಇರದೆ ದಾಗೊತ್ತಿದಂಗನೆಯರೊಳಗೆ[9] ಮ । ಚ್ಚರಿಪರಾ ಪುರದ ನಾರಿಯರು ॥ ೪೫ ॥

---

ಮರ್ಯಾದೆವಂತರ, ಗೌರವವುಳ್ಳವರ, ಗುಣವಂತರ, ಶಸ್ತ್ರವಿದ್ಯಾಬೋಧಕರ, ಬ್ರಾಹ್ಮಣರ, ರಸಿಕವಿದ್ವಾಂಸರ ಬೀದಿಗಳು ಚೆಲುವಾಗಿ ಶೋಭಿಸುತ್ತಿದ್ದವು. ॥ ೩೭ ॥ ಎಲೆಯಡಿಕೆಯವರ, ಅಗಸರ, ಮಾಲೆಗಾರರ, ಒಕ್ಕಲಿಗರ, ನಾಡಿನ ಗಡಿಯ ಜನ ನಾಯಕರ, ಒಳ್ಳೆಯ ನಡೆವಳಿಯುಳ್ಳವರ, ವ್ಯಾಪಾರಿಗಳ, ಬೀದಿಗಳು ಆ ಪಟ್ಟಣದಲ್ಲಿದ್ದವು ॥ ೩೮ ॥ ಎಲೇ ಚೇಳಿನಿಯೇ, ಆ ಪಟ್ಟಣದಲ್ಲಿ ಕಂಚುಗಾರ, ಕಲ್ಲುಕುಟಿಗ, ಕಮ್ಮಾರ, ಕೆರೆಬಾವಿಗಳ ಅಂಚುಗಳನ್ನು ಕಟ್ಟುವವ, ಕುದುರೆಗಳನ್ನು ಪಳಗಿಸುವ, ಹಚ್ಚುಗೆಯನ್ನು ಮಾಡುವ, ಬಣ್ಣಗಾರ—ಮುಂತಾದವರ ಬೀದಿಗಳ ಸಮೂಹವಿದ್ದಿತು. ॥ ೩೯ ॥ ಸ್ನಾನದ ಏರ್ಪಾಡು ಮಾಡುವವರ, ವಂದಿಸತಕ್ಕವರ, ಶ್ರೇಷ್ಠ ವೈದ್ಯರ, ಕೆಲಸದ ಆಳುಗಳ, ಸತ್ಪುರುಷರ ಬೀದಿಗಳಿಂದ ಆ ಪಟ್ಟಣವು ಶೋಭಾಯಮಾನವಾಗಿದ್ದಿತು. ॥ ೪೦ ॥ ಗೊಲ್ಲರ, ಸನ್ಯಾಸಿಗಳ, ಗೋಪಾಲಕರ, ಜಟ್ಟಿಗಳ, ಪರಾಕ್ರಮಿಗಳ, ಡೊಂಬರ, ಕೂಟದವರ ಕೇರಿಗಳು ಅಲ್ಲಿ ಲೆಕ್ಕವಿಲ್ಲದಷ್ಟು ಇವೆ ॥ ೪೧ ॥ ಮನೆಯೊಳಗೆ ಕೂಡಿಟ್ಟ ಚಿನ್ನವೆಷ್ಟಿದೆ? ತಮ್ಮ ತಮ್ಮ ನೆನಪಿಗೆ ಬಂದಿರುವುದು ಎಷ್ಟು? ಎಂಬುದು ಮನಸ್ಸಿಗೂ ಮಾತಿಗೂ ಬರಲಾರದ ರೀತಿಯಲ್ಲಿದ್ದು ಬಾಳುವ ದೊಡ್ಡ ದೊಡ್ಡ ಐಶ್ವರ್ಯವಂತರು ಆ ಪಟ್ಟಣದಲ್ಲಿದ್ದರು. ॥ ೪೨ ॥ ಆ ಪಟ್ಟಣದ ಜನರೆಲ್ಲರೂ ತಮ್ಮ ಚೆಲುವಿನಿಂದ ಮನ್ಮಥನನ್ನೂ, ಸಂಪತ್ತಿನಿಂದ ಲಕ್ಷ್ಮೀದೇವಿಯನ್ನೂ, ಹೆಚ್ಚಾದ ಸೌಖ್ಯದಿಂದ ದೇವತೆಗಳನ್ನೂ ನಿಂದಿಸುವಂತಿದ್ದರು. ॥ ೪೩ ॥ ರತಿದೇವಿಯು ಆ ಪಟ್ಟಣದ ಸೊಬಗನ್ನು ನೋಡುವ ಅಪೇಕ್ಷೆಯಿಂದ, ಹಲವು ರೂಪಗಳನ್ನು ಧರಿಸಿ ಬಂದಳೋ ಎಂಬಂತೆ ಅಲ್ಲಿ ಹೆಂಗುಸರು ಶೋಭಿಸಿದರು ॥ ೪೪ ॥ ಶಿವನ ತಲೆಯನ್ನೇರಿದ ಗಂಗೆಯೊಡನೆಯೂ ಬ್ರಹ್ಮನ ಮುಖದಲ್ಲಿ ನೆಲಸಿದ ಸರಸ್ವತಿಯೊಡನೆಯೂ

---

[1] ಹಡಪವಳರ (ಗ) [2] ಕಂಚಗಾಜಿರ (ಚ) [3] ಸಂಚುಗಾಜಿದ (ಗ ಚ) [4] ಗೋವರ (ಕ ಚ) [5] × × × × (ಚ) [6] ದೆಸಿವ ವಂಬುಜಾಕ್ಷಿ (ಚ) [7] ರದಜೊಳೊಪ್ಪಿಹರು (ಚ) ನೊಪ್ಪೆನೆನುತ (ಚ) [8] ಹೇರುರದ (ಚ) [9] ದಾಗೊತ್ತಿದುಗನೆಯರೊಳಗೆ (ಗ ಚ).

ನಿಡುಗಣ್ಣೊಳುಂಗುರವಿಡಿನಡುವಿನ[1] ಪೊಂ । ಗೊಡವೊಲೆಯಿಂ ಮನೆವೆಣ್ಣು[2] ॥
ಬಿಡುವೆಣ್ಣು ಚೆಲಿವೆಣ್ಣು ಬೆಸವೆಣ್ಣುಗಳ ವಂ । ಗಡವಾ ಪುರದೊಳೊಪ್ಪಿದುದು ॥ ೪೬ ॥

ಬಂಡುಣಿಗುರುಳ ಬಂದುಗೆವಾಯ ಮೃಗಧರ । ಮಂಡಲಾನನದಂಚೆಗತಿಯ[3]
ಗಂಡಗಾಡಿಯ ಪುಂಡರೀಕಾಕ್ಷಿಯರ ತಂಡ[4] । ತಂಡವಾ ಪುರದೊಳೊಪ್ಪಿದುದು ॥ ೪೭ ॥

ಸುರವೆಣ್ಗಳವರಾ ಪುರವೆಣ್ಗಳಿವರೆಂ । ಬಿರವ ನೋಳ್ಪರೆ ಕಣ್ಣುಗಳ ।
ಪರಿವಿಡಿಯಿಂ ನೋಡಿಯಱಿವರಲ್ಲದೆ ರೂಪು । ಸಿರಿಯಿಂದಲಱಿವರಾರವರ ॥ ೪೮ ॥

ಬಣ್ಣದುಟಿಯ ಸಣ್ಣ ನಡುವಿನ ತುಱುಗೆವೆ । ಗಣ್ಣ ಚೆಣ್ಣಂಚೆಗಮನದ ।
ಹುಣ್ಣಿಮೆವೆಱೆವೊಗದರುಣ ಚರಣದೆಳೆ । ವೆಣ್ಣಿಹುದಾ ಪುರದೊಳಗೆ[5] ॥ ೪೯ ॥

ಸುರತದಿಂದುರಗಲೋಕದ ಸುಖವನು ತಮ್ಮ । ಸರಸದಿಂ ನರಲೋಕಸುಖವ ॥
ವಿರಸದಿಂ ಸುರಲೋಕಸುಖವನೀವರು ತಮ್ಮ । ಪುರುಷರಿಗಾ ನಾರಿಯರು ॥ ೫೦ ॥

ರೂಪಿಗೆ ಸಿರಿಗೆ ಸೊಬಗಿಗೆ ನೋಡಿದೊಡಿಕ್ಷು । ಚಾಪನ ವಸುದಾಯಕನ ॥
ಗೋಪತಿಯನು ಚುನ್ನವಾಡುವ ನರರುಗ । ಳಾ ಪುರದೊಳಗಿರುತಿಹರು ॥ ೫೧ ॥

ಪೊಸ ಪೊನ್ನ ತೋರಣ ಮಿಸುನಿಗಳಸ ನವ । ಪಸುರುಗೆಲ್ಗಳ ಹರ್ಮ್ಯದಿಂದ ॥
ಎಸೆದವು ಕೇರಿಕೇರಿಗಳೆನಲಾ[6] ಪುರ । ದೆಸಕವನೇನ ಬಣ್ಣಿಪೆನು ॥ ೫೨ ॥

---

ವಿಷ್ಣುವಿನ ವಿಶಾಲವಾದ ಎದೆಯ ನಡುವೆ ನೆಲಸಿದ ಲಕ್ಷ್ಮಿಯೊಡನೆಯೂ ಆ ಪಟ್ಟಣದ ಸ್ತ್ರೀಯರು ಮತ್ಸರಗೊಳ್ಳುವಂತಿದ್ದರು. ॥ ೪೫ ॥ ನೀಳವಾದ ಕಣ್ಣಿನಿಂದಲೂ ಉಂಗುರದಷ್ಟು ಚಿಕ್ಕದಾದ ಹಿಡಿಗೊಳ್ಳಪಡುವ ಸೊಂಟದಿಂದಲೂ ಚಿನ್ನದ ಕೊಡದಂತೆ ಶೋಭಿಸುವ ಮೊಲೆಯಿಂದಲೂ ಆ ಪಟ್ಟಣದ ಗೃಹಿಣಿಯರು, ಬಿಡುಹೆಂಗುಸರು, ಸೂಳೆಯರು, ಕೆಲಸದ ಹೆಂಗುಸರು ಶೋಭಿಸುವರು. ॥ ೪೬ ॥ ತುಂಬಿಯಂತೆ ಕಪ್ಪಾದ ಕೂದಲಿನಿಂದಲೂ, ಬಂದುಗೆ ಹೂವಿನಂತೆ ಕೆಂಪಾದ ಬಾಯಿಂದಲೂ, ಚಂದ್ರಮಂಡಲದಂತೆ ಶೋಭಿಸುವ ಮುಖದಿಂದಲೂ, ಹಂಸೆಯಂತಹ ನಡಿಗೆಯಿಂದಲೂ ಶ್ರೇಷ್ಠವಾದ ಸೊಬಗಿನಿಂದಲೂ, ಸ್ತ್ರೀಯರ ಸಮೂಹವು ಅಲ್ಲಿ ಶೋಭಿಸಿತು. ॥ ೪೭ ॥ ದೇವಲೋಕದವರನ್ನು ನೋಡಿ ಅವರು ಸುರಸ್ತ್ರೀಯರೆಂದೂ ಇವರನ್ನು ಪುರಸ್ತ್ರೀಯರೆಂದೂ ನಿರ್ಣಯಿಸಬೇಕಾಗಿದ್ದರೆ. ಅವರ ಕಣ್ಣುಗಳನ್ನು ಪರೀಕ್ಷಿಸಿ ತಿಳಿದುಕೊಳ್ಳುವರಲ್ಲದೆ ಸೌಂದರ್ಯಸಂಪತ್ತುಗಳಿಂದ ತಿಳಿಯಲು ಸಾಧ್ಯವಿಲ್ಲ. ॥ ೪೮ ॥ ಬಣ್ಣದ ತುಟಿಯಿಂದಲೂ ಸಣ್ಣ ನಡುವಿನಿಂದಲೂ ನಿಬಿಡವಾದ ಕಣ್ಣರೋಮಗಳಿರುವ ಕಣ್ಣಿನಿಂದಲೂ ಹಂಸದ ಮರಿಯಂತಹ ನಡಿಗೆಯಿಂದಲೂ ಹುಣ್ಣಿಮೆಚಂದ್ರನಂತಹ ಮುಖದಿಂದಲೂ ಕೆಂಪಾದ ಪಾದದಿಂದಲೂ ಕೂಡಿದ ಎಳೆಯ ಹೆಂಗುಸರು ಆ ಪಟ್ಟಣದಲ್ಲಿರುವರು. ॥ ೪೯ ॥ ಆ ಸ್ತ್ರೀಯರು ತಮ್ಮ ಗಂಡಂದಿರಿಗೆ ಕಾಮಸುಖದಿಂದ ನಾಗಲೋಕದ ಸುಖವನ್ನೂ ರಸಿಕತೆಯಿಂದ ಮನುಷ್ಯಲೋಕದ ಸುಖವನ್ನೂ ವಿರಸದಿಂದ ದೇವಲೋಕದ ಸುಖವನ್ನೂ ಹೀಗೆ ಮೂರುಲೋಕದ ಸುಖವನ್ನೂ ಕೊಡುವವರು. ॥ ೫೦ ॥ ರೂಪದಲ್ಲಿ ಮನ್ಮಥನನ್ನೂ ಸಂಪತ್ತಿನಲ್ಲಿ ಕುಬೇರನನ್ನೂ ಚೆಲುವಿನಲ್ಲಿ ಶ್ರೀಮನ್ನಾರಾಯಣನನ್ನೂ ಅಣಕಿಸತಕ್ಕಂತಹ ಗಂಡಸರು ಆ ಪಟ್ಟಣದಲ್ಲಿರುವರು. ॥ ೫೧ ॥ ಬೀದಿಗಳೆಲ್ಲವೂ ಹೊಸತಾದ ಚಿನ್ನದ ತೋರಣದಿಂದಲೂ ಚಿನ್ನದ ಕಲಶದಿಂದಲೂ ಹೊಸತಾದ ನೀಲ

---

[1] ನಡುವೊಸ (ಚ). [2] ಮೊಲೆಯರು ಮನೆವೆಣ್ಣು (ಕ). ಮೊಲೆಯಿಂಮಗವೆಣ್ಣು (ಗ) [3] ವಂಚೆಗತಿಯ (ಚ) [4] ಬಲು (ಚ).
[5] ವೆಣ್ಣಾಪುರದೊಳೊಪ್ಪಿದವು (ಗ ಚ). [6] ಕೇರಿಗಳೆಲ್ಲಾ (ಗ)

ಕೆಂಗಲ್ಲ ಗೋಡೆ ನೀಲದ ಬಲು ನೆಲನ । ಷ್ಟಾಂಗ ವಜ್ರದ ಬೋದಿಗೆಯಿಂ ॥
ಪೊಂಗಂಭ ಸವೆದ ಭವನಗಳಿಂದಾ ಪುರಿ[1] । ಸಿಂಗರವಡೆದುದಬ್ಜಾಕ್ಷಿ[2] ॥ ೫೩ ॥

ಮಿನುಗುವ ಸಾದಿನ ಸಾರಣೆಯೊಳೆಮು । ತ್ತಿನ ರಂಗವಲಿ ಕುಂಕುಮದೊಳು
ಅನುಗೊಳಿಸಿದ ಕಾರಣೆಗಳಿಂದಾ[3] ಮನೆ । ಮನೆಗಳಾ ಪುರದೊಳೊಪ್ಪಿದವು[4] ॥ ೫೪ ॥

ಘನತರವಡೆದ ಗೋಪುರ ಸಂತಸವ ಕ । ಣ್ಮನಕೀವ ಮಣಿಮಾಡಗಳು[5] ॥
ಕನಕದ ಭಿತ್ತಿ ಯಂತ್ರದ ಬಾವಿಯಿಲ್ಲದ । ಮನೆಯಿಲ್ಲವಾ ಪುರದೊಳಗೆ[6] ॥ ೫೫ ॥

ಕಡುರಯ್ಯವಡೆದಿಂತು ರಾಜಿಪ[7] ನಗರದ । ನಡುವಣ ರವಿವೀಥಿಯೊಳು ॥
ಬಿಡದೆ ರಾರಾಜಿಪಂಗಡಿಯ ಸಿರಿಯನಿನ್ನು । ನುಡಿಯಲಳವೆ ಮೃಗನಯನೆ ॥ ೫೬ ॥

ಮುತ್ತಲ್ಲದೀ ಮೌಕ್ತಿಕಕೆ[8] ಭಾವಿಸೆ ಬೆಲೆ, ಮುತ್ತುದಿಲ್ಲೆಂದು ಕೊಂಬವರ್ಗೆ ॥
ಉತ್ತರಗೊಡುತ ಮಾಱುವ ವಣಿಜರ ಬಲು । ಮುತ್ತುವಸರ[9]ಗಳೊಪ್ಪಿದವು ॥ ೫೭ ॥

ಗಿರಿಯೊಳಿರ್ದೊಡೆ ಭಾವಿಸಿ ನೋಡಿ ನಮ್ಮನೀ । ಪರಿಯೊಳಱಿವರಿಲ್ಲವೆಂದು ॥
ಪುರಕೊಲ್ದು ಬಂದವೆಂಬಂದದೊಳಗೆ ಕೆಂ । ಬರಲ ಪಸರಗಳೊಪ್ಪಿದವು ॥ ೫೮ ॥

ಉಡುಪತಿ ರವಿಗಳಗಿದು ರಾಹುವಿಂ ಬಾ । ನೆಡೆಯಿಂದಿಳಿದು ಬಹುರೂಪ ।
ಪಡೆದು ಪುರಕೆ ಬಂದವೆನೆ ಕಂಚಗಾಱರಂ । ಗಡಿಗಳೆಸೆದವಂಬುಜಾಕ್ಷಿ ॥ ೫೯ ॥

---

ರತ್ನಗಳ ಸೌಧಗಳಿಂದಲೂ ಶೋಭಿಸಿದವೆಂದು ಹೇಳುವಾಗ ಆ ಪಟ್ಟಣದ ರಚನೆಯನ್ನು ಏನೆಂದು ವರ್ಣಿಸಲಿ! ॥ ೫೨ ॥ ಕೆಂಪುರತ್ನದ ಗೋಡೆಯಿಂದಲೂ ನೀಲರತ್ನದ ನೆಲಗಟ್ಟಿನಿಂದಲೂ ಅಷ್ಟಾಂಗವಜ್ರದ ಬೋದಿಗೆ(ಸ್ತಂಭಶಿಖರ)ಯಿಂದಲೂ ಚಿನ್ನದ ಕಂಬಗಳಿಂದಲೂ ರಚಿತವಾದ ಮನೆಗಳಿಂದ ಆ ಪಟ್ಟಣ ಸೊಗಸಾಗಿದ್ದಿತು ॥ ೫೩ ॥ ಆ ಪಟ್ಟಣದ ಮನೆಗಳು ಹೊಳೆಯುವ ಕೆಂಪು ಸಾರಣೆಯಿಂದಲೂ ಎಳೆಯ ಮುತ್ತಿನ ರಂಗೋಲೆಯಿಂದಲೂ ಕುಂಕುಮದಿಂದ ಮಾಡಿದ ಗೀರುಗಳಿಂದಲೂ ಶೋಭಿಸಿದವು ॥ ೫೪ ॥ ಆ ಪಟ್ಟಣದ ಪ್ರತಿಯೊಂದು ಮನೆಗೂ ಶ್ರೇಷ್ಠವಾದ ಗೋಪುರ, ಕಣ್ಣಿಗೂ ಮನಸ್ಸಿಗೂ ಸಂತೋಷವನ್ನು ಕೊಡುವ ರತ್ನದ ಉಪ್ಪರಿಗೆಗಳು, ಚಿನ್ನದ ಗೋಡೆ, ಯಂತ್ರದ ಬಾವಿ—ಇವೆಲ್ಲವೂ ಇರುತ್ತವೆ ॥ ೫೫ ॥ ಎಲೇ ಜಿಂಕೆಗಣ್ಣಿನ ಚೆಲುವಿನಿಯೇ, ಹೀಗೆ ಬಹಳ ರಮಣೀಯವಾಗಿ ಶೋಭಿಸುವ ಆ ನಗರದ ನಡುವೆ ಇರುವ ಸೂರ್ಯಕಾಂತದ ಬೀದಿಯಲ್ಲಿ ಮೆರೆಯುವ ಅಂಗಡಿಗಳ ಶೋಭೆಯನ್ನು ನನಗೆ ವರ್ಣಿಸಲು ಸಾಧ್ಯವೆ? ॥ ೫೬ ॥ ಮುತ್ತುಗಳನ್ನು ಕೊಂಡುಕೊಳ್ಳಲು ಬರುವವರಿಗೆ ಅಲ್ಲಿನ ಮುತ್ತು ವ್ಯಾಪಾರಿಗಳು "ಈ ಮುತ್ತಿಗೆ ಮುತ್ತೇ ಸರಿಯಾದ ಬೆಲೆ" ಎಂದು ಉತ್ತರಕೊಡುವರು ಅಂತಹ ಮುತ್ತಿನ ಅಂಗಡಿಗಳು ಅಲ್ಲಿವೆ. ॥ ೫೭ ॥ ನಾವು ಬೆಟ್ಟದಲ್ಲಿದ್ದರೆ, ನಮ್ಮನ್ನು ಈ ರೀತಿಯಾಗಿ ನೋಡಿ ತಿಳಿದುಕೊಳ್ಳುವವರೇ ಇಲ್ಲವೆಂದು ಪ್ರೀತಿಯಿಂದ ಪಟ್ಟಣಕ್ಕೆ ಬಂದವೋ ಎಂಬಂತೆ ಅಲ್ಲಿ ಕೆಂಪುರತ್ನದ ಅಂಗಡಿಗಳಿದ್ದವು ॥ ೫೮ ॥ ಚಂದ್ರಸೂರ್ಯರು ರಾಹುವಿಗೆ ಹೆದರಿ ಆಕಾಶದಿಂದ ಇಳಿದು ಅನೇಕ ರೂಪಗಳನ್ನು ತಾಳಿ

---

[1] ಪೊಂಗಂಬದಿಂದ ಸವೆದ ಭವನಗಳಿಂದ (ಗ ಚ) [2] ವಡೆದುದಾ ನಗರಿ (ಗ) [3] ಕಾರಣೆಯಿಂದಾ (ಗ ಚ). [4] ಮನೆಗಳಿಂ ಪೊಳಲೊಪ್ಪಿದವು (ಚ) [5] ಮಣಿಮಾಡಗಳ (ಕ ಚ) [6] ನಗರದೊಳು (ಗ ಚ) [7] ರಂಜಿಪ (ಗ ಚ) [8] ಮುತ್ತಿಲ್ಲದೀ ಮೌಕ್ತಿಕಕೆ (ಗ) [9] ಮುತ್ತುವರಸು (ಚ)

ವಡಬಗಗಿದು ನಾನಾ ರತ್ನಗಳಿಂ । ಗಡಲನೊಲ್ಲದೆ ಬಿಟ್ಟುಬಂದು ॥
ಬಿಡದಾ ಪುರದೊಳಗಿರ್ಪಂತೆ ರತ್ನದಂ । ಗಡಿಗಳೆಸೆದವೇಣನೇತ್ರೇ[1]  ॥ ೬೦ ॥

ಒರೆದೊರೆಗಲ್ಲಿಂದ ಮ್ಮೆಣಕ್ಕೆದುವ[2] ಚಿನ್ನ । ದೊರೆಗೆ ಕನಕದಾಯಕನ ॥
ವರಕೋಶ ಸರಿಯಲ್ಲವೆಂದೆನುತಿಹ ಚಿನ್ನ । ವರದರಂಗಡಿಗಳೊಪ್ಪಿದವು[3]  ॥ ೬೧ ॥

ಉಂಡಡೆ[4] ಕೆಡುವವು ಪಿರಿದೆ ನೋಡಲು ಪೆಸ । ರ್ಗೊಂಡಡೆ ನೆನೆಯಲು ಜನರ ॥
ಚಂಡಾಮಯ[5] ಕೆಡುವೌಷಧಿಗಳ ತಂಡ । ತಂಡವಾ ಪುರದೊಳೊಪ್ಪಿದವು[6]  ॥ ೬೨ ॥

ಎಳೆ ನೋಡು ಮೊಳವಿಕ್ಕು[7] ಗೇಣಿಂದಗಲವ । ನಳೆ[8]ನೋಡು ಕೊಡು ಕೊಡೆನೆಂಬ ॥
ಕಳಕಳ ಮಿಗೆ ಧವಳಾಂಬರಗಳ ಬಲು । ಮಳಿಗೆಯಾ ಪೊಳಲೊಳೊಪ್ಪಿದವು[9]  ॥ ೬೩ ॥

ಮೆಱೆದವು ಹಲವು ಬಣ್ಣದ ಮುಗಿಲನು ಹಱಿ । ಹಱಿದಜನಾ ಪುರಕೊಲಿದು ॥
ಕುಱಿತಿಟ್ಟನೆನೆ[10] ಬಣ್ಣದ ಜವಳಿಗಳಿಂದ । ತುಱುಗಿದಂಗಡಿಗಳೊಪ್ಪಿದವು  ॥ ೬೪ ॥

ತಿಂಗಳ ತಂಗದಿರನು ತಗಡನು ತಳೆ[11] । ದಂಗಜನೆಂಬ ಸೊನ್ನಾರಿ[12] ॥
ಹಿಂಗದೆ ಮಾಱುವನೆನೆ ಪಚ್ಚೆಗರ್ಪುರ । ದಂಗಡಿಯುದಱೊಳೊಪ್ಪಿದವು  ॥ ೬೫ ॥

ಕತ್ತುರಿ ಕರ್ಪುರ[13] ಪುಣುಗು ಜವಾದಿಗ । ಳುತ್ತಮ ಗಂಧ ಪನ್ನೀರಾ ॥
ಬಿತ್ತರದಿಂದಲ್ಲಿ ಮಾರುವ ವಣಿಜರ । ಮೊತ್ತವಾ ಪುರದೊಳೊಪ್ಪಿದವು[14]  ॥ ೬೬ ॥

ಕುಸುಮೇಷು ಜಿನಮುನಿಗಳಿಗೆ ಬೆದಱಿ ತನ್ನ । ಪಸುರು ಮಿಂಟೆಯ ಜಂಗುಳಿಗಳಾ ॥
ಒಸೆದು ಮಾರಿಸುವಂತೆ ಪಸಿಯಡಕೆಯ ಬಲು । ಪಸರಗಳೊಪ್ಪಿದವಲ್ಲಿ  ॥ ೬೭ ॥

---

ಪಟ್ಟಣಕ್ಕೆ ಬಂದಂತೆ, ಕಂಚುಗಾರರ ಅಂಗಡಿಗಳು ಶೋಭಿಸಿದವು. ॥ ೫೯ ॥ ಮೃಗನೇತ್ರೆ, ವಡಬಾಗ್ನಿಗೆ ಹೆದರಿದ ಹಲವಾರು ರತ್ನಗಳು ಕ್ಷೀರಸಾಗರದಲ್ಲಿರಲು ಇಷ್ಟಪಡದೆ ಬಿಟ್ಟುಬಂದು, ಆ ಪಟ್ಟಣದಲ್ಲಿರುವಂತೆ ರತ್ನದ ಅಂಗಡಿಗಳಿದ್ದವು. ॥ ೬೦ ॥ ಒರೆಗಲ್ಲಿನಿಂದ ಆಗಾಗ ಒರೆದು ನೋಡಿ, ನಾನಾ ಆಕಾರಗಳಲ್ಲಿ ಮೆರೆಯುವ ಚಿನ್ನಕ್ಕೆ ಆ ಕುಬೇರನ ಭಂಡಾರ ಕೂಡ ಸಮಾನವಲ್ಲವೆಂದೆನಿಸತಕ್ಕ ಚಿನ್ನವ್ಯಾಪಾರಿಗಳ ಅಂಗಡಿಗಳು ಅಲ್ಲಿ ಇದ್ದವು. ॥ ೬೧ ॥ ಆ ಪಟ್ಟಣದಲ್ಲಿ ಔಷಧದ ಶ್ರೇಷ್ಠವಾದ ಅಂಗಡಿಗಳಿದ್ದವು. ಆ ಔಷಧಗಳನ್ನು ಸೇವಿಸಿದರೆ ರೋಗವು ನಾಶವಾಗುವುದೆಂಬುದು ಏನೂ ದೊಡ್ಡ ಸಂಗತಿಯಲ್ಲ; ನೋಡಿದರೆ, ಹೆಸರೆತ್ತಿದರೆ ಅಥವಾ ನೆನೆದ ಮಾತ್ರಕ್ಕೆ. ಅತಿ ಭಯಂಕರವಾದ ರೋಗಗಳೂ ನಾಶವಾಗುವಂತಿದ್ದವು. ॥ ೬೨ ॥ ಎಳೆ, ನೋಡು, ಮೊಳಹಾಕು, ಇದರ ಅಗಲವನ್ನು ಗೇಣಿನಿಂದ ಅಳತೆಮಾಡು, ಕೊಡು, ಕೊಡೆನು ಎಂಬ ಮಾತಿನ ಗಲಭೆಗಳಿಂದ ಕೂಡಿ, ಆ ಪಟ್ಟಣದಲ್ಲಿ ಬಿಳಿಯ ವಸ್ತ್ರದ ಮಳಿಗೆಗಳು ಶೋಭಿಸಿದವು. ॥ ೬೩ ॥ ಬ್ರಹ್ಮನು ಹಲವು ಬಣ್ಣದ ಮುಗಿಲುಗಳನ್ನು ಹರಿದು, ಆ ಪಟ್ಟಣದ ಮೇಲೆ ಪ್ರೀತಿಯಿಂದ ಇಟ್ಟನೋ ಎಂಬಂತೆ ಬಣ್ಣದ ಜವಳಿಗಳಿಂದ ತುಂಬಿದ ಅಂಗಡಿಗಳು ಒಪ್ಪಿದುವು. ॥ ೬೪ ॥ ಮನ್ಮಥನೆಂಬ ಸೊನೆಗಾರನು ಚಂದ್ರನ ಬೆಳದಿಂಗಳ ತಗಡನ್ನು ಒಡಿದುಕೊಂಡು ಮಾರುತ್ತಿರುವನೋ ಎಂಬಂತೆ ಅಲ್ಲಿ ಪಚ್ಚೆಗರ್ಪೂರದ ಅಂಗಡಿಗಳು ಮೆರೆಯುತ್ತಿದ್ದವು. ॥ ೬೫ ॥ ಕಸ್ತೂರಿ. ಕರ್ಪೂರ, ಪುಣುಗು. ಜವಾದಿ, ಶ್ರೀಗಂಧ, ಪನ್ನೀರು, ಮುಂತಾದವನ್ನು ಮಾರುವ ವರ್ತಕ ತಂಡವು ಆ ಪಟ್ಟಣದಲ್ಲಿದ್ದಿತು. ॥ ೬೬ ॥ ಮನ್ಮಥನು ಜೈನ

---

[1] ಳಿಸೆದವಂದಲ್ಲಿ (ಗ). [2] ಮೇಣಕ್ಕೆದುವ (ಗ.ಚ). [3] ವರದರ ಪಸರ ರಾಜಿಪವು (ಗ ಜ). [4] ಉಂಡೊಡೆ (ಜ) [5] ಚಂಡಮಾಯಕಿ (ಗ). [6] ತಂಡವಸರಗಳೊಪ್ಪಿದವು (ಗ). [7] ಮೊಗವಿಕ್ಕು (ಗ). [8] ಗೇಣೆಂದಗಲವ ಎಳೆ. [9] ಪಸರದೊಳೊಪ್ಪಿದವು (ಚ). [10] ಪಂದಿಟ್ಟನೆನೆ (ಗ). ಅಱಿಶಿಟ್ಟನೆನೆ (ಜ). [11] ತಳಿ (ಗ.ಚ). [12] ಸೊನ್ನಾರ (ಗ.ಜ.) [13] ಕುಂಕುಮ (ಗ.ಜ.). [14] ಪುರದೊಳೊಪ್ಪಿದವು (ಗ).

ಅಲರಂಬನುರುಕೀರ್ತಿಲತೆಯೊಳೊಗೆದು ಕಣ್ಗೆ । ಸಲೆ ಸಂತಸವ ಪುಟ್ಟಿಸುವ ॥
ಎಲೆಯೆಂಬಂದದೊಳೆಸೆದವು[1] ಬಲಿದ ಬೆ । ಳ್ಳೆಲೆಯ ಪಸರಗಳದಱೊಳು ॥ ೬೮ ॥

ಇಂತು ರಾರಾಜಿಪಂಗಡಿಯಂಗಡಿಗಳ । ಮುಂತೆ ನಾನಾಜನರುಗಳ ॥
ಸಂತಸದುರುದಾಣ[2]ವೆಂಬಂತೆ ಪೂವಿನ । ಸಂತೆ ಸೊಬಗುವಡೆದಿಹುದು ॥ ೬೯ ॥

ಕಟ್ಟಿ ಪಿಡಿದಳು ಪೂಮಾಲೆಯನೋರ್ವಳು[3] । ಬಟ್ಟಜವ್ವನೆ ತನ್ನ ಮೊಗವ
ನಿಟ್ಟಿಸಿ ತೊಲಗದ ರಸಿಕರ ಬಗೆ ಬಾಯ । ಕಟ್ಟುವೆನೆಂಬಂದದೊಳು ॥ ೭೦ ॥

ಅರಲು ಸೋಂಕಲು ಸಿರಿಗಂಧ[4]ಗಂದುವ ಸರ । ಸಿರುಹಾಕ್ಷಿಯರ ನಿಟ್ಟಿಸಿದ ॥
ಸರಸ ಕೋವಿದರಂಗ ಕಂದುವುದೆನಲ । ಚ್ಚರಿಯದನೇನ ಬಣ್ಣಿಪೆನು ॥ ೭೧ ॥

ಮಾಲೆಗೆ ಮಾಲೆಗಾತಿಯ ಸುಯ್ಲ ಸೂಳಿನ । ಕಾಲವನಱಿದಳಿವಿಂಡು[5] ॥
ಲೀಲೆಯಿಂದೆಱಗಲಚ್ಚರಿವಟ್ಟು ರಸಿಕರು[6] । ಲೋಲಾಕ್ಷಿಯರ ನೋಡುವರು ॥ ೭೨ ॥

ಕೈಯ್ಯ ಸೋಂಕಲು ಮಾಣಿಕಮಾಲೆಯವಳಂ । ದೊಯ್ಯನಿಟ್ಟಿಸೆ ನೀಲಮಾಲೆ ॥
ರಯ್ಯವಡೆದು ಮೈಸೋಂಕೆ ಕನಕಮಾಲೆ[7] । ರೈಯ್ಯಲು ನೋಟಕ ಜನಕೆ ॥ ೭೩ ॥

ನೋಡಲಿಂದೀವರ ಬಂದುಗೆಯವಳು ಮಾ । ತಾಡಲು ಮಂದಹಾಸವನು ॥
ಮಾಡೆ ಮಲ್ಲಿಗೆಮಾಲೆಯೆನೆ ಮಾಲೆಗಾತಿಯ । ಗಾಡಿಯನೇನ ಬಣ್ಣಿಪೆನು ॥ ೭೪ ॥

---

ಸನ್ಯಾಸಿಗಳಿಗೆ ಹೆಮರಿ ತನ್ನ ಹಸುರು ಮಿಡಿತೆಯ ಸಮೂಹವನ್ನು ಮಾರಾಟಮಾಡಿಸುತ್ತಿದ್ದಾನೋ ಎಂಬಂತೆ ಅಲ್ಲಿ ಹಸಿ ಅಡಕೆಯ ಅಂಗಡಿಗಳಿದ್ದವು. ॥ ೬೭ ॥ ಮನ್ಮಥನ ಶ್ರೇಷ್ಠವಾದ ಕೀರ್ತಿಯೆಂಬ ಬಳ್ಳಿಯಲ್ಲಿ ಹುಟ್ಟಿ, ಕಣ್ಣಿಗೆ ಸಂತೋಷವನ್ನು ಹುಟ್ಟಿಸುವ ಎಲೆಯ ರೀತಿಯಲ್ಲಿ. ಬಲಿತ ಬೆಳ್ಳಿಲೆಯ ಅಂಗಡಿಗಳು ಶೋಭಿಸಿದವು ॥ ೬೮ ॥ ಹೀಗೆ ಶೋಭಿಸುವ ಅಂಗಡಿಗಳ ಮುಂದುಗಡೆಯಲ್ಲಿ ವಿವಿಧ ಜನರ ಸಂತೋಷದ ಸ್ಥಾನವೆಂಬಂತೆ ಹೂವಿನ ಸಂತೆಯು ಸೊಗಸಾಗಿರುವುದು. ॥ ೬೯ ॥ ಓರ್ವಳು ಬಟ್ಟಜವ್ವನೆಯು ತನ್ನ ಮುಖವನ್ನು ಅವಿಚಲವಾದ ದೃಷ್ಟಿಯಿಂದ ನೋಡುವ ರಸಿಕರ ಮನಸ್ಸನ್ನೂ ಮಾತನ್ನೂ ಕಟ್ಟಿಬಿಡುವೆನೆಂದು ಸೂಚಿಸುವಂತೆ ಹೂಮಾಲೆಯನ್ನು ಕಟ್ಟಿ ಕೈಯಲ್ಲಿ ಹಿಡಿದಿದ್ದಳು ॥ ೭೦ ॥ ಸುವಾಸನೆಯುಳ್ಳ ಹೂವು ಸೋಂಕಿದರೆ ನಾಕು, ಅಲ್ಲಿನ ಕಮಲನೇತ್ರೆಯರ ಕಾಂತಿಯುತವಾದ ಸುವಾಸನೆಯು ಕಂದಿಹೋಗುವುದು. ಏಕೆಂದರೆ ಹೂವಿನ ಸುವಾಸನೆಯನ್ನು ಮೀರುವ ಸುವಾಸನೆ ಅವರ ದೇಹಕ್ಕಿರುವುದು. ಅಂತಹ ಸ್ತ್ರೀಯರನ್ನು ನೋಡಿದ ಮಾತ್ರಕ್ಕೆ ರಸಿಕರಾದ ಕೋವಿದರ ದೇಹವು ಮೋಹವಶವಾಗಿ ಕಂದಿಹೋಗುವುದೆನಲು, ಆ ಆಶ್ಚರ್ಯವನ್ನು ಏನೆನ್ನಲಿ.! ॥ ೭೧ ॥ ಮಾಲೆಗಾರ್ತಿಯು ಬಿಡುವ ಉಸಿರಿನ ಸರತಿಯ ಸಮಯವನ್ನು ತಿಳಿದುಕೊಂಡು ತುಂಬಿವಿಂಡು ಬಂದು ಮಾಲೆಗೆ ಎರಗುತ್ತಿರಲು. ರಸಿಕರು ಆಶ್ಚರ್ಯದಿಂದ ಆ ಸ್ತ್ರೀಯರನ್ನು ನೋಡುವರು ॥ ೭೨ ॥ ಹೂಮಾಲೆಗೆ ಮಾಲೆಗಾರ್ತಿಯ ಕೆಂಪಾದ ಕೈ ಸೋಂಕಿದಾಗ ಮಾಣಿಕ್ಯದ ಮಾಲೆಯಾಗಿಯೂ ಅವಳು ಅದನ್ನು ನೋಡಿದಾಗ ನೀಲರತ್ನಮಾಲೆಯಾಗಿಯೂ ಮೈಸೋಂಕಿದಾಗ ಚಿನ್ನದ ಮಾಲೆಯಾಗಿಯೂ ನೋಟಕ ಜನರಿಗೆ ಕಾಣುತ್ತಿತ್ತು ॥ ೭೩ ॥ ಆಕೆ ನೋಡಿದ ಹೂವು ಕನ್ನೈದಿಲೆಯಾಗಿಯೂ ಮಾತಾಡಿದೊಡನೆ ತುಟಿಯ ಕೆಂಪು ಹೊಳೆತದಿಂದ ಬಂದುಗೆ ಹೂವಾಗಿಯೂ ಮುಗುಳುನಗೆ ಬೀರಿದಾಗ ಮಲ್ಲಿಗೆ ಮಾಲೆಯಾಗಿಯೂ

---

[1] ಎರೆಯ ಬಂಧದೊಳೆಸೆದವು (ಗ) [2] ಸಂತಸದುರದಾಣ (ಚ) [3] ಪೂವಿನ ಮಾಲೆಯೋರ್ವಳು (ಚ) [4] ಕರಕರ (ಗ) [5] ನಱಿಮ ಕಣ್ಣಳಿಯು (ಚ) [6] ರಸಿಕರಾ (ಚ) [7] ವಡೆದ ಜಾಜಿಯ ಮಾಲೆಯೆನ್ನಲಾ (ಗ ಚ)

ಮಾಲೆ[1]ನೆಗಪಿ ತೋಳನು ತೋರ ಮೊಲೆಯನು । ಮೇಲುದ ತೊಲಗಿಸಿ ತೋರ್ಪ ॥
ಬಾಲೆಯರೆಸೆದರು ಮಾಯ[2]ಕಾತಿಯರೊಲ್ದು । ಮಾಲೆಯ ಮಾಱುವಂದದೊಳು ॥ ೭೫ ॥

ಪರಿಮಳಕ್ಕೆಯ್ದಿದಾಱಡಿವೆದೆ ಮಾಲೆ ಬಿ । ಲ್ಲಿರುತರಮುಪ್ಪಲರಂಬು[3] ॥
ವೆರಸಿ[4] ಕಾವಗೆ ರತಿ ಕೊಡುವಂತೆ ಕೊಟ್ಟಳು[5] । ತರುಣಿ ಕೊಂಬವರ್ಗೆ ಮಾಲೆಯನು ॥ ೭೬ ॥

ಅರಲ ಬಂಡುಂಡುಕ್ಕಿ ಸೊಕ್ಕಿ ಗಂಧವನೊಲಿ । ದರೆವ ಚಂಪಕಗಂಧಿಯರ[6] ॥
ಕುರುಳು[7]ಜಾಲದೊಳು ಬಂದುರುಳುವ ತುಂಬಿಗ । ಳಿರವ ನಾನೇನ ಬಣ್ಣಿಪೆನು ॥ ೭೭ ॥

ಅಚ್ಚರವೆಣ್ಗಳೊಳಗೆ[8] ರೂಪಿಗೆ ಪೋರಿ[9] । ಮಚ್ಚರಿಸುತ ಗಂಧವರೆವ ॥
ಮಚ್ಚುಗಾತಿಯರಿಗೆ ಮರುಳಾಗಿ ಬೆಳಗೆಯ್ಯ[10] । ಬೆಚ್ಚಿನಂತಿಹರು[11] ಮೋಹಿಗಳು ॥ ೭೮ ॥

ಕುರುಳು ಕುಣಿಯೆ ಮೊಲೆಯದುರೆ[12] ಮಣಿಯೆ ನಡು । ಸುರಿಯೆ[13] ಬೆಮರು ಗಂಧವರೆವ ।
ತರಳಾಕ್ಷಿಯೋರ್ವಳೆಸೆದಳಂದು ಪರಸತಿ । ಯಿರವನಭ್ಯಾಸಿಸುವಂತೆ[14] ॥ ೭೯ ॥

ಈಡಾಡಿ ಮೇಲುದ ತೋರ ಮೊಲೆಗಳೊಲೆ । ದಾಡಲವಳ ಕುರುಳೋಳಿ[15] ॥
ನಾಡೆ ಬೇಟವ ಮಾಳ್ಪ ಘಟ್ಟವಳ್ತಿಯರೊಂದು । ಗಾಡಿಯನೇನ ಬಣ್ಣಿಪೆನು[16] ॥ ೮೦ ॥

ಅಂಗದ ಬೆಮರುಣ್ಮುತಿಂಗುತಿರಲು ವರ । ತುಂಗಪಯೋಧರವಲುಗೇ
ಹಿಂಗದೆ ಗಂಧವರೆವ[17] ಕಾಮಿನಿಯರ[18] । ಪಂಗಡ[19]ವೆಸೆದುದಂದಲ್ಲಿ ॥ ೮೧ ॥

---

ಕಾಣುವುದು. ಹೀಗಿರುವಾಗ ಆ ಮಾಲೆಗಾರ್ತಿಯ ಸೊಬಗನ್ನು ಏನೆಂದು ವರ್ಣಿಸಲಿ! ॥ ೭೪ ॥ ಹೂವಿನ ಮಾಲೆಯನ್ನೆತ್ತಿ ತೋಳನ್ನೂ ದಪ್ಪನಾದ ಕುಚವನ್ನೂ ಸೀರೆಯ ಮೇಲುದನ್ನು ತೊಲಗಿಸಿ ತೋರಿಸತಕ್ಕ ಸ್ತ್ರೀಯರನ್ನು ನೋಡುವಾಗ ಮಾಯಗಾರ್ತಿಯರಾದ ಸ್ತ್ರೀಯರು ಮಾಲೆಯನ್ನು ಮಾರುವಂತೆ ತೋರುತ್ತಿತ್ತು. ॥ ೭೫ ॥ ಸುವಾಸನೆಗಾಗಿ ಬಂದ ತುಂಬಿಗಳೇ ಬಿಲ್ಲಿನ ಹಗ್ಗದಂತಿರಲು, ಹೂವಿನ ಮಾಲೆಯು ಬಿಲ್ಲಿನಂತಿರಲು ಹೂವೇ ಬಾಣವಾಗಿರಲು—ಇವನ್ನು ರತಿ ದೇವಿಯು ಕಾಮಚಕ್ರೇಶ್ವರನಿಗೆ ಕೊಡುವಂತೆ ಮಾಲೆಗಾರ್ತಿಯು ಕೊಂಡುಕೊಳ್ಳುವವರಿಗೆ ಮಾಲೆಯನ್ನು ಕೊಟ್ಟಳು. ॥ ೭೬ ॥ ತುಂಬಿಗಳು ಹೂವಿನ ಮಕರಂದವನ್ನು ಸೇವಿಸಿ ಉಕ್ಕಿ, ಮತ್ತತೆಯನ್ನು ಹೊಂದಿ, ಗಂಧವನ್ನು ತೇಯುತ್ತಿರುವ ಸಂಪಿಗೆ ಪರಿಮಳದಿಂದ ಕೂಡಿದ ಸ್ತ್ರೀಯರ ಕೂದಲ ಸಮೂಹದಲ್ಲಿ ಬಂದು ಬೀಳುವುವು. ಅಂತಹ ತುಂಬಿಗಳ ಇರವನ್ನು ಏನೆನ್ನಲಿ! ॥ ೭೭ ॥ ರೂಪದಲ್ಲಿ ದೇವತಾಸ್ತ್ರೀಯರೊಡನೆ ಹೋರಾಟ ನಡೆಸಿ ಅಸೂಯೆಪಡುವ, ಗಂಧವನ್ನು ತೇಯುವ, ಒಲವುಗಾರ್ತಿಯರಿಗೆ ಮರುಳಾದ ಮೋಹಿಜನರು ಬೆಳವುಲ್ಲಿನ ಬೆಚ್ಚಿನಂತೆ ಪರವಶರಾಗಿ ಹೋಗುವರು. ॥ ೭೮ ॥ ಒಬ್ಬಳು ಸುಂದರಿಯು ಗಂಧವನ್ನು ತೇಯುವಾಗ ಆಕೆಯ ಗುಂಗುರುಕೂದಲು ಕುಣಿಯುತ್ತಿತ್ತು, ಮೊಲೆಯಲುಗುತ್ತಿತ್ತು, ಸೊಂಟವು ಬಾಗುತಿತ್ತು, ಬೆವರು ಸುರಿಯುತ್ತಿತ್ತು. ಇದರಿಂದ ಆಕೆ ಪರಸ್ತ್ರೀಯಳ ಇರವನ್ನು ಅಭ್ಯಾಸಮಾಡುವಳಂತೆ ತೋರುತ್ತಿದ್ದಳು. ॥ ೭೯ ॥ ತೋರಮೊಲೆಗಳು ಮೇಲುದ ವಸ್ತ್ರವನ್ನು ಬದಿಗೆ ಸರಿಸಲು, ತಲೆಗೂದಲು ಅಲುಗಾಡಲು ವಿಶೇಷವಾಗಿ ಕಾಮಾಭಿಲಾಷವನ್ನು ಉಂಟುಮಾಡುವ ಗಂಧತೇವ ಹೆಂಗುಸರ ಚೆಲುವನ್ನು ಏನೆಂದು ವರ್ಣಿಸಲಿ! ॥ ೮೦ ॥ ಶರೀರದಲ್ಲಿ ಬೆವರು

---

[1] ಮಾಲೆಯ (ಗ ಚ) [2] ಮಾರೆ (ಚ). [3] ದಾಱಡಿಯಂತೆ ಸ್ವರದೋರಿ ತರತರಮುಪ್ಪಲರಂಬು (ಕ). [4] ವೆರಸು (ಗ). [5] ಕೊಟ್ಟಳಾ (ಗ ಚ). [6] ಗಂಧವನು (ಕ) [7] ಕುರುಳ (ಚ). [8] ಅಚ್ಚರವೆಂಗಳೊಳಗೆ (ಗ) [9] ಪೋಗಿ (ಗ) [10] ಬೆಳಗೆಯ್ಮ (ಚ) [11] ಕೆಚ್ಚಿನಂತಿಹರು (ಚ). [10] ಮೊಲೆಯದಿರೆ (ಚ). [13] ಸುರಿಯೆ (ಚ). [14] ಳೆಸೆವಳಂದುಪರತಿಯನು । ಯಿರವಭ್ಯಾಸಿಸುವಂತೆ (ಗ.ಚ). [15] ಕುರುಳಾಳಿ (ಗ). [16] ಗಾಡಿ ಬಣ್ಣಿಸಲೋವರಾಳವೆ (ಗ ಚ.) [17] ಗಂಧವಸರೆವ (ಚ). [18] ಮಾನಿನಿಯರ (ಗ). [19] ವಂಗಡ (ಚ).

ಮಲಯಜಕೆಱಗುವಳಿಯ ಕರಯುಗದಿಂದ । ಲಲನೆ ಸೋವಲು ರತಿದೇವಿ ।
ಹಲಿನೀಲವರಲಿಂದಾಡುವಮ್ಮಾಲೆಯ[1] । ಗೆಲುವಂತಿಹವು ನೋಳ್ಪರಿಗೇ ॥ ೮೨ ॥

ಈ ಪರಿ ರಂಜಿಪ ಬೀದಿಯ ಬಲಗಡೆ । ಯಾಪ್ರೊತ್ತು ಸೊಬಗಾಂತಿರ್ಪ ॥
ಚಾಪನಾಡುಂಬೊಲದಂತೆಸೆದಿಹವಲ್ಲಿ । ರೂಪಜೀವೆಯರ[2] ಕೇರಿಗಳು ॥ ೮೩ ॥

ಕಾಯಜನಾಡುಂಬೊಲದಂತೆ ರತಿಯ ಲೀ । ಲಾಯತನದ ಸಿರಿಯಂತೇ ॥
ಓಯ್ಯರ[3] ದಿಂದಿರ್ಪ ಸೂಳೆಗೇರಿಗಳ ವಿ । ಡಾಯವನೇನ ಬಣ್ಣಿಪೆನು ॥ ೮೪ ॥

ಹುಸಿಯರಮನೆ ಕುಟಿಲದ ಹೋಬಳಿ ಸಾ । ಹಸದ ತವಿರು ವೈಷಿಕದ[4]
ಹಸರವೆನಿಸಿ ಮೆರೆದಿಹ ಸೂಳೆಗೇರಿಗ । ಳೆಸಕ[5]ವನೇನ ಬಣ್ಣಿಪೆನು ॥ ೮೫ ॥

ಗನ್ನದ ಗರುಡಿ ಗದುಕಿನಾಲಯ[6] ಬಲು । ಚುನ್ನದ ತಾಣ ಹದಿರಿನ ॥
ಅನ್ನೆಯದಂಗಡಿಯೆನೆ ಸೂಳೆಗೇರಿಗ । ಳುನ್ನತಿಕೆಯ[7] ಪೇಳ್ವೆನೇನ[8] ॥ ೮೬ ॥

ನಿಚ್ಚ ಬೋಸರದ ಗರುಡಿ ವಂಚಕತನ । ಹೆಚ್ಚಿ ಬೆಳೆವ ಬಲುನೆಲನು ॥
ಮಚ್ಚರದುರುದಾಣವೆನೆ ಸೂಳೆಗೇರಿಗ । ಳಚ್ಚರಿಯನು ಪೇಳ್ವೆನೇನ[9] ॥ ೮೭ ॥

ಬೇಟದ ಬೆಳೆ ಕೊಱಚಾಟದ ಮನೆ[10] ಭೂ । ತಾಟದ ಭವನ ಭಾವಿಸಲು ॥
ಚಾಟುತನದ ರಾಜಗೃಹವೆನೆ ವೇಶ್ಯಾ । ವಾಟ ಕಣ್ಗೆಸೆದಿಹುದಲ್ಲಿ ॥ ೮೮ ॥

---

ಉಂಟಾಗಿ ಇಂಗಿಹೋಗುತ್ತಿರಲು ಉನ್ನತಸ್ತನಗಳು ಅಲುಗಾಡುತ್ತಿರಲು ಹಿಂಜರಿಯದೆ ಗಂಧವನ್ನು ಅರೆಯುವ ಸ್ತ್ರೀಯರ ಗುಂಪು ಅಲ್ಲಿ ಶೋಭಿಸುತ್ತಿತ್ತು ॥ ೮೧ ॥ ಶ್ರೀಗಂಧಕ್ಕೆ ಬಂದು ಬೀಳುವ ತುಂಬಿಗಳನ್ನು ಎರಡೂ ಕೈಗಳಿಂದ ಗಟ್ಟಿವಳ್ತಿಯೊಬ್ಬಳು ಓಡಿಸುತ್ತಿದ್ದಳು ಆ ದೃಶ್ಯವು ರತಿದೇವಿಯು ನೀಲರತ್ನದ ಕಲ್ಲುಗಳಿಂದ ಆಡುವ ಕೈಯ ಹೊಡೆಚೆಂಡಿನಾಟದಂತೆ ತೋರುತ್ತಿತ್ತು ॥ ೮೨ ॥ ಹೀಗೆ ಶೋಭಿಸುವ ಬೀದಿಯ ಬಲಗಡೆಯಲ್ಲಿ ಯಾವಾಗಲೂ ಚೆಲುವನ್ನು ತಾಳಿ, ಮನ್ಮಥನ ಆಡುವ ಹೊಲದಂತೆ ಸೂಳೆಯರ ಕೇರಿಗಳು ಶೋಭಿಸಿವೆ. ॥ ೮೩ ॥ ಮನ್ಮಥನ ಆಟದ ಹೊಲದಂತೆಯೂ ರತಿದೇವಿಯ ವಿನೋದಮಂದಿರದ ಸಿರಿಯಂತೆಯೂ ಒಯ್ಯಾರದಿಂದಿರುವ ಸೂಳೆಗೇರಿಗಳ ರೀವಿಯನ್ನು ಏನೆಂದು ವರ್ಣಿಸಲಿ ! ॥ ೮೪ ॥ ಸುಳ್ಳಿಗೆ ಅರಮನೆಯೂ ಮೋಸಕ್ಕೆ ಹೋಬಳಿಯೂ, ಸಾಹಸಕ್ಕೆ ತಾಯಿಮನೆಯೂ ವಿಷಯಸುಖದ ವಿಸ್ತಾರವೂ ಎನಿಸಿ ಮೆರೆಯುವ ಸೂಳೆಗೇರಿಗಳ ರಚನೆಯನ್ನು ಏನೆಂದು ವರ್ಣಿಸಲಿ ! ॥ ೮೫ ॥ ಮರೆಮೋಸದ ಅಭ್ಯಾಸಶಾಲೆಯೂ ಕೃತಕತ್ವದ ಮನೆಯೂ ಅಣಕದ ಸ್ಥಾನವೂ ಯುಕ್ತಿ–ಅನ್ಯಾಯಗಳ ಅಂಗಡಿಯೂ ಎನಿಸುವ ಸೂಳೆಗೇರಿಗಳ ಮೇಲ್ಮೆಯನ್ನು ಏನೆನ್ನಲಿ ! ॥ ೮೬ ॥ ನಿತ್ಯವೂ ಕಪಟಪ್ರೇಮದ ಅಭ್ಯಾಸಶಾಲೆಯೂ ವಂಚನೆಯು ಬೆಳೆಯುವ ನೆಲವೂ ಮತ್ಸರದ ಸ್ಥಾನವೂ ಎನಿಸುವ ಸೂಳೆಗೇರಿಗಳ ಆಶ್ಚರ್ಯವನ್ನು ಏನೆನ್ನಲಿ ! ॥ ೮೭ ॥ ಕಾಮಾಭಿಲಾಷೆಯ ಬೆಳೆಯೋ ನಿಂದೋಕ್ತಿಯ ಮನೆಯೋ ಬೂಟಾಟಿಕೆಯ ಭವನವೋ ಕೊಂಕುತನಕ್ಕೆ ಅರಮನೆಯೋ ಎಂಬಂತೆ ಅಲ್ಲಿ ಸೂಳೆಗೇರಿ ಕಾಣಸುತ್ತಿದೆ ॥ ೮೮ ॥ ಆ ಬೀದಿಯಲ್ಲಿ

---

[1] ದಾಡುವ ಮಾಲೆಯ (ಚ) [2] ರೂಪುಜೀವೆಯರ (ಕ) [3] ಒಯ್ಯಾರ (ಕ) [4] ವೈಶಿಕದ (ಗ) [5] ಗೇರಿಯ ಎಸಕ (ಕ ಗ)
[6] ಗಮಕಿನಾಲಯ (ಗ) [7] ನೆಲನನ್ನೃತದ, ಪನ್ನತಿಕೆಯು ಸಾಹಸ ಧೈರಮವಿವೇಕದುನ್ನತಿಕೆಯ (ಕ) [8] ನೇನನೆಂಬೆ (ಗ ಚ) [9] ಪೇಳಲೇನ (ಚ)
[10] ನೋಟದ ಮನೆಯಂಟಲು (ಕ)

ಪೆಱೆಯ ನೊಸಲ ಮಿಱುಮಿಱುಪ ಬಂದುಗೆವಾಯ । ದೆಱೆಯ[1] ಪರಮೆವಱೆಗುರುಳ ॥
ತುಱುಗೆವೆಗಂಗಳ ಸಱಿಮಿಂಡಿಯರಿಡಿ । ಗಿಱಿದಿಹರಾ ಕೇರಿಯೊಳು ॥ ೪೯ ॥

ಬಟ್ಟದಿಂಗಳ ಮೊಗವಿಟ್ಟೆಡೆಮೊಲೆಯಳ । ವಟ್ಟ ರೂಪಿಂದವೆ ತಮ್ಮ[2] ॥
ನಿಟ್ಟಿಸಿದರಿಗಂಗಜಾಗ್ನಿಯ ಪುಟ್ಟಿಸು । ತಿಟ್ಟಣಿಸಿದರಂಗನೆಯರು ॥ ೫೦ ॥

ಪೊಂಗೊಡಮೊಲೆ[3] ಪೊಂಗಿದ ಪೊಱವಾಱಿನ । ರಂಗುದುಟಿಯ ಮುದ್ದುಮೊಗದ ॥
ಸಿಂಗವಸುಳಿನಡುವಿನ ಸಿರಿಮೊಗದ ವೇ । ಶ್ಯಾಂಗನೆಯರುಗಳಲ್ಲಿಹರು ॥ ೫೧ ॥

ಕಂಗಳ ಕಡೆ ನಿಂದು ನೋಡೆ ನೋಟಕರ ಜೀ । ವಂಗಳ ಕಡೆ ನೆರೆದರಿಗೆ ॥
ಹಿಂಗದ ಸುಖದ ಕಡೆಯ ಕಾಣಿಸುವ ವೇ । ಶ್ಯಾಂಗನೆಯರುಗಳಲ್ಲಿಹರು ॥ ೫೨ ॥

ಮೋಹದ ಬೀಡು ಸುಖದ ಕಟ್ಟಕಡೆ ಜಾಣ । ರೂಹಿನೆ ಸಂತಸ ತತಿಯ ॥
ಮೋಹರದಿಂ ಮೋಹಿಗಳ ಮೋಹಿಸಿಕೊಂಬ । ಗಾಹನೇನೆಂಬೆ ಸೂಳೆಯರ ॥ ೫೩ ॥

ನಿಟ್ಟಿಸಿ ತೊಲಗಿದವರು[4] ವೇದಗತಿಯೊಳು[5] । ಪುಟ್ಟಲಿಲ್ಲಾ ಗಣಿಕೆಯರ ॥
ನಿಟ್ಟಿಸಿ ತೊಲಗಿದವರು ವೇದ[6] ಗತಿಯೊಳು । ಪುಟ್ಟುವರಿದು[7] ಚಿತ್ರವಲ್ತೇ ॥ ೫೪ ॥

ನೋಡದೆ ನುಡಿಸದೆ ಪೋದೊಡಱಿಯೆ ನಿಂದು । ನೋಡಿದವರ ಮೋಹನದ ॥
ಬೀಡನಾಳಿಸುವ ಮುಖಾಮುಖಿಯರುಗಳ[8] । ಗಾಡಿ ಬಣ್ಣಿಸಲೋರ್ವರಳವೇ ॥ ೫೫ ॥

---

ಚಂದ್ರನಂತಹ ಹಣೆಯ, ಚೆನ್ನಾಗಿ ಹೊಳೆವ ಬಂದುಗೆಯಂತೆ ಕೆಂಪಗಿರುವ ತುಟಿಯ, ಮರಿದುಂಬಿಯಂತಹ ತಲೆಗೂದಲಿನ, ಒತ್ತೊತ್ತಾಗಿರುವ ಕಣ್ಣರೋಮಗಳಿರುವ ಕಣ್ಣುಗಳ ಸರಿಮಿಂಡಿಯರು (ಪ್ರಥಮಋತುಮತಿಯಾಗದ ಹೆಂಗುಸರು) ಇರುವರು. ॥ ೪೯ ॥ ಅಲ್ಲಿನ ಹೆಂಗುಸರು ಪೂರ್ಣಚಂದ್ರನಂತಹ ಮುಖದಿಂದಲೂ ನಿಬಿಡವಾದ ಕುಚಗಳಿಂದಲೂ ಸಿದ್ಧವಾದ ರೂಪದಿಂದಲೂ ತಮ್ಮನ್ನು ನೋಡಿದ ಪುರುಷರಲ್ಲಿ ಕಾಮಾಗ್ನಿಯನ್ನು ಹುಟ್ಟಿಸುವವರಾಗಿ. ಆ ಕೇರಿಯಲ್ಲಿ ತುಂಬಿದ್ದರು ॥ ೫೦ ॥ ಹೊನ್ನಿನ ಕಲಶದಂತಹ ಮೊಲೆಯ, ಉಬ್ಬಿದ ನಿತಂಬದ ಬಣ್ಣದಿಂದ ಕೂಡಿದ ತುಟಿಯ. ಮುದ್ದಾದ ಮುಖದ, ಸಿಂಹದ ಮರಿಯ ಹೊಟ್ಟೆಯಂತೆ ತೆಳ್ಳಗಿರುವ ಸೊಂಟದ ಕಾಂತಿಯುಕ್ತವಾದ ಮುಖದ ಸೂಳೆಯರು ಅಲ್ಲಿರುವರು. ॥ ೫೧ ॥ ನಿಂತುಕೊಂಡು ಕಣ್ಣುಗಳ ಕೊನೆಯಿಂದ (ಕಡೆಗಣ್ಣಿಂದ) ನೋಡಿ, ನೋಟಕರ ಜೀವದ ಕೊನೆಯನ್ನೂ ತಮ್ಮ ಒಡನಾಡಿದ ಪುರುಷರಿಗೆ ಕಡಿಮೆಯಾಗದ ಸುಖದ ಕೊನೆಯನ್ನೂ ಕಾಣಿಸತಕ್ಕ ಸೂಳೆಯರು ಅಲ್ಲಿರುವರು. ॥ ೫೨ ॥ ಮನಸ್ಸನ್ನು ಸೆಳೆವ ಬೀಡೂ ಸುಖದ ಕೊನೆಯೂ ಆಗಿ, ಜಾಣರು ಭಾವಿಸಿಕೊಳ್ಳುವಂತೆ ಸಂತೋಷಸಮೂಹಗಳ ಮೂಲಕ ಮೋಹಿಗಳನ್ನು ಮನಸೆಳೆಯತಕ್ಕ ಸೂಳೆಯರ ಮೋಸವನ್ನು ಏನೆಂದು ಹೇಳಲಿ. ॥ ೫೩ ॥ ಆ ಸೂಳೆಯರನ್ನು ಒಮ್ಮೆ ನೋಡಿದ ನಂತರ, ಬಿಟ್ಟುಹೋಗತಕ್ಕವರು ದೇವ, ಮನುಷ್ಯ. ತಿರ್ಯಂಚ, ನರಕ–ಎಂಬ ನಾಲ್ಕು ಗತಿಗಳಲ್ಲಿ ಯಾರೊಬ್ಬರೂ ಹುಟ್ಟಲಿಲ್ಲ. ಅವರನ್ನು ನಿಟ್ಟಿಸಿ ಹೋದವರು ಪಾಪವಶರಾಗಿ, ನಾಲ್ಕು ಗತಿಗಳಲ್ಲಿಯೂ ಜನ್ಮವೆತ್ತುವರು. ಇದು ಆಶ್ಚರ್ಯವಲ್ಲವೆ? ॥ ೫೪ ॥ ಆ ಸ್ತ್ರೀಯರನ್ನು ನೋಡದೆಯೂ ಮಾತಾಡಿಸದೆಯೂ ಹೋದವರ ವಿಷಯ ತಿಳಿಯದು. ತಮ್ಮನ್ನು ನೋಡಿದರಾದರೆ ಅಂಥವರನ್ನು ಮೋಹವೆಂಬ ಬೀಡನ್ನೇ ಆಳುವಂತೆ ಮಾಡತಕ್ಕ ಎದುರಿಗೆ ಮುಖಮಾಡಿರತಕ್ಕ ಆ ಸ್ತ್ರೀಯರ ಸೊಬಗನ್ನು

---

[1] ವಾಯ್ದೆಱೆಯ (ಪ).  [2] ರೂಪಿಂದ ನಾರಿಯರು (ಕ).  [3] ಮೊಲೆಯ (ಪ)  ೫೨ ಕ ಪಲ್ಲಿಲ್ಲ.  [4] ತೊಲಗದವರು (ಕ)
[5] ದುರ್ಗತಿಯೊಳು (ಗ)  [6] ನಾಲ್ಕು (ಗ).  [7] ಪುಟ್ಟಲಿಲ್ಲದು (ಪ). ಪುಟ್ಟಲಿಲ್ಲಾ (ಗ)  [8] ವರು ಗಣಿಕೆಯರುಗಳ ಪಡು (ಕ).

ಸುಳಿಯದೊಡಱಿಯೆನವರ ಮುಂದೆ ಸುಳಿದೊಡೆ । ನಳಿನಜ ಹರಿಹರರುಗಳ ॥
ಸುಳಿದಾಡಿಸುವರು ತಮ್ಮಂಗಲಾವಣ್ಯ । ಜಲದೊಳಗಾ[1] ಸೂಳೆಯರು ॥ ೯೬ ॥

ಇಂತು ಸೊಬಗು ರೂಪು ಸಿಂಗರ ಗಾಡಿಯ । ನಾಂತಿರ್ಪ ಸೂಳೆಗೇರಿಗಳ ॥
ಮುಂತೆ ಭವ್ಯರ ಪುಣ್ಯದೊಬ್ಬುಳಿಯೆನಲಂತ । ಕಾಂತಕನಾಲಯವಿಹುದು ॥ ೯೭ ॥

ಕಾಯಜವಿಜಯನ ಗೃಹವಾ ಪುರವೆಂಬ । ಜಾಯೆಯ ಕೊರಲ ತಾಳಿಯೊಳು ॥
ಒಯ್ಯಾರದಿಂ ಕೀಲಿಸಿದ ರತ್ನಗಳ ಮಧ್ಯ । ನಾಯಕದಂತೊಪ್ಪುತಿಹುದು[2] ॥ ೯೮ ॥

ಪಚ್ಚೆಯ ಲೋವೆ[3] ಪಳುಕಿನ ಜಗಲಿ ಕ । ಣ್ಮುಚ್ಚಿದಂತೆಸೆವ ನೀಲಗಳ[4] ॥
ಮುಚ್ಚುಳುವಲಗೆಯಿಂದಾ ಜಿನಗೃಹ ಕ । ಣ್ಗಚ್ಚರಿಯನು ಪುಟ್ಟಿಪುದು ॥ ೯೯ ॥

ಗೋಡೆ ಗೋಮೇಧಿಕ ಕೆಂಗಲ್ಲ ಬಾಗಿ । ಲ್ವಾಡ[5] ಪಳುಕಿನ ಕಂಬಗಳು ॥
ವೈಡೂರ್ಯದ ನೆಲದಿಂದಾ ಜಿನಗೇಹ । ನಾಡೆ ಬೆಡಂಗಾಗಿಹುದು ॥ ೧೦೦ ॥

ಮುತ್ತಿನ ಲಂಬಣ ಪುಷ್ಯರಾಗದ ಬಲು । ಮತ್ತವಾರಣ ಶೋಣಮಣಿಯ ॥
ಉತ್ತಮ ಸೋಪಾನದಿಂದಾ ಜಿನಗೃಹ । ವಿತ್ತುದು ಕಣ್ಗೆ ಕೌತುಕವ ॥ ೧೦೧ ॥

ಅಲ್ಲಿಗಲ್ಲಿಗೆ ನವರತ್ನದ ಕುಚ್ಚು ಮ । ತ್ತಲ್ಲಿಗಲ್ಲಿಗೆ ಮೇಲುಕಟ್ಟು ॥
ಅಲ್ಲಿಗಲ್ಲಿಗೆ ಸ್ವರ್ಣಪ್ರತಿಮೆ ಸಾಲಿಂ ಮುಕ್ತಿ । ವಲ್ಲಭನಾಲಯವಿಹುದು[6] ॥ ೧೦೨ ॥

---

ವರ್ಣಿಸಲು ಒಬ್ಬರಿಗೂ ಸಾಧ್ಯವಿಲ್ಲ ॥ ೯೫ ॥ ಆ ಸೂಳೆಯರ ಮುಂದೆ ಸುಳಿಯದಿರುವವರ ಸಂಗತಿ ತಿಳಿಯದು. ಆದರೆ ಸುಳಿದವರು ಬ್ರಹ್ಮ-ವಿಷ್ಣು-ರುದ್ರರೇ ಆದರೂ ಅಂಥವರನ್ನು ನೋಡಿ ಆ ಸೂಳೆಯರು ತಮ್ಮ ದೇಹದ ಸೌಂದರ್ಯಜಾಲದಲ್ಲಿ ಸುಳಿದಾಡಿಸುವರು ॥ ೯೬ ॥ ಈ ರೀತಿಯಾಗಿ ಸೊಬಗು, ಶೃಂಗಾರ, ರೂಪ ಚೆಲುವುಗಳನ್ನು ತಾಳಿರುವ ಸೂಳೆಗೇರಿಗಳ ಎದುರುಗಡೆ ಸತ್ಪುರುಷರ ಪುಣ್ಯದ ರಾಶಿಯೋ ಎಂಬಂತೆ ಯಮಸಂಹಾರಕನಾದ ಜಿನೇಶನ ಗೃಹವಿರುವುದು ॥ ೯೭ ॥ ಆ ಜಿನಾಲಯವು ಆ ಪಟ್ಟಣವೆಂಬ ಹೆಂಗುಸಿನ ಕೊರಳಿನ ತಾಳಿಯಲ್ಲಿ ಚೆಂದವಾಗಿ ಕೆತ್ತಿರುವ ರತ್ನಗಳ ನಡುವಣ ನಾಯಕ-ರತ್ನದಂತೆ ಶೋಭಿಸುವುದು ॥ ೯೮ ॥ ನೀಲರತ್ನದ ಇಳಿಮಾಡಿನಿಂದಲೂ ಬಿಳಿಶಿಲೆಯ ಜಗಲಿಯಿಂದಲೂ ಕಣ್ಣುಮುಚ್ಚಿದಂತೆ ಸಂದುಜೋಡಿಸಿರುವ ಗಳುವಿನಿಂದಲೂ ಮುಚ್ಚಳದ ಹಲಗೆಯಿಂದಲೂ ಆ ಜಿನಾಲಯವು ಕಣ್ಣಿಗೆ ಆಶ್ಚರ್ಯವನ್ನು ಹುಟ್ಟಿಸುವುದು. ॥ ೯೯ ॥ ಆ ಜಿನಗೃಹವು ಗೋಮೇಧಿಕ ರತ್ನದ ಗೋಡೆಯಿಂದಲೂ ಕೆಂಪುರತ್ನದ ಬಾಗಿಲುವಾಡ-ಗಳಿಂದಲೂ ಸ್ಫಟಿಕದ ಕಂಬಗಳಿಂದಲೂ ವೈಡೂರ್ಯದ ನೆಲದಿಂದಲೂ ಚೆಲುವಾಗಿರುವುದು ॥ ೧೦೦ ॥ ಮುತ್ತಿನ ಗೊಂಚಲಿನಿಂದಲೂ ಪುಷ್ಯರಾಗದ ಹೊರಜಗಲಿಗಳಿಂದಲೂ ಕೆಂಪುರತ್ನದ ಸೋಪಾನಗಳಿಂದಲೂ ಆ ಜಿನಾಲಯವು ಕಣ್ಣಿಗೆ ಆಶ್ಚರ್ಯವನ್ನುಂಟುಮಾಡುವುದು ॥ ೧೦೧ ॥ ಅಲ್ಲಲ್ಲಿ ನವರತ್ನದ ಗೊಂಚಲಿನಿಂದಲೂ, ಮೇಲುಕಟ್ಟುಗಳಿಂದಲೂ, ಚಿನ್ನದ ಪ್ರತಿಮೆಗಳ ಸಾಲಿನಿಂದಲೂ, ಮೋಕ್ಷಕ್ಕೆ ಒಡೆಯನಾದ ಜಿನೇಶ್ವರನ ಆಲಯವಿದ್ದಿತು ॥ ೧೦೨ ॥ ಆ ದಿವ್ಯವಾದ ಭವನದಲ್ಲಿರುವ ರತ್ನದ ಪೀಠದಲ್ಲಿ ಆದಿ-ಮಧ್ಯ-ಅಂತ್ಯಗಳಿಲ್ಲದವನೂ, ಭೇದದಿಂದ ಭೇದಿಸಲು ಅಸಾಧ್ಯನೂ, ಜನ್ಮರಹಿತನೂ, ನಾಶ-

---

[1] ಲಾವಣ್ಯಾಬ್ಧಿ ಸುಳಿಯೊಳಗಾ (ಗ ಚ) [2] ನಂತೊಪ್ಪುದಿಹುದು (ಗ) [3] ಅಚ್ಚರಿವಡೆದಿಪ (ಕ) [4] ನೀರಗಳು (ಚ) [5] ಬಾಗಿಲುವಾಡ (ಗ)
[6] ೧೦೨ ಈ ಪದ್ಯ ಗ ಚ ದಲ್ಲಿಲ್ಲ

ಆ ದಿವ್ಯಭವನದ ರತ್ನವಿಷ್ಟರದೊಳ । ಗಾದಿ ಮಧ್ಯಾಂತರಹಿತನು ॥
ಭೇದಾಭೇದ್ಯನಭವನಕ್ಷಯ ಜಿನ । ನಾದರದಿಂದೊಪ್ಪುತಿಹನು ॥ ೧೦೩ ॥

ಚಿನುಮಯನವ್ಯಾಬಾಧನಚಿಂತ್ಯನು । ಮನಸಿಜ ಜಿತಮದವಿಜಯ ॥
ಸನುಮುನಿಗಳ ಪ್ರಾಣನಾಯಕ ಭವಹರ । ಜಿನರಾಜನೊಪ್ಪಿದನಲ್ಲಿ ॥ ೧೦೪ ॥

ಕರುಣದ ಕರು[1] ಶಾಂತರಸದ[2] ಪುತ್ಥಳಿ ಭವ್ಯ । ರುರು ಪುಣ್ಯದ ಮೂರ್ತಿಯಂತೆ ॥
ಪರಮ ಪಾವನ ವಸ್ತು ನೆಲಸಿರಲಾ ಗೃಹ । ದಿರವ ನಾನೇನ ಬಣ್ಣಿಪೆನು ॥ ೧೦೫ ॥

ಸಿರಿಯ ಕೇತನ ಸರಸತಿಯ ಭವನ ಜಯ । ಸಿರಿಯರಮನೆ ಜಸವೆಣ್ಣ ॥
ವರಗೇಹ ವೀರಸತಿಯ ತೌರಿನೆ[3] ಸರ । ಸಿರುಹಾಂಘ್ರಿಯೆಸೆದವಾ ಜಿನರ ॥ ೧೦೬ ॥

ಪರಮನ ಕೊರಲ ಮೂರೇಖೆಗಳೆಸೆದವು । ಜರೆ ಜಾತಿಮರಣವೆಂದೆಂಬ ॥
ಪುರ ಮೂಱನುರುಪಿದ ಕುಱುಹ ನೋಡೆಂದಜ[4] । ನರರಿಗೆ ತೋಱುವಂದದೊಳು ॥ ೧೦೭ ॥

ಅಭವಗೆಸೆದವು ಮುಕ್ಕೊಡೆ[5] ಮೂಱುಲೋಕಕ್ಕೆ । ವಿಭುವೀತನೆಂದು ಭೀತಿಯೊಳು ॥
ತ್ರಿಭುವನಪತಿಗಳು ಪಿಡಿದರೆಂದಂದಜ । ನಭಿನೈಸುವಂತೆ ಜನರೊಳು[6] ॥ ೧೦೮ ॥

ಜೀವಹಿಂಸೆಗಳಾದೊಡೆ ಪಾಪವೆಂದಲ್ಲಿ । ಜೀವವ[7] ಹೊತ್ತ ರತ್ನಗಳ ॥
ದೀವಿಗೆಯಲ್ಲದುಳಿದ ದೀಪವಿಲ್ಲವಾ । ದೇವನ ಭವನದೊಳಬಲೇ ॥ ೧೦೯ ॥

---

ವಿಲ್ಲದವನೂ, ಆದ ಜಿನನು ಶೋಭಿಸುತ್ತಿರುವನು. ॥ ೧೦೩ ॥ ಜ್ಞಾನಮಯನೂ, ಬಾಧೆಗಳಿಲ್ಲದವನೂ, ಚಿಂತನೆಗೆ ಮೀರಿದವನೂ, ಮನ್ಮಥನನ್ನು ಜೈಸಿದವನೂ, ಮದವನ್ನು ಗೆದ್ದವನೂ, ಸನ್ಮುನಿಗಳ ಪ್ರಾಣಕ್ಕೊಡೆಯನೂ, ಪುನರ್ಜನ್ಮವನ್ನು ನಾಶಗೊಳಿಸಿದವನೂ ಆದ ಜಿನೇಶ್ವರನು ಅಲ್ಲಿ ಶೋಭಿಸಿದನು. ॥ ೧೦೪ ॥ ಕರುಣದ ಎರಕದ ಗೊಂಬೆಯಂತೆಯೂ, ಶಾಂತರಸದ ಪ್ರತಿಮೆಯಂತೆಯೂ, ಸತ್ಪುರುಷರ ಪುಣ್ಯದ ಮೂರ್ತಿಯಂತೆಯೂ, ಅತ್ಯಂತ ಪವಿತ್ರನಾದ ಜಿನೇಶ್ವರನು ಅಲ್ಲಿ ನೆಲಸಿರುವಾಗ ಆ ಮಂದಿರದ ಸ್ಥಿತಿಯನ್ನು ನಾನು ಏನು ವರ್ಣಿಸಲಿ ! ॥ ೧೦೫ ॥ ಆ ಜಿನೇಶ್ವರನ ಪಾದಗಳು ಲಕ್ಷ್ಮಿಯ ವಸತಿಯಂತೆ (ಬಾವುಟದಂತೆ)ಯೂ, ಸರಸ್ವತಿಯ ಮನೆಯಂತೆಯೂ. ಜಯಶ್ರೀಯ ಅರಮನೆಯಂತೆಯೂ. ಕೀರ್ತಿಯೆಂಬ ಸ್ತ್ರೀಯ ಶ್ರೇಷ್ಠವಾದ ಗೃಹದಂತೆಯೂ, ಪರಾಕ್ರಮವೆಂಬ ಸ್ತ್ರೀಯ ತಾಯಿಮನೆಯಂತೆಯೂ ಶೋಭಿಸಿದವು. ॥ ೧೦೬ ॥ ಹುಟ್ಟು-ಮುಪ್ಪು-ಸಾವುಗಳೆಂಬ ಮೂರು ಪುರಗಳನ್ನು ಸುಟ್ಟಂತಹ ಕುರುಹನ್ನು ನೋಡಿರೆಂದು ಬ್ರಹ್ಮನು ಮನುಷ್ಯರಿಗೆ ತೋರಿಸುವಂತೆ ಆ ಪರಮ ಜಿನೇಂದ್ರನ ಕೊರಳಿನ ಮೂರು ಗೆರೆಗಳು ಶೋಭಿಸಿದವು. ॥ ೧೦೭ ॥ ಈ ಜಿನನು ಮೂರು ಲೋಕಕ್ಕೂ ಒಡೆಯನೆಂದು ಹೆದರಿ, ಮೂರು ಲೋಕದ ಒಡೆಯರು ಮೂರು ಕೊಡೆಗಳನ್ನು ಹಿಡಿದರೆಂದು ಬ್ರಹ್ಮನು ಜನರಿಗೆ ತೋರಿಸುವಂತೆ ಆ ಜಿನೇಶ್ವರನಿಗೆ ಮೂರು ಕೊಡೆಗಳಿದ್ದುವು. ॥ ೧೦೮ ॥ ಜೀವಹಿಂಸೆ ಮಾಡುವುದು ಪಾಪವೆಂದು ಸೂಚಿಸುವಂತೆ ಅಲ್ಲಿರುವ ದೀಪಗಳು ಸಜೀವವಾಗಿ (ನಂದಾದೀಪವಾಗಿ)ರುವುವಲ್ಲದೆ ಇತರ ದೀಪಗಳೇ ಆ ಜಿನಾಲಯದಲ್ಲಿಲ್ಲ. ॥ ೧೦೯ ॥ ತೆರಳತಕ್ಕಂತಹ, ಕುಕ್ಕುಟಾಸನದಲ್ಲಿರತಕ್ಕಂತಹ. ಗಂಡ ವಿಮುಕ್ತರಾದಂತಹ, ಏಕಪಾರ್ಶ್ವದಲ್ಲಿರತಕ್ಕ. ಚಿರಿಗೆಮಾಡಿ

---

[1] ಕರುಣದಾಕರ (ಗ) [2] ಶಾಂತದ (ಗ) [3] ತವರೆನೆ (ಗ ಜ) [4] ಕುಱುಹುಮಿದೆಂದಜ (ಕ). [5] ಮುಕ್ಕಡೆ (ಜ) [6] ಪಿಡಿದರೆ ಸಿಲುಕದ । ಪ್ರಭು ಮುಕ್ತಿಗೆ ನೋಡೆ ನರರು (ಕ) [7] × (ಗ) ಜೀವನ (ಕ).

ತೆರಳುವ ಕುಕ್ಕುಟಾಸನದ ಗಂಡವಿಮು । ಕ್ತರ[1] ಯೇಕ ಪಾರಿಶ್ವದೊಳು[2] ॥
ಇರುವ ಚೆರಿಗೆವೂಡಿ ಬಂದು ವಂದಿಪ ಮುನಿ । ವರರಿಂದೆಸೆದುದಾ ನಿಳಯ ॥ ೧೧೦ ॥

ಅಲ್ಲಿ ಭವ್ಯರು ಜಿನಪತಿಯ ಪೂಜೆಗೆ ತಳು । ವಿಲ್ಲದೆತ್ತುವ ದೀಪಗಳು ॥
ನಿಲ್ಲದಾ ಗೃಹದೇವಿ ಮುದದೊಳಾಡುವ ಕೆಂ । ಗಲ್ಲಿನವ್ಮಾಲೆ[3]ಯಂತಿಹವು ॥ ೧೧೧ ॥

ಬಳಸಿದ ಕುಟ್ಟಿಮದಲ್ಲಿಯೋದುವರಿಂ । ದೊಳಗೆ ದೈವಸ್ತುತಿಗೈವ ॥
ಕಳಕಳದಿಂ ಶಬ್ದದಿಂದ ಸಮೆದ ಬಲು । ನಿಳಯದಂತೆಸೆದುದಾ ಭವನ ॥ ೧೧೨ ॥

ಪೂಜಿಸುವವರಿಂದ ಬಂದು ವಂದಿಸಿ ಪೋಪ । ರಾಜರಿಂದೋದುವರಿಂದ ॥
ರಾಜೀವನಯನನಣುಗನ ಗೆಲಿದ ಜಿನ । ರಾಜನಾಲಯವೊಪ್ಪುತಿಹುದು ॥ ೧೧೩ ॥

ಆ ಜಿನಗೃಹವ ಬಳಸಿದ ಪರಿಖೆ ವಿ । ಭ್ರಾಜಿಸಿದುದು ನೋಳ್ಪರಿಗೆ ॥
ರಾಜಬಿಂಬವ ಬಳಸಿದ ಪರಿವೇಷದೊಂ । ದೋಜೆಯನಿರದನುಕರಿಸಿ ॥ ೧೧೪ ॥

ಅಂದು ಮುಕುತಿಗೈದುವ ಕಾಲದೊಳು ನಾಭಿ । ನಂದನ ಪೊಯಿಸಿದ ಗುಡಿಯ[4] ॥
ಸಂದ ಕಳಶವೆನೆ ಜಿನಗೇಹದ ಮೇ । ಲೊಂದಿ ಮೆರೆದುದು ಪೊಂಗಳಸ ॥ ೧೧೫ ॥

ನಡುವಗಲೊಳು[5] ರವಿ ನೆಲಸಿದ ಕಲಶವಂ । ದೊಡನೆಸೆದುದು ದಿನಲಕ್ಷ್ಮಿ ॥
ಸಡಗರದಿಂ ಜಿನನೊಸಗೆಗೆತ್ತಿದ ಕ । ನ್ನಡಿ ಕಲಶಗಳೆಂಬಂತೆ ॥ ೧೧೬ ॥

ಪುರವ ನಿಟ್ಟಿಸ ಬಂದ ಖೇಚರಿಯರು ಜಿನ । ವರರಡಿಗಂಡು ಕಾಣಿಕೆಯ ॥
ಇರದಿತ್ತು ಪೋದ ವಿಮಾನವೆನಲು ಕಣ್ಗೆ । ಕರವೆಸೆದುದು ಗೋಪುರವು ॥ ೧೧೭ ॥

---

ಬಂದು ನಮಸ್ಕರಿಸತಕ್ಕ, ಮುನಿಶ್ರೇಷ್ಠರಿಂದ ಆ ಜಿನಾಲಯವು ಶೋಭಿಸಿತು ॥ ೧೧೦ ॥ ಆ ಜಿನಾಲಯದಲ್ಲಿ ಜಿನಭಕ್ತರು ಜಿನೇಶ್ವರನನ್ನು ಪೂಜೆಮಾಡುತ್ತ ಆರತಿಯೆತ್ತುವ ದೀಪಗಳು ಆ ಗೃಹದೇವಿಯು ಸಂತೋಷದಿಂದ ಆಡುವ ಕೆಂಪುರತ್ನದ ಹೊಡೆಚೆಂಡುಗಳಂತೆ ಕಾಣಿಸುವವು ॥ ೧೧೧ ॥ ಸುತ್ತಲೂ ಇರತಕ್ಕ ಜಗಲಿಯಲ್ಲಿ ಓದುತ್ತಿರುವ ಮತ್ತು ಒಳಗಡೆ ಜಿನದೇವನ ಸ್ತುತಿಯನ್ನು ಮಾಡುವ ಶಬ್ದಗಳಿಂದ ಗಲಭೆಗಳಿಂದ ನಿರ್ಮಿಸಿದ ಮನೆಯಂತೆ ಆ ಜಿನಾಲಯವು ಶೋಭಿಸಿತು. ॥ ೧೧೨ ॥ ಮನ್ಮಥವಿಜಯನಾದ ಆ ಜಿನೇಶನ ನಿಲಯವು ಪೂಜೆಮಾಡುವವರಿಂದಲೂ, ಬಂದು ನಮಸ್ಕರಿಸಿ-ಹೋಗುವ ರಾಜರಿಂದಲೂ, ಓದುವವರಿಂದಲೂ ಶೋಭಿಸುವುದು ॥ ೧೧೩ ॥ ಆ ಜಿನಾಲಯವನ್ನು ಆವರಿಸಿರುವ ಪರಿಖೆಯು ಚಂದ್ರಬಿಂಬವನ್ನು ಆವರಿಸಿರುವ ಪರಿವೇಷದಂತೆ ಶೋಭಾಯಮಾನವಾಗಿ ಕಾಣುತ್ತಿತ್ತು. ॥ ೧೧೪ ॥ ಹಿಂದೆ ಮುಕ್ತಿಗೆ ಹೋಗುವ ಸಂದರ್ಭದಲ್ಲಿ ನಾಭಿರಾಜನ ಮಗನು ಹೊಡೆಸಿದ ಶಿಬಿರದ ಕಳಶವೋ ಎಂಬಂತೆ ಆ ಜಿನಾಲಯದ ಮೇಲುಗಡೆ ಚಿನ್ನದ ಕಲಶವಿದ್ದಿತು. ॥ ೧೧೫ ॥ ಮಧ್ಯಾಹ್ನದ ಹೊತ್ತಿಗೆ ಸೂರ್ಯಬಿಂಬವು ನೆಲಸಿದ ಕಲಶವು ಜಿನೇಶ್ವರನ ಉತ್ಸವಕ್ಕಾಗಿ ಹಗಲೆಂಬ ಲಕ್ಷ್ಮೀದೇವಿಯು ಸಂಭ್ರಮದಿಂದ ಎತ್ತಿದ ಕನ್ನಡಿಕಲಶಗಳಂತೆ ಕಾಣುತ್ತಿದ್ದವು ॥ ೧೧೬ ॥ ಆ ಪಟ್ಟಣವನ್ನು ನೋಡಲು ಬಂದ ಖಚರಸ್ತ್ರೀಯರು ಜಿನೇಶ್ವರರ ಪಾದವನ್ನು ಕಂಡು, ಕಾಣಿಕೆ ಕೊಟ್ಟು, ಹೋದ ವಿಮಾನವೋ ಎಂಬಂತೆ ಗೋಪುರವು ಕಣ್ಣಿಗೆ ಶೋಭಿಸುತ್ತಿತ್ತು ॥ ೧೧೭ ॥ ಹೀಗೆ ಶೋಭಾಯಮಾನವಾಗಿರುವ ಜಿನಗೃಹದ ಎದುರುಗಡೆ ಆ ಪಟ್ಟಣವೆಂಬ ಸ್ತ್ರೀಯ

---

[1] ಕುಕ್ಕುಟಾಸನದೊಳು ಜಪವಿಮುಕ್ತರ (ಕ) [2] ಪಾರ್ಶ್ವದೊಳು (ಚ) [3] ಕೆಂಗಲ್ಲಿನ ಮಾಲೆ (ಕ) ೧೧೫ ಮತ್ತು ೧೧೬ ಪೂರ್ವಾರ್ಧ (ಚ ದಲ್ಲಿಲ್ಲ) [4] ಮುಡಿಯ (ಗ) [5] ನಡುವಗಲಲಿ (ಗ ಚ)

ಇಂತು ರಾರಾಜಿಸುತಿಹ ಜಿನಗೇಹದ । ಮುಂತೆಸೆದುದು ಪುರವೆಂಬ ॥
ಕಾಂತೆಯು ನೊಸಲ ತಿಲಕವೆಂಬಂತೆ ಭೂ । ಕಾಂತನಾಲಯುವೊಪ್ಪುತಿಹುದು　　　　॥ ೧೧೮ ॥

ಪುರವೆಂದೆಂಬ ಕೋಮಲೆಯೊಲ್ದು ತನ್ನ ನು । ಣ್ಗೊರಲೊಳು ಕಟ್ಟಿ ರಾಜಿಸುವ[1] ॥
ವರರತ್ನ ಕೀಲಿತವಾದ ತಾಳಿಯುವೊಲು[2] । ಅರಮನೆ ಕಣ್ಗೆ ರಾಜಿಪುದು　　　　॥ ೧೧೯ ॥

ನೆಲ ನೀಲ ಗೋಡೆ ಗೋಮೇಧಿಕ ಮುಚ್ಚುಳು । ವಲಗೆ ವೈಢೂರ್ಯ ಪಳುಕಿನ ॥
ತೊಲೆ ಪಸುರ್ಗಲ್ಲ ಜಗಲಿಯಿಂದಾ ರಾಜ । ನಿಲಯುವೆಸೆದುದೇಣನೇತ್ರೆ　　　　॥ ೧೨೦ ॥

ಮಾಣಿಕದಿಂ ಮತ್ತವಾರಣದಿಂ ವಜ್ರ[3] । ಮಾಣದೆಸೆವ ಕಂಭಗಳಿಂ ॥
ಶೋಣಮಣಿಯ ಸೋಪಾನದಿಂ ಸಿರಿಯಾಡು । ದಾಣದಂತೆಸೆದುದಾ ಭವನ[4]　　　　॥ ೧೨೧ ॥

ಪೊರೆದು[5] ಸಾದಿಂದ ಸಾರಿಸಿದ ಕತ್ತುರಿಯಿಂ[6] । ದಿರದೆ ಕುಂಕುಮದ ಕಾರಣೆಯ ॥
ವಿರಚನೆಯಿಂದರಮನೆ[7] ಪರಿಮಳದುರು । ಭರಣಿಯಂತಿಹುದನವರತ　　　　॥ ೧೨೨ ॥

ಕರಿಗಳ ಶಾಲೆಯೊಟ್ಟೆಯ[8] ಶಾಲೆಗಳು ಜಾತಿ । ತುರಗದ ಶಾಲೆ ಶಸ್ತ್ರಗಳ ॥
ವರಶಾಲೆ ಜಿನಶಾಲೆಗಳ ಮಧ್ಯದೊಳು ಕ । ಣ್ಗರಮನೆ ನಿಂಗೆ ರಂಜಿಸಿತು[9]　　　　॥ ೧೨೩ ॥

ಭೋಜನಶಾಲೆ ಮಂತಣಶಾಲೆ ಚಿತ್ರದಿಂ[10] । ರಾಜಿಪ ನಾಟಕಶಾಲೆ ॥
ಆ ಜನಪತಿಯ ಬಿನದ ಸಾಲೆಯಿಂದಾ । ರಾಜಾಲಯ ರಾಜಿಪುದು　　　　॥ ೧೨೪ ॥

ಪರಿಣಯ ಮಂಟಪ ಭದ್ರಮಂಟಪ ಪೊಂ । ಬರಹದ ಚಿತ್ರಮಂಟಪವು ॥
ವರವಿದ್ಯಾಮಂಟಪದಿಂದರಮನೆ । ಪಿರಿದು ರಂಜನೆವಡೆದಿಹುದು　　　　॥ ೧೨೫ ॥

---

ಹಣೆಯ ತಿಲಕವೋ ಎಂಬಂತೆ ಅರಮನೆ ಶೋಭಿಸುವುದು. ॥ ೧೧೮ ॥ ಪಟ್ಟಣವೆಂಬ ವನಿತೆಯು ಪ್ರೀತಿಯಿಂದ ತನ್ನ ಕೊರಳಿನಲ್ಲಿ ಕಟ್ಟಿ ಶೋಭಿಸುತ್ತಿರುವ ಶ್ರೇಷ್ಠವಾದ ರತ್ನದಿಂದ ಕೆತ್ತಿದ ತಾಳಿಯೋ ಎಂಬಂತೆ ಅರಮನೆ ಮೆರೆಯುವುದು. ॥ ೧೧೯ ॥ ನೆಲವು ನೀಲರತ್ನದಿಂದಲೂ, ಗೋಡೆಯು ಗೋಮೇದಿಕದಿಂದಲೂ, ಮುಚ್ಚಳಹಲಗೆಯು ವೈಡೂರ್ಯದಿಂದಲೂ, ತೊಲೆಯು ಬಿಳಿಗಲ್ಲಿನಿಂದಲೂ. ಜಗಲಿಯು ಹಸುರುಗಲ್ಲಿನಿಂದಲೂ ಕೂಡಿ, ಆ ಅರಮನೆ ಶೋಭಿಸುತ್ತಿತ್ತು. ॥ ೧೨೦ ॥ ಆ ಅರಮನೆಯು ಮಾಣಿಕ್ಯದ ಎದುರುಜಗಲಿಯಿಂದಲೂ, ವಜ್ರದಿಂದ ಶೋಭಿಸುವ ಕಂಬಗಳಿಂದಲೂ ಕೆಂಪು ರತ್ನದ ಸೋಪಾನಗಳಿಂದಲೂ ಲಕ್ಷ್ಮಿಯ ಆಟದ ಸ್ಥಳದಂತೆ ಎಸೆಯುತ್ತಿತ್ತು. ॥ ೧೨೧ ॥ ಪರಿಮಳದ್ರವ್ಯವನ್ನು ಹಚ್ಚಿ, ಕಸ್ತೂರಿಯನ್ನು ಸಾರಿಸಿ, ಕುಂಕುಮದ ಗೀರುಗಳ ವಿರಚನೆಗಳಿಂದ ಆ ಅರಮನೆಯು ಪರಿಮಳದ ಭರಣಿಯಂತೆ ಯಾವಾಗಲೂ ಕಾಣುತ್ತಿರುವುದು. ॥ ೧೨೨ ॥ ಗಜಶಾಲೆಗಳ, ಒಂಟೆಯ ಶಾಲೆಗಳ, ಕುದುರೆಯ ಲಾಯಗಳ, ಆಯುಧಾಗಾರಗಳ. ಜಿನಶಾಲೆಗಳ ನಡುವೆ ಅರಮನೆ ಕಂಗೊಳಿಸುತ್ತಿರುವುದು. ॥ ೧೨೩ ॥ ಭೋಜನಶಾಲೆ, ಮಂತ್ರಾಲೋಚನೆಯ ಶಾಲೆ, ಆಶ್ಚರ್ಯಕರವಾಗಿ ಶೋಭಿಸುವ ನಾಟಕಶಾಲೆ. ಜಿನಶಾಲೆ, ವಿನೋದಶಾಲೆಗಳಿಂದ ಆ ಅರಮನೆ ಮನೋಹರವಾಗಿರುವುದು. ॥ ೧೨೪ ॥ ವಿವಾಹ

---

[1] ರಾಜಿಸುವ (ಚ)　[2] ತಾಳಿಯ (ಚ).　[3] ವಾರಣಸೋಪಾನ (ಕ) ವಾರಣ ವಜ್ರದಿಂ (ಗ)　[4] ಕುಪ್ಪುಕುಚ್ಚಿಂವಂದರಮನೆ, ಶ್ರೋಣಿಯೊಳ ಪ್ರತಿಷ್ಠಾನೆ (ಕ).　[5] ಪೊರೆದು (ಗ).　[6] ಸಾರಿಸಿದ ಕಸ್ತೂರಿಯಿಂ (ಗ)　[7] ತವದೊಳು ಮುತ್ತುಮುತ್ತಿಂ (ಕ).　[8] ಪ್ರೋಂಟೆಯ (ಕ)
[9] ರಂಜಿಸಿದುದು (ಚ).　[10] ರತ್ನದಿಂ (ಕ ಗ)

ಕುಸುಕ[1] ಹಜಾರ ದಿವಾಣ[2] ಚಾವಡಿ ಪೊಸ । ಕಿಸುಗಲ್ಲ ಹರ್ಮ್ಯತತಿಗಳಿಂ ॥
ಎಸೆವ ಮಜ್ಜನ[3] ಸೆಜ್ಜೆವನೆಗಳಿಂ ಮಿಗೆ ರಾ । ಜಿಸಿದುದಂದಾ ರಾಜನಿಳಯ ॥ ೧೨೬ ॥

ಬೊಕ್ಕಸದಾಗರ ಭಂಡಾರದಾಲಯ । ಚೊಕ್ಕ ರತ್ನಾಭರಣಗಳ ॥
ವೊಕ್ಕಳವಾದ ಗೃಹಗಳಿಂದರಮನೆ । ಲೆಕ್ಕಿಸದಮರಗೇಹವನು ॥ ೧೨೭ ॥

ಮುಗಿಲನಳ್ಳಿಱಿವ ಪತಾಕೆಗಳಿಂ ನವ । ದುಗುಲದ ನೇಜೆಯುದಿಂದ[4] ॥
ಸೊಗಯಿಪ ರತ್ನವಾಗಿಲು[5]ಗಳಿಂದರಮನೆ । ಮಿಗೆ ರಂಜಿಸಿದುದೇಣನೇತ್ರೆ ॥ ೧೨೮ ॥

ಪಾವುಡಗಳ ದೆಸೆದೆಸೆಯವನೀಶರಂ । ದೋವದಟ್ಟದ ಚರರುಗಳು ॥
ಭೂವನಿತೇಶನ ಸಮಯಗಾಯ್ದಿರ್ಪ[6]ರಂ । ದಾವ ಕಾಲದೊಳೆಡೆವಿಡದೆ ॥ ೧೨೯ ॥

ಬಪ್ಪರಿವರು ಹಲಹಗಲಿಂದಿವರು ಬಾರ । ದಿಪ್ಪವರೆಂದು ಕಪ್ಪವನು ॥
ಒಪ್ಪಿಸಿಕೊಂಡೊಲ್ಲದಿಹ ಮುಖ್ಯಸಚಿವರಿಂ । ದೊಪ್ಪಿದುದಾ ರಾಜನಿಲಯ ॥ ೧೩೦ ॥

ಆರೇನ ತಂದ[7] ಕಾಣಿಕೆಗಳ ತರವಿಡಿ । ದಾ ರಾಯಗೊಪ್ಪಿಸಿ ಬಳಿಕ ॥
ಆ ರಾಯಭಾರಿಗಳನು ಕಳುಹಿಸುವರಿಂ[8] । ದಾ ರಾಯಮನೆ[9] ರಾಜಿಪುದು ॥ ೧೩೧ ॥

ಇಂತು ರಾಜಿಪ ರಾಜಗೃಹದೊಳಗಭಿನವ । ಕಂತುಸನ್ನಿಭರೂಪನೆನಿಸಿ[10] ॥
ಸಂತಸದಿಂದಿರ್ಪ ದಶರಥನೆಂಬ ಭೂ । ಕಾಂತನಮಲಗುಣಯುತನು ॥ ೧೩೨ ॥

---

ಮಂಟಪ, ಮಂಗಳಮಂಟಪ, ಹೊನ್ನಿನ ಬರವಣಿಗೆಯ ಚಿತ್ರಮಂಟಪ, ಶ್ರೇಷ್ಠವಾದ ವಿದ್ಯಾಮಂಟಪಗಳಿಂದ ಅರಮನೆ ಬಹಳ ಮನೋಹರವಾಗಿರುವುದು ॥ ೧೨೫ ॥ ಕೆತ್ತನೆಗೆಲಸದ ಚಾವಡಿ, ಓಲಗದ ಚಾವಡಿ, ಹೊಸತಾದ ಕೆಂಪುರತ್ನಗಳ ಉಪ್ಪರಿಗೆಗಳಿಂದಲೂ, ಸ್ನಾನಗೃಹ ಶಯ್ಯಾಗೃಹಗಳಿಂದಲೂ ಆ ರಾಜಾಲಯವು ಶೋಭಿಸುವುದು ॥ ೧೨೬ ॥ ಕೋಶಾಗಾರದಿಂದಲೂ, ವಿವಿಧ ಭಂಡಾರಗಳಿಂದಲೂ, ಯೋಗ್ಯವಾದ ರತ್ನಾಭರಣಗಳ ವಿಶೇಷವಾದ ಗೃಹಗಳಿಂದಲೂ, ಆ ಅರಮನೆಯು ದೇವತೆಗಳ ಅರಮನೆಯನ್ನು ಮೀರಿಸುವಂಥದಾಗಿರುವುದು ॥ ೧೨೭ ॥ ಆ ಅರಮನೆಯು ಮೋಡಗಳನ್ನು ತಿವಿಯುವ ಧ್ವಜಗಳಿಂದಲೂ, ಹೊಸತಾದ ರೇಶ್ಮೆವಸ್ತ್ರಗಳಿಂದಲೂ, ಕ್ರಮದಿಂದ ಸೊಗಸಾಗಿರುವ ರತ್ನದ ಬಾಗಿಲುಗಳಿಂದಲೂ ಕಣ್ಣಿಗೆ ಸೊಗಸಾಗಿರುವುದು. ॥ ೧೨೮ ॥ ದಿಗ್ದೇಶಗಳ ರಾಜರು ವಸ್ತ್ರದ ಕಾಣಿಕೆಗಳೊಡನೆ ಕಳುಹಿಸಿಕೊಟ್ಟ ಚಾರಕರು ಅಲ್ಲಿಗೆ ಬಂದು, ಯಾವಾಗಲೂ ರಾಜನ ಸಮಯವನ್ನು ನಿರೀಕ್ಷಿಸುತ್ತಲೇ ಇರುವರು ॥ ೧೨೯ ॥ ಆ ರಾಜನ ಮುಖ್ಯಮಂತ್ರಿಗಳು ರಾಜನಿಗೆ ಕಪ್ಪಕಾಣಿಕೆಗಳನ್ನು ತರುವವರ ಕುರಿತಾಗಿ ''ಇವರು ಹಲವು ಕಾಲದಲ್ಲಿ ಬರುತ್ತಿರುವವರು, ಇವರು ಬಾರದಿರುವವರು'' ಎಂದು ಹೇಳುತ್ತ ಕಾಣಿಕೆಯನ್ನು ಒಪ್ಪಿಸಿಕೊಳ್ಳುತ್ತಲೂ ನಿರಾಕರಿಸುತ್ತಲೂ ಇರುವರು ಅಂತಹ ಮುಖ್ಯಮಂತ್ರಿಗಳಿಂದ ಆ ರಾಜನ ಅರಮನೆ ಶೋಭಿಸುವುದು ॥ ೧೩೦ ॥ ಯಾರು ಏನು ಕಾಣಿಕೆ ತಂದರೂ ಅದನ್ನು ಕ್ರಮಾನುಗುಣವಾಗಿ ಆ ರಾಜನಿಗೆ ಒಪ್ಪಿಸಿ, ಆಮೇಲೆ ಆ ರಾಯಭಾರಿಗಳನ್ನು ಹಿಂದಕ್ಕೆ ಕಳುಹತಕ್ಕವರಿಂದ ಆ ಅರಮನೆ ಶೋಭಿಸುತ್ತಿರುವುದು ॥ ೧೩೧ ॥ ಹೀಗೆ ಶೋಭಿಸುವ ಅರಮನೆಯಲ್ಲಿ ಹೊಸ ಮನ್ಮಥನಂತೆ ಸುಂದರರೂಪವುಳ್ಳವನೆನಿಸಿ ನಿರ್ಮಲವಾದ ಗುಣಗಳಿಂದ ಕೂಡಿದ ದಶರಥನೆಂಬ ಮಹಾರಾಜನಿರುವನು ॥ ೧೩೨ ॥ ವೈರಿಸೇನೆಯೆಂಬ ಬಾಳೆತೋಟವನ್ನು ಮುರಿವ ಮದ್ದಾನೆಗೆ ಸಿಂಹದಂತೆ, ವೈರಿಬಲವೆಂಬ ಶರಭಕ್ಕೆ ಭೇರುಂಡದಂತೆ, ವೈರಿಬಲವೆಂಬ ಬೆಟ್ಟಕ್ಕೆ ವಜ್ರಾಯುಧದಂತೆ ಅಲ್ಲಿ ದಶರಥ

---

[1] ಕುಸಕ (ಚ) [2] ದೇವಾಣ (ಗ) [3] ಸಜ್ಜನ (ಚ) [4] ಗೆಜ್ಜೆಯದಿಂದ (ಕ) ದುಗುಲವನೋಜೆಯದಿಂದ (ಗ) [5] ರತ್ನದ ನಿಲು (ಕ)
[6] ಗಾದಿರ್ಪ (ಚ) [7] ಪಂದು (ಕ) [8] ಕಳುಪುವರಿಂ (ಗ ಚ) [9] ರಾಯವನೆ (ಚ) [10] ಸದೃಶರೂಪನೆನಿಪ (ಚ)

ಪರಬಲ ಕದಳಿಕಾನನ ಮದಗಜ ಸಿಂಹ[1] । ಪರಬಲ ಶರಭ ಭೇರುಂಡ ॥
ಪರಬಲ ಗಿರಿವಜ್ರ ದಶರಥನೆಂದೆಂಬ । ನರಪತಿಯೊಪ್ಪಿದನಲ್ಲಿ ॥ ೧೩೩ ॥

ಸವಿಗಡಲೊಳು ಹರಿ ರಜತಗಿರಿಯೊಳೀಶ । ರವಿಬಿಂಬವುದಯಾದ್ರಿಯೊಳು ॥
ದಿವಿಜೇಂದ್ರ ದಿವದೊಳಗಿರ್ಪಂತಿರ್ದನಾ । ಭುವನಾಧಿಪತಿ[2] ದಶರಥನು ॥ ೧೩೪ ॥

ನರಪತಿಯಸಿಧಾರಾಜಲವಗಳಾಗೆ । ಪಿರಿದಪ್ಪ ಕೋಟೆ ತೋಳ್ಬಲವೇ ॥
ಪರೆಯದ ನಿಜಬಲವಾಗಲಾ ಜಗವೊಂದು[3] । ಪುರವೆನಲಾಳ್ವನಾ ನೃಪತಿ ॥ ೧೩೫ ॥

ಪಿಡಿದು ಜಡಿಯಲಸಿವೆಣ್ಣು ನಡುಗುವುದೇ । ನಡೆದು[4] ಜಡಿವ ವಾರ್ತೆಗೇಳಿ ॥
ನಡನಡನಡುಗುವರರಿನೃಪರೆನಲಾ । ಪೊಡವಿಪನದಟನೇನೆಂಬೆ ॥ ೧೩೬ ॥

ಅಂಗನೆ ಕೇಳರಿರಾಯರಾ ನೃಪಗಾಜಿ । ರಂಗದೊಳಗೆ ಮಾರ್ಮಲೆತು ॥
ಭಂಗವಿಲ್ಲದೆ ಕಾದಿದವರು[5] ನಾಕದ ವೇ । ಶ್ಯಾಂಗನೆಯರ[6] ಕೂಡುವರು ॥ ೧೩೭ ॥

ಮಣಿದರೆ ಸಾಕರಿರಾಯರವರ ಹೊನ್ನು । ಹಣಕಾಸೆ ಮಾಡದವರಿಗೆ ॥
ಗಣನೆಯಿಲ್ಲದ ಪದವೀವನವಗೆ ಮಿಕ್ಕ । ಬಣಗು ದೊರೆಗಳು ಪಾಸಟಿಯೇ ॥ ೧೩೮ ॥

ಆ ಜನಪನ ಭೇರೀರವಗೇಳ್ದರಿ । ರಾಜರುಗಳು ತಂತಮ್ಮ ॥
ಭೂಜಾಯೆಯ ಬಿಟ್ಟು ಬಲುದುರ್ಗಕವರಧಿ । ರಾಜರಾದರು ರಾಜವದನೆ ॥ ೧೩೯ ॥

ದಣಿಯಿಸುವನು ತನಗೆರೆದರ ವಿತ್ತದಿಂ[7] । ದಣಿಯಿಸುವನು ರಾಜ್ಯವಿತ್ತು ॥
ಮಣಿಯದೆ[8] ಮಲೆತರನಾ ನೃಪ ಸಗ್ಗದ । ಗಣಿಕೆಯರೊಳು ನೆರಹುವನು ॥ ೧೪೦ ॥

---

ರಾಜನಿದ್ದನು. ॥ ೧೩೩ ॥ ಭೂಮಂಡಲಕ್ಕೆ ಒಡೆಯನಾದ ದಶರಥನು ಕ್ಷೀರಸಮುದ್ರದಲ್ಲಿ ವಿಷ್ಣುವೂ, ಬೆಳ್ಳಿಬೆಟ್ಟದಲ್ಲಿ ಶಿವನೂ, ಮೂಡಣ ಪರ್ವತದಲ್ಲಿ ಸೂರ್ಯಬಿಂಬವೂ, ದೇವಲೋಕದಲ್ಲಿ ದೇವೇಂದ್ರನೂ ಇರುವಂತೆ ಇದ್ದನು. ॥ ೧೩೪ ॥ ಆ ರಾಜನ ಖಡ್ಗಧಾರೆಯ ನೀರೇ ಕಂದಕವಾಗಲು, ತೋಳಬಲವೇ ಕೋಟೆಯಾಗಲು, ಹೆದರಿ ಓಡಿಹೋಗದುದು ತನ್ನ ಸೈನ್ಯವಾಗಲು, ಇಡೀ ಭೂಮಂಡಲವೇ ಒಂದು ಪಟ್ಟಣವೆನಿಸಲು. ದಶರಥರಾಜನು ರಾಜ್ಯವಾಳುತ್ತಿದ್ದನು. ॥ ೧೩೫ ॥ ದಶರಥನು ಹಿಡಿದು ಅಲುಗಿದ ಮಾತ್ರಕ್ಕೆ ಆತನ ಖಡ್ಗವೆಂಬ ಹೆಣ್ಣು ಅಲುಗುವುದು. ಅವನು ನಡೆದುಕೊಂಡು ಹೋಗಿ ಖಡ್ಗವನ್ನು ಅಲುಗಾಡಿಸುವ ವಾರ್ತೆಯನ್ನು ಕೇಳಿದ ಮಾತ್ರಕ್ಕೆ ಅವನ ವೈರಿಗಳು ಗದಗಡನೆ ನಡುಗುವರೆನ್ನಲು ಆ ರಾಜನ ಪರಾಕ್ರಮವನ್ನು ಏನೆನ್ನಲಿ! ॥ ೧೩೬ ॥ ಎಲೇ ಚೆಲುವೆಯೇ ಕೇಳು. ಆ ರಾಜನಿಗೆ ಯುದ್ಧರಂಗದಲ್ಲಿ ಎದುರಾಗಿ ಹೋರಾಡಿದವರು ಏನೂ ತೊಂದರೆಯಿಲ್ಲದೆ ದೇವಲೋಕದ ವೇಶ್ಯಾಸ್ತ್ರೀಯರನ್ನು ಒಡನಾಡುವರು. ॥ ೧೩೭ ॥ ವೈರಿರಾಜರು ಬಂದು ಅವನಿಗೆ ತಲೆಬಾಗಿದರೆ ಸಾಕು. ದಶರಥನು ಅವರ ಚಿನ್ನಕ್ಕಾಗಲೀ ಹಣಕ್ಕಾಗಲೀ ಆಸೆಮಾಡುವವನಲ್ಲ. ಅವರಿಗೆ ಲೆಕ್ಕಿಸಲು ಸಾಧ್ಯವಾಗದಂತಹ ಸ್ಥಾನವನ್ನೇ ಕೊಡುವನು. ಅಂತಹ ದಶರಥನಿಗೆ ಇತರ ಅಲ್ಪರಾದ ರಾಜರು ಸಮಾನರಾಗುವರೇ! ॥ ೧೩೮ ॥ ಆ ರಾಜನ ಭೇರಿಯ ಶಬ್ದವನ್ನು ಕೇಳಿದ ವೈರಿರಾಜರು ತಮ್ಮತಮ್ಮ ಭೂಮಿಯೆಂಬ ಸ್ತ್ರೀಯನ್ನು ಬಿಟ್ಟು, ದೊಡ್ಡದಾದ ದುರ್ಗಕ್ಕೆ ಅಧಿರಾಜರೆನಿಸುವರು. ॥ ೧೩೯ ॥ ತನ್ನನ್ನು ಬೇಡಿದವರಿಗೂ ಶರಣಾಗತರಾದವರಿಗೂ ಐಶ್ವರ್ಯ

---

[1] ಗಜಗಳ (ಗ) ಕದಳೀಕಾನನ ಮದಗಜ (ಚ) [2] × (ಗ). [3] ಜಗದೊಂದು (ಗ) [4] ನಡುಗುವುದೆನ್ನೊಡನೆ (ಗ) [5] ಕಾದಿದವರ (ಚ). [6] ವೇಶ್ಯಾಂಗನೆಯೊಳು (ಗ ಚ) [7] ದಣಿಯಿಸಿದರನು ತನಗೆರೆದರತ್ತದಿಂ (ಕ). [8] ಮಣಿದರ (ಚ).

ಮಂದಮಾರುತ ಪಚ್ಚೆಗರ್ಪೂರ ಪನಿನೀ । ರಿಂದುಮಂಡಲ ಮಲಯಜಕೆ ॥
ಅಂದು ಮೈಯಿಕ್ಕುವರಾ ಭೂಪಾಲನ । ನಿಂದು ನಿಟ್ಟಿಸಿದಂಗನೆಯರು ॥ ೧೪೧ ॥

ರೂಢಿವಡೆದು ತೋಱುವ ಸೊಬಗೆಂತುಟೊ । ಗಾಡಿಯ ಗರುವೆಯರವನ ॥
ನೋಡಿದ ಮಾತ್ರದಿಂದರಲಂಬನಂಬಿಗೆ । ಗೂಡಾಗು[1]ವರಂಬುಜಾಕ್ಷಿ ॥ ೧೪೨ ॥

ಅಱಿವಱಿವುದು ಬುದ್ಧಿ ಮಱೆವುದು ಮೊಱೆ[2] ಧರ್ಮ । ಹೆಱೆ[3] ಸಾರುವುದು ಮದನಾಗ್ನಿ ॥
ಗಱಿಗಟ್ಟುವುದು ಕೋಮಲೆಯರಿಗಾ ನಾ । ಡೆಱೆಯನ ಕಂಡಮಾತ್ರದೊಳು ॥ ೧೪೩ ॥

ಸರಸಿಜವಾಱಡಿದಾಣವಧೋಗತಿ । ಗಿರದೈದುವುದು ಪಾಲ್ಗಡಲು ॥
ಹರಿಗೋಪಾಲಕನೆಂದು ಬಿಸುಟು ಸಿರಿ । ಯುರವ ಸಾರಿದಳಾ ನೃಪನ ॥ ೧೪೪ ॥

ಹೇಡಿಗಳಿವರಾಜಿರಂಗದೊಳೆನ್ನನೀ । ಡಾಡುವರಿವರಿವರೆಂದು[4] ॥
ನಾಡ ನೃಪರ ಬಿಟ್ಟು ಜಯವೆಣ್ಣು ಬಂದಂದು । ಕೂಡಿದಳಾ ದಶರಥನ ॥ ೧೪೫ ॥

ಉರಗವದನ ವಿಷವಚಲ ಕಕ್ಕಸ[5] ಮದ । ಕರಿ ನೀಚಕುಲ ಕೂರ್ಮವಿಮುಖ ॥
ಇರಲಿವರೊಳಗನುಚಿತವೆಂದಾ ಭೂ । ವರನ ಸಾರಿದಳು ಭೂರಮಣಿ ॥ ೧೪೬ ॥

ಸುರತರು ಮರ ಚಿಂತಾಮಣಿ ಕಾಠಿಣ್ಯ । ವರ ಕೋಮಲಾಂಗ ಸರಸನು ॥
ಕರುಣಹೃದಯನೆಂದು ವಿತರಣ ಲಕ್ಷ್ಮಿ ಬಂ । ದಿರದೆ ಸಾರಿದಳಾ ನೃಪನ ॥ ೧೪೭ ॥

---

ವನ್ನಿತ್ತು ರಾಜ್ಯವನ್ನಿತ್ತು ತೃಪ್ತಿಪಡಿಸುವನು ತನಗೆ ತಲೆಬಾಗದೆ ಪ್ರತಿಭಟಿಸಿದವರನ್ನು ಆ ರಾಜನು ದೇವಲೋಕದ ಸೂಳೆಯರೊಡನಾಡಿಸುವನು ॥ ೧೪೦ ॥ ಆ ರಾಜನನ್ನು ನೋಡಿದ ಸ್ತ್ರೀಯರು ಕಾಮತಾಪಕ್ಕೆ ಗುರಿಯಾಗಿ ತಂಗಾಳಿ, ಪಚ್ಚೆಗರ್ಪೂರ, ಪನ್ನೀರು, ಬೆಳುದಿಂಗಳು, ಶ್ರೀಗಂಧ ಮುಂತಾದ ತಂಪಿನ ವಸ್ತುಗಳಿಗೆ ಮೆಯ್ಯೊಡ್ಡುವರು ॥ ೧೪೧ ॥ ಸೌಂದರ್ಯದ ಘನತೆಯುಳ್ಳ ಸ್ತ್ರೀಯರು ಆತನನ್ನು ನೋಡಿದ ಮಾತ್ರಕ್ಕೆ ಮನ್ಮಥನ ಬಾಣಕ್ಕೆ ಗುರಿಯಾಗುವರು ಹೀಗಿರುವಾಗ ಅವನ ಸೌಂದರ್ಯವು ಅದೆಷ್ಟು ಹಿರಿದೋ! ॥ ೧೪೨ ॥ ಅವನನ್ನು ಕಂಡಮಾತ್ರದಲ್ಲೇ ಹೆಂಗಸರಿಗೆ ತಿಳುವಳಿಕೆ ಆರಿಹೋಗುವುದು, ಬುದ್ಧಿ ಮರೆಯಾಗುವುದು, ನಂಟುತನ-ಧರ್ಮಭಾವನೆಗಳು ಹಿಂತೆರಳುವವು, ಕಾಮಾಗ್ನಿಯು ಪ್ರಜ್ವಲಿಸುವುದು ॥ ೧೪೩ ॥ ಲಕ್ಷ್ಮಿಯು ತನ್ನ ವಾಸಸ್ಥಾನವಾದ ತಾವರೆಯು ಆರಡಿಗೆ (ತುಂಬಿಗೆ, ತೊಂದರೆಗೆ) ಬೀಡೆಂದೂ, ಕ್ಷೀರಸಾಗರವು ಅಧೋಗತಿ (ಕೆಳಗೆ ಹರಿಯುವ ಗುಣ)ಯುಳ್ಳುದೆಂದೂ, ಹರಿಯು ಹಸುಸಾಕುವವನೆಂದೂ ಬಿಟ್ಟುಬಿಟ್ಟು, ದಶರಥರಾಜನ ಎದೆಯನ್ನು ಸೇರಿದಳು ॥ ೧೪೪ ॥ ಜಯಾಂಗನೆಯು 'ಇವರು ಹೇಡಿಗಳಾದುದರಿಂದ ನನ್ನನ್ನು ಯುದ್ಧರಂಗದಲ್ಲಿ ಕೈಬಿಡುವರು' ಎಂದು ತಿಳಿದು, ನಾಡಿನ ಇತರ ರಾಜರನ್ನು ಬಿಟ್ಟು ದಶರಥನನ್ನು ಬಂದು ಸೇರಿದಳು. ॥ ೧೪೫ ॥ ಭೂದೇವಿಯು ತನ್ನನ್ನು ಹೊತ್ತಿರುವ ಹಾವು ಬಾಯಲ್ಲಿ ವಿಷವನ್ನುಳ್ಳುದೆಂದೂ, ಪರ್ವತವು ಕಠಿಣವಾದುದೆಂದೂ, ಮದ್ದಾನೆಯು ಅಧಮಕುಲದ ಜೀವಿಯೆಂದೂ ಆಮೆಯು ಹಿಮ್ಮೊಗವಾಗುವಂಥದೆಂದೂ ಇವರೊಡನಿರುವುದು ಅಯೋಗ್ಯವೆಂದು ತಿಳಿದು, ಆ ರಾಜನನ್ನು ಸೇರಿದಳು ॥ ೧೪೬ ॥ ದಾನಗುಣವೆಂಬ ಲಕ್ಷ್ಮೀದೇವಿಯು, ಕಲ್ಪವೃಕ್ಷವು ಮರವೆಂದೂ ಚಿಂತಾಮಣಿಯು ಅಟ್ಟಿಯಾದುದೆಂದೂ ಅವನ್ನು ಬಿಟ್ಟು, ದಶರಥರಾಜನು ಮೃದುವಾದ ಶರೀರದವನೂ ರಸಿಕನೂ ಕರುಣೆಯುಳ್ಳವನೂ ಎಂದು ಗವನನ್ನು ಬಂದು ಸೇರಿದಳು ॥ ೧೪೭ ॥ ಇತರ ರಾಜರೆಲ್ಲ ಜಡಬುದ್ಧಿಯ ಜನರು, ಜೈನಮತವನ್ನು ತಿಳಿಯರು, ಅವರು

---

[1] ಕೂಡಾಪು (ಗ) [2] ಮೊರೆ (ಕ) [3] ಪೆರೆ (ಕ) ಹೊಜಿ (ಗ) [4] ರಿವರೆನ್ನ (ಗ) [5] ಕರ್ಕಶ (ಗ ಚ)

ಮಂದರು ಜಿನಮತವಱಿಯರು ಮತಿಗತ[1] । ರೆಂದುಳಿದುಳಿದ ಭೂವರರ ।
ಅಂದು ಭಾರತಿಯಾ ನೃಪತಿಯ ವದನಾರ । ವಿಂದವ ಬಂದು ಸಾರಿದಳು ॥ ೧೪೮ ॥

ಸಿರಿ ಜಸ ಜಯವಧು[2] ಭಾರತಿಯೆಂದೆಂಬ । ತರುಣಿಯರಿಗೆ ವಕ್ಷಭುಜವ ॥
ಬೆರಲು[3] ತೋಳಾನನವಿತ್ತನಾ ನೃಪ ಕೂ । ರ್ತರಿಗೀಯದ ನರರುಂಟೇ ॥ ೧೪೯ ॥

ಕುಲಗಿರಿಯೊಳು ಮಾಣಿಕವಿಸಲೆಂತಂತೆ । ಸುಲಲಿತ ದೇವಗಂಗೆಯೊಳು ॥
ಲಲಿತ ರಕ್ತಾಂಬುಜವೆಂಬಂತೆಸೆದುದಾ । ನೆಲದೆಱೆಯನ ತೇಜದೇಳ್ಗೆ ॥ ೧೫೦ ॥

ಸುರನದಿಯೊಳು ಮಿಂದುಟ್ಟೊಲಿದಾಶಾಂ । ಬರವುಟ್ಟು[4] ಮಲಯಜದಣ್ಪ ॥
ವರಮುತ್ತುದೊಟ್ಟಾ ಕೀರ್ತಿವನಿತೆ ಭೂ । ವರನ ಬಿಡದೆ ತೊಳಲುವಳು ॥ ೧೫೧ ॥

ತುಂಗವಿಕ್ರಮ ಕೀರ್ತಿ ಪರಕಲಿಸಿದವು ಬೆ । ಳ್ದಿಂಗಳ ಬೆಳಗೆಳವಿಸಿಲು[5] ॥
ಸಂಗಡ ನಲಿವರಿದಾಡುವಂತಿರ್ದ(ವ)[6] । ನಂಗಜ ರೂಪ ಸದ್ಗುಣಿಯಾ ॥ ೧೫೨ ॥

ಅಸುವ ತಳೆದ ಜಸ ನಾಲಗೆಯಾಂತು ರಂ । ಜಿಸುವ ಭಾರತಿ ತೋಳ್ವಡೆದು ॥
ಎಸೆವ ವಿಕ್ರಮ ತನುವಾಂತ ವಿನಯವೆಂ । ದೊಸೆದು ಪೊಗಳುವರಾ[7] ನೃಪನ ॥ ೧೫೩ ॥

ಮಲಯಜವಿನಿದಾದಂದಖಿಳೇಂದುಗೆ । ಕಲೆ ಪೊರ್ದದಂದು ಮುತ್ತುಗಳು ॥
ನಲೆ ಮೃದುವಾದಂದೆಣೆಯಾ ನೃಪತಿಯ । ವಿಲಸಿತ ಸದ್ಗುಣಾವಳಿಗೆ ॥ ೧೫೪ ॥

---

ಬುದ್ಧಿಹೀನರು ಎಂದು ಅವರನ್ನೆಲ್ಲ ಬಿಟ್ಟು, ಆ ರಾಜನ ಮುಖಕಮಲವನ್ನು ಸೇರಿದಳು. ॥ ೧೪೮ ॥ ದಶರಥರಾಜನು ಶ್ರೀದೇವಿಗೆ ಎದೆಯನ್ನೂ ಕೀರ್ತಿಯೆಂಬ ಸ್ತ್ರೀಗೆ ಭುಜವನ್ನೂ ಜಯಾಂಗನೆಗೆ ಬೆರಳುತೋಳುಗಳನ್ನೂ ವಿದ್ಯಾದೇವಿಗೆ ಮುಖವನ್ನೂ ಕೊಟ್ಟನು; ಪ್ರೀತಿಸಿದವರಿಗೆ ಕೊಡದೆ ಇರುವ ಮನುಷ್ಯರು ಇರುವರೇ? ॥ ೧೪೯ ॥ ಆ ರಾಜನ ತೇಜದ ಏಳಿಗೆಯು ಕುಲಪರ್ವತಗಳಲ್ಲಿ ಮಾಣಿಕ್ಯರತ್ನದ ಹೊಳಪಿನಂತೆಯೂ ದೇವಗಂಗೆಯಲ್ಲಿ ಸುಂದರವಾದ ಕೆಂದಾವರೆಯಂತೆಯೂ ಶೋಭಿಸುತ್ತಿತ್ತು. ॥ ೧೫೦ ॥ ಆ ರಾಜನ ಕೀರ್ತಿಯೆಂಬ ಮಡದಿಯು ದೇವಗಂಗೆಯಲ್ಲಿ ಸ್ನಾನಮಾಡಿ. ದಿಕ್ಕುಗಳೆಂಬ ಸೀರೆಯನ್ನುಟ್ಟು, ಶ್ರೀಗಂಧದ ಅನುಲೇಪವನ್ನು ಹಚ್ಚಿ, ಶ್ರೇಷ್ಠವಾದ ಮುತ್ತಿನಾಭರಣವನ್ನು ತೊಟ್ಟು ರಾಜನನ್ನು ಎಡೆಬಿಡದೆ ಅನುಸರಿಸುವಳು. ॥ ೧೫೧ ॥ ಹೆಚ್ಚಾದ ಪರಾಕ್ರಮ ಮತ್ತು ಪ್ರಖ್ಯಾತಿ ಎಂಬ ಇವೆರಡೂ ಒಟ್ಟಿಗೆ. ಎಳೆಬಿಸಿಲೂ ಬೆಳ್ದಿಂಗಳೂ ಹರಡಿಕೊಂಡಂತೆ ಕಾಣುತ್ತಿದ್ದು, ಇವು ಮನ್ಮಥಸ್ವರೂಪನೂ ಸದ್ಗುಣಿಯೂ ಆದ ಆ ರಾಜನೊಡನೆ ನಲಿದಾಡುವಂತಿದ್ದವು. ॥ ೧೫೨ ॥ ಪ್ರಾಣಧಾರಣೆ ಮಾಡಿರುವ ಕೀರ್ತಿಯೆಂದೂ. ನಾಲಗೆಯನ್ನು ತಾಳಿರುವ ವಿದ್ಯೆಯೆಂದೂ, ಕೈಗಳನ್ನು ಪಡೆದು ತೋರುವ ಪರಾಕ್ರಮವೆಂದೂ, ದೇಹವನ್ನು ತಳೆದಿರುವ ವಿನಯಗುಣವೆಂದೂ. ಆ ರಾಜನನ್ನು ಪ್ರೀತಿಯಿಂದ ಜನರು ಹೊಗಳುವರು. ॥ ೧೫೩ ॥ ಶ್ರೀಗಂಧವು ಸವಿಯೆನಿಸಿದರೆ, ಪೂರ್ಣಚಂದ್ರನು ಕಳಂಕದಿಂದ ಕೂಡಿರದಿದ್ದರೆ. ಮುತ್ತುಗಳು ಮೃದುವಾದರೆ, ಆ ರಾಜನ ಸದ್ಗುಣಗಳ ಸಮೂಹಕ್ಕೆ ಸಮಾನವಾಗಬಹುದು. ॥ ೧೫೪ ॥ ಹೀಗೆ ಹೆಚ್ಚಾದ ಶೌರ್ಯ. ವಿನಯ. ದಾನ—ಮುಂತಾದ ಗುಣಗಳಿಂದ ಕೂಡಿ ಕೀರ್ತಿಶಾಲಿಯಾಗಿರುವ, ಮನ್ಮಥನಂತೆ ಸುಂದರರೂಪನಾಗಿರುವ, ದಶರಥರಾಜನಿಗೆ ಹಲವರು

---

[1] ಮತಿಗಡ (ಕ). [2] ಸಿರಿ ಸೆಲ ಜಸ ಜಯ (ಗ ಚ). [3] ಬರಲ (ಗ ಚ). [4] ದಾಶಾಂಬಾಮಿಟ್ಟು (ಚ) [5] ಬೆಳದೆಳವಿಸಿಲು (ಗ).
[6] ವತಿರ್ವಾ (ಕ) ವಂತಿರ್ವಾ (ಗ ಚ). [7] ಪೊಗಳ್ವರಾ (ಗ ಚ)

ಇಂತತಿವೀರ ವಿನಯ ವಿತರಣಗುಣ । ಶಾಂತ ಜಸವ ತಳೆದಿರ್ದ ॥
ಕಂತುಸನ್ನಿಭರೂಪ ದಶರಥನೃಪಗೆ ಸು । ಕಾಂತೆಯರಿಹರು ಹಲಬರು[1] ॥ ೧೫೫ ॥

ಸರದುಂಬಿಗುರುಳ ಸರಸಲಾವಣ್ಯದ । ತರುಣಹರಿಣಲೋಚನದ ॥
ಸರಸಿಜಾನನದಂಚೆಗತಿಯ ನಾರಿಯರಾ । ನರಪತಿಗಿಹರು ಹಲಬರು ॥ ೧೫೬ ॥

ತೋರಮೊಲೆಯ ವಾರಣನಿಭಯಾನದ । ಚಾರುಚಕೋರಲೋಚನದ ॥
ಮಾರನ ಸುದತಿಗೆಣೆಯ ರೂಪಿನ ಚೆಲ್ವ । ನಾರಿಯರುಗಳೆಸೆದಿಹರು ॥ ೧೫೭ ॥

ಮೃಗಮದಗಂಧದ ಮೃಗರಾಜಮಧ್ಯದ । ಮೃಗಲೋಚನದೆಳನಗೆಯ ॥
ಮೃಗಧರವದನ[2]ದಂಗನೆಯರೆಸೆದರಾ । ಜಗದಧಿಪತಿಗೆ ಪಲಬರು ॥ ೧೫೮ ॥

ಕುಂಕುಮಗಂಧದ ಕುವಲಯನೇತ್ರದಶ । ಶಾಂಕಗತಿಯ ಗಿಳಿನುಡಿಯ ॥
ಪಂಕಜವದನೆಯರೆಸೆದರಂದಾ ಮಕ । ರಾಂಕನಿಭಗೆ ದಶರಥಗೆ ॥ ೧೫೯ ॥

ನಸುನಗೆ ನಸುನೋಟ ಸವಿನುಡಿ ಮೆಲ್ಲಡಿ[3] । ಪೊಸಗಾಡಿ ಪೊಸಗರುವಿಕೆಯ ॥
ಎಸಕವೆಸೆದವಾ ರಾಯನಂಗನೆಯರೊ । ಳಸಮಬಾಣನ ಮಸೆದಲಗೆ ॥ ೧೬೦ ॥

ರಾಜವದನ ರಾಜೀವಲೋಚನ ಮೃಗ । ರಾಜಮಧ್ಯದ ನಿಡುಮುಡಿಯ ॥
ರಾಜಮರಾಳಗತಿಯ ಕೋಮಲೆಯರು । ರಾಜಿಪರಾ ರಾಜನಿಗೇ ॥ ೧೬೧ ॥

ಕೊಂಕುಗುರುಳು[4] ಪಂಕಜಲೋಚನದ ಶ । ಶಾಂಕವದನದ ಕೋರಕಿತ ॥
ಪಂಕೋದ್ಭವಕುಚದೇಣಾಂಕ ಗಮನದ । ಬಿಂಕಗಾತಿಯರಿಹರವಗೇ ॥ ೧೬೨ ॥

---

ಹೆಂಡಿರಿರುವರು ॥ ೧೫೫ ॥ ಆ ಹೆಂಡಿರು ತುಂಬಿಗುರುಳಿನ, ರಸಿಕತೆಯಿಂದಕೂಡಿದ ಸೌಂದರ್ಯದ, ಬಳೆದ ಜಿಂಕೆಯಂತಹ ಕಣ್ಣುಗಳ, ತಾವರೆಯಂತಹ ಮುಖದ, ಹಂಸೆಯಂತಹ ನಡೆಯ ಸುಂದರಿಯರಾಗಿದ್ದರು ॥ ೧೫೬ ॥ ಆ ದಶರಥನ ಹೆಂಡಿರು ತೋರಮೊಲೆ, ಆನೆಯ ನಡೆ, ಸುಂದರವಾದ ಚಕೋರಗಳಂತಹ ಕಣ್ಣುಗಳು, ರತಿದೇವಿಗೆ ಸರಿಯೆನಿಸುವ ರೂಪವುಳ್ಳ ಚೆಲುವೆಯರು ॥ ೧೫೭ ॥ ಆ ರಾಜನಿಗೆ ಕಸ್ತೂರಿಪರಿಮಳದ, ಸಿಂಹಕಟಿಯ, ಜಿಂಕೆಯಂತಹ ಚಂಚಲವಾದ ಕಣ್ಣಿನ, ಮುಗುಳುನಗೆಯ, ಚಂದ್ರನಂತಹ ಮುಖದ ಸ್ತ್ರೀಯರು ಹಲವರಿದ್ದರು ॥ ೧೫೮ ॥ ಕುಂಕುಮದ ಸುವಾಸನೆಯ, ನೈದಿಲೆಗಣ್ಣಿನ, ಚಂದ್ರನಂತಹ ನಡೆಯ, ಗಿಳಿಯಂತಹ ನುಡಿಯ, ತಾವರೆಮೊಗದ ಸ್ತ್ರೀಯರು ಮನ್ಮಥನಿಗೆಣೆಯಾದ ದಶರಥನಿಗೆ ಇದ್ದರು ॥ ೧೫೯ ॥ ಎಲೇ ಮನ್ಮಥನ ಮಸೆದ ಕತ್ತಿಯಂತಿರುವ ಚೇಳಿನಿಯೇ, ಆ ದಶರಥರಾಜನ ಮಡದಿಯರಲ್ಲಿ ಮುಗುಳುನಗೆ, ಓರೆನೋಟ, ಸವಿಮಾತು, ಕೋಮಲವಾದ ಪಾದ, ಹೊಸಚೆಲುವು, ಹೊಸತಾದ ಮೇಲ್ಮೆ—ಇವುಗಳ ವರ್ತನೆಗಳು ಶೋಭಿಸುತ್ತಿದ್ದುವು ॥ ೧೬೦ ॥ ಚಂದ್ರನಂತಹ ಮುಖವುಳ್ಳ, ತಾವರೆಗಣ್ಣುಳ್ಳ, ಸಿಂಹದಂತಹ ನಡುವುಳ್ಳ, ಉದ್ದವಾದ ಕೂದಲುಳ್ಳ, ಅರಸಂಚೆಯಂತಹ ನಡೆಯುಳ್ಳ ಕೋಮಲೆಯರು ಆ ರಾಜನ ಮಡದಿಯರಾಗಿದ್ದರು ॥ ೧೬೧ ॥ ಆ ರಾಜನ ರಮಣಿಯರು ಗುಂಗುರುಕೂದಲು, ತಾವರೆಗಣ್ಣು, ಚಂದ್ರನಂತಹ ಮುಖ, ತಾವರೆಮುಗುಳಿನಂತಹ ಮೊಲೆ, ಚಂದ್ರನಂತಹ ನಡೆ—ಇವುಗಳಿಂದ ಕೂಡಿದವರಾಗಿದ್ದರು ॥ ೧೬೨ ॥ ಸಂಗೀತ, ಸಾಹಿತ್ಯ, ಎಲ್ಲವಿಧವಾದ ಕವಿತೆ, ಕಲೆ—ಇವುಗಳ ಅಂಶಗಳ

---

[1] ಪಲಬರು (ಚ) [2] ನಯನ (ಚ) [3] ಮೆಲ್ನಡೆ (ಚ) [4] ಗುರುಳ (ಚ)

ಸಂಗೀತ ಸಾಹಿತ್ಯ ಸಕಲಕವಿತೆ ಕಲೆ । ಯಂಗವನಱಿವಂಗನೆಯರ ॥
ವಂಗಡವಲ್ಲದಿಲ್ಲಾ ನೃಪತಿಗೆ ಮುಂ । ಗ್ಧಾಂಗನೆಯರು ಮೃಗನಯನೇ ॥ ೧೬೩ ॥

ಇರೆ ಪಲಬರು ಸತಿಯರುಗಳಿಂತಾ ಭೂ । ವರಗೆ ಪಟ್ಟದರಾಣಿಯೊರ್ವ ॥
ಹರಿಣಲೋಚನೆ ಸುಬಳಾದೇವಿಯೆಂದೆಂ । ಬರಸಿಯೊಪ್ಪಿದಳಂಬುಜಾಕ್ಷಿ ॥ ೧೬೪ ॥

ತಳಿರ್ವಜ್ಜೆ ತಾರಾಳಿ ನಖ ನಳನಳಿಸುವ । ನಳಿತೋಳು ಕಲಶಕುಚಗಳು ॥
ಸುಳಿನಾಭಿ ತೆಳುವಸುಱಿಸೆದು[1]ವಂತಾ ನವ । ನಳಿನದಳಾಯತೇಕ್ಷಣೆಗೇ ॥ ೧೬೫ ॥

ಕಂಬುಕಂಧರ ಕೈರವನೇತ್ರ ನವಶೋ । ಣಾಂಬುಜಾನನ ತುಂಬಿಗುರುಳು ॥
ಬಿಂಬಾಧರವಿಂಬಾದವಾ ನತಿಗಿಂದು । ಬಿಂಬವದನದಂಬುಜಾಕ್ಷಿ ॥ ೧೬೬ ॥

ರತಿಯ ಚೆಲ್ವಿಕೆ ಪಾರ್ವತಿಯ ಬೆಡಗು ಸರ । ಸತಿಯ ಜಾಣ್ನುಡಿ ರೋಹಿಣಿಯ ॥
ಪತಿಭಕ್ತಿಯಾ ಸುದತಿಯೊಳೊಂದಿ ಪೆಱಿದವು । ಶತಪತ್ರದಳಲೋಚನೆಗೆ ॥ ೧೬೭ ॥

ಗುಣದಾಲಯ ರತ್ನತ್ರಯದಾಗರ । ಡೊಣೆ[2]ಶೀಲಗಳ ಶುಚಿತೆಯ ॥
ಕಣಿ ದಶರಥನರಸಿಯ ಪೊಗಳಲು ಮನ । ದಣಿಯ[3]ವಂಗಜನಧಿದೇವಿ ॥ ೧೬೮ ॥

ಅರಲ ಧನುವಿಗಾಱಡಿವೆದೆಯೀಶನ । ವರಮುಕುಟದೊಳಿಂದುರೇಖೆ ॥
ಹರಿಯುರದೊಳು ವನಮಾಲೆಯೆನಿಸಿದವೊ[4] । ಲರಸನೊಳರಸಿಯೊಪ್ಪಿದಳು ॥ ೧೬೯ ॥

ಇಂತೊಪ್ಪುವ ಸುಬಳಾದೇವಿಯೊಡಗೂಡಿ । ಕಂತುಸನ್ನಿಭ ದಶರಥನು ॥
ಸಂತಸದಿಂ ಸುಖಗಳನನುಭವಿಸುತ । ತ್ಯಂತಸುಖ[5]ದೊಳೊಪ್ಪಿದನು ॥ ೧೭೦ ॥

---

ನ್ನೆಲ್ಲ ತಿಳಿದಿರುವ ಸ್ತ್ರೀಯರ ಸಮೂಹವಲ್ಲದೆ, ಯಾರೊಬ್ಬರೂ ಮೂಢರೆನಿಸುವ ಮಡದಿಯರು ದಶರಥನಿಗೆ ಇರಲಿಲ್ಲ. ॥ ೧೬೩ ॥ ಹೀಗೆ ಆ ರಾಜನಿಗೆ ಹಲವರು ಹೆಂಡಿರು ಇರುತ್ತಿರಲು, ಅವರಲ್ಲಿ ಜಿಂಕೆಯಂತಹ ಕಣ್ಣಿನ 'ಸುಬಳಾದೇವಿ' ಎಂಬಾಕೆ ಪಟ್ಟದರಸಿಯಾಗಿದ್ದಳು. ॥ ೧೬೪ ॥ ಹೊಸ ತಾವರೆಯೆಸಳಿನಂತಹ ಕಣ್ಣಿನ ಸುಬಳಾದೇವಿಗೆ ಚಿಗುರಿನಂತಹ ಪಾದಗಳು, ನಕ್ಷತ್ರಗಳಂತಹ ಉಗುರು, ಹೊಳೆಯುವ ಕೈಗಳು, ಕಲಶದಂತಹ ಮೊಲೆಗಳು, ಸುಳಿಯಂತಿರುವ ಹೊಕ್ಕುಳ, ತೆಳುವಾದ ಹೊಟ್ಟೆ–ಶೋಭಿಸುತ್ತಿದ್ದವು. ॥ ೧೬೫ ॥ ಚಂದ್ರಮುಖಿಯೂ ಕಮಲಾಕ್ಷಿಯೂ ಆದ ಚೆಳಿನಿಯೇ, ಆ ಸುಬಳೆಗೆ ಶಂಖದಂತಹ ಕೊರಲು, ನೈದಿಲೆಯಂತಹ ಕಣ್ಣು, ಹೊಸ ಕೆಂದಾವರೆಯಂತಹ ಮುಖ, ತುಂಬಿಯಂತಹ ಕೂದಲು, ತೊಂಡೆ ಹಣ್ಣಿನಂತಹ ತುಟಿ–ಇವು ಒಪ್ಪಿದ್ದುವು. ॥ ೧೬೬ ॥ ಆ ಸುಂದರ ಸ್ತ್ರೀಯಲ್ಲಿ ರತಿದೇವಿಯ ಸೌಂದರ್ಯವೂ, ಪಾರ್ವತಿಯ ಬೆಡಗೂ, ಸರಸ್ವತೀದೇವಿಯ ಜಾಣ್ಮೆಯಮಾತೂ, ಚಂದ್ರನ ಮಡದಿಯಾದ ರೋಹಿಣೀದೇವಿಯ ಪತಿಭಕ್ತಿಯೂ, ಒಂದಾಗಿ ಶೋಭೆಯನ್ನು ಬೀರುತ್ತಿದ್ದುವು. ॥ ೧೬೭ ॥ ಎಲೇ ಮನ್ಮಥನ ಅಧಿದೇವತೆಯೇ (ಚೆಳಿನಿಯೆ), ಗುಣಗಳಿಗೆ ಮನೆ, ರತ್ನತ್ರಯಗಳ ಆಶ್ರಯಸ್ಥಾನ, ಶೀಲಗಳಿಗೆ ಬತ್ತಳಿಕೆ, ಶುಚಿತ್ವಕ್ಕೆ ಕಣಿ ಎನಿಸಿದ ದಶರಥನ ಮಡದಿಯನ್ನು ವರ್ಣಿಸಿದಷ್ಟೂ ಮನಸ್ಸಿಗೆ ತೃಪ್ತಿಯಾಗದು. ॥ ೧೬೮ ॥ ಮನ್ಮಥನ ಬಿಲ್ಲಿನಲ್ಲಿ ತುಂಬಿಗಳ ಹಗ್ಗವೂ, ಶಿವನ ಶಿರಸ್ಸಿನಲ್ಲಿ ಚಂದ್ರರೇಖೆಯೂ, ವಿಷ್ಣುವಿನ ಎದೆಯಲ್ಲಿ ವನಮಾಲೆಯೂ ಮೆರೆಯುವಂತೆ ಆ ದಶರಥರಾಜನಲ್ಲಿ ಆತನ ಅರಸಿಯು ಶೋಭಿಸಿದಳು. ॥ ೧೬೯ ॥ ಹೀಗಿರುವ ಸುಬಳಾದೇವಿಯನ್ನು ಒಡಗೂಡಿಕೊಂಡು, ಆ ಮನ್ಮಥಸದೃಶನಾದ ದಶರಥರಾಜನು ಸುಖಗಳನ್ನು ಅನುಭವಿಸುತ್ತ

---

[1] ತೆಳುವಸಿರೆಸೆದು (ಚ)　[2] ದೊಣೆ (ಚ)　[3] × (ಗ).　[4] ಯೆಸೆವವೊ (ಚ).　[5] ವಿಭವ (ಚ).

ರತಿಯೊಳಂಗಜ ಗಿರಿಜೆಯೊಳೀಶ ಶಚಿಯೊಳು । ಶತಕ್ರತು ಶಶಿ ರೋಹಿಣಿಯೊಳು ॥
ಶತಪತ್ರನಯನನಿಂದಿರೆಯೊಳಿರ್ಪಂದದಿ[1] । ಸತಿಗೂಡಿ ಸುಖಮಿರ್ದನವನು ॥ ೧೭೧ ॥

ಸುಜನಜನಾಸ್ಯಾಂಬುಜ ದಿನನಾಯಕ । ನಿಜಕುಲ ಶರಧಿ ಶಶಾಂಕ ॥
ಸುಜನಜನಾನಂದ ಜಿನಭಕ್ತ ನವಮನ । ಸಿಜ[2]ರೂಪನೊಪ್ಪಿದನಬಲೆ ॥ ೨೭೨ ॥

ಇದು ಸರಸತಿಯಂಗಭೂಷಣ ಕೇಳ್ವರ । ಹೃದಯಕಮಲ ದಿವಸೇಂದ್ರ ॥
ಇದು ರಸಿಕರ ಕಿವಿಗಮೃತ ರಸಾಯನ । ಇದು ಭವ್ಯಕುಮುದ ಚಂದ್ರಮನು ॥ ೧೭೩ ॥

ಕೋವಿದರುಗಳ ಹೃತ್ಕಮಲಭಾಸ್ಕರ ವಾ । ಗ್ದೇವಿಯ ಮುಖಮಣಿ ಮುಕುರ ॥
ಭಾವಕರುಗಳ ಸಂತಸ ಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ[3] ॥ ೧೭೪ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೭೫ ॥

ಇದು ಭೂಸುರವಂಶೋದ್ಭವನಭಿನವ
ಮದನ ನಮಲಗುಣ-ಜಿನ-ಪಾದಾಂಬುಜ
ಮದಮಧುಕರನತ್ಯುತ್ತಮವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದತಿ ಜಸವೆತ್ತುದು ಸಂಧಿತ್ರಿತಯಂ ॥ ೧೭೬ ॥

ಅಂತೂ ಸಂಧಿ ೩ಕ್ಕಂ ಪದನು ೪೫೦ಕ್ಕಂ ಮಂಗಳಮಹಾ

---

ಸಂತೋಷದಿಂದಿದ್ದನು ॥ ೧೭೦ ॥ ಮನ್ಮಥನು ರತಿಯೊಡನೆಯೂ, ಶಿವನು ಪಾರ್ವತಿಯೊಡನೆಯೂ, ಇಂದ್ರನು ಶಚಿಯೊಡನೆಯೂ, ಚಂದ್ರನು ರೋಹಿಣಿಯೊಡನೆಯೂ, ಶ್ರೀಮನ್ನಾರಾಯಣನು ಲಕ್ಷ್ಮೀದೇವಿಯೊಡನೆಯೂ ಇರುವಂತೆ ದಶರಥನು ಸುಬಳಾದೇವಿಯೊಡನೆ ಸುಖದಿಂದಿದ್ದನು ॥ ೧೭೧ ॥ ಎಲೇ ಮಡದಿ ಚೆಲುವೆಯೇ, ಸತ್ಪುರುಷರ ಮೊಗ ದಾವರೆಗೆ ನೇಸರಂತೆ ಇರುವವನೂ, ತನ್ನ ವಂಶವೆಂಬ ಸಾಗರಕ್ಕೆ ಚಂದ್ರನಂತಿರುವವನೂ, ಸುಜನರಿಗೆ ಸಂತೋಷಸ್ವರೂಪನೂ ಜಿನಭಕ್ತನೂ ಹೊಸ ಮನ್ಮಥಸ್ವರೂಪನೂ ಆದ ದಶರಥನು ಮೆರೆಯುತ್ತಿದ್ದನು ॥ ೧೭೨ ॥ ಈ ಕಾವ್ಯವು ಸರಸ್ವತೀ ದೇವಿಯ ಶರೀರಕ್ಕೆ ಅಲಂಕಾರವೂ ಕೇಳುವವರ ಹೃದಯಕಮಲಕ್ಕೆ ಸೂರ್ಯನೂ ರಸಿಕರ ಕಿವಿಗೆ ಸುಧೆಯ ರಸಾಯನವೂ ಮೋಕ್ಷಾಪೇಕ್ಷಿಗಳೆಂಬ ನೈದಿಲೆಗೆ ಚಂದ್ರನೂ ಆಗಿದೆ ॥ ೧೭೩ ॥ ವಿದ್ವಾಂಸರ ಹೃತ್ಕಮಲಕ್ಕೆ ಸೂರ್ಯನೂ, ಸರಸ್ವತಿಯ ಮುಖಕ್ಕೆ ರನ್ನಗನ್ನಡಿಯಂತಿರುವವನೂ ರಸಿಕರ ಸಂತೋಷವೆಂಬ ಜಲಕ್ಕೆ ಸಾಗರದಂತಿರುವವನೂ ಮಿತ್ರನೂ ಎನಿಸಿದ ದೇವಪ್ಪ ಕವಿ ರಚಿಸಿದ ಸತ್ಕಾವ್ಯವಿದು ॥ ೧೭೪ ॥ ಎಲೈ ಮೃಗನೇತ್ರೆ ಚೆಲುವೆಯೆ, ಈದಿನ ಮುಂದಿನ ಕಥೆಗಳನ್ನು ಅವಲಂಬಿಸುವೆನೆಂದು ಮೆಲ್ಲಮೆಲ್ಲನೆ ಮುಂದುವರಿಯುತ್ತ ಇಲ್ಲಿಗೆ ಸಂಧಿ ಕೊನೆಗೊಂಡಿದೆ. ಆ ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು. ॥ ೧೭೫ ॥ ಬ್ರಾಹ್ಮಣ ಕುಲದಲ್ಲಿ ಜನಿಸಿದವನೂ, ಅಭಿನವ ಮನ್ಮಥನೂ, ನಿರ್ಮಲವಾದ ಗುಣಗಳುಳ್ಳವನೂ, ಜಿನೇಂದ್ರನ ಪಾದಕಮಲಕ್ಕೆ ಮದಿಸಿದ ತುಂಬಿಯಂತಿರುವವನೂ, ಅತಿ ಶ್ರೇಷ್ಠವೆನಿಸಿದ ವಾಗ್ದೇವಿಯ ಮುಖಕ್ಕೆ ನಿರ್ಮಲವಾದ ಕನ್ನಡಿಯಂತಿರುವವನೂ, ಶಾಶ್ವತವೂ ನಿರ್ಮಲವೂ ಆದ ನಡತೆಯುಳ್ಳವನೂ, ಸಚಿವನೂ, ಆದ ದೇವಪ್ಪನು ಸಂತೋಷದಿಂದ ಹೇಳಿದಂತಹ ರಾಮವಿಜಯಕಾವ್ಯದಲ್ಲಿ ಸೇರಿರುವಂತೆ ರಚಿತವಾಗಿ ಮೂರನೆಯ ಸಂಧಿ ಪ್ರಸಿದ್ಧವಾಯಿತು ॥ ೧೭೬ ॥

---

[1] ಳಿರ್ಪಂ ತಾ (ಗ ಚ) [2] ಸಮರೂಪನೊಪ್ಪಿದನು(ಗ ಚ) [3] ೧೭೪ ಈ ಪದ್ಯ ಚ ಪ್ರತಿಯಲ್ಲಿ ಮಾತ್ರ ಇದೆ

# ೪. ಪುತ್ರದೋಹಳ

ಸುರ ನರ ನಾಗ ನಾಯಕ ಪೂಜಿತಪಾದ । ತರುಣ ತರಣಿ ಶಶಿಕೋಟಿ ॥
ಕಿರಣ ಭವ್ಯಾಬ್ಧಿ ಚಂದಿರ[1] ಮುನಿಸುವ್ರತ । ಶರಣು ಸುಮತಿದೋರೆನಗೆ[2] ॥ ೧ ॥

ಮುಂದಣ ಕಥೆಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೨ ॥

ಬಡಬಾಸೆಯು ಬಟ್ಟ ಮೊಲೆಯು ಬಂದುಗೆವಾಯು । ಕುಡಿತೆ[3]ಗಂಗಳ ಕೊಂಕುಗುರುಳ
ಮಡದಿಯರುಗಳ ಸೋಲಿಸುತಿವೆ ನಿನ್ನಯ । ನುಡಿ ನುಡಿವಕ್ಕಿನುಡಿಯಳೇ[4] ॥ ೩ ॥

ಸರಸಿಜವದನೆ ಕೇಳಾ ದರಶಥ ಭೂ । ವರನ ಮೋಹದ ಪಟ್ಟದರಸಿ ॥
ವರ ಶೀಲವತಿ ಸುಬಳಾದೇವಿಯರುಂ । ದಿರಲೊಂದಾನೊಂದು ದಿವಸ ॥ ೪ ॥

ಮಂದಗತಿಯೊಳೋಲಗಸಾಲೆಗೆಯುವ । ಳಂದು ತನ್ನಯ ಕೆಳದಿಯರ ॥
ವೃಂದ ಬಳಸಿ ಬರೆ ಬಂದು ಮಂಡಿಸಿದಳಾ । ಚಂದದಿಂ[5] ರತ್ನಪೀಠದೊಳು ॥ ೫ ॥

ಚವರದ ಗಿಂಡಿಯ ಕರಗದ ಹಡಪದ । ನವಮುಕುರದ ಪಾವುಗೆಯ ॥
ಡವಕೆಯ ಕುಂಚದೂಳಿಗದಾಳಿಯರಾ । ಯುವತಿಯೋಲಗದೊಳೊಪ್ಪಿದರು ॥ ೬ ॥

---

ದೇವ ಮನುಷ್ಯ ಉರಗ–ಇವರ ಒಡೆಯರಿಂದ ಪೂಜಿಸಲ್ಪಟ್ಟ ಪಾದವುಳ್ಳವನೂ ತರುಣ ಸೂರ್ಯ-ಚಂದ್ರ ಕೋಟಿಗಳಷ್ಟು ಪ್ರಕಾಶವುಳ್ಳವನೂ ಸತ್ಪುರುಷರೆಂಬ ಸಮುದ್ರವನ್ನು ಉಕ್ಕಿಸುವ ಚಂದ್ರನಂತಿರುವವನೂ ಆದ ಮುನಿಸುವ್ರತ ಸ್ವಾಮಿಯೇ ನಿನ್ನನ್ನು ವಂದಿಸುವೆನು, ನನಗೆ ಸದ್ಬುದ್ಧಿಯನ್ನು ಕೊಡುವವನಾಗು. ॥ ೧ ॥ ಚೇಳಿನಿಯು ಶ್ರೇಣಿಕರಾಜನೊಡನೆ, ''ಎಲೈ ಮನ್ಮಥರೂಪನೇ, ಮುಂದಿನ ಕಥೆ ಯಾವುದು? ಅದರ ಸಂಗತಿಯನ್ನು ಒಂದಿಷ್ಟೂ ಉಳಿಯದಂತೆ ತಿಳಿಸಬೇಕು'' ಎಂದಳು. ಆಗ ಶ್ರೇಣಿಕನು–'ಎಲೈ ನೈದಿಲೆಗಣ್ಣವಳೇ ಹೇಳುತ್ತೇನೆ, ಕೇಳು.'' ಎಂದನು. ॥ ೨ ॥ ಎಲೈ ಗಿಳಿಯಂತಹ ಮಾತಿನವಳೇ, ನಿನ್ನ ಮಾತು–ತೆಳುವಾದ ರೋಮರಾಜಿಯು, ದುಂಡುಮೊಲೆಯು, ಬಂದುಗೆಹೂವಿನಂತೆ ಕೆಂಪಾದ ಬಾಯಿಯು, ಕುಡಿತೆಕಣ್ಣುಗಳ, ಗುಂಗುರುಗೂದಲಿನ ಇತರ ಸ್ತ್ರೀಯರನ್ನು ಸೋಲಿಸುವಂತಿದೆ. ॥ ೩ ॥ ಎಲೈ ಕಮಲಮುಖಿಯೆ, ಕೇಳು. ಆ ದಶರಥಮಹಾರಾಜನ ಪ್ರೀತಿಯ ಪಟ್ಟದ ರಾಣಿಯೂ ಶ್ರೇಷ್ಠವಾದ ಗುಣವುಳ್ಳವಳೂ ಆದ ಸುಬಳಾದೇವಿಯರು ಹೀಗೆ ಇರುತ್ತಿರುವಾಗ ಒಂದು ದಿವಸದ ಸಂಗತಿಯನ್ನು ಕೇಳು. ॥ ೪ ॥ ಆ ದಿವಸ ಆಕೆ ತನ್ನ ಜತೆಯಲ್ಲಿ ಹಲವರು ಗೆಳತಿಯರು ಬರುತ್ತಿರಲು, ಮೆಲ್ನಡೆಯಿಂದ ತನ್ನ ಓಲಗಶಾಲೆಗೆ ಬಂದು ರತ್ನಪೀಠದಲ್ಲಿ ಚಂದವಾಗಿ ಕುಳಿತಳು. ॥ ೫ ॥ ಆಕೆಯ ಓಲಗದಲ್ಲಿ ಹಲವರು ದಾಸಿಯರಿದ್ದರು. ಅವರು ಚಾಮರ, ಗಿಂಡಿ, ಕರಗ, ತಾಂಬೂಲ, ಹೊಸಕನ್ನಡಿ, ಪಾದುಕೆ, ಪೀಕದಾನಿ (ಉಗುಳು ಬುಡ್ಡಿ), ಕುಂಚ–ಮುಂತಾದವುಗಳ ಊಳಿಗದವರಾಗಿದ್ದರು. ॥ ೬ ॥ ಆ ಸುಬಳಾದೇವಿಯ ಓಲಗದಲ್ಲಿ ನೆರೆದ ದಾಸಿಯರು ಕೃತಕವಾದ ಗಿಳಿ, ನವಿಲು, ಹಂಸ, ಪಾರಿವಾಳ, ಕೋಗಿಲೆ, ಎಣೆಹಕ್ಕಿ, ಮುಂತಾದವನ್ನು ಹಿಡಿದು ಆಡಿಸುವವರಾಗಿದ್ದರು ॥ ೭ ॥ ಹಲವರು ಸುಂದರಿಸ್ತ್ರೀಯರು ದಂಡಿಗೆ (ನೋರೆಶ್ರುತಿ), ವೀಣೆ, ಕೊಳಲು, ಕಿನ್ನರಿ, ಸ್ವರಮಂಡಲ–ಮುಂತಾದವನ್ನು ಕೈಯಲ್ಲಿ ಹಿಡಿದುಕೊಂಡು ಮಹಾರಾಣಿಯ ಓಲಗಕ್ಕೆ

---

[1] ಚೆಂದಿರ (ಕ) [2] ಶರಣಾಗು ಬೇಗದೊಳೆನಗೆ (ಚ). [3] ಕುಡುತೆ (ಗ). [4] ನಡೆ ನಡೆವಕ್ಕಿ ನಡೆಯಳೆ (ಗ ಚ) [5] ಆನಂದದಿಂ (ಗ. ಚ.).

ಶುಕ ನೀಲಕಂಠ ಮರಾಳ ಪಾರಾವತ । ಪಿಕ ಚಕ್ರವಾಕ ದೀಹಗಳ[1] ॥
ಸಕಲ ಕೋವಿದೆಯರು ಪಿಡಿದಿರ್ಪರಂದಾ । ಸುಕುಮಾರಿಯೋಲಗದೊಳಗೆ ॥ ೭ ॥

ದಂಡಿಗೆ ವೀಣೆ ವೇಣುಕ[2] ಕಿನ್ನರಿ ಸ್ವರ । ಮಂಡಲವನು ಕರದೊಳಗೆ ॥
ಪುಂಡರೀಕಾಕ್ಷಿಯರಾಂತೈದಿದರಾ । ತೊಂಡೆವಾಯಬಲೆಯೋಲಗಕೆ ॥ ೮ ॥

ಕಿತ್ತಳಿ[3]ಗಾವಿಯ ಸೀರೆಯನುಟ್ಟೆಳೆ । ಮುತ್ತಿನಾಭರಣವ ತೊಟ್ಟು ॥
ಕತ್ತುರಿಯಣ್ಪೆಟ್ಟರದೆ ಕಾಮಿನಿಯರ । ಮೊತ್ತವೈದಿದುದೋಲಗವ ॥ ೯ ॥

ಕುಟಿಲಾಳಕದ ಕುಂದಕುಟ್ಮಳರದನದ । ಘಟಕುಚದೇಣಾಂಕಗತಿಯ ॥
ಚಟುಲಾಕ್ಷಿಯರಂದೈದಿದರರ್ಧೇಂದು । ನಿಟಿಲೆಯೋಲಗವ ರಾಗದೊಳು ॥ ೧೦ ॥

ದೇವಗಿರಿಯ ದೇವಾಂಗದ ಸಂಪಗೆ । ಗಾವಿಯ ಸೀರೆಯನುಟ್ಟು ॥
ಬಾವನ್ನದಣ್ಪಿಟ್ಟು ಭಾಮಿನಿಯರು ಬಂದ । ರಾ ವಿಧುವದನೆ[4]ಯೋಲಗಕೆ ॥ ೧೧ ॥

ಬಂಧುಗೆವಾಯ ಬಗಸೆಗಣ್ಣ ಬಲ್ಸೆಱೆ । ಯಂದದ ಮೊಗದೆಳನಗೆಯ ॥
ಮಂದಗತಿಯ ಮಧುರಾಳಾಪದ ಪೆಣ್ಣ । ಗೊಂದಣವೈದಿತೋಲಗವ ॥ ೧೨ ॥

ವಚನರಚನೆಯ ನುಡಿದು ರಂಜಿಸುವ ಘಟ । ಕುಚೆಯರಿಂ ಸಕಲ ಕಲೆಯೊಳು ॥
ಪ್ರಚುರತೆವಡೆದಿರ್ದ ಕೋವಿದೆಯರುಗಳ । ನಿಚಯವೈದಿದುದೋಲಗವ ॥ ೧೩ ॥

ಕೀಲ ಕಡಗದ ಕೀಲಣೆಯುಂಗುರದ ವಜ್ರ । ದೋಲೆ ಮುತ್ತಿನ ಮೂಗುತಿಯ ॥
ಕಾಲ ಉಳಿಯ ಕಟಿಸೂತ್ರದ ಕಾಂತಾ । ಜಾಲವೈದಿದುದೋಲಗವ ॥ ೧೪ ॥

ದುಗುಲದ ದೂವಟ[5]ದೆಳೆನೀಲಿಯ ಸಂ । ಪಗೆಗಾವಿ ಬಿಳಿದು ಹಳದಿಯ ॥
ಸೊಗಸುವಣ್ಣದ ಸೀರೆಯನುಟ್ಟು ಬಂದರಾ[6] । ಬಗೆಕಾತಿಯರೋಲಗಕೆ ॥ ೧೫ ॥

---

ಬಂದರು ॥ ೮ ॥ ಕಿತ್ತಳೆಕಾವಿಬಣ್ಣದ ಸೀರೆಯನ್ನುಟ್ಟು ಎಳಮುತ್ತಿನ ಆಭರಣವನ್ನು ತೊಟ್ಟು, ಕಸ್ತೂರಿಯನ್ನು ಲೇಪಿಸಿಕೊಂಡು, ಸ್ತ್ರೀಯರು ಗುಂಪಾಗಿ ಆ ಓಲಗಕ್ಕೆ ಬಂದರು ॥ ೯ ॥ ಗುಂಗುರುಗೂದಲಿನ, ಕೋಲುಮಲ್ಲಿಗೆ ಮುಗುಳಂತಹ ಹಲ್ಲಿನ, ಕಲಶದಂತಹ ಸ್ತನದ, ಮೆಲ್ನಡೆಯ, ಓರೆಗಣ್ಣಿನ, ಸ್ತ್ರೀಯರು ಆ ಅರ್ಧಚಂದ್ರನಂತಹ ಮುಖವುಳ್ಳ ಸುಬಳಾದೇವಿಯ ಓಲಗಕ್ಕೆ ಬಂದರು ॥ ೧೦ ॥ ಹಲವರು ಹೆಂಗುಸರು ಮೇರುಗಿರಿಯಂತೆ ಕೆಂಬಣ್ಣದ ಪಟ್ಟೆ ಸೀರೆಯನ್ನೂ ಸಂಪಗೆಗಾವಿಯ ಸೀರೆಯನ್ನೂ ಉಟ್ಟುಕೊಂಡು, ಗಂಧವನ್ನು ಅನುಲೇಪಿಸಿ, ಆ ಓಲಗಕ್ಕೆ ಬಂದರು. ॥ ೧೧ ॥ ಬಂದುಗೆಯಂತೆ ಕೆಂಪಾದ ಬಾಯಿಯ, ಕುಡಿತೆಗಣ್ಣಿನ, ಪೂರ್ಣಚಂದ್ರನಂತಹ ಮುಖದ, ಮುಗುಳುನಗೆಯ, ಮೆಲ್ನಡೆಯ, ಸವಿಮಾತಿನ ಸ್ತ್ರೀಯರ ಸಮೂಹವು ಓಲಗಕ್ಕೆ ಬಂದಿತು. ॥ ೧೨ ॥ ಸೊಗಸಾದ ಮಾತುಗಳನ್ನಾಡಿ ಮನವನ್ನು ಸೆಳೆಯತಕ್ಕ, ಕಲಶದಂತಹ ಸ್ತನಗಳುಳ್ಳ ಸ್ತ್ರೀಯರಿಂದ ಕೂಡಿ, ಎಲ್ಲಾ ಕಲೆಗಳಲ್ಲಿಯೂ ಪ್ರಾವೀಣ್ಯಹೊಂದಿದ ಕೋವಿದೆಯರ ಸಮೂಹವು ಆ ಓಲಗಕ್ಕೆ ಬಂದಿತು. ॥ ೧೩ ॥ ಕೀಲಿನ ಕಡಗ, ಕೀಲಿನ ಉಂಗುರ, ವಜ್ರದ ಓಲೆ, ಮುತ್ತಿನ ಮೂಗುತಿ, ಕಾಲಿನ ಉಳಿ, ಸೊಂಟದ ಸೂತ್ರ– ಇವುಗಳಿಂದ ಕೂಡಿದ ಸ್ತ್ರೀಯರ ಸಮೂಹವು ಓಲಗಕ್ಕೆ ಬಂದಿತು ॥ ೧೪ ॥ ಪಟ್ಟೆ, ದ್ವಿವಸ್ತ್ರ, ಎಳನೀಲಿ–ಸಂಪಗೆಕಾವಿ-ಬಿಳಿ-ಹಳದಿ–ಮುಂತಾದ ಸೊಗಸಾದ ಬಣ್ಣದ ಸೀರೆಗಳನ್ನುಟ್ಟ ಸುಂದರಿಯರು ಓಲಗಕ್ಕೆ ಬಂದರು ॥ ೧೫ ॥ ನಿಬಿಡವಾದ

---

1 ವಿಹಗಳ (ಗ) ದಿಕಹಳ (ಚ) 2 × (ಗ) 3 ಕಿತ್ತುಳಿ (ಗ) ಗಿತ್ತಿಳಿ(ಚ) 4 ವಿಂದುವವದನೆ(ಗ ಚ) 5 ದೂವಟ್ಟ(ಗ) 6 ಬಂದರು (ಗ ಚ)

ತುಱುಗೆವೆಗಂಗಳ ತುಂಬಿಗುರುಳ ತುಂಬು । ವೆಱೆಮೊಗಗಳ ಬೀಗಿ ಬೆಳೆದ ॥
ಪೊಱವಾಱ ಪೊಂಬಳ್ಳಿ ಮೆಯ್ಯಬಲೆಯರಿಱಿ । ಗಿಱಿದೋಲಗವನೈದಿದರು[1] ॥ ೧೬ ॥

ಇಂತು ಬಂದವರಾ[2] ಸುಬಳಾದೇವಿಗೆ[3] । ಅಂತರಿಸದೆ ಕೈಯ ಮುಗಿದು ॥
ಸಂತಸದಿಂದೋಲಗಗೊಟ್ಟು ಮೆಱೆದರು[4] । ಕಾಂತೆ ಕಾಮನ ಕನ್ನಡಿಯೇ ॥ ೧೭ ॥

ಅಳಕಾಳಿಯಳಿಯಂಚೆ ಗತಿ ಕುವಲಯನೇತ್ರ । ನಳಿನವದನ ತನುಕಾಂತಿ ॥
ತಿಳಿನೀರಾಗಲಾ ಸತಿಯರಿಂ ಕಂಗಳಿ । ಗೆಳಸಿತಾ ಸಭೆ ಕೊಳದಂತೆ ॥ ೧೮ ॥

ಆ ಸುಕುಮಾರಿಯ ಸತಿಯರಿಕ್ಕೆಲದೊಳು । ಬೀಳುವ ಚವರವೊಪ್ಪಿದುದು ॥
ಆ ಸಭೆಯೆಂದೆಂಬ ಸರಸಿಯೊಳಾಡುವ । ಭಾಸುರ ಹಂಸಿಗಳಂತೆ[5] ॥ ೧೯ ॥

ನುಡಿಗಿಳಿ ನಡೆಯಂಚೆ ಮುಡಿಸೋಗೆ ಪೊಂಬಾಳೆ । ದೊಡೆ ತಳಿರಡಿದಳವಾಗೆ[6] ॥
ಬಿಡದೊಪ್ಪಿತಾ ಸಭೆ ವನದಂತೆ ಪೆಣ್ಗಳ । ಗಡಣದಿಂದೇನ ಬಣ್ಣಿಪೆನು ॥ ೨೦ ॥

ಅಂಗಜನೃಪತಿಯ ಪಡೆಯಂತೆ ಬಳಸಿ । ರ್ದಂಗನೆಯರ ಮಧ್ಯದೊಳು ॥
ಅಂಗನೆಯೆಸೆದಳು ಮನಸಿಜನಧಿದೇವಿ । ಸಿಂಗರವಡೆದೊಪ್ಪುವಂತೆ ॥ ೨೧ ॥

ತೊಡವಿನಿಂದಧರಾಮೃತದಿಂದ ನಿಟಿಲದಿಂ । ನಿಡುಗಣ್ಣಿಂ ನಾಭಿಯಿಂದ ॥
ಕಡುಕಾಂತಿಯಂಗದಂಗನೆಯರಿಂದದು ಪಾ । ಲ್ಗಡಲಂತೆಸೆದುದಂಬುಜಾಕ್ಷಿ[7] ॥ ೨೨ ॥

ವನದಂತೆ ವನಜಾಕರದಂತೆ ಭಾವಿಸ । ಲಿನಿಗಡಲಂತೆ ಮನ್ಮಥನ ॥
ಜನನುತ ಪೆರ್ವಲವೆಂಬಂತೆಸೆದುದಾ । ಜನಪನರಸಿಯಾಸ್ಥಾನ ॥ ೨೩ ॥

---

ಅಕ್ಷಿರೋಮಗಳುಳ್ಳ ಕಣ್ಣಿನ, ತುಂಬಿಯಂತಹ ಕೂದಲಿನ, ಪೂರ್ಣಚಂದ್ರನಂತಹ ಮುಖಗಳ, ವಿಸ್ತರಿಸಿ ಬೆಳೆದಿರುವ ನಿತಂಬದ, ಚಿನ್ನದ ಬಳ್ಳಿಯಂತಹ ಶರೀರದ ಸ್ತ್ರೀಯರು ಗುಂಪು ಗುಂಪಾಗಿ ಓಲಗಕ್ಕೆ ಬಂದರು. ॥ ೧೬ ॥ ಎಲೈ ಕಾಮನ ಕನ್ನಡಿಯಂತಿರುವ ಮಡದಿ ಚೇಳಿನಿಯೇ, ಹೀಗೆ ಆ ಸ್ತ್ರೀಯರು ಬಂದು ಸುಬಳಾದೇವಿಗೆ ನಮಸ್ಕರಿಸಿ, ಸಂತೋಷದಿಂದ ಓಲಗವನ್ನು ಕೊಟ್ಟು ಶೋಭಿಸಿದರು. ॥ ೧೭ ॥ ಆ ಸ್ತ್ರೀಯರ ತಲೆಗೂದಲೇ ತುಂಬಿ, ನಡಿಗೆಯೇ ಹಂಸ, ಕಣ್ಣು ನೈದಿಲೆ, ಮುಖವು ತಾವರೆ, ದೇಹದ ಕಾಂತಿಯೇ ಸ್ವಚ್ಛವಾದ ನೀರು—ಎಂದೆನಿಸಲು, ಹೆಂಗುಸರಿಂದ ಕೂಡಿದ ಆ ಸಭೆಯು ಕೊಳದಂತೆ ಕಾಣಿಸಿತು. ॥ ೧೮ ॥ ಸುಬಳಾದೇವಿಯ ಎರಡೂ ಕಡೆಗಳಲ್ಲಿ ಸ್ತ್ರೀಯರು ಚಾಮರವನ್ನು ಬೀಸುತ್ತಿದ್ದರು. ಆ ಬೀಸುತ್ತಿದ್ದ ಚಾಮರಗಳು ಆ ಸಭೆಯೆಂಬ ಸರೋವರದಲ್ಲಿ ಅತ್ತಿತ್ತ ಆಡುವ ಪ್ರಕಾಶಮಾನವಾದ ಹಂಸಪಕ್ಷಿಗಳಂತೆ ಕಾಣುತ್ತಿದ್ದವು. ॥ ೧೯ ॥ ಆ ಸ್ತ್ರೀಯರ ಮಾತು ಗಿಳಿ, ನಡಿಗೆಯೇ ಹಂಸ, ತಲೆಮುಡಿಯೇ ನವಿಲು, ತೊಡೆ ಹೊಂಬಾಳೆ, ಪಾದವು ಚಿಗುರು—ಎನಿಸಿದುದರಿಂದ ಸ್ತ್ರೀಸಮೂಹದಿಂದ ಕೂಡಿದ ಆ ಸಭೆಯು ಕಾಡಿನಂತೆ ಶೋಭಿಸಿದುದನ್ನು ಏನೆಂದು ವರ್ಣಿಸಲಿ! ॥ ೨೦ ॥ ಮನ್ಮಥರಾಜನ ಸೈನ್ಯವೋ ಎಂಬಂತೆ ಆವರಿಸಿಕೊಂಡಿದ್ದ ಸ್ತ್ರೀಯರ ನಡುವೆ ಸುಬಳಾದೇವಿಯು ಮನ್ಮಥನ ಅಧಿದೇವತೆಯೇ ಶೃಂಗಾರವಾಗಿ ಮೆರೆಯುವಂತೆ ಶೋಭಿಸಿದಳು. ॥ ೨೧ ॥ ಆ ಸಭೆಯು ಆಭರಣಗಳಿಂದಲೂ ಅಧರಾಮೃತದಿಂದಲೂ ಹಣೆಯಿಂದಲೂ ನೀಳುಗಣ್ಣಿನಿಂದಲೂ ಹೊಕ್ಕುಳಿನಿಂದಲೂ ಹೆಚ್ಚಾದ ಕಾಂತಿಯುಳ್ಳ ದೇಹದಿಂದಲೂ ಕೂಡಿದ ಸ್ತ್ರೀಯರಿಂದ ಕ್ಷೀರಸಾಗರದಂತೆ ಶೋಭಿಸಿತು ॥ ೨೨ ॥ ವನದಂತೆಯೂ ಸರೋವರದಂತೆಯೂ ಕ್ಷೀರಸಮುದ್ರದಂತೆಯೂ ಕಾಮಚಕ್ರೇಶ್ವರನ ದೊಡ್ಡಸೇನೆಯಂತೆಯೂ ಆ ರಾಣಿಯ ಆಸ್ಥಾನವು ಶೋಭಿಸಿತು. ॥ ೨೩ ॥ ಹೀಗೆ ಹಲವು ವಿಧದ ಶೋಭೆ

---

[1] ರಿಱಿಕಿಱಿದೋಲಗವನೈದಿದರು (ಗ) ರಿಱಿಕಿಱಿವೋಲಗಕ್ಕೈದಿದರು (ಚ). [2] ಬಂದವರು (ಕ) [3] ದೇವಿಯರಿಗೆ (ಕ). [4] ಮೆಱೆದರು (ಕ). [5] ಹಂಸಗಳಂತೆ (ಗ ಚ). [6] ತಳಿರಡಿಗಳವಾಗೆ (ಗ). [7] ಸೆದುದಂಬುಜಾಕ್ಷಿ (ಗ ಚ).

ಇಂತು ನಾನಾಪರಿಯೊಳಗೋಲಗಗೊಟ್ಟು[1] । ಸಂತಸದೊಳಗೆಸೆದಿರ್ದ ॥
ಕಾಂತೆಯ ಬಳಿಗೆ ಕಂಚುಕಿಯೋರ್ವಳೈತಂ । ದಿಂತು ಬಿನ್ನಹವ[2] ಮಾಡಿದಳು ॥ ೨೪ ॥

ಚಿತ್ರಿಗನಂಗನೆ ಕುಸುಮಾವಳಿಯೊಂದು[3] । ಚಿತ್ರಪಟವ ತಂದು ನಮ್ಮ ॥
ಚಿತ್ರದ ಬಾಗಿಲೊಳಿರ್ದಪಳೆನೆ ಮೃಗ । ನೇತ್ರೆ ಬರಿಸೆ ಬಂದಳವಳು ॥ ೨೫ ॥

ಪಟವ ಕಾಣಿಕೆಗೊಟ್ಟು ಕರವೆರಡನು ತನ್ನ । ನಿಟಲಕೆ ಚಾಚಿ ಭೀತಿಯೊಳು ॥
ಚಟುಲಾಕ್ಷಿ ಕೇಳು ಬಿನ್ನವಿಸಿದಳರ್ಧೇಂದು । ನಿಟಲೆಗೆ ವಿನಯದೊಳಿಂತು ॥ ೨೬ ॥

ದೇವಿ ಚಿತ್ತೈಸಿದಱೊಳು ನಾನಾ ರಸ । ಭಾವವಿರ್ದಪುದೊಮ್ಮೆ ನೀನು ॥
ಭಾವಿಸಿ ನೋಡೆಂದು ಪೇಳಿದವಳಿಗಿತ್ತ । ಳಾ ವಿಧುವದನೆ[4] ಪಾಗುಡವ ॥ ೨೭ ॥

ಅತ್ತಲವಳ ಕಳುಹಿಸಿ ಮಾನಿನಿ ಬಳಿ । ಕಿತ್ತಲಾ ಪಟವನು ಬಿಡಿಸಿ ॥
ಬಿತ್ತರದಿಂ ನೋಡುತಿರಲದಱೊಳಗೊಂ । ದುತ್ತಮ ವನವಿರಲಲ್ಲಿ ॥ ೨೮ ॥

ಕೋಡ ಮೊನೆಯೊಳೊರಸುತ[5] ಗಲ್ಲವನದು । ನೀಡಿ ಸೊಂಡಿಲ ಮೈದಡವಿ[6] ॥
ಓಡುವ ಮಱಿಯೊಡನಾಡುವ[7] ಕರಿಣಿಯ । ನೋಡಿದಳಾ ಪಟದೊಳಗೇ ॥ ೨೯ ॥

ಮೊಲೆಯೂಡಿ ಕಾಲೆತ್ತಿ ನೆಕ್ಕುತ ಕೆಲದೊಳು[8] । ತೊಲಗದ ಸುತಮೋಹದೊಳು ॥
ನಲಿದಾಡುವ ಮಱಿಯೊಡನಿರ್ಪ ಹುಲ್ಲೆಯ । ಲಲನೆ ನೋಡಿದಳದಱೊಳಗೆ ॥ ೩೦ ॥

---

ಯಿಂದ ಸಭೆಯನ್ನು ಜರುಗಿಸಿ ಸಂತೋಷದಿಂದ ಇದ್ದ ಸುಬಳಾದೇವಿಯ ಬಳಿಗೆ ಬಾಗಿಲ ಕಾಯುವಾಕೆಯೋರ್ವಳು ಬಂದು ಹೀಗೆ ವಿಜ್ಞಾಪಿಸಿದಳು ॥ ೨೪ ॥ ಚಿತ್ರಗಾರನ ಮಡದಿಯಾದ ''ಕುಸುಮಾವಳಿ'' ಎಂಬಾಕೆ ಒಂದು ಚಿತ್ರಪಟವನ್ನು ತೆಗೆದುಕೊಂಡು ಬಂದು ಬಾಗಿಲ ಹೊರಗೆ ನಿಂತಿದ್ದಾಳೆ—ಎಂದು ಕಂಚುಕಿಯು ಹೇಳಲು ಸುಬಳಾದೇವಿಯು ಆಕೆಯನ್ನು ಬರಮಾಡಿಸಿದಳು ॥ ೨೫ ॥ ಕುಸುಮಾವಳಿಯು ಮಹಾರಾಣಿಗೆ ಚಿತ್ರಪಟವನ್ನು ಕಾಣಿಕೆಯಿತ್ತು, ಎರಡು ಕೈಗಳನ್ನೂ ಮುಗಿದು, ಭಯವಿನಯಗಳಿಂದ ಹೀಗೆ ವಿಜ್ಞಾಪನೆಮಾಡಿದಳು. ॥ ೨೬ ॥ ಎಲೇ ದೇವಿಯೇ, ಚಿತ್ತೈಸು. ಈ ಚಿತ್ರಪಟದಲ್ಲಿ ಹಲವಾರು ರಸಭಾವಗಳಿವೆ ಒಮ್ಮೆ ನೀನು ಇದನ್ನು ಮನಸ್ಸಿಟ್ಟು ನೋಡು—ಎಂದಳು ಆಗ ಸುಬಳೆಯು ಆಕೆಗೆ ಉಡುಗೊರೆಯನ್ನಿತ್ತು ಮನ್ನಿಸಿದಳು ॥ ೨೭ ॥ ಕುಸುಮಾವಳಿಯನ್ನು ಕಳುಹಿಸಿಕೊಟ್ಟನಂತರ ರಾಣಿಯು ಆ ಪಟವನ್ನು ಬಿಚ್ಚಿ, ವಿವರವಾಗಿ ನೋಡತೊಡಗಿದಳು. ಆಗ ಅದರಲ್ಲಿ ಒಂದು ಉತ್ತಮವಾದ ವನವು ಕಾಣಿಸಿತು ॥ ೨೮ ॥ ಆ ವನದಲ್ಲಿ ಒಂದು ಹೆಣ್ಣಾನೆಯು ತನ್ನ ದಂತದಿಂದ ತನ್ನ ಮರಿಯ ಗಲ್ಲವನ್ನು ಒರಸುತ್ತಲೂ ಸೊಂಡಿಲನ್ನು ನೀಡಿ ಮೈವಡವುತ್ತಲೂ ಇದ್ದುಕೊಂಡು, ಓಡಾಡುವ ತನ್ನ ಮರಿಯೊಡನೆ ಆಡುತ್ತಿರುವಂತೆ ಕಾಣಿಸಿತು. ॥ ೨೯ ॥ ಇದಲ್ಲದೆ ಹೆಣ್ಣು ಜಿಂಕೆಯೊಂದು ಕಾಲನ್ನೆತ್ತಿ ಮರಿಗೆ ಮೊಲೆಯೂಡುತ್ತಲೂ ನೆಕ್ಕುತ್ತಲೂ ಮರಿಯ ಮೇಲಿನ ಪ್ರೀತಿಯಿಂದ ಅದರ ಬಳಿಯಿಂದ ಬಿಟ್ಟಗಲದೆ ನಲಿದಾಡುತ್ತಲೂ ಇರುವುದನ್ನೂ ಆಕೆ ಆ ಚಿತ್ರದಲ್ಲಿ ನೋಡಿದಳು ॥ ೩೦ ॥ ಮರಿಯು ಹೋದಾಗ ತಾನೂ ಹೋಗುತ್ತಲೂ ಚಿಗುರನ್ನು ಮೇದಾಗ ತಾನೂ ಮೇಯುತ್ತಲೂ ನೀರು ಕುಡಿಯುತ್ತಲೂ ಮರಿಯನ್ನು ಕಾದುಕೊಂಡು ಪ್ರೀತಿಸತಕ್ಕ

---

[1] ಸಕಲ ವೈಭವದೊಳೋಲಗಗೊಟ್ಟು (ಗ ಚ) [2] ಬಿನ್ನಪವ (ಗ) [3] ಕುಸುಮಾವತಿಯೊಂದು (ಚ) [4] ವಿಂದುವದನೆ (ಚ) [5] ಮೊಲೆಯೊಳೊರಸುತ (ಚ) [6] ಸೊಂಡಿಲನೆತ್ತಿದಡವಿ (ಕ) ಸೊಂಡಿಲ ಮೆಯಿದಡವಿ (ಗ) [7] ಯೊಡನೋಡುವ (ಗ ಚ) [8] ಕೆಲದಿಂದ (ಗ,ಚ)

ಪೋದೊಡೊಡನೆ ಪೋಪುದು ಮಱಿ ತಳಿರನು । ಮೇದೊಡೆ ಮೇದು ನೀರ್ಗುಡಿದು ॥
ಕಾದೋವುವ ಕರಿಣಿಯ ನಿಟ್ಟಿಸಿದಳಂ । ದಾ ದೇವಿಯಾ[1] ಪಟದೊಳಗೆ ॥ ೩೧ ॥

ತೊರೆದ ಮೊಲೆಯನುಣ್ಣುತ ಸೋರುವ ಪಾಲ । ನೊರೆಯ ಚಪ್ಪಿರಿದು[2] ನಲಿವುತ ॥
ಪರಿಪರಿದಾಡುವ ಮಱಿವುಲ್ಲೆಗಳನಾ । ತರುಣಿ ನೋಡಿದಳದಱೊಳಗೆ ॥ ೩೨ ॥

ಗಱಿಯಗಲಿಸಿ ಗುಟುಕಿತ್ತು[3] ಮುದ್ದಿಸಿ ತನ್ನ । ಮಱಿಗೆ ನರ್ತನವ ಕಲಿಸುವ ॥
ಗಱಿಗಣ್ಣಕ್ಕಿಯ ನೋಡಿದಳವಳಲ್ಲಿ । ನೆಱೆವೆಱೆಮೊಗದ ಲತಾಂಗಿ ॥ ೩೩ ॥

ಚಂಚುವಿಂ ಗುಟುಕಿತ್ತು[4] ಮಱಿಯ ಪೊರೆವ ರಾ । ಯಂಚೆಯ[5] ಕುಸುಮರಸವನು ॥
ಚಂಚರೀಕಗಳಿತ್ತು ಮಱಿಯನೋವುದನಂ । ದಂಚೆಗಮನೆ ಕಂಡಳಲ್ಲಿ ॥ ೩೪ ॥

ಈವುತ ಗುಟುಕ[6] ಕೆಲವು ಕೆಲಮಱಿಗಳ । ನೋವುತಂಗವ ಚಂಚುವಿಂದ ॥
ನೇವರಿಸುತ[7] ಕೆಲ ವಿಹಗಗಳಿರಲಲ್ಲಿ । ಯಾ ವಿಧುವದನೆ[8] ನೋಡಿದಳು ॥ ೩೫ ॥

ಇಂತಿವ ಕಾಣಲೊಡನೆ ಮನದೊಳಗತಿ । ಚಿಂತೆ ಮೊಳೆತುದಂದು[9] ತನಗೆ ॥
ಸಂತಾನವಿಲ್ಲದ ಕಾರಣದಿಂ ನೊಂ । ದಿಂತು ಚಿಂತಿಸಿದಳೆದೆಯೊಳು[10] ॥ ೩೬ ॥

ಅಡವಿಯ ಮಿಗಪಕ್ಕಿಗಳು ತಮ್ಮ ಮಕ್ಕಳ[11] । ಸಡಗರದಿಂದಿವೆಯದಱಿಂ ॥
ಕಡೆಯಾದುದೆನ್ನೀ ಜನ್ಮವೆಂದತಿನೊಂದು । ನುಡಿದಳು ತನ್ನೊಳಿಂತೆಂದು ॥ ೩೭ ॥

ಪಗೆಯರಳುಕರಿಹಪರದ ಸಂತಸದ[12] ಪೆ । ರ್ಚುಗೆಯಿಲ್ಲ ಸವತಿಯರುಗಳ ॥
ನಗೆಗೆಡೆಯಾದುದೆನ್ನೀ ಬದುಕೆಂದಂದು । ಮಿಗೆ ನೊಂದು ನುಡಿದಳಿಂತೆಂದು ॥ ೩೮ ॥

---

ಹೆಣ್ಣಾನೆಯನ್ನು ಆಕೆ ಆ ಪಟದಲ್ಲಿ ನೋಡಿದಳು ॥ ೩೧ ॥ ಹಾಲುತುಂಬಿದ ಮೊಲೆಯನ್ನು ಉಣ್ಣುತ್ತಲೂ, ಸೋರತಕ್ಕ ಹಾಲಿನ ನೊರೆಯನ್ನು ಚಪ್ಪರಿಸುತ್ತಲೂ ನಲಿದಾಡುತ್ತಲೂ ಅತ್ತಿತ್ತ ಸಂಚರಿಸುತ್ತಲೂ ಇದ್ದ ಹುಲ್ಲೆಮರಿಗಳನ್ನು ಆಕೆ ಆ ಪಟದಲ್ಲಿ ನೋಡಿದಳು. ॥ ೩೨ ॥ ಆ ಚಿತ್ರಪಟದಲ್ಲಿ ನವಿಲು ತನ್ನ ರೆಕ್ಕೆಗಳನ್ನು ಬಿಡಿಸಿ, ತನ್ನ ಮರಿಗೆ ಗುಟುಕಿತ್ತು, ಮುದ್ದಿಸಿ, ಕುಣಿಯಲು ಕಲಿಸುತ್ತಿತ್ತು. ಚಂದ್ರಮುಖಿಯಾದ ಸುಬಳೆಯು ಇದನ್ನು ಅಲ್ಲಿ ನೋಡಿದಳು. ॥ ೩೩ ॥ ಕೊಕ್ಕಿನಿಂದ ಗುಟುಕನ್ನಿತ್ತು ತನ್ನ ಮರಿಯನ್ನು ಸಲಹುವ ಅರಸಂಚೆ (ರಾಜಹಂಸೆ) ಯನ್ನೂ ತನ್ನ ಎಳಮರಿಗಳಿಗೆ ಹೂವಿನ ಸವಿಜೇನನ್ನು ಉಣ್ಣಿಸಿ ಅವನ್ನು ಪ್ರೀತಿಸುವ ತುಂಬಿಗಳನ್ನೂ ಆಕೆ ಅಲ್ಲಿ ನೋಡಿದಳು. ॥ ೩೪ ॥ ಕೆಲವು ಹಕ್ಕಿಗಳು ತಮ್ಮ ಮರಿಗಳಿಗೆ ಗುಟುಕನ್ನು ಕೊಡುತ್ತಲೂ ಕೆಲವು ಪ್ರೀತಿ ತೋರಿಸುತ್ತಲೂ ಕೆಲವು ಮರಿಗಳ ಅವಯವಗಳನ್ನು ಕೊಕ್ಕಿನಿಂದ ತಿಮ್ಮುತ್ತಲೂ ಇರುವುದನ್ನು ಆಕೆ ನೋಡಿದಳು. ॥ ೩೫ ॥ ಇವನ್ನೆಲ್ಲ ಕಂಡೊಡನೆ ಸುಬಳಾದೇವಿಯ ಮನದಲ್ಲಿ ದುಃಖವು ಮೂಡಿಬಂತು. ಆಕೆಯು ತನಗೆ ಮಕ್ಕಳಿಲ್ಲದ ಕಾರಣದಿಂದ ನೊಂದು ಮನಸ್ಸಿನಲ್ಲೇ ಹೀಗೆ ಚಿಂತಿಸಿದಳು. ॥ ೩೬ ॥ ಕಾಡಿನಲ್ಲಿರುವ ಮೃಗಪಕ್ಷಿಗಳು ಕೂಡ ತಮಗೆ ಮಕ್ಕಳಿವೆಯೆಂಬ ಸಡಗರವನ್ನು ತೋರ್ಪಡಿಸುತ್ತಿವೆ. ನನ್ನ ಜನ್ಮವಾದರೋ ಅವಕ್ಕಿಂತಲೂ ಕೀಳಾಯಿತಲ್ಲವೆ! ಎಂದು ನೊಂದು ಆಕೆ ಹೀಗೆ ಹೇಳಿಕೊಂಡಳು. ॥ ೩೭ ॥ ಮಕ್ಕಳಿಲ್ಲದುದರಿಂದ ನನಗೆ ವೈರಿಗಳು ಹೆದರರು, ಈ

---

[1] ಅಂದಾಮದಯಾ (ಕ). [2] ಚಪ್ಪರಿದು (ಗ). [3] ಗಱಿಯ ಸಾಗಿಸಿ ಕುಟುಕಿತ್ತು (ಚ) [4] ಕುಟುಕಿತ್ತು (ಗ ಚ.). [5] ಬಾರಪ ಹೊತ್ತು ದಂಚೆಯ (ಕ). [6] ಕುಟುಕ (ಗ ಚ) [7] ಸಾವಣಿಸುತ (ಚ) [8] ಯಾವಿಂದುವದನೆ (ಚ). [9] ಚೀರೆಯೊಳ್ಮೈತಂದು (ಗ) ಚಿಂತೆ ಮೊಳೆತುದದು (ಚ). [10] ಚಿಂತಿಸಿವಳಾಳಿಯೊಳು (ಕ). [11] ಮಕ್ಕಳು (ಚ) [12] ಪಗೆಯರಧಿಕದಿಹಪರ ಪಂತಸದ (ಕ)

ಬಾಲಕ ಬಾಬಾಲೆಯರ ಲೋಲಾಕ್ಷಿಗೆ । ಸೋಲವನಿರದೀವುತೆನಗೆ ॥
ಲೀಲೆಯ ಪುಟ್ಟಿಪ ಮಗನೆಂದಿಗಹನೆಂದ । ಳಾ[1] ಲಲಿತಾಂಗಿ ಮನದೊಳು ॥ ೩೯ ॥

ಸಿಂಗವೇ ಬಾರರಿರಾಯರೆಂಡೆಂಬ ಮ । ತಂಗಜ[2]ಗಳಿಗಂಗನೆಯರ ॥
ಕಂಗಳ ಸಿರಿಯೆ ಬಾಬಾರೆಂದು ಕುವರನ । ಹಿಂಗದೆತ್ತುವುದೆಂದಿಗಹುದೋ ॥ ೪೦ ॥

ಮುತ್ತನಿತ್ತಿರದಾಲಿಂಗಿಸಿಯೆನ್ನಯ । ಚಿತ್ತವನುಱೆ ಸೂಱೆಗೊಂಬ ॥
ಮುತ್ತೆ ಬಾ ಮಱಿಯಾನೆ ಬಾರೆಂದು ಕುವರನ । ನೆತ್ತುವ ಸೈಪೆಂದಿಗಹುದೋ ॥ ೪೧ ॥

ತೋರ ಮೊಲೆಗಳೊಳು ತೊರೆದಿರ್ದ ಪಾಲನು । ಸೇರಿ ಸೇವಿಸುತೆನ್ನಕೊರಲ ॥
ಹಾರವ ಹಱಿದೀಡಾಡುವ ಕುವರನಾ । ಕಾರವನೆಂದು ನಿಟ್ಟಿಪೆನೋ ॥ ೪೨ ॥

ಮೊಲೆಯ ಮೇಲಣ ಮೇಲುದ ತೊಲಗಿಸಿ ಜ । ಕ್ಕುಲಿಸಿ[3] ನಗುತ ಮೊಗನೋಡಿ ॥
ನಲಿನಲಿದಾಡುವ ಕುವರನನೆತ್ತುವ । ಲಲನೆಯ ಭಾಗ್ಯವಿನ್ನೆಂತೋ ॥ ೪೩ ॥

ಬಂಜೆಗುಲವ[4] ಪಿಂಗಿಸಿಯೆನ್ನನು ಪಿಂದೆ । ಬಂಜೆಯೆಂದೆಂಬರ ನುಡಿಯ ॥
ಬಂಜೆಮಾಡುವ ಪರಮನ ಪೂಜೆಯ[5] ಮಾಳ್ಪ । ಮಂಜುಳರೂಪನೆಂದಹನೋ ॥ ೪೪ ॥

ತೊಡೆಗೈದಿಯೆನ್ನ ತೊರೆದ ಮೊಲೆಯೊಂದನು । ಪಿಡಿದುಣುತೊಂದು ಮೊಲೆಯನು ॥
ಕುಡಿವೆರಲಿಂ[6]ದೊರಸುತಲಿರ್ಪ ಕುವರನ । ಸಡಗರವೆನಗೆಂದಿಗಹುದೋ ॥ ೪೫ ॥

---

ಲೋಕ ಪರಲೋಕಗಳಲ್ಲಿ ಸಂತೋಷದ ಹೆಚ್ಚಳವೆಂಬುದು ಇಲ್ಲವಾಗುವುದು, ನನ್ನ ಜೀವನವು ಸವತಿಯರ ನಗೆಗೆ ಗುರಿಯಾಯಿತು! ಎಂದು ಆಕೆ ನೊಂದು ಹೇಳಿಕೊಂಡಳು ॥ ೩೮ ॥ ಬಾಲಕಬಾಲಿಕೆಯರ ಚಂಚಲವಾದ ಕಣ್ಣನ್ನು ಸೆಳೆಯುತ್ತ ನನಗೆ ಸಂತೋಷವನ್ನು ಹುಟ್ಟಿಸತಕ್ಕ ಮಗನು ನನಗೆ ಯಾವಾಗ ಆಗುವನೋ! ಎಂದು ಆಕೆ ಮನದಲ್ಲಿ ಹೇಳಿಕೊಂಡಳು ॥ ೩೯ ॥ ವಿರೋಧಿರಾಜರೆಂಬ ಆನೆಗಳಿಗೆ ಸಿಂಹಸದೃಶನಾದ ಮಗನೇ ಬಾರೋ, ನಾರಿಯರ ಕಣ್ಣಿನ ಸಿರಿಯೇ ಬಾರೋ ಬಾರೋ–ಎನ್ನುತ್ತ ಮಗನನ್ನು ಎತ್ತಿಕೊಳ್ಳುವ ಸಂದರ್ಭ ಯಾವಾಗ ನನಗೆ ಕೂಡಿಬರುವುದೋ! ॥ ೪೦ ॥ ಒಮ್ಮೆ ಮುದ್ದಾಡಿ, ಒಡನೆ ಅಪ್ಪಿಕೊಂಡು, ನನ್ನ ಮನವನ್ನು ಸೂರೆಗೊಳಿಸತಕ್ಕ ಮುತ್ತೇ ಬಾ, ಮರಿಯಾನೆಯೇ ಬಾರೋ ಎಂದು ಹೇಳಿಕೊಳ್ಳುತ್ತ ಮಗನನ್ನು ಎತ್ತಿಕೊಳ್ಳುವ ಪುಣ್ಯವು ನನಗೆ ಯಾವಾಗ ಕೂಡಿಬರುವುದೋ! ॥ ೪೧ ॥ ದಪ್ಪವಾದ ಮೊಲೆಗಳಲ್ಲಿ ತುಂಬಿದ ಹಾಲನ್ನು ಸೇವನೆಮಾಡುತ್ತ ನನ್ನ ಕೊರಳಲ್ಲಿರುವ ಹಾರವನ್ನು ಹಿಡಿದು ಆತ್ತಿತ್ತ ಚೆಲ್ಲಾಡುವ ಮಗನ ಆಕೃತಿಯನ್ನು ನಾನು ಯಾವಾಗ ನೋಡುವೆನೋ! ॥ ೪೨ ॥ ಮೊಲೆಯ ಮೇಲುಗಡೆಯಿರುವ ಮೇಲುದನ್ನು ಬದಿಗೆ ಸರಿಸಿ ಕಚಗುಳಿ ಮಾಡಿ ನಗುತ್ತ, ಮುಖವನ್ನು ನೋಡಿ ನಲಿದಾಡುವ ಮಗನನ್ನು ಎತ್ತುವ ಸ್ತ್ರೀಯ ಭಾಗ್ಯವು ಅದೇನು ಹಿರಿದೋ! ॥ ೪೩ ॥ ಬಂಜೆಯ ಕುಲವನ್ನು ಉದ್ಧರಿಸಿ, ನನ್ನನ್ನು ಹಿಂದಿನಿಂದ ಬಂಜೆ ಎಂದು ಹೀಸೈಸುವವರ ಮಾತನ್ನೇ ಬಂಜೆ (ನಿಷ್ಪ್ರಯೋಜಕ) ಮಾಡತಕ್ಕ ಮತ್ತು ಜಿನೇಂದ್ರನನ್ನು ಪೂಜಿಸತಕ್ಕ ಮನೋಹರ ಸ್ವರೂಪನಾದ ಮಗನು ಯಾವಾಗ ಆಗುವನೋ! ॥ ೪೪ ॥ ನನ್ನ ಮಡಿಲಲ್ಲಿ ಕುಳಿತು ಹಾಲುತುಂಬಿದ ಒಂದು ಮೊಲೆಯನ್ನು ಹಿಡಿದು ಉಣ್ಣುತ್ತ, ಇನ್ನೊಂದು ಮೊಲೆಯನ್ನು ಇನ್ನೊಂದು ಕೈಯ ಬೆರಳಿನ ತುದಿಯಿಂದ ಹಿಚಕುತ್ತ ಇರುವ ಮಗನ ಸಡಗರವನ್ನು ನಾನು ಯಾವಾಗ ಕಾಣುವೆನೋ! ॥ ೪೫ ॥ ನಕ್ಷತ್ರಗಳರಸನಾದ ಚಂದ್ರನು ನಕ್ಷತ್ರಗಳನ್ನು ಬಿಟ್ಟು ಬಂದು ಶಿಶುವಾಗಿ ನನ್ನ ಮನೆಜಗಲಿಯಲ್ಲಿ

---

[1]ಗಹನೆಂದಳಾ (ಕ) [2]ಮಾತಂಗಜ (ಗ ಚ) [3]ಮುಖದೊಲಸಿ (ಕ) [4]ಬಂಜೆಕುಲವ (ಗ) [5]ಮಾತ ಬಂಜೆಯ (ಕ) [6]ಕಿಡಿವೆರಲಿಂ (ಗ)

ತಾರಗೆಗಳ[1] ಬಿಟ್ಟು ಶೈಶವವನು ತಳ್ದು । ತಾರಾಧೀಶ ಬಂದೆನ್ನ ॥
ಚಾರು ಕುಟ್ಟಿಮದೊಳಗಾಡುವಂತೆಸೆವ ಕು । ಮಾರನೆಂದಾದಪನೆನಗೆ ॥ ೪೬ ॥

ಚಿಣ್ಣನ ನೋಡದ ಕಣ್ಣವು ಪೀಲಿಯ[2] । ಕಣ್ಣು ಜೋಗುಳ[3]ವಾಡದಿರ್ಪ ॥
ಪೆಣ್ಣ ಬಾಯದು ಪುಣ್ಣ ಬಾಯೆಂದು ಮನದೊಳಾ । ಬಣ್ಣದುಟಿಯಳಾಡಿದಳು[4] ॥ ೪೭ ॥

ಲೋಳೆ[5]ವಾಯ್ದೆಱೆಯ ಚುಂಬಿಸಿ ಸುತನನು ನಳಿ । ತೋಳೊಳಗಮುರ್ಚಪ್ಪಿಕೊಂಡು ॥
ಬಾಳುವ ಸತಿಯರ ಬಾಳು ಬಾಳಲ್ಲದ[6] । ಬಾಳಱೆ ಬಾಳೆಂದಳವಳು ॥ ೪೮ ॥

ಕಟ್ಟಿದ ದಿಟ್ಟಿದಂಡೆಯು ಕಾಗಿನ ಮೊಲೆ । ಕಟ್ಟ ನುಣ್ಪೊಸಲ್ಗೆ[7] ಕಜ್ಜಳದ ॥
ಬೊಟ್ಟನಿಂದೆಸೆವೆಳೆವಾಣತಿಯರ[8] ಸಮ । ಕಟ್ಟಿನಗೆಂದಾದಪುದೋ ॥ ೪೯ ॥

ಮಿಱುಗುವ ಕಿಱುವಲ್ಲು[9] ಮಿನುಗುವಂದದೊಳು ಬಾ । ಯ್ದೆಱೆದು ನಗುತ ತುಂಬಿಗರೆವ ॥
ನಿಱಿವಿಡಿದಾಡುವ ಕುವರನ ನಾನ ॥ ಕ್ಕಱು ಮಿಗಲೆಂದೆತ್ತುವೆನೋ ॥ ೫೦ ॥

ಅಕ್ಕಱು ಮಿಗೆಯುಮುರ್ಚಪ್ಪಿ ಬಾಯೊಳು ಬಾಯ । ನಿಕ್ಕಿ ಮುದ್ದಿಸಿ ಮುಂಡಾಡಿ ॥
ಮಕ್ಕಳ ಮನದಣಿವಂತೆತ್ತುವರ ಪು ॥ ಣ್ಯಕ್ಕಿಲ್ಲ ಸರಿಯೆಂದಳವಳು ॥ ೫೧ ॥

ಆ ಹರಿಣಾಕ್ಷಿಗಾ ಚಿಂತೆಯೆನಿಪ ಬಲು । ರಾಹು ಪಿಡಿದು ಪೀಡಿಸಲು ॥
ದೇಹವ ಮಱೆದ[10] ಮಱೆದಳೆನ್ನದಿರಿಸುತ । ಮೋಹವೇ[11]ಗೈಯದಬ್ಜಾಕ್ಷಿ ॥ ೫೨ ॥

ಉಸುರಲಮ್ಮರು ತುಟಿ ಮಿಡುಕಲಮ್ಮರು ನಿ । ಟ್ಟುಸಲಮ್ಮರೋರ್ವರೋರ್ವರನು ॥
ಹಸಗೆಡಿಸಿದುದರಸಿಯ ಚಿಂತೆ ಮರವಾ । ನಿಸರಂತಿರ್ದರಾಳಿಯರು ॥ ೫೩ ॥

---

ಆಡುವಂತೆ ಶೋಭಿಸುವ ಮಗನು ನನಗೆ ಯಾವಾಗ ಆಗುವನೋ! ॥ ೪೬ ॥ ಮಗನನ್ನು ನೋಡದ ಕಣ್ಣು ನವಿಲಿನ ಗರಿಯ ಕಣ್ಣು. ಜೋಗುಳ ಹಾಡದಿರುವ ಹೆಣ್ಣಿನ ಬಾಯಿ ಹುಣ್ಣಿನ ಬಾಯಿ—ಎಂದು ಆ ಬಣ್ಣದುಟಿಯ ಸುಬಳಾದೇವಿ ಹೇಳಿಕೊಂಡಳು. ॥ ೪೭ ॥ ಎಳಮಗನ ಜೊಲ್ಲುಸುರಿವ ತುಟಿಯನ್ನು ಮುದ್ದಿಸಿ, ತೋಳಿನಲ್ಲಿ ಹಿಡಿದು ಬಿಗಿಯಪ್ಪಿಕೊಂಡು ಬಾಳುವ ಹೆಂಗುಸಿನ ಬಾಳೇ ನಿಜವಾದ ಬಾಳೆನಿಸುವುದು. ಹಾಗೆ ಇಲ್ಲದವಳ ಬಾಳು ತುಂಡಾದ ಖಡ್ಗದಂತೆಯೇ ಸರಿ. ॥ ೪೮ ॥ ಮಗನನ್ನು ಹೆತ್ತು ಕಟ್ಟಿದ ದಿಟ್ಟಿದಂಡೆಯಿಂದಲೂ ಕಾಗುಬಟ್ಟೆಯ ಮೊಲೆಗಟ್ಟಿನಿಂದಲೂ ನುಣ್ಣಗಾದ ಹಣೆಗೆ ಇಟ್ಟ ಕಾಡಿಗೆಬೊಟ್ಟಿನಿಂದಲೂ ಶೋಭಿಸುವ ಎಳಬಾಣಂತಿಯರ ಸ್ಥಿತಿ ನನಗೆ ಯಾವಾಗ ಪ್ರಾಪ್ತವಾಗುವುದೋ! ॥ ೪೯ ॥ ಹೊಳೆಯುವ ಸಣ್ಣಹಲ್ಲು ಹೊಳೆದು ತೋರುವಂತೆ ಬಾಯಿತೆರೆದು ನಗುತ್ತ, ಆಗಾಗ ತಾಯನ್ನು ಕರೆಯುತ್ತ, ಸೀರೆಯ ನಿರಿಯನ್ನು ಹಿಡಿದು ಆಡುತ್ತ ಇರುವ ಮಗನನ್ನು ನಾನು ಹೆಚ್ಚಿನ ಅಕ್ಕರೆಯಿಂದ ಯಾವಾಗ ಎತ್ತಿಕೊಳ್ಳುವೆನೋ! ॥ ೫೦ ॥ ಮಕ್ಕಳನ್ನು ಹೆಚ್ಚಿನ ಪ್ರೀತಿಯಿಂದ ಬಿಗಿಯಪ್ಪಿ ಬಾಯಲ್ಲಿ ಬಾಯಿಯಿಟ್ಟು ಮುದ್ದಿಸಿ. ಮೈಸವರಿ, ಮನಸ್ಸಿಗೆ ತೃಪ್ತಿಯಾಗುವಂತೆ ಎತ್ತುವವರ ಪುಣ್ಯವು ಅಸಮಾನವಾದುದು—ಎಂದು ಆಕೆ ಹೇಳಿದಳು. ॥ ೫೧ ॥ ಚಿಂತೆಯೆಂಬ ರಾಹುವು ಹಿಡಿದು ಆ ಸುಬಳಾದೇವಿಯನ್ನು ಹೀಗೆ ಪೀಡಿಸುತ್ತಿರಲು ಆಕೆಯು ದೇಹವನ್ನು ಮರೆತಳೋ ಎಂಬಂತಾಗಿತ್ತು. ಮೋಹವೆಂಬುದು ಏನು ತಾನೇ ಮಾಡಲಾರದು! ॥ ೫೨ ॥ ರಾಣಿಯ ಈ ಚಿಂತೆಯಿಂದಾಗಿ ಆಕೆಯ ದಾಸಿಯರು ಏನೂ ಮಾತಾಡಲಾರರು,

---

[1] ತಾರೆಗಳನು (ಗ ಚ) [2] ಕಣ್ಣು ಪೀಲಿಯ ಕಣ್ಣು (ಕ) [3] ಜೋಗಳೆ (ಚ). [4] ಮಟಿಯೋಳಾಡಿವಳು (ಗ). [5] ಎಳಿ (ಗ) [6] ಬಾಳಲ್ಲದೆ (ಗ)
[7] ಸುಣ್ಪೊಸಲ (ಗ) × (ಚ). [8] ವೆದೆವಾಣತಿಯರ (ಗ) ವೆಳೆವಾಣಸಯರ (ಕ). [9] ಕಿಱುವಲ್ಲು (ಗ) [10] ಮಱೆದು (ಗ). [11] ಮೋಹವ (ಕ).

ಅವಳಿರವಱಿದವಳಾಳಿಯರೊಳಗೋರ್ವ । ಯುವತಿ ತವಕದೊಳೈತಂದು ॥
ಅವನಿಪಗಱುಪಲಾ ನೃಪ ಬಂದು ಸಾರ್ದನಂ । ದವಳನಂಗಜನಧಿದೇವಿ ॥ ೫೪ ॥

ಅಱಿದು ತನ್ನೆಱೆಯ ಬಂದುದನಾ ಸತಿ ಮೈ । ಮಱೆದು ತೆಱೆದ[1] ಮೇಲುದನು ॥
ಮಱಿಸುತ ಗದ್ಗದ ಕಂಠೆಯಾದಳು ಕಿರು । ಪೆಱೆನೊಸಲಬಲಾಮಣಿಯೆ ॥ ೫೫ ॥

ಮೆಱೆದವವಳ ಕಣ್ಗಳಿಂದ ನಾಸಿಕಕಂದು । ಕಱೆವಶ್ರುಬಿಂದುತತಿಗಳು ॥
ಕಿಱುಮಲ್ಲಿಗೆಯೊಳು[2] ಚಂಪಕವ ವೈರದೊಳಂದು । ಪಱಿಮೆಮಱಿಗಳಿಡುವಂತೆ[3] ॥ ೫೬ ॥

ಕಡುಸೊಗಸಿದವಾ ಮಡದಿಯ ಕುಚಕೆಡೆ । ವಿಡದುಗುವಶ್ರು[4]ಬಿಂದುಗಳು ॥
ಮಡದಿ ಕೇಳತ್ತರೆ ಮುತ್ತೊಕ್ಕವೆಂಬರ[5] । ನುಡಿಯ ನನ್ನಿಯ ಮಾಡುವಂತೆ ॥ ೫೭ ॥

ನಗೆಗಣ್ಗಳಿಂದಲವಳ ಕುಚಯುಗಕಂ । ದುಗುವಶ್ರುಕಣಗಳೊಪ್ಪಿದವು ॥
ಪಗಲೆ ಚಕೋರಿ ತಿಂಗಳ ಬಿತ್ತನೆಣೆವ । ಕ್ಕಿಗಳಿಗೀವಂತೆ[6] ಲತಾಂಗಿ ॥ ೫೮ ॥

ಸುತಮೋಹದಿಂ ಸುಬಳಾದೇವಿ ತನ್ನಾತ್ಮ । ಪತಿಯ ಮುಂದಿಂತು ಪಲುಬಲು ॥
ಅತಿಕೌತುಕವಟ್ಟು ಮನದೊಳು ಮರುಗಿ ಭೂ । ಪತಿಯಿರಲತಿದುಗುಡದಲಿ ॥ ೫೯ ॥

ಬಂದ ನೋವನು ಸರಿಗೊಂಬರೆ[7] ತನ್ನವ । ರೆಂದು ನುಡಿದ ನಾಣ್ನುಡಿಯ ॥
ಅಂದು ನನ್ನಿಯ ಮಾಡುವಂತರಸಿನ ಮೊಗ । ಕಂದಿತವಳ ಕಾಣಲೊಡನೆ ॥ ೬೦ ॥

---

ತುಟಿ ಅಲುಗಿಸಲಾರರು, ಒಬ್ಬರೊಬ್ಬರನ್ನು ನೋಡಲಾರರು ಅಷ್ಟರಮಟ್ಟಿಗೆ ಆ ಚಿಂತೆಯು ಅವರನ್ನೂ ಸೊಬಗು ಗೆಡಿಸಿತು ಅವರು ಮರದ ಮನುಷ್ಯ ಪ್ರತಿಮೆಗಳಂತಿದ್ದರು ॥ ೫೩ ॥ ಸುಬಳಾದೇವಿಯ ಇರವನ್ನು ತಿಳಿದ ದಾಸಿಯರಲ್ಲಿ ಒಬ್ಬಳು ತ್ವರೆಯಾಗಿ ರಾಜನ ಬಳಿಗೆ ಬಂದು, ಈ ಸಂಗತಿಯನ್ನು ತಿಳಿಸಲು ರಾಜನು ಒಡನೆಯೇ ರಾಣಿಯ ಬಳಿಗೆ ಬಂದನು. ॥ ೫೪ ॥ ಬಾಲಚಂದ್ರನಂತಹ ಹಣೆಯ ಚೆಳಿನಿಯೇ ಕೇಳು ತನ್ನ ಗಂಡನು ಬಂದುದನ್ನು ತಿಳಿದ ಆ ರಾಣಿಯು ತಾನು ಮೈಮರೆತಿದ್ದುದರಿಂದ ಓರೆಯಾಗಿದ್ದ ಮೇಲುದನ್ನು ಸರಿಗೊಳಿಸಿ, ಗದ್ಗದದಿಂದ ಕೂಡಿದವಳಾದಳು. ॥ ೫೫ ॥ ರಾಣಿಯ ಕಣ್ಣುಗಳಿಂದ ಮೂಗಿಗೆ ಕಣ್ಣೀರ ಹನಿಗಳು ಉದುರುತ್ತಿದ್ದುವು. ಆಗ ಅವು ಸಂಪಗೆಯ ಮೇಲಿನ ವೈರದಿಂದ ತುಂಬಿಗಳು ಅದನ್ನು ಮಲ್ಲಿಗೆ ಹೂವುಗಳೊಡನೆ ಇಡುವಂತೆ ತೋರುತ್ತಿದ್ದುವು ॥ ೫೬ ॥ ಮಡದಿ ಚೆಳಿನಿಯೇ ಕೇಳು 'ಅತ್ತರೆ ಮುತ್ತು ಒಕ್ಕವು' ಎಂಬ ಗಾದೆಮಾತನ್ನು ಸತ್ಯವಾಗಿ ಮಾಡುವ ರೀತಿಯಲ್ಲಿ ಆ ರಾಣಿಯ ಮೊಲೆಗಳಿಗೆ ಬೀಳುತ್ತಿದ್ದ ಕಣ್ಣೀರ ಹನಿಗಳು ಬಹಳ ಚೆಲುವಾಗಿ ತೋರಿದವು ॥ ೫೭ ॥ ಆಕೆಯ ನಗೆಗಣ್ಣುಗಳಿಂದ ಎರಡೂ ಮೊಲೆಗಳಿಗೆ ಬೀಳುತ್ತಿದ್ದ ಕಣ್ಣೀರ ಹನಿಗಳು ಹಗಲುಹೊತ್ತಿನಲ್ಲೇ ಚಕೋರಿಗಳು ಜೊತೆಹಕ್ಕಿಗಳಿಗೆ ಚಂದ್ರಮಂಡಲದ ಬಿತ್ತುಗಳನ್ನು ಕೊಡುವಂತೆ ಶೋಭಿಸುತ್ತಿದ್ದವು. ॥ ೫೮ ॥ ಸುಬಳಾದೇವಿಯು ಮಗನಿಲ್ಲವೆಂಬ ದುಃಖದಿಂದ ತನ್ನ ಗಂಡನ ಎದುರು ದುಃಖಿಸಲು, ರಾಜನು ಬಹಳ ಆಶ್ಚರ್ಯತಾಳಿ ತಾನು ಕೂಡ ಮನಸ್ಸಿನಲ್ಲಿ ಬಹಳ ವ್ಯಸನಪಟ್ಟನು ॥ ೫೯ ॥ ಬಂದ ನೋವನ್ನು ಸರಿಸಮವಾಗಿ ಅನುಭವಿಸುವವರೇ ತನ್ನವರು–ಎಂಬ ಗಾದೆಮಾತನ್ನು ಸತ್ಯವಾಗಿ ಮಾಡುವ ರೀತಿಯಲ್ಲಿ, ಅವಳನ್ನು ಕಂಡೊಡನೆ ರಾಜನ ಮುಖವೂ ಬಾಡಿಹೋಯಿತು. ॥ ೬೦ ॥ ಸುಖಕಷ್ಟಗಳೆರಡಕ್ಕೂ ಒಂದಾಗಿ ಸೇರಿಕೊಂಡು ಮನಸ್ಸಿಗೆ ಒಳ್ಳಿತನ್ನೇ ಕಾಣಿಸತಕ್ಕ ಸ್ತ್ರೀಯ

---

[1] ಮರದು (ಕ) [2] ಕಿಱುಮಾಳಿಗೆಯೊಳು (ಕ) [3] ಮಱಿಗಳಿದವಂತೆ (ಗ) [4] ಕೆಡೆವಿಡದೊಗುವಶ್ರು (ಗ). [5] ಮುತ್ತುಕ್ಕೊವೆಂಬರ (ಚ) ೫೭ ಈ ಪದ್ಯ ಕ ದಲ್ಲಿಲ್ಲ [6] ಚಕೋರಿತಿಯನು ಪಂಕಜ ಕಂಡು ಅಗಲದಿರುವೊಲು (ಕ) [7] ಪಂಚುಗೋಬರೆ (ಗ) ಪಚ್ಚುಗೊಂಬರೆ (ಚ)

ಲೇಸು ಕಷ್ಟಗಳಿಗೊಂದೆನಿಸಿ[1] ಕೂಡಿರ್ದತಿ । ಲೇಸ ಮನಕೆ ಗಾಣಿಸುವ[2] ॥
ಆ ಸುದತಿಯರಿಗೆ ಬರೆ ನೋವು[3] ತನುಮನ । ಮಾಸದಿಹುದೆ ಮಾನವರ ॥ ೬೧ ॥

ಒಯ್ಯನೆ ಕುಳಿತಾ ದಶರಥ ತನ್ನರೆ । ಮೆಯ್ಯೆನಿಸುವ ಕೋಮಲೆಯ ॥
ಕೈಯನೆದೆಯೊಳಿಟ್ಟುಕೊಂಡು ಕುಳ್ಳಿರಿಸಿಯಾ । ರಯ್ಯೆ[4] ನುಡಿದನಿಂತೆಂದು ॥ ೬೨ ॥

ಏಕೆ ಬಂದುದು ಬಲು ದುಗುಡ ನಿನಗೆ ಚಿಂತೆ । ಯೇಕೆ ನಿನ್ನೀ ಮೊಗಸಸಿಯ ॥
ಏಕೆ ಸಾರ್ದುದು ನಿನ್ನ ಕರಕಂಜವೆಂದವ । ನಾ ಕೋಮಲೆಯ ಕೇಳಿದನು ॥ ೬೩ ॥

ಉಸುರು ನೀನುಸುರದ ಮುನ್ನ ನಿನಗೆ ನೋವ । ನೆಸಗಿದವರ ಪಿಡಿತರಿಸಿ ॥
ಅಸುವಿಗುಬ್ಬಸವ ಮಾಡುವೆ ಮಾಡದೊಡೆ ನಿ । ನ್ನಸುವಿಗೆ ನಾ ಮುನಿದವನು ॥ ೬೪ ॥

ಪೆಂಡವಾಸಗಳಿಂದ ಬಂದುದೊ ನನ್ನಲ್ಲಿ । ಕಂಡೆಯೊ ಸವಡು ಮಾತುಗಳ ॥
ಮಂಡೆಬೇನೆಯೊ ದೇಹದಾಸರೊ ಪೇಳೆಲೆ । ಪುಂಡರೀಕಾಕ್ಷಿ ಚಿಂತೆಯನು ॥ ೬೫ ॥

ಮಂಡೆಯೆರಡು ದೇಹವೊಂದಾದ ಗಂಡಭೇ । ರುಂಡನಂದದೊಳು ಬಾಳ್ವವರ ।
ಕಂಡು ಕರುಬಿ ಕಾಣಲಾರದೆ ಪಿಸುಣರ । ತಂಡ ಕೊಂಡೆಯವ ಸೇರಿಸಿತೊ ॥ ೬೬ ॥

ಮೀಱುವರಿಲ್ಲ ನಿನ್ನನು ನಿನ್ನಾಜ್ಞೆಯ । ಮೀಱದಾನೊಳಗಾಗಿಹೆನು ॥
ನೀಱೆ ನಿನ್ನೀ ಮನದೊಳು ಬಂದು ಚಿಂತೆ ಕಾ । ಲೂಱಿದ ತೆಱನ[5] ಪೇಳೆನಗೆ ॥ ೬೭ ॥

---

ರಿಗೆ ವ್ಯಸನವು ಪ್ರಾಪ್ತವಾಯಿತೆಂದರೆ, ಅದು ಮಾನವರ ದೇಹವನ್ನೂ ಮನಸ್ಸನ್ನೂ ಮಸುಕಾಗಿಸದೆ ಇರುವುದೆ? ॥ ೬೧ ॥ ದಶರಥರಾಜನು ಮೆಲ್ಲನೆ ಕುಳಿತುಕೊಂಡು, ತನ್ನ ಅರ್ಧಾಂಗಿಯಾದ ಆಕೆಯ ಕೈಯನ್ನು ಎದೆಯಲ್ಲಿಟ್ಟುಕೊಂಡು ಕುಳಿತು ಗೊಳ್ಳಿಸಿದನು. ಆಮೇಲೆ ಆಕೆಯನ್ನು ವಿಚಾರಿಸುವುದಕ್ಕಾಗಿ ಹೀಗೆಂದನು. ॥ ೬೨ ॥ ನಿನಗೇಕೆ ಈ ರೀತಿಯ ವ್ಯಸನವು ಬಂತು? ನಿನಗೆ ಚಿಂತೆಯೇಕೆ? ನಿನ್ನ ಮುಖವೆಂಬ ಚಂದ್ರನನ್ನು ಕೈಯೆಂಬ ತಾವರೆಯು ಅದೇಕೆ ಸೇರಿಕೊಂಡಿತು? ಎಂದು ದಶರಥನು ಹೂವಿನಂತೆ ಕೋಮಲೆಯಾದ ರಾಣಿಯನ್ನು ಕೇಳಿದನು. ॥ ೬೩ ॥ ಏನಾಯಿತು ಹೇಳು. ನೀನು ಹೇಳಿ ಮುಗಿಸುವುದರೊಳಗಾಗಿಯೇ ನಾನು ನಿನಗೆ ನೋವುಂಟುಮಾಡಿದವರನ್ನು ಹಿಡಿದು ತರಿಸಿ, ಅವರ ಪ್ರಾಣಕ್ಕೆ ಉಬ್ಬಸವನ್ನುಂಟುಮಾಡುವೆನು. ಹಾಗೆ ನಾನು ಮಾಡದಿದ್ದರೆ ನಿನ್ನ ಜೀವದ ಮೇಲೆ ಸಿಟ್ಟಾದವನೆನಿಸುವೆನು. ॥ ೬೪ ॥ ಎಲೇ ಕಮಲಾಕ್ಷಿಯೆ, ನಿನಗೀ ವ್ಯಸನವು ರಾಣೀವಾಸದ ಸ್ತ್ರೀಯರಿಂದ ಬಂತೊ? ಅಥವಾ ನನ್ನಲ್ಲಿ ಕೆಟ್ಟ ಮಾತುಗಳನ್ನೇನಾದರೂ ಕೇಳಿದಿಯಾ? ತಲೆನೋವೇ? ಶರೀರದಲ್ಲಿ ಆಯಾಸವೆ? ಏನು ಹೇಳು. ॥ ೬೫ ॥ ನಾವಿಬ್ಬರೂ ತಲೆಯೆರಡು, ದೇಹವೊಂದು ಎನಿಸಿರುವ ಗಂಡಭೇರುಂಡದಂತೆ ಬಾಳುತ್ತಿರುವುದನ್ನು ಕಂಡು ಅಸೂಯೆಗೊಂಡು, ಸಹಿಸಲಾರದೆ ಯಾರೋ ಚಾಡಿಕಾರರು ಚಾಡಿಹೇಳಿದುದರಿಂದ ವ್ಯಸನಾಕ್ರಾಂತೆಯಾದೆಯಾ! ॥ ೬೬ ॥ ಎಲೇ ಮಡದಿಯೇ, ನಿನ್ನ ಆಜ್ಞೆಯನ್ನು ಮೀರಿ ವರ್ತಿಸುವವರು ಯಾರೂ ಇಲ್ಲ ನಾನು ಕೂಡ ಮೀರದೆ ನಿನ್ನ ಅಧೀನದಲ್ಲೇ ಇರುವೆನು. ಹೀಗಿರುವಾಗ ಎಲೇ ಸುಂದರಿಯೇ, ನಿನ್ನ ಮನಸ್ಸಿನಲ್ಲಿ ಚಿಂತೆಯು ಹೇಗೆ ತಾನೆ ಬಂದು ನೆಲೆಯೂರಿತು? ಹೇಳು. ॥ ೬೭ ॥ ಪೂರ್ಣಚಂದ್ರ ಸದೃಶನಾದ ನನ್ನನ್ನು ನೋಡಿ, ಮಾತನಾಡದೆ ನೀನು ಇದ್ದರೆ, ನಿನ್ನ ಸುಂದರವಾದ ಸುಮೊಗವೂ ನೀಳವಾದ ಕಣ್ಣೂ ನೈದಿಲೆ

---

[1] ಕಷ್ಟಗಳಿಗೊಂದಿನಿಸು (ಗ) ಕಷ್ಟಗಳಿಗೊಂದಿಸಿ (ಚ). [2] ಮಾನಕೆ ಕಾಣಿಸುವ (ಗ.ಚ). [3] ನೋಟ (ಗ ಚ). [4] ಯಾರಯ್ಯದೆ (ಕ). ೬೪, ೬೫, ೬೬ (ಗ ಚ.ದಲ್ಲಿಲ್ಲ). [5] ಪರಿಯ (ಚ).

ನುಡಿಯದಿರಲು ಪೂರ್ಣೇಂದುಗೆ ನೋಡದೆ । ಮಡದಿ ನೀನಿರೆ ನೈದಿಲಿಗೆ ॥
ಪಡಿಯೆನಿಸದೆ ಮಾಣವು ನಿನ್ನ ಕಡುಗಾಡಿ । ಪಡೆದ ಮುಹ್ಕೊಗ ನಿಡುಗಣ್ಣು ॥ ೭೮ ॥

ಮೂಗುವಟ್ಟಿರೆ ಮಾಗಿಯ ಕೋಗಿಲೆಗೆಣೆ । ಯಾಗದಿರದು[1] ನುಣ್ಚರವು ॥
ರಾಗದಿ ನೀ ನುಡಿ ನುಡಿಯೆಂದವಳನವ[2] । ಪೂಗಣೆಯನ ಪುಣ್ಯನಿಧಿಯೆ ॥ ೭೯ ॥

ಎಂದಿಂತು ದಶರಥನವಳ ನುಡಿಸುತಿರ । ಲಂದವಳಾಳಿಯರುಗಳ ॥
ವೃಂದದೊಳೋರ್ವಳ ಮೊಗನೋಡಲವಳಿಂ । ತೆಂದು ಬಿನ್ನಹವ[3] ಮಾಡಿದಳು ॥ ೮೦ ॥

ದೇವ ಚಿತ್ತೈಸೀ ಚಿತ್ರದೊಳಗೆ ನಿಮ್ಮ । ಭಾವವ ನೋಡುತ ಮುಂದೆ ॥
ಭಾವಜಾರಿಯ ಜಿನಮುನಿಗಳ ಭಾವವ । ಭಾವಿಸಿ ಭಾವೆ ನೋಡಿದಳು ॥ ೮೧ ॥

ಪೂಗೊಳದೊಳು ಬಿನದಿಸುತಿರೆ ನೀವಿರ್ವ[4] । ರಾಗ ಮೈಗರೆಯಲು ನೀನು[5] ॥
ರಾಗದಿ ನಿಣುಕಿ ನಿಟ್ಟಿಸಿದುದ ಕಂಡಲ್ಲಿ । ಬಾಗಿದಳ್ನಾಚಿ ಶಿರವನು ॥ ೮೨ ॥

ನಿನ್ನೊಳು ತಾ ಮುನಿದಿರಲೊಂದೆಡೆಯೊಳು । ಬೆನ್ನನೆ ಬಂದಮರ್ದಪ್ಪಿ ॥
ಮನ್ನಿಸಿ ನೀ ಚುಂಬಿಪುದ ಕಂಡು ಪುಳಕದಿಂ[6] । ಚೆನ್ನೆಯೀಯೆಡೆ[7] ಬೆಮರಿದಳು ॥ ೮೩ ॥

ಮುತ್ತೊಂದಕೆಂದು[8] ಜೂಜಾಡಿ ನೆತ್ತವ ಸೋಲೆ । ಮುತ್ತೆಂಟೆಂದು ಬಾಯಾಲೇ ॥
ತೆತ್ತುದನಾ[9] ನೃಪನಿವಳೆಂತಱಿ[10]ದಳೆಂದೆ । ನುತ್ತ ಕೌತುಕವಟ್ಟಳಿಲ್ಲಿ ॥ ೮೪ ॥

---

ಹೂವಿಗೆ ಹೇಗೆ ತಾನೆ ಸರಿಯೆನಿಸುವವು? ॥ ೭೮ ॥ ನೀನು ಮಾತಾಡದೆ ಇದ್ದರೆ, ನಿನ್ನ ನಯವಾದ ಸ್ವರವು ಮಾಗಿಯ ಕೋಗಿಲೆಯ ಸ್ವರವನ್ನು ಹೋಲುವುದು. ಆದುದರಿಂದ ಪ್ರೀತಿಯಿಟ್ಟು ಮಾತಾಡು, ಮಾತಾಡು–ಎಂದು ದಶರಥನು ಹೇಳಿದನು ॥ ೭೯ ॥ ಹೀಗೆ ದಶರಥನು ರಾಣಿಯನ್ನು ಮಾತಾಡಿಸುತ್ತ ಆಕೆಯ ದಾಸಿಯರ ಸಮೂಹದಲ್ಲಿ ಒಬ್ಬಳ ಮುಖವನ್ನು ನೋಡಿದನು ಆಗ ಅವಳು ಹೀಗೆ ವಿಜ್ಞಾಪಿಸಿದಳು ॥ ೮೦ ॥ ಎಲೈ ಪ್ರಭುವೆ, ಮಹಾರಾಣಿಯು ಈ ಚಿತ್ರದಲ್ಲಿ ನಿಮ್ಮ ಭಾವಚಿತ್ರವನ್ನು ಕಂಡಳು ಹೀಗೆ ನೋಡುತ್ತ ಆಕೆ ಆಮೇಲೆ ಮನ್ಮಥ ವೈರಿಯೆನಿಸಿದ ಜಿನೇಶ್ವರನನ್ನೂ ಜೈನಮುನಿಗಳನ್ನೂ–ಆ ಚಿತ್ರಗಳು ಅಭಿವ್ಯಕ್ತಗೊಳಿಸುವ ಭಾವಗಳನ್ನೂ ಭಾವಾತ್ಮಕವಾಗಿ ನೋಡಿದಳು ॥ ೮೧ ॥ ನೀವೂ ರಾಣಿಯವರೂ ಒಟ್ಟಿಗೆ ಸರೋವರದಲ್ಲಿ ಜಲಕೇಳಿಯಾಡುತ್ತಿರುವಾಗ ನೀವು ಅಡಗಿಕೊಂಡು ಪ್ರೀತಿಯಿಂದ ಇಣಿಕಿ ನೋಡಿದುದನ್ನು ಕಂಡು, ನಾಚಿಕೆಪಟ್ಟು ತಲೆಬಾಗಿಸಿದಳು ॥ ೮೨ ॥ ನಿನ್ನ ಮೇಲೆ ಆಕೆಯು ಒಂದು ಸಂದರ್ಭದಲ್ಲಿ ಸಿಟ್ಟಾಗಲು, ನೀನು ಬೆನ್ನಿನ ಹಿಂಗಡೆಯಿಂದ ಬಂದು ಬಿಗಿಯಾಗಿ ಅಪ್ಪಿಕೊಂಡು ಆದರವನ್ನು ತೋರಿಸಿ, ಚುಂಬನಕೊಟ್ಟುದನ್ನು ಕಂಡು, ರೋಮಾಂಚವನ್ನು ತಾಳಿ ಬೆವರಿಹೋದಳು ॥ ೮೩ ॥ ಒಂದು ಮುತ್ತನ್ನು ಪಣವಾಗಿಟ್ಟು ನೀವಿಬ್ಬರೂ ಪಗಡೆಯಾಟವನ್ನಾಡಿ, ಸೋತುಹೋದಾಗ ರಾಜನು (ನೀನು) ಎಂಟು ಮುತ್ತುಗಳನ್ನೇ ಕೊಟ್ಟಂತಹ ಘಟನೆಯನ್ನು ಈಕೆ (ತನ್ನ ಸಖಿ) ಹೇಗೆ ತಿಳಿದಳೆಂದು ರಾಣಿಯು ಈ ಚಿತ್ರದಲ್ಲಿ ಆಶ್ಚರ್ಯವನ್ನು ತಾಳಿದಳು ॥ ೮೪ ॥ ಸುಬಲಾದೇವಿಯು ಚಿತ್ರವನ್ನು ನೋಡುತ್ತ ತಾವರೆಗೊಳದ ಸಮೀಪವಿರುವ ಮಾವಿನ ಮರದ ಚಪ್ಪರದಲ್ಲಿ ನಾವಿಬ್ಬರೂ ಬಹಳ ವಿನೋದದಿಂದ ಇದ್ದ ಚಿತ್ರದ ಭಾವವು

---

[1] ಯಾಗದಿರಲು (ಗ) [2] ನುಡಿಯೆದೆಯಿರವಳನವ (ಕ) [3] × (ಗ ಚ) [4] ನೀವಿರ್ದು (ಗ) [5] ಮೈಗರೆದು ನೋಡಿದಳು (ಕ)
[6] ಕಂಡಳುಕದಿಂ (ಕ) [7] ಚೆನ್ನೆಯಾಯೆಡೆ (ಚ) [8] ಮತ್ತೊಂದಾಕೆಂದು (ಚ). [9] ತೆತ್ತುದನಾಂ (ಗ) [10] ತಱಿಗಳೆಂದೆನುತ್ತ (ಗ)

ತಾವರೆಗೊಳದೊತ್ತಿನ ಸಹಕಾರದ । ಕಾವಣದೊಳು[1] ಲೀಲೆಯೊಳು ॥
ನಾವೀರ್ವರಿರ್ದ ಭಾವದ ಭಾವ ಲೇಸೆಂದು । ಭಾವಿಸಿ ಭಾವೆ ನೋಡಿದಳು ॥ ೩೫ ॥

ಮಱೆಯೊಳಗಿರೆ[2] ತಾನೇ ಪೋಗಿ ಕಂಡು ಕಾ । ಲ್ಗೆಱಗಿ ಮುನಿಸ ತಿಳುಪಿದುದ ॥
ಅಱಿದೆಂತು ಬರೆದಳೆನುತ[3] ಬಂದುಗೆವಾಯ । ತೆಱದೊಯ್ಯನೆ ನಕ್ಕಳಿಲ್ಲಿ[4] ॥ ೩೬ ॥

ಅಚ್ಚರಿಯೊಳು ನಾವಿನಿತು ಬಿನದಿಸಿದು । ದಚ್ಚರಿಯೊಳು[5] ಕಾಣದವಳು ।
ಅಚ್ಚೊತ್ತಿದಂತೀ ಪಟದೊಳು ಬರೆದಳೆಂ । ದಚ್ಚರಿವಟ್ಟು ನೋಡಿದಳು ॥ ೩೭ ॥

ನೋಡಿದಳೀಯೆಡೆಗಳೊಳು ನಲಿವುತಿಲ್ಲಿ[6] । ನೋಡಿದಳೀ ವನದೊಳಗೆ ।
ನೋಡಿದಳೀ ತಾಣದೊಳು[7] ಚಿಂತೆಯನಿಲ್ಲಿ । ಮಾಡಿದಳೇನೆಂದಱಿಯೆನು ॥ ೩೮ ॥

ಎಂದು ಬಿನ್ನವಿಸಲಾ ಪಟದೊಳಾ ತಾಣವ । ನಿಂದು ನಿಟ್ಟಿಸಿ ದಶರಥನು ॥
ನಂದನರುಗಳಿಲ್ಲದಿರಲದರಿಂ ಚಿಂತೆ । ಬಂದುದು ಸತಿಗೆಂದನವನು ॥ ೩೯ ॥

ಪಱವೆಂಗುರುಳು ಪರೆದಿರೆ ತಿದ್ದುತೊಯ್ಯನೆ । ಕಱೆವ ಕಂಬನಿಯನು ತನ್ನ ।
ಸೆಱಗಿಂದಲೊರಸಿ ಚುಬುಕಪಿಡಿದವ[8] ಮನ । ದೆಱದೊಯ್ಯನಿಂತುಸುರಿದನು[9] ॥ ೪೦ ॥

ಇನಿಯಳೆ ಕೇಳು ನಿನ್ನಿಂದ ಮೊದಲೆ ನಂ । ದನನಾಗಬೇಕೆಂಬ ಬಯಕೆ ॥
ಜನಿಯಿಸಿದುದು ನನ್ನ ಮನದೊಳಗೆಂದಾ । ವನಿತೆಯ ನ್ನೈದಡವುತವೆ ॥ ೪೧ ॥

---

ಬಹಳ ಚೆನ್ನಾಗಿದೆಯೆಂದು ಭಾವಿಸುತ್ತ ನೋಡಿದಳು. ॥ ೩೫ ॥ ಸಿಟ್ಟಿನಿಂದ ಅಡಗಿ ಕುಳಿತ ಸಂದರ್ಭದಲ್ಲಿ ರಾಜನು ಸ್ವತಃ ನನ್ನ ಸಮೀಪಕ್ಕೆ ಬಂದು ಕಾಲಿಗೆರಗಿ ಸಿಟ್ಟನ್ನು ಸಮಾಧಾನಗೊಳಿಸಿದುದನ್ನು ಈ ಚಿತ್ರಗಾರ್ತಿಯು ಹೇಗೆ ತಿಳಿದುಕೊಂಡು ಬರೆದಳು? ಎನ್ನುತ್ತ ರಾಣಿಯು ತನ್ನ ಕೆಂದುಟಿಯ ಬಾಯನ್ನು ತೆರೆದು ನಗಾಡಿದಳು. ॥ ೩೬ ॥ ನಾವಿರ್ವರೂ ಆಶ್ಚರ್ಯಕರವಾಗಿ ವಿನೋದಪಟ್ಟ ಸಂಗತಿಯನ್ನು ಕೇವಲ ಆಶ್ಚರ್ಯದಿಂದ ಕಂಡು ಸುಮ್ಮನಿರದೆ, ನಮ್ಮ ವಿನೋದದ ಘಟನೆಯನ್ನೇ ಅಚ್ಚೊತ್ತಿದಂತೆ ಈ ಪಟದಲ್ಲಿ ಬರೆದಿದ್ದಾಳೆ–ಎಂದು ರಾಣಿಯು ಆಶ್ಚರ್ಯದಿಂದ ನೋಡಿದಳು. ॥ ೩೭ ॥ ರಾಣಿಯೂ ಈ ಉದ್ಯಾನದ ಚಿತ್ರದಲ್ಲಿ ಈ ಸ್ಥಳಗಳನ್ನು ನೋಡಿದಳು. ಈ ಭಾಗಗಳನ್ನು ಸಂತೋಷದಿಂದ ನೋಡಿದಳು. ಈ ಸ್ಥಾನವನ್ನು ನೋಡಿ ವ್ಯಸನಾಕ್ರಾಂತಳಾದಳು. ॥ ೩೮ ॥ ಹೀಗೆ ರಾಜನಿಗೆ ವಿಜ್ಞಾಪನೆಯನ್ನು ಮಾಡಲು, ದಶರಥನು ಆ ಚಿತ್ರಪಟದಲ್ಲಿ ರಾಣಿಗೆ ವ್ಯಸನಕ್ಕೆ ಕಾರಣವಾದ ತಾಣವನ್ನು ನೋಡಿ, ರಾಣಿಗೆ ಮಕ್ಕಳಿಲ್ಲದ ಕಾರಣದಿಂದಲೇ ಚಿಂತೆಯುಂಟಾಯಿತು—ಎಂದು ಹೇಳಿದನು. ॥ ೩೯ ॥ ತುಂಬಿಗಳಂತೆ ಕಪ್ಪಾಗಿರುವ ಆಕೆಯ ತಲೆಗೂದಲು ಕೆದರಿರಲು, ಅದನ್ನು ಮೆಲ್ಲನೆ ಸರಿಗೊಳಿಸುತ್ತ, ಸುರಿಯುತ್ತಿರುವ ಕಣ್ಣನೀರನ್ನು ತನ್ನ ವಸ್ತ್ರದ ಸೆರಗಿನಿಂದ ಒರಸಿದನು. ಆಮೇಲೆ ಆಕೆಯ ಗಲ್ಲವನ್ನು ಹಿಡಿದು ತೆರೆದ ಮನಸ್ಸಿನಿಂದ ಆಕೆಯೊಡನೆ ಹೀಗೆಂದನು. ॥ ೪೦ ॥ ಎಲೇ ಪ್ರೀತಿಯ ಮಡದಿಯೇ, ಕೇಳು. ಮಗನು ಬೇಕೆಂಬ ಬಯಕೆಯು ನಿನ್ನಲ್ಲಿ ಹುಟ್ಟುವುದಕ್ಕೆ ಮೊದಲಾಗಿಯೇ ನನ್ನಲ್ಲಿ ಉಂಟಾಗಿದೆ–ಎಂದು ದಶರಥನು ಹೇಳಿ ಆಕೆಯನ್ನು ಮೈದಡವಿದನು. ॥ ೪೧ ॥ ಮಕ್ಕಳಿಲ್ಲವಾದರೆ ಕೀರ್ತಿಯು ಕೆಟ್ಟುಹೋಗುವುದು, ಒಳ್ಳೆಯ ಕುಲವೇ ನಾಶವಾಗುವುದು, ಸಂಪತ್ತಿಗೆಲ್ಲ ವೈರಿ

---

[1] ಕಾವಳತೊಳು (ಗ) [2] ಮಱೆಯೊಳಗಿವೆ (ಗ). [3] ಅಱಿದೆ ನಾನೆಂದಳೆನುತ (ಕ) [4] ಅಱಿದೆಂತು ಬರೆದಳೆಂದಚ್ಚರಿವಟ್ಟು ನೋಡಿದಳು (ಗ). [5] ದಚ್ಚರಿಯಿಂದ (ಚ). [6] ನಲಿವುತಲ್ಲಿ (ಗ) [7] ತಾಣವ (ಗ.ಚ) ೩೭ ಪದ್ಯ ಗ ದಲ್ಲಿಲ್ಲ. [8] ಪಿಡಿದಮರ್ದಪ್ಪಿ (ಗ) [9] ಮನದೆಱಕದೊಳಿಂತು ಪೇಳಿದನು (ಗ). ಮನದೆಱಕದೊಳಿಂತು ನುಡಿದನು (ಚ)

ಕೆಡುವುದು ಜಸವಳಿವುದು ಸತ್ಕುಲ ಧನ । ಕೊಡೆಯರರಿಗಳು ನಂದನರಾ ॥
ಪಡೆಯದರೊಡಲೊಡನಳಿವವು[1] ನಿಜವೆಂದು ನುಡಿದನರಸಿಗಂದರಸ[2] ॥ ೮೨ ॥

ಅಳಿಯದು[3] ಜಸ ಕೆಡದೊಡವೆಯನ್ವಯ ಪೆರ್ಚಿ । ಬೆಳೆವುದು ನಿಜನಂದನರ ॥
ಇಳೆಯೊಳು ಪಡೆದ ನರರಿಗದ ಬಲ್ಲೆನೆಂ । ದಿಳೆಯಾಣ್ಮನವಳೊಳಾಡಿದನು ॥ ೮೩ ॥

ಸುತ ಪೆಸರವನಾರವೆ ಬಲ್ಗೆಱೆ ಸ । ತ್ಕೃತಿ ಪುರವಭವನ[4] ಭವನ ॥
ಕ್ಷಿತಿಯೊಳಿವನು[5] ಸಪ್ತಸಂತಾನವೆಂಬರು । ಮತಿವಂತರಂಬುಜನೇತ್ರೆ ॥ ೮೪ ॥

ಇವರೊಳೊಂದೆರಡು ತ್ರಿವಿಧ ನಾಲ್ಕೈದನು । ಳ್ಳವನ ಜನ್ಮವೆ ಜನ್ಮವೆಂದು ॥
ತವೆ ಕೊಂಡಾಡುವರಿವ ಪಡೆಯದ ಮಾ । ನವನ[6] ಪಾಮರನೆಂಬರಬಲೆ ॥ ೮೫ ॥

ನಾ ಪೊತ್ತ ಭೂಭಾರವ ಪೊತ್ತು ನನ್ನ ಸಂ । ತಾಪವನಳಿವ ನಂದನರ[7] ॥
ಆ ಪೊತ್ತು ಪಡೆವೆನೆಂಬೀ ಚಿಂತೆ ನನಗಿರ । ಲೋಪಳೆ ನಿನಗೇಕಿನಿತು ॥ ೮೬ ॥

ಒಳ್ಳಿತು ನೀ ಚಿಂತಿಸಿದ ಕಜ್ಜವದು ಮು । ನ್ನುಳ್ಳುದು[8] ನನ್ನ ಮನದೊಳು ॥
ತಳ್ಳಂಕವ ಬಿಡು ನೀನೆಂದನಂದವ । ನುಳ್ಳಲರ್ದಂಬುಜನೇತ್ರೆ[9] ॥ ೮೭ ॥

ಎಂದಿವಾದಿಯ[10] ನೀತಿಮಾತುಗಳನು ತನ್ನ । ಮಂದಗಮನೆಗಾ ನೃಪತಿ ॥
ಅಂದೊರೆವುತಲಿರೆ ವೇತ್ರಧಾರಿಣಿಯೊರ್ವ । ಳಂದು ಬಿನ್ನವಿಸಿದಳಿಂತು ॥ ೮೮ ॥

---

ಗಳೇ ಒಡೆಯರಾಗುವರು ಮಕ್ಕಳನ್ನು ಪಡೆಯದವರ ದೇಹವು ಬೇಗನೆ ನಾಶವನ್ನು ಹೊಂದುವುದು ನಿಜ—ಎಂದು ದಶರಥನು ಸುಬಳಾದೇವಿಗೆ ಹೇಳಿದನು. ॥ ೮೨ ॥ ಲೋಕದಲ್ಲಿ ಮಕ್ಕಳನ್ನು ಪಡೆದ ಮಾನವರ ಕೀರ್ತಿಯು ಎಂದಿಗೂ ಅಳಿಯದು, ಸಂಪತ್ತುಗಳು ಕೆಟ್ಟುಹೋಗವು, ವಂಶವು ಹೆಚ್ಚಳವನ್ನು ತಾಳಿ ಬಳೆಯುವುದು ಈ ಸಂಗತಿಯನ್ನು ನಾನು ತಿಳಿದಿರುವೆನು—ಎಂದು ರಾಜನು ಅವಳೊಡನೆ ಹೇಳಿದನು ॥ ೮೩ ॥ ಮಗ, ಕೀರ್ತಿ, ಉದ್ಯಾನ, ದೊಡ್ಡಕೆರೆ, ಒಳ್ಳೆಯ ಕಾವ್ಯ, ಪಟ್ಟಣ, ಜಿನಾಲಯ—ಈ ಏಳನ್ನು ಸಪ್ತಸಂತಾನವೆಂದು ಬುದ್ಧಿವಂತರು ಹೇಳುತ್ತಾರೆ. ॥ ೮೪ ॥ ಇವುಗಳಲ್ಲಿ ಒಂದು, ಎರಡು, ಮೂರು, ನಾಲ್ಕು, ಐದು ಯಾವನಲ್ಲಿವೆಯೋ ಅವನ ಜನ್ಮವು ಸಾರ್ಥಕವಾದುದೆಂದು ವರ್ಣನೆಮಾಡುವರು ಎಲೈ ಮಡದಿಯೇ, ಇವನ್ನು ಪಡೆಯದಿರುವ ಮಾನವನನ್ನು ದಡ್ಡನೆಂದು ಕರೆಯುವರು. ॥ ೮೫ ॥ ನಾನು ಹೊತ್ತಿರುವ ಈ ರಾಜ್ಯಭಾರದ ಹೊರೆಯನ್ನು ಹೊತ್ತು ನನ್ನ ದುಃಖವನ್ನು ಪರಿಹಾರಮಾಡತಕ್ಕ ಮಕ್ಕಳನ್ನು ಯಾವಾಗ ಪಡೆಯುವೆನೋ ಎಂಬ ಚಿಂತೆ ನನಗಿದೆ ಹೀಗಿರುವಾಗ ನನ್ನ ಪ್ರಿಯಳೇ, ನೀನೇಕೆ ಇಷ್ಟೊಂದು ಚಿಂತಿಸುವೆ? ॥ ೮೬ ॥ ಚೆನ್ನಾಗಿ ಅರಳಿದ ತಾವರೆಯಂತೆ ಸುಂದರವಾದ ಕಣ್ಣುಳ್ಳವಳೇ, ಒಳ್ಳೆಯದು ನೀನು ಯೋಚಿಸಿರುವ ಸಂಗತಿ ಹೊಸತೇನೂ ಅಲ್ಲ, ಅದು ನನ್ನ ಮನಸ್ಸಿನಲ್ಲಿರುವಂಥದೇ ಆಗಿದೆ ಆದುದರಿಂದ ನೀನು' ವ್ಯಥೆಯನ್ನು ಬಿಡು—ಎಂದು ದಶರಥನು ಹೇಳಿದನು. ॥ ೮೭ ॥ ದಶರಥರಾಜನು ಇವೇ ಮುಂತಾದ ನೀತಿಯ ಮಾತುಗಳನ್ನು ತನ್ನ ಮಡದಿಗೆ ಹೇಳುತ್ತಿರಲು ಕಂಚುಕಿಯೋರ್ವಳು ಬಂದು

---

[1] ನಳಿದಾ (ಚ) [2] ನುಡಿದನಂದರಸಿಗಂದರಸ (ಗ) ನುಡಿದಳರಸಿಗಂದರಸ (ಚ) [3] ಬೆಳೆಯದು (ಕ) [4] ಪುರದೇವತಾ (ಗ) ಪುರು ದೇವತಾ (ಚ) [5] ಕ್ಷಿತಿಯೊಳಿದನು(ಚ) [6] × (ಚ) [7] ನಂದನನ (ಗ) [8] ಮುನ್ನುಳ್ಳದು (ಗ) ಮುನ್ನಲುಳ್ಳದು (ಚ) [9] ವದನೆ (ಗ)· [10] ಎಂದಿವರಾದಿಯ (ಚ)

ಮನುಜೇಶ್ವರ ಮನುಮಾರ್ಗ ಚಿತ್ತೈಸೆಮ್ಮ । ವನಪಾಲಕ ಬಂದು ನಮ್ಮ ॥
ಕನಕದ ಬಾಗಿಲೊಳಿರ್ದಪನೆನಲಾ । ಜನಪ ಬರಿಸೆ ಬಂದನವನು ॥ ೮೯ ॥

ಬಸವಳಿದಂಗ ಕಂದಿದ ಮೊಗ ನೊಸಲಿಂದ । ಬಸಿವ ಬೆಮರು ನಿಡುಸುಯ್ಲು ॥
ರಸವಱತಧರ[1]ವೆಸೆಯಲಾ ವನಪಾಲ । ನೆಸೆದನಂದರಸನಿದಿರೊಳು ॥ ೯೦ ॥

ಉತ್ತಮವಹ ರಸ ತೀವಿದ ಫಲಗಳ । ನಿತ್ತವನಿರದೆ ಭೀತಿಯೊಳು ॥
ಎತ್ತಿ ಕರವ ನಿಟಲಕೆ ಚಾಚಿಯಾ ಭೂ । ಪೋತ್ತಮಗಿಂತು ನುಡಿದನು[2] ॥ ೯೧ ॥

ಚಿತ್ತೈಸೆಲೆ ಭೂಪಾಲ ಚಾರಣರು ವಿ । ಯತ್ತಳದಿಂ[3] ನಮ್ಮ ವನಕೆ ॥
ಚಿತ್ತೈಸಿದರೆನೆ ಮಣಿದೇಳ್ದು ನಡೆದರಂ । ದತ್ತಣ ದೆಸೆಗೇಳಡಿಯ ॥ ೯೨ ॥

ಆ ಸಮಯದೊಳವ ತಂದ ಫಲವ ಕಂ । ಡಾ ಸುದತಿಯ ನೋಡಲರಸ ॥
ಆ ಸತಿ ಸುತನಾದವೊಲು ಮನದೊಳು ನೀರ[4] । ಸೂಸಿ ಬಿಟ್ಟಳು ಚಿಂತೆಯನು ॥ ೯೩ ॥

ಆ ನರನಾಥನಾ ವೇಳೆಯೊಳಗೆ ಪೊಯ್ಸ । ಲಾನಂದಭೇರಿಯ ಕೇಳ್ದು ॥
ಆ ನಗರದ ಜನವೈದಿತು ಹರುಷದೊ । ಳಾನದನೇನ ಬಣ್ಣಿಪೆನು ॥ ೯೪ ॥

ಬಂದರು ಗಡ ಚಾರಣ ಮುನಿಗಳು ನಮ್ಮ । ನಂದನಕಲ್ಲಿಗೆಮ್ಮರಸು ॥
ಇಂದೈದಿದಪ[5]ಗಡ ಪೋಪ ಬಾರೆಂದೆಂಬ । ಸಂದಣಿಯೆಸೆದುದಂದಲ್ಲಿ ॥ ೯೫ ॥

---

ಅವನಿಗೆ ಹೀಗೆ ವಿಜ್ಞಾಪಿಸಿದಳು. ॥ ೮೮ ॥ ಎಲೈ ಮನುವಿನ ಧರ್ಮಮಾರ್ಗವನ್ನು ಅವಲಂಬಿಸಿರುವ ರಾಜನೇ, ಕೇಳು. ನಮ್ಮ ವನಪಾಲಕನು ಬಂದು ನಮ್ಮ ಹೊಂಬಾಗಿಲಿನ ಬಳಿಯಲ್ಲಿದ್ದಾನೆ—ಎಂದನು. ಆಗ ದಶರಥನು ಅವನನ್ನು ಬರಮಾಡಲು, ಆ ವನಪಾಲಕನು ಬಂದನು. ॥ ೮೯ ॥ ಆ ವನಪಾಲಕನ ಅವಯವಗಳು ಶಕ್ತಿಗುಂದಿದ್ದವು, ಮುಖವು ಬಾಡಿಹೋಗಿತ್ತು, ಹಣೆಯಿಂದ ಬೆವರು ಸುರಿಯುತ್ತಿತ್ತು. ನಿಶ್ವಾಸವು ದೀರ್ಘವಾಗಿತ್ತು. ಕೆಳತುಟಿ ಒಣಗಿತ್ತು. ಅವನು ಬಂದು ರಾಜನ ಮುಂದೆ ನಿಂತನು. ॥ ೯೦ ॥ ವನಪಾಲನು ಶ್ರೇಷ್ಠವಾದ ರಸಭರಿತವಾದ ಹಣ್ಣುಗಳನ್ನು ಕಾಣಿಕೆಗೊಟ್ಟು, ಭಯದಿಂದ ಕೂಡಿದ ಭಕ್ತಿಯಿಂದ ಕೈಗಳನ್ನೆತ್ತಿ ಹಣೆಗೆ ತಗಲಿಸಿ, ರಾಜನಿಗೆ ಹೀಗೆಂದನು. ॥ ೯೧ ॥ ಎಲೈ ರಾಜನೇ ಕೇಳು. ಆಕಾಶದಿಂದ ಚಾರಣರು ನಮ್ಮ ವನಕ್ಕೆ ಬಂದಿರುತ್ತಾರೆ–ಎಂದು ವಂದಿಸಿ ಹೇಳಲು ರಾಜನು ಅವನೊಡನೆ ಆಗಲೇ ಎದ್ದು ಆ ದಿಕ್ಕಿಗಾಗಿ ಏಳುಹೆಜ್ಜೆ ನಡೆದನು. ॥ ೯೨ ॥ ಆ ಸಂದರ್ಭದಲ್ಲಿ ವನಪಾಲನು ತಂದ ಹಣ್ಣನ್ನು ಕಂಡ ಸುಬಳಾದೇವಿಯನು ದಶರಥನು ನೋಡಲು, ಆಕೆಯು ತನಗೆ ಗಂಡು ಮಗುವಾದಷ್ಟೇ ಸಂತೋಷವನ್ನು ತಾಳಿ. ಚಿಂತೆಯನ್ನು ಬಿಟ್ಟುಬಿಟ್ಟಳು. ॥ ೯೩ ॥ ದಶರಥನು ಆ ಸಂದರ್ಭದಲ್ಲಿ ಆನಂದಭೇರಿಯನ್ನು ಹೊಡೆಯಿಸಿದನು. ಅದರ ಶಬ್ದವನ್ನು ಕೇಳಿದೊಡನೆ ನಗರದ ಜನರೆಲ್ಲಾ ಸಂತೋಷದಿಂದ ಬರತೊಡಗಿದರು. ಅದನ್ನು ನಾನು ಏನೆಂದು ವರ್ಣಿಸಲಿ! ॥ ೯೪ ॥ ನಮ್ಮ ಉದ್ಯಾನಕ್ಕೆ ಚಾರಣಮುನಿಗಳು ಬಂದರಂತೆ! ನಮ್ಮ ಅರಸನು ಈದಿನ ಹೋಗುತ್ತಾನಂತೆ! ನಾವೂ ಹೋಗೋಣ, ಬನ್ನಿ—ಎಂದು ಹೇಳುತ್ತಿರುವ ಜನಸಮೂಹವು ಅಂದು ಅಲ್ಲಿ ಶೋಭಿಸಿತು. ॥ ೯೫ ॥ ತಟ್ಟೆಯಲ್ಲಿ ಅಕ್ಷತೆ-ತಾಂಬೂಲಗಳನ್ನು ತೆಗೆದುಕೋ. ಸುಗಂಧದ್ರವ್ಯ ಮುಂತಾದುವನ್ನು ತೆಗೆದುಕೋ. ಕರ್ಪೂರವನ್ನು ತೆಗೆದುಕೊಂಡು ಬಾ ಬಾ—ಎಂಬ ಮಾತು ಆ ಪಟ್ಟಣದ

---

[1] ರಸವರಿತಧರ (ಚ) [2] ಗಿಂತುಸುರಿದನು (ಗ) [3] ವಿಯತ್ತಣದಿಂ (ಕ) [4] ನಿರ (ಗ). [5] ಇಂದೆಯ್ದಿದಪ (ಗ).

ಚಂದನಕೆಲರಲೆಯಲು ಪಾದ ಪೋಗುಮು । ದೆಂದಂಜಿ[1] ಮುಚ್ಚಿ ಕರವನು ॥
ಇಂದುಕಾಂತದ ಮಣಿಭಾಜನದೊಳು ತಂದ । ಳಿಂದುವದನೆಯೋರ್ವಳಾಗ ॥ ೧೦೩ ॥

ಪಱಿಮೆಮಱಿಗಳು ಮಲ್ಲಿಗೆಯ ಗಂಧಕೆ ಸೋ । ಲ್ತೆಱಗಿಯೆಂಜಲಿಸುವವೆಂದು ॥
ತುಱುಗೆವೆಗಣ್ಣ ಚಂಪಕಗಂಧಿ ತಂದಳು । ಮಿಱುಪ ಪಡಲಿಗೆಯೊಳಾಂತು ॥ ೧೦೪ ॥

ಪಡಲಿಗೆಯೊಳಗಿರ್ಪ ಕಳಮಾಕ್ಷತೆಗಂ । ದೊಡನೆ ಬಂದಾ ಗಿಳಿವಿಂಡು ॥
ತುಡುಕುವವೆಂದು ಬಿಂಬಾಧರೆಯೊರ್ವಳು । ಪಿಡಿತಂದಳು ಲೀಲೆಯೊಳು ॥ ೧೦೫ ॥

ಬೀಗಿ ಬೆಳೆದ ರಂಭಾಫಲಗಳನೋರ್ವ । ಸೋಗೆಮುಡಿಯ ಕೋಮಲಾಂಗಿ ॥
ಆಗ ಪಿಡಿದು ಬಂದಳರಸಿಯೆಡೆಗೆ ಪೊಸ । ಪೂಗಣೆಯನ ಪುಣ್ಯನಿಧಿಯೆ ॥ ೧೦೬ ॥

ತರುಣಿಯರೋರ್ವರೋರ್ವರು[2] ಸೋಂಕೆ ಮುಡಿಯಿಂದ । ಸುರಿವ ಕತ್ತುರಿ ಪರಿದೊಗುವ ॥
ಸರಮುತ್ತನಱಿಯದೆ ಹರುಷದಿಂ ಬಂದರಂ । ದರಸಿಯೂಳಿಗದಬಲೆಯರು[3] ॥ ೧೦೭ ॥

ಸುಲಲಿತ ವಾರಿಕಲಶ ಕುಸುಮಾಕ್ಷತೆ । ಮಲಯಜ ಮಣಿದೀಪ ಧೂಪ ॥
ಫಲ ಚರು ಮೊದಲಾದ ಪೂಜಾದ್ರವ್ಯವ । ಲಲನೆಯರಾಂತೈದಿದರು ॥ ೧೦೮ ॥

ಮೆಲ್ಲನೆ ಸಿಂಹಾಸನವನಿಳಿದು ತನ್ನ । ವಲ್ಲಭೆವೆರಸಾ ನೃಪತಿ ॥
ನಿಲ್ಲದೆ ಪಾದಮಾರ್ಗದೊಳೈದುತಿರೆ ತಂ । ದಲ್ಲಿ ಪಿಡಿದರೊಂದು ಗಜವ ॥ ೧೦೯ ॥

ಆ ಗಜದಿರವನಿತಿನಿತೆಂದು ಪೇಳ್ವೊಡೆ[4] । ನಾಗೇಂದ್ರನಿಗಲ್ಲದುಳಿದ ॥
ಜಾಗುಮತಿಗೆ[5] ಗೋಚರವಲ್ಲವದನನು । ರಾಗದೊಳೊರವೆ ಬಲ್ಲನಿತ ॥ ೧೧೦ ॥

॥ ೧೦೩ ॥ ಒತ್ತೊತ್ತಾದ ಅಕ್ಷಿರೋಮಗಳುಳ್ಳವಳೂ ಸಂಪಗೆಯ ಕಂಮಳ್ಳವಳೂ ಆದ ಓರ್ವಳು ತುಂಬಿಮರಿಗಳು ಮಲ್ಲಿಗೆಯ ಪರಿಮಳಕ್ಕೆ ಮರುಳಾಗಿ ಬಂದು, ಎಂಜಲುಮಾಡುವವೆಂದು ಭಾವಿಸಿ, ಅದನ್ನು ಹೊಳೆಯುವ ತಟ್ಟೆಯಲ್ಲಿ ತಂದಳು ॥ ೧೦೪ ॥ ತೊಂಡೆಹಣ್ಣಿನಂತೆ ಕೆಂಪಾದ ತುಟಿಯ ಸುಂದರಿಯೋರ್ವಳು ಕಳಮೆಯ ಅಕ್ಷತೆಗಳನ್ನು ತಟ್ಟೆಯಲ್ಲಿ ತುಂಬಿಕೊಂಡು, ಆ ಅಕ್ಷತೆಗಳಿಗೆ ಗಿಳಿಗಳ ಹಿಂಡು ಬಂದು ಕುಟುಕಬಹುದೆಂದು ಎಚ್ಚರಿಕೆ ವಹಿಸಿಕೊಂಡು ತೆಗೆದುಕೊಂಡು ಬಂದಳು. ॥ ೧೦೫ ॥ ಎಲೇ ಚೇಳಿನಿಯೇ ಕೇಳು. ನವಿಲಿನಂತಹ ಮುಡಿಯುಳ್ಳ ಮೃದುವಾದ ಅವಯವವುಳ್ಳ ಓರ್ವಳು, ಚೆನ್ನಾಗಿ ಬಲಿತು ಬೆಳೆದ ಬಾಳೆಯ ಹಣ್ಣುಗಳನ್ನು ಹಿಡಿದುಕೊಂಡು ಆಗ ಅರಸಿಯ ಬಳಿಗೆ ಬಂದಳು. ॥ ೧೦೬ ॥ ಸುಬಲಾದೇವಿಯ ಆ ಊಳಿಗದ ಹೆಂಗುಸರು ರಭಸದಿಂದ ಬರುವಾಗ ಒಬ್ಬರಿಗೊಬ್ಬರು ತಾಗಲು, ಅವರ ಮುಡಿಯಿಂದ ಕಸ್ತೂರಿ ಸುರಿಯುವುದು ಅವರಿಗೆ ತಿಳಿಯದಾಯಿತು: ಹಾರಗಳ ಮುತ್ತು ಹರಿದು ಬೀಳುವುದು ಗೊತ್ತಾಗದಾಯಿತು. ಹೀಗೆ ಅವರು ಬಹಳ ಸಂತೋಷದಿಂದ ಬಂದರು. ॥ ೧೦೭ ॥ ಸುಂದರವಾದ ನೀರಿನತಂಬಿಗೆ, ಹೂವು, ಅಕ್ಷತೆ, ಗಂಧ, ರತ್ನದೀಪ, ಧೂಪ, ಫಲ, ಚರು—ಮುಂತಾದ ಪೂಜಾದ್ರವ್ಯಗಳನ್ನು ಹಿಡಿದುಕೊಂಡು ಹೆಂಗುಸರು ಬಂದರು. ॥ ೧೦೮ ॥ ದಶರಥರಾಜನು ಮೆಲ್ಲನೆ ಸಿಂಹಾಸನದಿಂದ ಕೆಳಗಿಳಿದು, ತನ್ನ ಪತ್ನೀಸಮೇತನಾಗಿ ನಡೆದುಕೊಂಡು ಬರಲು. ಅಲ್ಲಿಗೆ ಒಂದು ಆನೆಯನ್ನು ಹಿಡಿದು ತಂದರು. ॥ ೧೦೯ ॥ ಆ ಆನೆಯ ವಿಷಯವನ್ನು ಹಾಗೆ ಹೀಗೆ ಎಂದು ವರ್ಣಿಸಿ ಹೇಳಬೇಕಾದರೆ ಆದಿಶೇಷನೇ ಆಗಬೇಕಲ್ಲದೆ, ಇತರ ಅಲ್ಪಮತಿಗಳಿಗೆ ಸಾಧ್ಯವಾಗದು. ನಾನು ಅದನ್ನು ತಿಳಿದಮಟ್ಟಿಗೆ ಪ್ರೀತಿಯಿಂದ ಹೇಳುತ್ತೇನೆ. ॥ ೧೧೦ ॥

[1] ಪೋದುದೆಂದಂಜಿ (ಗ). [2] ನೋರ್ವರೋರ್ವರು (ಚ) [3] ಬಾಲೆಯರು (ಗ) [4] ಪೇಳ್ವಡೆ (ಗ) [5] ಜಾಗುಮತಿಗೆ (ಚ).

ಆ ಗಜರದನರುಚಿ ಕ್ಷಣರುಚಿ[1] ಮ । ತ್ತಾಗಜದುರುರವ ಮೊಳಗು ॥
ಆ ಗಜಮದ ವೃಷ್ಟಿಯಾಗಲಂದೆಸೆದುದಂ । ದಾ ಗಜ ಕಾರ್ಗಾಲದಂತೆ ॥ ೧೧೮ ॥

ಇಂತು ಪಣ್ಣಿದ ಗಜವೇರಿಯಂದಾ ಭೂ । ಕಾಂತ ತನ್ನಯ ಸತಿಗೂಡಿ ॥
ಸಂತಸದಿಂ ಚಾರಣರಿರ್ದ ವನಕ । ತ್ಯಂತ [2]ವೈಭವದೊಳೈದಿದನು ॥ ೧೧೯ ॥

ಶತಮುಖ ಶಚಿಗೂಡಿ ಗಜವೇರಿ ನಂದನ । ಕತಿಶಯದಿಂ ಪೋಪಂತೆ ॥
ಸತಿ ಸುಬಳಾದೇವಿ ವೆರಸಿ ಗಜವನೇರಿ । ಕ್ಷಿತಿಪತಿ ವನಕೆ ನಡೆದನು ॥ ೧೨೦ ॥

ಪೆಡೆಯು ಪಲ್ಲಟಿಸುವುದಾ ಫಣಿಪತಿ ತಲೆ । ಗೊಡಹುವವಾ ದಿಕ್ಕರಿಗಳು
ನಡುವನಳ್ಳಿಱಿವುದು ಕೂರ್ಮನಾ ಗಜವಡಿ । ಯಿಡದ ಮುನ್ನಬುಜಾಯತಾಕ್ಷಿ ॥ ೧೨೧ ॥

ಪರಿಜನ ಪುರಜನ ಬಂಧುಜನರುಗಳು[3] । ಹರುಷದಿಂ[4] ಬರೆ ನೃಪ ತನ್ನ ॥
ಪುರವನು ಪೊಱಮಟ್ಟು ಬಂದನಂದಪಗತ । ದುರಿತನಿರ್ದೆಡೆಗೇಣನೇತ್ರೆ[5] ॥ ೧೨೨ ॥

ವಂದಿಗಳುಲುಪಿಂದ[6] ಕವಿವಾದಿಗಳ[7] ಬಲು । ಸಂದಣಿಯಿಂದಡ್ಡಿಯವರು ॥
ಮುಂದುಗ್ಘಡಿಸಲಂದೈದಿದನಾ ನೃಪ । ನಂದಾ ಮುನಿಪನ ಬಳಿಗೆ ॥ ೧೨೩ ॥

ಈಕ್ಷಿಸಬಲೆ ಸಹಕಾರ ಕಾಸಾರವ । ಯೀಕ್ಷಿಸಸುಗೆಯ ಕೆಂದಳಿರ ॥
ಈಕ್ಷಿಸರುಣ[8] ಕಂಜ ಕುಮುದವನೆನುತ ಮೃ । ಗಾಕ್ಷಿಗೆ ಪೇಳುತ್ತೈದಿದನು ॥ ೧೨೪ ॥

---

ಮಳೆಯೆನಿಸಲು ಆ ಆನೆಯು ಮಳೆಗಾಲದಂತೆ ಶೋಭಿಸಿತು, ॥ ೧೧೮ ॥ ಹೀಗೆ ಅಣಿಮಾಡಿದ ಆನೆಯ ಮೇಲೆ ದಶರಥರಾಜನು ತನ್ನ ಮಡದಿಯೊದನೆ ಸವಾರಿ ಮಾಡುತ್ತ ಸಂತೋಷದಿಂದ ಮತ್ತು ಅತ್ಯಂತ ವೈಭವದಿಂದ ಚಾರಣರು ಬಂದಿದ್ದ ವನಕ್ಕೆ ತೆರಳಿದನು. ॥ ೧೧೯ ॥ ದೇವೇಂದ್ರನು ತನ್ನ ಅರಸಿಯಾದ ಶಚೀದೇವಿಯನ್ನು ಕೂಡಿಕೊಂಡು ನಂದನವನಕ್ಕೆ ವಿಶೇಷರೀತಿಯಲ್ಲಿ ಹೋಗುವಂತೆ ದಶರಥನು ತನ್ನ ಸತಿ ಸುಬಳಾದೇವಿಯೊಡನೆ ಆನೆಯ ಮೇಲೆ ಸವಾರಿ ಮಾಡುತ್ತಾ ಉದ್ಯಾನಕ್ಕೆ ತೆರಳಿದನು. ॥ ೧೨೦ ॥ ಎಲೈ ಕಮಲದಂತೆ ವಿಸ್ತಾರವಾದ ಕಣ್ಣುಳ್ಳ ಚೆಲುವಿನಿಯೇ, ಆ ಆನೆಯು ಹೊರಡಲು ಅಡಿಯಿಡುವಾಗ ಭೂಮಿಯನ್ನು ಹೊತ್ತಿರುವ ವಾಸುಕಿಯು ಭಾರವನ್ನು ಸಹಿಸಲಾರದೆ ತನ್ನ ಹೆಡೆಯನ್ನು ಬದಲಿಸುವುದು; ದಿಗ್ಗಜಗಳು ತಮ್ಮ ತಲೆಯನ್ನು ಬಾಗಿಸುವವು; ಆಮೆಯ ದೇಹದ ನಡುವಣಭಾಗವು ತಗ್ಗಿ ಹೋಗುವುದು. ॥ ೧೨೧ ॥ ಎಲೈ ಹುಲ್ಲೆಗಣ್ಣವಳೇ, ದಶರಥನು ತನ್ನ ಪರಿವಾರದವರು ಪಟ್ಟಣಿಗರು, ಬಂಧುಗಳು—ಮುಂತಾದವರೆಲ್ಲರೂ ಸಂತೋಷದಿಂದ ಜೊತೆಯಲ್ಲಿ ಬರುತ್ತಿರಲು, ಪಟ್ಟಣದಿಂದ ಹೊರಟು ಪಾಪರಹಿತನಾದ ಮುನಿಯಿದ್ದೆಡೆಗೆ ಬಂದನು. ॥ ೧೨೨ ॥ ರಾಜನು ಸ್ತುತಿಪಾಠಕರ ಮಾತುಗಳಿಂದಲೂ, ಕವಿಗಳ ವಾದಿಗಳ ಸಮೂಹದಿಂದಲೂ ಕೂಡಿದವನಾಗಿ ಮುಂದುಗಡೆಯಲ್ಲಿ ಅಧಿಕಾರಿಗಳು ಬೊಬ್ಬಿಡುತ್ತಿರಲು, ಮುನೀಶ್ವರನ ಬಳಿಗೆ ಹೋದನು. ॥ ೧೨೩ ॥ ದಶರಥನು ಹೀಗೆ ಉದ್ಯಾನಕ್ಕೆ ಹೋಗುತ್ತಿರುವಾಗ ತನ್ನ ಮಡದಿಗೆ ಒಂದೊಂದಾಗಿ ಮಾವಿನಮರ, ಸರೋವರ, ಅಶೋಕವೃಕ್ಷ, ಕೆಂಪಾದ ಚಿಗುರು, ಕೆಂದಾವರೆ, ನೈದಿಲೆ—ಮುಂತಾದುವನ್ನು ತೋರಿಸಿದನು. ॥ ೧೨೪ ॥ ಎಲೈ ಮಡದಿಯೇ, ಇಗೋ ಇಲ್ಲಿ ತೆಂಗು, ಕೆಂಪು

---

[1] ವದನರುಚಿಯೀಕ್ಷಣರುಚಿ (ಕ) ರದನರುಚಿಯೀಕ್ಷಣರುಚಿ (ಚ) [2] ವಿಭವ (ಗ ಚ) ೧೧೪ ಗ ಚ ಪ್ರಲ್ಲಿ ಈ ಪದ್ಯ ತಪ್ಪಾಗಿದೆ. [3] ಜನಂಗಳು (ಗ.ಚ) [4] ಹರಿಸದಿಂ (ಚ). [5] ಬಂದನಂದಪಗತ । ಚರಿತರಿರ್ದೆಡೆಗೇಣನೇತ್ರೆ (ಗ) [6] ಮಂದಿಗಳುಲುಪಿಂದ (ಕ). [7] ಕವಿವ ಕಾವಳ (ಕ). [8] ಈಕ್ಷಿಸಲವ (ಕ).

ಜಯಜಯ ಹರಿಹರವಂದಿತ ಪಾದನೆ । ಜಯ ಕಾಮ ಕಾಲ[1]ಭಂಜನನೆ ॥
ಜಯ ಜಯ ಹರಿ ಹರಿಕಾಯನೆ ಜಿನಪತಿ[2] । ಜಯ ಜಯ[3] ಕಾಲವಿಜಯನೆ ॥ ೧೩೨ ॥

ಎಂದಿವು ಮೊದಲಾದ ಹಲವು ಸ್ತುತಿಗಳನಾ । ನಂದದಿಂ ಸ್ತುತಿಸುತ ತನ್ನ ॥
ಮಂದಗಮನೆಗೂಡಿಯಾ ನೃಪವರನಿರ । ಲಂದಿಂದೀವರನಯನೇ ॥ ೧೩೩ ॥

ಆ ಯತಿವರನ ಕೇಶಾದಿ[4]ಪಾದಗಳು ಭೂ । ಜಾಯೆಯರಸನ ಕಣ್ಗಳಿಗೆ ॥
ಆಯತವಡೆದವೆಂತೆನೆ ಪೇಳ್ವೆನಾನಂಬು । ಜಾಯತೇಕ್ಷಣೆ ಲಾಲಿಪುದು ॥ ೧೩೪ ॥

ಸುಳಿಗುರುಳೆಸೆದವೆಂತೆನೆ ಮುನಿಪನ ಮುಖ । ನಳಿನವ ಕಂಡು ನಾಸಿಕವ ॥
ತಿಳಿದು ಚಂಪಕವೆಂದಗಿದು ಮಂಡಿಸಿದಳಿ । ಕುಳಗಳಿವೆಂಬಂದದೊಳು ॥ ೧೩೫ ॥

ಮೂಱು ಲೋಕವನೆಱಗಿಸಿಕೊಂಡಂಘ್ರಿಗೀ । ರಾಱು ತಪದೊಳು ನೆಗಳುವ ॥
ನೀಱನ ನಿಟಲಕೆ ಪೆರ್ಚುಕುಂದಿಂ[5] ಮೈ । ದೋಱುವ ಕಿಱುವೆಱೆ[6]ದೊರೆಯೇ ॥ ೧೩೬ ॥

ಎಸೆದವಾ ಮುನಿಪನ ಪುರ್ಬುಯುಗಲವಂ । ದಸಿಯುಳೆ ಜಗವನಂಡಲೆವ ॥
ಅಸಮಬಾಣನ ಬೀಳಲಿಡುವ ನೀಲದ ಪೊಚ್ಚ । ಪೊಸ ಬಡಿಕೋಲ್ಗಳಂದದೊಳು ॥ ೧೩೭ ॥

ಕೆಸಱೊಳು ಜನಿಸದ ಮಧುಪಾತ್ರವಾಗದ । ಸಸಿಗೆ ಮುನಿಯದುಷ್ಣಕರನ ॥
ಬಿಸಿಗದಿರ್ಗರಲದ ತಾವರೆಯೆಸಳಂ । ತೆಸೆದವಾ ನೃಪಗಕ್ಷಿ ಮುನಿಯ ॥ ೧೩೮ ॥

ಅಸುವೆಂಬ ವಸುವ ಮುಸುಕಿದ ಕಸವ ತನ್ನ । ಮಿಸುಪ ತಪೋಗ್ನಿಯಿಂ[7] ಸುಡುವ ॥
ಪೊಸ ಪೊಂಗೋವಿಯ ಚೆಲ್ವನೇಳಿಸುತ ಮೂ । ಗೆಸೆದುದು ಮುನಿಗೆ ಮೃಗಾಕ್ಷಿ ॥ ೧೩೯ ॥

---

ಸ್ವರೂಪನೇ ಜಿನೇಶ್ವರನೇ ಕಾಲನನ್ನು ಗೆದ್ದವನೇ ಜಯ ಜಯ. ॥ ೧೩೨ ॥ ಎಲೇ ಚೇಳಿನಿಯೇ, ಹೀಗೆ ಇವೇ ಮೊದಲಾದ ಹಲವು ವಿಧವಾದ ಸ್ತುತಿಗಳಿಂದ ಆ ಮುನೀಂದ್ರನನ್ನು ಸ್ತುತಿಸುತ್ತ ರಾಜನು ತನ್ನ ಮಡದಿಯೊಡನೆ ಇದ್ದನು. ॥ ೧೩೩ ॥ ಎಲೈ ಕಮಲದಂತೆ ಸುಂದರವಾದ ಕಣ್ಣಿನವಳೇ, ದಶರಥರಾಜನಿಗೆ ಆ ಮುನೀಶ್ವರನ ತಲೆಗೂದಲಿನಿಂದ ಪಾದದ ವರೆಗಿನ ಅವಯವಗಳು ಬಹಳ ಸೊಗಸಾಗಿ ತೋರಿದವು ಅದು ಹೇಗೆಂಬುದನ್ನು ಹೇಳುವೆನು; ಕೇಳು ॥ ೧೩೪ ॥ ಆ ಮುನೀಶ್ವರನ ಮುಖವೆಂಬ ಕಮಲವನ್ನು ಕಂಡು, ಬರುತ್ತ. ಮೂಗನ್ನು ಸಂಪಗೆ ಮುಗುಳೆಂದು ತಿಳಿದು, ಹೆದರಿ, ಕುಳಿತಂತಹ ತುಂಬಿಗಳ ಹಿಂಡೋ ಎಂಬಂತೆ ಆತನ ಗುಂಗುರು ಕೂದಲುಗಳು ಶೋಭಿಸಿದವು. ॥ ೧೩೫ ॥ ತನ್ನ ಪಾದಕ್ಕೆ ಮೂರುಲೋಕದ ಜನರಿಂದ ನಮಸ್ಕಾರಗಳನ್ನು ಪಡೆದುಕೊಂಡು ಹನ್ನೆರಡು ವಿಧದ ತಪಸ್ಸುಗಳನ್ನು ಮಾಡತಕ್ಕ ಆ ಸುಂದರಾಕಾರನ ಹಣೆಗೆ ವೃದ್ಧಿಕ್ಷಯಗಳಿಂದ ಕಾಣಿಸುವ ಬಾಲಚಂದ್ರನು ಹೇಗೆ ತಾನೇ ಸಾಟಿಯಾಗುವನು? ॥ ೧೩೬ ॥ ಲೋಕವನ್ನೇ ಪೀಡಿಸತಕ್ಕ ಕಾಮಚಕ್ರೇಶ್ವರನನ್ನು ಬಡಿದು ಕೆಡಹುವುದಕ್ಕಾಗಿ ಉಪಯೋಗಿಸುವ ಕಪ್ಪಾದ ಹೊಸ ಬಡಿಗೋಲುಗಳಂತೆ—ಆ ಮುನೀಶ್ವರನ ಎರಡು ಹುಬ್ಬುಗಳು ಶೋಭಿಸಿದವು ॥ ೧೩೭ ॥ ಆ ಮುನಿಯ ಕಣ್ಣುಗಳು ಕೆಸರಿನಲ್ಲಿ ಹುಟ್ಟದಿರುವ, ಮಧುವಿಗೆ ಪಾತ್ರ ವೆನಿಸದ, ಚಂದ್ರನಿಗೆ ಸಿಟ್ಟಾಗದ, ಸೂರ್ಯನ ಬಿಸಿಯಾದ ಕಿರಣಗಳಿಗೆ ಅರಳದಿರುವ ತಾವರೆಯ ದಳಗಳಂತೆ ರಾಜನಿಗೆ ಕಾಣಿಸಿದವು ॥ ೧೩೮ ॥ ಪ್ರಾಣವೆಂಬ ಚಿನ್ನವನ್ನು ಮುಸುಕಿಕೊಂಡಿರುವ ಕಾಳಿಕೆಯನ್ನು ತನ್ನ ಉಜ್ವಲವಾದ ತಪಸ್ಸೆಂಬ ಅಗ್ನಿಯಿಂದ ಸುಡತಕ್ಕ. ಹೊಸ ಚಿನ್ನದ ಕೋವಿಯ ಚೆಲುವನ್ನು ಮೀರಿಸುವಂತೆ ಆ ಮುನಿಯ ಮೂಗು ಶೋಭಿಸಿತು. ॥ ೧೩೯ ॥

---

[1] ಕಾಮ (ಕ)　[2] ಜಯಜಯ (ಗ ಚ)　[3] ಕಾಲ (ಗ ಚ)　[4] ಕೇಸಾದ (ಗ)　[5] ಪೆಚ್ಚುಕುಂದಿಂ (ಗ)　[6] ಕಿಱುವೆಱೆ (ಗ.ಚ.).
[7] ತಪಾಗ್ನಿಯಿಂ (ಗ).

ವರ್ಣಂಗಳ ಮೊದಲೊಳಗುಪದೇಶಿಪ । ಕರ್ನಾಟ ಲಿಪಿಯೊಳಗೆಸೆವ ।
ನಿರ್ಣೀತ[1] ಶ್ರೀಕಾರವೆಂಬಂತಾ ವರ । ವರ್ಣಿಯ ಕರ್ಣವೊಪ್ಪಿದುವು[2] ॥ ೧೪೦ ॥

ಉರುಪುಣ್ಯವೆಂದೆಂಬ ಸಿರಿವೆಣ್ಣು ನೋಡುವ । ಸುರುಚಿರಮಪ್ಪ ಕನ್ನಡಿಯು ॥
ಇರವಿನಂತವನ ಕದಪುಗಳೆಸೆದವಾ । ನರನಾಥನ ಕಣ್ಗಳಿಗೆ ॥ ೧೪೧ ॥

ಅಕಲಂಕಚರಿತನ ಪಲ್ಲವಾದರವಾ । ಮಕರಾಂಕನಿಭಗೊಪ್ಪಿದುದು ।
ಮುಕುತಿವೆಣ್ಣೆಂಬ ಪೆಣ್ಗಿಳಿಯೊಲಿದು ಕ । ರ್ದಂಕುವ ಮಾಂದಳಿರಂತಿರೆಯೆ ॥ ೧೪೨ ॥

ಮಹಿಳೆ ಕೇಳಾ ಮುನಿಪನ ರದನಗಳಾ । ಮಹಿಪನ ಕಣ್ಗೆ ರಾಜಿಪವು
ಬಹುವಿದ್ಯೆಯೆಂಬ ನಗಗಳ ಗಲ್ಲಿಸಿ[3] ಗಹ । ಗಹಿಸುವ ವಜ್ರಗಳಂತೆ ॥ ೧೪೩ ॥

ಕಲೆದಾಳದ ತನು ತನುವಾಗದ ತನು[4] । ಬಲವಾಗದ ಕುಮುದವನು
ಅಲರಿಸದಮರರೀಜಲಿಸ[5]ದಿಂದುವನಿಂದು । ಗೆಲಿದುದು ಮುಖ ಮುನಿಪತಿಯ ॥ ೧೪೪ ॥

ಅಂಗವೆಂದೆಂಬ ದುಗ್ಧಾಬ್ಧಿಯೊಳೊಗೆದು ಮ । ದಂಗಳೆಂದೆಂಬ ದಾನವರ
ಭಂಗಿಪ ಪಾಂಚಜನ್ಯವಿದೆನ್ನದಾ ಮು । ನ್ಯಂಗನ[6] ಕೊರಲನೇನೆಂಬೆ ॥ ೧೪೫ ॥

ಶಕ್ರವಂದ್ಯನ ತೋಳ್ಗಳೆಸೆದವೆಂತೆನೆ ಪಕ್ವ । ಚಕ್ರದಿಷ್ಟವನೊಲಿದೀವ
ಶಕ್ರಕುಜದ ಶಾಖೆಗಳಂತಾ ಭೂ । ಚಕ್ರದೊಡೆಯನ ಕಣ್ಗಳಿಗೆ ॥ ೧೪೬ ॥

ಅತಿ ಮೃದುತರಮಪ್ಪ ಕರತಳವೆಸೆದವಾ । ಯತಿಪತಿಯಂಗವೆಂದೆಂಬ
ಲತೆಯೊಳೊಗೆದ ಕೆಂದಳಿರಂತಾ ಜ । ಗತಿಯ ಕಣ್ಗಾಯತನೇತ್ರೆ ॥ ೧೪೭ ॥

ಕನ್ನಡದಲ್ಲಿ ಅಕ್ಷರಮಾಲೆಯನ್ನು ಕಲಿಸುವ ಪ್ರಾರಂಭದಲ್ಲಿ ಬೋಧಿಸುವ, ಕನ್ನಡ ಲಿಪಿಯಲ್ಲಿರುವ ಶ್ರೀ ಎಂಬ ಅಕ್ಷರದಂತೆ ಆ ಮುನೀಂದ್ರನ ಕಿವಿಗಳು ಶೋಭಿಸಿದವು ॥ ೧೪೦ ॥ ಶ್ರೇಷ್ಠವಾದ ಪುಣ್ಯವೆಂಬ ಲಕ್ಷ್ಮೀದೇವಿಯು ನೋಡುವ ಉಜ್ವಲವಾದ ಕನ್ನಡಿಯೋ ಎಂಬಂತೆ ಅವನ ಕೆನ್ನೆಗಳು ದಶರಥನ ಕಣ್ಣುಗಳಿಗೆ ಸೊಗಸಾಗಿ ತೋರಿದವು ॥ ೧೪೧ ॥ ಮನ್ಮಥನಂತೆ ಸುಂದರನಾದ ದಶರಥರಾಜನಿಗೆ ನಿರ್ಮಲಚಾರಿತ್ರ್ಯವುಳ್ಳವನಾದ ಆ ಮುನೀಶನ ಚಿಗುರಿನಂತೆ ಕೆಂಪಗಾದ ತುಟಿಯು ಮೋಕ್ಷಾಂಗನೆ ಎಂಬ ಹೆಣ್ಣು ಕೋಗಿಲೆಯು ಪ್ರೀತಿಯಿಂದ ಕುಟುಕುವ ಮಾವಿನ ಚಿಗುರಿನಂತೆ ಕಾಣಿಸಿತು ॥ ೧೪೨ ॥ ಎಲೈ ಚೆಲುವೆಯೇ, ಕೇಳು. ಆ ಮುನೀಶ್ವರನ ಹಲ್ಲುಗಳು ಹೆಚ್ಚಾದ ವಿದ್ಯೆ (ಸುಳ್ಳು) ಎಂಬ ಪರ್ವತಗಳನ್ನು ಕಿಡಿಮಾಡಿ ನಗುವ ವಜ್ರಾಯುಧಗಳಂತೆ ಆ ರಾಜನ ಕಣ್ಣಿಗೆ ಕಾಣಿಸಿದವು. ॥ ೧೪೩ ॥ ಆ ಮುನಿಪನ ಮುಖವು—ಕಳಂಕವಿಲ್ಲದ ಕೂಡಿರದ, ಕ್ಷೀಣತೆಯನ್ನು ಹೊಂದದ, ಒಮ್ಮೆ ಕ್ಷೀಣವಾಗಿ ಆ ಮೇಲೆ ಬಲಗೊಳ್ಳುತ್ತಾ ಹೋಗುವ ಸ್ವಭಾವವಿಲ್ಲದ, ಕುಮುದವನ್ನು ಅಂದರೆ, [illegible]ವನ್ನು ವಿಕಾಸಗೊಳಿಸದ, ದೇವತೆಗಳು ಸೇವಿಸಲಾಗದ ಚಂದ್ರನನ್ನು ಗೆಲ್ಲುವಂತಿತ್ತು ॥ ೧೪೪ ॥ ಮೋಕ್ಷಶರೀರನಾದ ಆ ಮುನಿಯ ಕೊರಳು—ಇದು ದೇಹವೆಂಬ ಕ್ಷೀರಸಮುದ್ರದಲ್ಲಿ ಹುಟ್ಟಿ, ಮದಗಳೆಂಬ ರಾಕ್ಷಸರನ್ನು ಭಂಗಗೊಳಿಸುವ ಪಾಂಚಜನ್ಯ ಶಂಖವೆನ್ನಬೇಕಲ್ಲದೆ, ಬೇರೇನೂ ಹೇಳಲಾಗುವುದಿಲ್ಲ. ॥ ೧೪೫ ॥ ಇಂದ್ರನಿಂದ ಸ್ತುತಿಸಲ್ಪಡುವ ಆ ಮುನಿಯ ಕೈಗಳು ದಶರಥನ ಕಣ್ಣುಗಳಿಗೆ ಹೇಗೆ ಕಾಣಿಸಿದವೆಂದರೆ, ಇಷ್ಟ ಮೋಕ್ಷಾರ್ಥಿಗಳಾದ ಜನರ ಬಯಕೆಯನ್ನು ಸಲ್ಲಿಸುವ ಕಲ್ಪವೃಕ್ಷದ ಕೊಂಬೆಗಳೋ—ಎಂಬಂತೆ. ॥ ೧೪೬ ॥ ಆತನ ಅತ್ಯಂತ ಕೋಮಲವಾದ ಅಂಗೈಗಳು, ಆ ಮುನೀಂದ್ರನ ಅವಯವ

[1] ವರ್ಣಿತ (ಚ) [2] ಶ್ರೀಕಾರದಂತಾ ವರವರ್ಣ । ಯಮಾರ್ಕರ್ಣದ್ವಿಯೊಪ್ಪಿದವು (ಕ) ಶ್ರೀಕಾರವಂತಾವರ । ವರ್ಣಿಯ ಕರ್ಣವೊಪ್ಪಿದವು (ಗಚ) [3] ಘಟ್ಟಿಸಿ (ಕ). [4] ತನುವನುವಾಗದ ತನುಗೆ (ಚ) [5] ದಾಕುಜರಿಸ (ಕ) [6] ಮುನಿಪುಂಗನ (ಗಚ) ೧೪೬, ೧೪೭ ಇವು ಗದಲ್ಲಿಲ್ಲ

ವರವರ್ಣಿಯ ಕರದುಗುರುಗಳೆಸೆದವು । ದುರಿತವೆಂದೆಂಬ ಕಾನನವ ॥
ಭರದೊಳುರುಪುವಗ್ನಿಯ ನಾಲಗೆಯೆಂ । ಬಿರವಿನಂ[1]ತರಲಂಬನಲಗೆ ॥ ೧೪೮ ॥

ಅಪಗತದುರಿತನ ಪೇರುರವೆಸೆದುದಾ[2] । ನೃಪನ ಕಣ್ಗಳಿಗೆಂತೆನಲು ॥
ತಪವೆಂಬ ನಾರಿ ನರ್ತಿಪ ರಂಗವೆಂಬಂತೆ । ಚಪಲಲೋಚನೆ ಲಲಿತಾಂಗಿ ॥ ೧೪೯ ॥

ಕರುಣವೆಂಬಿಂದಿರೆ ಮುದದೊಳಾಡುವ ನವ । ಸರಸಿಯ ಚೆಲ್ವನೇಳಿಸುತ ॥
ವರ ವರ್ಣಿಯಾವರ್ತನಾಭಿಯೆಸೆದುದಾ । ನರನಾಥನ ಕಣ್ಗಳಿಗೆ ॥ ೧೫೦ ॥

ಗೋತ್ರಾರಿಯ ಬಲು ಭಯಕಂಜಿ ಮಱೆವೊಕ್ಕ[3] । ಗೋತ್ರಯುಗಲವೆಂಬಂತೆ ॥
ಗೋತ್ರಧೈರ್ಯನ ಕಟಿಯುಗಲವೆಸೆದವೇಣ । ನೇತ್ರೆಯಾ ನೃಪನ ಕಣ್ಗಳಿಗೆ ॥ ೧೫೧ ॥

ಮತಿಯೆಂದೆಂಬ ಪಡಗ ಶ್ರುತಶರಧಿಯ । ಗತಿಯೊಳು ನಿಲಿಸಿ ತೋಱಿಸುವ ॥
ಅತಿಶಯಮಪ್ಪ ಚೆಂಗುಂಡಿನಂತೆಸೆದವಾ[4] । ಯತಿಯ ನಿತಂಬವಬ್ಜಾಕ್ಷಿ ॥ ೧೫೨ ॥

ಕಡು ಸೊಗಸಿದವಾ ಮುನಿಪನ ತೊಡೆಗಳು । ಪೊಡವೀಶ್ವರಗೆಂತೆನಲು ॥
ಕಡುಗುವಿಂದ್ರಿಯಗಜವಡಿಯಿಡದಂತಂದು । ಪಿಡಿದು ಕಟ್ಟಿದ ಕಂಭದಂತೆ ॥ ೧೫೩ ॥

ಕುಸುಮಾಯುಧನಷ್ಟಮದವನರೆವ ಪೊಸ । ಮಿಸುನಿಯಸಿಯ ಗುಂಡಿನಂತೆ ॥
ಎಸೆದವಾ ಮುನಿಪನ ಜಂಘಾಯುಗಲವಂ । ದಸಮ ಬಾಣನ ಮಸೆದಲಗೇ ॥ ೧೫೪ ॥

---

ವೆಂಬ ಬಳ್ಳಿಯಲ್ಲಿ ಮೂಡಿದ ಕೆಂಪುಚಿಗುರೋ ಎಂಬಂತೆ, ಆ ರಾಜನ ಕಣ್ಣಿಗೆ ತೋರಿದವು. ॥ ೧೪೭ ॥ ಎಲೇ ಮನ್ಮಥನ ಅಲಗಿನಂತೆ ಮೋಹಕಳಾದ ಚೇಳಿನಿಯೇ, ಆ ಜಿನಮುನಿಯ ಕೈಯ ಉಗುರುಗಳು, ಪಾಪವೆಂಬ ಕಾಡನ್ನು ಬೇಗನೆ ಸುಡುವ ಬೆಂಕಿಯ ನಾಲಗೆಗಳೋ ಎಂಬಂತೆ ಶೋಭಿಸಿದವು. ॥ ೧೪೮ ॥ ಎಲೈ ಚಂಚಲವಾದ ಕಣ್ಣಿನ ಸುಂದರವಾದ ದೇಹದ ಚೇಳಿನಿಯೇ, ಪಾಪರಹಿತನಾದ ಆ ಮುನಿಯ ವಿಶಾಲವಾದ ಎದೆಯು, ತಪಸ್ಸೆಂಬ ಸ್ತ್ರೀಯ ನಾಟ್ಯರಂಗವೋ ಎಂಬಂತೆ ರಾಜನ ಕಣ್ಣುಗಳಿಗೆ ಕಾಣಿಸಿತು. ॥ ೧೪೯ ॥ ಆ ವರ್ಣಿಯ ಸುಳಿಹೊಕ್ಕುಳು, ರಾಜನ ಕಣ್ಣುಗಳಿಗೆ ಕರುಣೆಯೆಂಬ ಲಕ್ಷ್ಮೀದೇವಿಯು ಸಂತೋಷದಿಂದ ಸಂಚರಿಸುತ್ತಿರುವ ಹೊಸ ಸರೋವರದ ಚೆಲುವನ್ನು ಮೀರಿಸುವಂತೆ ಕಾಣಿಸಿತು. ॥ ೧೫೦ ॥ ಎಲೈ ಹುಲ್ಲೆಗಣ್ಣಿನ ಚೇಳಿನಿಯೇ, ಪರ್ವತದಂತೆ ಧೀರನಾದ ಆ ಮುನಿಯ ಸೊಂಟದ ಎರಡು ಪ್ರದೇಶಗಳು—ಪರ್ವತ ವೈರಿಯೆನಿಸಿದ ದೇವೇಂದ್ರನ ಭಯದಿಂದ ಬಂದು ಶರಣಾಗತಿಯನ್ನು ಹೊಂದಿದ ಎರಡು ಪರ್ವತಗಳೋ ಎಂಬಂತೆ ಕಾಣಿಸಿದವು. ॥ ೧೫೧ ॥ ಆ ಮುನೀಂದ್ರನ ಶ್ರೇಷ್ಠವಾದ ಪೃಷ್ಠಭಾಗವು ಬುದ್ಧಿಯೆಂಬ ಹಡಗನ್ನು ಜ್ಞಾನವೆಂಬ ಸಮುದ್ರದ ಪ್ರವಾಹದಲ್ಲಿ ನಿಲ್ಲಿಸಿ ತೋರಿಸತಕ್ಕ ಕೆಂಪು ಗುಂಡು ಕಲ್ಲಿನಂತೆ ಶೋಭಿಸಿತು. ॥ ೧೫೨ ॥ ಕೆರಳುವ ಇಂದ್ರಿಯವೆಂಬ ಆನೆಯು ಮುಂದಕ್ಕೆ ಹೆಜ್ಜೆಯಿಡದ ರೀತಿಯಲ್ಲಿ ಅದನ್ನು ಹಿಡಿದು ಕಟ್ಟಿದ ಕಂಬವೋ ಎಂಬಂತೆ, ಆ ಮುನೀಶನ ತೊಡೆಗಳು ರಾಜನಿಗೆ ಸೊಗಸಾಗಿ ಶೋಭಿಸಿದವು. ॥ ೧೫೩ ॥ ಮನ್ಮಥನ ಎಂಟು ಮದಗಳನ್ನು (ಅನ್ನ. ಅರ್ಥ. ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ—ಇವು ಅಷ್ಟಮದಗಳು) ಅರೆಯತಕ್ಕ ಹೊಸ ಚಿನ್ನದ ಗುಂಡುಗಳಂತೆ, ಆ ಮುನೀಶನ ಎರಡು ತೊಡೆಗಳು ಶೋಭಿಸಿದವು. ॥ ೧೫೪ ॥ ಶಿವನ ವೈರಿಯಾದ ಮನ್ಮಥನನ್ನು ಹೊಡೆಯತಕ್ಕಂತಹ ಚಿನ್ನದ ಗಟ್ಟಿಗಳೋ ಎಂಬಂತೆ, ಆ

---

[1] ನಾಲಗೆಗಳೆಂಬಿರವಿನ (ಬ)  [2] ಪೇರುರವೆಸೆದವಾ (ಕ).  [3] ಮಱೆಯೊಕ್ಕ (ಕ)  [4] ಚೆನ್ನುಂಡಿನಂತೆಸೆದ ವಾ (ಕ).

ಆ ಮುನಿಪತಿಯ ಪರಡುಗಳೆಸೆದವಾ । ಸೋಮಥ[1]ರಾರಿಯನೆಸುವ ॥
ಹೇಮದ ಮಿಂಟೆಗಳಂತಾ ನೃಪತಿಗೆ । ಕೋಮಲೆ ಕೋಕಿಲಾಲಾಪೆ ॥ ೧೫೫ ॥

ಎಲೆ ಮುನಿರಾಯ ನೀನೀ ಸಂಸೃತಿಯೆಂಬ । ಜಲಧಿ ಬತ್ತಿದೊಡೆಮಗೊಂದು ॥
ನೆಲದೋಱೆಂದೆಱಗಿದ ಕೂರ್ಮಮಿಥುನವ । ಗೆಲಿದೊ ಮೇಗಾಲ್ಗಳಾ ಯತಿಯ ॥ ೧೫೬ ॥

ಕಣ್ಗೆ ಕಾಣಿಸದಣು[2] ಮಾತ್ರ ಜೀವಂಗಳ । ಕಾಣ್ಗೆಂದು[3]ರುಚಿಯುಕ್ತಮಾಗಿ ॥
ತಣ್ಗದಿರನು ಮುನಿಯಡಿಗೆ ಕಣ್ಣಾದಂತೆ । ಕಣ್ಗುಗುರೆಸೆದವಾ ಯತಿಯ[4] ॥ ೧೫೭ ॥

ಆ ಮುನಿಯಂಗಲಾವಣ್ಯಾಂಬುವೆಸೆದುದಂ । ದಾ[5] ಮಹೀಪತಿಯ ಕಣ್ಗಳಿಗೆ ॥
ಕಾಮಾಗ್ನಿಯ ನಂದಿಪ ಜಲವೆಂಬಂತೆ । ತಾಮರಸಾಯತನೇತ್ರೆ ॥ ೧೫೮ ॥

ವರದರ್ಶನ ಬೋಧ ಚಾರಿತ್ರವೊಂದಿದ । ಪರಮ ಮುನೀಂದ್ರನೊಪ್ಪಿದನು ॥
ವರರತ್ನತ್ರಯವನೆ ಕರಗಿಸಿ ಪೊಯ್ದು । ಕರುವಿನ ನವಮೂರ್ತಿಯಂತೆ[6] ॥ ೧೫೯ ॥

ಇಂತು ಕಣ್ಮನಕತ್ಯಂತ ಸಂತಸವಿತ್ತ । ಕಂತುವಿಜಯನಂಗವನು ॥
ಅಂತರಿಸದೆ ನೋಡಿ ಹರುಷಾಂಬುಧಿಯೊಳ । ಗಂತವರಾಳಿ ಬಳಿಯೊಳು ॥ ೧೬೦ ॥

ಆ ಮುನಿಪನ ಮೂಱು ಬಲವಂದೆಱಗಲಂ । ದಾ ಮಹೀಪತಿಯನಾ ವರ್ಣಿ ॥
ಪ್ರೇಮದಿಂ ಪರಸಿದನೊಯ್ಯನಂದವನಭಿ[7] । ರಾಮವಡೆದ ವಚನದೊಳು ॥ ೧೬೧ ॥

ಅರ್ಚಿಸಿ ಪೂಜಿಸಿಯಾ ವರ್ಣಿಯ ಕಾ । ಲ್ಗರ್ಚಿಸಿ ಮನದೊಳಾ[8] ನೃಪತಿ ॥
ಪೆರ್ಚಿದ ತಣ್ಗದಿರನ ಕಂಡ ಕಡಲಂತೆ । ಬೆರ್ಚಿದೆರಲೆ[9]ಗಣ್ಣಬಲೇ ॥ ೧೬೨ ॥

---

ಮುನಿಪತಿಯ ಮೊಣಕಾಲ ಗಂಟುಗಳು ರಾಜನಿಗೆ ಕಾಣಿಸಿದವು ॥ ೧೫೫ ॥ ಎಲೈ ಮುನಿಗಳ ಅರಸನೇ, ಈ ಸಂಸಾರವೆಂಬ ಸಮುದ್ರವು ಬತ್ತಿಹೋದಾಗ, ನಮಗೆ ಒಂದು ನೆಲೆಯನ್ನು ತೋರಿಸು—ಎಂದು ಹೇಳಿ ನಮಸ್ಕರಿಸಿದ ಎರಡು ಆಮೆಗಳನ್ನು ಗೆಲ್ಲುವಂತೆ ಆ ಮುನಿಯ ಮೇಗಾಲುಗಳು ಶೋಭಿಸಿದವು ॥ ೧೫೬ ॥ ಕಣ್ಣಿಗೆ ಕಾಣಸದಿರುವ ಸೂಕ್ಷ್ಮಜೀವಿಗಳನ್ನು ಕಾಣಲಿ—ಎಂದು ಚಂದ್ರನು ಕಾಂತಿಯುಕ್ತನಾಗಿ ಆ ಮುನಿಯ ಪಾದಗಳಿಗೆ ಕಣ್ಣುಗಳಾಗಿ ಪರಿಣಮಿಸಿದನೋ ಎಂಬಂತೆ ಆ ಯತಿಯ ಕಾಲಿನ ಉಗುರುಗಳು ಶೋಭಾಯಮಾನವಾಗಿದ್ದುವು ॥ ೧೫೭ ॥ ಎಲೈ ಕಮಲದಂತೆ ವಿಶಾಲವಾದ ಕಣ್ಣಿನ ಚೆಲುವೆಯೇ, ಆ ಮುನಿಯ ದೇಹಸೌಂದರ್ಯವೆಂಬ ನೀರು ಕಾಮಾಗ್ನಿಯನ್ನು ನಂದಿಸುವ ನೀರಿನಂತೆ ರಾಜನ ಕಣ್ಣುಗಳಿಗೆ ಕಾಣಿಸಿತು ॥ ೧೫೮ ॥ ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರಗಳಿಂದ ಕೂಡಿದ ಆ ಶ್ರೇಷ್ಠಮುನೀಶ್ವರನು ರತ್ನತ್ರಯವನ್ನು ಕರಗಿಸಿ ಎರಕಹೊಯ್ದು ತಯಾರಿಸಿದ ಹೊಸತೊಂದು ಮೂರ್ತಿಯೋ ಎಂಬಂತೆ ಕಾಣಿಸಿದನು ॥ ೧೫೯ ॥ ಹೀಗೆ ಕಣ್ಣಿಗೂ ಮನಸ್ಸಿಗೂ ಹೆಚ್ಚಾದ ಸಂತೋಷವನ್ನು ಕೊಟ್ಟು, ಆ ಮನ್ಮಥನನ್ನು ಜೈಸಿದವನಾದ ಮುನಿಯ ಅಂಗಗಳನ್ನು ನೋಡಿ ಅವರು ಸಂತೋಷವೆಂಬ ಸಮುದ್ರದಲ್ಲಿ ಮುಳುಗಾಡಿದರು. ॥ ೧೬೦ ॥ ಆ ಮೇಲೆ ದಶರಥನು ಆ ಮುನೀಂದ್ರನನ್ನು ಮೂರು ಬಾರಿ ಪ್ರದಕ್ಷಿಣ ಬಂದು ನಮಸ್ಕರಿಸಿದನು ಆಗ ಆ ಮುನಿಯು ಪ್ರೀತಿಯಿಂದ ಮನೋಹರವಾದ ಮಾತಿನಿಂದ ಆಶೀರ್ವಾದ ಮಾಡಿದನು ॥ ೧೬೧ ॥ ರಾಜನು ಆ ಜಿನಮುನಿಯನ್ನು ಪೂಜಿಸಿ, ಪಾದಾಭಿಷೇಕವನ್ನು ಮಾಡಿಸಿ, ಚಂದ್ರನನ್ನು ಕಂಡ ಸಮುದ್ರದಂತೆ ಹೆಚ್ಚಾಗಿ ಹಿಗ್ಗಿದನು ॥ ೧೬೨ ॥ ದಶರಥನು ಆ ಮುನೀಂದ್ರನನ್ನು ಸಂಬೋಧಿಸಿ ಹೀಗೆಂದನು—ಎಲೈ

---

[1] ಸಾಮಜ (ಕ) [2] ಕಾಣಿಸದಸು (ಕ) [3] ಕಣ್ಗೆಂದು (ಕ) [4] ನೃಪನ (ಚ) [5] ಯೆಸೆದುದಂದಾ (ಕ) [6] ಮೂರ್ತಿಯೆಂಬಂತೆ (ಗ). [7] ದಭಿನವ (ಗ) [8] ಮನದೊಳು (ಚ) [9] ಬೆರ್ಚಿದಬಲೆ (ಚ).

ಗುರುವೆ ಮೂಲೋಕದ ಭವ್ಯ[1]ಜನರ ಕಲ್ಪ । ತರುವೆ ಸುಜ್ಞಾನದಾಗರವೆ ॥
ಕರುವೆ ಶಾಂತದ ಮುಕ್ತಿವೆಣ್ಣ ಕೊರಲ ಪಂಚ । ಸರವೆ ಕೇಳೆನ್ನ ಬಿನ್ನಪವ ॥ ೧೬೩ ॥

ಕರ್ಮದೂರನೆ ನಿರ್ಮಲಚರಿತನೆ ದಶ[2] । ಧರ್ಮಧರನೆ ನಿನ್ನ ಪದವ ॥
ಒರ್ಮೊದಲೊಳೆ ಕಂಡರ ಪಾಪಹರವೆನೆ । ಪೆರ್ಮೆಯು ಪೇಳ್ವೆನಾನೇನ ॥ ೧೬೪ ॥

ಅಱಿವೆ ಮೂಲೋಕದ ಒಳಗು ಹೊಱಗುಗಳ । ತೆಱನದ ಬಲ್ಲೆ ಕೇಳೆನ್ನ ॥
ನೆಱೆವೆಱೆಮೊಗದಬಲೆಗೆ ಸುತರಾಗದ । ತೆಱನ ನಿರವಿಸಘವಿಜಯ ॥ ೧೬೫ ॥

ನೀನಱಿಯದುದಿಲ್ಲೆನ್ನಾತುರದೊಳಾದೊ । ಡಾನು [3]ಬಿನ್ನವಿಪೆ ಕೇಳೆನ್ನ ॥
ಮಾನಿನಿಗೀ ಸಮಯಕೆ ಸುತರಾಗದು । ದೇನು ಕಾರಣ ಮುನಿನಾಥ[3] ॥ ೧೬೬ ॥

ತಿಳಿವೆ ನೀ ಸಕಲ ಪದಾರ್ಥವ ಕರತಳಾ । ಮಳಕದಂದದೊಳು ಕೇಳೆನ್ನ ॥
ನಳಿನಾಕ್ಷಿಗೆ ನಂದನರಿಲ್ಲದಿರ್ಪುದ । ತಳುವದೆ ಪೇಳು ಮುನೀಂದ್ರ[4] ॥ ೧೬೭ ॥

ಉಂಟು ಸಕಲ ಸುಖ[5] ಭೋಗೋಪಭೋಗಗ । ಳುಂಟು ನಾನಾ ಬಲವೆನಗೆ ॥
ಉಂಟು ನಿನ್ನಯ ಕರುಣದೊಳಿಲ್ಲದುದಿಲ್ಲ । ವುಂಟಲ್ಲವಿವಳ್ಗೆ ನಂದನರು ॥ ೧೬೮ ॥

ಪಱಮೆಗುರುಳ ತರುಣಿಗೆ ಮನಶ್ಚಿಂತೆಯು[6] । ಪೊಱೆಯಾಗಿದೆಯದನಿರದೆ ॥
ಪಱಿಪಡಿಸುವ ಸುತನಹನಾಗನೆಂದೆಂಬ । ತೆಱನ ನಿರವಿಸಘವಿಜಯ ॥ ೧೬೯ ॥

---

ಗುರುವೇ, ಮೂರುಲೋಕದಲ್ಲಿರುವ ಮೋಕ್ಷಾಕಾಂಕ್ಷಿಗಳಿಗೆ ಕಲ್ಪವೃಕ್ಷದಂತೆ ಇರುವವನೇ, ಸುಜ್ಞಾನಕ್ಕೆ ಆಶ್ರಯನಾಗಿರುವವನೇ, ಶಾಂತಸ್ವಭಾವದ ಮೂರ್ತಿಯೇ, ಮೋಕ್ಷವೆಂಬ ಸ್ತ್ರೀಯ ಕೊರಲಲ್ಲಿರುವ ಪಂಚಸರದಂತಿರುವವನೇ, ನನ್ನ ವಿಜ್ಞಾಪನವನ್ನು ಕೇಳು. ॥ ೧೬೩ ॥ ಘಾತಿ-ಅಘಾತಿಗಳೆಂಬ ಕರ್ಮದಿಂದ ದೂರವಾಗಿರುವವನೇ, ಪರಿಶುದ್ಧವಾದ ಚಾರಿತ್ರವುಳ್ಳವನೇ, ಹತ್ತು ವಿಧದ ಧರ್ಮವನ್ನು ಅನುಸರಿಸುತ್ತಿರುವವನೇ, ನಿನ್ನ ಪಾದವನ್ನು ಒಂದು ಬಾರಿ ನೋಡಿದ ಮಾತ್ರದಲ್ಲೇ ಪಾಪವು ನಾಶವಾಗುವುದೆನ್ನುವಾಗ ನಿನ್ನ ಹಿರಿಮೆಯನ್ನು ನಾನು ಏನೆಂದು ಹೇಳಲಿ! ॥ ೧೬೪ ॥ ಎಲೈ ಪಾಪವನ್ನು ಜಯಿಸಿದ ಮುನೀಂದ್ರನೇ, ನೀನು ಮೂರುಲೋಕದ ಒಳಗಿನ ಮತ್ತು ಹೊರಗಿನ ಸಂಗತಿಗಳನ್ನೆಲ್ಲಾ ತಿಳಿದವನೆಂದು ನಾನು ಬಲ್ಲೆನು. ನನ್ನ ಚೆಲುವಿನ ಮಡದಿಗೆ ಮಕ್ಕಳಾಗದಿರಲು ಕಾರಣವೇನೆಂದು ಅಪ್ಪಣೆಕೊಡಿಸಬೇಕು. ॥ ೧೬೫ ॥ ಎಲೈ ಮುನಿಗಳ ಒಡೆಯನೇ, ನೀನು ತಿಳಿಯದುದಿಲ್ಲ. ನಾನು ನನ್ನಲ್ಲಿ ಉಂಟಾದ ತವಕದಿಂದ ವಿಜ್ಞಾಪಿಸುತ್ತಿದ್ದೇನೆ. ನನ್ನ ಮಡದಿಗೆ ಇದುವರೆಗೆ ಯಾಕೆ ಮಕ್ಕಳಾಗಲಿಲ್ಲವೆಂಬುದನ್ನು ತಿಳಿಸು. ॥ ೧೬೬ ॥ ಎಲೆ ಮುನೀಂದ್ರನೇ, ಈ ಪ್ರಪಂಚದಲ್ಲಿರುವ ಎಲ್ಲಾ ವಸ್ತು ಸಂಗತಿಗಳನ್ನೂ ನೀನು ಅಂಗೈಯ ನೆಲ್ಲಿಕಾಯಂತೆ ಸ್ಪಷ್ಟವಾಗಿ ತಿಳಿದಿರುವವನು ಕೇಳು. ನನ್ನ ಪತ್ನಿಗೆ ಪುತ್ರರು ಹುಟ್ಟದಿರಲು ಕಾರಣವೇನೆಂಬುದನ್ನು ಬೇಗನೆ ತಿಳಿಸುವವನಾಗು. ॥ ೧೬೭ ॥ ಎಲೈ ಮುನೀಂದ್ರನೇ, ನಿನ್ನ ಕರುಣೆಯಿಂದ ನನಗೆ ಎಲ್ಲಾ ಸುಖಗಳೂ ಇವೆ; ಭೋಗ–ಉಪಭೋಗಗಳೆಲ್ಲಾ ಇವೆ; ಎಲ್ಲಾ ರೀತಿಯ ಬಲವೂ ಇದೆ. ಆದರೆ ಈಕೆಗೆ ಮಕ್ಕಳು ಮಾತ್ರ ಇಲ್ಲ ಎಂಬುದೊಂದೇ ಕೊರತೆಯಾಗಿದೆ. ॥ ೧೬೮ ॥ ಎಲೈ ಪಾಪವನ್ನು ಜೈಸಿರುವ ಮುನಿಶ್ರೇಷ್ಠನೇ, ತುಂಬಿಗುರುಳಿನ ಈ ನನ್ನ ಮಡದಿಯ ಮನಸ್ಸಿಗೆ ಚಿಂತೆ ಎಂಬುದೊಂದು ದೊಡ್ಡ ಹೊರೆಯಾಗಿದೆ. ಈ ಹೊರೆಯನ್ನು ನಿವಾರಿಸತಕ್ಕ

---

[1] ಲೋಕಸದ್ಭವ್ಯ (ಗ) [2] ಚರಿತವೇದಸದ್ (ಗ) [3] ಬಿನ್ನವಿಸಿದೆ ನಿನ್ನ । ಧ್ಯಾನಪೂರ್ವಕದೊಳರಿದು ಪೇಳು ಪೇಳೆಂದು ತಾನೆಂದನು ಮುನಿರಾಯ (ಕ) [4] ನಂದನರಿಲ್ಲವೆಂದೆಂಬ । ಅಲಘುಚಿಂತೆಯ ಪರಿಹರಿಸು (ಕ) [5] ಸಕಲರತ್ನ (ಗ ಚ). [6] ಮಱೆಯೇತಕೆನಗೀ ಭೂಭಾರ ಬಿಟ್ಟಿಯು (ಗ ಚ).

ಎಂದು ಬಿನ್ನವಿಸಿದ ದಶರಥಗಾ ಮುನಿ[1] । ಯೆಂದನಚ್ಯುತ ಕಲ್ಪದಿಂದ ॥
ಬಂದು ಪುಟ್ಟುವನೋರ್ವ ಹರಿಹರ ನಿನ್ನೀ । ಮಂದಗಮನೆಯ ಗರ್ಭದೊಳು ॥ ೧೭೦ ॥

ಸಾರಹೃದಯ ಕೀರ್ತಿ ಭುವನಭುಂಭುಕ ಸುವಿ । ಚಾರಿ ನಿಜಾನ್ವಯಾಂಬರಕೆ ॥
ರಾರಾಜಿಪ ರವಿಯಂತೋರ್ವನೊಗೆವ ಕು । ಮಾರನೀಯಕನುದರದೊಳು[2] ॥ ೧೭೧ ॥

ಅಕಲಂಕಚರಿತ ದುರಿತಜಿತನಭಿನವ । ಮಕರಕೇತನ ಗುಣನಿಳಯ ॥
ಸಕಲ ಕಲಾಧರನುದಯಿಪ ನಿನ್ನೀ । ಪಿಕನಿನದೆಯ ಜಠರದೊಳು ॥ ೧೭೨ ॥

ಎಂದೆಂಬ ನುಡಿಗೇಳಿ ಪುಳಕದ ಬೀಡಾದ । ರಂದಾ[3]ನಂದಾಶ್ರುವಿನೊಳು ॥
ಮಿಂದರವರ ಮನದೊಸಗೆಯನಂತಿಂ । ತೆಂದು ಪೇಳುವ ಕವಿಯಾರು[4] ॥ ೧೭೩ ॥

ಆಗಲವರ ಮನದೊಸಗೆಯ ಪೇಳ್ವಡೆ । ನಾಗೇಂದ್ರನಿಗಲ್ಲದುಳಿದ ॥
ಜಾಗುಮತಿಗೆ ಗೋಚರವಲ್ಲದಾನಿಲ್ಲಿ । ಮೂಗುವಟ್ಟೊಳ್ಪಿದನಹೆನು[5] ॥ ೧೭೪ ॥

ಬಳಿಕಲಾ ಮುನಿಪನ ಬಲವಂದಿರದೆ[6] ಪಾದ । ನಳಿನಕೆಱಗಲಾ ಮುನಿಪ ॥
ತಳುವದೆ ಪರಸಲವರು ಕಳುಹಿಸಿಕೊಂಡು । ತಳರ್ದರಂಬುಜಪತ್ರನೇತ್ರೆ ॥ ೧೭೫ ॥

ತ್ರಿಜಗವಂದ್ಯನ ಮದವಿಜಯನ ಪದಸರ । ಸಿಜಗಳಿಗೆಱಗಿಯಲ್ಲಿಂದ ॥
ಗಜವನಡರಿಯವರೀರ್ವರು ತೆರಳ್ದರಂ । ಗಜನ ಕರದ ಕೂರಸಿಯೆ ॥ ೧೭೬ ॥

---

ಮಗನು ಈಕೆಯಲ್ಲಿ ಜನಿಸುವನೋ? ಜನಿಸನೋ? ಎಂಬುದನ್ನು ತಿಳಿಸಬೇಕಾಗಿ ಕೋರುತ್ತೇನೆ ॥ ೧೬೯ ॥ ಹೀಗೆ ವಿಜ್ಞಾಪಿಸಿದ ದಶರಥನಿಗೆ ಆ ಮುನಿಯು ಹೀಗೆಂದನು—ನಿನ್ನ ಈ ಮಡದಿಯ ಬಸಿರಲ್ಲಿ ಒಬ್ಬ ಹರಿಹರ ಸ್ವರೂಪನು ಅಚ್ಯುತಕಲ್ಪದಿಂದ ಬಂದು ಮಗನಾಗಿ ಜನಿಸುವನು. ॥ ೧೭೦ ॥ ಸತ್ವಯುಕ್ತವಾದ ಹೃದಯದಿಂದ ಕೀರ್ತಿಪಡೆದವನೂ, ಲೋಕದಲ್ಲಿ ಮಹಾ ಪ್ರತಾಪಿಯೂ, ಒಳ್ಳೆಯ ವಿಚಾರಶೀಲನೂ, ತನ್ನ ಕುಲವೆಂಬ ಆಕಾಶಕ್ಕೆ ಶೋಭಾಯಮಾನನಾದ ಸೂರ್ಯನಂತಿರುವವನೂ ಆದ ಒಬ್ಬ ಕುಮಾರನು ಈಕೆಯಲ್ಲಿ ಜನಿಸುವನು ॥ ೧೭೧ ॥ ನಿನ್ನ ಈ ಮಡದಿಯ ಬಸಿರಿನಲ್ಲಿ ಕಳಂಕವಿಲ್ಲದ ನಡತೆಯುವನೂ ಪಾಪವನ್ನು ಗೆಲಿದವನೂ ಹೊಸ ಮನ್ಮಥನಂತೆ ಸುಂದರನೂ ಒಳ್ಳೆಯ ಗುಣಗಳಿಗೆ ನೆಲೆಯಾಗಿರುವವನೂ ಎಲ್ಲಾ ಕಲೆಗಳನ್ನು ತಾಳಿರುವವನೂ ಆದ ಮಗನು ಜನಿಸುವನು ॥ ೧೭೨ ॥ ಆ ಮುನೀಂದ್ರನು ಹೀಗೆಂದ ಮಾತನ್ನು ಕೇಳಿ ದಶರಥನೂ ಸುಬಳಾದೇವಿಯೂ ರೋಮಾಂಚನವನ್ನು ತಾಳಿದರು, ಸಂತೋಷಬಾಷ್ಪದಲ್ಲಿ ಮಿಂದಂತೆ ಆದರು, ಅವರ ಮನಸ್ಸಿಗಾದ ಉತ್ಸವವನ್ನು ಹಾಗೆ ಹೀಗೆ ಎಂದು ವಿವರಿಸಬಲ್ಲ ಕವಿ ಯಾವನು? ॥ ೧೭೩ ॥ ಆ ಸಂದರ್ಭದಲ್ಲಿ ಅವರ ಮನಸ್ಸಿಗಾದ ಸಂತೋಷವನ್ನು ವರ್ಣಿಸಬೇಕಾದರೆ ಆದಿಶೇಷನೇ ಆಗಬೇಕಲ್ಲದೆ ಇತರ ಅಲ್ಪಬುದ್ಧಿಯವರಿಗೆ ಸಾಧ್ಯವೇ ಆಗದು. ಆದುದರಿಂದ ನಾನು ಈ ಸಂದರ್ಭದಲ್ಲಿ ಮೂಕನಾಗಿದ್ದು ಒಳ್ಳೆಯವನೆನಿಸುವೆನು ॥ ೧೭೪ ॥ ಎಲೈ ಚೇಳಿನಿಯೇ, ಆ ಮೇಲೆ ಆ ರಾಜದಂಪತಿಗಳು ಆ ಮುನೀಂದ್ರನನ್ನು ಪ್ರದಕ್ಷಿಣ ಬಂದು, ಆತನ ಪಾದಕಮಲಕ್ಕೆ ನಮಸ್ಕರಿಸಿದರು. ಆಗ ಮುನಿಯು ಅವರಿಗೆ ಆಶೀರ್ವದಿಸಲು, ಅವರು ಅಲ್ಲಿಂದ ಹೊರಟುಬಂದರು ॥ ೧೭೫ ॥ ಮೂರುಲೋಕದ ಜನರಿಂದ ವಂದಿಸಲ್ಪಡುವವನೂ ಮದವಿಲ್ಲದವನೂ ಆದ ಆ ಮುನಿಯ ಪಾದಕಮಲಗಳಿಗೆ ವಂದಿಸಿ ಅವರಿಬ್ಬರೂ ಆನೆಯ ಮೇಲೆ ಕುಳಿತುಕೊಂಡು ಅಲ್ಲಿಂದ ತೆರಳಿದರು ॥ ೧೭೬ ॥ ಹೀಗೆ ಬರುತ್ತ ಬರುತ್ತ ದಶರಥನು ಆ ಶ್ರೇಷ್ಠನಾದ ಜಿನಮುನಿಯ ದಿವ್ಯವಾದ ಉಜ್ವಲ

---

[1] ಬಿನ್ನವಿಸೆಯರಸಗಾ ಮುನಿಪತಿ (ಗ) ಬಿನ್ನವಿಸಿದರಸಗಾ ಮುನಿಪತಿ (ಚ) [2] ಕುಮಾರನಿಯನುದರದೊಳು (ಗ) [3] ಬೀಡಾದನಂದಾ (ಕ). [4] ಪೇಳುವರೆಗ್ಗರಲ್ತೆ (ಗ ಚ) [5] ಮೂಗುವಟ್ಟುಳ್ಳಿದನಹೆನು (ಗ) [6] ಬಲವಂದೊಯ್ಯನೆ (ಗ ಚ).

ಬರೆ ಬರೆಯಾ ವರವರ್ಣೆಯಾಡಿದ ಸುರು[1] । ಚಿರಮುಪ್ಪ ದಿವ್ಯವಚನವ ॥
ಅರಸ ನೆನೆದು ಪೊಂಪುಳಿವೋ[2]ಗುತ ತನ್ನ । ಗುರುಕುಚದಳಿಗೆಂದನಿಂತು ॥ ೧೭೭ ॥

ಬಿಳಿದೆನಿಸಲಿ ಮಸಿ[3] ಕರಿದೆನಿಸಲಿ ಸಸಿ[4] । ಯಿಳೆ ನಡೆಯಲಿ ಬಾನೆಡೆಗೆ ॥
ಇಳಿಯಲವನಿಗಾಗಸ ಮುನಿವಚನದೊಳ್ । ಮೊಳೆಯದು ಪುಸಿಯೇಣನೇತ್ರೆ[6] ॥ ೧೭೮ ॥

ಪುಟ್ಟಲಿ ಕಮಲ ಕಲ್ಲೊಳಗೆ ಮೊಲಕೆ ಕೋಡು । ಪುಟ್ಟಲಿ ಸುಧೆ ವಸುಧೆಯೊಳು ॥
ಪುಟ್ಟಲಿ ಮುತ್ತಿನೊಳ್[5] ಮೃದು ಮುನಿವಚನದೊಳ್ । ಪುಟ್ಟದು ಪುಸಿಯೇಣನೇತ್ರೆ[6] ॥ ೧೭೯ ॥

ನಗಗಳು ನಡೆದಾಡಲಿ ಶಶಿ ನೇಸಱು । ಮಿಗೆ ಜನಿಸಲಿ ನೆಲದೊಳಗೆ ॥
ಪಗಲೊಳು ಕುಮುದಗಳರಲಲು ಪುಸಿವಾ । ತೊಗೆಯದು ಮುನಿಗೆ ಮೃಗಾಕ್ಷಿ[7] ॥ ೧೮೦ ॥

ವನನಿಧಿ ನೆಲೆಯ[8]ಮೀಱಲಿಯತನು ತಾ । ತನುವ[9]ಪಡೆಯಲಿ ಪಗಲೊಳು ॥
ಮಿನುಗಲಿ ತಾರಗೆ ಮುನಿಯ ವಚನದೊಳು । ಜನಿಸದು ಪುಸಿಯೇಣನೇತ್ರೆ ॥ ೧೮೧ ॥

ಎಂದಿವು ಮೊದಲಾದ ಮುನಿಯ ವಚನಗಳ । ನಂದು ತನ್ನರೆಮೆಯ್ಯನಿಪ[10] ॥
ಇಂದುವದನೆಗಱುಪುತ ಪೋದನಾರಾಮ । ದಿಂದರವಿಂದ ದಳಾಕ್ಷಿ ॥ ೧೮೨ ॥

ಆನೆ ಕುದುರೆ ರಥ ಕಾಲಾಳು ಮೊದಲಾದ । ಸೇನೆ ಬಳಸಿ ಬರೆ ತನ್ನ ॥
ಮಾನಿನಿಗೂಡಿ ಪೊಳಲ ಬಂದು ಪೊಕ್ಕನಂ । ದಾ ನರನಾಥ ಚಂದ್ರಮನು ॥ ೧೮೩ ॥

---

ವಚನಗಳನ್ನು ಸ್ಮರಿಸಿಕೊಂಡು, ರೋಮಾಂಚನವನ್ನು ತಾಳುತ್ತ ತನ್ನ ಮಡದಿಗೆ ಹೀಗೆಂದನು. ॥ ೧೭೭ ॥ ಎಲೈ ಮೃಗಾಕ್ಷಿಯೇ ! ಇದ್ದಲು ಬೆಳ್ಳಗಾದರೂ, ಚಂದ್ರನು ಕಪ್ಪಾಗಿಹೋದರೂ, ಭೂಮಂಡಲವು ಆಕಾಶದ ಕಡೆಗೆ ನೆಗೆದರೂ, ಆಕಾಶವು ಭೂಮಿಗೆ ಇಳಿದರೂ, ಮುನಿಯ ಮಾತು ಸುಳ್ಳಾಗದು. ॥ ೧೭೮ ॥ ಎಲೈ ಚೇಳಿನಿಯೇ, ತಾವರೆಯು ಕಲ್ಲಿನಲ್ಲಿ ಹುಟ್ಟಿದರೂ, ಮೊಲಕ್ಕೆ ಕೋಡು ಹುಟ್ಟಿದರೂ, ಭೂಮಿಯಲ್ಲಿ ಅಮೃತವು ಉತ್ಪತ್ತಿಯಾದರೂ, ಮುತ್ತು ಮೆತ್ತಗಾದರೂ, ಮುನಿಯ ಮಾತಿನಲ್ಲಿ ಅಸತ್ಯವು ತಲೆದೋರಲಾರದು. ॥ ೧೭೯ ॥ ಎಲೈ ಮೃಗಾಕ್ಷಿಯೇ, ಬೆಟ್ಟಗಳು ಅತ್ತಿತ್ತ ಸಂಚರಿಸಿದರೂ, ನೆಲದಲ್ಲಿ ಚಂದ್ರ ಸೂರ್ಯರು ಜನಿಸಿದರೂ, ಹಗಲುಹೊತ್ತಿನಲ್ಲಿ ನೈದಿಲೆಗಳು ಅರಳಿದರೂ, ಆ ಮುನಿಯ ಮಾತಿನಲ್ಲಿ ಹುಸಿಯುಂಟಾಗದು. ॥ ೧೮೦ ॥ ಎಲೈ ಏಣನೇತ್ರೆಯೇ, ಸಮುದ್ರವು ತನ್ನ ಮೇರೆಯನ್ನು ದಾಟಿದರೂ, ಅನಂಗನೆನಿಸಿದ ಕಾಮನು ದೇಹವನ್ನು ತಾಳಿದರೂ, ಹಗಲಿನಲ್ಲಿ ನಕ್ಷತ್ರಗಳು ಪ್ರಕಾಶಿಸಿದರೂ, ಮುನಿಯ ಮಾತು ಸುಳ್ಳಾಗದು. ॥ ೧೮೧ ॥ ಎಲೈ ನೈದಿಲೆಯ ಎಸಳಿನಂತಹ ಕಣ್ಣಿನ ಚೇಳಿನಿಯೇ, ದಶರಥನು ಇವೇ ಮೊದಲಾಗಿ ಮುನಿಯ ಮಾತುಗಳನ್ನು ತನ್ನ ಅರ್ಧಾಂಗಿಯಾದ ಸುಬಳಾದೇವಿಗೆ ತಿಳಿಸುತ್ತ ಉದ್ಯಾನದಿಂದ ತೆರಳಿದನು. ॥ ೧೮೨ ॥ ರಾಜರಲ್ಲಿ ಚಂದ್ರನಂತೆ ಹೊಳೆಯುವ ಆ ದಶರಥನು ತನ್ನ ಮಡದಿಯೊಡನೆ ಆನೆ-ಕುದುರೆ-ರಥ-ಕಾಲಾಳು ಮುಂತಾದ ಸೈನ್ಯವು ಆವರಿಸಿಕೊಂಡು ಬರುತ್ತಿರಲು. ತನ್ನ ಪಟ್ಟಣವನ್ನು ಪ್ರವೇಶಿಸಿದನು. ॥ ೧೮೩ ॥ ದಶರಥನು ಅರಮನೆಯ ಬಾಗಿಲ ಮುಂದೆ ಬಂದೊಡನೆ ಆನೆಯಿಂದ ಇಳಿದನು. ಕೂಡಲೇ ರಾಜಕುಮಾರರುಗಳನ್ನೂ, ಅಳಿಯಂದಿರನ್ನೂ, ಕುಮಾರಕರನ್ನೂ, ಜನನಾಯಕರನ್ನೂ, ಸಾಮಂತ ರಾಜರನ್ನೂ, ಕಳುಹಿಸಿ

---

[1] ವರ್ಣೆಯಾಡಿದ ನುಡಿ (ಗ) [2] ಪೊಂಪುಳಿಯೋಗುತ (ಗ ಚ). [3] ಮಸಿ ಬಿಳಿದಾಗಲಿ । ನೆಲನಾಗಸವೀಳಿದೆಡೆಗೆ (ಕ). [4] ಶಶಿ (ಗ). [5] ಸುರತರು (ಕ) [6] ಯಂಬುಜಾಕ್ಷಿ (ಗ ಚ). [7] ಪುಸಿವಾತೊಗೆಯದು ಮುನಿವಚನದೊಳು (ಗ.ಚ.) [8] ಮೇರೆಯ (ಗ.ಚ.) [9] × (ಕ). [10] ತನ್ನರೆಮೆಯ್ಯಳೆನಿಪ (ಗ) ತನ್ನರೆಮೆಯ್ಯಳಿಗೆ (ಚ).

ಇಳಿದು[1] ಗಜವನರಮನೆಯ ಬಾಗಿಲ ಮುಂದೆ । ತಳುವದರಸು ಮಕ್ಕಳುಗಳ ॥
ಅಳಿಯಂದಿರುಗಳ ಕುವರ[2]ಮನ್ನೆಯರ ಮಂ । ಡಳಿಕರ ಕಳುಪಿ ಬಳಿಯೊಳು ॥ ೧೮೪ ॥

ಕೆಲರ ಕಟ್ಟಿಗೆಯವರಿಂ[3] ಕೈಸನ್ನೆಯಿಂ । ಕೆಲರ ಕಣ್ಸನ್ನೆಯಿಂದಿರದೆ ॥
ಕೆಲರ ನುಡಿಸಿ ಕಳುಪುತ ಬಂದು ಪೊಕ್ಕನು । ನಿಲಯುವನಾ ರಾಜೇಂದ್ರ ॥ ೧೮೫ ॥

ಗುಣಗಣನಿಳಯನು ಕವಿಜನ[4] ಚಿಂತಾ । ಮಣಿ ವರಭವ್ಯರಿಟ್ಟಸುವ ॥
ಮಣಿದರ್ಪಣ ಜಿನಭಕ್ತನೊಪ್ಪಿದ ದಿನ । ಮಣಿತೇಜನಭಿನವಮದನ ॥ ೧೮೬ ॥

ಕೋವಿದರುಗಳ ಹೃತ್ಕಮಲಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ।
ಭಾವಕರುಗಳ ಸಂತಸ ಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೧೮೭ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೮೮ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ-ಜಿನ-ಪಾದಾಂಬುಜ
ಮದಮಧುಕರನತ್ಯುತ್ತಮವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಜವಿಜಯದೊಳ
ಗೊದವಿ ರಚನೆಯಂ ಪಡೆದತಿ ಜಸವೆತ್ತುದು ಸಂಧಿಚತುರ್ಥಂ ॥ ೧೮೯ ॥

---

ಕೊಟ್ಟನು ॥ ೧೮೪ ॥ ಕೆಲವರನ್ನು ವೇತ್ರಧಾರಿಗಳ ಮೂಲಕವೂ, ಕೆಲವರನ್ನು ಕೈಯ ಸನ್ನೆಯಿಂದಲೂ, ಕೆಲವರನ್ನು ಕಣ್ಣ ಸನ್ನೆಯಿಂದಲೂ, ಕೂಡಲೆ ಕೆಲವರನ್ನು ಮಾತಿನ ಮೂಲಕವೂ ಹೋಗುವಂತೆ ತಿಳಿಸಿ, ದಶರಥನು ತನ್ನ ಅರಮನೆಯನ್ನು ಹೊಕ್ಕನು ॥ ೧೮೫ ॥ ಒಳ್ಳೆಯ ಗುಣಗಳಿಗೆ ಆಶ್ರಯನೂ, ಸುಕವಿಗಳಿಗೆ ಚಿಂತಾಮಣಿಯಂತೆ ಇರುವವನೂ, ಶ್ರೇಷ್ಠರಾದ ಭವ್ಯಜನರು ಇಷ್ಟಪಡುವ ರನ್ನಗನ್ನಡಿಯಂತಿರುವವನೂ, ಜಿನಭಕ್ತನೂ, ಸೂರ್ಯನಂತೆ ತೇಜಸ್ವಿಯೂ, ಹೊಸ ಮನ್ಮಥನೂ ಆದ ದಶರಥನು ಹೀಗೆ ಮೆರೆಯುತ್ತಿದ್ದನು ॥ ೧೮೬ ॥ ವಿದ್ವಾಂಸರ ಹೃದಯವೆಂಬ ಕಮಲಕ್ಕೆ ಸೂರ್ಯನೂ, ಸರಸ್ವತೀದೇವಿಯ ಮುಖಕ್ಕೆ ರನ್ನಗನ್ನಡಿಯೂ, ರಸಿಕರ ಸಂತೋಷಕ್ಕೆ ಸಮುದ್ರನೂ, ಮಿತ್ರನೂ ಆದ ದೇವಪ್ಪಕವಿಯು ರಚಿಸಿದ ಸತ್ಕಾವ್ಯವಿದು ॥ ೧೮೭ ॥ ಎಲೈ ಚೇಳಿನಿಯೇ, ಈ ದಿವಸ ಮುಂದಿನ ಕಥೆಗಳನ್ನು ತಿಳಿಸುವೆನೆಂದು ಮೆಲ್ಲಮೆಲ್ಲನೆ ಮುಂದುವರಿದು, ಇಲ್ಲಿಗೆ ಈ ಸಂಧಿ ಪೂರ್ಣವಾಯಿತು ಇನ್ನು ಇಲ್ಲಿಂದ ಮುಂದಿನ ಕಥೆಯನ್ನು ತಿಳಿಸುವೆನು—ಎಂದು ಶ್ರೇಣಿಕರಾಜನು ತನ್ನ ಮಡದಿಗೆ ಹೇಳಿದನು ॥ ೧೮೮ ॥ ಬ್ರಾಹ್ಮಣಕುಲದಲ್ಲಿ ಹುಟ್ಟಿದವನೂ, ಹೊಸ ಮನ್ಮಥ ಸ್ವರೂಪನೂ. ನಿರ್ಮಲ ಗುಣ ಯುಕ್ತನೂ, ಜಿನೇಶ್ವರನ ಪಾದಕಮಲಕ್ಕೆ ಸೊಕ್ಕಿದ ತುಂಬಿಯಂತಿರುವವನೂ, ವಾಗ್ದೇವಿಗೆ ಅತ್ಯುನ್ನತವಾದ ಸ್ವಚ್ಛವಾದ ರತ್ನದ ಕನ್ನಡಿಯಂತಿರುವವನೂ, ಪರಿಶುದ್ಧ ಚಾರಿತ್ರವುಳ್ಳವನೂ, ಸಚಿವನೂ ಆದ ದೇವಪ್ಪನು ಸಂತೋಷದಿಂದ ಹೇಳಿದ ರಾಮ ವಿಜಯದಲ್ಲಿ ಸೇರಿದಂತೆ ವಿರಚಿತವಾಗಿ ನಾಲ್ಕನೆಯ ಸಂಧಿ ಖ್ಯಾತಿಪಡೆಯಿತು ॥ ೧೮೯ ॥

---

[1] ಇಳಿದ (ಗ) [2] ಕುವರರ (ಗ ಚ) [3] ಕಟ್ಟಿಗೆಯವರಿಂದ (ಗ ಚ) [4] ನಿಳಯ ಸುಕವಿಜನ (ಗ) ೧೮೭–ಈ ಪದ್ಯ ಗ ಚ ದಲ್ಲಿಲ್ಲ

## ೫. ರಾಮಸ್ವಾಮಿ ಜನನ

ಶ್ರೀಮದ್ಭವ್ಯ ಚಿಂತಾಯತ ವರಮುಕ್ತಿ । ಕಾಮಿನಿಯರಸಘವಿಜಯ ॥
ಕಾಮ ಮದಾಪಹರಣ[1] ಮುನಿಸುವ್ರತ । ಸ್ವಾಮಿ ಕೊಡೆನಗೆ ಸನ್ಮತಿಯ[2] ॥ ೧ ॥

ಮುಂದಣ ಕಥೆಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೨ ॥

ಅಳಿಗುರುಳಳೆ ಅಂಚೆ ನಡಯಳೆ ತಳಿರಡಿ । ದಳದಳೆ[3] ಕಳಸಕುಚದಳೆ
ಗಿಳಿನುಡಿಯಳೆಯಸಿಯಳೆ ಯೆಳೆಯಳೆ ಕೇಳು । ತಳುವದೆ ಮುಂದಣ ಕಥೆಯ ॥ ೩ ॥

ನಡೆಗೆ ಶುಚಿಗಳು ಗಾಡಿಗೆ ಗರುವೆಯರು ನು । ಣ್ಣುಡಿಗೆ ವಿಬುಧರು ವಿಕ್ರಮಕೆ ॥
ಕಡುಗಲಿಗಳು ಸೋಲ್ವರೆನೆ ಶ್ರೇಣಿಕ ನಿನ್ನ । ನುಡಿಯಲಳವೆ ಜಡಜನರು ॥ ೪ ॥

ಚದುರರ ಮನವ ಚಾಟುಗಳ ಚಿತ್ತವ ಮೃದು । ಹೃದಯರಂತಃಕರಣವನು ॥
ಸದಮಲಚರಿತರ ಬಗೆಯ[4] ಬಗ್ಗಿಸುತಿವೆ । ಮದನೋಪಮ ನಿನ್ನ ಮಾತು ॥ ೫ ॥

ಎಂದು ನುಡಿದ ತನ್ನ ಜೀವಕಾಂತೆಯ ವದ । ನೇಂದುವ ನೋಡಿ ನಿಟ್ಟಿಸುತ ।
ಮಂದಗಮನೆ ಸುಬಳಾದೇವಿಗೆ ಕೇ । ಳೊಂದಾನೊಂದು ದಿನದೊಳು ॥ ೬ ॥

ಮೊಗದೊಳು ಮೂಡುವ ಮೊಡವಿ ತೋಳ್ಮೊದಲೊಳ । ಗೊಗೆವ ಸುಗಂಪು ಮೇಗಡೆಗೆ[5]
ನೆಗೆವ ಮೊಲೆಗಳರಸಿಗೆ ಸೂಚಿಸಿದವಂದು । ಮಿಗೆ ಪುಷ್ಪಸಮಯೋದಯವ[6] ॥ ೭ ॥

---

ಶ್ರೀಯಿಂದ ಕೂಡಿದ, ಭವ್ಯಜನರ ಚಿಂತನೆಯ ವಿಸ್ತಾರವುಳ್ಳ, ಮೋಕ್ಷವೆಂಬ ಸ್ತ್ರೀಯ ಒಡೆಯನಾದ, ಪಾಪವನ್ನು ಗೆದ್ದಿರುವ, ಮನ್ಮಥನ ಮದವನ್ನು ಅಪಹಾರಮಾಡಿದ ಮುನಿಸುವ್ರತ ಸ್ವಾಮಿಯೇ, ನನಗೆ ಒಳ್ಳೆಯ ಬುದ್ಧಿಯನ್ನು ಕೊಡು. ॥ ೧ ॥ ಎಲ್ಲೈ ಮನ್ಮಥಸ್ವರೂಪನೇ, ಮುಂದಿನ ಕಥೆ ಯಾವುದು? ಅದರ ಸಂಗತಿಯನ್ನು ಒಂದಿಷ್ಟೂ ಉಳಿದುಹೋಗದಂತೆ ನನಗೆ ತಿಳಿಸಬೇಕು—ಎಂದು ಚೇಳಿನೀದೇವಿಯು ಹೇಳಿದಳು. ಆಗ ಶ್ರೇಣಿಕನು ಎಲ್ಲೈ ನೈದಿಲೆ ಹೂವಿನಂತೆ ಸುಂದರವಾದ ಕಣ್ಣಿನ ಚೇಳಿನಿಯೇ ಕೇಳು, ಹೇಳುತ್ತೇನೆ—ಎಂದನು. ॥ ೨ ॥ ತುಂಬಿಯಂತಹ ಕೂದಲಿನ, ಹಂಸೆಯಂತಹ ನಡಿಗೆಯ, ಚಿಗುರಿನಂತಹ ಪಾದತಳದ ಕಲಶದಂತಹ ಸ್ತನವುಳ್ಳ, ಗಿಳಿಯಂತಹ ಮಾತಿನ ತೆಳ್ಳಗಿನ ಮೈಯ ಎಳೆಯಳಾದ ಚೇಳಿನಿಯೇ ತಡವಿಲ್ಲದೆ ಮುಂದಿನ ಕಥೆಯನ್ನು ಕೇಳು—ಎಂದನು. ॥ ೩ ॥ ಆಗ ಚೇಳಿನಿಯು ಎಲ್ಲೈ ಶ್ರೇಣಿಕನೇ, ನಿನ್ನ ನಡತೆಗೆ ಶುಚಿವಂತರೂ ಸೊಬಗಿಗೆ ಘನತೆಯುಳ್ಳ ಹೆಂಗುಸರೂ ನಯವಾದ ಮಾತಿಗೆ ವಿದ್ವಾಂಸರೂ ಪರಾಕ್ರಮಕ್ಕೆ ವೀರಾಧಿವೀರರೂ ಸೋತುಹೋಗುವರು ಎನ್ನುವಾಗ ಮಂದಬುದ್ಧಿಯ ಜನರು ನಿನ್ನ ಕುರಿತು ಏನು ತಾನೇ ಹೇಳಬಲ್ಲರು? ॥ ೪ ॥ ಎಲ್ಲೈ ಮನ್ಮಥನಂತಿರುವವನೇ, ನಿನ್ನ ಮಾತುಗಳು ಚಾತುರ್ಯವಂತರ ಮನಸ್ಸನ್ನೂ ಚಟುಲತೆಯುಳ್ಳವರ ಚಿತ್ತವನ್ನೂ ಮೆಲ್ಲೆದೆಯವರ ಅಂತಃಕರಣವನ್ನೂ ಒಳ್ಳೆಯ ಪರಿಶುದ್ಧವಾದ ನಡತೆಯವರ ಮನೋಭಾವವನ್ನೂ ಸೋಲಿಸುವಂತಿವೆ. ॥ ೫ ॥ ಹೀಗೆ ಹೇಳಿದ ತನ್ನ ಪ್ರಾಣವಲ್ಲಭೆಯ ಮುಖಚಂದ್ರನನ್ನು ನೋಡುತ್ತ ಶ್ರೇಣಿಕನು ಕಥೆಯನ್ನು ಮುಂದುವರಿಸಿದನು—ಮೆಲ್ನಡೆಯಿಂದ ಕೂಡಿದ ಸುಬಳಾದೇವಿಯು ಹೀಗಿರುತ್ತ ಒಂದು ದಿವಸ ಋತುಮತಿಯಾದಳು. ॥ ೬ ॥ ಮುಖದಲ್ಲಿ ಮೂಡಿ

---

[1] ಮದಾಂಧಭಾಸ್ಕರ (ಕ). [2] ಭಕ್ತಿಯನು (ಚ) [3] ಗಳದಳೆ (ಗ). [4] ಬಳೆಯ (ಗ) [5] ಮೈಗಡೆಗೆ (ಗ). [6] ಸಮಯೋದಯದೊಳು (ಕ.ಚ ).

ಮಿಱುಪ ಜಘನಕೆ ತೋಳ್ಮೊದಲ್ಗೆ ಕುಚದ ತಾಣ[1] । ಕೆಱಗುವಳಿಯ ಕಾಣುತವೆ ॥
ಅಱಿದೋರ್ವ ಚದುರೆ ಹೊಂಚೆಳೆಗೊಟ್ಟಳಾ ನೆಱೆ । ವೆಱೆವೊಗದಳ ಕರದೊಳಗೆ ॥ ೮ ॥

ಹೊಂಚೆಳೆವಿಡಿದರುಣಾಂಬರವುಟ್ಟಪ । ರಂಜಿದೊಡವ ತೊಟ್ಟೆಸೆದಳು ॥
ಕುಂಜರಗಮನೆ ಕೆಮ್ಮುಗಿಲ ಮಱೆಯ ಸಾರಿ । ರಂಜಿಪ ಶಶಿಲೇಖೆಯಂತೆ[2] ॥ ೯ ॥

ತಲೆನೀರ ಮಿಂದು ನಾಲ್ಕನೆಯ ದಿನದೊಳಾ । ಲಲನೆಯೊಪ್ಪಿದಳು ಕಾಳಿಕೆಯ ॥
ತೊಲಗಿಸಿ ತೊಳೆದೊಪ್ಪವಿಟ್ಟಪರಂಜಿಯ । ಚೆಲುವ ಪುತ್ತಳಿಯೆಂಬಂತೆ ॥ ೧೦ ॥

ತೊಡೆದ ಬಾವನ್ನ ಮುಡಿದ ಮಲ್ಲಿಗೆ ನಿಱಿ । ವಿಡಿದುಟ್ಟ ದುಗುಲ ಮುತ್ತುಗಳ ॥
ತೊಡವೆಸೆದಿರೆ ಪಳುಕಿನ ಪುತ್ತಳಿಯುಸು । ವಡೆದಂತೆಸೆದಳಾ ರಮಣಿ ॥ ೧೧ ॥

ಪಜ್ಜಳಿಸುವ ಪಾವುಗೆ ಮೆಟ್ಟಿ ಮೆಲ್ಲನೆ । ಗುಜ್ಜು ನಡೆಯೊಳು ತಾ ನಡೆದು[3]
ಸೆಜ್ಜೆಮನೆಯ ಪೊಕ್ಕು[4] ಸತಿ ಕುಳ್ಳಿರ್ದಳು । ಗುಜ್ಜರಿಗಾಲ[5]ಮಂಚದೊಳು ॥ ೧೨ ॥

ಪುರುಷೋತ್ತಮ ಪುಷ್ಪಚಾಪ ಪುರಂದರ । ಸಿರಿ ರತಿ ಶಚಿಯೆಡೆಗಿರದೆ[6] ॥
ಹರುಷದಿಂ ಪೋಪಂತೆ ಪೋದನಾ ನೃಪ ತ । ನ್ನರಸಿಯೆಡೆಗೆ ಸೆಜ್ಜೆವನೆಗೆ ॥ ೧೩ ॥

ಕಪ್ಪುರ ಕತ್ತುರಿ ಕುಂಕುಮ ಪನಿನೀರ । ಕುಪ್ಪಿಗೆ ವರ ಮಲಯಜದ ॥
ಸಿಪ್ಪು[7] ನಾನಾ ಪುಷ್ಪದ ಪಡಲಿಗೆ[8]ಗಳಂ । ದೊಪ್ಪಿದವಾ ಗೃಹದೊಳಗೆ ॥ ೧೪ ॥

---

ಬರುವ ಮೊಡವೆಗಳೂ, ಕಂಕುಳಲ್ಲಿ ಹುಟ್ಟುವ ವಾಸನೆಯೂ, ಮೇಲುಗಡೆಗೆ ಎದ್ದು ತೋರುವ ಮೊಲೆಗಳೂ, ರಾಣಿಯ ಋತು ಸಮಯವನ್ನು ಸೂಚಿಸುತ್ತಿದ್ದುವು ॥ ೭ ॥ ಹೊಳೆಯುತ್ತಿರುವ ನಿತಂಬಕ್ಕೂ ಕಂಕುಳಿಗೂ ಸ್ತನಪ್ರದೇಶಕ್ಕೂ ಬಂದು ತುಂಬಿಗಳು ಎರಗುವವನ್ನು ಕಂಡು, ಒಬ್ಬಳು ಚತುರಳಾದ ಹೆಂಗುಸು ಬಂದು, ಆ ಚಂದ್ರಮುಖಿಯಾದ ಸುಬಳೆಗೆ ಒಂದು ಚಿನ್ನದ ಕೋಲನ್ನಿತ್ತಳು ॥ ೮ ॥ ಆನೆಯಂತಹ ಮೆಲುನಡಿಗೆಯ ಸುಬಳಾದೇವಿಯು ಚಿನ್ನದ ಕೋಲನ್ನು ಹಿಡಿದುಕೊಂಡು, ಕೆಂಬಣ್ಣದ ಸೀರೆಯನ್ನುಟ್ಟು ಅಪರಂಜಿಚಿನ್ನದ ಆಭರಣಗಳನ್ನು ತೊಟ್ಟು, ಕೆಂಪು ಮೋಡದ ಮರೆಯಲ್ಲಿ ಸೊಗಸಾಗಿ ತೋರುವ ಚಂದ್ರಬಿಂಬದಂತೆ ಶೋಭಿಸಿದಳು ॥ ೯ ॥ ಆ ಮೇಲೆ ನಾಲ್ಕನೆಯ ದಿವಸ ಸುಬಳಾದೇವಿಯು ತಲೆಗೆ ಸ್ನಾನಮಾಡಿದಳು ಆಗ ಆಕೆ ಕಶ್ಮಲವನ್ನು ಕಳೆದು, ತೊಳೆದು, ಒಪ್ಪಹಾಕಿದ ಶುದ್ಧಚಿನ್ನದ ಚೆಲುವಿನ ಗೊಂಬೆಯಂತೆ ಶೋಭಿಸಿದಳು ॥ ೧೦ ॥ ಅನುಲೇಪಿಸಿದ ಶ್ರೀಗಂಧವೂ ಮುಡಿದಿರುವ ಮಲ್ಲಿಗೆಯೂ ನಿರಿಹಿಡಿದು ಉಟ್ಟ ಪಟ್ಟೆಸೀರೆಯೂ ತೊಟ್ಟ ಮುತ್ತಿನ ಆಭರಣವೂ ಶೋಭಿಸಿಕೊಂಡಿರಲು, ಆ ಸ್ತ್ರೀಯು ಚಂದ್ರಕಾಂತದ ಪ್ರತಿಮೆಗೆ ಪ್ರಾಣಬಂದಿರುವಂತೆ ಶೋಭಿಸಿದಳು ॥ ೧೧ ॥ ಆ ಸುಬಳಾದೇವಿಯು ಪ್ರಕಾಶಿಸುತ್ತಿರುವ ಪಾದುಕೆಯನ್ನು ಮೆಟ್ಟಿಕೊಂಡು ಮೆಲುನಡೆಯಲ್ಲಿ ನಡೆದು ಮಲಗುವ ಕೊಠಡಿಯನ್ನು ಪ್ರವೇಶಿಸಿ, ಅಲ್ಲಿ ಗಿಡ್ಡಕಾಲಿನ ಮಂಚದಲ್ಲಿ ಕುಳಿತಳು ॥ ೧೨ ॥ ಮಹಾವಿಷ್ಣು ಲಕ್ಷ್ಮೀದೇವಿಯಿರುವಲ್ಲಿಗೂ, ಮನ್ಮಥನು ರತಿಯಲ್ಲಿಗೂ, ದೇವೇಂದ್ರನು ಶಚೀದೇವಿಯ ಬಳಿಗೂ, ಸಂತೋಷದಿಂದ ಹೋಗುವಂತೆ ದಶರಥನು ತನ್ನ ಅರಸಿಯಿರುವ ಕಡೆಗಾಗಿ ಶಯ್ಯಾಗೃಹಕ್ಕೆ ಹೋದನು ॥ ೧೩ ॥ ಆ ಶಯ್ಯಾಗೃಹದಲ್ಲಿ ಕರ್ಪೂರ, ಕಸ್ತೂರಿ, ಕುಂಕುಮ, ಪನ್ನೀರಿನ ಬುಡ್ಡಿ,

---

[1] ತಾಳ (ಗ ಚ) [2] ಶಶಿರೇಖೆಯಂತೆ (ಗ) ೧೦ನೆ ಪದ್ಯದ ಉತ್ತರಾರ್ಧವೂ ೧೧ನೆ ಪದ್ಯದ ಪೂರ್ವಾರ್ಧವೂ ಗ ದಲ್ಲಿ ಪಾತವಾಗಿದೆ [3] ನಡೆಯೊಳೈತಂದು (ಗ ಚ) [4] ಸೆಜ್ಜೆವನೆಗೆ ಬಂದು (ಗ ಚ) [5] ಗುಜ್ಜರಿಗಾಲ (ಗ) [6] ಶಚಿಯೊಡನಿರದೆ (ಕ) [7] ಸಿರ್ಪು (ಚ) [8] ಪುಷ್ಪ ದಡಲಿಗೆ (ಗ)

ಕುರುಳ ನೇವರಿಸುತ ಯಕ್ಷ್ಕಕರ್ದಮವನಂ । ದಿರದೆ ಲೇಪಿಸುತಂಗದೊಳಗೆ ॥
ವರಲಜ್ಜೆದೆರೆಯ ತೆಗೆದು[1] ಕಾಮುಗಲಹವ । ನಿರದೆಸಗಿದರಂದವರು ॥ ೧೫ ॥

ರೀತಿಯಱಿದು ಕಾತರವಱಿದವನ ಸು । ಪ್ರೀತಿಯಱಿದು ಬಗೆಯರಿದು ॥
ಆ ತರಳಾಕ್ಷಿ ನೆರೆದು ಸಂದಿಸಿದಳಂಗ । ಜಾತನುಬ್ಬೆಗವನಾ ನೃಪಗೆ ॥ ೧೬ ॥

ಹೃದಯವಱಿದು ಚದುರಱಿದು ಬಂಧಂಗಳ । ಹದನಱಿದಱಿದಾಗ[2] ತನ್ನ ॥
ಎದೆಯಾಣ್ಮಗೆ ಸುಖವಿತ್ತು ಸುಖಿಸಿದಳಾ । ಚದುರೆ ಭೃಂಗೋಪಮ ತಾರೆ[3] ॥ ೧೭ ॥

ಹಲವು ಬಂಧಂಗಳಿಂ[4] ಹಲವು ರೀತಿಗಳಿಂದ । ಹಲವು ಬಗೆಯ ಕೂಟದಿಂದ ॥
ಹಲವು ಕಲೆಗಳಿಂದ ಕೂಡಿ ಸುಖಿಸಿ ತನ್ನ[5] । ಲಲನೆಗೆ ಸುಖವಿತ್ತನವನು ॥ ೧೮ ॥

ನಯನ ನಾಸಿಕ ಪರುಶನ[6] ಕರ್ಣರಸನೇಂ । ದ್ರಿಯಗಳಟ್ಟುಳಿಯ ನೀರೇಜ ॥
ನಯನನಣುಗನುಱುಬೆಯ ನಿಲಿಸಿದ ತನ್ನ । ಪ್ರಿಯತಮ[7]ಗಂದಾ ರಮಣಿ ॥ ೧೯ ॥

ಇಂತು ಸುರತಸುಖದೊಳಗೋಲಾಡಿಯೆ । ಕಂತುಸದೃಶರೂಪ ತನ್ನ ॥
ಕಾಂತೆವೆರಸು ಲೀಲೆಯೊಳಂದು ನಿದ್ರಾ । ಕಾಂತೆಗೂಡಿರಲಾ ಕಾಂತೆ ॥ ೨೦ ॥

ಚಂಡಕಿರಣ ಜೈವಾತೃಕ ಮದವೇ । ತಂಡ ಪಂಚಾನನಗಳನು ॥
ಪುಂಡರೀಕಾಕ್ಷಿ ನಿಶಾವಸಮಯದೊಳು । ಕಂಡಳು ಕನಸಿನೊಳಂದು ॥ ೨೧ ॥

ಶೀಡುವೆಲರು ತಾವರೆಗೊಳದಿಂದೆದ್ದು । ಪಾಡುವ ತುಂಬಿ ಗೀತಗಳ ॥
ಪಾಡುವಂಗನೆಯರು ಪರಿಹರಿಸಿದರಾ । ಗಾಡಿಕಾತಿಯ ನಿದ್ರೆಯನು ॥ ೨೨ ॥

---

ಶ್ರೇಷ್ಠವಾದ ಶ್ರೀಗಂಧದ ಕವಳಿಗೆ, ಹಲವಾರು ವಿಧದ ಹೂಗಳ ತಟ್ಟೆಗಳು ಶೋಭಿಸಿದವು. ॥ ೧೪ ॥ ಅಲ್ಲಿ ತಲೆಗೂದಲನ್ನು ಸರಿಗೊಳಿಸುತ್ತಲೂ ಯಕ್ಷಕರ್ದಮವೆಂಬ ಸುಗಂಧ ದ್ರವ್ಯವನ್ನು ಹಚ್ಚಿಕೊಳ್ಳುತ್ತಲೂ ದೇಹದ ನಾಚಿಕೆಯ ಪರದೆಯನ್ನು ತೆಗೆದುಹಾಕಿ, ಅವರಿಬ್ಬರೂ ಕಾಮಕ್ರೀಡೆಯನ್ನು ಮಾಡಿದರು. ॥ ೧೫ ॥ ಚಂಚಲವಾದ ಕಣ್ಣಿನ ಆ ಸುಬಳಾದೇವಿಯು ರಾಜನ ರೀತಿಯನ್ನೂ ಕಾತರವನ್ನೂ ಪ್ರೀತಿಯನ್ನೂ ಮನೋಭಾವವನ್ನೂ ತಿಳಿದುಕೊಂಡು, ಅವನ ಒಡನಾಡಿ, ಆತನ ಕಾಮೋದ್ವೇಗವನ್ನು ತಣಿಸಿದಳು. ॥ ೧೬ ॥ ಚತುರಳಾದ ಸುಬಳಾದೇವಿಯು ಹೃದಯವನ್ನರಿತು, ಚಾತುರ್ಯವನ್ನರಿತು, ಬಂಧಗಳ ಪ್ರಮಾಣಗಳನ್ನರಿತು, ತನ್ನ ಹೃದಯಾಧೀಶನಿಗೆ ಸುಖವನ್ನಿತ್ತು ತಾನೂ ಸುಖಪಟ್ಟಳು. ॥ ೧೭ ॥ ದಶರಥನು ಹಲವು ವಿಧವಾದ ಬಂಧಗಳಿಂದಲೂ, ಹಲವು ರೀತಿಗಳಿಂದಲೂ, ಹಲವು ಬಗೆಯ ಕೂಟಗಳಿಂದಲೂ, ಹಲವು ಕಲೆಗಳಿಂದಲೂ, ಒಡನಾಡಿ ಸುಖಪಟ್ಟು ತನ್ನ ಮಡದಿಗೆ ಸುಖವನ್ನಿತ್ತನು. ॥ ೧೮ ॥ ಆಕೆಯು ತನ್ನ ಪ್ರಿಯತಮನಿಗೆ ಕಣ್ಣು, ಮೂಗು, ಸ್ಪರ್ಶೇಂದ್ರಿಯ, ಕಿವಿ, ನಾಲಗೆ—ಎಂಬ ಐದು ಇಂದ್ರಿಯಗಳ ಪೀಡೆಯನ್ನೂ ಮನ್ಮಥನ ಬಾಧೆಯನ್ನೂ ನಿಲ್ಲುವಂತೆ ಮಾಡಿದಳು. ॥ ೧೯ ॥ ಮನ್ಮಥನಂತಹ ಸುಂದರರೂಪಿನ ದಶರಥನು ತನ್ನ ಪತ್ನೀಸಮೇತನಾಗಿ ರತಿಸುಖದಲ್ಲಿ ತೇಲಾಡಿ, ಸಂತೋಷದಿಂದ ನಿದ್ರಾಂಗನೆಯನ್ನು ಒಡನಾಡಿದನು. ಆಗ ಆ ಸುಬಳಾದೇವಿ ಒಂದು ಕನಸನ್ನು ಕಂಡಳು. ॥ ೨೦ ॥ ಸುಬಳಾದೇವಿಯು ರಾತ್ರಿಯ ಕೊನೆಯ ವೇಳೆಯಲ್ಲಿ ಒಂದು ಕನಸಿನಲ್ಲಿ ಸೂರ್ಯ, ಚಂದ್ರ, ಮದ್ದಾನೆ, ಸಿಂಹಗಳನ್ನು ಕಂಡಳು. ॥ ೨೧ ॥ ಬೆಳಗಾಗಲು, ತಾವರೆಯ ಕೊಳದಿಂದ ಎದ್ದು ಬೀಸುವ ಗಾಳಿಯೂ ಹಾಡುವ ತುಂಬಿಗಳೂ ಉದಯಗೀತಗಳನ್ನು ಹಾಡುವ

---

[1] ತೆರೆದು (ಗ). [2] ಪದವಱಿದಱಿದಾಗ (ಗ) ಪದನಱಿದಱಿದಾಗ (ಚ) [3] ವಾರೆ (ಕ) [4] ಬಂಧಗಳಿಂದ (ಗ ಚ) [5] ಸುಖಿಸಿದನಾ (ಗ). [6] ಪುರುಷನ (ಚ) [7] ಪ್ರಿಯಾತ್ಮ (ಗ)

ಏಳೆಳೆವೆಣ್ಗಳ[1] ತಲೆರನ್ನವೆ ನೀ । ನೇಳು ಮೂಡಿದ ಪದ್ಮಸಖನು ॥
ಏಳೇಳೆಂದು ನುಡಿವ ಗಿಳಿಗಳ ಮಾತ । ಕೇಳುತಲೆದ್ದು ಕಣ್ದೆಱೆದು ॥ ೨೩ ॥

ನಗೆಮೊಗವನು ತೊಳೆದರುಹಗೆಱಗಿ ತೊಟ್ಟು । ಮಿಗೆ ರತ್ನದಾಭರಣವನು ॥
ಮೃಗಮದಗಂಧಿ ಬಂದಳು ತನ್ನ ಪುರುಷ[2]ನೋ । ಲಗಕಂಬುಜದಳ ನೇತ್ರೆ ॥ ೨೪ ॥

ಕಾಣುತಲರ್ಧಾಸನವಿತ್ತಾ ನೃಪ । ಪ್ರಾಣೇಶ್ವರಿಯ ಕೈವಿಡಿದು ॥
ಮಾಣದೆ ಕುಳ್ಳಿರೆನಲು ಕುಳ್ಳಿರ್ದಳಾ । ಯೇಣಾಂಕವದನೆ ಲೀಲೆಯೊಳು ॥ ೨೫ ॥

ಪಲ್ಲ ಬೆಳಗು ಪಸರಿಸುವಂತಾ ನವ । ಪಲ್ಲವಾಧರೆ ದಶರಥಗೆ ॥
ನಿಲ್ಲದೆ ತಾ ಕಂಡ ಕನಸ ಪೇಳಲು ಪೇಳ್ದ । ನಿಲ್ಲದಂತವಱ[3] ಫಲವನು ॥ ೨೬ ॥

ಕರಿಯಿಂದ ದಾನ ಚಂದಿರನಿಂದ[4] ಕಲೆಯುತ । ಹರಿಯಿಂದ ವೀರವಿಕ್ರಮನು ॥
ಖರಕರನಿಂ[5] ಖರತೇಜಸ್ವಿ ಸುತನೋರ್ವ । ನಿರದೆ ಪುಟ್ಟುವ ನಿನಗಬಲೇ ॥ ೨೭ ॥

ಘನನಿನದವ ಕೇಳ್ದ ಕೇಕಿ ಚಿತ್ತದೊಳಂ । ದನುರಾಗವನೈದುವಂತೆ ॥
ಘನಕುಚೆ ಸುತಲಾಭವಾರ್ತೆಗೇಳುತ ತನ್ನ । ಮನದೊಳು ನಲಿದಳಾ ರಮಣಿ ॥ ೨೮ ॥

ಕತಿಪಯ ದಿನಗಳು ಕಳಿಯೆ ಸುಬಳದೇವಿ[6] । ಸತಿಗೆ ಬೆಳೆಯೆ ಗರ್ಭವಿರದೆ ॥
ಅತಿಶಯ ಗರ್ಭಚಿಹ್ನಗಳು ತೋಱಿದವಿಂತು । ಶತಪತ್ರದಳ ಲೋಚನೆಗೆ ॥ ೨೯ ॥

ಪುಟ್ಟಿತು ನಡೆಗಲಸಿಕೆ[7] ಮನದೊಳು ಮುದ । ಪುಟ್ಟಿತಂಗದೊಳತಿ ಕಾಂತಿ ॥
ಪುಟ್ಟಿತು ತಲೆನವಿರೋಳಿಗೆ[8] ಕವಲಂದು । ಪುಟ್ಟಿತು ಗರ್ಭದೊಳವಳ ॥ ೩೦ ॥

---

ಹೆಂಗುಸರೂ ಆ ಸುಂದರಿಯ ನಿದ್ದೆಯನ್ನು ಬಿಡಿಸಿದರು. ॥ ೨೨ ॥ ಎಲೈ ಎಳೆಯ ಹೆಂಗಳ ಶಿರೋಮಣಿಯೇ ಏಳು ಸೂರ್ಯನು ಮೂಡಿದನು ಏಳು, ಏಳು—ಎಂದು ಹೇಳುವ ಗಿಳಿಗಳ ಮಾತನ್ನು ಕೇಳಿ, ಆಕೆ ಎದ್ದು ಕಣ್ಣು ತೆರೆದಳು ॥ ೨೩ ॥ ಕಸ್ತೂರಿಯ ಸುವಾಸನೆಯುಳ್ಳ ಆಕೆಯು ತನ್ನ ನಗೆಮೊಗವನ್ನು ತೊಳೆದು, ಜಿನೇಶ್ವರನಿಗೆ ವಂದಿಸಿ, ರತ್ನದ ಒಡವೆಗಳನ್ನು ತೊಟ್ಟು, ತನ್ನ ಪತಿಯ ಓಲಗಶಾಲೆಗೆ ಬಂದಳು ॥ ೨೪ ॥ ರಾಜನು ತನ್ನ ಜೀವದ ಒಡತಿಯನ್ನು ಕಾಣುತ್ತಲೇ ಅರ್ಧಾಸನವನ್ನು ಕೊಟ್ಟು, ಆಕೆಯ ಕೈಹಿಡಿದು ಕುಳಿತುಕೊಳ್ಳಲು ಹೇಳಿದನು ಆ ಚಂದ್ರಮುಖಿಯಾದ ರಾಣಿಯು ಸಂತೋಷದಿಂದ ಕುಳಿತುಕೊಂಡಳು. ॥ ೨೫ ॥ ಹೊಸ ಚಿಗುರಿನಂತೆ ಕೆಂಪಾದ ತುಟಿಯುಳ್ಳ ರಾಣಿಯು ತಾನು ಕಂಡ ಕನಸಿನ ವಿವರವನ್ನು, ತನ್ನ ಹಲ್ಲಿನ ಪ್ರಕಾಶವು ಹರಡುವಂತೆ ದಶರಥನಿಗೆ ಹೇಳಿದಳು ಕೂಡಲೇ ಅವನು ಆ ಕನಸಿನ ಫಲವನ್ನು ಹೀಗೆ ಹೇಳಿದನು ॥ ೨೬ ॥ ಎಲೈ ಮಡದಿಯೇ ನಿಶ್ಚಯವಾಗಿಯೂ ನಿನಗೆ ಒಬ್ಬ ಮಗನು ಜನಿಸುವನು. ನೀನು ಆನೆಯನ್ನು ಕನಸಿನಲ್ಲಿ ಕಂಡುದರಿಂದ ಅವನು ದಾನಿಯಾಗುವನು ಚಂದ್ರನನ್ನು ನೋಡಿದುದರಿಂದ ಕಲೆಗಳಿಂದ ಕೂಡಿದವನಾಗುವನು. ಸಿಂಹವನ್ನು ಕಂಡುದರಿಂದ ಪರಾಕ್ರಮಿಯಾಗುವನು. ಸೂರ್ಯನನ್ನು ಕಂಡುದರಿಂದ ಉಜ್ವಲತೇಜಸ್ವಿಯಾಗುವನು ಎಂದು ರಾಜನು ಹೇಳಿದನು ॥ ೨೭ ॥ ಮೇಘದ ಶಬ್ದವನ್ನು ಕೇಳಿದ ನವಿಲು ತನ್ನ ಮನಸ್ಸಿನಲ್ಲಿ ಆನಂದವನ್ನು ತಾಳುವಂತೆ, ಆ ರಾಣಿಯು ತನಗೆ ಮಗನಾಗುವ ಸಂಗತಿಯನ್ನು ಕೇಳಿ, ತನ್ನ ಮನಸ್ಸಿನಲ್ಲಿ ಆನಂದಪಟ್ಟಳು ॥ ೨೮ ॥ ಕೆಲವು ದಿವಸಗಳು ಕಳೆಯಲು ಸುಬಳಾದೇವಿಗೆ ಗರ್ಭವು ಬಳೆಯಲು, ಆಕೆಯಲ್ಲಿ ಗರ್ಭಚಿಹ್ನೆಗಳು ತೋರತೊಡಗಿದವು ॥ ೨೯ ॥ ಅವಳು ಗರ್ಭಿಣಿಯಾದುದರಿಂದ ಅವಳ ನಡಿಗೆಗೆ ಆಲಸ್ಯವುಂಟಾಯಿತು,

---

[1] ಮೆಂಗಳ (ಗ ಚ) [2] ತನ್ನರಸ (ಗ) [3] ನಿಲ್ಲದಂತಿವರ (ಗ) [4] ಕರಿಯಿಂದ ಮದಯುತ ಹರಸಿಂದ (ಕ) [5] ಕರಕರನಿಂ (ಚ)
[6] ಸುಸುಬಳಾ (ಗ ಚ) [7] ಮನದಲಸಿಕೆ (ಗ) [8] ನರೋಳಿಗೆ (ಗ ಚ)

ವಳಿ[1]ಗಳಳಿದವಾ ನೃಪನರಸಿಯ ಗರ್ಭ । ದೊಳಗಿರ್ಪ ಕುವರನ ದೆಸೆಯಿಂ ॥
ಅಳಿವರೀ ಪರಿಯರಿರಾಯರ[2]ವಂಶಾ । ವಳಿಗಳೆಂಬುದ ಸೂಚಿಪಂತೆ ॥ ೩೧ ॥

ವರವನಿತೆಯ ಬಸುಱೊಳು[3] ಗುರುಕುಚದಗ್ರ । ಕರ ಕರಿದಾದವೆಂತೆನಲು[4] ।
ಅರುಣಾಂಬುಜದ ಮೊಗ್ಗೆಯ ಮೇಲರಲುಣಿ । ಹರುಷದಿಂ[5] ಬಿಡದೊಪ್ಪುವಂತೆ ॥ ೩೨ ॥

ಬಂಬಲುಗುರುಳೋಳಿ ಪರೆದಿರಲವಳ ಮು । ಖಾಂಬುಜವೆಸೆದುದೆಂತೆನಲು ॥
ತುಂಬಿಗಳೋಳಿ[6] ಬಳಸಿ ರಾಜಿಪ ಧವ । ಳಾಂಬುಜವೆಂಬಂದದೊಳು ॥ ೩೩ ॥

ಮಡದಿ ಕೇಳಾ ಗರ್ಭ ಜನಿಸಿ ಬೆಳೆಯಲಂ । ದೊಡನೆ ರತ್ನದ ಭೂಷಣವನು ॥
ಕಡುಭಾರವೆಂದು ಕಳೆದು ತೊಟ್ಟಳು ಪೂ । ದೊಡವನಂದಾ ಕೋಮಲಾಂಗಿ ॥ ೩೪ ॥

ಮಣ್ಣ ಮೆದ್ದುಗುಳುವ ಬಯಕೆ ಪುಟ್ಟತು ನಿಡು । ಗಣ್ಣಬಲೆಗೆ ತನ್ನುದರದ[7] ॥
ಚಿಣ್ಣನಾಳ್ದಿರದೆ ಬಿಡುವ ಪಗೆಯರ ನೆಲ । ವೆಣ್ಣನೆಂಬುದ ಸೂಚಿಪಂತೆ ॥ ೩೫ ॥

ಪರಮನ ಪೂಜೆಮಾಳ್ಪುದು ವಿತ್ತವ ಭೂ । ಸುರರಿಗೆಯಿತ್ತು[8] ದಣಿಪುದು ॥
ಕರೆದು ಚಾತುರ್ವರ್ಣಕಾಹಾರವ ನೀವು । ದಿರದೆ ಪುಟ್ಟದುದಾ ಸತಿಗೆ ॥ ೩೬ ॥

ಇವು ಮೊದಲಾದ ಬಯಕೆಗಳನಂದಾ । ಯುವತಿ ಬಯಸಿ ಮತ್ತಂತೆ ॥
ತವೆ ದಣಿಯಿಸುತಿರೆ ದಿವಸ ಪಲವು ಪೋಗೆ । ನವಮಾಸ ತೀವಿ ಬಳಿಯೊಳು ॥ ೩೭ ॥

ಉರ್ವರೆ ರೋಹಣಾದ್ರಿಯ ರವಿಬಿಂಬವ । ಪೂರ್ವಾದ್ರಿಯಮೃತಾಂಶುವನು ॥
ಶರ್ವರಿ[9] ಪಡೆವಂತೆ ಪಡೆದಳು ಸುತನನ । ಪೂರ್ವಲಗ್ನದೊಳಾ ಸುದತಿ ॥ ೩೮ ॥

---

ಮನಸ್ಸಿಗೆ ಸಂತೋಷವುಂಟಾಯಿತು, ಅವಳ ದೇಹದಲ್ಲಿ ಬಹಳ ಕಾಂತಿಯುಂಟಾಯಿತು. ತಲೆಕೂದಲಿಗೆ ಕವಲುಂಟಾಯಿತು. ॥ ೩೦ ॥ ಗರ್ಭದಲ್ಲಿರುವ ಕುಮಾರನ ದೆಸೆಯಿಂದ, ಆಕೆಯ ತ್ರಿವಳಿಗಳು ಅಳಿದುವು ಈ ಕುವರನಿಂದಾಗಿ ವೈರಿರಾಜರ ವಂಶಾವಳಿಗಳೇ ಅಳಿದುಹೋಗುವುವು—ಎಂಬುದನ್ನು ಇದು ಸೂಚಿಸುತ್ತಿತ್ತು ॥ ೩೧ ॥ ಕೆಂದಾವರೆಯ ಮುಗುಳಿನ ಮೇಲೆ ತುಂಬಿಯು ಶೋಭಿಸುವಂತೆ, ಸುಬಳಾದೇವಿಯ ಗರ್ಭದಿಂದಾಗಿ ಆಕೆಯ ತೋರಮೊಲೆಗಳ ತುದಿಗಳು ಬಹಳ ಕರಿದಾದುವು. ॥ ೩೨ ॥ ಅವಳ ತಲೆಗೂದಲ ಗುಂಪು ಮುಖದ ಮೇಲೆ ಹರಡಿಕೊಂಡಿರುತ್ತಿತ್ತು. ಆಗ ಆ ಮುಖಕಮಲವು ತುಂಬಿವಿಂಡಿನಿಂದ ಕವಿದು ಶೋಭಿಸುವ ಬಿಳಿದಾವರೆಯಂತೆ ಕಾಣುತ್ತಿತ್ತು. ॥ ೩೩ ॥ ಎಲೈ ಚೇಳಿನಿಯೇ ಕೇಳು. ಹೀಗೆ ಗರ್ಭವುಂಟಾಗಿ ಬಳೆಯುತ್ತಿರಲು, ಆಕೆಯು ತನಗೆ ರತ್ನಾಭರಣಗಳು ಹೆಚ್ಚು ಭಾರವಾಗುತ್ತಿವೆಯೆಂದು ಅವನ್ನು ಕಳಚಿ, ಹೂವಿನ ಅಲಂಕಾರಗಳನ್ನು ತೊಟ್ಟುಕೊಂಡಳು. ॥ ೩೪ ॥ ನೀಳವಾದ ಕಣ್ಣಿನ ಆ ರಾಣಿಗೆ ಮಣ್ಣನ್ನು ತಿಂದು ಉಗುಳುವ ಬಯಕೆಯುಂಟಾಯಿತು. ಈ ಬಯಕೆಯು ತನ್ನ ಮಗನು ವೈರಿರಾಜರ ಭೂವನಿತೆಯನ್ನು ಆಳಿಕೊಂಡಿರದೆ ಬಿಟ್ಟುಬಿಡುವುದನ್ನು ಸೂಚಿಸುವಂತಿತ್ತು. ॥ ೩೫ ॥ ಜಿನೇಂದ್ರನನ್ನು ಪೂಜಿಸಬೇಕೆಂಬ, ಬ್ರಾಹ್ಮಣರಿಗೆ ಧನವನ್ನು ದಾನಮಾಡಿ ದಣಿಸಬೇಕೆಂಬ, ನಾಲ್ಕೂ ವರ್ಣದವರನ್ನು ಕರೆದು ಅವರಿಗೆ ಆಹಾರವನ್ನು ನೀಡಬೇಕೆಂಬ ಬಯಕೆಯು ರಾಣಿಯಲ್ಲಿ ಉಂಟಾಯಿತು. ॥ ೩೬ ॥ ಆ ಯುವತಿಯು ಇವೇ ಮೊದಲಾದ ಬಯಕೆಗಳನ್ನು ಬಯಸಿ, ಆ ಮೇಲೆ ಅದೇ ಪ್ರಕಾರ ದಣಿಯಿಸುತ್ತಿದ್ದಳು. ಹೀಗೆಯೇ ಹಲವು ದಿವಸಗಳು ದಾಟಿದವು. ಆಕೆಗೆ ಒಂಬತ್ತು ತಿಂಗಳು ತುಂಬಿತು. ॥ ೩೭ ॥ ಆಮೇಲೆ ಒಂದು ದಿವಸ ವಿಶೇಷವಾದ

---

[1] ತ್ರಿವಳಿ (ಗ). [2] ಪರಿರಾಯರರರಿರಾಯರ (ಕ) ಪರಿಯಲಿ ರಾಯರ (ಗ) [3] ಬಸಿಱೊಳು (ಚ) [4] ವೆಂದೆನಲು (ಗ) [5] ಹರಿಸದಿಂ (ಚ) [6] ತುಂಬಿಗಳಳಿ (ಗ) [7] ತನ್ನುರದ (ಗ) [8] ಭೂಸುರರಿಗೆ ಕೊಟ್ಟು (ಗ ಚ) [9] ಶಾರ್ವರಿ (ಕ ಚ)

ಜನನಿಗೆ ಮುದ ಜನಕನಿಗೆ ಸಂತಸವಾಪ್ತ । ಜನಕೆ ಹರುಷ ಜನಪದದ ॥
ಮನಕಾನಂದ ಪುಟ್ಟಿದುದಿರದೊಯ್ಯನೆ । ಜನಿಸಲಂದಾ ರಾಯಕುವರ ॥ ೩೯ ॥

ಬಿಟ್ಟುದು ಮಣಿದ ಮನ್ನೆಯರ ಯಾಚಕರನು । ಬಿಟ್ಟುದು ಬಡತನ ನೃಪಗೆ ॥
ಪುಟ್ಟಿ ಕುವರ ಮಾತೆಯ ಮಧ್ಯವನದು । ಬಿಟ್ಟುದಿಲ್ಲಿದು ಚಿತ್ರವಲ್ತೆ ॥ ೪೦ ॥

ಪಟ್ಟದ ಕುವರ ಪುಟ್ಟದ ಸುದ್ದಿಯನೋರ್ವ । ಬಟ್ಟಜವ್ವನೆ ಪೇಳಲವಳ್ಗೆ[1] ॥
ಕೊಟ್ಟಂಗಚಿತ್ತವ ಜಿನರ ಪೂಜಿಸಿ ಬಂದು । ನೆಟ್ಟನೆ ನೃಪ ತನ್ನ ಸುತನ ॥ ೪೧ ॥

ಮೊಗವನಾಲೋಕಿಸಿ ಕಾರಾಗಾರದಿಂ । ತೆಗೆಸಿ ಮನ್ನೆಯ ಮಂಡಳಿಕರ ॥
ಬಗೆಯಱಿದುಡುಗೊಱೆಯಿತ್ತು[2] ಕಳುಪಿದನು । ನಗರಕವರನಾ ನೃಪತಿ ॥ ೪೨ ॥

ಮಂಗಲವಾದ್ಯನಿನದ ಮಂಗಲಘೋಷ । ಮಂಗಲಗಾಯಕರುಗಳ ॥
ಸಂಗಡ ಸಂಗಡಿಸಿದುದಂದಾ ರಾ । ಜಾಂಗಣದೊಳಗೆಡೆವಿಡದೆ ॥ ೪೩ ॥

ಒಸಗೆಯ ವಾದ್ಯಮೊಳಗೆ ಗುಡಿತೋರಣ । ವೆಸೆಯೆ ಪೂವಲಿಗಳಲ್ಲಲ್ಲಿ ।
ಹಸರ[3]ವೆತ್ತೆಸೆಯಲಂದೆಸೆದುದಾ ಪೊಳಲಂ । ದೊಸಗೆ ಮರುಳುಗೊಂಡಂತೆ ॥ ೪೪ ॥

ನೂತನ ವಸ್ತ್ರದಿಂ ಕೆಲರ ಸನ್ಮಾನದ । ಮಾತಿನಿಂ ಕೆಲರ ಪೊನ್ನಿತ್ತು[4] ॥
ಮಾತೇನು ಮನ್ನಿಸಿ ಮನ್ನಿಸಿದನು ನೃಪ[5] । ಜಾತಕರ್ಮವ ತನ್ನ ಸುತನ ॥ ೪೫ ॥

---

ಶುಭಲಗ್ನದಲ್ಲಿ ಭೂಮಿಯು ರೋಹಣಪರ್ವತವನ್ನೂ, ಪೂರ್ವಗಿರಿಯು ಸೂರ್ಯನನ್ನೂ, ನಿಶೆಯು ಚಂದ್ರನನ್ನೂ ಪಡೆವಂತೆ ಆ ಸ್ತ್ರೀಯು ಗಂಡುಮಗುವನ್ನು ಪಡೆದಳು ॥ ೩೮ ॥ ಆ ರಾಜಕುಮಾರನು ಜನಿಸಲು ತಾಯಿತಂದೆಯರಿಗೂ ಸ್ನೇಹಿತರಿಗೂ ದೇಶದ ಜನರಿಗೂ ಸಂತೋಷವುಂಟಾಯಿತು ॥ ೩೯ ॥ ದಶರಥರಾಜನಿಗೆ ಕುಮಾರನು ಜನಿಸಲು, ನಮಸ್ಕರಿಸಿದ ಜನನಾಯಕರು ಬಂಧನದಿಂದ ಬಿಡುಗಡೆಹೊಂದಿದರು. ಬೇಡುವವರ ಬಡತನವು ಬಿಟ್ಟುಹೋಯಿತು. ಆದರೆ ಆ ಬಡತನವು ಮಗುವಿನ ತಾಯಿಯ ಹೊಟ್ಟೆಯನ್ನು ಸೇರಿಕೊಂಡುದು ಆಶ್ಚರ್ಯವೇ ಸರಿ! ॥ ೪೦ ॥ ಪಟ್ಟದ ಅಧಿಕಾರಿಯಾದ ಮಗನು ಹುಟ್ಟಿದ ವಾರ್ತೆಯನ್ನು ಒಬ್ಬಳು ಯುವತಿ ಬಂದು ದಶರಥನಿಗೆ ತಿಳಿಸಿದಳು. ಆಗ ದಶರಥನು ಆಕೆಗೆ ಉಡುಗೊರೆಯನ್ನಿತ್ತು, ಜಿನೇಶ್ವರನನ್ನು ಅರ್ಚಿಸಿ, ತನ್ನ ಮಗನನ್ನು ನೋಡಲು ಬಂದನು. ॥ ೪೧ ॥ ರಾಜನು ತನ್ನ ಮಗನ ಮುಖವನ್ನು ನೋಡಿದನು ಆಮೇಲೆ ಕಾರಾಗೃಹದಲ್ಲಿದ್ದ ಜನನಾಯಕರನ್ನೂ ಮಾಂಡಳಿಕರನ್ನೂ ಬಿಡುಗಡೆಮಾಡಿ, ಬಗೆಯರಿತು ಅವರಿಗೆ ಉಡುಗೊರೆಗಳನ್ನು ನೀಡಿ, ಅವರವರ ನಗರಗಳಿಗೆ ಕಳುಹಿದನು ॥ ೪೨ ॥ ಆ ಅರಮನೆಯ ಅಂಗಣದಲ್ಲಿ ಮಂಗಳವಾದ್ಯಗಳ ಶಬ್ದವೂ, ಮಂಗಳಘೋಷಗಳೂ ನಡೆದವು ಮಂಗಳಗೀತಗಳನ್ನು ಹಾಡುವವರ ಸಮೂಹವು ಅಲ್ಲಿ ಗುಂಪುಗೂಡಿತು. ॥ ೪೩ ॥ ಶುಭಸಮಾರಂಭದ ವಾದ್ಯಗಳು ಮೊಳಗಿದವು ಗುಡಿ ತೋರಣಗಳು ಶೋಭಿಸಿದವು ರಂಗವಲ್ಲಿಗಳು ಅಲ್ಲಲ್ಲಿ ವಿಸ್ತಾರವಾಗಿ ತೋರಿದವು ಇವುಗಳಿಂದ ಆ ಪಟ್ಟಣವು ಶುಭಸಮಾರಂಭಗಳು ಹುಚ್ಚುಗೊಂಡು ಸೇರಿದಂತೆ ತೋರಿತು. ॥ ೪೪ ॥ ದಶರಥರಾಜನು ತನ್ನ ಮಗನ ಜನನದ ಹಬ್ಬವನ್ನು ಮಾಡುತ್ತ ಕೆಲವರನ್ನು ಹೊಸ ವಸ್ತ್ರಗಳಿಂದಲೂ ಕೆಲವರನ್ನು

---

[1] ಪೇಳಲಂದು (ಗ ಚ) [2] ದುಡುಗೊಱೆಗೊಟ್ಟು (ಗ ಚ) [3] ಹೆಸರ (ಗ) [4] ಪೊಂಗಿತ್ತು (ಗ) [5] ಮನ್ನಿಸಿದನು ನೃಪವ್ರಾತವ (ಗ)

ದಿವಸ ಪನ್ನೆರಡಾಗೆ ನಾಮಕರ್ಮವನಂ । ದವನಿಪ ಜನವಱಿಕೆಯಲಿ[1] ॥
ತವೆ ಮಾಡಿ[2] ಶ್ರೀರಾಮನೆಂಬ ಪೆಸರನಿಡ[3] ।ಲವನಿಯೊಳದು[4] ಪಸರಿಸಿತು ॥ ೪೬ ॥

ಆ ರಾತ್ರಿಯೊಳು[5] ರಾಯನರಸಿ ತೊಟ್ಟಿಲುದುಂಬಿ । ನಾರಿಯರನು ಕರೆಕರೆದು ॥
ಓರಣದಿಂ[6] ಬಾಯಿನಂಗಳನಿತ್ತಿಂತು । ಶ್ರೀರಾಮನ ಪಾಡಿದರು ॥ ೪೭ ॥

ಜೋ ಮಾನಿನಿಯರ ಕಂಗಳ ಪುಣ್ಯರೂಪನೆ । ಜೋ ಮಾನವ ಮನಸಿಜನೆ ॥
ಜೋ ಮನುವಂಶಾಂಬುಧಿ ಪೂರ್ಣಚಂದ್ರನೆ । ಜೋ ಮಂದರಸಮಧೈರ್ಯ[7] ॥ ೪೮ ॥

ಜೋ ಜೋ ಪರಬಲ ಗಜಕಂಠೀರವ । ಜೋ ಜಿನಧರ್ಮಪಾಲಕನೆ ॥
ಜೋ ಜೋ ನಿಜ[8]ಕುಲಾಂಬರ ಬಾಲಭಾಸ್ಕರ । ಜೋ ಜೈವಾತೃಕವದನ ॥ ೪೯ ॥

ಎಂದಿವು ಮೊದಲಾದ ಜೋಗುಳ[9]ವಾಡನಾ । ನಂದದಿಂ ಪಾಡುತಾಳಿಯರು ॥
ಅಂದು ಸಲಹುತಿರಲಾ ರಾಜೇಂದ್ರನ । ನಂದನನನು ಮೃಗನಯನೇ ॥ ೫೦ ॥

ಅಸಿಯಳೆ ನೆವವಿನಿಸಿಲ್ಲದೆ ನಗುತಿರ್ಪ[10] । ಹಸುಳೆಯ ವದನವೊಪ್ಪಿದುದು ॥
ಬಿಸಿಗದಿರನ ಕಿರಣವ ಕಾಣದರಲುವ । ಮಿಸುನಿದಾವರೆಯೆಂಬಂತೆ ॥ ೫೧ ॥

ಹಸುಳೆಯ ನೊಸಲೊಳಗಿಹ ನೀಲದರಳೆಲೆ ॥ ಯೆಸೆದುದು ನೋಳ್ಪರ ಕಣ್ಗೆ ॥
ಅಸಿಯಳೆ ಯೆಳವೆಱೆಯುದರದೊಳಗೆ ತೋರ್ಪ[11] । ಪೊಸಕಲೆಯೆಂಬಂದದೊಳು ॥ ೫೨ ॥

---

ಆದರದ ಮಾತಿನಿಂದಲೂ ಕೆಲವರನ್ನು ಸುವರ್ಣದಾನದಿಂದಲೂ ಮನ್ನಿಸಿದನು. ॥ ೪೫ ॥ ಮಗನು ಜನಿಸಿ ಹನ್ನೆರಡು ದಿವಸಗಳಾಗಲು, ರಾಜನು ಎಲ್ಲಾ ಜನರೂ ತಿಳಿಯುವಂತೆ ನಾಮಕರಣದ ಉತ್ಸವವನ್ನು ಮಾಡಿ, ಶ್ರೀರಾಮನೆಂಬ ಹೆಸರನ್ನಿಟ್ಟನು. ಈ ವರ್ತಮಾನವು ಲೋಕದಲ್ಲೆಲ್ಲ ಹರಡಿತು. ॥ ೪೬ ॥ ಆ ದಿವಸದ ರಾತ್ರಿಯಲ್ಲಿ ರಾಣಿಯು ತೊಟ್ಟಿಲ ತುಂಬಿದಳು. ಹೆಂಗುಸರನ್ನೆಲ್ಲ ಕರೆದು ಕರೆದು ಅವರಿಗೆ ಒಂದೇ ಸವನೆ ಬಾಗಿನಗಳನ್ನು ಕೊಟ್ಟಳು. ಅವರು ಶ್ರೀರಾಮನನ್ನು ಹೀಗೆ ಜೋಗುಳ ಹಾಡಿ ತೂಗಿದರು. ॥ ೪೭ ॥ ಹೆಂಗುಸರ ಕಣ್ಣುಗಳ ಪುಣ್ಯಸ್ವರೂಪನೆ, ಮನುಷ್ಯರೂಪದ ಮನ್ಮಥನೆ, ಮನುವಂಶವೆಂಬ ಸಮುದ್ರಕ್ಕೆ ಪೂರ್ಣಚಂದ್ರನಂತೆ ಇರುವವನೆ. ಮಂದರಪರ್ವತದಂತೆ ಧೀರನಾಗಿರುವವನೆ—ಎಂದು ಸಂಬೋಧಿಸುತ್ತ 'ಜೋ ಜೋ' ಎಂದು ಹಾಡಿದರು. ॥ ೪೮ ॥ ವೈರಿಸೈನ್ಯದ ಆನೆಗೆ ಸಿಂಹ, ಜೈನಧರ್ಮದ ರಕ್ಷಕ, ತನ್ನ ವಂಶವೆಂಬ ಆಕಾಶಕ್ಕೆ ಬಾಲಸೂರ್ಯ, ಚಂದ್ರನಂತಹ ಮುಖವುಳ್ಳವ—ಎಂದು ಜೋಗುಳಹಾಡಿನಲ್ಲಿ ಸಂಬೋಧಿಸಿದರು. ॥ ೪೯ ॥ ಹೀಗೆ ಇವೇ ಮೊದಲಾದ ಜೋಗುಳ ಹಾಡನ್ನು ಸಂತೋಷದಿಂದ ಹಾಡುತ್ತ ದಾಸೀಜನರು ಆ ರಾಜಕುಮಾರನನ್ನು ಸಲಹುತ್ತಿದ್ದರು. ॥ ೫೦ ॥ ಎಲ್ಲೆ ಚೆಲುವೆಯೇ ಆ ಮಗುವು ನಿಷ್ಕಾರಣವಾಗಿ ನಗುತ್ತಿತ್ತು. ಹೀಗೆ ನಗುವಾಗ ಮುಖವು ಸೂರ್ಯನ ಕಿರಣವನ್ನೇ ಕಾಣದೆ ಅರಳುವ ಹೊಂದಾವರೆಯಂತೆ ತೋರುತ್ತಿತ್ತು. ॥ ೫೧ ॥ ಆ ಹಸುಳೆಯ ಹಣೆಯಲ್ಲಿ ನೀಲವರ್ಣದ ಅರಳೆಲೆ ಇದ್ದಿತು. ಅದು ನೋಡುವವರ ಕಣ್ಣಿಗೆ ಅರ್ಧಚಂದ್ರನಲ್ಲಿ ತೋರುವ ಹೊಸತಾದ ಕಳಂಕದಂತೆ ಶೋಭೆಯನ್ನು ಬೀರುತ್ತಿತ್ತು. ॥ ೫೨ ॥ ಎಲ್ಲೆ ಮರಿಹುಲ್ಲೆಯಂತಹ ಕಣ್ಣಿನ ಚೆಲುವೆಯೇ, ಆ ಚಿಣ್ಣನಿಗೆ ಆ ಕಾಲದಲ್ಲಿ ಎಣೆನೂಲು, ಸಿಂಹದ ಉಗುರು, ಹೊನ್ನಿನ ಕವಡೆ, ಕಣ್ಣಿನ ಕಾಡಿಗೆ, ದಿಟ್ಟಿದಂಡೆ—ಮುಂತಾದವು ಚೆನ್ನಾಗಿ ತೋರಿದವು.

---

[1] ಜನವಱಿಕೆಯೊಳು (ಗ ಚ) [2] ಮಾಡ್ಸಿದ (ಗ). [3] ಶ್ರೀರಾಮ ಪೆಸರನೀಯ (ಗ) [4] ಯೊಳಗೆ (ಗ) [5] ರಾತ್ರೆಯೊಳು (ಕ). [6] ಓಯಾರದಿಂ (ಚ) [7] ಧೀರ (ಕ) [8] ಜಿನ (ಚ) [9] ಜೋಗಳೆ (ಗ) [10] ವಿನಿಸಿಲ್ಲದೇಳುತ್ತಿರ್ಪ (ಗ) [11] ದೊಳೊಗೆದಿರ್ಪ (ಕ)

ಎಣ್ಣೆನೂಲಾ[1] ಸಿಂಗದುಗುರು ಹೊಂಗವಡಿಕೆ । ಕಣ್ಣ ಕಜ್ಜಳ ದಿಟ್ಟಿದಂಡೆ ॥
ಚಿಣ್ಣಗಾ ಕಾಲದೊಳೆಸೆದವು[2] ಮಱಿಹುಲ್ಲೆ । ಗಣ್ಣ ಗರುವೆ ಗಜಗಮನೆ ॥ ೫೩ ॥

ಅಂದುಗೆ ಕಿಱುಗೆಜ್ಜೆ ಘಂಟಿ ಕೊರಲ ಹೊನ್ನ । ಬಂದಿ ಪಣೆಯೊಳು ರಾಜಿಸುವ ॥
ಅಂದವಡೆದ ರತ್ನದರಳೆಲೆಯೆಸೆದವಾ[3] । ನಂದನಗಾ ಕಾಲದೊಳು ॥ ೫೪ ॥

ಉಡೆವಣಿಯುಡಿದಾರ ವುಂಗುರ ಮಾಗಾಯಿ[4] । ಕಡೆಯ ಪೊಂಬಳೆ ಮೊದಲಾದ[5] ॥
ಕಡುರಯ್ಯವಡೆದೊಪ್ಪುವ ಬಾಲದೊಡಿಗೆಯು । ಗಡಣವಾ ಕುವರಗೊಪ್ಪಿದುದು ॥ ೫೫ ॥

ಪೊರಳ್ದುರುಳ್ದಂಬೆಗಾಲಿಟ್ಟು ದಟ್ಟಡಿಯನಾ । ದರದೊಳಗಿಟ್ಟು[6] ಜನರಿಗೆ ॥
ಹರುಷವ[7]ಮಿಗೆ ಪುಟ್ಟಿಸುತಿರ್ಪನಂದಾ । ನರನಾಥನ ನಂದನನು ॥ ೫೬ ॥

ರಾಜಿಪ ಪಳುಕಿನ ಜಗಲಿಯೊಳಾಡುವ । ರಾಜಕುವರನೊಪ್ಪಿದನು ॥
ರಾಜವದನೆ ತಿಳಿಗೊಳದೊಳಗಾಡುವ । ರಾಜಮರಾಳನೆಂಬಂತೆ ॥ ೫೭ ॥

ಕತಿಪಯ ದಿನಗಳು ಕಳಿಯಲಂದಾ ಭೂ । ಪತಿಯ ಸುತನ ಶೈಶವವು ॥
ಅತಿಶಯವೇನು ಮೆಲ್ಲನೆ ಜಾರಲು ಬುದ್ಧಿ । ಮತಿಪೆರ್ಚಿ ಬೆಳೆದನಾ ಕುವರ ॥ ೫೮ ॥

ಇನೆಯಳೆ[8] ಕೈಕಾದೇವಿಗೆ ಸುತನೋರ್ವ । ಜನಿಸಲು ನಾಮಕರ್ಮವನು ॥
ಜನಪತಿ ಮಾಡಿ ಲಕ್ಷ್ಮಣನೆಂಬ ಪೆಸರಿಡ । ಲನುನಯದಿಂ ಸುತ ಬೆಳೆಯೆ ॥ ೫೯ ॥

ಕುವರಗೆ ರಾಮಚಂದ್ರಮನಿಗೆ ವಿದ್ಯಾ । ಯುವತಿಯಧರಪಾನವನು ॥
ಸವಿವವಸರವೆಂದಱಿದು ಚಿಂತಿಸಿದನಂ । ದವನೀಶ್ವರನೆದೆಯೊಳಗೆ ॥ ೬೦ ॥

---

॥ ೫೩ ॥ ಆ ಚಿಣ್ಣನಿಗೆ ಆ ಕಾಲದಲ್ಲಿ ಕಾಲಿನ ಅಂದುಗೆ, ಕಿರುಗೆಜ್ಜೆ ಘಂಟೆಗಳೂ ಕೊರಳಿನ ಚಿನ್ನದ ಸರವೂ ಹಣೆಯಲ್ಲಿ ಅಂದವಾದ ರತ್ನದ ಅರಳೆಲೆಯೂ ಶೋಭಿಸಿದವು ॥ ೫೪ ॥ ಆ ಕುಮಾರನಿಗೆ ಉಡೆವಣಿ, ಉಡಿದಾರ, ಉಂಗುರ, ಮಾಗಾಯಿ, ಕಡಗ, ಚಿನ್ನದ ಬಳೆ—ಮೊದಲಾದ ಬಹು ಮನೋಹರವಾಗಿ ತೋರುವ ಬಾಲತೊಡಿಗೆಗಳು ಶೋಭಿಸಿದವು ॥ ೫೫ ॥ ಆ ರಾಜಕುಮಾರನು ಎಳವೆಯಲ್ಲಿ ಹೊರಳಿಕೊಂಡು ಉರುಳಿಕೊಂಡು ಅಂಬೆಗಾಲಿಡುತ್ತ ಮೆಲ್ಲನೆ ಹಜ್ಜೆಗಳನ್ನಿಡುತ್ತ ಜನರಿಗೆಲ್ಲ ವಿಶೇಷವಾಗಿ ಸಂತೋಷವನ್ನುಂಟುಮಾಡುತ್ತಿದ್ದನು. ॥ ೫೬ ॥ ಎಲೈ ಚಂದ್ರಮುಖಿಯಾದ ಚೇಳಿನಿಯೇ, ಆ ರಾಜಕುಮಾರನು ಶೋಭಿಸುವ ಚಂದ್ರಕಾಂತಶಿಲೆಯ ಜಗಲಿಯಲ್ಲಿ ಆಡುತ್ತ, ನಿರ್ಮಲವಾದ ಸರೋವರದಲ್ಲಿ ಆಡುವ ರಾಜ ಹಂಸನಂತೆ ತೋರುತ್ತಿದ್ದನು. ॥ ೫೭ ॥ ಹೀಗೆ ಹಲವು ದಿನಗಳು ಕಳೆದುವು ಆ ರಾಜಪುತ್ರನ ಎಳವೆಯು ದಾಟುತ್ತಬಂತು. ಕುಮಾರನಿಗೆ ಬುದ್ಧಿ ಹೆಚ್ಚಾಗುತ್ತ ಬಂತು. ಅವನು ಬೆಳೆದು ದೊಡ್ಡವನಾದನು. ಇದರಲ್ಲಿ ಅತಿಶಯವೇನಿದೆ? ॥ ೫೮ ॥ ಎಲೈ ಚೇಳಿನಿಯೇ, ದಶರಥನ ಇನ್ನೊಬ್ಬಳು ಮಡದಿಯಾದ ಕೈಕಾದೇವಿಗೆ ಒಬ್ಬ ಮಗನು ಜನಿಸಿದನು ಅವನಿಗೆ ರಾಜನು ಲಕ್ಷ್ಮಣನೆಂದು ನಾಮಕರಣವನ್ನು ಮಾಡಿದನು ಅವನೂ ಬೆಳೆದು ದೊಡ್ಡವನಾದನು. ॥ ೫೯ ॥ ಕುಮಾರ ರಾಮಚಂದ್ರನಿಗೆ ವಿದ್ಯಾರ್ಜನೆಯನ್ನು ಮಾಡುವ ಕಾಲವು ಬಂತೆಂದು ದಶರಥನು ತನ್ನ ಮನಸ್ಸಿನಲ್ಲಿಯೇ ಯೋಚಿಸಿದನು ॥ ೬೦ ॥

---

[1] ಎಣ್ಣೆನೂಲು (ಕ) [2] ಚಿಣ್ಣಗಾಲಂದೊಳೆಸೆದವು (ಗ) [3] ಯೆಸೆದುದಾ (ಗ ಚ) [4] ಮಾಂಗಾಯಿ (ಚ) [5] ಮೇಲಾದ (ಕ)
[6] ದೊಳಗಿಕ್ಕಿ (ಗ ಚ) [7] ಹರಿಸವ (ಚ) [8] ಇನಿಯಳೆ (ಚ)

ಚದುರನ ಗುಣಪೂತನ[1] ಸಾಧುವ ಮೃದು । ಹೃದಯನ ನಿರ್ವಂಚಕನ ॥
ಸದಮಲಚರಿತನ ಸಕಲಾಗಮಜ್ಞನ । ಮದರಹಿತನನಾಗ ಕರಸಿ ॥ ೬೧ ॥

ವಿನಯವ ನುಡಿದುಪಚರಿಸಿ ನಮ್ಮೀ ನಂ । ದನನಾದಿಯ ಕುವರರಿಗೆ ॥
ವಿನುತ[2] ವಿದ್ಯೆಯ ಬರಿಸೆಂದಾ ನೃಪನವ[3] । ನನುವಡಿಸಿದನವನೊಡನೆ ॥ ೬೨ ॥

ಆ ನುಡಿಗೇಳುತಂ ದಾ ವಿಬುಧಜ್ಞ[4]ನಂ । ದಾನದಾಂತಿರದುಡುಗೊಱೆಯ ॥
ಆ ನರನಾಥನ ಬೀಳ್ಕೊಂಡು ಬರಿಸಿದ । ತಾನವರಿಗೆ ವಿದ್ಯೆಯನು ॥ ೬೩ ॥

ದಿನದಿನಕೊಯ್ಯನೊಯ್ಯನೆ ಪೆರ್ಚುವ ಚಂ । ದ್ರನ ಕಲೆಯಂತಾ ನೃಪನ[5] ॥
ತನಯರು ಬಹುಶಾಸ್ತ್ರವ ನೆಱೆ ಕಲಿತರು । ಮನಸಿಜನಂಗಭೂಷಣವೆ ॥ ೬೪ ॥

ಸೊಡರೊಂದಱೊಳು ಬಹು ಸೊಡರ ಬೆಳಗಲವು । ಕಡು ಸೊಗಯಿಸುವಂದದೊಳು ॥
ಪಡೆಮಾತೇನು ಕಲಿಸಿದ ಗುರುವಿಗೆ ನೂ । ರ್ಮಡಿ ವಿದ್ಯೆಗಲಿತನಾ ಕುವರ ॥ ೬೫ ॥

ಬಳಿಕ ಶಾಸ್ತ್ರಾಭ್ಯಾಸವ ಮಾಡಿ ಕಡೆಯೊಳು । ತಳುವದೆ ಬಿಲುವಿದ್ಯೆಯನು ॥
ತಿಳಿದು ಗಜಾಶ್ವಾರೋಹಣಗಳನಂ । ದಿಳೆಯಾಣ್ಮನ ನಂದನರು ॥ ೬೬ ॥

ಚವುಷಷ್ಠಿ ವಿದ್ಯವನಿರದೆ[6] ಕಲಿಯಲಾ । ಚವುಷಷ್ಠಿ ಕಲೆಯ ಬಲ್ಲವರು ॥
ತವೆ ಬಾಯಳಿದು ಕೊಂಡಾಡಿದರಂದಾಗ[7] । ಕುವರರ ಕುಮುದದಳಾಕ್ಷಿ ॥ ೬೭ ॥

ತೀರ ಕಲಿಸಿದ ವಿದ್ಯೆಗಳನೆಲ್ಲವನಾ । ಸೂರಿಗಳ್ವೆರಸೈತಂದು ॥
ಆ ರಾಯಗೆ ತೋಱಿಸಲಂಗಚಿತ್ತವ[8] । ಸೂರಿಗಳ್ಗಿತ್ತನುಚಿತವ ॥ ೬೮ ॥

---

ಚಾತುರ್ಯವುಳ್ಳವನೂ ಗುಣದಲ್ಲಿ ಪರಿಶುದ್ಧನೂ ಸಾಧುಸ್ವಭಾವದವನೂ ಕೋಮಲ ಮನಸ್ಕನೂ ವಂಚನೆಯಿಲ್ಲದವನೂ ನಿರ್ಮಲವಾದ ನಡತೆಯುವನೂ ಎಲ್ಲಾ ಶಾಸ್ತ್ರಗಳನ್ನು ತಿಳಿದವನೂ ಮದವಿಲ್ಲದವನೂ ಆದ ಗುರುವನ್ನು ದಶರಥನು ಕರೆಸಿದನು. ॥ ೬೧ ॥ ದಶರಥನು ಅವನೊಡನೆ ವಿನಯದಿಂದ ಮಾತಾಡಿ, ಉಪಚರಿಸಿ, ನಮ್ಮ ಈ ಮಕ್ಕಳಿಗೆ ಶ್ರೇಷ್ಠವಾದ ವಿದ್ಯೆಗಳನ್ನು ಕಲಿಸಬೇಕು—ಎಂದು ಹೇಳಿ ಬೇಕಾದ ಏರ್ಪಾಡುಮಾಡಿದನು. ॥ ೬೨ ॥ ದಶರಥನ ಮಾತನ್ನು ಆ ವಿದ್ವಾಂಸನು ಕೇಳಿ, ಕೂಡಲೇ ರಾಜನಿಂದ ಉಡುಗೊರೆಯನ್ನು ಸ್ವೀಕರಿಸಿ, ರಾಜನನ್ನು ಬೀಳ್ಕೊಂಡು, ಆ ಮಕ್ಕಳಿಗೆ ವಿದ್ಯೆಯನ್ನು ಕಲಿಸಿದನು. ॥ ೬೩ ॥ ಎಲೈ 'ಚೇಳಿನಿಯೇ, ಆ ರಾಜಕುಮಾರರು ದಿನದಿನಕ್ಕೂ ಮೆಲ್ಲಮೆಲ್ಲನೆ ಹೆಚ್ಚುಗೆಯನ್ನು ತಾಳುವ ಶುಕ್ಲಪಕ್ಷದ ಚಂದ್ರನ ಕಳೆಯಂತೆ ಬಹುವಿಧವಾದ ಶಾಸ್ತ್ರಗಳನ್ನು ಚೆನ್ನಾಗಿ ಕಲಿತರು. ॥ ೬೪ ॥ ಒಂದು ದೀಪದಿಂದ ಹಲವಾರು ದೀಪಗಳನ್ನು ಉರಿಸಿದಾಗ ಅವೆಲ್ಲವೂ ಚೆನ್ನಾಗಿ ಬೆಳಗುತ್ತ ಸೊಗಸಾಗಿ ತೋರುವಂತೆ, ಶ್ರೀರಾಮನು ತನಗೆ ಕಲಿಸಿದ ಗುರುವಿಗೆ ನೂರುಪಾಲು ಮೇಲೆನಿಸುವಂತೆ ವಿದ್ಯೆಯನ್ನು ಕಲಿತನು ಇದು ಗಾದೆ ಮಾತೇನೂ ಅಲ್ಲ. ॥ ೬೫ ॥ ಆ ರಾಜಕುಮಾರರು ಶಾಸ್ತ್ರಗಳನ್ನು ಕಲಿತನಂತರ ಬೇಗನೆ ಬಿಲ್ಲುವಿದ್ಯೆಯನ್ನು ಕಲಿತುಕೊಂಡರು ಆಮೇಲೆ ಆನೆಯ ಮೇಲೆ ಸವಾರಿ, ಕುದುರೆಸವಾರಿಗಳನ್ನೂ ಕಲಿತರು. ॥ ೬೬ ॥ ಎಲೈ ಚೇಳಿನಿಯೇ, ಅವರು ಅರುವತ್ತನಾಲ್ಕು ವಿದ್ಯೆಗಳನ್ನೂ ಕಲಿತಾಗ, ಅರುವತ್ತನಾಲ್ಕು ವಿದ್ಯೆಗಳನ್ನರಿತವರು ತಮ್ಮ ಬಾಯಿ ದಣಿವಂತೆ ಅವರನ್ನು ಹೊಗಳಿದರು. ॥ ೬೭ ॥ ಆ

---

[1] ಗುಣದಾತನ (ಗ). [2] ಜನನುತ (ಗ ಚ) [3] × × (ಗ ಚ) [4] ವಿಭುವಜ್ಞ (ಗ). [5] ನೃಪವರನ (ಗ ಚ). [6] ಕಲೆಗಳನಿರದೆ (ಗ.ಚ) [7] × (ಗ ಚ) [8] ತೋಱಿಸಲೆಂದು ಮಚ್ಚಿಯಾ (ಗ ಚ.)

ಇಂತು ಕೆಲವು ಕಾಲ[1] ಕಳಿಯಲಂದಾ ಭೂ । ಕಾಂತನ ನಿಜನಂದನಗೆ ॥
ಕಂತುಗೆ ಯೌವನವಾದಂತೆ ಜವ್ವನ । ತಾಂ ತಡೆಯದೆ ಬಂದುದಾಗ ॥ ೬೯ ॥

ಕಕ್ಷ ಲಲಾಟ ಮೇಗಾಲು ನಾಸಿಕ ಕಟಿ । ಕುಕ್ಷಿ ವಕ್ಷಸ್ಥಳ ಪೆಗಲು ॥
ಈಕ್ಷಿಸಲುನ್ನತಿವೆತ್ತವಿಂತೀ ಶುಭ । ಲಕ್ಷಣವಾ ರಾಜಸುತಗೇ ॥ ೭೦ ॥

ನಿಡುನಾಸಿಕ ನೀಳಲೋಚನ ಕುಡಿವುರ್ಬು । ಬಡನಡುವಸಿಯ ಜಂಘೆಗಳು ॥
ನಿಡಿದಾದ ಸಣ್ಣ ಬೆರಲ್ಗಳೆಸೆದವಾ । ಕಡುಗಾಡಿವಡೆದ ನಂದನಗೆ ॥ ೭೧ ॥

ಝಷ ಕುಲಿಶಾಂಕುಶ ಶಂಖ ಕಲಶ ಹಲ । ಬಿಸಜವೆಂದೆಂಬ[2] ರೇಖೆಗಳು ।
ಎಸೆದವವನ ಲಲಿತಾಂಗದೊಳಗೆ ನಿ । ಟ್ಟಿಸಳುಗಂಗಳ ಗಜಗಮನೆ ॥ ೭೨ ॥

ಕೆಂಪಡರಿದ ಕಣ್ಣು ಸೊಂಪುವಡೆದ ಮೆಯ್ । ಪೆಂಪುವಡೆದ ಮೂಗವಗೆ[3] ॥
ಇಂಪೊಸರುವ ನುಡಿ ಬಿಡದೊಪ್ಪಿದವೆಲೆ[4] । ಚಂಪಕಗಂಧಿ ಲತಾಂಗಿ ॥ ೭೩ ॥

ತುಪ್ಪುಳು ಮೀಸೆ ತುಳುಕುವ ಲಾವಣ್ಯ ಕ । ಣ್ಗೊಪ್ಪುವ ರೂಪು ಸುಗಾಡಿ ॥
ಮುಪ್ಪುರಿಗೊಂಡ ಜವ್ವನವೆಸೆಯಲು ನೋಡ । ಲೊಪ್ಪಿದನಾ ರಾಜಕುವರ[5] ॥ ೭೪ ॥

ಆ ಕುವರನ ರೂಪು ಗುಣಕೆ ಪಾಸಟಿಯಲ್ಲ । ನಾಕದವರುಗಳೆಂದೆನಲು ॥
ಲೋಕದ ಮನುಜರೊಳವನಿಗೆ[6] ಸರಿಯೆಂ । ಬಾ ಕವಿಯಾವನೆಂದಱಿಯೆ ॥ ೭೫ ॥

---

ವಿದ್ವಾಂಸರು ಆ ಕುಮಾರಕರಿಗೆ ಎಲ್ಲಾ ವಿದ್ಯೆಗಳನ್ನೂ ಕಲಿಸಿದನಂತರ ಅವರನ್ನು ಕರೆದುಕೊಂಡು ಬಂದು ದಶರಥರಾಜನಿಗೆ ತೋರಿಸಿದರು. ಆಗ ರಾಜನು ಅವರಿಗೆ ಯೋಗ್ಯವಾದ ಉಡುಗೊರೆಗಳನ್ನಿತ್ತನು. ॥ ೬೮ ॥ ಹೀಗೆ ಕೆಲವು ಕಾಲ ಕಳೆಯಲು, ಮನ್ಮಥನಿಗೆ ಯೌವನವು ಬಂದಂತೆ, ದಶರಥರಾಜನ ಕುಮಾರನಿಗೆ ಯೌವನೋದಯವಾಯಿತು. ॥ ೬೯ ॥ ಬಾಹುಮೂಲ, ಹಣೆ, ಮೇಗಾಲು, ಮೂಗು, ಸೊಂಟ, ಹೊಟ್ಟೆ, ಎದೆ, ಹೆಗಲು—ಮುಂತಾದ ಅವಯವಗಳು ಎತ್ತರವಾಗಿ ಕಾಣಿಸುತ್ತಿದ್ದು ಆ ರಾಜಕುಮಾರನಿಗೆ ಶುಭಲಕ್ಷಣಗಳಾಗಿ ತೋರುತ್ತಿದ್ದವು ॥ ೭೦ ॥ ಆ ಸುಂದರನಾದ ರಾಜಕುಮಾರನಿಗೆ ಉದ್ದವಾದ ಮೂಗು, ನಿಡಿದಾದ ಕಣ್ಣು, ಬಾಗಿರುವ ಹುಬ್ಬು, ತೆಳುವಾದ ಹೊಟ್ಟೆ, ನಪೂರವಾದ ತೊಡೆಗಳು, ಉದ್ದವಾದ ಚಿಕ್ಕ ಬೆರಲುಗಳು ಶೋಭಿಸಿದವು ॥ ೭೧ ॥ ಎಲೈ ಚೇಳಿನಿಯೇ ಆ ರಾಮನ ಸುಂದರವಾದ ಅಂಗಗಳಲ್ಲಿ ಮೀನು, ವಜ್ರ, ಅಂಕುಶ, ಶಂಖ, ಕಲಶ, ನೇಗಿಲು, ತಾವರೆ—ಮುಂತಾದ ಚಿಹ್ನೆಗಳ ರೇಖೆಗಳು ಕಾಣಿಸುತ್ತಿದ್ದವು. ॥ ೭೨ ॥ ಎಲೈ ಚೇಳಿನಿಯೇ, ಆತನಿಗೆ ಕೆಂಪೇರಿದ ಕಣ್ಣುಗಳೂ ಸೊಗಸಾಗಿರುವ ದೇಹವೂ ಹಿರಿದಾದ ಮೂಗೂ ಸವಿಯಾಗಿರುವ ಮಾತೂ ಶೋಭೆಯನ್ನು ಬೀರುತ್ತಿದ್ದವು ॥ ೭೩ ॥ ತುಪ್ಪುಳಿನಂತಹ ಮೀಸೆಯೂ ಹೊರಚೆಲ್ಲುವಂತೆ ತೋರುವ ಲಾವಣ್ಯವೂ ಕಣ್ಣಿಗೆ ಸೊಗಸಾಗಿ ತೋರುವ ರೂಪಸೌಂದರ್ಯವೂ ಈ ಮೂರೂ ಸೇರಿಕೊಂಡಿರುವ ತಾರುಣ್ಯವು ಶೋಭಿಸುತ್ತಿರಲು, ಆ ರಾಜಕುಮಾರನು ಕಣ್ಣಿಗೆ ಚೆಲುವಾಗಿ ತೋರುತ್ತಿದ್ದನು. ॥ ೭೪ ॥ ಆ ಕುಮಾರನ ಸೌಂದರ್ಯಕ್ಕೂ ಸದ್ಗುಣಗಳಿಗೂ ದೇವಲೋಕದವರು ಯಾರೂ ಸರಿಸಮಾನರಲ್ಲ ಹೀಗಿರುವಾಗ ಭೂಲೋಕದ ಮನುಷ್ಯರಲ್ಲಿ ಅವನಿಗೆ ಸರಿಯಾದವರನ್ನು ತೋರಿಸುವ ಕವಿ ಯಾವನೆಂದು ನಾನು ತಿಳಿಯಲಾರೆ. ॥ ೭೫ ॥ ಸೊಕ್ಕಿದ ಯೌವನದ ಕಾಲದಲ್ಲಿ ಆ ರಾಜಕುಮಾರನಿಗೆ ಹೊಳೆಯುವ ಮೀಸೆಯೂ

---

[1] ದಿನ (ಗ.ಚ). [2] ವಿಷಜವೆಂದೆಂಬ (ಕ) ಬಿಸಜವೆಂದೆಂಬೀ (ಗ). [3] ಮುದವವಗೆ (ಕ) [4] ಬಿಡದೊಪ್ಪಿದನೆಲೆ (ಕ) [5] ರಾಯಕುವರ (ಚ)
[6] ಮನುಜನೊಳವನಿಗೆ (ಕ)

ಮಿನುಗುವ ಮೀಸೆ ಹೊಗರು ಸೂಸುವ ನಿಜ । ತನು ನಗೆವೆತ್ತ ಕಣ್ ನಲಿವ ॥
ಮನ ಮಾಸದ ಮೊಗವಿವು ಮದವೆದ್ದ ಜ । ವ್ವನದೊಳಾ ಕುವರಗೊಪ್ಪಿದವು ॥ ೭೬ ॥

ಮೃಡನುರಿಗಣ್ಣಿಂದ ಸುಡುವಂದು ಕಾವನೊಂ । ದೆಡೆಯೊಳಗಡಗಿರ್ದು ಬಂದು ॥
ಬಿಡದೆ ಮಾನಸನಾಗಿ[1] ಪುಟ್ಟಿದನಲ್ಲದೀ । ಕಡುಗಾಡಿಯೆಲ್ಲಿಯುದವಗೆ[2] ॥ ೭೭ ॥

ಅವಯವಂಗಳ ಶೋಭೆ ರೂಪಿನ ಬೆಡಗಿ । ನ್ನವನಿಗಲ್ಲದೆ ಪರಿಕಿಪೊಡೆ ॥
ಅವನಿಯ ಮಾನವರೊಳಗಿಲ್ಲವೆಂದಂದು । ತವೆ ಪೊಗಳುವರು ಕೋವಿದರು ॥ ೭೮ ॥

ಚೆಲುವ ಕುವರನ ಕಲೆಗೆ ಕೂರ್ತು ಭಾರತಿ । ನೆಲಸುವಳೆಂದು ನಾಲ್ಮೊಗವ ॥
ಸಲೆ ಪೆತ್ತಜ ಕಾಯೆ ನಿಂದನ[3] ಲಲನೆಯ । ರೊಲಿದರ ಬಿಟ್ಟು ಜೀವಿಪರೆ ॥ ೭೯ ॥

ಆ ಕುವರನ ಶುಚಿತೆಯನಱಿಯದೆಯುವ । ನಾಕಾರಕೆ ಸೋಲ್ವಳೆಂದು[4] ॥
ನಾಕನಾಯಕ ಶಚಿಯನು ಬಿಟ್ಟ ಕಣ್ಣಿಂದ । ಯೇಕಚಿತ್ತದೊಳು[5] ನೋಡುವನು ॥ ೮೦ ॥

ಶ್ರೀವಧುವವನಿಗೆ ಸೋಲ್ತು ಪೋದುದ ಕಂ । ಡಾ ವಿಷ್ಣು ಮೋಹದಿಂದಳಿದು ॥
ಆಮೆ ಸೂಕರ ಮೀನಾಗಿ ಪುಟ್ಟಿದನು ದು । ರ್ಭಾವವದೇನ ಮಾಡಿಸದೊ[6] ॥ ೮೧ ॥

ತೀಡುವೆಲರಿಗೆ ಪನ್ನೀರೆಳೆವಾಳೆಗೆ । ಕೋಡುವ ಕೊಳಕೆ ಚಂದನಕೆ ॥
ನಾಡೆ ಮೈಯಿಕ್ಕುವರಾ ಕುವರನ ಗಂಡ । ಗಾಡಿಯ ಕಂಡಬಲೆಯರು ॥ ೮೨ ॥

---

ಪ್ರಕಾಶವನ್ನು ಬೀರುವ ಶರೀರವೂ ನಗೆಯನ್ನು ಪ್ರಕಟಿಸುವ ಕಣ್ಣೂ ಆನಂದಪಡುವ ಮನಸ್ಸೂ ಮಸುಕಾಗದಿರುವ ಮುಖವೂ ಶೋಭಿಸಿದವು. ॥ ೭೬ ॥ ಪರಮೇಶ್ವರನು ತನ್ನ ಅಗ್ನಿನೇತ್ರದಿಂದ ಸುಡುವ ಕಾಲದಲ್ಲಿ ಮನ್ಮಥನು ಯಾವುದೋ ಒಂದು ಕಡೆ ಅಡಗಿಕೊಂಡಿದ್ದು ಆಮೇಲೆ ಬಂದು ಮನುಷ್ಯನಾಗಿ ರಾಮನ ರೂಪದಲ್ಲಿ ಜನಿಸಿರಬೇಕು. ಇಲ್ಲವಾದರೆ, ಈ ಸೌಂದರ್ಯಾತಿಶಯವು ಅವನಿಗೆ ಎಲ್ಲಿಂದ ಬಂತು? ॥ ೭೭ ॥ ಈ ರೀತಿಯ ಅಂಗಗಳ ಕಾಂತಿಯೂ ರೂಪಿನ ಬೆಡಗೂ ರಾಮನಿಗಲ್ಲದೆ ಲೋಕದ ಇತರ ಮಾನವರಲ್ಲಿ ಇಲ್ಲವೆಂದು ವಿದ್ವಾಂಸರು ಅವನನ್ನು ವಿಶೇಷವಾಗಿ ಹೊಗಳುತ್ತಿದ್ದರು. ॥ ೭೮ ॥ ಸೌಂದರ್ಯಶಾಲಿಯಾದ ಶ್ರೀರಾಮನಲ್ಲಿರುವ ಕಲೆಗಳಿಗೆ ಮೆಚ್ಚಿ, ಸರಸ್ವತೀದೇವಿಯು ತನ್ನನ್ನು ಬಿಟ್ಟು ಆತನಲ್ಲಿ ನೆಲಸಬಹುದೆಂದು ಭಾವಿಸಿ, ಬ್ರಹ್ಮನು ನಾಲ್ಕು ಮುಖಗಳನ್ನು ತಾಳಿಕೊಂಡು ಆಕೆಯನ್ನು ಕಾಯುತ್ತಿರುವನು. ಸ್ತ್ರೀಯರಿಗೆ ಒಲಿದ ಪುರುಷರು ಅವರನ್ನು ಬಿಟ್ಟು ಜೀವಿಸುವುದುಂಟೆ? ॥ ೭೯ ॥ ತನ್ನ ಮಡದಿಯಾದ ಶಚಿಯು ಆ ಕುಮಾರನ ಶುಚಿತ್ವವನ್ನು ತಿಳಿಯದೆ ಅವನ ಸೌಂದರ್ಯಕ್ಕೆ ಮಾರುಹೋಗುವಳೆಂದು ಭಾವಿಸಿ, ದೇವೇಂದ್ರನು ಒಂದೇ ಮನಸ್ಸಿನಿಂದ ಕೂಡಿದವನಾಗಿ ಬಿಡುಗಣ್ಣಿನಿಂದ ಶಚಿಯನ್ನು ನೋಡುತ್ತಲೇ ಇರುವನು. ॥ ೮೦ ॥ ವಿಷ್ಣುವಿನ ಮಡದಿಯಾದ ಲಕ್ಷ್ಮಿಯು ಆ ಕುಮಾರನಿಗೆ ಸೋತು ಹೋದಳು. ಇದನ್ನು ವಿಷ್ಣುವು ಕಂಡು ಆಕೆಯ ಮೇಲಿನ ಮೋಹದಿಂದ ದೇಹವನ್ನೆ ತ್ಯಾಗಮಾಡಿ ಆಮೆ, ಹಂದಿ, ಮೀನು—ಮುಂತಾದ ರೂಪಗಳಲ್ಲಿ ಜನಿಸಿದನು. ಕೆಟ್ಟಭಾವನೆಯು ಅದೇನನ್ನು ತಾನೇ ಮಾಡಿಸದು? ॥ ೮೧ ॥ ಆ ಕುಮಾರನ ಗಂಡುತನದ ಸೊಬಗನ್ನು ನೋಡಿದ ಹೆಂಗುಸರು ವಿರಹತಾಪಕ್ಕೊಳಗಾಗುವರು. ತಾಪವನ್ನು ಸಹಿಸಲಾರದೆ ಅವರು ಬೀಸುವ ಗಾಳಿಗೂ, ಪನ್ನೀರಿಗೂ, ಎಳತಾದ ಬಾಳೆಗೂ, ಕಡುತಂಪಾಗಿರುವ ಸರೋವರಕ್ಕೂ, ಶ್ರೀಗಂಧಕ್ಕೂ, ವಿಶೇಷವಾಗಿ ತಮ್ಮ

---

[1] ಮಾನವನಾಗಿ (ಗ.ಚ) [2] ಯೆಲ್ಲಿಯದಿವಗೆ (ಗ ಚ). [3] ನಿಂದಳೆ (ಕ.ಗ.). [4] ಸೋಲ್ವಳೆಂದು (ಗ). [5] ಕಣ್ಣಿಂದೇಕ ಚಿತ್ತದೊಳು (ಗ.ಚ.). [6] ಮಾಡಿಸದು (ಚ).

ಕಣ್ಣೊಳು ಬೆನ್ನೀರ ಬಗೆಯೊಳಗ್ನಿಯನುಗು । ರ್ಗಣ್ಣೊಳರುಣ[1]ಜಲಗಳನು ॥
ಬಣ್ಣವಾತಲ್ಲ ಪುಟ್ಟಿಸುವ ಮಲಿತ ನೆಲ । ವೆಣ್ಣೊಡೆಯರ ಕೋಮಲೆಯರ ॥ ೯೦ ॥

ಉರಗಾರ್ಕ ರಾಜ ಕನಕ ಹರಿಮಯ ತನ್ನ[2] । ಚರಣವ ಕಂಡರಸುಗಳ ॥
ಪುರದೊಳು ಕಾಣದರಸುಗಳ ನಗರಕಂ । ದಿರದೀವನಾ ಸಂಪದವ ॥ ೯೧ ॥

ನೆಱೆಯಲೊಡನೆ ಪಗೆರಾಯರಿಗತಿಚಿಂತೆ । ನೆಱೆದುದು ಭಯ ಮನದೊಳಗೆ ॥
ಗಱಿಗಟ್ಟಿತೆನೆ ಕುವರನ ಬೀರದೇಳ್ಗೆಯ । ತೆಱನನದೇನ ಬಣ್ಣಿಪೆನು ॥ ೯೨ ॥

ನಡೆಯಬೇಕೆಂದವ ನುಡಿಯಲಾ ದಿಕ್ಕಿನ । ಪೊಡವಿಪತಿಗಳದ ಕೇಳ್ದು ॥
ನಡನಡನಡುಗಿ ಸೀಮೆಯ ಬಿಟ್ಟು ಹೋಗಿ ಹೇ । ರಡವಿಯನಿರದೆ ಪೋಗುವರು ॥ ೯೩ ॥

ಈ ಪರಿ ವಿತರಣ ವಿನಯ ವಿನೇಕ ಸು । ರೂಪು ಯವ್ವನ ಜಸವಾಂತು ॥
ಶ್ರೀಪತಿಗೂಡಿ ಶ್ರೀರಾಮಚಂದ್ರಮನಿರ । ಲಾ ಪುರದೊಳು ಸುಖದಿಂದ ॥ ೯೪ ॥

ಜಿನಭಕ್ತ ಜೀವದಯಾಪರ ಸದುಮುನಿ[3] । ಜನನುತ ನಿರ್ಮಲಚರಿತ ॥
ಮನುವಂಶಾಬುಧಿ ಚಂದಿರನಭಿನವ । ಮನಸಿಜರೂಪನೊಪ್ಪಿದನು[4] ॥ ೯೫ ॥

ಕೋವಿದರುಗಳ ಹೃತ್ಕಮಲ ಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ॥
ಭಾವಕರುಗಳ ಸಂತಸಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೯೬ ॥

---

ಯಾಗರು. ॥ ೮೯ ॥ ತನ್ನನ್ನು ಪ್ರತಿಭಟಿಸಿದ ರಾಜರ ಹೆಂಡಿರ ಕಣ್ಣಿನಲ್ಲಿ ಬಿಸಿನೀರನ್ನೂ ಮನಸ್ಸಿನಲ್ಲಿ (ಚಿಂತೆಯೆಂಬ) ಬೆಂಕಿಯನ್ನೂ ಉಗುರಿನ ಸಂದುಗಳಲ್ಲಿ ನೆತ್ತರನ್ನೂ ಶ್ರೀರಾಮನು ಉಂಟುಮಾಡುತ್ತಿದ್ದನು. ಇದು ಕೇವಲ ವರ್ಣನೆಯ ಮಾತಲ್ಲ. ॥ ೯೦ ॥ ಸರ್ಪ, ಸೂರ್ಯ, ಚಂದ್ರ, ಚಿನ್ನ ಸಿಂಹ—ಮುಂತಾದ ರಾಜಲಕ್ಷಣಗಳಿಂದ ಕೂಡಿದ ತನ್ನ ಪಾದವನ್ನು ಕಂಡ ರಾಜರ ಪಟ್ಟಣದಲ್ಲಿ ಅದುವರೆಗೆ ಕಾಣದಿರತಕ್ಕ, ರಾಜಸಂಪತ್ತುಗಳನ್ನು ಶ್ರೀರಾಮನು ಕೊಡುತ್ತಿದ್ದನು ॥ ೯೧ ॥ ವೈರಿರಾಜರು ಒಟ್ಟುಸೇರಿದರೆಂದರೆ ಸರಿ, ಅವರಿಗೆ ಬಹಳ ದು:ಖವು ಬಂದು ಸೇರುತ್ತಿತ್ತು. ಮನಸ್ಸಿನಲ್ಲಿ ಹೆದರಿಕೆಯೂ ಹೆಚ್ಚುತ್ತಿತ್ತು. ಹೀಗೆನ್ನುವಾಗ ಆ ರಾಜಕುಮಾರನ ಪರಾಕ್ರಮದ ಉನ್ನತಿಯನ್ನು ಏನೆಂದು ವರ್ಣಿಸಲಿ ! ॥ ೯೨ ॥ ಶ್ರೀರಾಮನು ಯಾವ ದಿಕ್ಕಿಗೆ ನಡೆಯಬೇಕೆಂದು ಹೇಳಿದನೋ ಆ ಮಾತನ್ನು ಆ ದಿಕ್ಕಿನ ರಾಜರು ಕೇಳಿ, ಗಡಗಡನೆ ನಡುಗಿ ಆ ಸೀಮೆಯನ್ನೇ ಬಿಟ್ಟು ದೊಡ್ಡ ಕಾಡನ್ನು ಸೇರುವರು.॥ ೯೩ ॥ ಹೀಗೆ ಶ್ರೀರಾಮನು ದಾನ, ವಿನಯ, ವಿವೇಕ, ಸೌಂದರ್ಯ, ಯೌವನ, ಕೀರ್ತಿ—ಇವುಗಳಿಂದ ಕೂಡಿದವನಾಗಿ ಲಕ್ಷ್ಮಣನೊಡನೆ ಆ ಅಯೋಧ್ಯಾನಗರದಲ್ಲಿದ್ದನು ॥ ೯೪ ॥ ಜಿನಭಕ್ತಿಯುಳ್ಳವನೂ, ಜೀವದಯೆಯಿಂದ ಕೂಡಿದವನೂ, ಉತ್ತಮರಾದ ಮುನಿಜನರಿಂದ ಸ್ತುತಿಸಲ್ಪಟ್ಟವನೂ, ಪರಿಶುದ್ಧವಾದ ನಡತೆಯುಳ್ಳವನೂ, ಮನುಕುಲವೆಂಬ ಸಮುದ್ರವನ್ನು ಉಕ್ಕಿಸುವ ಚಂದ್ರನಂತಿರುವವನೂ, ಹೊಸ ಮನ್ಮಥನ ರೂಪವುಳ್ಳವನೂ, ಆದ ಶ್ರೀರಾಮನು ಹೀಗೆ ಶೋಭಿಸುತ್ತಿದ್ದನು. ॥ ೯೫ ॥ ವಿದ್ವಾಂಸರ ಹೃದಯವೆಂಬ ತಾವರೆಗೆ ಸೂರ್ಯನೂ, ಸರಸ್ವತೀದೇವಿಯ ಮುಖಕ್ಕೆ ರತ್ನದರ್ಪಣದಂತಿರುವವನೂ, ರಸಿಕರ ಸಂತೋಷಕ್ಕೆ ಸಮುದ್ರನೂ, ಮಿತ್ರನೂ. ಎನಿಸಿದ ದೇವಪ್ಪಕವಿ ರಚಿಸಿದ ಸತ್ಕಾವ್ಯವಿದು. ॥ ೯೬ ॥ ವಿದ್ವಾಂಸರ ಹೃದಯಕಮಲಕ್ಕೆ ಸೂರ್ಯನೂ, ನರಸ್ವತೀದೇವಿಯ ಮುಖಕ್ಕೆ ರತ್ನದ ಕನ್ನಡಿಯಂತೆ ಇರುವವನೂ,

---

[1] ಗಣ್ಣೊಳಗರುಣ (ಗ). [2] ರನ್ನ (ಕ). [3] ಸನುಮುನಿ (ಗ.ಚ.) [4] ಮದನ ಸನ್ನಿಭನೊಪ್ಪಿದನು (ಗ). ೯೭ ಈ ಪದ್ಯ ಕ ಗಗಳಲ್ಲಿಲ್ಲ.

## ೬. ಸೀತೆ ಭವಾವಳಿ

ದಿವಿಜ ನರೋರಗ ನತ ಪಾದಪದ್ಮನೆ । ಭವವೆಂಬ ಶರಧಿ ದಾಂಟದನೆ[1] ॥
ಭವಹರ ಮುನಿ ಸುವ್ರತಸ್ವಾಮಿ ಸಂಸಾರ । ದವಗಡವನು ಬಿಡಿಸೆನ್ನ ॥ ೧ ॥

ಮುಂದಣ ಕಥೆಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೨ ॥

ಅಂಗನೆಯರವಿಂದಲೋಚನೆ ಕಂಗಳ । ಮಂಗಳೆ ಮಾವನ ಮಗಳೆ ॥
ಸಿಂಗರ ಮೊಲೆಯಳೆ ಸಿರಿಮುಡಿಯಳೆ ಕೇಳು । ಹಿಂಗದೆ ಮುಂದಣ ಕಥೆಯ ॥ ೩ ॥

ಗುಣಿಯೆ ಪೆಣ್ಗಳ ತಲೆವಣಿಯೆ ಲಾವಣ್ಯದ । ಕಣಿಯೆ ಕಾಮನ ಕಯ್ಯೊಳೆಸೆವ ॥
ಮಣಿಮುಕುರವೆ ರತಿದೇವಿಯ ನಾಸಾ । ಮಣಿಯೆ ಲಾಲಿಪುದೀ ಕಥೆಯ ॥ ॥ ೪ ॥

ಇನಿಯಳೆ ಕೇಳು ಕೌಶಲವೆಂಬ ಪೆಸರಾಂತ । ಜನಪದವದಱ ಮಧ್ಯದೊಳು ॥
ಘನತರಮಪ್ಪ ಮಿಥಿಳೆ[2]ಯೆಂಬ ಪಟ್ಟಣ । ವನು ಪಾಲಿಪ ನರನಾಥ ॥ ೫ ॥

ಜನಕನೆಂದೆಂಬ ನೃಪಾಲನ ಪಟ್ಟದ । ವನಿತೆ ವೈದೇಹಿಯೊಳವನು
ಅನುಭವಿಸುತ ಸುಖವನು ತನ್ನ ರಾಜ್ಯವ । ವಿನಯದಿಂ ಪಾಲಿಸುತಿರ್ದ ॥ ೬ ॥

ಒಂದಾನೊಂದು ದಿವಸ ಜನಕನು ತನ್ನ । ನಂದನೆಯನು ನಡೆನೋಡಿ
ಅಂದವಡೆದ ಕುವರಿಗೆ ವರನಿನ್ನಾ । ರೆಂದೆಣಿಸಿದ ಮನದೊಳಗೆ ॥ ೭ ॥

---

ದೇವ–ಮನುಷ್ಯ–ನಾಗರಿಂದ ಸಮಸ್ಕರಿಸಲ್ಪಟ್ಟ ಪಾದಕಮಲವುಳ್ಳವನೂ, ಪುನರ್ಜನ್ಮವೆಂಬ ನಾಗರವನ್ನು ದಾಟಿದವನೂ, ಭವನಾಶಕನೂ ಆದ ಮುನಿಸುವ್ರತ ಸ್ವಾಮಿಯೇ, ನನ್ನ ಸಂಸಾರದ ಕಷ್ಟವನ್ನು ಪರಿಹಾರಮಾಡು. ॥ ೧ ॥ ಚೇಳಿನಿಯು ಶ್ರೇಣಿಕನೊಡನೆ – ಎಲೈ ಮನ್ಮಥ ಸ್ವರೂಪನೇ, ಇನ್ನು ಮುಂದಿನ ಕಥೆಯಾವುದು? ಅದರ ವೃತ್ತಾಂತವೇನು? ಎಂಬುದನ್ನು ಒಂದಿಷ್ಟೂ ಉಳಿಯದಂತೆ ನೀವು ತಿಳಿಸುವುದು – ಎಂದು ಹೇಳಿದಳು. ಆಗ ಶ್ರೇಣಿಕನು 'ಎಲೈ ನೈದಿಲೆಯಂತಹ ಕಣ್ಣಿನ ಚೇಳಿನಿಯೆ, ಹೇಳುವೆನು, ಕೇಳು – ಎಂದನು. ॥ ೨ ॥ ತಾವರೆಯಂತಹ ಕಣ್ಣಿನವಳೇ, ಕಣ್ಣುಗಳ ಮಂಗಳ ಸ್ವರೂಪೆಯೆ, ಮಾವನ ಮಗಳೇ, ಶೃಂಗಾರವಾದ ಕುಚದವಳೆ, ಶೋಭಾಯಮಾನವಾದ ಮುಡಿಯುಳ್ಳವಳೆ, ಮಡದಿಯೇ ಮುಂದಿನ ಕಥೆಯನ್ನು ಹಿಂಜರಿಯದೆ ಕೇಳು. ॥ ೩ ॥ ಎಲೈ ಗುಣವಂತೆಯೇ, ಸ್ತ್ರೀಯರಿಗೆಲ್ಲ ಶಿರೋರತ್ನದಂತೆ ಇರುವವಳೇ, ಸೌಂದರ್ಯದ ಗನಿಯೇ, ಮನ್ಮಥನ ಕೈಯ ರತ್ನದರ್ಪಣವೇ, ರತೀದೇವಿಯ ಮೂಗಿನ ರತ್ನವೇ ಈ ಕಥೆಯನ್ನು ಕೇಳು. ॥ ೪ ॥ ಎಲೈ ಇನಿಯಳೆ, ಕೇಳು. ಕೌಶಲವೆಂಬ ಹೆಸರಾನ್ತಾಂತ ದೇಶದ ನಡುವೆ ಮಿಥಿಳೆಯೆಂಬ ಶ್ರೇಷ್ಠವಾದ ಪಟ್ಟಣವಿದೆ. ಆ ಪಟ್ಟಣವನ್ನು ಆಳುವ ರಾಜನು ಜನಕನೆಂಬವನು. ॥ ೫ ॥ ಜನಕರಾಜನು ತನ್ನ ಪಟ್ಟದ ಮಡದಿಯಾದ ವೈದೇಹಿಯೊಡನೆ ಸುಖವನ್ನು ಅನುಭವಿಸುತ್ತ, ವಿನಯಶೀಲನಾಗಿ ತನ್ನ ರಾಜ್ಯವನ್ನು ಪರಿಪಾಲನೆ ಮಾಡುತ್ತಿದ್ದನು. ॥ ೬ ॥ ಜನಕರಾಜನು ಹೀಗಿರುತ್ತ ಒಂದಾನೊಂದು ದಿವಸ ತನ್ನ ಮಗಳನ್ನು ನೋಡುತ್ತ, ಸುಂದರಿಯಾದ ತನ್ನ ಮಗಳಿಗೆ ಗಂಡನು ಇನ್ನು ಯಾವನೋ ಎಂದು

---

[1] ಈ ಸಂಧಿಯ ೫ನೆ ಪದ್ಯದಿಂದ ೫೫ ವರೆಗೆ ೬೦ ಪದ್ಯಗಳು (ಗ) ಪ್ರತಿಯಲ್ಲಿ ಪಾತವಾಗಿವೆ. [1] ನರೋರಗಾರ್ಚಿತ ಪಾದನಂಗೋ । ಧ್ವಜಿತ ಕಾಲವಿದೂರ (ಗ. ಚ) [2] ಕಂಡಿಳಿ (ಕ)

ರಾವಣನರಿದನಾದೊಡೆ ಬಲುಗೈಯುವ । ನಾವ ಬಗೆಯೊಳಾದೊಡಿವಳ
ಓವದೆ ಕೊಂಡೊಯ್ವನೆಂದೊಂದು[1]ಪಾಯುವ । ನಾ ವಿಭು ನೆನೆದ ಮನದೊಳು ॥ ೮ ॥

ಮಾಡಿಸುವೆನು ಸ್ವಯಂವರವ ನಾವಿಲ್ಲಿಗೆ । ನಾಡ ನೃಪರ ನಂದನರ
ಕೂಡಿ ಕುವರಿ ನೋಡಿ ಸೋಲ್ತಗೆ ಮಾಲೆಯು । ಸೂಡಲಿ ಮೇಲೆ ಮದುವೆಯು ॥ ೯ ॥

ಮಾಡುವೆನೆಂದು ಮಂತ್ರಿಯನು ಕರೆಸಿ ಮಾ । ತಾಡಿ ಸೀತಾ ಸ್ವಯಂವರವ
ಮಾಡಿಸೆನಲು ರಚಿಸುವೆನೆಂದು ಬಿನ್ನಹ । ಮಾಡಿ ಮಂತ್ರೀಶನೈದಿದನು ॥ ೧೦ ॥

ರಾಯಸದವರ ಕರಸಿ ದಿಕ್ಕುದಿಕ್ಕಿನ । ರಾಯರಿಗೋಲೆಯು ಬರಸಿ[2]
ರಾಯಭಾರಿಗಳ ಕರಸಿ ಬುದ್ಧಿವೇಳ್ದು । ರಾಯ ಕಳುಹಿದ ಬೇಗದಲಿ ॥ ೧೧ ॥

ಕರೆಯುಲೊಡನೆ ನಾನಾ ದೇಶದ ಭೂ । ವರರು ಬಂದರು ದಶರಥನ
ಪುರಕೆ ರಾಯಭಾರಿ ಬಂದನಂದೊರ್ವನಾ[3] । ಧರಣೀಶನ ಕಾಣಲೆಂದು ॥ ೧೨ ॥

ಬಾಗಿಲೊಳಗೆ ನಿಂದು ದ್ವಾರಪಾಲಕನನು । ರಾಗದೊಳೊರೆಯುಲಂದವನು
ಬೇಗದೊಳಱುಪಲಾ ನೃಪ ಬರಹೇಳೆನೆ[4] । ಪೋಗಿ ಕಾಣುತ ಕೈಯ ಮುಗಿದು ॥ ೧೩ ॥

ಬಿನ್ನಪವೆಲೆ ಭೂಪಾಲ ಜನಕನೃಪ । ತನ್ನ ಮಗಳ ಸ್ವಯಂವರಕೆ
ನಿನ್ನ ಕರೆದುಕೊಂಡು ಬರಲೆಂದು ಕಳುಹಿದ । ನನ್ನ ನೀ ಬಿಜಯ ಮಾಡೆನಲು ॥ ೧೪ ॥

---

ಮನಸ್ಸಿನಲ್ಲೇ ಎಣಿಸಿದನು ॥ ೭ ॥ ಎಲ್ಲಾದರೂ ರಾವಣನಿಗೆ ಗೊತ್ತಾದರೆ, ಬಲಿಷ್ಠನಾದ ಆತನು ಯಾವ ರೀತಿಯಲ್ಲಾದರೂ ಇವಳನ್ನು ಕೊಂಡೊಯ್ಯದೆ ಇರನು. ಎಂದು ಜನಕರಾಜನು ಮನಸ್ಸಿನಲ್ಲಿ ಒಂದು ಉಪಾಯವನ್ನು ಯೋಚಿಸಿದನು ॥ ೮ ॥ ನನ್ನ ಮಗಳಿಗೆ ನಾನು ಸ್ವಯಂವರವನ್ನು ಮಾಡಿಸುವೆನು. ದೇಶಗಳ ರಾಜಕುಮಾರರನ್ನು ಬರಮಾಡಿಸುವೆನು. ಅವರನ್ನು ನೋಡಿ ಮೆಚ್ಚುಗೆಯಾದವನ ಕೊರಳಿಗೆ ನನ್ನ ಮಗಳು ಹೂಮಾಲೆ ಹಾಕಲಿ. ಆ ಮೇಲೆ ಮದುವೆ ಮಾಡಿಸುವೆನು ॥ ೯ ॥ ರಾಜನು ಹೀಗೆ ನಿರ್ಣಯ ಮಾಡಿ, ಮಂತ್ರಿಯನ್ನು ಕರೆದು, ಅವನೊಡನೆ ಮಾತಾಡಿ ಸ್ವಯಂವರದ ಎಲ್ಲಾ ಏರ್ಪಾಡುಗಳನ್ನು ಮಾಡಲು ಹೇಳಿದನು. ಮಂತ್ರೀಶನು ಅದಕ್ಕೆ ಒಪ್ಪಿ ಅಲ್ಲಿಂದ ತೆರಳಿದನು. ॥ ೧೦ ॥ ಆ ಮೇಲೆ ಜನಕರಾಯನು ರಾಯಸದವರನ್ನು ಕರೆಸಿ ದಿಗ್ದೇಶಗಳ ರಾಜರಿಗೆ ಆಮಂತ್ರಣ ಪತ್ರಗಳನ್ನು ಬರೆಯಿಸಿದನು. ರಾಜದೂತರನ್ನು ಬರಮಾಡಿಸಿ ಅವರಿಗೆ ವಿಚಾರಗಳನ್ನು ತಿಳಿಸಿ ಬೇಗನೆ ಕಳುಹಿಸಿಕೊಟ್ಟನು ॥ ೧೧ ॥ ಜನಕರಾಯನ ಕರೆಗೆ ಓಗೊಟ್ಟು ಹಲವಾರು ರಾಜರು ಸೀತಾ ಸ್ವಯಂವರಕ್ಕೆ ಬಂದರು. ಜನಕನ ಇನ್ನೊಬ್ಬ ರಾಯಭಾರಿಯು ದಶರಥನನ್ನು ಕಾಣಲು ಅಯೋಧ್ಯೆಗೆ ಬಂದನು ॥ ೧೨ ॥ ಬಂದಿರುವ ರಾಯಭಾರಿಯು ದಶರಥನ ಅರಮನೆಯ ಬಾಗಿಲಲ್ಲಿದ್ದ ದ್ವಾರಪಾಲಕನನ್ನು ಕಂಡು ತಾನು ಬಂದಿರುವುದನ್ನು ರಾಜನಿಗೆ ತಿಳಿಸಲು ಹೇಳಿದನು. ಅದರಂತೆ ದ್ವಾರಪಾಲನು ರಾಜನಿಗೆ ತಿಳುಹಿಸಲು, ದಶರಥನ ಆಜ್ಞೆಯಂತೆ ರಾಯಭಾರಿಯು ಒಳಗೆ ಹೋಗಿ ರಾಜನನ್ನು ನಮಸ್ಕರಿಸಿದನು. ॥ ೧೩ ॥ ಆ ಮೇಲೆ ರಾಯಭಾರಿಯು ದಶರಥನೃಪನೊಡನೆ– 'ಎಲೈ ರಾಜನೇ, ಜನಕರಾಜನು ತನ್ನ ಮಗಳ ಸ್ವಯಂವರಕ್ಕೆ ನಿನ್ನನ್ನು ಕರೆದುಕೊಂಡು ಬರುವುದಕ್ಕಾಗಿ ನನ್ನನ್ನು ಕಳುಹಿಸಿರುತ್ತಾನೆ. ಆದುದರಿಂದ ನೀನು ಬರಬೇಕು' ಎಂದು ತಿಳಿಸಿದನು. ॥ ೧೪ ॥ ಆ ಮಾತನ್ನು ಕೇಳಿ ದಶರಥನು ಅವನನ್ನು ಸನ್ಮಾನಪೂರ್ವಕವಾಗಿ ಬಿಡಾರಕ್ಕೆ ಕಳುಹಿಸಿದನು. ಆ ಮೇಲೆ ತನ್ನ ಮಂತ್ರಿ

---

[1] ನೆಂದಂದು (ಪ) [2] ರಾಯರುಗಳಿಗೋಲೆಯನು (ಪ) [3] ಎಂದು ಪೊಕ್ಕನುಮಾ (ಕ) [4] ಬರಪೇಳಿನೆ (ಪ)

ಆ ನುಡಿಗೇಳಿ ಬೀಡಾರಕ್ಕೆ ಕಳುಹಿ ಸ । ನ್ಮಾನದೊಳಂದಿರದವನ
ಅನದೆ ಕೇಳ್ದನಿರದೆ[1] ಕಜ್ಜವೇನೆಂ । ದಾ ನರನಾಥ ಮಂತ್ರಿಗಳ್[2] ॥ ೧೫ ॥

ಆಗಮಸಾರನೆಂದೆಂಬ ಸಚಿವನನು । ರಾಗದೊಳಾ ಭೂವರಗೆ
ಆಗ ನುಡಿದ ನೀವು ಪೋಗಲಿಲ್ಲಲ್ಲಿಗೆ[3] । ಪೋಗಲಿ ರಾಮ ಲಕ್ಷ್ಮಣರು ॥ ೧೬ ॥

ಎಂದೆನಲತಿಶಯಮತಿ ಮಂತ್ರಿ ಪೇಳ್ದನಿಂ । ತೆಂದನಾಲೋಚನೆಯೇಕೆ
ಸಂದ ಪುರೋಹಿತನನು ಕೇಳಿ ಕರಸಿ ನೀ । ವೆಂದೆನಲಾ ಭೂವರನು ॥ ೧೭ ॥

ಅಹುದು ನೀನೊರೆದ ಕಜ್ಜವೆ ಕಜ್ಜವೆಂದಾಗ । ಬಹುಚಿಂತೆಯನುಳಿದಿರದೆ
ವಹಿಲದೊಳವನ ಕರಸಿ ಕೇಳಿದನಾ । ಮಹಿಪತಿ ಲೀಲೆಯೊಳಂದು ॥ ೧೮ ॥

ಜನಕನ ಸುತೆಯ ಸ್ವಯಂವರಕೀಗೆಮ್ಮ । ತನುಜರ ಕಳುಪಲವರಿಗೆ
ಅನುನಯದಿಂ ಲೇಸಹುದಾಗದೆಂಬುದ । ನನುವದಿಸೆಂದೆನಲವನು ॥ ೧೯ ॥

ಲಕ್ಷಣಾಂಗಸ್ವರವೆಂಜನ ಭೌಮಾಂತ[4] । ರಿಕ್ಷ ಸ್ವಪ್ನಛಿನ್ನಗಳ್[5]
ಈಕ್ಷಿಸಲೀಯೆಂಟಂಗ ನೈಮಿತ್ತ್ಯದಿಂ । ಲಕ್ಷಿಸಿ ಪೇಳ್ದನಿಂತೆಂದು ॥ ೨೦ ॥

ಪೊಡವಿಪ ಕೇಳು ಧಾತಕಿಷಂಡದ ಮೂಡ । ಗಡೆಯ ಮಂದರದ ಭರತದ
ಬಿಡದಿರ್ಪ ಸಾಗರ ಸಮಯ ವಿಷಯಕತಿ । ತೊಡವಾದ ನಾಗಪುರವನು ॥ ೨೧ ॥

ಪಾಲಿಪ ನರದೇವನೆಂಬ ಪೆಸರ ಭೂ । ಪಾಲ ಸುಲೋಚನೆವೆರಸು
ಲೀಲೆಯಿಂ ರಾಜ್ಯವನಾಳುತಲಿರೆ ಪಲ । ಕಾಲ ಕಳಿಯಲೊಂದು ದಿವಸ ॥ ೨೨ ॥

---

ಗಳನ್ನು ಕರೆದು ಈ ಸಂದರ್ಭದಲ್ಲಿ ನಮ್ಮ ಕಾರ್ಯವೇನು? ಎಂದು ಕೇಳಿದನು. ॥ ೧೫ ॥ ಆಗ ದಶರಥನ ಮಂತ್ರಿಗಳಲ್ಲಿ ಒಬ್ಬನಾದ ಆಗಮಸಾರನು ಹೀಗೆಂದನು. "ಅಲ್ಲಿಗೆ ನೀವು ಹೋಗಬೇಕಾಗಿಲ್ಲ; ರಾಮಲಕ್ಷ್ಮಣರು ಹೋಗಲಿ' ಎಂದು ಹೇಳಿದನು. ॥ ೧೬ ॥ ಆಗ 'ಅತಿಶಯಮತಿ' ಎಂಬ ಮಂತ್ರಿಯು "ಇದಕ್ಕೆ ಆಲೋಚನೆಯೇಕೆ? ನೀವು ಪುರೋಹಿತರನ್ನು ಕೇಳಿ ಅವರೆಂದಂತೆ ನಡೆದುಕೊಳ್ಳಿ. ಅದಕ್ಕಾಗಿ ಈಗಲೇ ಪುರೋಹಿತರನ್ನು ಕರೆಸಿ" ಎಂದನು. ॥ ೧೭ ॥ ಆಗ ದಶರಥ ರಾಜನು 'ಹೌದು. ನೀನು ಹೇಳಿದ ಕಾರ್ಯವು ಯುಕ್ತವಾದುದು' ಎಂದು ಹೇಳಿ ಹೆಚ್ಚಿನ ಚಿಂತೆಯನ್ನು ಬಿಟ್ಟು ಒಡನೆ ಪುರೋಹಿತನನ್ನು ಕರೆಸಿ, ಅವನೊಡನೆ ಹೀಗೆ ಕೇಳಿದನು. ॥ ೧೮ ॥ "ಜನಕರಾಜನ ಮಗಳ ಸ್ವಯಂವರಕ್ಕೆ ರಾಮಲಕ್ಷ್ಮಣರನ್ನು ಕಳುಹಿಸಿದರೆ, ಅವರಿಗೆ ಒಳ್ಳೆಯದು ಆಗುವುದೋ ಆಗದೋ ಎಂಬ ಸಂಗತಿಯನ್ನು ತಿಳಿಸಬೇಕು" ಎಂದು ರಾಜನು ಹೇಳಿದನು. ॥ ೧೯ ॥ ಆಗ ಪುರೋಹಿತನು ಶಕುನಗಳ ಎಂಟು ಅಂಗಗಳಾದ ಲಕ್ಷಣ, ಅಂಗ, ಸ್ವರ, ವ್ಯಂಜನ. ಭೌಮ. ಅಂತರಿಕ್ಷ, ಕನಸು, ಛಿನ್ನ– ಮುಂತಾದವುಗಳನ್ನು ಲಕ್ಷಿಸಿ ಪೂರ್ವವೃತ್ತವನ್ನು ಹೀಗೆ ಹೇಳಿದನು. ॥ ೨೦ ॥ ಎಲೈ ರಾಜನೇ ಕೇಳು. ಧಾತಕೀಷಂಡದ ಪೂರ್ವದಿಕ್ಕಿನಲ್ಲಿ ಮಂದರ–ಭರತ–ಸಾಗರ–ಸಮಯ ದೇಶಗಳಿಗೆ ಅತ್ಯಂತ ಭೂಷಣಪ್ರಾಯವಾದ 'ನಾಗಪುರ' ಎಂಬ ಪಟ್ಟಣ ಇದೆ. ॥ ೨೧ ॥ ಆ ನಾಗಪುರವನ್ನು ಪಾಲನೆಮಾಡತಕ್ಕವನು ನರದೇವನೆಂಬ ರಾಜನು. ಇವನು ತನ್ನ ಮಡದಿಯಾದ ಸುಲೋಚನೆಯೊಡನೆ ಹಲವು ಕಾಲ ರಾಜ್ಯವನ್ನಾಳುತ್ತಿದ್ದನು. ॥ ೨೨ ॥ ಹೀಗಿರುವಾಗ ಒಂದು ದಿವಸ ಆತನು ಅನಂತ

---

[1] ಕೇಳ್ದನಿವಚಿ (ಚ)　[2] ಮಂತ್ರಿಯನು (ಚ)　[3] ಪೋಗಗಿಲ್ಲಲ್ಲಿಗೆ (ಚ)　[4] ಬಹುಮಂತ್ರ (ಕ).　[5] ಚಿಪ್ನಗಳ (ಚ)

ಎಂದು ನಿದಾನಿಸಿ ಜೀವಾವಸಾನದೊ । ಳಂದು ರಾವಣನಗ್ರಮಹಿಷಿ ॥
ಮಂದಗಮನೆ ಮಂಡೋದರಿಯುದರದೊಳ್ । ಬಂದು ಜನಿಸಿದ ಬಳಿಯೊಳು ॥ ೩೦ ॥

ಮೂಡುವ ಪ್ರತಿಸೂರ್ಯ ನೆಲಕೆ ಕೆಡೆವ ಕರು । ವಾಡ ಬೀಸುವ ಬಿಸುಗಾಳಿ ॥
ನಾಡೆ ದೆಸೆಯೊಳುತ್ಪಾತ ಭೀತಿಯನತಿ । ಮಾಡುತಂದೊಗೆದವದಱೊಳು ॥ ೩೧ ॥

ಪಗಲುದಾರಗೆ[1] ಕರಿತುರಗದ ಕಣ್ಗಳೊ । ಳೊಗುವಶ್ರುಬಿಂದು ಭೂಕಂಪ ॥
ಒಗೆದವು ಬಲು ಧೂಮಕೇತುಗಳಂದಾ । ನಗರದೊಳಗೆ ಪೇಳ್ವೆನೇನ ॥ ೩೨ ॥

ನೆತ್ತರ ಮಳೆ ಸುರಿದುದು ಮತ್ತಲ್ಲಲ್ಲಿ । ಹೊತ್ತಿ ಹೊಗೆವ ಧೂಮಾಗ್ನಿ ॥
ಎತ್ತ ನೋಡಿದೊಡತ್ತ ಕೌತುಕವಿರೆ ಭಯ । ಮುತ್ತ್ತುದಾ ಪುರದ ಜನರಿಗೆ ॥ ೩೩ ॥

ಕೆಟ್ಟಿತಿನ್ನೇಕೀ ಪೊಳಲೆಂದು ಕೌತುಕ । ವಟ್ಟು ಮಂತ್ರಿಗಳು ಜೋಯಿಸರ ॥
ನೆಟ್ಟನೆ ಕೇಳೆ ಪುರೋಹಿತ ನೋಡಿ ಕಂ । ಗೆಟ್ಟಿರ್ದ ಮಂತ್ರಿಗೊರೆದನು[2] ॥ ೩೪ ॥

ಹೇಳಲಂಜುವೆನೀ ನೃಪಸುತೆ ಪುಟ್ಟಿದ । ಕಾಲವನೆಂದು ಬಿನ್ನವಿಸೆ[3] ॥
ಹೇಳು ಭೀತಿಯ ಬಿಟ್ಟು ನೀನೆನಲವನಂದು । ಹೇಳಿದನಿರದಿಂತೆಂದು ॥ ೩೫ ॥

ಪಟ್ಟಣ ಕೆಡುವುದು ಪರರಿಗಹದು ಜನ[4] । ನೆಟ್ಟನಳಿವರೀ ಪೊಳಲ ॥
ಪಟ್ಟದರಸಿಗಪಜಯ ತಪ್ಪದೀ ಕೂಸು । ಪುಟ್ಟಿದಶುಭಲಗ್ನದಿಂದ ॥ ೩೬ ॥

ಮೊಗವ ನೋಡದೆ ಮಂದಸಿನೊಳು ನಿನ್ನೀ ಚೆಲ್ವ । ಮಗಳನಿರಿಸಿ ಬೇಗದೊಳು ॥
ನಗರವ[5] ಪೊಱಮಡಿಸೆನಲಾ ನೃಪನತಿ । ದುಗುಡದಿ ಮಾರೀಚನಿಗೆ ॥ ೩೭ ॥

---

ಮಣಿಮತಿಯು ತನ್ನ ಮಾತಿನಂತೆ ಪ್ರಾಣವನ್ನು ಬಿಟ್ಟನಂತರ ರಾವಣನ ಹಿರಿಯ ಹೆಂಡತಿಯಾದ ಮಂಡೋದರಿಯ ಬಸಿರಿನಲ್ಲಿ ಮಗಳಾಗಿ ಜನಿಸಿದಳು. ॥ ೩೦ ॥ ಆಕೆ ಜನಿಸಿದೊಡನೆ ಸೂರ್ಯನಿಗೆ ಎದುರಾಗಿ ಇನ್ನೊಬ್ಬ ಸೂರ್ಯನು ಮೂಡುವುದು, ಉಪ್ಪರಿಗೆ ಮನೆಗಳು ಕುಸಿದುಬೀಳುವುದು, ಬಿರುಗಾಳಿಯ ಬೀಸುವಿಕೆ, ದಿಕ್ಕುಗಳಲ್ಲಿ ಉತ್ಪಾತಗಳು – ಮುಂತಾದವು ಕಾಣಿಸಿಕೊಂಡು ಹೆದರಿಕೆಯನ್ನು ಉಂಟುಮಾಡಿದವು ॥ ೩೧ ॥ ಲಂಕಾಪಟ್ಟಣದಲ್ಲಿ ಆಗ ಹಗಲು ನಕ್ಷತ್ರಗಳು ಕಾಣಿಸಿದವು, ಆನೆ ಕುದುರೆಗಳು ಕಣ್ಣೀರು ಸುರಿಸಿದವು, ಭೂಮಿಯು ಅಲುಗಾಡಿತು, ಧೂಮಕೇತುಗಳು ಮೂಡಿದವು. ಇದನ್ನು ಏನು ಹೇಳಲಿ ! ॥ ೩೨ ॥ ರಕ್ತದ ಮಳೆ ಸುರಿಯಿತು. ಅಲ್ಲಲ್ಲಿ ಹೊತ್ತಿಹೊಗೆಯುತ್ತಿರುವ ಹೊಗೆ ಬೆಂಕಿಗಳು ಕಾಣಿಸಿದವು ಎಲ್ಲಿ ನೋಡಿದರೂ ಆಶ್ಚರ್ಯಕರ ಉತ್ಪಾತಗಳಾಗುತ್ತಿರಲು ಪಟ್ಟಣಿಗರಿಗೆಲ್ಲಾ ಭಯವುಂಟಾಯಿತು. ॥ ೩೩ ॥ ಆಗ ಮಂತ್ರಿಗಳು "ಅಯ್ಯೋ ಕೆಟ್ಟಿತಲ್ಲಾ ! ಇನ್ನು ಈ ಪಟ್ಟಣವೇತಕ್ಕೆ ? ಎಂದು ಆಶ್ಚರ್ಯವನ್ನು ತಾಳಿದರು ಹೀಗಾಗಲು ಕಾರಣವೇನೆಂದು ಅವರು ಜೋಯಿಸರನ್ನು ಕೇಳಿದರು. ಆಗ ಪುರೋಹಿತನು ದಿಕ್ಕುತೋರದೆ ಇರುತ್ತಿದ್ದ ಮಂತ್ರಿಗಳಿಗೆ ಹೀಗೆಂದನು ॥ ೩೪ ॥ ಈ ರಾಜಕುಮಾರಿ ಜನಿಸಿದ ಕಾಲದ ಫಲವು ಕೆಟ್ಟದು ಅದನ್ನು ಹೇಳಲು ನಾನು ಅಂಜುತ್ತೇನೆ – ಎನ್ನಲು, ರಾವಣನು ಏನೂ ಭಯಪಡದೆ ಹೇಳು – ಎಂದು ಹೇಳಿದನು ಆಗ ಪುರೋಹಿತನು ಹೀಗೆಂದನು. ॥ ೩೫ ॥ ಈ ಶಿಶುವು ಅಶುಭಲಗ್ನದಲ್ಲಿ ಜನಿಸಿದೆ. ಆದುದರಿಂದ ಇದರ ಜನನದ ಫಲವಾಗಿ ಈ ಪಟ್ಟಣವೇ ನಾಶವಾಗುವುದಲ್ಲದೆ, ಇದು ಅನ್ಯರಿಂದ ಆಕ್ರಾಂತವಾಗುವುದು. ಇಲ್ಲಿನ ಜನರು ಸಾಯುವರು ಇಲ್ಲಿನ ಪಟ್ಟದ ರಾಜನಿಗೆ ಪರಾಜಯವು ಒದಗುವುದು. ॥ ೩೬ ॥ ಆದುದರಿಂದ

---

[1] ಧಾರೆಗೆ (ಕ)　[2] ಪೇಳಿದನು (ಕ).　[3] ಪೇಳೆಯುನೆನೆ ರಾವಣನು (ಚ)　[4] ಜನಜಯ ಸಿರಿವೆಣ್ಣು (ಚ)　[5] ನಗರಿಯಿಂ (ಚ)

ಹೇಳಲಂದವ ಕೇಳಿ ಮಗಳ ರಾವಣ ತರ । ಹೇಳಿದನೆಂದು ಬಂದಿರದೆ ॥
ಹೇಳೆ ಮಂಡೋದರಿ ಕೇಳಿ ದುಃಖವನಂದು । ತಾಳಿ ಚಿಂತಿಸಿದಳಿಂತೆಂದು[1] ॥ ೩೮ ॥

ಪತಿಯಾಜ್ಞೆಯ ಮೀಱಿ ನರಕ ತಪ್ಪದು ಹೆತ್ತ । ಸುತೆಯ ಕೊಟ್ಟಾನು ಜೀವಿಪುದು ॥
ಅತಿಕಷ್ಟವೆಂಬೀ ಉಭಯಸಂಕಟದೊಳು । ಸತಿ ಸುತೆಯಾಸ್ಯವ ನೋಡಿ ॥ ೩೯ ॥

ಮಲುಮಲ ಮಱುಗಿ ಕರಗಿ[2] ಕಂದಿ ಬಿಸುಸು । ಯ್ದಲವತ್ತು ಜಜ್ಜನೆ ಜರಿದು ॥
ಲಲನೆ ಸುತೆಯನಂದವನ ಕೈಯಲಿ ಕೊಟ್ಟು । ನೆಲದೊಳು ಪೊರಳ್ದಳಲಿದಳು ॥ ೪೦ ॥

ಬಸುಱ ಹೊಸೆದು ಬೈಬೈದು ಬಿದಿಯನಂ । ದಸವಸದಿಂದಕಟೆನುತ ॥
ಹಸಗೆಟ್ಟು ಬಾಯ್ಬಿಟ್ಟು ಮೊಱೆಯಿಟ್ಟು ಮರವಟ್ಟು । ಶಶಿಮುಖಿಯಿರಲು ದುಃಖದೊಳು ॥ ೪೧ ॥

ದೇಹಿಗಳಾದಹಿ ಸುರ ನರರಿಗೆ ಸುತ । ಮೋಹದಿಂದಗ್ಗಳವೆನಿಪ ॥
ಮೋಹವಿಲ್ಲೆನೆ ಸುತೆಯಗಲೆ ಪಲುಬುವುದೇ । ನಾ ಹರಿಣಾಕ್ಷಿಗಚ್ಚರಿಯೆ ॥ ೪೨ ॥

ಕಟ್ಟದಿರೊಳು ಬೇಡನೆಚ್ಚ ಕೋಲಿಗೆ ಮೈ । ಗೊಟ್ಟು ಹರಿಣಿ ತನ್ನ ಮಱಿಯ ॥
ನೆಟ್ಟನುಳುಹಿಕೊಂಬುದೆನೆ ಸುತಮೋಹವ । ಬಿಟ್ಟು ಜೀವಿಪ ನರರುಂಟೆ ॥ ೪೩ ॥

ತರಿಸಿ ಮಂದಸಿನೊಳು ಬರಸಿಯನ್ವಯವನಂ । ದಿರಿಸಿ ಮಗಳನೋರ್ವನನು ॥
ಕರಸಿ ದೂರದೊಳಿದನಿರಿಸಿ ಬಾರೆಂದಂ । ದರಸ ಪೇಳಲು ನೋವಿನಿಂದ ॥ ೪೪ ॥

---

ಈ ಶಿಶುವಿನ ಮುಖವನ್ನು ಕೂಡ ನೋಡದೆ, ಈ ಚೆಲುವಾದ ಮಗಳನ್ನು ಒಂದು ಪೆಟ್ಟಿಗೆಯಲ್ಲಿರಿಸಿ, ಬೇಗನೆ ಈ ಪಟ್ಟಣದಿಂದ ಹೊರಡಿಸು–ಎಂದು ಪುರೋಹಿತನು ತಿಳಿಸಿದನು–ಆಗ ರಾವಣನು ಬಹಳ ದುಃಖದಿಂದ ಮಾರೀಚನಿಗೆ ಸಂಗತಿಯನ್ನು ತಿಳಿಸಿದನು ॥ ೩೭ ॥ ರಾವಣನ ಮಾತನ್ನು ಕೇಳಿ ಮಾರೀಚನು ಮಂಡೋದರಿಯ ಬಳಿಗೆ ಬಂದು 'ರಾವಣನು ಮಗಳನ್ನು ತರಲು ಹೇಳಿದನು' ಎಂದನು ಆಗ ಮಂಡೋದರಿ ಈ ಮಾತನ್ನು ಕೇಳಿ ದುಃಖಿತಳಾಗಿ ಹೀಗೆ ಯೋಚಿಸಿದಳು. ॥ ೩೮ ॥ ಗಂಡನ ಆಜ್ಞೆಯನ್ನು ಉಲ್ಲಂಘಿಸಿದರೆ ನರಕವು ಪ್ರಾಪ್ತವಾದೀತು ಗಂಡನ ಆಜ್ಞೆಯಂತೆ ಮಗಳನ್ನು ಕೊಟ್ಟು ನಾನು ಜೀವಿಸುವುದು ಬಹಳ ಕಷ್ಟ– ಹೀಗೆ ಮಂಡೋದರಿಯು ಉಭಯ ಸಂಕಟಕ್ಕೆ ಒಳಗಾದಳು ಆಕೆ ತನ್ನ ಮಗಳ ಮುಖವನ್ನು ನೋಡಿದಳು ॥ ೩೯ ॥ ಮಂಡೋದರಿಯು ಬಹಳವಾಗಿ ದುಃಖಿಸಿ, ಕರಗಿ, ಕಂದಿ, ಬಿಸಿಯಾದ ಉಸಿರುಬಿಟ್ಟು, ಆಯಾಸಪಟ್ಟು, ಕುಸಿದು – ತನ್ನ ಮಗಳನ್ನು ಅಂದು ಮಾರೀಚನ ಕೈಗೆ ಕೊಟ್ಟು ನೆಲದಲ್ಲಿ ಹೊರಳುತ್ತ ಅತ್ತಳು ॥ ೪೦ ॥ ಅಷ್ಟು ಮಾತ್ರವಲ್ಲದೆ, ಆ ಮಂಡೋದರಿಯು ಹೊಟ್ಟೆಯನ್ನು ಹೊಸೆದಳು ವಿಧಾತನನ್ನು ಬಹಳ ರೀತಿಯಲ್ಲಿ ಅವಸರದಿಂದ ಬೈದಳು ಅಯ್ಯೋ ಎಂದಳು. ಸೊಬಗು ಕೆಟ್ಟಳು ಬಾಯಿಬಿಟ್ಟು ಮೊರೆಯಿಟ್ಟು ದುಃಖದಿಂದ ನಿಶ್ಚೇಷ್ಟಿತಳಾಗಿದ್ದಳು. ॥ ೪೧ ॥ ದೇಹಧಾರಿಗಳಾಗಿರುವ ದೇವ–ಮನುಷ್ಯ–ನಾಗರಿಗೆ ಪುತ್ರಮೋಹಕ್ಕಿಂತ ಹೆಚ್ಚಾದ ಮೋಹವು ಯಾವುದೂ ಇಲ್ಲ ಹೀಗಿರುವಾಗ ಆ ಮಂಡೋದರಿಯು ತನ್ನ ಮಗಳ ಅಗಲಿಕೆಯಲ್ಲಿ ದುಃಖಿಸುವುದು ಏನೂ ಆಶ್ಚರ್ಯವಲ್ಲ ॥ ೪೨ ॥ ಪುತ್ರಮೋಹದಿಂದ ಕೂಡಿರುವ ಜಿಂಕೆಯು ತನಗೆ ಎದುರಾಗಿ ಬೇಟೆಗಾರನು ಬಂದಾಗ ಆತನ ಬಾಣಕ್ಕೆ ತನ್ನ ದೇಹವನ್ನು ಗುರಿಮಾಡಿ, ತನ್ನ ಮರಿಯನ್ನು ಉಳಿಸಿಕೊಳ್ಳುವುದು ಹೀಗಿರುವಾಗ ಪುತ್ರಮೋಹವನ್ನು ಬಿಟ್ಟು ಜೀವಿಸುವ ಮಾನವರು ಇರುವರೆ? ॥ ೪೩ ॥ ರಾವಣನು ಮಗಳನ್ನು ಹೀಗೆ ತರಿಸಿ ಕುಲದ ವಿವರವನ್ನು ಬರೆಸಿ, ಪೆಟ್ಟಿಗೆ

---

[1] ತಾಳಿ ನುಡಿಸಿದನಿಂತೆಂದು (ಕ) [2] ಮರುಗಿ (ಕ).

ಆ ಮಹೀಪತಿಯ ನೇಮದೊಳಾ ಕಿಂಕರ । ತಾಮಸವನು ಮಾಡದೈದಿ ॥
ಆ ಮಗುವನು ಪೊಳ್ದು ಮರಳಿದ ಪುರಕಂ । ದಾ ಮಿಥಿಳೆ[1]ಯೊಳತ್ತಲಿತ್ತ ॥ ೪೫ ॥

ಜನನಾಥ ಕೇಳೊಂದು ದಿನ ಭೂಮಿ ಶೋಧನೆ । ಯನು ಮಾಡುತೋರ್ವ[2] ಗುಡಿಯನಾ ॥
ವಿನುತ ನೇಗಿಲೊಳಿದ್ದ[3] ಮಂದಸ ಕಂಡದ[4] । ಜನಕ ಭೂವರಗೀಯಲದನು ॥ ೪೬ ॥

ಆ ಮಂದಸಿನ ಮುಚ್ಚಳ ತೆಗೆದೀಕ್ಷಿಸಿ । ಆ ಮಗುವನು ಲೇಖನವ ॥
ಆಮೋದವೆತ್ತು ಬಾಜಿಸಿ ಕೇಳಿ ಜನಕನಂ । ದಾಮೂಲಾಗ್ರವನರಿದು ॥ ೪೭ ॥

ನಾಮಕರ್ಮವನತಿ ವೈಭವದೊಳು[5] ಮಾಡಿ । ಯಾ ಮಹಿಪತಿ ಸೀತೆಯೆಂಬ ॥
ನಾಮವನಿಡಲಂದಾ ಕುವರಿಗೆಯದು । ಭೂಮಿಯೊಳದು[6] ಪಸರಿಸಿತು ॥ ೪೮ ॥

ರವಿಯುದಯವ ತಾವರೆ ಚಂದ್ರನುದಯವ । ಪವಿಗಡಲಂದು ಕಂಡಿರದೆ ॥
ತವೆ ಪೆರ್ಚುವಂತೆ ಪೆರ್ಚಿದರು ದಂಪತಿಗಳು । ಕುವರಿಯ ಮೊಗವನೀಕ್ಷಿಸುತ[7] ॥ ೪೯ ॥

ಸುರಸಿರಿ ಕೈಸಾರಿದಂತಾ ವರಕುಜ । ನೆರವಾದಂತೆ ಮನದೊಳು ॥
ಹರುಷವ[8] ತಳೆದಳು ವಸುಧಾದೇವಿಯೆಂ । ಬರಸಿ ಜನಕ ಭೂವರನ ॥ ೫೦ ॥

ಅತಿಹರುಷದಿ ವಸುಧಾದೇವಿಯರಂದು । ಸುತೆ ಸೀತೆಯ ಸಲಹುತಿರೆ ॥
ಮತಿ ಪೆರ್ಚಿ ಯೌವನವಂಕುರಿಸಿದುದಾ । ಶತಪತ್ರದಳಲೋಚನೆಗೆ ॥ ೫೧ ॥

---

ಯಲ್ಲಿ ಇರಿಸಿದನು. ಆ ಮೇಲೆ ಒಬ್ಬ ಸೇವಕನನ್ನು ಕರೆಸಿ 'ಇದನ್ನು ದೂರಕ್ಕೆ ಒಯ್ದು ಇರಿಸಿ ಬಾ' ಎಂದು ದುಃಖದಿಂದ ನೇಮಿಸಿದನು. ॥ ೪೪ ॥ ರಾಜಾಜ್ಞೆಯಂತೆ ಆ ಸೇವಕನು ತಡವನ್ನು ಮಾಡದೆ, ಮಗುವನ್ನು ಪೆಟ್ಟಿಗೆಯಲ್ಲಿ ದೂರಕ್ಕೆ ಕೊಂಡುಹೋಗಿ, ಮಿಥಿಳೆಯಲ್ಲಿ ಅದನ್ನು ಹೂಳಿಟ್ಟು ಲಂಕಾಪಟ್ಟಣಕ್ಕೆ ಹಿಂದೆರಳಿದನು. ॥ ೪೫ ॥ ಎಲೈ ದಶರಥರಾಜನೇ ಕೇಳು. ಒಂದು ದಿನ ಒಬ್ಬ ಕುಡಿಯರವನು ಅಲ್ಲಿ ನೆಲವನ್ನು ಉಳುತ್ತಾ ಇದ್ದಾಗ, ನೇಗಿಲಿಗೆ ಸಿಕ್ಕಿ ಮೇಲಕ್ಕೆದ್ದ ಪೆಟ್ಟಿಗೆಯನ್ನು ಕಂಡನು – ಅವನು ಅದನ್ನು ಜನಕರಾಜನಿಗೆ ತಂದುಕೊಟ್ಟನು. ॥ ೪೬ ॥ ಜನಕರಾಯನು ಆ ಪೆಟ್ಟಿಗೆಯ ಮುಚ್ಚಳವನ್ನು ತೆಗೆದಾಗ ಅದರೊಳಗೆ ಮಗುವನ್ನು ಕಂಡನು ಆ ಮಗುವಿನ ಎಲ್ಲಾ ಸಂಗತಿಗಳನ್ನೂ ತಿಳಿದುಕೊಂಡನು. ॥ ೪೭ ॥ ಆ ರಾಯನು ಕುಮಾರಿಗೆ ವೈಭವದಿಂದ ನಾಮಕರಣದ ಉತ್ಸವವನ್ನು ಮಾಡಿ, 'ಸೀತೆ' ಎಂಬ ಹೆಸರನ್ನಿಟ್ಟನು. ಆ ಹೆಸರು ಭೂಮಿಯಲ್ಲೆಲ್ಲ ಪ್ರಸಾರವಾಯಿತು. ॥ ೪೮ ॥ ಸೂರ್ಯನ ಉದಯವನ್ನು ನೋಡಿ ತಾವರೆಯು ಹಿಗ್ಗುವಂತೆಯೂ ಚಂದ್ರನು ಉದಯಿಸಿದುದನ್ನು ಕಂಡು ಕ್ಷೀರಸಾಗರವು ಹೆಚ್ಚುವಂತೆಯೂ ಆ ರಾಜದಂಪತಿಗಳು ಕುಮಾರಿಯ ಮುಖವನ್ನು ನೋಡಿ ಆನಂದಪಟ್ಟರು. ॥ ೪೯ ॥ ಜನಕರಾಯನ ವಸುಧಾದೇವಿಯೆಂಬ ಅರಸಿಯು ತನಗೆ ದೇವತೆಗಳ ಐಶ್ವರ್ಯವು ಕೈಸೇರಿದಂತೆಯೂ ಶ್ರೇಷ್ಠವಾದ ಕಲ್ಪವೃಕ್ಷವು ಒದಗಿಬಂದಂತೆಯೂ ಮನಸ್ಸಿನಲ್ಲಿ ಸಂತೋಷವನ್ನು ತಾಳಿದಳು. ॥ ೫೦ ॥ ವಸುಧಾದೇವಿಯವರು ಬಹಳ ಸಂತೋಷದಿಂದ ಮಗಳಾದ ಸೀತೆಯನ್ನು ಸಾಕುತ್ತಿರಲು. ಆಕೆಗೆ ಬುದ್ಧಿಯು ಹೆಚ್ಚಿತು. ತಾವರೆಯಂತೆ ಸುಂದರವಾದ ಕಣ್ಣುಳ್ಳ ಅವಳಿಗೆ ಯೌವನವು ಮೂಡಿತು ॥ ೫೧ ॥ ಎಲೈ ಜೇಳಿನಿಯೇ. ಸುಂದರಿಯಾದ

---

[1] ಮಿಥುಳೆ (ಕ). [2] ಮಾಡುಪ್ರೋರ್ವ (ಚ). [3] ನೇಗಿಲೂಳಿದ್ದ (ಚ) [4] ಕಂಡಡೆ (ಕ). [5] ವೈಭವದಿಂ (ಚ). [6] ಭೂಮಿಯೊಳಗೆ (ಚ).
[7] ನಿಟ್ಟಿಸುತ (ಚ). [8] ಹರಿಸವ (ಚ).

ಜಾಱಿತು ಶೈಶವ ಮೆಲ್ಲಮೆಲ್ಲನೆ ತಲೆ । ದೋಱಿದುದೆಳೆಜವ್ವನವು ॥
ಏಱಿತು ಲಾವಣ್ಯ ಮೈಯೊಳಗಂದಾ । ನೀಱಿಗೆ ಸೀತೆಗಬ್ಜಾಕ್ಷಿ[1] ॥ ೫೨ ॥

ನುಣ್ಣಿದವಾದವು ತೋಳ ಮೊದಲು ಮೈ । ಬಣ್ಣವಾದುದು ಜಾನಕಿಯ ॥
ಕಣ್ಣಲರಿದವೆನಲವಳ ಜವ್ವನವನು । ಬಣ್ಣಿಸಲಳವೆ ಬಾಯಳಿದು ॥ ೫೩ ॥

ನೋಡಿ ಕುವರಿಯ ರೂಪಾತಿಶಯವ ಕೊಂ । ಡಾಡಿ ಕೊಂಡೆಯರು ರಾವಣಿಗೆ ॥
ನಾಡೆ ಪೇಳಲು ಹಸನಲ್ಲೆಂದು ಚಿಂತೆಯ । ಮಾಡಿ ಜನಕನಿಂತೆಂದ ॥ ೫೪ ॥

ಬವರಕಳುಕೆವೆಂದೆಂಬೆವೆ[2] ಖೇಚರ । ರವರು ಭೂಚರರು ನಾವದಱಿಂ ॥
ಅವಗಡ ನಮಗವರೊಳಗೆಂದೆಣಿಸಿ ನಿನ್ನ । ತವಕದಿಂ ಕರೆಯಲಟ್ಟಿದನು ॥ ೫೫ ॥

ಅದಱಿಂದ ಪೋಗದೆ ನಿನ್ನ ಕುಮಾರರ । ಮುದದಿಂದ[3] ನೀನು ಕಳುಪಲು ॥
ಪಡೆದು ಸೀತೆಯನೀ ಶ್ರೀರಾಮಚಂದ್ರಗೆ । ಮದುವೆಯ ಮಾಡಿ[4] ಕಳುಪುವ ॥ ೫೬ ॥

ನೆರೆದವನೀಶರ ನೋಡದೆ ಮನದೊಳು । ವರಿಸದೆ ರಾಮಚಂದ್ರಮಗೆ ॥
ಅರಲ ಮಾಲೆಯನಿಕ್ಕಿಯಾ ಸೀತಾದೇವಿ । ಹರುಷದೊಳೋಲಾಡುವಳು[5] ॥ ೫೭ ॥

ಸೀತೆಯ ವರ್ಣಿಪರಾರು ಕವಿಗಳೊಳು[6] । ಮಾತಲ್ಲ ಕೇಳ್ವವರುಗಳ ॥
ರೀತಿ[7]ಯಱಿದು ಪೇಳಿದುದಿಲ್ಲ[8]ವೇನೆಂದು । ಭೂತಳಪತಿಗವನೊರೆದ ॥ ೫೮ ॥

---

ಸೀತೆಗೆ ಬಾಲ್ಯವು ದಾಟಿತು ಮೆಲ್ಲಮೆಲ್ಲಗೆ ಹೊಸ ತಾರುಣ್ಯವು ಕಾಣಿಸಿತು, ದೇಹದಲ್ಲಿ ಲಾವಣ್ಯವು ಕಾಣಿಸಿತು ॥ ೫೨ ॥ ಆಕೆಯ ಕಂಕುಳಗಳು ನಯವಾದುವು, ದೇಹವು ಒಳ್ಳೆಯ ಬಣ್ಣದಿಂದ ಹೊಳೆಯಿತು, ಕಣ್ಣುಗಳು ಅರಳಿದವು – ಎನ್ನುವಾಗ ಸೀತೆಯ ಯೌವನವನ್ನು ಸಾಕಷ್ಟು ವರ್ಣನೆಮಾಡಲು ಸಾಧ್ಯವೆ? ॥ ೫೩ ॥ ಮಗಳಾದ ಸೀತೆಯ ಸೊಬಗನ್ನು ನೋಡಿ ಎಲ್ಲಿಯಾದರೂ ಚಾಡಿಗಾರರು ರಾವಣನಿಗೆ ಹೇಳಿಬಿಡಬಾರದೆಂದು ಯೋಚಿಸಿ, ಜನಕರಾಯನು ಹೀಗೆ ಹೇಳಿದನು ॥ ೫೪ ॥ ರಾವಣನಿಗೆ ಗೊತ್ತಾದರೆ ಆಗಲಿ, ಅವನೊಡನೆ ಯುದ್ಧಕ್ಕೆ ನಾವು ಹೆದರೆವೆಂದು ಹೇಳಬಲ್ಲೆವ? ಅವರಾದರೊ ಗಗನಸಂಚಾರಿಗಳು, ನಾವು ಭೂಮಿಯಲ್ಲಿ ಸಂಚರಿಸುವವರು ಆದುದರಿಂದ ಯುದ್ಧದಲ್ಲಿ ಅವರಿಂದ ನಮಗೇ ಅಪಾಯವಾಗುವುದು – ಹೀಗೆ ಜನಕನು ಭಾವಿಸಿ ಬೇಗನೆ ನಿನ್ನನ್ನು ಕರೆಯುವುದಕ್ಕಾಗಿ ರಾಯಸದವನನ್ನು ಕಳುಹಿಸಿರುತ್ತಾನೆ ॥ ೫೫ ॥ ಆದುದರಿಂದ ಈ ಸ್ವಯಂವರಕ್ಕೆ ನೀನು ಹೋಗುವುದು ಬೇಡ ನಿನ್ನ ಕುಮಾರರಾದ ರಾಮಲಕ್ಷ್ಮಣರನ್ನು ಕಳುಹಿಸು ಜನಕರಾಜನು ಸಂತೋಷದಿಂದ ಸೀತೆಯನ್ನು ಶ್ರೀರಾಮಚಂದ್ರನಿಗೆ ಕೊಟ್ಟು, ಮದುವೆ ಮಾಡಿ ಕಳುಹಿಸುವನು ॥ ೫೬ ॥ ಸೀತೆಯು ಸ್ವಯಂವರ ಸಭೆಯಲ್ಲಿ ನೆರೆದ ರಾಜಕುಮಾರರನ್ನು ನೋಡದೆ, ಮನಸ್ಸಿನಲ್ಲಿ ಮೆಚ್ಚದೆ ರಾಮಚಂದ್ರನಿಗೆ ಹೂಮಾಲೆಯನ್ನು ಹಾಕಿ ಸಂತೋಷದಿಂದ ಓಲಾಡುವಳು ॥ ೫೭ ॥ ಕವಿಗಳಲ್ಲಿ ಸೀತೆಯನ್ನು ವರ್ಣನೆ ಮಾಡಬಲ್ಲವರು ಯಾರಿರುವರು! ಇದು ಕೇಳತಕ್ಕವರ ಮಾತಲ್ಲ ರೀತಿಯನ್ನು ಸರಿಯಾಗಿ ತಿಳಿದು ಹೇಳಿದ ಸಂಗತಿಯೂ ಇದಲ್ಲ – ಎಂದು ನೈಮಿತ್ತಿಕನು ದಶರಥನಿಗೆ ತಿಳಿಸಿದನು ॥ ೫೮ ॥ ಜಿನಮತದಲ್ಲಿ ಶೋಭಿಸುವ ಸಮವಸರಣಕ್ಕೆ ನಾನು ಹೋದಾಗ ಅಲ್ಲಿ ಜಿನಮುನಿಯು

---

[1] ಸೀತೆಗಂದಿರದೆ (ಚ) [2] ಸೆಂದೆಂಬೆನೆ (ಕ) [3] ನಿನ್ನ ನಂದನರ ಮತ್ತದರಿಂದ (ಕ) [4] ಮಾಡೆ ಸುಖಿಸುವ (ಕ) [5] ವರವಧುವಹಳು ನಂಬಿದನು (ಗ ಚ) [6] ನೂತನವಲ್ಲನ್ಯ ಸಮಯದ ರಚನೆಯ (ಚ) [7] ನೀತಿ (ಚ) [8] ಪೇಳುವುದಲ್ಲ (ಚ) ೫೮, ೫೯ (ಗ ದಲ್ಲಿಲ್ಲ).

ಜಿನಮತದೊಳಗೊಪ್ಪುವ ಸಮವಶ್ರುತಿ । ಗನುನಯದಿಂ ನಾನು ಪೋಗಿ ॥
ವಿನಮಿ[1]ಪೇಳಿದರದ ನೋಡಿ ಪೇಳಿದೆನೆಂ । ದನುವದಿಸಿದನವನೊಡನೆ ॥ ೫೯ ॥

ಎಂದಿಂತು ಪೇಳಿದ ನೈಮಿತ್ತಕನಿಗಾ । ನಂದದಿಂದಂಗಚಿತ್ತವನು ॥
ಅಂದಿತ್ತವನ ಮನ್ನಿಸಿಯಾ ವಚನವ[2] । ಸಂದೇಹವಿಲ್ಲದೊಪ್ಪಿದನು ॥ ೬೦ ॥

ಯುವತೀಜನಮನಸಿಜರೂಪನಭಿನವ । ದಿವಿಜ ವಿಭವ ಸಂಯುತನು ॥
ರವಿತೇಜ ಜಿನಪದ ಭಕ್ತನುನ್ನತ ಕೀರ್ತಿ[3] । ಭುವನ ಭುಂಭುಕನೊಪ್ಪಿದನು ॥ ೬೧ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೬೨ ॥

ಇದು ಭೂಸುರವಂಶೋದ್ಭವನಭಿನವ ।
ಮದನನಮಲಗುಣ-ಜಿನ-ಪಾದಾಂಬುಜ ।
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ ।
ಮುದದಿಂ ಪೇಳಿದ ರಾಮವಿಜಯದೊಳ ।
ಗೊದವಿ ರಚನೆಯಂ ಪಡೆದತಿಜಸವೆತ್ತುದು ಷಷ್ಠಮಸಂಧಿ ॥ ೬೩ ॥

---

ಹೇಳಿದುದನ್ನೇ ನೋಡಿ, ನಾನೀಗ ಹೇಳಿದೆನು – ಎಂದು ನೈಮಿತ್ತಿಕನು ಹೇಳಿದನು. ॥ ೫೯ ॥ ನೈಮಿತ್ತಕನು ಹೀಗೆ ಹೇಳಲು, ದಶರಥನು ಅವನಿಗೆ ಆಗ ಉಡುಗೊರೆಯನ್ನು ಕೊಟ್ಟು, ಮನ್ನಿಸಿದನು. ಅವನ ಮಾತನ್ನು ನಿಸ್ಸಂದೇಹವಾಗಿ ಒಪ್ಪಿಕೊಂಡನು ॥ ೬೦ ॥ ಸ್ತ್ರೀಜನರಿಗೆ ಮನ್ಮಥಸ್ವರೂಪನೂ, ಹೊಸತಾದ ದಿವ್ಯ ವೈಭವದಿಂದ ಕೂಡಿದವನೂ, ಸೂರ್ಯನಂತೆ ತೇಜಸ್ವಿಯೂ, ಜಿನೇಶ್ವರನ ಪಾದದಲ್ಲಿ ಭಕ್ತಿಯುಳ್ಳವನೂ, ಹೆಚ್ಚಿನ ಕೀರ್ತಿಯುಳ್ಳವನೂ, ಲೋಕದಲ್ಲಿ ಪ್ರತಾಪಿಯೂ, ಆದ ಶ್ರೀರಾಮನು ಶೋಭಿಸುತ್ತಿದ್ದನು ॥ ೬೧ ॥ ಎಲೈ ಚೇಳಿನಿಯೇ, ಈ ದಿವಸ ಮುಂದಿನ ಕಥೆಗಳನ್ನು ತಿಳಿಸುವೆನೆಂದು ಹೇಳಿದಂತೆ ಮುಂದುವರಿಯುತ್ತ ಬಂದು ಇಲ್ಲಿಗೆ ಸಂಧಿ ಸಮಾಪ್ತವಾಯಿತು. ಇನ್ನು ಇಲ್ಲಿಂದ ಮುಂದಿನ ಕಥೆಗಳನ್ನು ಸಂತೋಷದಿಂದ ತಿಳಿಸುವೆನು, ಎಂದು ಶ್ರೇಣಿಕನು ಹೇಳಿದನು ॥ ೬೨ ॥ ಬ್ರಾಹ್ಮಣಕುಲದಲ್ಲಿ ಹುಟ್ಟಿದವನೂ ಹೊಸ ಮನ್ಮಥನೂ ನಿರ್ಮಲಗುಣದಿಂದ ಕೂಡಿದವನೂ ಜಿನಪಾದಕಮಲಕ್ಕೆ ಸೋಕ್ಕಿದ ತುಂಬಿಯಂತಿರುವವನೂ ವಾಗ್ದೇವಿಗೆ ಅತ್ಯುನ್ನತವಾದ ಸ್ವಚ್ಛವಾದ ರತ್ನದ ಕನ್ನಡಿಯಂತಿರುವವನೂ ಪರಿಶುದ್ಧವಾದ ನಡತೆಯುಳ್ಳವನೂ ಸಚಿವನೂ ಆದ ದೇವಪ್ಪನು ಸಂತೋಷದಿಂದ ಭವ್ಯರಿಗೆ ಹೇಳಿದ ರಾಮವಿಜಯ ಕಾವ್ಯದಲ್ಲಿ ಸೇರಿದಂತೆ ವಿರಚಿತವಾಗಿ ಖ್ಯಾತಿಯನ್ನು ತಾಳಿದಂತಹ ಷಷ್ಠಮ ಸಂಧಿಯಿದು. ॥ ೬೩ ॥

---

[1] ಜಿನಮುಖ ಕಮಲದೊಳೊಗೆದ ಶಬ್ದವ ಜಿನ ಮುನಿಗಳು ತೀಡದಜೊಳಗೆ ॥ ಇನಿತ (ಚ) [2] ನೈಮಿತ್ತಕನ ಮಾತ । ತಂದು ಮನಕೆ ವಿಸ್ಮಯ ವಾ । ನಂದದಿ ರಾಮಲಕ್ಷ್ಮಣರನು ಕಳುಹುವ (ಕ) [3] ವಿಭವನತಿ ಚದುರ । ಕವಿಜನ ಮನೋಹರನಾದ ಶ್ರೀರಾಮನು । (ಕ).

# ೬. ಸೀತಾ ಸ್ವಯಂವರ

ಶ್ರೀಮದ್ಭವ್ಯಚಿಂತಾಯಕ ವರಮುಕ್ತಿ । ಕಾಮಿನಿಯರಸಘವಿಜಯ ॥
ಕಾಮಮದಾಪಹರಣ ಮುನಿಸುವ್ರತ । ಸ್ವಾಮಿ ಕೊಡೆನಗೆ ಸನ್ಮತಿಯ[1] ॥ ೧ ॥

ಅರವಿಂದಮುಖಿ ಅರಗಿಳಿನುಡಿ[2] ಪೀನ ಪೀ । ವರಕುಚ ನತಭರಮಧ್ಯೆ ॥
ಅರಸಂಚೆಗಮನೆಯಮೃತವಾಣಿಯರುಣಾ । ಧರದಳೆ ಕೇಳು ಮುಂಗಥೆಯ[3] ॥ ೨ ॥

ಪಲ್ಲವಾಧರೆ[4] ಚೆಲ್ವ ಮುಖ ಮಂದಯಾನೆಯೆ । ಕೊಲ್ಲಿನೋಟದ ಕೋಮಲಾಂಗಿ[4] ॥
ನಿಲ್ಲದೊರವೆ ಲಾಲಿಸು ನೀನಾ[5] ಸವಿ । ವಿಲ್ಲ ವಿಜಯನ ಕಥೆಯನು ॥ ೩ ॥

ಮುಂದಣ ಕಥೆಯಾವುದದಱ ವೃತ್ತಾಂತವ । ಕಂದರ್ಪರೂಪ ಪೇಳೆನಲು[6] ॥
ಮಂದಗಮನೆ ಸೀತೆಯ ಸ್ವಯಂವರ[7] ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೪ ॥

ನೀಱಿ ಕೇಳಾ ನೈಮಿತ್ಯಕನ ವಚನವನು[8] । ಮೀಱಿದುದಿಲ್ಲನ್ಯ ಬುದ್ಧಿ ॥
ತೋಱಿದುದಿಲ್ಲವಾ ನೃಪಗೆ ನಿಶ್ಚಯವೆ ಕಾ । ಲೂಱಲು ಮನವಚನದೊಳು[9] ॥ ೫ ॥

ಕರಸಿದನಾ ರಾಯಭಾರಿಯನೊಯ್ಯನೆ । ಬರಿಸಿದ ತನ್ನ ನಂದನರ ॥
ಇರದೆ ಪೇಳಿದನವರೊಡನೆ ಮುಂದಣ ಕಾರ್ಯ । ದಿರವನಾ ದಶರಥನೃಪತಿ[10] ॥ ೬ ॥

---

ಶ್ರೀಯುತನೂ ಭವ್ಯಜನರ ಚಿಂತನೆಗೆ ಲಭ್ಯನೂ, ಮೋಕ್ಷವೆಂಬ ಸ್ತ್ರೀಯ ಅರಸನೂ ಪಾಪವನ್ನು ಗೆದ್ದವನೂ, ಮನ್ಮಥನ ಮದವನ್ನು ಸೆಳೆದವನೂ, ಆದ ಮುನಿಸುವ್ರತಸ್ವಾಮಿಯೇ ನನಗೆ ಒಳ್ಳೆಯ ಬುದ್ಧಿಯನ್ನು ಕೊಡು. ॥ ೧ ॥ ಶ್ರೇಣಿಕನು ಚೇಳಿನಿಯೊಡನೆ, ಎಲೈ ತಾವರೆಯಂತಹ ಮುಖದವಳೇ, ಅರಸುಗಿಳಿಯಂತಹ ಮಾತಿನವಳೆ, ದಪ್ಪವಾಗಿ ಕೊಬ್ಬಿದ ಮೊಲೆಯವಳೇ, ಬಾಗಿರುವ ಭಾರವಾಗಿರುವ ನಡುವಿನವಳೇ, ರಾಜಹಂಸೆಯಂತೆ ಮೆಲ್ಲನೆ ನಡೆಯುವ ನಡಿಗೆಯವಳೇ, ಅಮೃತದಂತಹ ಮಾತುಳ್ಳವಳೆ, ಕೆಂದುಟಿಯವಳೆ, ಮುಂದಿನ ಕಥೆಯನ್ನು ಕೇಳು ॥ ೨ ॥ ಚಿಗುರಿನಂತಹ ತುಟಿಯ, ಚಂದವಾದ ಮುಖದ, ಮೆಲುನಡೆಯ, ಓರೆನೋಟದ, ಕೋಮಲವಾದ ಅವಯವದವಳೇ, ಆ ಮನ್ಮಥ ವಿಜಯನ ಕಥೆಯನ್ನು ತಡವಿಲ್ಲದೆ ಹೇಳುವೆನು, ನೀನು ಕೇಳು ॥ ೩ ॥ ಓಗೆ ಶ್ರೇಣಿಕನು ಹೇಳಲು ಚೇಳಿನಿಯು "ಎಲೈ ಕಾಮಸ್ವರೂಪನೇ, ಮುಂದಿನ ಕಥೆ ಯಾವುದು? ಅದರ ಸಂಗತಿಯನ್ನೆಲ್ಲಾ ಹೇಳು" ಎಂದಳು ಅದಕ್ಕೆ ಶ್ರೇಣಿಕನು "ಎಲೈ ನೈದಿಲೆಗಣ್ಣವಳೇ, ಸೀತಾಸ್ವಯಂವರನ್ನು ಹೇಳುವೆನು ಕೇಳು" ಎಂದನು. ॥ ೪ ॥ ಎಲೈ ಚೇಳಿನಿಯೇ ಕೇಳು ದಶರಥನು ಆ ನೈಮಿತ್ತಿಕನು ಹೇಳಿದ ಮಾತನ್ನು ಮೀರಲಿಲ್ಲ, ಅವನಿಗೆ ಬೇರೆ ಬುದ್ಧಿಯು ತೋರಲಿಲ್ಲ ಅವನ ಮನಸ್ಸು ನಿಶ್ಚಯವನ್ನು ತಾಳಿತು. ॥ ೫ ॥ ದಶರಥನು ಮೆಲ್ಲನೆ ರಾಯಭಾರಿಯನ್ನು ಕರೆಸಿ, ತನ್ನ ಮಕ್ಕಳನ್ನು ಬರಿಸಿ, ಅವರಿಗೆ ಮುಂದಿನ ಕಾರ್ಯದ ವಿವರವನ್ನು ತಿಳಿಸಿದನು ॥ ೬ ॥ ಆ ಕುಮಾರರಿಬ್ಬರನ್ನೂ ಕರುಣೆಯೆಂಬ ಸಮುದ್ರಕ್ಕೆ ಚಂದ್ರ

---

[1] ಭಕ್ತಿಯನು (ಚ) [2] ಸರಸಿಜವದನೆ ನಿಬಿಡಘನ (ಗ ಚ) [3] ಯರುಣಾಧರೆ ಲಾಲಿಪುದೀ ಕಥೆಯ (ಚ) [4] ಪರಭೃತವಾಣಿ ನವಸಂ । ಫುಲ್ಲ ಸರೋರುಹ ನೇತ್ರೆ (ಗ ಚ) [5] ನಾನೀ (ಗ) ನೀನು (ಚ) [6] ನೀವೆನಗೆ (ಚ) [7] ಒಂದಿನಿಸುಳಿಯದೆ ನಿರವಿಸೆನಲು (ಗ ಚ). [8] ವಚನಗಳ (ಗ ಚ) [9] ದಿಲ್ಲನ್ಯವೆಂದು । ಮಾರಸನ್ನಿಭ ದಶರಥನುತ್ಸಾಹದಿ । ನೀರಜ ಸಖನ ಕಂಡಂತೆ (ಕ) [10] ಪೇಳಿದ ಮುಂದಹ ಕಾರ್ಯಂಗಳ । ತೆರನನಂಬುಜದಳನೇತ್ರೆ (ಕ).

ಆ ಕುವರರ[1] ಮುಂದೆ ಮಂತ್ರಿಯೊಡನೆಯುಂ । ದಾ ಕರುಣಾಬ್ಧಿ ಚಂದ್ರಮನು ॥
ಆಕೆಯಿಲ್ಲದೆ ರಾಜಕಾರ್ಯದ ತೆಱನ ವಿ । ವೇಕಿಸಿದನು ಕೋಕಿಲಾಪೆ[2] ॥ ೭ ॥

ಉಡುಗೊಱೆಗಳನಿತ್ತುಚಿತ ಪಚನಗಳ[3] । ನುಡಿದು ನಮ್ಮೀ ನಂದನರ ॥
ಒಡನೆ ತೆರಳು ನೀನೆನೆ ತೆರಳಿದನಾ । ಪೊಡವಿಪತಿಗೆ ಕೈಯ ಮುಗಿದು ॥ ೮ ॥

ಅತಿಶಯಮತಿಯೆಂಬ ಮಂತ್ರಿಸಹಿತ ತನ್ನ[4] । ಸುತರಿಗೆ ಬುದ್ಧಿಯ ಪೇಳ್ದು[5] ॥
ಅತಿಹಿತನಪ್ಪತಿಬಳನೆಂಬ ಸೇನಾ । ಪತಿಯ ಕರಸಿ ಕಳುಹಿದನು ॥ ೯ ॥

ತಂದೆ ಪೇಳಿದ ಬುದ್ಧಿಯ ಕೇಳ್ದು ಮಾತೆಗೆ[6] । ವಂದಿಸಿ ತಮ್ಮರಮನೆಗೆ[7] ॥
ಬಂದು ಮಿಂದುಂಡುಟ್ಟು ತೊಟ್ಟು ತೆರಳ್ದರಾ । ನಂದದಿಂ[8] ರಾಮಲಕ್ಷ್ಮಣರು ॥ ೧೦ ॥

ಶುಭಲಗ್ನದೊಳು ಪೊಳಲಿಂದ ತೆರಳಿಯುತಿ । ವಿಭವದಿಂ ಲೀಲೆ ಕೈಮಿಗಲು ॥
ಇಭವನಡರಿ ತೆರಳಿದರಾ ಕುವರರಂ[9] । ದಭಿನವ ಮದನ ಸನ್ನಿಭರು ॥ ೧೧ ॥

ತಂಬಟೆ ಡೋಳು ನಿಸ್ಸಾಳ ತಿತ್ತಿರಿ ಚಿನ್ನ । ಚಂಬಕವಱೆ[10] ಡಕ್ಕೆ ದಗಮು[11] ॥
ಕೊಂಬು[12] ಕೊಳಲು ತಪ್ಪಟೆ ಮೃದಂಗದ ರವ[13] । ತುಂಬಿತು ಲೋಕವನಿರದೆ[14] ॥ ೧೨ ॥

ಗುಡಿ ಗೂಡಾರ ಸರಾತಿ[15] ಪೆಟ್ಟಿಗೆ ಬೋನ । ಗುಡಿಕೆ ನೂತನ ವಸ್ತ್ರಗಳ ॥
ತಡಗಗಳಾದಿ ನಾನಾ ಹೊಱೆಕಾಱರ । ಗಡಣವೆಸೆದುದಲ್ಲಲ್ಲಿ[16] ॥ ೧೩ ॥

---

ನಂತಿರುವ ದಶರಥನು ಮಂತ್ರಿಯೊಡಗೂಡಿಸಿ, ಮುಂದಿನ ರಾಜಕಾರ್ಯದ ವಿವರವನ್ನು ತಿಳಿಯಪಡಿಸಿದನು. ॥ ೭ ॥ ದಶರಥನು ಮಂತ್ರಿಗೆ ಉಡುಗೊರೆಗಳನ್ನು ಕೊಟ್ಟು ಯೋಗ್ಯವಾದ ಮಾತುಗಳನ್ನಾಡಿ, ನಮ್ಮ ಈ ಮಕ್ಕಳೊಡನೆ ನೀನೂ ತೆರಳು ಎಂದನು. ಆಗ ಅವನು ರಾಜನಿಗೆ ಕೈಮುಗಿದು ತೆರಳಿದನು. ॥ ೮ ॥ ದಶರಥನು ಅತಿಶಯಮತಿಯೆಂಬ ತನ್ನ ಮಂತ್ರಿಗೂ ತನ್ನ ಮಕ್ಕಳಿಗೂ ಯೋಗ್ಯವಾದ ತಿಳಿವಳಿಕೆಯನ್ನು ಹೇಳಿ, ತನಗೆ ಬಹಳ ಹಿತವಂತನೆನಿಸಿದ ಅತಿಬಳನೆಂಬ ಸೇನಾಪತಿಯನ್ನು ಕರೆಸಿ, ಅವನನ್ನೂ ಜೊತೆಯಲ್ಲಿ ಕಳುಹಿಸಿದನು. ॥ ೯ ॥ ರಾಮಲಕ್ಷ್ಮಣರು ತಮಗೆ ತಂದೆಯು ಹೇಳಿದ ನೀತಿಯನ್ನು ಕೇಳಿ, ತಾಯಿಗೆ ವಂದಿಸಿ ತಮ್ಮ ಅರಮನೆಗೆ ಬಂದರು. ಸ್ನಾನಮಾಡಿ, ಉಡಿಗೆಯನ್ನುಟ್ಟು ತೊಡಿಗೆಗಳನ್ನು ತೊಟ್ಟು ತೆರಳಿದರು. ॥ ೧೦ ॥ ಹೊಸ ಮನ್ಮಥರಂತಿದ್ದ ರಾಮಲಕ್ಷ್ಮಣರು ಶುಭಲಗ್ನದಲ್ಲಿ ಪಟ್ಟಣದಿಂದ ಹೊರಟು, ಬಹಳ ವೈಭವದಿಂದಲೂ ಸಂತೋಷದಿಂದಲೂ ಆನೆಯನ್ನೇರಿ ಪ್ರಯಾಣಮಾಡಿದರು. ॥ ೧೧ ॥ ಆ ಸಂದರ್ಭದಲ್ಲಿ ವಿವಿಧ ವಾದ್ಯಗಳು ಮೊಳಗಿದವು. ತಂಬಟೆ, ಡೋಳು, ನಿಸ್ಸಾಳ, ತಿತ್ತಿರಿ, ಚಿನ್ನದ ಚೆಂಬಕಪರೆ, ಡಕ್ಕೆ, ದಗಮು, ಕೊಂಬು, ಕೊಳಲು, ತಪ್ಪಟೆ, ಮೃದಂಗ ಮುಂತಾದವುಗಳ ಶಬ್ದವು ಲೋಕವನ್ನೆಲ್ಲಾ ವ್ಯಾಪಿಸಿತು. ॥ ೧೨ ॥ ಗುಡಿಗೂಡಾರ, ಪಟಭಿತ್ತಿ,

---

[1] ತಾ ಕರಸಿಯು (ಕ). [2] ತೆಱನನನೇಕ ವಿಧದಿ ಪೇಳುತವೆ (ಗ ಚ.). [3] ಮಡದಿ ಮೋಹನ್ನೆ ಕೇಳಾ ದಶರಥ ಮಂತ್ರಿ (ಕ). [4] ಶತಪತ್ರ-ದಳಲೋಚನೆ ಕೇಳು ತನ್ನಯ (ಕ). [5] ಹೇಳಿ (ಗ) [6] ತಂದೆಗೆ ಕರಗಳ ಮುಗಿದು ತಾಯಂಘ್ರಿಗೆ (ಗ ಚ.) [7] ವಂದಿಸಿ ಯರಮನೆಗವನು (ಗ) .... ರು (ಚ). [8] ಮಜ್ಜನ ಭೋಜನ ಮಾಡಿ ಪೊಱಮಟ್ಟಂದಾ (ಗ ಚ ). [9] ಶುಭಲಗ್ನದಿಂದ ಪೊಳಲ ಪೊಱಮಟ್ಟರು । ಯಿಭ ರಥ ಕುದುರೆ ಕಾಲಾಳು, ವಿಭವದಿಂ ಪರಿಜನ ಪುರಜನ ತೆರಳ್ದರಂ (ಕ). [10] ಚೆಂಬಕವಱೆ (ಗ) [11] ವೀರಣವು (ಕ). [12] ಬೊಂಬುಳಿ (ಕ). [13] ಕಹಳೆಗಳ ರಭಸದಿಂದ (ಗ ಚ.) [14] ಮೂಱೆರದೆ (ಗ). [15] ಸರುತಿ (ಚ). [16] ತಡಗಗಳನು ತೆರಳಿಸಿದ ಸಚಿವನಾ ಪೊಡವಿಪತಿಯ ನೇಮದಿಂದ (ಗ) . . ದೊಳು (ಚ).

ಉಡುಗೊರೆಗಳ[1] ವಸನದ ಸೈಭೋಗದ । ಮಡಿಯ ನಾನಾ [2]ದೊರೆಗಳಿಗೆ ॥
ಕೊಡುವ ಬಂಗಾರದ ಪೆಟ್ಟಿಗೆಗಳ ಬಲು । ಗಡಣ ಸಾಗಿದುದವರೊಡನೆ[3] ॥ ೧೪ ॥

ಜಂಬುಖಾನದ[4]ಗದ್ದುಗೆಯೊಪ್ಪುವ ರತ್ನ । ಕಂಬಲ[5] ಮಲಗುಮಂಚಗಳ ॥
ಇಂಬಪ್ಪ ಹಂಸತುಪ್ಪುಳು ಪಾಸು[6]ಕುವರನ । ಬೆಂಬಳಿಯೊಳು ಕಳುಹಿದನು ॥ ೧೫ ॥

ಹಡಪ ಚವರ ಗಿಂಡಿ ಪಡುಗ[7] ಕಾಳಾಂಜಿ ಕ । ನ್ನಡಿ ಕುಂಚ ಚವರ ಪಾವುಗೆಯ ॥
ಪಿಡಿದವರೂಳಿಗದವರ್ಕೈದಿದರೆಡೆ । ವಿಡದಾ ಕುವರರೊತ್ತಿನೊಳು ॥ ೧೬ ॥

ಇವು ಮೊದಲಾದ ನಾನಾ ಸಮಕಟ್ಟನ । ಕುವರರ[8] ಬೆಂಬಳಿವಿಡಿದು ॥
ತವಕದಿಂ ಸಾಗಿಸಿ ಕಳುಹಿದ ಸಚಿವರೆಂ । ಬವರವನಂತಿರಬೇಕು[9] ॥ ೧೭ ॥

ಆನೆ ಕುದುರೆ ರಥ ಕಾಲಾಳ್ಗಳಿಂದತಿ[10] । ಸೇನೆ ಬಳಸಿ ಬರಲಂದು ॥
ಆ ನಗರವ ಪೊರಮಟ್ಟು ತೆರಳಿದರಂ । ದಾ ನರನಾಥನಂದನರು ॥ ೧೮ ॥

ಊರೂರ ನಂದನವನ ಶಾಲೀವನ[11] । ಊರೂರ ಕೆರೆಕಾಲುವೆಗಳ ॥
ಊರೂರ ಸಿರಿಸಂಪದವ ನೋಡುತೆ ಬಂದ । ರಾ ರಾಜಕುವರರರಲ್ತಿಯೊಳು ॥ ೧೯ ॥

ನಾಡ ನೋಡುತ ತಮ್ಮ ನಾಡ ಮನ್ನೆಯರನು । ಕೂಡಿಕೊಳುತ ಲೀಲೆಯೊಳು ॥
ನಾಡೆ ನಡೆದು ಬರುತಿರಲತ್ತಲಿತ್ತನು । ಮಾಡಿಸಿದನು ಸ್ವಯಂವರವ ॥ ೨೦ ॥

---

ಪೆಟ್ಟಿಗೆ, ಅನ್ನದ ಪಾತ್ರೆ, ಹೊಸ ವಸ್ತ್ರಗಳ ತಟ್ಟೆಗಳು – ಮುಂತಾದವನ್ನು ಹೊತ್ತುಕೊಂಡವರ ಸಮೂಹವು ಆಗ ಅಲ್ಲಲ್ಲಿ ಕಾಣಿಸಿತು ॥ ೧೩ ॥ ಉಡುಗೊರೆ ಬಟ್ಟೆಗಳ ಪೆಟ್ಟಿಗೆಗಳೂ, ದೇಹಸುಖವನ್ನೀವ ಮಡಿಬಟ್ಟೆಗಳ ಪೆಟ್ಟಿಗೆಗಳೂ, ಬೇರೆಬೇರೆ ರಾಜರಿಗೆ ಕೊಡಲು ಯೋಗ್ಯವಾದ ಚಿನ್ನದಿಂದ ಕೂಡಿದ ಪೆಟ್ಟಿಗೆಗಳೂ ಸಾಮೂಹಿಕವಾಗಿ ಅವರೊಡನೆ ತೆರಳಿದವು ॥ ೧೪ ॥ ದಶರಥನು ತನ್ನ ಕುಮಾರನ ಬೆಂಬಳಿಯಾಗಿ ಜಮಖಾನದ ಪೀಠವನ್ನೂ, ಶೋಭಿಸುವ ರತ್ನಗಂಬಳಿಯನ್ನೂ ಮಲಗುಮಂಚಗಳನ್ನೂ, ಹಂಸದ ತುಪ್ಪುಳಿನ ಹಾಸಿಗೆಯನ್ನೂ ಕಳುಹಿಸಿದನು ॥ ೧೫ ॥ ಆ ಕುಮಾರರೊಡನೆ ಎಲೆಸಂಚಿ, ಚಾಮರ, ಗಿಂಡಿ, ತಟ್ಟೆ, ಪನ್ನೀರುಕುಪ್ಪಿ, ಕನ್ನಡಿ, ಕುಂಚ, ಪಾದುಕೆ – ಮುಂತಾದುವನ್ನು ಹಿಡಿದಿರುವ ಸೇವಕರು ತೆರಳಿದರು ॥ ೧೬ ॥ ಇವೇ ಮೊದಲಾದ ಹಲತೆರದ ವ್ಯವಸ್ಥೆಯನ್ನು ಆ ರಾಜಕುಮಾರರ ಬೆಂಬಳಿಯಾಗಿ ಮಂತ್ರಿಯು ಕಳುಹಿದನು ಮಂತ್ರಿಗಳು ಅವನ ಮಾದರಿಯಲ್ಲಿ ಇರುವುದು ಯೋಗ್ಯವು ॥ ೧೭ ॥ ಆನೆ, ಕುದುರೆ, ತೇರು, ಕಾಲಾಳುಗಳೆಂಬ ಚತುರಂಗಸೈನ್ಯವು ಸುತ್ತುವರಿದು ಬರುತ್ತಿರಲು, ಆ ರಾಜಕುಮಾರರು ನಗರದಿಂದ ಹೊರಟು ತೆರಳಿದರು ॥ ೧೮ ॥ ಆ ರಾಜಕುಮಾರರು ಊರೂರುಗಳಲ್ಲಿ ಇರುವ ಉದ್ಯಾನಗಳನ್ನೂ, ಬತ್ತದ ಗದ್ದೆಗಳನ್ನೂ ಕೆರೆಗಳನ್ನೂ, ಕಾಲುವೆಗಳನ್ನೂ, ಶೋಭೆ ವೈಭವಗಳನ್ನೂ ಪ್ರೀತಿಯಿಂದ ನೋಡುತ್ತ ಬಂದರು ॥ ೧೯ ॥ ಶ್ರೀರಾಮ ಲಕ್ಷ್ಮಣರು ನಾಡನ್ನು ನೋಡುತ್ತಲೂ, ತಮ್ಮ ನಾಡಿನಲ್ಲಿರುವ ಜನನಾಯಕರನ್ನು ಸಂತೋಷದಿಂದ ಒಡಗೂಡುತ್ತಲೂ ವಿಶೇಷವಾಗಿ ನಡೆದು ಬರುತ್ತಿದ್ದರು. ಹೀಗಿರುವಾಗ ಇತ್ತ ಮಿಥಿಳೆಯಲ್ಲಿ ಸ್ವಯಂವರದ ಏರ್ಪಾಡುಗಳಾದವು ॥ ೨೦ ॥

---

[1] ಮಡಿವರ್ಗಗಳ (ಕ) [2] ನಾಡೊರೆ (ಕ) [3] ಪೆಟ್ಟಿಗೆಗಳನವರೊಡನೆ ಕಳುಹಿದನಾ ಮಂತ್ರಿ (ಗ ಚ) [4] ಜಂಬುಕಾನದ (ಚ) [5] ಗಂಬಳಿ (ಕ ಗ) [6] ತುಪ್ಪುಳುವಾಸ (ಚ) [7] ಪಡಿಗ (ಗ) [8] ಕುವರನ (ಕ ಗ). [9] ಬೇಡಾ (ಗ) ವೇಡ (ಚ). [10] ಕಾಲಾಳ್ಗಳಿಂತೀ (ಚ). [11] ಶಾಲಿವನಗಳು (ಚ)

ಆ ಮಂತ್ರಿಗಳ ಶಿರೋಮಣಿ ರಚಿಸಿದನಂ । ದಾ ಮಂಟಪವ ರಚನೆಯೊಳು ॥
ಆ ಮಹೀಪತಿ ಪೇಳ್ದುದಕೆ ನೂರ್ಮಡಿಯಾಗಿ । ತಾಮಸವಿಲ್ಲದಂದಿಂತು[1] ॥ ೨೧ ॥

ಕಡುರಂಗುವಡೆದ ವಜ್ರದ ಬಲುಗಂಬದಿಂ । ದೊಡನೆ ರಾಜಿಸುವ ಮಾಣಿಕದ ॥
ಗಡಿಗೆ ಬೋದಿಗೆ[2] ಕಂಟು[3] ಕಪೋತದಿಂದೊಂದು । ಬೆಡಗಾದುದೇನ ಬಣ್ಣಿಪೆನು ॥ ೨೨ ॥

ಬಲು ಪುಷ್ಯರಾಗದ ತೊಲೆ ವೈಢೂರ್ಯದ । ಹಲಗೆಯಿಂ ಹರಿನೀಲಗಳ ॥
ನೆಲಗಟ್ಟಿನಿಂದ ಸ್ವಯಂವರ ಕಣ್ಗತಿ । ಚೆಲುವಾದುದು ಚೆಂದುಟಿಯಳೆ ॥ ೨೩ ॥

ರಂಗು ಮಿಗುವ[4] ಪವಳದ ಸೋಪಾನದಿಂ । ಕೆಂಗಲ್ಲ ಮತ್ತವಾರಣದಿಂ ॥
ಕಂಗೊಳಿಸುವ ಪಚ್ಚೆಯ ಲೋವೆಯಿಂದದು । ಸಿಂಗರವಡೆದುದೇನೆಂಬೆ ॥ ೨೪ ॥

ಮುತ್ತಿನ ಪವಳದ ಲಂಬಣಗಳ ಬಲು । ಮೊತ್ತದಿಂ ಪಟ್ಟೆಜಲ್ಲಿಗಳ ॥
ಸುತ್ತ ಕಟ್ಟಿದ ಕುಚ್ಚುಗಳ ಮೋಹರದಿಂ । ದಿತ್ತುದು ಕಣ್ಗೆ ಕೌತುಕವ ॥ ೨೫ ॥

ಪೊಸ ನೀಲದ ನೆಲಗಟ್ಟ ನಿಟ್ಟಿಸಿ ಮೃಗ । ವಿಸರ ನೀರೆಂದು ಬಂದವಕೆ[5]
ಮುಸುಡಿಟ್ಟು ನಾಣ್ಚಿ ಕನಲಿ ಪೋಪವೆನಲದ । ಱೆಸಕವನೇನ ಬಣ್ಣಿಪೆನು ॥ ೨೬ ॥

ಮಿಱುಗುವ ಪಚ್ಚೆಯ ಲೋವೆಯ ಕಂಡ । ಕ್ಕಱು ಮಿಗೆ ಮಿಗವಿಂಡು ಬಂದು ॥
ಗಱಿಕೆಹುಲ್ಲೆಂದು ತಾ[6] ಕರ್ಚಿ ಬಿಸುಟು ಮನ । ಮಱುಗುತ ಪೋಪವಬ್ಜಾಕ್ಷಿ ॥ ೨೭ ॥

---

ಜನಕರಾಜನು ಹೇಳಿದುದಕ್ಕೆ ನೂರ್ಮಡಿ ಮಿಗಿಲೆನಿಸುವ ರಚನೆಯಿಂದ ಆತನ ಪ್ರಧಾನಮಂತ್ರಿಯು ಒಡನೆಯೇ ಸ್ವಯಂವರ ಮಂಟಪವನ್ನು ಮಾಡಿಸಿದನು. ಅದು ಈ ರೀತಿಯಿತ್ತು ॥ ೨೧ ॥ ವಿಶೇಷವಾಗಿ ಬಣ್ಣಗಳಿಂದ ಹೊಳೆಯುವ ವಜ್ರದ ಕಂಬದಿಂದಲೂ, ಶೋಭಾಯಮಾನವಾದ ಮಾಣಿಕ್ಯದ ಗಡಿಗೆ–ಬೋದಿಗೆ–ಮುಂತಾದವುಗಳಿಂದಲೂ, ಆ ಸ್ವಯಂವರ ಮಂಟಪವು ಚೆಲುವಾಗಿ ಕಾಣುತ್ತಿತ್ತು–ಅದನ್ನು ಏನೆಂದು ವರ್ಣಿಸಲಿ! ॥ ೨೨ ॥ ಎಲೈ ಕೆಂಪುತುಟಿಯ ಚೇಳಿನಿಯೆ, ಆ ಸ್ವಯಂವರಮಂಟಪವು ಪುಷ್ಯರಾಗದ ತೊಲೆಗಳಿಂದಲೂ, ವೈಡೂರ್ಯದ ಹಲಗೆಯಿಂದಲೂ, ನೀಲರತ್ನದ ನೆಲಗಟ್ಟಿನಿಂದಲೂ ಕಣ್ಣಿಗೆ ಸೊಗಸಾಗಿ ತೋರುತ್ತಿತ್ತು ॥ ೨೩ ॥ ಬಣ್ಣ ಹೊಳೆಯುತ್ತಿರುವ ಹವಳದ ಮೆಟ್ಟಿಲುಗಳಿಂದಲೂ, ಕೆಂಪುಕಲ್ಲಿನ ಎದುರುಗಲಿಯಿಂದಲೂ, ಶೋಭಿಸುವ ಪಚ್ಚೆರತ್ನದ ಇಳಿಜಾರು ಮಾಡಿನಿಂದಲೂ. ಆ ಮಂಟಪವು ಶೃಂಗಾರವಾಗಿ ಕಾಣಿಸಿತು –ಅದನ್ನು ಏನೆನ್ನಲಿ! ॥ ೨೪ ॥ ಮುತ್ತು ಹವಳಗಳ ಗೊಂಚಲ ಸಮೂಹದಿಂದಲೂ, ಪಟ್ಟೆಜಲ್ಲಿಗಳ ಸುತ್ತಲೂ ಕಟ್ಟಿದ ಕುಚ್ಚುಗಳ ಸಮೂಹದಿಂದಲೂ ಅದು ಕಣ್ಣಿಗೆ ಆಶ್ಚರ್ಯವನ್ನು ಉಂಟುಮಾಡಿತು ॥ ೨೫ ॥ ಹೊಸತಾದ ನೀಲರತ್ನದ ನೆಲಗಟ್ಟನ್ನು ಮೃಗಗಳು ನೋಡಿ, ಅದನ್ನು ನೀರೆಂದು ಭ್ರಮಿಸಿ, ಅಲ್ಲಿ ಮುಸುಡನ್ನಿಟ್ಟು ನಾಚಿಕೆಪಟ್ಟು, ಸಿಟ್ಟಾಗಿ ಹೋಗುವವು. ಹೀಗೆನ್ನುವಾಗ ಆ ಮಂಟಪದ ರಚನೆಯನ್ನು ಏನೆಂದು ವರ್ಣಿಸುವೆನು? ॥ ೨೬ ॥ ಹೊಳೆಯುವ ಪಚ್ಚೆರತ್ನದ ಮಾಡಿನ ಇಳಿಜಾರು ಭಾಗವನ್ನು ಮೃಗಗಳು ಕಂಡು ಹೆಚ್ಚಾದ ಪ್ರೀತಿ ತಾಳಿ, ಇದು ಗರಿಕೆಯ ಹುಲ್ಲೆಂದು ಕಚ್ಚಿ ಬಿನಾಡಿ, ಮನಸ್ಸಿನಲ್ಲಿ ವ್ಯಸನಪಡುತ್ತ ತೆರಳುವವು ॥ ೨೭ ॥ ಚಕೋರಪಕ್ಷಿಗಳು ಅಲ್ಲಿನ ಮುತ್ತಿನ ಗೊಂಚಲುಗಳನ್ನು ಬೆಳ್ದಿಂಗಳ ಬಿತ್ತುಗಳೆಂದು

---

[1] ದಂತಿಂತು (ಗ)　[2] ಗಡಗೆ ಬೋದಗೆ (ಗ ಚ).　[3] ಕಟ್ಟು (ಗ).　[4] ಮಿನುಗುವ (ಚ)　[5] ಬಂದದಕೆ (ಚ).　[6] ಹುಲ್ಲೆಂದದಕೆ (ಗ ಚ.).

ಮುತ್ತಿನ ಲಂಬಣಗಳ ಬೆಳುದಿಂಗಳ । ಬಿತ್ತೆಂದು ಬಗೆದು ಚಕೋರಿ ॥
ಒತ್ತಿಗೆ ಸೇರಿ[1] ಕದುಕಿನೋಡಿಯಲ್ಲವೆ । ನುತ್ತವು ನೊಂದು ಪೋಗುವವು ॥ ೨೮ ॥

ಮುಡಿವಾಳದ ನಿಡುಝಲ್ಲಿಗಳನು ಕಟ್ಟಿ । ಲೊಡನೊಪ್ಪಿದುದಾಗಸವ ॥
ಒಡೆದವನಿಗೆ ಬಪ್ಪ ಸುರತರುವಿನ ಬೇರ । ಗಡಣವಿದೆಂಬಂದದೊಳು ॥ ೨೯ ॥

ಲಲನೆ ಕೇಳೈವತ್ತಾಱು ದೇಶದ ಭೂ । ಲಲನೇಶರಿಗೆ ಮಾಡಿಸಿದ ॥
ವಿಲಸಿತವಪ್ಪ ಚೌಪಳಿಗೆಗಳಂದು ಹೊಂ । ಗೆಲಸದೊಳಗೆ ರಾಜಿಸಿದವು[2] ॥ ೩೦ ॥

ರಸವರ್ಣದಿಂದ ಪೋಷಿಸಿ ಕಣ್ಗಳಿಗೆ ಸಂ । ತಸವೀವ ಭಾವಚಿತ್ರಗಳ ॥
ವಿಸರದಿಂದೆಂತ್ರದ ಬೊಂಬೆಗಳಿಂದ ರಾ । ಜಿಸಿತು ಸ್ವಯಂವರ ಕಣ್ಗೆ ॥ ೩೧ ॥

ಮುಗಿಲ ಮುಟ್ಟುವ ವೈಜಯಂತಿಗಳಿಂ ನವ । ದುಗುಲದ ನೇಜಯುದಿಂದ[3] ॥
ಸೊಗಯಿಪ ಸಿಂದಂಗಳಿಂದ ಸ್ವಯಂವರ । ಮಿಗೆ ರಂಜಿಸಿದುದೇನೆಂಬೆ ॥ ೩೨ ॥

ಬೆರಕೆಯುರಲ ಮಾಲೆಯ ಕಟ್ಟಿ ಕಟ್ಟಲು । ಪಿರಿದೊಪ್ಪಿದುದೆಂತೆನಲು ॥
ಪರಿಮಲದಿಂದ ಸ್ವಯಂವರವನು ಸರ । ಸಿರುಹಜ ರಚಿಸಿದಂದದೊಳು ॥ ೩೩ ॥

ಇನೆಯಳೆ[4] ಕೇಳು ಸ್ವಯಂವರ ಮಂಟಪ । ವನು ಪನಿನೀರ ಚಳೆಯುದಿಂ[5] ॥
ಮಿನುಗುವ ಮುತ್ತಿನ ರಂಗವಲಿಗಳಿಂ[6] ॥ ದನುಗೊಳಿಸಿದರೇನನೆಂಬೆ ॥ ೩೪ ॥

ಪಸುದೋರ್ಣರಣಗಳ ಮಕರತೋರಣಗಳ । ಮಿಸುಪ ಕಂಚಿನ ತೋರಣಗಳ ॥
ವಿಸರವೆಸೆಯಲಂದೆಸೆದುದಾ ಮಂಟಪ । ಪೊಸ ಗಾಡಿವೆತ್ತು ಕಣ್ಗಳಿಗೆ ॥ ೩೫ ॥

---

ಭಾವಿಸಿ ಹತ್ತಿರ ಬಂದು, ಕೊಕ್ಕಿನಿಂದ ಕುಟುಕಿ, ಬೆಳ್ದಿಂಗಳಲ್ಲವೆಂದುಕೊಂಡು, ನೊಂದು ತೆರಳುವವು ॥ ೨೮ ॥ ಮುಡಿವಾಳದ ಬೇರುಗಳನ್ನು ಉದ್ದವಾಗಿ ತೂಗಾಡುವಂತೆ ಕಟ್ಟಿರಲು, ಅವು ಆಕಾಶವನ್ನು ಸೀಳಿ ಭೂಮಿಗೆ ಬರುತ್ತಿರುವ ಕಲ್ಪವೃಕ್ಷದ ಬೇರುಗಳ ಸಮೂಹವೆಂಬಂತೆ ಕಾಣಿಸಿದವು ॥ ೨೯ ॥ ಎಲೈ ಚೇಳಿನಿಯೇ ಕೇಳು ಐವತ್ತಾರು ದೇಶಗಳ ರಾಜರಿಗೋಸ್ಕರವಾಗಿ ಮಾಡಿಸಿದ ಶೋಭಾಯಮಾನವಾದ ಕೊರಡಿಗಳು ಚಿನ್ನದ ರಚನೆಯಿಂದ ರಂಜಿಸುತ್ತಿದ್ದವು. ॥ ೩೦ ॥ ರಸವರ್ಣದಿಂದ ಸೊಬಗುಗೊಂಡು ನೇತ್ರಾನಂದವನ್ನು ಕೊಡುವ ಭಾವಚಿತ್ರಗಳ ಸಮೂಹದಿಂದಲೂ, ಯಂತ್ರದ ಗೊಂಬೆಗಳಿಂದಲೂ ಸ್ವಯಂವರವು ಕಣ್ಣಿಗೆ ರಮಣೀಯವೆನಿಸಿತು ॥ ೩೧ ॥ ಮುಗಿಲನ್ನು ಮುಟ್ಟುವ ಪತಾಕೆಗಳಿಂದಲೂ. ಹೊಸ ಪಟ್ಟೆವಸ್ತ್ರಗಳ ಚೂಪುಭಾಗಗಳಿಂದ ಚೆಲುವಾಗಿ ತೋರುವ ಪತಾಕೆ ವಸ್ತ್ರಗಳಿಂದಲೂ, ಸ್ವಯಂವರವು ವಿಶೇಷವಾಗಿ ಶೋಭಿಸಿತು ॥ ೩೨ ॥ ಬೆರಕೆ ಹೂಗಳ ಮಾಲೆಯನ್ನು ಕಟ್ಟಿ, ಅಲ್ಲಿ ಕಟ್ಟಿದ್ದರು ಅದು ಬ್ರಹ್ಮದೇವನು ಪರಿಮಳದಿಂದಲೇ ಸ್ವಯಂವರ ಮಂಟಪವನ್ನು ನಿರ್ಮಿಸಿದಂತೆ ವಿಶೇಷವಾಗಿ ಒಪ್ಪುತ್ತಿತ್ತು ॥ ೩೩ ॥ ಎಲೈ ಚೇಳಿನಿಯೇ ಕೇಳು ಪನ್ನೀರಿನ ಸೇಚನೆಯಿಂದಲೂ, ಹೊಳೆವ ಮುತ್ತಿನ ರಂಗೋಲೆಗಳಿಂದಲೂ, ಆ ಸ್ವಯಂವರಮಂಟಪವನ್ನು ಸೊಗಸುಗೊಳಿಸಿದ್ದರು ॥ ೩೪ ॥ ಹಸುರು ತೋರಣ, ಮಕರತೋರಣ, ಹೊಳೆವ ಕಂಚಿನ ತೋರಣ ಇವುಗಳ ಸಮೂಹವು ಶೋಭಿಸುತ್ತಿದ್ದು, ಆ

---

[1] ಸಾರಿ (ಗ ಚ) [2] ರಂಜಿಸಿದವು (ಗ ಚ) [3] ನೇಝಯದಿಂದ (ಕ) ನಿಚಯದಿಂದ (ಗ) [4] ಇನಿಯಳೆ (ಗ ಚ) [5] ನಿಚಯದಿ (ಗ) [6] ರಂಗವಲೆಗಳಿಂ (ಗ)

ಸಿರಿಕಂಡ ಸಿರಿಪಚ್ಚೆ[1]ವಳುಕು ಕುಂಕುಮು ಕ । ತ್ತುರಿಯು ಪನ್ನೀರಿಂದಲರೆದು ॥
ಇರಿಸಿದರಂದು ಚಿನ್ನದ ಬೆಳ್ಳಿಯ[2] ಕೊ । ಪ್ಪರಿಗೆಗಳೊಳು ಚಪ್ಪರದೊಳು　　॥ ೩೬ ॥

ತೊಡೆದುಜ್ಜಿ[3] ಪೊರೆಯೊತ್ತಿ ಪರಿಮಳವೆರದೊಡೆ । ದಡಕೆಯು ಗುಡ್ಡೆ ಬೆಳ್ಳೆಲೆಯು ॥
ನಿಡುವೆಂದೆ ಘನಸಾರಚೂರ್ಣದ ರಾಶಿಗ । ಳೊಡನೆಸೆದವು ಚಪ್ಪರದೊಳು　　॥ ೩೭ ॥

ಬಂದ ನೃಪರಿಗುಡುಗೊರೆಗಳನೀಯಬೇ । ಕೆಂದು ಪಟ್ಟೆಯು ಸುರುಳುಗಳ ॥
ಅಂದವಡೆದ ಬಂಗಾರದ ಹೊರೆಗಳ । ತಂದೊಟ್ಟೈಸಿದನಾ[4] ಮಂತ್ರಿ　　॥ ೩೮ ॥

ಲೆಕ್ಕವಿಲ್ಲದೆ ಬಂದರಸುಮಕ್ಕಳಿಗಂದು । ತೆಕ್ಕೆ ತೆಕ್ಕೆಯೊಳು ಬೇಡಿದುದ ॥
ಚೆಕ್ಕನೆ ಕೊಡುವ ಯಂತ್ರದ ಬೊಂಬೆಯುದರೆಂಟು[5] । ದಿಕ್ಕಿನೊಳಗೆ ನಿಲಿಸಿದರು　　॥ ೩೯ ॥

ಬಿಸಿಲಿನಿಂ ಬಂದವರಿಗೆ ಶೀತ[6]ಜಲವನು । ಹಸಿದು ಬಂದವರಿಗೂಟವನು ॥
ಒಸೆದೊಯ್ಯನಿತ್ತುಪಚರಿಪ ಯಂತ್ರದ ಬೊಂಬೆ । ಯೆಸೆದವದರ ಸುತ್ತ ಬಳಸಿ　　॥ ೪೦ ॥

ಆರೇನ ಬೇಡಿದೊಡಿಲ್ಲವೆನ್ನದೆ ಕೈ । ವಾರದೆ ಕೊಡುವ ಬೊಂಬೆಗಳ ॥
ಭೂರಮಣರುಗಳೈದುವ ದಿಕ್ಕು ದಿಕ್ಕಿನ । ದಾರಿಯೊಳಗೆ ನಿಲಿಸಿದರು　　॥ ೪೧ ॥

ಒಱೆಯುಲಾ[7] ಮಂಟಪವನು ನೋಳ್ಪಡೆ ಸಗ್ಗ । ದೆಱೆಯು ನುತಿಪೊಡುರಗೇಂದ್ರ ॥
ಕಱೆಕಂಠ ತಲೆದೂಗುವನೆಂದೆನೆ ಬಾಯಿ । ದೆಱೆದು ನುಡಿವರೋರ್ವರಳವೆ[8]　　॥ ೪೨ ॥

---

ಮಂಟಪವು ಕಣ್ಣಿಗೆ ಹೊಸಸೊಬಗನ್ನು ತಾಳಿ ರಂಜಿಸುತ್ತಿತ್ತು. ॥ ೩೫ ॥ ಶ್ರೀಗಂಧ, ಪಚ್ಚೆಕರ್ಪೂರ, ಕುಂಕುಮ, ಕಸ್ತೂರಿ – ಮುಂತಾದವನ್ನು ಪನ್ನೀರಿನಲ್ಲಿ ಅರೆದು, ಚಿನ್ನದ ಬೆಳ್ಳಿಯ ಕೊಪ್ಪರಿಗೆಗಳಲ್ಲಿ ತುಂಬಿಸಿ, ಚಪ್ಪರದಲ್ಲಿ ಇರಿಸಿದರು. ॥ ೩೬ ॥ ತೊಡೆದಿರುವ ಒಡೆದ ಅಡಕೆಯ ರಾಶಿಯೂ, ಉಜ್ಜಿದಂತಹ ಬಿಳಿಯೆಲೆಗಳ ರಾಶಿಯೂ ಸುವಾಸನೆಯನ್ನು ಬೀರುವ ಕರ್ಪೂರ ಪುಡಿಯ ರಾಶಿಯೂ, ಆ ಚಪ್ಪರದಲ್ಲಿ ಶೋಭಿಸುತ್ತಿದ್ದವು. ॥ ೩೭ ॥ ಸ್ವಯಂವರಕ್ಕೆ ಬಂದ ರಾಜರಿಗೆ ಉಡುಗೊರೆಗಳನ್ನು ಕೊಡಬೇಕೆಂದು ಜನಕರಾಯನ ಮಂತ್ರಿಯು ಪಟ್ಟೆವಸ್ತ್ರಗಳ ಸುರುಳಿಗಳ ಹೊರೆಗಳನ್ನೂ ಚೆಲುವಾದ ಬಂಗಾರದ ಒಡವೆಗಳ ಹೊರೆಗಳನ್ನೂ ತಂದು ಅಲ್ಲಿ ಒಟ್ಟೈಸಿದನು. ॥ ೩೮ ॥ ಆ ಚಪ್ಪರದ ಎಂಟೂ ದಿಕ್ಕುಗಳಲ್ಲಿ ಯಂತ್ರದ ಗೊಂಬೆಗಳನ್ನು ನಿಲಿಸಿದರು. ಅವು ಅಲ್ಲಿಗೆ ಬಂದ ಅಸಂಖ್ಯಾತ ರಾಜಕುಮಾರರು ಕೇಳಿದ ವಸ್ತುಗಳನ್ನು ತಡವಿಲ್ಲದೆ ತೆಗೆತೆಗೆದು ಕೊಡುತ್ತಿದ್ದುವು. ॥ ೩೯ ॥ ಬಿಸಿಲಿನಲ್ಲಿ ಬಳಲಿ ಬಂದವರಿಗೆ ತಂಪಾದ ಪಾನೀಯವನ್ನೂ ಹಸಿದು ಬಂದವರಿಗೆ ಊಟವನ್ನೂ ಪ್ರೀತಿಯಿಂದ ಕೊಟ್ಟು ಮೆಲ್ಲನೆ ಉಪಚರಿಸುವ ಯಂತ್ರದ ಗೊಂಬೆಗಳು ಆ ಚಪ್ಪರದ ಸುತ್ತಲೂ ಇದ್ದುವು. ॥ ೪೦ ॥ ಯಾರು ಏನು ಕೇಳಿದರೂ ಇಲ್ಲವೆಂದು ಹೇಳದೆ, ಪ್ರಶಂಸಾತ್ಮಕವಾಗಿ ಕೊಡುವ ಗೊಂಬೆಗಳನ್ನು ರಾಜರು ಬರುವ ದಿಕ್ಕುದಿಕ್ಕುಗಳ ದಾರಿಗಳಲ್ಲೆಲ್ಲಾ ನಿಲ್ಲಿಸಿದರು. ॥ ೪೧ ॥ ಆ ಸ್ವಯಂವರ ಮಂಟಪವನ್ನು ನೋಡಲು ಸಾವಿರಾರು ಕಣ್ಣುಗಳುಳ್ಳ ದೇವೇಂದ್ರನೂ, ಅದನ್ನು ವರ್ಣಿಸಲು ದ್ವಿಸಹಸ್ರಜಿಹ್ವೆಯ ಆದಿಶೇಷನೂ, ಆ ಶಿವನೂ ತಲೆದೂಗುವರು ಎನ್ನುವಾಗ ಅದನ್ನು ಮಾತಿನಿಂದ ವರ್ಣಿಸಲು ಯಾರಿಗಾದರೂ ಸಾಧ್ಯವಾದೀತೆ? ॥ ೪೨ ॥ ಮಂತ್ರಿಯು ಆ ಮಂಟಪವನ್ನು ಹೀಗೆ ರಚನೆ ಮಾಡಿ, ಜನಕರಾಜನಿಗೆ ಬಂದು ವಿಜ್ಞಾ

---

೩೭. ಈ ಪದ್ಯ ಕ. ದಲ್ಲಿಲ್ಲ　[1] ಸಿರಪಚ್ಚೆ (ಚ).　[2] ರನ್ನದ ಚಿನ್ನದ (ಕ).　[3] ವಡೆದುಜ್ಜಿ (ಚ)　[4] ತಂದೊಟ್ಟೆದನಾ (ಗ)　[5] ಬೊಂಬೆಯ ದರಿಂದು (ಚ).　[6] ಶೈತ್ಯ (ಗ.ಚ.)　[7] ಮೞೆಯೇಕೆ (ಗ).　[8] ನುಡಿಯಲೋರ್ವರಳವೆ (ಗ)　ನುತಿಸಲೋರ್ವರಳವೆ (ಚ)

ಆ ಮಂಟಪವನಿಂತು ರಚಿಸಿ ಜನಕನೃಪ । ಗಾ ಮಂತ್ರಿ ಬಂದು ಬಿನ್ನವಿಸೆ ॥
ಆಮುದವೆತ್ತು ಬಂದಾ ಮಂಟಪವ ನೋಡಿ । ತಾಮಸವಿಲ್ಲದವನಿಗೆ ॥ ೪೩ ॥

ಇತ್ತು[1]ಡುಗೊರೆಯನಲ್ಲಿಗೆ ಬಂದಾ ಭೂ । ಪೋತ್ತಮರುಗಳ ಕಾಣುತವೆ ॥
ಚಿತ್ತದೊಳಗೆ ಮುದವನು ತಳೆದಿರಲಂ । ದಿತ್ತಲಾ ರಾಮಚಂದ್ರಮನು ॥ ೪೪ ॥

ಬಂದು ಸ್ವಯಂವರವನು ಪೊಕ್ಕಾ ನೃಪ । ನಂದನರುಗಳ ಮಧ್ಯದೊಳು ॥
ಅಂದವಡೆದ ರತ್ನವಿಷ್ಟರದೊಳಗವ । ರಂದು ಕುಳ್ಳಿರಲು ಲೀಲೆಯೊಳು ॥ ೪೫ ॥

ಅಲ್ಲಿ ನೆರೆದ ನೃಪರೆಂಬ ಭೂಜದ ಮಧ್ಯ । ದಲ್ಲಿರ್ಪ ಸುರಕುಜದಂತೆ ॥
ಬಲ್ಲಿದ ಬಲಭದ್ರನೆಸೆದನು ನವಚೂತ । ಪಲ್ಲವಾಧರೆ ಪದ್ಮನೇತ್ರೆ ॥ ೪೬ ॥

ಬಂದಿರೆ ಪರಿಣಾಮವೆ ಬಳಲಿದಿರಿ ನೀ । ವೆಂದುಪಚಾರವ ನುಡಿದು[2] ॥
ಬಂದರಸುಗಳನೆಲ್ಲರ ಬೆಸಗೊಂಡನಾ । ನಂದದಿಂ ಜನಕಭೂವರನು ॥ ೪೭ ॥

ಕೊಟ್ಟನು ಭಂಗಾರವ[3] ಬಲು ಸುರುಳಿನ । ಪಟ್ಟೆಯು ಕರಿತುರಂಗಗಳ ॥
ಕೊಟ್ಟನವರ ತರತರವಱಿದವನಂತೆ । ಪುಟ್ಟಲಿಲ್ಲವೆ ಭೂಮಿಪರು[4] ॥ ೪೮ ॥

ಮೊಗೆದು ಮೊಗೆದು ರನ್ನದ ಬಟ್ಟಲೊಳು ಮಗ । ಮಗಿಸುವ ಗಂಧಕಸ್ತೂರಿಯ ॥
ತೆಗೆದು ತೆಗೆದು ಕರ್ಪೂರ ವೀಳೆಯವನು । ಬಗೆಬಗೆಯಱಿದಿತ್ತನವನು[5] ॥ ೪೯ ॥

ಕಾಂತೆ ಕೇಳಾ ಸ್ವಯಂವರಕೆ ನೆರೆದ ಭೂ । ಕಾಂತರೊಳೋರ್ವರುಳಿಯದೆ ॥
ಅಂತರಿಸದೆಯುಡುಗೊಱೆಯಿತ್ತನವನ । ತ್ಯಂತ[6] ಸಂತಸದೊಡಗೂಡಿ ॥ ೫೦ ॥

---

ಪಿಸಿದನು ಆಗ ರಾಜನು ಹರುಷಿತನಾಗಿ ಬಂದು ಆ ಮಂಟಪವನ್ನು ನೋಡಿದನು ॥ ೪೩ ॥ ಜನಕರಾಜನು ತಡವಿಲ್ಲದೆ ಮಂತ್ರಿಗೆ ಉಡುಗೊರೆಗಳನ್ನು ಕೊಟ್ಟನು ಸ್ವಯಂವರಕ್ಕೆ ಬಂದ ಶ್ರೇಷ್ಠ ರಾಜರನ್ನೆಲ್ಲಾ ಕಂಡು ಮನಸ್ಸಿನಲ್ಲಿ ಸಂತೋಷವನ್ನು ತಾಳಿದನು ಇತ್ತ ಶ್ರೀರಾಮನೂ ಅಲ್ಲಿಗೆ ಬಂದನು ॥ ೪೪ ॥ ಶ್ರೀರಾಮಲಕ್ಷ್ಮಣರು ಬಂದು ಸ್ವಯಂವರದ ಚಪ್ಪರವನ್ನು ಪ್ರವೇಶಿಸಿ, ಅಲ್ಲಿ ನೆರೆದ ರಾಜಕುಮಾರರ ನಡುವೆ ಸುಂದರವಾದ ರತ್ನದ ಪೀಠದಲ್ಲಿ ಸಂತೋಷದಿಂದ ಕುಳಿತಿದ್ದರು ॥ ೪೫ ॥ ಎಲೈ ಹೊಸ ಮಾಂದಳಿರಂತಹ ಕೆಳದುಟಿಯ, ತಾವರೆಯಂತಹ ಮುಖದ ಚೆಲುವಿನಿಯೇ, ಶ್ರೀರಾಮನು ಆ ಸಭೆಯಲ್ಲಿ ನೆರೆದ ರಾಜರೆಂಬ ಮರಗಳ ನಡುವೆ ಇರುವ ಕಲ್ಪವೃಕ್ಷದಂತೆ ಶೋಭಾಯಮಾನನಾಗಿ ಕಾಣಿಸಿದನು ॥ ೪೬ ॥ ಜನಕರಾಜನು ಬಳಿಗೆ ಬಂದು—"ಬಂದಿರೇ. ಕ್ಷೇಮವೇ? ನೀವು ಆಯಾಸಗೊಂಡಿದ್ದೀರಿ" ಎಂದು ಉಪಚಾರದ ಮಾತುಗಳನ್ನು ಆಡಿದನು ಬಂದ ರಾಜರೆಲ್ಲರನ್ನೂ ಹೀಗೆ ಸಂತೋಷದಿಂದ ಕೇಳಿದನು ॥ ೪೭ ॥ ಜನಕನು ಅಲ್ಲಿಗೆ ಬಂದವರ ತಾರತಮ್ಯವನ್ನು ತಿಳಿದು, ಬಂಗಾರದ ಒಡವೆಗಳನ್ನೂ, ದೊಡ್ಡದೊಡ್ಡ ಸುರುಳಿಸುತ್ತಿದ ಪಟ್ಟೆವಸ್ತ್ರಗಳನ್ನೂ, ಆನೆ ಕುದುರೆಗಳನ್ನೂ ಕೊಟ್ಟನು ಜನಕನಂತಹ ರಾಜರೇ ಈ ವರೆಗೆ ಜನಿಸಲಿಲ್ಲವೆಂದೆನಿಸಿತು ॥ ೪೮ ॥ ರತ್ನಮಯವಾದ ಬಟ್ಟಲುಗಳಲ್ಲಿ ಸುವಾಸನೆಯ ಗಂಧ—ಕಸ್ತೂರಿಗಳನ್ನು ಮೊಗೆಮೊಗೆದು, ಕರ್ಪೂರ ವೀಳಯಗಳನ್ನು ತೆಗೆತೆಗೆದು, ಬಗೆಬಗೆಯನ್ನು ತಿಳಿದುಕೊಟ್ಟನು ॥ ೪೯ ॥ ಎಲೈ ಚೆಲುವಿನಿಯೇ ಕೇಳು ಜನಕನು ಆ ಸ್ವಯಂವರಕ್ಕೆ ಬಂದು ಸೇರಿದ ರಾಜರಲ್ಲಿ

---

[1] ಇಂತು (ಗ). [2] ಪಾಡಿ (ಗ) [3] ಭಂಡಾರವ (ಗ) [4] ಭೂವರರು (ಗ ಜ) [5] ಬಗೆಯಱಿದಿತ್ತನಂದವನು (ಕ) [6] ಯಿತ್ತವನತ್ಯಂತ (ಗ)

ಇವನ ವಿನಯ ವಿತರಣಗುಣ ಸತ್ಕಾರ । ಕಿವನ ನಿಗರ್ವತೆಗಿವಗೆ ॥
ಅವನಿಯೊಳೆಣೆಯಿಲ್ಲವೆಂದು ನೆರೆದ ನೃಪ । ನಿವಹ ಕೊಂಡಾಡಿದುದವನ ॥ ೫೧ ॥

ಈ ತೆರದೊಳು ಹರುಷದೊಳಂತಾ[1] ನೃಪ । ವ್ರಾತವಿರಲು ಮತ್ತಿತ್ತ ॥
ಮಾತೇನು ಮನಸಿನ ಮಮತೆಯಾತುರದಿಂದ । ಸೀತೆಯಾಳಿಯರ್ಯೈತಂದು ॥ ೫೨ ॥

ಬಂದು ಬಿನ್ನಹವೆಂದು ನೊಸಲಿಗೆ ಕರಗಳ । ತಂದು ಕೇಳಿಲೆ ಪೆಣ್ಗಳರಸಿ[2] ॥
ಬಂದುದಂದಿರದೆ[3] ನಾನಾ ದೇಶದ ನೃಪ । ವೃಂದ ಸ್ವಯಂವರಕೆಂದು ॥ ೫೩ ॥

ಮಾತೇನು ಮಾರನ ಮದದಾನೆ ಕೇಳೀಗ[4] । ಭೂತಳಾಧಿಪರೆಲ್ಲ ನಿನಗೆ ॥
ಸೋತು ಬಂದಿರ್ದಪರೆನೆ ಮುಂಬನಿಗಾಯ್ವ । ಚಾತಕಪಕ್ಷಿಯಂದದೊಳು ॥ ೫೪ ॥

ಎಂದೆಂದು ನಮ್ಮ ದೇಶದ ಕುಱುವಱಿಯದ[5] । ಸಂದ ಮನ್ನೆಯ ಮಂಡಳಿಕರ ॥
ನಂದನರುಗಳೈದಿದರು ಸ್ವಯಂವರಕರ । ವಿಂದದಳಾಕ್ಷಿ ನೋಡೇಳು ॥ ೫೫ ॥

ದಕ್ಷಿಣೋತ್ತರ ಮೊದಲಾದ ದೆಸೆಯ ಮಹೀ । ರಕ್ಷಕರುಗಳ ನಂದನರು ॥
ಲಕ್ಷೋಪಲಕ್ಷ ಬಂದಿರೆ[6] ಸ್ವಯಂವರಕೆ ನಿ । ರೀಕ್ಷಿಸಿ ಪೋಗು[7] ಮೃಗಾಕ್ಷಿ ॥ ೫೬ ॥

ವನಿತೆ ನಿನ್ನಾಸೆಯೆಂದೆಂಬ ಕಲ್ಲಿಗೆ ಬೀ । ಳ್ವ ನಿಮಿಷತತಿಗಳೆಂಬಂತೆ ॥
ಮನುಜೇಶ್ವರರು ಬಂದಿದೆ[8] ನೋಡಿ[9] ಬಾರೇಳು । ಘನಪೀನಕುಚದ ಲತಾಂಗಿ[10] ॥ ೫೭ ॥

ಪುಟ್ಟಿದ ದಿನ ಮೊದಲಾಗಿ ನಮ್ಮೀ ನಾಡ । ಮೆಟ್ಟಿಯಱಿಯದವನಿಪರ[11] ॥
ಪಟ್ಟದ ಸುತರು ಬಂದರು[12] ಸ್ವಯಂವರಕೆ ನೀ । ನಿಟ್ಟಿಪೊಡೇಳು ಮೃಗಾಕ್ಷಿ[13] ॥ ೫೮ ॥

---

ಒಬ್ಬನೂ ಉಳಿಯದಂತೆ ಭೇದಭಾವವಿಲ್ಲದೆ ಸಂತೋಷದಿಂದ ಉಡುಗರೆಗಳನ್ನು ಕೊಟ್ಟನು. ॥ ೫೦ ॥ ಇವನ ವಿನಯಕ್ಕೂ, ದಾನಗುಣಕ್ಕೂ, ಸತ್ಕಾರಕ್ಕೂ, ಗರ್ವಹೀನತೆಗೂ ಇವನಿಗೆ ಲೋಕದಲ್ಲಿ ಯಾರೂ ಎಣೆಯಿಲ್ಲವೆಂದು. ಅಲ್ಲಿ ನೆರೆದ ರಾಜರೆಲ್ಲರೂ ಜನಕನನ್ನು ಹೊಗಳಿದರು. ॥ ೫೧ ॥ ಈ ರೀತಿಯಾಗಿ ರಾಜರ ಸಮೂಹವು ಸಂತೋಷದಿಂದಿರಲು, ಇತ್ತ ಸೀತೆಯ ಸಖಿಯರು ಮನಃಪ್ರೀತಿಯಿಂದಲೂ ಉತ್ಸುಕತೆಯಿಂದಲೂ ಸೀತೆಯ ಬಳಿಗೆ ಬಂದರು. ॥ ೫೨ ॥ ಅವರು ಬಂದು 'ಬಿನ್ನಹ' ಎಂದು ಕೈಗಳನ್ನು ಮುಗಿದು ಹೀಗೆಂದರು–ಎಲೈ ಸ್ತ್ರೀಯರ ಅರಸಿಯೇ ಕೇಳು. ನಿನ್ನ ಸ್ವಯಂವರಕ್ಕೆ ಹಲವಾರು ದೇಶಗಳ ರಾಜರ ಸಮೂಹವೇ ಬಂದಿದೆ. ॥ ೫೩ ॥ ಎಲೈ ಮನ್ಮಥನ ಸೊಕ್ಕಿದ ಆನೆಯೇ ಕೇಳು. ಹೆಚ್ಚಿನ ಮಾತೇಕೆ? ರಾಜರುಗಳೆಲ್ಲರೂ ಮುಂಬನಿಯನ್ನು ಪ್ರತೀಕ್ಷಿಸುವ ಚಾತಕ ಪಕ್ಷಿಗಳಂತೆ ನಿನಗೆ ಸೋತು ಬಂದಿರುತ್ತಾರೆ. ॥ ೫೪ ॥ ಎಲೈ ತಾವರೆಯೆಸಳಂತಹ ಕಣ್ಣಿನ ಸೀತೆಯೇ. ನಮ್ಮ ದೇಶದ ಕುರುಹನ್ನು ಎಂದೆಂದಿಗೂ ತಿಳಿಯದಿರುವ ಪ್ರಸಿದ್ಧರಾದ ಜನನಾಯಕರ ಮತ್ತು ಮಾಂಡಲಿಕರ ಪುತ್ರರು ಬಂದಿರುತ್ತಾರೆ. ನೋಡು, ಏಳು. ॥ ೫೫ ॥ ಎಲೈ ಮೃಗಾಕ್ಷಿ, ನಿನ್ನ ಸ್ವಯಂವರಕ್ಕಾಗಿ ತೆಂಕು–ಬಡಗು ಮುಂತಾದ ದಿಕ್ಕುಗಳಿಂದ ರಾಜಕುಮಾರರು ಲಕ್ಷಗಟ್ಟಲೆಯಲ್ಲಿ ಬಂದಿದ್ದಾರೆ ನೋಡು ॥ ೫೬ ॥ ಎಲೈ ಚೆಲುವೆಯೇ, ನಿನ್ನ ಆಸೆಯೆಂಬ ಚೀಲದೊಳಗೆ (ಬಲೆಯೊಳಗೆ) ಬೀಳುವ ಮೀನುಗಳೋ ಎಂಬಂತೆ, ರಾಜಕುಮಾರರು ಬಂದಿದ್ದಾರೆ ನೋಡಿ ಬಾ, ಏಳು. ॥ ೫೭ ॥ ಎಲೈ

---

[1] ಹರಿಸದೊಳಂದಾ (ಚ). [2] ಕೇಳಿಳಿವೆಣ್ಗಳರಸಿ (ಗ ಚ). [3] ಬಂದುದಿಂದಿರದೆ (ಗ ಚ). [4] ಕೇಳಿದ (ಗ). [5] ಕುಱುಹರಿಯದ (ಗ ಚ) [6] ಬಂದವೆ (ಚ) [7] ನಿರೀಕ್ಷಿಪೊಡೇಳು (ಗ). [8] ಬಂದದೆ (ಗ ಚ.). [9] ಸೋಡು (ಗ) [10] ದಲರಾಂಗಿ (ಕ). [11] ಮೆಟ್ಟಲಱಿಯದವನೀಶ (ಗ). [12] ಬಂದಿದೆ (ಕ). [13] ಬೇಗದೊಳು (ಗ.ಚ.).

ಹೊತ್ತುಹೋಕಲ್ಲ ನಾನಾ ದೇಶದ ಭೂ । ಪೋತ್ತಮರುಗಳ ನಂದನರ ॥
ಮೊತ್ತ ಬಂದಿದೆ[1] ಸ್ವಯಂವರಕೆ ನೋಡೇಳು । ನ್ಮತ್ತ ಮದಾಲಸಗಮನೆ ॥ ೫೯ ॥

ನಿಟ್ಟಿಸಿ ನಿನಗೆ ಸೋಲ್ತರಿಗಂಗಜಾಗ್ನಿಯ । ಪುಟ್ಟಿಸಿ ನೀನು ಸೋಲ್ತರಿಗೆ ॥
ಕಟ್ಟಿ ಮೋಹನ ಸಾಮ್ರಾಜ್ಯಪಟ್ಟವ ಬಾ । ಪಟ್ಟದ ಗಜವೆ ಮನ್ಮಥನ ॥ ೬೦ ॥

ತಳಿರಿಗೆ ತಾವರೆಗೊಳಕೆ ತಂಬೆಲರಿಗೆ । ತಿಳಿಜೊನ್ನಕೆಳೆವಾಳೆಯೆಲೆಗೆ ॥
ತಳುವದೆ ಮೈಯಿಕ್ಕಿಸೇಳು ನಿನಗೆ ಸೋ । ಲ್ತೆಳಸಿ ನೋಡಿದ ರಾಜಸುತರ ॥ ೬೧ ॥

ನೋಡಿ ನೀ ಸೋಲ್ತ ಕುವರನಿಗೆ ಮಾಲೆಯ । ಸೂಡಿ[2] ನಿನಗೆ ಸೋಲ್ತರನು ॥
ಕಾಡುವೆಲರಿಗಂಗಜನೃಪವರಗೀಡು । ಮಾಡಿ ಬಾರೇಳು ಮೃಗಾಕ್ಷಿ ॥ ೬೨ ॥

ಎಂದು ಸಖಿಯರು ಬಿನ್ನವಿಸುತಿರಲು ಮಂತ್ರಿ । ಬಂದಾ ನೃಪನನುಮತದಿಂ ॥
ಇಂದುವದನೆ ಸೀತೆಯನು ಸಿಂಗರಿಸಿ ನೀ । ವೆಂದು ದಾದಿಯರಿಗೊರೆದನು ॥ ೬೩ ॥

ಎಣ್ಣೆಬೆನ್ನೀರಟ್ಟಕಳಿ[3]ಯಿಂದವಳ ಮೆಯ್ಯ । ಬಣ್ಣವೇಳಿಸಿದರೀ ಜಗವ ॥
ಹೆಣ್ಣೀಳಿಪ ಕಾವನಸಿಯ ತೊಳೆದು ಬಲು[4] । ಬಣ್ಣವನೇಳಿಪಂದದೊಳು ॥ ೬೪ ॥

ಅಂಗದಟ್ಟವನಿಕ್ಕಿ ದುಗುಲವುಡಿಸಿ ನಿಡು । ಗಂಗಳಿಗಂಜನವಿಕ್ಕಿ ॥
ಸಿಂಗರಿಸಿದರಾಗ ಸೀತೆಯ ನವದಿ । ವ್ಯಾಂಗವನ[5]ವಳಾಳಿಯರು ॥ ೬೫ ॥

---

ಮೃಗಾಕ್ಷಿ ತಾವು ಹುಟ್ಟಿದಂದಿನಿಂದ ನಮ್ಮ ಈ ನಾಡನ್ನು ಮುಟ್ಟಿಯೂ ತಿಳಿಯದ ರಾಜರ ಹಿರಿಯ ಮಕ್ಕಳು ನಿನ್ನ ಸ್ವಯಂವರಕ್ಕೆ ಬಂದಿದ್ದಾರೆ ಅವರನ್ನು ನೋಡುವುದಕ್ಕಾಗಿ ಏಳು ॥ ೫೮ ॥ ಎಲೈ ಮೆಲುನಡೆಯವಳೇ, ಇದು ಹೊತ್ತುಹೋಕಿನ (ವ್ಯರ್ಥ ಕಾಲಕ್ಷೇಪದ) ಮಾತಲ್ಲ ಸ್ವಯಂವರಕ್ಕೆ ನಾನಾದೇಶಗಳ ಶ್ರೇಷ್ಠ ರಾಜಕುಮಾರರ ವೃಂದವೇ ಬಂದಿದೆ. ನೋಡು ಏಳು ॥ ೫೯ ॥ ಎಲೈ ಮನ್ಮಥನ ಪಟ್ಟದ ಆನೆಯೇ, ನಿನ್ನನ್ನು ನೋಡಿ ಸೋತವರಿಗೆ ಕಾಮಾಗ್ನಿಯನ್ನು ಹುಟ್ಟಿಸಿ, ನೀನು ಸೋತವರಿಗೆ ಮೋಹನವೆಂಬ ಸಾಮ್ರಾಜ್ಯದ ಪಟ್ಟವನ್ನು ಕಟ್ಟು ಬಾ ॥ ೬೦ ॥ ನಿನ್ನಮೇಲೆ ಆಸೆಪಟ್ಟು ನೋಡಿದ ರಾಜಕುಮಾರರು ಚಿಗುರಿಗೂ ಸರೋವರಕ್ಕೂ. ತಂಗಾಳಿಗೂ, ಸ್ವಚ್ಛವಾದ ಬೆಳುದಿಂಗಳಿಗೂ ಎಳತಾದ ಬಾಳೆಯೆಲೆಗೂ ತಡವಿಲ್ಲದೆ ಮೈಯನ್ನು ಅರ್ಪಿಸುವಂತೆ ಮಾಡು. ಏಳು ॥ ೬೧ ॥ ಎಲೈ ಮೃಗಾಕ್ಷಿ, ನೀನು ನೋಡಿ ಯಾವ ರಾಜಕುಮಾರನಿಗೆ ಸೋತೆಯೋ? ಅವನ ಕೊರಲಿಗೆ ವರಣಮಾಲೆಯನ್ನು ಹಾಕು ನಿನಗೆ ಸೋತವರನ್ನು ಬೀಸುವ ಗಾಳಿಗೂ ಕಾಮಚಕ್ರೇಶ್ವರನಿಗೂ ಗುರಿಯಾಗಿಸಿ ಬಾ ಏಳು ॥ ೬೨ ॥ ಹೀಗೆ ಸಖಿಯರು ಸೀತೆಗೆ ವಿಜ್ಞಾಪಿಸುತ್ತಿದ್ದರು. ಆಗ ಮಂತ್ರಿಯು ಜನಕರಾಜನ ನಿರೂಪಣೆಯಂತೆ ಅಲ್ಲಿಗೆ ಬಂದು ಚಂದ್ರಮುಖಿಯಾದ ಸೀತಯನ್ನು ಶೃಂಗಾರಮಾಡಲು ದಾದಿಯರಿಗೆ ಹೇಳಿದನು. ॥ ೬೩ ॥ ಈ ಲೋಕದ ಜನರನ್ನೆಲ್ಲಾ ಸ್ತ್ರೀಮೋಹಕ್ಕೊಳಗಾಗಿಸುವ ಮನ್ಮಥನ ಖಡ್ಗವನ್ನು ತೊಳೆದು ಅದರ ಬಣ್ಣವನ್ನು ಹೆಚ್ಚಿಸುವ ರೀತಿಯಲ್ಲಿ, ಆ ದಾದಿಯರು ಎಣ್ಣೆ, ಬಿಸಿನೀರು. ಕಷಾಯನೀರುಗಳಿಂದ ಸೀತೆಯನ್ನು ಮೀಯಿಸಿ ಅವಳ ಮೈಯ ಬಣ್ಣವನ್ನು ಹೆಚ್ಚಿಸಿದರು ॥ ೬೪ ॥ ಆ ಸಖಿಯರು ಸೀತೆಗೆ ಒಳಲಂಗವನ್ನು ಹಾಕಿ ಪಟ್ಟೆಸೀರೆಯನ್ನು ಉಡಿಸಿದರು ನೀಳವಾದ ಕಣ್ಣುಗಳಿಗೆ ಕಾಡಿಗೆಯನ್ನು ಇಕ್ಕಿ. ಆಕೆಯ ದಿವ್ಯವಾದ ದೇಹವನ್ನು ಶೃಂಗರಿಸಿದರು. ॥ ೬೫ ॥ ಸೀತೆಯ ಗೆಳತಿಯರು ಆಕೆಯ ತಲೆಕೂದಲನ್ನು

---

[1] ಬಂದವದೆ (ಚ) [2] ಸೂಡು (ಗ) [3] ರಟ್ಟಿಕಳಿ (ಗ) [4] ಮೈ (ಗ) [5] ಸಿಂಗರಿಸಿದರೊಯ್ಯನೆ ಸೀತೆಯ ದಿವ್ಯಾಂಗವ (ಗ ಚ)

ಅಳಕಾಳಿಯನಾಱಿಸಿ ಕತ್ತುರಿವುಡಿ । ದಳಿದು ಕಚವನನುಗೊಳಿಸಿ ॥
ಕೆಳದಿಯರಂದೊಯ್ಯನೆ ನಾನಾ ಪರಿ । ಮಳದರಲುಗಳ ಸೂಡಿದರು ॥ ೬೬ ॥

ಮುಡಿಗೆ ಮುಡಿಸಿದ ಮಲ್ಲಿಗೆಯ ಪೂಗಳು ಕಣ್ಗೆ । ಕಡುಸೊಗಸಿದವೆಂತೆನಲು[1] ॥
ಕಡಗುರ್ವು[2] ವಡೆದ ಕಾರ್ಮುಗಿಲೆಡೆಯೊಳಗಿ । ರ್ಪುಡುಗಣವೆಂಬಂದದೊಳು ॥ ೬೭ ॥

ರಾಜವದನೆಯ ಮುಡಿಯ ಮೇಗಣ[3]ರತ್ನ । ರಾಜಿಸಿದುದು ಫಣಿತತಿಯ ॥
ರಾಜನ ಪೆಡೆಯಗ್ರದೊಳಿರ್ಪ ಮಾಣಿಕ । ದೋಜೆಯನನುಗೊಳಿಸಿದುದು[4] ॥ ೬೮ ॥

ನೊಗಸಸಿಯನು ಮುಡಿ[5]ರಾಹುವೇಳ್ತಂದುಗಿ । ಬಗಿ ಮಾಳ್ಪುದೆಂದು ಚಿತ್ತಜನು ॥
ಬಿಗಿದೆಳದೊಳು[6] ಬೆಳ್ಳಿಯ ಗುಂಡ ಬಿಟ್ಟಂತೆ । ಸೊಗಸಿದವವಳ ಜೂಳಯವು ॥ ೬೯ ॥

ಬಟ್ಟ ಜವ್ವನೆಯರು ಕಟ್ಟಾಣಿಯ ಮುತ್ತ । ಕಟ್ಟಲವಳ ನುಣ್ಗೊರಲು ॥
ನಿಟ್ಟಸುವರಿಗೆಸೆದುದು ಮೌಕ್ತಿಕದೊಡ । ವುಟ್ಟದ[7] ಶಂಖವೆಂಬಂತೆ ॥ ೭೦ ॥

ಕಡಗ ಕಂಕಣ ನೇವುರ ತೋಳಬಳೆ ಬಂದಿ । ಯುಡಿದಾರ[8] ತಾತಿ ರಾಜಿಸುವ ॥
ಉಡೆವಣಿ ತೋರಹಾರಗಳು[9] ಮೆಱೆಯಲಾ । ಮಡದಿ ಕಣ್ಗೆಡ್ಡವಾಗಿಹಳು ॥ ೭೧ ॥

ಪದಕ ಕೊರಲ ಪಂಚಸರ ನಾನಾ ರತ್ನ । ಪುದಿದ ನಡುವಿನ ಚಿಂತಾಕು ॥
ಮದವನೇಳಿಪ ಮಣಿಹಾರ ತಿಸರವಾ । ಸುದತಿಯೊಳೊಂದಿ ಮೆಱೆದವು ॥ ೭೨ ॥

---

ಆರಿಸಿ, ಕಸ್ತೂರಿಯ ಪುಡಿಯನ್ನು ಸಿಂಪಿಸಿ. ಕೂದಲನ್ನು ಯೋಗ್ಯರೀತಿಯಲ್ಲಿ ಬಾಚಿ ಕಟ್ಟಿದರು. ಆ ಮೇಲೆ ಹಲವು ವಿಧವಾದ ಸುವಾಸನೆಯ ಹೂಗಳನ್ನು ಮೆಲ್ಲಗೆ ಮುಡಿಸಿದರು. ॥ ೬೬ ॥ ಬಹಳ ಭೀಕರವಾಗಿ ಕಾಣಿಸುವ ಕರಿಮುಗಿಲಿನ ಎಡೆಯಲ್ಲಿರುವ ನಕ್ಷತ್ರಗಳ ಸಮೂಹವೋ ಎಂಬಂತೆ. ಸೀತೆಯ ತಲೆಮುಡಿಗೆ ಮುಡಿಸಿದ ಮಲ್ಲಿಗೆ ಹೂಗಳು ಕಣ್ಣಿಗೆ ಚೆಲುವಾಗಿ ಕಾಣಿಸಿದವು. ॥ ೬೭ ॥ ಚಂದ್ರಮುಖಿಯಾದ ಸೀತೆಯ ಮುಡಿಯ ಮೇಲುಗಡೆ ರತ್ನವನ್ನು ತೊಡಿಸಿದರು. ಆ ರತ್ನವು ಆದಿಶೇಷನ ಹೆಡೆಯ ತುದಿಯಲ್ಲಿರುವ ಮಾಣಿಕ್ಯದಂತೆ ತೋರುತ್ತಿತ್ತು. ॥ ೬೮ ॥ ಸೀತೆಯ ಹಣೆಯಲ್ಲಿ ಬಿಳಿಯ ನೇರಬೊಟ್ಟು (ತಿಂಗಳಿಗೆ) ನೊಗಸಾಗಿ ಕಾಣುತ್ತಿತ್ತು. ಅದು ಮುಖವೆಂಬ ಚಂದ್ರನನ್ನು ಮುಡಿಯೆಂಬ ರಾಹುವು ಸೀಳಿಬಿಡಬಹುದೆಂದು ಭಾವಿಸಿ ಮನ್ಮಥನು ಬೆಳ್ಳಿಯ ಗುಂಡನ್ನು ಬಿಗಿದು ಎಳೆದುಬಿಟ್ಟಂತೆ ತೋರುತ್ತಿತ್ತು. ॥ ೬೯ ॥ ನವತಾರುಣ್ಯದ ಆ ಗೆಳತಿಯರು ಸೀತೆಯ ಕೊರಲಿಗೆ ಸ್ವಚ್ಛವಾದ ಮುತ್ತಿನ ಮಾಲೆಯನ್ನು ತೊಡಿಸಿದರು. ಆಗ ಆಕೆಯ ಕೊರಲು ಮುತ್ತಿನೊಡನೆ ಹುಟ್ಟಿದ ಶಂಖದಂತೆ ಶೋಭಾಯಮಾನವಾಗಿ ಕಾಣಿಸಿತು. ॥ ೭೦ ॥ ಸೀತೆಯು ಕಡಗ. ಕಂಕಣ. ಕಾಲ ಸರಿಗೆ, ತೋಳ ಬಳೆ, ಬಂದಿ, ಉಡಿದಾರ, ತಾತಿ, ಸೊಂಟದ ರತ್ನ ದಪ್ಪವಾದ ಸರಗಳು – ಮುಂತಾದವುಗಳಿಂದ ಮನೋಹರವಾಗಿ ಕಾಣಿಸಿದಳು. ॥ ೭೧ ॥ ಪದಕ, ಕೊರಲಿನ ಪಂಚಸರ, ಹಲವಾರು ರತ್ನಗಳಿಂದ ವ್ಯಾಪ್ತವಾದ ನಡುವಿನ ಚಿಂತಾಕು, ಮದವನ್ನು ಹೆಚ್ಚುಮಾಡುವ ರತ್ನಹಾರ, ತಿಸರ – ಮುಂತಾದವು ಸೀತೆಯ ಅಂಗಾಂಗಗಳನ್ನು ಸೇರಿ ಶೋಭೆಯನ್ನು ಬೀರಿದವು. ॥ ೭೨ ॥ ಮನ್ಮಥನ ಆನೆಯಂತಹ ನಡಿಗೆಯ ಚೆಳಿನಿಯೇ, ಆ ಕುಮಾರಿಸೀತೆಗೆ ಮುತ್ತಿನ ಬಲೆ, ಮುತ್ತಿನ ಮೂಗುತಿ. ತೋರಮುತ್ತಿನ ಮಾಲೆ, ಮುತ್ತಿನ ಓಲೆ.

---

[1] ಸೊಗಸಿದುದೆಂತೆನಲು (ಚ). [2] ಕಡುಗೂರ್ವು (ಕ ಜ.) [3] ಮೇಗಳ (ಚ). [4] ನನುಕರಿಸಿದುದು (ಚ) [5] ಹೂ (ಗ) [6] ಬಿಗಿದೆಳದೊಲು (ಕ). [7] ಮೌಕ್ತಿಕ ವಡಹುಟ್ಟಿದ (ಗ) [8] ಮಡಿದಾರ (ಗ) [9] ಉಡಿದಾರ ಮಣಿಹಾರಗಳು (ಗ) ಮಡಿವಣಿದಾರ ಹಾರಗಳು, ತಾರವಾರಗಳು (ಚ). ೬೮ನ ಪದ್ಯ (ಗ) ದಲ್ಲಿಲ್ಲ.

ಮುತ್ತಿನ ಬಳೆ ಮುತ್ತಿನ ಮೂಕುತಿ ತೋರ । ಮುತ್ತಿನ ಸರ ಮುತ್ತಿನೋಲೆ ॥
ಮುತ್ತಿನ ಹತ್ತೆಗಟ್ಟೆಸೆದವಾ[1] ಕುವರಿಗೆ । ಚಿತ್ತಜನಿಭನಿಭಯಾನೆ ॥ ೨೩ ॥

ನಿಱಿಯು[2]ಗೊಂಡೆಯ ಮಣಿಮೇಖಲೆ ಮುತ್ತಿನ । ಹೆಱೆ ರವಿ ಭುಜಕೀರ್ತಿಯುಂಡಿಯು ॥
ಕಿಱುಗೆಜ್ಜೆ ಚಳಕಿಗೆ ಜೂಳಯುವೆಸೆದವಾ । ನಿಱುಗುರುಳಬಲಾ ಮಣಿಗೆ ॥ ೨೪ ॥

ಅಂಗದೊಳ್ ತೊಟ್ಟ ತೊಡವಿನ ರುಚಿಯುನವ । ಅಂಗದೀಧಿತಿಯೊಯ್ಯನಿರದೆ ॥
ಭಂಗಿಪುದೆನಲಾ ಜನಕಾತ್ಮಜೆಯ ದಿ । ವ್ಯಾಂಗವನೇನ ಬಣ್ಣಿಪೆನು ॥ ೨೫ ॥

ಸುಳಿಗುರುಳ್ ಸುಳಿನಾಭಿ ಸೆಳೆನಡು ಸೆಳ್ಪುಗುರ್ । ನಳಿನವದನ ನಳಿತೋಳು ॥
ಕಳಹಂಸಗತಿ ಕೈರವನೇತ್ರವೆಸೆದವಾ । ಕಳಸಕುಚದ ಕಾಮಿನಿಗೆ ॥ ೨೬ ॥

ಪುಸಿನಡು ಮಿಸುನಿದಾವರೆಮೊಗ್ಗೆ ಮೊಲೆ ಪೊಚ್ಚ । ಪೊಸ ಜವ್ವನ ಮುದ್ದುಮೊಗದ[3] ॥
ಶಶಿಗೆರೆದುಟಿ[4] ಸಿಸುವುಲ್ಲೆಗಣ್ಣಾ[5] ತೆಳು । ವಸುಱ[6] ಲತಾಂಗಿಗೊಪ್ಪಿದವು ॥ ೨೭ ॥

ಮುಡಿಗೆ ಮುಖೇಂದು ರದನಕೆ ಜಘನ ಸಣ್ಣ । ನಡುವಿಗೆ ನಡೆಯಾ ನಡೆಗೆ ॥
ಅಡಿದಾವರೆಗಳಂಜುವವೆನೆ ಬಣ್ಣಿಸಿ । ನುಡಿವುದೇನವಳಂಗದಿರವ ॥ ೨೮ ॥

ಕವಿತಾಮಾರ್ಗಕಿನಿತು ಪೇಳ್ವುದಲ್ಲದೆ[7] । ಕುವರಿಯ ರೂಪಾತಿಶಯವ ॥
ವಿವರಿಸಿ ಪೇಳುವೆನೆಂದೆಂಬ ಕವಿಗಳಿ । ಗವಗಡವವಿರಳವಬಲೆ ॥ ೨೯ ॥

ಕೆಳದಿಯರಿಂತು ಸಿಂಗರಿಸಿ ಮಂತ್ರೀಶನ । ಬಳಿಗೆ ಸೀತೆಯ ಕರತರಲು ॥
ತಳುವದೈದಿದರು ಮಂಟಪಕೆ ಶೃಗಾರಿನ । ತುಳುವ ಪಾರಕ[8]ರೊಗ್ಗಿನೊಳು ॥ ೩೦ ॥

---

ಮುತ್ತಿನ ಹತ್ತಗಟ್ಟು (ಕೈಯ ಆಭರಣ) ಮುಂತಾದವು ಶೋಭಿಸಿದವು ॥ ೨೩ ॥ ಕೊಂಕು ಕೂದಲಿನ ಸೀತೆಗೆ ಉರುಟಾದ ಗೊಂಡೆ, ರತ್ನದ ಸೊಂಟಪಟ್ಟಿ, ಮುತ್ತಿನ ಚಂದ್ರ–ಸೂರ್ಯ ಆಭರಣ, ಭುಜಕೀರ್ತಿ, ಸೊಂಟದ ಕಿರುಗೆಜ್ಜೆ, ಚಳಕಿಗೆ, ತಿಂಗಳಿಗೆ – ಮುಂತಾದವು ಶೋಭಿಸುತ್ತಿದ್ದುವು ॥ ೨೪ ॥ ಆಕೆಯ ದೇಹದ ಕಾಂತಿಯು ಆಕೆ ಅಂಗಗಳಲ್ಲಿ ಧರಿಸಿದ ಆಭರಣಗಳ ಪ್ರಕಾಶವನ್ನು ಕುಗ್ಗಿಸುತ್ತಿತ್ತು. ಹೀಗಿರುವಾಗ ಆ ಜಾನಕಿಯ ದಿವ್ಯವಾದ ಅಂಗಗಳನ್ನು ಏನೆಂದು ವರ್ಣಿಸಲಿ! ॥ ೨೫ ॥ ಆ ಸೀತೆಗೆ ಕೊಂಕುಕೂದಲು, ಸುಳಿಯಂತಿರುವ ಹೊಕ್ಕುಳು, ಬತ್ತಿದಂತೆ ತೆಳುವಾದ ಸೊಂಟ, ಚೂಪಾದ ಉದ್ದ ಉಗುರು, ತಾವರೆಯಂತಹ ಮುಖ, ನಯವಾದ ತೋಳು, ಹಂಸೆಯಂತಹ ನಡಿಗೆ ನೈದಿಲೆಯಂತಹ ಕಣ್ಣು – ಶೋಭಿಸಿದವು ॥ ೨೬ ॥ ತೆಳುವಾದ ಹೊಟ್ಟೆಯ, ಬಳ್ಳಿಯಂತಹ ದೇಹದ ಸೀತೆಗೆ ಇಲ್ಲವೆನ್ನುವಷ್ಟು ಚಿಕ್ಕದಾದ ನಡು ಚಿನ್ನದ ತಾವರೆ ಮೊಗ್ಗಿನಂತಹ ಮೊಲೆ, ಕಡುಹೊಸತಾದ ತಾರುಣ್ಯ, ಮುದ್ದಾದ ಮುಖ, ಚಂದ್ರರೇಖೆಯಂತಹ ತುಟಿ, ಜಿಂಕೆಮರಿಯ ಕಣ್ಣು – ಇವು ಶೋಭಿಸಿದವು ॥ ೨೭ ॥ ಸೀತೆಯ ತಲೆಮುಡಿಗೆ ಮುಖವೆಂಬ ಶಶಿಯೂ, ಸಣ್ಣವಾದ ಹಲ್ಲಿಗೆ ಆಕೆಯ ನಿತಂಬವೂ, ಸೊಂಟಕ್ಕೆ ಆಕೆಯ ನಡಿಗೆಯೂ, ನಡಿಗೆಗೆ ಪಾದಕಮಲಗಳೂ ಹೆದರುತ್ತಿದ್ದುವು. ಹೀಗಿರುವಾಗ ಅವಳ ದೇಹದ ವಿಷಯವನ್ನು ಏನೆಂದು ಹೇಳಲಿ! ॥ ೨೮ ॥ ಕಾವ್ಯಮಾರ್ಗದಲ್ಲಿ ಸ್ತ್ರೀವರ್ಣನಗೋಸ್ಕರ ಇಷ್ಟು ಹೇಳಿದ್ದಲ್ಲದೆ ಆ ಕುಮಾರಿಯ ಸೌಂದರ್ಯವನ್ನು ವಿವರಿಸಿ ತಿಳಿಸುವನೆಂಬ ಕವಿಗಳಿಗೆ ಅಸಾಧ್ಯವೇ ಸರಿ ॥ ೨೯ ॥ ಸೀತೆಯ ಸಖಿಯರು ಹೀಗೆ ಆಕೆಯನ್ನು

---

[1] ಹತ್ತಕಟ್ಟೆಸೆದವಾ (ಗ ಚ) [2] ಱಿಯ (ಗ) [3] ಮೋರೆ (ಗ ಜ) [4] ದಟ್ಟಿ (ಗ). [5] ಸಿಸುಪಲ್ಲೆಗಣ್ಣು (ಗ). ಸಿಸುವುಲ್ಲೆಗಣ್ಣೊ (ಚ).
[6] ತೆಳುವಸುಱು (ಚ) [7] ಪೇಳ್ದುದಲ್ಲದೆ (ಗ ಜ.) [8] ಪಾಲಕ (ಗ).

ಆ ಮಂತ್ರೀಶನ ನೇಮದೊಳೊಯ್ಯನಂ । ದಾ ಮಾನಿನಿ ಮಮತೆಯೊಳು ॥
ತಾಮಸವಿಲ್ಲದಡರಿ ಪಲ್ಲಕ್ಕಿಯು । ನಾ ಮಂತ್ರಿಯೊಡನೈದಿದಳು ॥ ೮೧ ॥

ಪೊಂಬಲ್ಲಕ್ಕಿಯಡರಿ ಪೋಪ ಕುವರಿಯ । ಬೆಂಬಳಿಯೊಳಗೆಡೆವಿಡದೆ ॥
ಅಂಬುಜಾಕ್ಷಿಯರ ಕದಂಬವೈದಿತು ಪಕ್ಷ । ಬಿಂಬಾಧರೆ ಪ್ರಿಯಕಾಂತೆ ॥ ೮೨ ॥

ಉಡಿಸುವ ತೊಡಿಸುವ ಮುಡಿಸುವ ಕೈಗೊಟ್ಟು । ನಡಸುವ ನಟನೆಯಾಗಳುವ ॥
ಮಡದಿಯರುಗಳ ಗಡಣವೈದಿದುದವ । ಳೆಡಬಲ[1]ದೊಳಗೆಡೆವಿಡದೆ ॥ ೮೩ ॥

ಬಡನಡುವಿನ ಬಳುಕುವ ನಡುವಿನ ಸಣ್ಣ । ನಡುವಿನ ಕಣ್ಗೆ ಸಂದೆಗವ[2] ॥
ಪಡೆವ ನಡುವಿನಾಗಸ ನಡುವಿನ ಪಿಡಿ । ನಡುವಿನಂಗನೆಯರೈದಿದರು ॥ ೮೪ ॥

ಎಳದಳಿರಡಿಗಳ ಪೊಳೆವ ಕದಪುಗಳ । ಗಿಳಿನುಡಿಯಳಿಗುರುಳುಗಳ ॥
ಕಳಸಕುಚಗಳೆಳೆವಾಳೆದೊಡೆಗಳೆಳೆ । ವರೆಯುದ ಪೆಣ್ಗಳೈದಿದರು ॥ ೮೫ ॥

ಸಿಂಗರವಡೆದ ಪೊಂಗಳಸವೊಲೆಯ ಪೊಸ । ರಂಗುದುಟಿಯ ಮುದ್ದುಮೊಗದ ॥
ಸಿಂಗನಡುವಿನ ಮಾತಂಗಗತಿಯ ಲಲಿ । ತಾಂಗದಂಗನೆಯರೈದಿದರು ॥ ೮೬ ॥

ಕುಡಿತೆ[3]ಗಣ್ಣುಂಗುರವಿಡಿ ನಡುವಿನ ಪೊಂ । ಗೊಡ ಮೊಲೆಗಳ ನಿಡುಮುಡಿಯ ॥
ಬಡಬಾಸೆ ಕುಡುವುರ್ವಿನಂಚೆಗತಿಯ ಗಿಳಿ । ನುಡಿಯ ಮಡದಿಯರೈದಿದರು ॥ ೮೭ ॥

---

ಶೃಂಗಾರಮಾಡಿ ಮಂತ್ರೀಶ್ವರನ ಬಳಿಗೆ ಕರೆತಂದರು. ಆಗ ಅವರೆಲ್ಲರೂ ಮೈಕಾವಲಿನ ತುಳುವ ವಾರಕರೊಡನೆ ತಡಮಾಡದೆ ಮಂಟಪಕ್ಕೆ ಬಂದರು. ॥ ೮೦ ॥ ಮಂತ್ರೀಶನ ಆಜ್ಞೆಯಂತೆ ಸೀತೆಯು ಪ್ರೀತಿಯಿಂದ ಬೇಗನೆ ಪಲ್ಲಕ್ಕಿಯನ್ನೇರಿ ಮಂತ್ರಿಯೊಡನೆ ತೆರಳಿದಳು ॥ ೮೧ ॥ ತೊಂಡೆಹಣ್ಣಿಂತಹ ತುಟಿಯ ಪ್ರಿಯಪತ್ನಿಯೇ ಕೇಳು. ಚಿನ್ನದ ಅಂದಣವನ್ನೇರಿ ಹೋಗತಕ್ಕ ಸೀತೆಯ ಹಿಂದಿನಿಂದ ಸುಂದರಿಯರಾದ ಸ್ತ್ರೀಯರ ಸಮೂಹವೂ ಹೋಯಿತು. ॥ ೮೨ ॥ ಆಕೆಯ ಎಡಬಲಗಳಲ್ಲಿ ಉಡಿಸುವ, ತೊಡಿಸುವ ಮುಡಿಸುವ, ಕೈಹಿಡಿದು ನಡೆಸುವ. ಕೃತಕವೆಂಬಂತೆ ಆಳುವ, ಹೆಂಗುಸರ ತಂಡವು ನಡೆಯಿತು. ॥ ೮೩ ॥ ಬಡವಾದ ನಡುವಿನ. ಬಳುಕುವ ನಡುವಿನ, ಸಣ್ಣ ನಡುವಿನ. ಇದೆಯೋ ಇಲ್ಲವೋ ಎನಿಸುವಷ್ಟು ಸೂಕ್ಷ್ಮವಾಗಿ ಕಣ್ಣಿಗೆ ಕಾಣಿಸುವ ನಡುವಿನ, ಆಕಾಶದಂತೆ ಶೂನ್ಯವೆನಿಸುವ ನಡುವಿನ, ಕೈಯ ಹಿಡಿಯೊಳು ಅಡಗುವ ನಡುವಿನ ಹೆಂಗುಸರು ಜಾನಕಿಯೊಡನೆ ತೆರಳಿದರು ॥ ೮೪ ॥ ಎಳಚಿಗುರಿನಂತೆ ಕೆಂಪಾದ ಪಾದಗಳ, ಹೊಳೆವ ಕೆನ್ನೆಗಳ, ಗಿಳಿಯಂತಹ ಮಾತಿನ, ತುಂಬಿಯಂತಹ ಕೂದಲಿನ, ಕೊಡದ ಆಕಾರದ ಮೊಲೆಗಳ, ಎಳತಾದ ಬಾಳೆಯಂತಹ ತೊಡೆಗಳ, ಎಳೆಹರಯದ ಹೆಂಗುಸರು ತೆರಳಿದರು ॥ ೮೫ ॥ ಶೃಂಗಾರವಾದ ಹೊನ್ನಿನ ಕೊಡದಂತಹ ಮೊಲೆಯ. ಹೊಸತಾದ ಬಣ್ಣದಿಂದ ಕಂಗೊಳಿಸುವ ತುಟಿಯ. ಮುದ್ದಾದ ಮುಖದ, ಸಿಂಹದ ಸೊಂಟದಂತೆ ತೆಳುವಾದ ಸೊಂಟದ, ಆನೆಯಂತೆ ನಿಧಾನವಾದ ನಡಿಗೆಯ. ಸುಂದರವಾದ ದೇಹದ ಹೆಂಗುಸರು ತೆರಳಿದರು ॥ ೮೬ ॥ ಕುಡಿತೆಕಣ್ಣುಗಳ. ಉಂಗುರದಂತೆ ಚಿಕ್ಕದಾಗಿ ಹಿಡಿಯಲು ಸಿಗುವ ನಡುವಿನ. ಚಿನ್ನದ ಕೊಡದಂತಿರುವ ಮೊಲೆಗಳ, ಉದ್ದವಾದ ತಲೆಗೂದಲಿನ, ತೆಳುವಾದ ಹೊಟ್ಟೆಯ ರೋಮಪಂಕ್ತಿಯುಳ್ಳ, ಬಾಗಿರುವ ಹುಬ್ಬಿನ, ಹಂಸೆಯಂತೆ ನಿಧಾನವಾದ ನಡಿಗೆಯ, ಗಿಳಿಯಂತಹ ನುಡಿಯ ಹೆಂಗುಸರು ತೆರಳಿದರು. ॥ ೮೭ ॥ ಆನೆಯಂತಹ ನಡಿಗೆಯ, ತಾವರೆಯಂತಹ ನಡಿಗೆಯ. ತಾವರೆಯಂತಹ ಕಣ್ಣಿನ. ಚಿನ್ನದ ತಾವರೆಮೊಗ್ಗಿನಂತಿರುವ

---

[1] ದವಗೆಡಬಲ (ಗ). [2] ಸಂಶಯವ (ಗ. ಚ). [3] ಕುಡುತೆ (ಗ) ೮೭ ಈ ಪದ್ಯ ಚ. ದಲ್ಲಿಲ್ಲ

ಸಾಮಜಗತಿಯರವಿಂದ ಲೋಚನ ಪೊಂ । ದಾಮರೆ ಮೊಗ್ಗೆ ಮೊಲೆಗಳ ॥
ಸೋಮವದನದಭಿರಾಮವಡೆದ ಪೆಣ್ಣ । ಸ್ತೋಮವೈದಿದುದವಳೊಡನೆ ॥ ೮೮ ॥

ಮಂದಗತಿಯ ಕುಂದ ಕುಟ್ಮಳ ರದನದ । ಕೆಂದಳಿರ್ದಳದಳಿಗುರುಳ ॥
ಬಂದುಗೆವಾಯರವಿಂದ ಲೋಚನದ ಪೂ । ರ್ಣೇಂದುವದನೆಯರೈದಿದರು ॥ ೮೯ ॥

ತಿಮಿರಕಮಲ ಕುಚ ಭ್ರಮರಕುಂತಳವತಿ । ರಮಣೀಯಮಪ್ಪ ಚೆಂದುಟಿಯ ॥
ಸುಮನಶರಗೆ ಸುಮನವ[1] ಪುಟ್ಟಿಸುತಿರ್ಪ । ಸುಮನಗಂಧಿಯರೈದಿದರು ॥ ೯೦ ॥

ನವಮುಕುರಾಸ್ಯ ಕುವಲಯಲೋಚನ ಮಂದ । ಪವನಗತಿಯ ಮೃದುವಾದ ॥
ಪವಳದುಟಿಯ ಬಾವನ್ನಗಂಪಿನ[2] ಜಾತಿ । ಯುವತಿಯರುಗಳೈದಿದರು ॥ ೯೧ ॥

ಕಿಱುವೆಱೆನೊಸಲ ಪಱಮೆಮಱಿಗಣ್ಣ ಬ । ಲ್ವೆಱೆಮೊಗದೇಣಾಂಕಗತಿಯ ॥
ಮಿಱುಗುವ ಪೊಱವಾಱ [3]ಪೊಸಜವ್ವನೆಯರು ಕಿ । ಕ್ಕಿಱಿದು ನಡೆದರವಳೊಡನೆ[3] ॥ ೯೨ ॥

ಹುಣ್ಣಿಮೆ[4] ವೆಱೆಮೊಗಗಳ ಪುಸಿ ನಡುವಿನ । ಬಣ್ಣದುಟಿಯ ಬಟ್ಟ ಮೊಲೆಯ ॥
ನುಣ್ಣಿದವಾದ ನುಣ್ನುಡಿಯ ನೊಸಲ[5] ಮುದ್ದು । ವೆಣ್ಣುಗಳೈದಿದರಾಗ[6] ॥ ೯೩ ॥

ನಗೆಗಣ್ಣ ನಿಡುಗಣ್ಣ ಬಗಸೆಗಂಗಳ[7] ಸಿಸು । ಮಿಗಗಣ್ಣಲರುಣೆ ಗಣ್ಣ ॥
ಸೊಗಸುಗಣ್ಣೆಳಿವಾಳೆಗಣ್ಣೆಳಿವರೆಯದ । ಬಗೆಕಾರ್ತಿಯರೈದಿದರು ॥ ೯೪ ॥

---

ಮೊಲೆಗಳ, ಚಂದ್ರನಂತಹ ಮುಖದ, ಮನೋಹರತ್ವವನ್ನು ತಾಳಿದ ಹೆಂಗುಸರ ಸಮೂಹವು ಆ ಜಾನಕಿಯೊಡನೆ ತೆರಳಿತು ॥ ೮೮ ॥ ನಿಧಾನವಾದ ನಡಿಗೆಯ ಕುಂದಮಲ್ಲಿಗೆ ಮುಗುಳಿನಂತಹ ಹಲ್ಲಿನ ಕೆಂಪಾದ ಚಿಗುರಿನಂತೆ ಕೆಂಪಾದ ಅಂಗೈಯ, ತುಂಬಿಯಂತೆ ಕಪ್ಪಾದ ಕೂದಲಿನ, ಬಂದುಗೆ ಹೂವಿನಂತೆ (ಕಿಸುಗಾರ ಹೂವಿನಂತೆ) ಕೆಂಪಾದ ಬಾಯಿಯ, ತಾವರೆಯಂತಹ ಕಣ್ಣಿನ, ಚಂದ್ರನಂತಹ ಮುಖದ ಸುಂದರಿಯರು ತೆರಳಿದರು. ॥ ೮೯ ॥ ತಾವರೆ ಮುಗುಳಿನಂತಹ ಮೊಲೆಯ, ತುಂಬಿಯಂತಹ ತಲೆಗೂದಲಿನ, ಬಹಳ ಮನೋಹವಾಗಿರುವ ಕೆಂಪಾದ ತುಟಿಯ. ಪುಷ್ಪಬಾಣನಾದ ಮನ್ಮಥನಿಗೆ ಒಳ್ಳೆಯ ಮನಸ್ಸನ್ನು ಉಂಟುಮಾಡತಕ್ಕ ಪುಷ್ಪಗಳ ಪರಿಮಳದಿಂದ ಕೂಡಿದ ಸ್ತ್ರೀಯರು ತೆರಳಿದರು ॥ ೯೦ ॥ ಹೊಸ ಕನ್ನಡಿಯಂತೆ ತಳತಳಿಸುವ ಮುಖವುಳ್ಳ, ನೈದಿಲೆಯಂತಹ ಕಣ್ಣುಳ್ಳ, ಮಂದಮಾರುತದಂತೆ ಮೆಲ್ಲನಾದ ನಡಿಗೆಯುಳ್ಳ, ಮೆತ್ತಗಾದ ಹವಳದಂತಿರುವ ತುಟಿಯುಳ್ಳ, ಶ್ರೀಗಂಧದ ಪರಿಮಳವನ್ನುಳ್ಳ, ಒಳ್ಳೆಯ ಜಾತಿಯ ತರುಣಿಯರು ತೆರಳಿದರು. ॥ ೯೧ ॥ ಬಾಲಚಂದ್ರನಂತಹ ಹಣೆಯ ತುಂಬಿಮರಿಯಂತಹ ಕಣ್ಣಿನ, ಪೂರ್ಣಚಂದ್ರನಂತಹ ಮುಖದ ಚಂದ್ರನಂತೆ ಮಂದವಾದ ನಡಿಗೆಯ, ಹೊಳೆಯುವ ನಿತಂಬದ, ಹೊಸ ಯೌವನವತಿಯರು ಒತ್ತೊತ್ತಾಗಿ ಸೀತೆಯೊಡನೆ ತೆರಳಿದರು ॥ ೯೨ ॥ ಹುಣ್ಣಿಮೆ ಚಂದ್ರನಂತೆ ದುಂಡಗಾದ ಮುಖಗಳ, ಹುಸಿನಡುವಿನ, ಬಣ್ಣದ ತುಟಿಯ ವೃತ್ತಾಕಾರದ ಮೊಲೆಯ, ನುಣುಪಾದ ಹಣೆಯ, ನಯವಾದ ಮಾತಿನ, ಮುದ್ದಾದ ಹೆಂಗುಸರು ಆಗ ತರಳಿದರು ॥ ೯೩ ॥ ನಗೆಗಣ್ಣಿನ, ನೀಳವಾದ ಕಣ್ಣಿನ, ಬೊಗಸೆಗಣ್ಣಿನ, ಹುಲ್ಲೆಮರಿಯಂತಹ ಕಣ್ಣಿನ, ಹಾವಿನಂತಹ ಕಣ್ಣಿನ, ಸೊಗಸಾದ ಕಣ್ಣಿನ, ಎಳೆಯ ಮೀನಿನಂತಹ ಕಣ್ಣಿನ ಎಳವೆಯ ಹೆಂಗುಸರು ತೆರಳಿದರು ॥ ೯೪ ॥ ಚಿಗುರಿನಂತಹ ಪಾದದ, ತಾವರೆಯಂತಹ ಪಾದದ, ಹೊಳೆವ ಅಲಕ್ತಕ

---

[1] ಸುಮನಸಾರಗೆ ಸುಮ್ಮಾನ (ಗ) [2] ಗಂಧಿನಿ (ಕ) [3] ಸರಸಗಾತಿಯರು ತಾ । ವಿರದೈದಿದರು ಸತಿಯೊಡನೆ (ಕ) [4] ಹುಣ್ಣಮೆ (ಚ). [5] ನುಣ್ಣಿದ ಮಪ್ಪ ನುಣ್ಣೊಸಲ ನುಡಿಯ (ಗ ಚ) [6] ವೆಣ್ಣ ಕದಂಬ ವೈದಿದುದು (ಗ ಚ.). [7] ಬಗಸೆಗಂಗಳ ನೈದಿಲೆಗಣ್ಣ (ಕ).

ತಳಿರ್ವಜ್ಜೆಯ ತಾವರೆವಜ್ಜೆ ಮಿಸುಗುವ । ವಲತಿಗೆ ವಜ್ಜೆ ಕೆಂಬಜ್ಜೆ[1] ॥
ಪೊಳೆವ ಮಾಣಿಕವಜ್ಜೆ ತಳತಳಿಸುವ[2] ನವ । ನಳಿನಾಕ್ಷಿಯರ್ಕೈದಿದರು ॥ ೯೫ ॥

ಮುಗುಳುಮೊಲೆಯ ಮುದ್ದುಮೊಲೆಯ ನೋಳ್ಪರ ಕಣ್ಣ । ತೆಗೆವ ಮೊಲೆಯ [3]ಮೇಲುದನು ॥
ನೆಗೆವ ಮೊಲೆಯ ನೆಲೆಮೊಲೆಯ ಲಲನೆಯರು । ಮೃಗನೇತ್ರೆಯೊಡನೈದಿದರು ॥ ೯೬ ॥

ಪಡಿಗ ಪಾವುಗೆ ಗಿಂಡಿ ಕರಗ ಕಾಳಾಂಜಿ ಕ । ನ್ನಡಿ ಕುಂಚ ಚ[4]ವರದೂಳಿಗದ ॥
ಮಡದಿಯರುಗಳ ಗಡಣವೈದಿತು ಮುದ್ದು । ಮಡದಿಯ ಸಮ್ಮುಖದೊಳಗೆ[5] ॥ ೯೭ ॥

ಹರಲ[6] ಚಿಂತಾಕು ಮೂಗುತಿ ಮುತ್ತಿನ ವೋಲೆ[7] । ಬೆರಲುಂಗುರ ಮುಂಗೈಯ ॥
ಸರಪಣಿ ತೋರ ಹಾರಗಳು ಯೆಸೆಯಲಾ[8] । ತರುಣಿಯರ್ಕೈದಿದರಾಗ[9] ॥ ೯೮ ॥

ಕೀಲಕಡಗ ಕಾಂಚಿಯ ಧಾಮದ[10] ವಜ್ರ । ದೋಲೆ ಮುತ್ತಿನ ಮೂಗುತಿಯ ॥
ಕಾಲ ಉಳಿಯ ಕಾಂತೆಯರ್ಕೈದಿದರಾ । ಲೋಲಲೋಚನೆಯ ಬೆಂಬಿಡದೆ ॥ ೯೯ ॥

ತಳಿರ್ಗಾವಿಯ ಸೀರೆ ಪೊಸ ಪೊನ್ನ ಸೆರಗಿನ[11] । ಬಿಳಿದೆಳನೀಲಿಬರಹದ ॥
ಬಿಳುವಟ್ಟೆಯ[12] ಸೀರೆಯನುಟ್ಟು ಸತಿಯರ । ಬಳಗ ಬಳಸಿ ಬಂದುದವಳ ॥ ೧೦೦ ॥

ಚೆಂಗಣಿಗಿಲೆ ಮಾಣಿಕವಟ್ಟೆಯ ಪೊಸ । ಬಂಗಾರವಟ್ಟೆ ಪೊಂಬರಹ ॥
ರಂಗುವಡೆದ[13] ಸೀರೆಯನುಟ್ಟು ಸತಿಯರ । ವಂಗಡವೈದಿದುದಂದು ॥ ೧೦೧ ॥

---

ರಸದಿಂದ ಕೆಂಪಾದ ಪಾದದ, ಸಹಜವಾಗಿ ಕೆಂಪಾದ ಪಾದದ, ಹೊಳೆಯುವ ಮಾಣಿಕ್ಯದಂತಿರುವ ಪಾದವು ತಳತಳಿಸುತ್ತಿರುವ ಕಮಲಮುಖಿಯರು ತೆರಳಿದರು. ॥ ೯೫ ॥ ಮುಗುಳಿನಂತಹ ಮೊಲೆಯ, ಮುದ್ದಾದ ಮೊಲೆಯ, ನೋಡುವವರ ಕಣ್ಣನ್ನೇ ಕೀಳುವ ಮೊಲೆಯ, ಸೀರೆಯ ಮೇಲುದನ್ನು ಮೇಲಕ್ಕೆತ್ತುವ ಮೊಲೆಯ, ಸ್ಥಿರವಾಗಿ ನಿಂತಿರುವ ಮೊಲೆಯ, ಹೆಂಗುಸರು ಸೀತೆಯೊಡನೆ ತೆರಳಿದರು. ॥ ೯೬ ॥ ಆ ಸೀತೆಯ ಎದುರಿನಲ್ಲೇ ಉಗುಳುಬುಡ್ಡಿ, ಪಾದುಕೆ, ಗಿಂಡಿ, ಕರಗ, ಪನ್ನೀರುಕುಪ್ಪಿ, ಕನ್ನಡಿ, ಕುಂಚ, ಚಾಮರ – ಮುಂತಾದವುಗಳನ್ನು ಹಿಡಿದ ಸೇವಕಿಯರ ಸಮೂಹವು ತೆರಳಿತು. ॥ ೯೭ ॥ ರತ್ನಕೆತ್ತಿದ ಚಿನ್ನದ ಸರ, ಮೂಗುತಿ, ಮುತ್ತಿನೋಲೆ, ಬೆರಲಿನ ಉಂಗುರ, ಮುಂಗೈಯ ಸರವಣಿ, ದಪ್ಪವಾದ ಹಾರ – ಮುಂತಾದ ಆಭರಣಗಳು ಶೋಭಿಸುತ್ತಿರಲು ಆಗ ಹೆಂಗುಸರು ತೆರಳಿದರು ॥ ೯೮ ॥ ಆ ಸೀತೆಯನ್ನು ಹಿಂಬಾಲಿಸಿಕೊಂಡು ಹೋಗುತ್ತಿದ್ದ ಸ್ತ್ರೀಯರು ಕೀಲುಕಡಗ, ಸೊಂಟದ ಡಾಬು, ವಜ್ರದ ಓಲೆ. ಮುತ್ತಿನ ಮೂಗುತಿ, ಕಾಲಿನ ಉಳಿ – ಇವನ್ನು ಧರಿಸಿದವರಾಗಿ ತೆರಳಿದರು. ॥ ೯೯ ॥ ಚಿಗುರಿನಂತಹ ಕಾವಿಯ ಸೀರೆಯನ್ನೂ, ಹೊಸ ಚಿನ್ನದ ಸೆರಗಿನಿಂದ ಕೂಡಿ – ಬಿಳಿಯ ಮತ್ತು ಎಳನೀಲಿ ಬಣ್ಣದ ಬರಹಗಳಿಂದ ಕೂಡಿದ ಬಿಳಿಬಟ್ಟೆಯ ಸೀರೆಗಳನ್ನೂ ಉಟ್ಟುಕೊಂಡ ಸ್ತ್ರೀಯರ ಸಮೂಹವು ಆ ಸೀತೆಯ ಸುತ್ತಲೂ ನಡೆದುಬರುತ್ತಿದ್ದಿತು. ॥ ೧೦೦ ॥ ಕೆಂಪು ಕಣಗಿಲೆಯ ಬಟ್ಟೆಯ, ಮಾಣಿಕ್ಯವರ್ಣದ ಬಟ್ಟೆಯ, ಹೊಸ ಚಿನ್ನದ ಬಟ್ಟೆಯ. ಚಿನ್ನದ ಬರಹದ ಬಣ್ಣವು ಹೊಳೆಯುತ್ತಿರುವ ಸೀರೆಯನ್ನುಟ್ಟು ಅಂದು ಸ್ತ್ರೀಯರ

---

[1] ತಾವರೆವಜ್ಜೆಯನಳ । ನಳಿಸುವ ಪವಳವಜ್ಜೆಗಳ (ಗ ಚ) [2] ಕೆಂಬಜ್ಜೆಗಳ (ಗ. ಚ). [3] ಮೆಲ್ಲಡಿಗೆ (ಚ). [4] × (ಗ). [5] ವೈದಿದುದವ । ಳೊಡನೊಡನತಿ ಲೀಲೆಯೊಳು (ಗ ಚ). [6] ಹರಳ (ಗ). [7] ಮುತ್ತಿನ ಮೂಕುತಿಯೋಲೆ (ಗ ಚ) [8] ಹಾರವೆಸೆಯಲಾ (ಗ.ಚ.). [9] ರ್ಕೈದಿದರಂದು (ಗ. ಚ.). [10] ಕಾಲ ಕಡಗ ಕಾಂಚಿಯ ಧಾಮದ (ಕ) [11] ಪಳಿಯ ಪಟ್ಟೆಯ ಚಂದ್ರಗಾವಿ ಹಳದಿಯಚ್ಚ (ಗ. ಚ.). [12] ಬಿಳಿವಟ್ಟೆಯ (ಗ) ಬೆಳುಪಟ್ಟೆಯ (ಚ) [13] ರಂಗು ಮಾವಲದ ಮೂವಟದ । ಹೂಗನ ಗಚ್ಚಾಯ (ಗ. ಚ). ೯೭ನೇ ಪದ್ಯ (ಕ) ದಲ್ಲಿಲ್ಲ.

ಮುತ್ತಿನ ಸೆಱಗಿನ ಸೀರೆಯ ಹೊಸ ಹೊ । ನ್ನುತ್ತರಿಗೆಯ ಗಾಡಿವಡೆದ ॥
ಕಿತ್ತಳಿಗಾವಿಯ ಸೀರೆಯುಟ್ಟೈದಿದ । ರತ್ತಿತ್ತ ತೊಲತೊಲಗೆನುತ[1] ॥ ೧೦೨ ॥

ಸೆಕ್ಕುಂದುಱುಂಬಿನ[2] ಸೆರೆಗೈಗಂಗಳ । ಕಕ್ಕಸ ಕುಚದೆಳೆನಗೆಯ ॥
ಸೊಕ್ಕುಗಂಗಳ ಸೋರು ಮುಡಿಯಬಲೆಯರವ । ಳಿಕ್ಕೆಲದೊಳು ಬಂದರಬಲೆ[3] ॥ ೧೦೩ ॥

ಮಡದಿಯರುಗಳ ಮುಡಿದ ಮುಡಿವೂವಿಗೆ । ತೊಡೆದ ಕತ್ತುರಿಗಳಿಯೆಱಗೆ[4] ॥
ಬಿಡದೊಪ್ಪಿದವು ಪೀಲಿದಳೆಯನು ಮನಸಿಜ । ಪಿಡಿದನವರಿಗೆಂಬಂತೆ ॥ ೧೦೪ ॥

ಭೇರಿ ನಿಸ್ಸಾಳ ದಗಮು ತಂಬಟಡೋಳು । ವೀರಣ ಕೋಂಬು ಕಾಳೆಗಳು ॥
ಭೋರೆಂಬ ವಾದ್ಯ[5]ವೆಸೆಯಲು ಸ್ವಯಂವರ । ಕಾ ರಾಜಸುತೆ ತೆರಳಿದಳು ॥ ೧೦೫ ॥

ತೊಲಗಿಯಂಗಜನ ಕೂರಾನೆ ಬರುತಲಿದೆ । ತೊಲಗಿ[6] ತೊಲಗಿ ವಿಟಜನರು ॥
ಬಲುಹನಿನಿಸ ತೋರದಿರಿಯೆಂದು ಭಟ್ಟರು । ಗಳಪುತಿರಲು ಬಂದರಾಗ[6] ॥ ೧೦೬ ॥

ಸಾ ಸಮ್ಮುಖವಿದಿರಿಂದ[7] ತೊಲಗಿಯತ್ತ । ಲೋ ಸರಿಸಿರಿ[8] ಯೆಡಬಲಕೆ ॥
ಸಾಸಾರರೆಂದು ಕಂಚುಕಿಗಳು ಗ್ಘಡಿಸುವ । ಭಾಷೆ ಕೇಳುತ ನಡೆದವರು[9] ॥ ೧೦೭ ॥

ಮಡದಿಮಣಿಯ ರತ್ನ[10]ಪಲ್ಲಕ್ಕಿಯ ಹೊತ್ತು । ನಡೆವವರಿಗೆ ಕೈಲಾಗ ॥
ಕೊಡಿ ನೋಡಿ[11] ಜತನ ತಪ್ಪದೆ ನಡೆಯೆಂದು । ಗ್ಗಡಿಸುತ ನಡೆದರಂದವರು[12] ॥ ೧೦೮ ॥

---

ಗುಂಪು ತೆರಳಿತು. ॥ ೧೦೧ ॥ ಮುತ್ತಿನ ಸೆರಗುಳ್ಳ ಸೀರೆಯನ್ನುಟ್ಟು, ಹೊಸ ಚಿನ್ನದ ಉತ್ತರೀಯವನ್ನು ಧರಿಸಿ ಸೊಗಸಾದ ಕಿತ್ತಳೆ ಕಾವಿ ಬಣ್ಣದ ಸೀರೆಯನ್ನುಟ್ಟು ನಡೆಯುತ್ತ, ಅತ್ತಿತ್ತ 'ತೊಲಗಿ ತೊಲಗಿ' ಎಂದು ಹೇಳಿ ದಾರಿಮಾಡಿಕೊಳ್ಳುತ್ತ ತೆರಳಿದರು ॥ ೧೦೨ ॥ ಆ ಜಾನಕಿಯ ಎರಡೂ ಬದಿಗಳಲ್ಲಿ ಸೆಕ್ಕುತುರುಬಿನ ಸೆರೆಕೈಯ ಸೆರೆಕಣ್ಣುಗಳ, ಕಠಿಣವಾದ ಮೊಲೆಯ, ಮುಗುಳು ನಗೆಯ, ಮದವೇರಿದ ಕಣ್ಣುಗಳ, ಜಾರಿದ ತಲೆಗೂದಲಿನ ಹೆಂಗುಸರು ಬಂದರು. ॥ ೧೦೩ ॥ ಆ ಹೆಂಗುಸರು ಮುಡಿದ ಹೂವಿಗೂ ಲೇಪಿಸಿದ ಕಸ್ತೂರಿಗೂ ತುಂಬಿಗಳು ಬಂದು ಎರಗಿದಾಗ ಅವರಿಗೆ ಮನ್ಮಥನು ನವಿಲಗರಿಯ ಕೊಡೆಯನ್ನು ಹಿಡಿದಂತೆ ತೋರುತ್ತಿದ್ದವು ॥ ೧೦೪ ॥ ಆ ರಾಜಕುಮಾರಿ ಸ್ವಯಂವರ ಮಂಟಪಕ್ಕೆ ಹೀಗೆ ಬರುತ್ತಿರುವಾಗ ಭೇರಿ, ನಿಸ್ಸಾಳ, ದಗಮು, ತಂಬಟೆ ಡೋಳು, ವೀರಣ, ಕೊಂಬು ಕಹಳೆ ಮುಂತಾದ ವಾದ್ಯಗಳು ಭೋರೆಂದು ಶಬ್ದಮಾಡುತ್ತಿದ್ದವು ॥ ೧೦೫ ॥ ಮನ್ಮಥನ ಕೂರಾನೆ ಬರುತ್ತಿದೆ, ತೊಲಗಿ ತೊಲಗಿ ವಿಟ ಪುರುಷರು ತಮ್ಮ ಸಾಮರ್ಥ್ಯವನ್ನು ಇಲ್ಲಿ ತೋರಬೇಡಿ, ತೊಲಗಿ ತೊಲಗಿ – ಎಂದು ಹೊಗಳು ಭಟ್ಟರು ಬೊಬ್ಬಿಡುತ್ತಿರಲು ಬಂದರು. ॥ ೧೦೬ ॥ ಕಂಚುಕಿಗಳು ಸಮ್ಮುಖದಿಂದ ಅತ್ತ ಸಾರಿಸಾರಿ, ಇದಿರಿಂದ ತೊಲಗಿ ತೊಲಗಿ ಆ ಕಡೆಗೆ ತೆರಳಿ, ಎಡಕ್ಕೆ ಸಾರಿ, ಬಲಕ್ಕೆ ಹೋಗಿ, ಎಂದು ಬೊಬ್ಬಿಡುವ ಮಾತನ್ನು ಕೇಳುತ್ತ ಆ ಹೆಂಗುಸರು ನಡೆದರು. ॥ ೧೦೭ ॥ ಸ್ತ್ರೀರತ್ನವಾದ ಸೀತೆಯ ಪಲ್ಲಕ್ಕಿಯನ್ನು ಹೊತ್ತುಕೊಂಡು ನಡೆವವರಿಗೆ ಕೈಗೆ ಲಘುತ್ವವನ್ನು ಕೊಡಿ, ನೋಡಿ, ಜಾಗರೂಕತೆ ತಪ್ಪದೆ ನಡೆ – ಎಂದು ಬೊಬ್ಬಿಡುತ್ತಿರಲು

---

[1] ಸೀರೆಯನ್ನುಟ್ಟು । ನ್ಮತ್ತ ಯೌವನೆಯರೈದಿದರು (ಗ ಚ). [2] ಸೆಕ್ಕುದುಱುಂಬಿನ (ಗ) [3] ಳಿಕ್ಕೆಲದೊಳಗೈದಿದರು (ಗ ಚ). [4] ಮಡದಿಮಣಿಗೆ ಮುತ್ತಿನ ಛತ್ರವೆತ್ತಿದರ್, ಪಡೆದ ಕತ್ತುರಿಗಳಿಯೆಱಗಿ (ಕ) [5] ವೀರವಾದದ ಗಿಡುಬಿಡಿಯ । ಘೋರ ನಿನಾದ (ಗ ಚ). [6] ಯಂಗಜನಧಿ ದೇವಿ । ನರಿದು ಬರುತಲಿದೆ ತೊಲಗಿ ತೊಲಗಿಯೆಂ । ದುಲಿದುದು ಕಂಚುಕಿನಿಕರ (ಗ ಚ). [7] ಯಿದಿರಿಂದ (ಕ). [8] ಸರಸಿಯೆ (ಗ) [9] ಸಾಸಾರೆಂದೆನುತುಲಿವ ಕಂಚುಕಿಯರ, ಘೋಷಣೆ ಮಸಗಿದುದಾಗ (ಗ) ಸಾಸಾರೆಂದುಲಿವುತ ಕಂಚುಕಿಯರ . . . (ಚ) [10] ನಡೆತೆಱವಾಗು ಸಾ (ಗ ಚ) [11] ಕೊಡು (ಚ) [12] ನಡೆದರಂದಲ್ಲಿ (ಗ)

ಇಂತತಿ ವೈಭವದೊಳು ಸಖಿನಿವಹದಿ[1] । ಕಾಂತೆ ಸ್ವಯಂವರಕಾಗಿ ॥
ಅಂತರಿಸದೆ ಪೋಗುತಿರಲಲ್ಲಿ ನೆರೆದ ಭೂ । ಕಾಂತರಿಂತೆಂದಾಡಿದರು ॥ ೧೦೯ ॥

ಮದನನ ಮಂತ್ರದೇವಿಯೊ ಸುಧೆಗಡಲೊಳ । ಗುದಿಸಿದ ಲಕ್ಷ್ಮಿಯೊ ಶಿವೆಯೊ ॥
ಇದರೊಳಗಿವಳಾರೆಂದು ನೋಡಿದರಾ । ಗೊದವಿರ್ದ[2] ರಾಜಕುವರರು ॥ ೧೧೦ ॥

ದಿವಿಜಾಂಗನೆಯಲ್ಲ ಕಣ್ಣೆವೆಯಾಲುಗಾಟ । ವಿವೆ ನರಲೋಕದೊಳೊಗೆದ ॥
ಯುವತಿಯರೊಳಗಾದೊಡಿಂತಪ್ಪ[3] ರೂಪಿಲ್ಲೆಂ । ದವಳ ನೋಡಿದರು ನೋಟಕರು ॥ ೧೧೧ ॥

ಇದೆ ಮನಸಿಜನರಲಂಬು ಮನ್ಮಥಹಸ್ತಿ । ಯಿದೆ ಅಂಗಜನಧಿದೇವಿ[4] ॥
ಇದೆ ಸ್ಮರರಾಜನ ಕೈಗನ್ನಡಿ[5] ಮ । ತ್ತಿದೆ ಬಾಳ್ಮೊದಲು ಚಿತ್ತಜನ ॥ ೧೧೨ ॥

ಐಹಿಕಸೌಖ್ಯಸಾನಂದ[6] ಮುಕುತಿಯಿದೆ । ರೂಹುವಡೆದ ರತಿದೇವಿ ॥
ಮೋಹಸಾಗರದೊಳೊಗೆದ ಸಿರಿವೆಣ್ಣಿದೆ । ದೀಹ ತಾನಿದೆ ಮೃಗನಯನೆ[7] ॥ ೧೧೩ ॥

ಇವಳ ರೂಪಿವಳ ಲಾವಣ್ಯವಿವಳ ಗಾಡಿ । ಯಿವಳ ವಿಭ್ರಮದೇಳ್ಗೆಯಿವಳ ॥
ಅವಯವ ಸೌಂದರ್ಯಗಳ ಭಾವಿಸಲಿ । ನ್ನವನಿಯ ಪೆಣ್ಗಳಿಗುಂಟೆ[8] ॥ ೧೧೪ ॥

ಕಡಲಾತ್ಮಜೆಯೊ ಕಾವನರಸಿಯೊ ಬೊಮ್ಮನ । ಮಡದಿಯೊ ಲೋಕಾಂಗನೆಯೊ ॥
ಪೆಡೆಯುಡುಗಿದ ನಾಗಿಣಿಯೊ ನಾಕಸ್ತ್ರೀಯೊ । ಮಡದಿ ನೋಡಿದರು ನೋಟಕರು ॥ ೧೧೫ ॥

---

ಅವರು ನಡೆದರು. ॥ ೧೦೮ ॥ ಹೀಗೆ ಸೀತೆಯು ಬಹಳ ವೈಭವದಿಂದ ಸಖಿಯರ ಸಮೂಹದೊಡನೆ ತಡವಿಲ್ಲದೆ ಸ್ವಯಂವರಕ್ಕೆ ತೆರಳುತ್ತಿದ್ದಳು. ಆಗ ಅಲ್ಲಿ ನೆರೆದ ರಾಜರುಗಳು ಹೀಗೆ ಹೇಳುತ್ತಿದ್ದರು. ॥ ೧೦೯ ॥ ಈಕೆಯು ಮನ್ಮಥನ ಮಂತ್ರದೇವತೆಯೋ; ಅಮೃತಸಾಗರದಲ್ಲಿ ಹುಟ್ಟಿದ ಲಕ್ಷ್ಮಿಯೋ, ಪಾರ್ವತೀ ದೇವಿಯೋ – ಈ ಮೂವರಲ್ಲಿ ಈಕೆ ಯಾರೋ – ಎಂದು ಅಲ್ಲಿ ಸೇರಿದ್ದ ರಾಜಕುಮಾರರು ನೋಡಿದರು. ॥ ೧೧೦ ॥ ಈಕೆಯು ದೇವತಾ ಸ್ತ್ರೀಯಲ್ಲ. ಏಕೆಂದರೆ ಈಕೆಯ ಕಣ್ಣರೆಪ್ಪೆಗಳು ಅಲುಗಾಡುತ್ತವೆ. ಭೂಲೋಕದಲ್ಲಿ ಹುಟ್ಟಿದ ಸ್ತ್ರೀಯರಲ್ಲಿ ಇಂಥಾ ಸೌಂದರ್ಯವಿರುವುದಿಲ್ಲ – ಎಂದು ಅಲ್ಲಿದ್ದ ನೋಟಕರು ಸೀತೆಯನ್ನು ನೋಡಿದರು. ॥ ೧೧೧ ॥ ಇದು ಬೇರೆ ಯಾವುದೂ ಅಲ್ಲ – ಮನ್ಮಥನ ಹೂವಿನ ಬಾಣ! ಮನ್ಮಥನ ಆನೆ! ಕಾಮುಚಕ್ರೇಶನ ಅಧಿದೇವತೆ! ಮನ್ಮಥನ ಕೈಯ ಕನ್ನಡಿ! ಮತ್ತು ಇದುವೇ ಮನ್ಮಥನ ಬಾಳಿನ ಮೊದಲು! ॥ ೧೧೨ ॥ ಇಹಲೋಕದ ಸುಖ-ಸಂತೋಷಗಳ ಮುಕ್ತಿಯು ಇದೇ! ರೂಪವನ್ನು ತಾಳಿ ಬಂದ ರತಿದೇವಿ ಇದೇ! ಮೋಹವೆಂಬ ಸಮುದ್ರದಲ್ಲಿ ಜನಿಸಿದ ಲಕ್ಷ್ಮಿ ಇದೇ! ಮೃಗಾಕ್ಷಿಯಾದ ಈಕೆಯೆ ಬೇಟೆಗೆ ಉಪಯೋಗಿಸುವ ಕಪಟ ಮೃಗ. ॥ ೧೧೩ ॥ ಯೋಚಿಸಿದರೆ ಇವಳ ರೂಪವೂ, ಲಾಲಿತ್ಯವೂ, ಇವಳ ಚೆಲುವೂ, ಇವಳ ಬೆಡಗಿನ ಹೆಚ್ಚಳವೂ, ಇವಳ ಅಂಗಗಳ ಸೌಂದರ್ಯವೂ ಈ ಲೋಕದ ಇತರ ಹೆಂಗುಸರಲ್ಲಿ ಇಲ್ಲ ॥ ೧೧೪ ॥ ಎಲ್ಲೈ ಚೇಳಿನಿಯೇ ಅಲ್ಲಿ ನೆರೆದ ನೋಟಕರು – ಈಕೆ ಸಮುದ್ರರಾಜನ ಮಗಳಾದ ಲಕ್ಷ್ಮಿಯೋ, ಮನ್ಮಥನ ಪತ್ನಿಯಾದ ರತಿಯೋ, ಬ್ರಹ್ಮನ

---

[1] ದೊಡಗೂಡಿಯೊಯ್ಯನಾ (ಗ ಚ). [2] ಸುಧೆಗಡಲೂಳಗುದಿಸಿ ದಂಗನೆಯೊ ಸುರಪನ । ಸುದತಿಯರೊಳಗಿವರಾರೆಂದು ನೋಡಿದ ರೊದವಿರ್ದ (ಗ ಚ.). [3]ನರಸುರನಾಗಸತಿಯೋ । ಇವರೊಳಗಾದೊಡಿಂತಪ್ಪ (ಕ) [4]ಅಂಗಜ ಪಂಚಶರವು (ಕ) [5]ಇದೆ ಕಾವನೋಡುವ ರನ್ನಗನ್ನಡಿ (ಗ) [6] ಸೌಖ್ಯದಾನಂದ (ಗ ಚ) [7] ಸಾಗರವ ಪೆರ್ಚಿಪ ಚಂದ್ರಲೇಖೆಯೊ । ಊಹಿಸಿದರು ನೃಪಸುತರು (ಕ.) [8] ೧೧೪ (ಕ ದಲ್ಲಿಲ್ಲ).೧೧೫ (ಗ ಚ ದಲ್ಲಿಲ್ಲ).

ಎಂದಿಂತು ನೋಡಿ[1] ನೋಟಕರು ನುಡಿಯುತಿರೆ[2] । ಲಂದವಳಾಳಿಯರುಗಳ ॥
ಸಂದಣಿಯೊಳು ಸ್ವಯಂವರ ಮಂಟಪಕಾಗಿ । ಬಂದಳು ಜಾನಕಿದೇವಿ[3] ॥ ೧೧೬ ॥

ಅಂತವಳನು ನೋಡುತಲ್ಲಲ್ಲಿ[4] ನೆರೆದ ಭೂ । ಕಾಂತರುಗಳು ತಮತಮಗೆ ॥
ಅಂತರಂಗದೊಳು ತಮ್ಮರ್ಥಿ[5]ದೇವರನಿಂತು । ಚಿಂತಿಸಿದರು ಪ್ರಿಯಕಾಂತೆ[6] ॥ ೧೧೭ ॥

ಕಟ್ಟಿಸುವೆನು ನಿನ್ನ[7] ನೊಸಲಿಗೆ ಹೊಸಹೊನ್ನ । ಪಟ್ಟವನೆನಗೆ ಜನಕನ ॥
ಪಟ್ಟದ ಸುತೆ ಸೋಲ್ತಡೆಂದಿಷ್ಟದೈವವ । ನೆಟ್ಟನಂದೋರ್ವ ಧ್ಯಾನಿಸಿದ ॥ ೧೧೮ ॥

ಮಾಡಿಸುವೆನು ನಿನ್ನ ಭವನದ ಬಾಗಿ । ಲ್ವಾಡವ ರತ್ನದಿಂದವಳು[8] ॥
ನೋಡಿದೊಡೆನ್ನನೆಂದಿಷ್ಟದೇವರನೋರ್ವ । ಬೇಡಿಕೊಂಡನು ಮನದೊಳಗೆ ॥ ೧೧೯ ॥

ಲಕ್ಕದ ಮೇಲೆಂಟು ಸಾವಿರ[9] ಹೊನ್ನನಾ । ನಿಕ್ಕಿ ನಿನ್ನಡಿಗಾಣ್ಬೆನೆಂದು ॥
ಕಕ್ಕಸಕುಚೆಗೆ ಮೋಹಿಸಿಯೋರ್ವ[10] ತನ್ನ ದೈ । ವಕ್ಕೆ ಮಾಡಿದ[11] ಹರಕೆಯನು ॥ ೧೨೦ ॥

ನಲ್ಲುಂಡಿಗೆಯ ಸೀಮೆಯೊಳು ಲಕ್ಕಸೀಮೆಯ । ಕಲ್ಲ ಹಾಕಿಪೆ ನಿನಗೆನಗೆ[12] ॥
ನಿಲ್ಲದವಳು ಸೋಲ್ತಡೆಂದಿಷ್ಟದೈವಕ್ಕೆ । ಸೊಲ್ಲಿತ್ತನೋರ್ವರಮಗನು[13] ॥ ೧೨೧ ॥

ನನ್ನಿ ನಿನ್ನಡಿಯ ಮೇಲಾಣೆ ಜಾನಕಿ ಸೋಲ್ತು । ಮನ್ನಿಸಿ ಮಾಲೆ ಸೂಡಿದೊಡೆ ॥
ರನ್ನದಿಂದಭಿಷೇಕವ ಮಾಳ್ಪೆನೆಂದೋರ್ವ । ತನ್ನ ದೇವರ ಜಪಿಸಿದನು ॥ ೧೨೨ ॥

---

ರಾಣಿಯಾದ ಶಾರದೆಯೋ, ಭೂಲೋಕದ ಸ್ತ್ರೀಯೋ, ಹೆಡೆ ಬಿದ್ದು ಹೋಗಿರುವ ನಾಗಿಣಿಯೋ, ದೇವಲೋಕದ ಸ್ತ್ರೀಯೋ – ಎಂದು ನೋಟಕರು ಆಕೆಯನ್ನು ಆಶ್ಚರ್ಯದಿಂದ ನೋಡಿದರು. ॥ ೧೧೫ ॥ ಹೀಗೆ ನೋಟಕರು ನೋಡಿ, ಮಾತಾಡುತ್ತಿರುವಾಗ, ಸೀತೆಯು ತನ್ನ ಸಖೀಜನರ ಗುಂಪಿನೊಡನೆ, ಸ್ವಯಂವರ ಮಂಟಪಕ್ಕೆ ಬಂದಳು ॥ ೧೧೬ ॥ ಎಲೈ ಚೇಳಿನಿಯೇ, ಅಂತು ಸೀತಾದೇವಿಯನ್ನು ಅಲ್ಲಿ ನೆರೆದ ರಾಜರುಗಳು ನೋಡುತ್ತ, ಆಕೆಯನ್ನು ವರಿಸುವ ಕುತೂಹಲದಿಂದ ತಂತಮ್ಮ ದೇವರನ್ನು ಮನಸ್ಸಿನಲ್ಲೇ ಹೀಗೆ ಧ್ಯಾನಿಸಿಕೊಂಡರು ॥ ೧೧೭ ॥ ಜನಕರಾಜನ ಪಟ್ಟದ ಮಗಳು ನನ್ನನ್ನು ವರಿಸಿದರೆ, ತನ್ನ ಇಷ್ಟದೇವತೆಯ ಹಣೆಗೆ ಹೊಸ ಚಿನ್ನದ ಪಟ್ಟವನ್ನು ಕಟ್ಟಿಸುವೆನು – ಎಂದು ಅವರಲ್ಲೊಬ್ಬನು ಧ್ಯಾನಿಸಿದನು ॥ ೧೧೮ ॥ ‘ಸೀತೆಯು ನನ್ನನ್ನು ನೋಡಿದಳಾದರೆ, ನಿನ್ನ ಆಲಯದ ಬಾಗಿಲುವಾಡಗಳನ್ನು ರತ್ನದಿಂದ ಮಾಡಿಸುವೆನು” ಎಂದು ಒಬ್ಬನು ತನ್ನ ಇಷ್ಟದೇವರನ್ನು ಮನಸ್ಸಿನಲ್ಲೇ ಪ್ರಾರ್ಥಿಸಿದನು ॥ ೧೧೯ ॥ ಇನ್ನೊಬ್ಬ ರಾಜಕುಮಾರನು ಜಾನಕಿಯಲ್ಲಿ ಮೋಹಗೊಂಡು, ಸೀತೆಯನ್ನು ಗೆದ್ದರೆ ನಾನು ಒಂದು ಲಕ್ಷದ ಎಂಟು ಸಾವಿರ ಹೊನ್ನನ್ನು ನಿನಗೆ ಸಮರ್ಪಿಸಿ ಪಾದದರ್ಶನ ಮಾಡಿಕೊಳ್ಳುವೆನು – ಎಂದು ತನ್ನ ದೇವರಿಗೆ ಹರಕೆ ಹೇಳಿಕೊಂಡನು. ॥ ೧೨೦ ॥ ಇನ್ನೋರ್ವ ಅರಸು ಮಗನು “ನನಗೆ ಸೀತೆಯು ವಶಳಾದರೆ ನಿನಗೆ ನಲ್ಲುಂಡಿಗೆಯ ಸೀಮೆಯಲ್ಲಿ ಲಕ್ಷ ಸೀಮೆಯ ಕಲ್ಲನ್ನು ಹಾಕಿಸುವೆನು – ಎಂದು ತನ್ನ ಇಷ್ಟದೇವತೆಗೆ ವಾಗ್ದಾನ ಮಾಡಿದನು ॥ ೧೨೧ ॥ ಸೀತೆಯು ನನಗೆ ಸೋತು ಹೂಮಾಲೆಯನ್ನು ಹಾಕಿದರೆ, ನಿನಗೆ ರತ್ನಾಭಿಷೇಕವನ್ನು ಮಾಡುವೆನು, ಇದು ನಿಜ, ನಿನ್ನ ಪಾದದ ಆಣೆ – ಎಂದು ಒಬ್ಬನು ತನ್ನ ದೇವರನ್ನು ಧ್ಯಾನ

---

[1] ನುಡಿದು (ಗ ಚ) [2] ನೋಡುತಲಿರೆ (ಗ ಚ) [3] ಮಂಟಪವನು ಬಂದು ಪೊಕ್ಕಳು ಮೃಗನಯನೆ (ಗ ಚ) [4] ನೋಡುತಲ್ಲಿ (ಚ.) [5] ತಮ್ಮಿಷ್ಟ (ಗ ಚ) [6] ದಯಿತೆ (ಗ ಚ) [7] ಪಟ್ಟೆಯ ಸೀರೆಯು (ಕ) [8] ಮನದಣಿವಂತೆ ಪೂಜೆಯ । ಮಾಡಿಸುವೆನು ಜಾನಕಿಯು (ಕ) [9] ಸಾಸಿರ ಗ ಚ ) [10] ಕುಚೆಯು ಮೋಹಿಸೆಯೋರ್ವ (ಗ) [11] ತೆಗೆದ (ಗ ಚ) [12] ನಾ ನಿನಗೆ (ಚ) [13] ನೋರ್ವನ ಮಗನು (ಕ)

ಮುತ್ತಿನ ಪುಂಜವನಿಕ್ಕಿ ನಾ ಪಿಡಿಪೊ । ನ್ನಿತ್ತು ನಿನ್ನಡಿಗಾಣ್ಬೆನೆಂದು ॥
ತತ್ತರುಣಿಗೆ ಸೋಲ್ತಿಷ್ಟ ದೇವರನೋರ್ವ[1] । ಚಿತ್ತದೊಳಾರಾಧಿಸಿದನು ॥ ೧೨೩ ॥

ಆ ರಾಜಸುತೆ ಸೋಲ್ತಡೆ ತಿದ್ದಿಸುವೆ ನಿನ್ನ । ನೇ ರಾಣಿಯೊಳು ತಾನೆಂದು ॥
ಆ ರಾಜಸುತರೊಳಗಿಷ್ಟದೇವರನೋರ್ವ । ನಾರಾಧಿಸಿದನಂಬುಜಾಕ್ಷಿ ॥ ೧೨೪ ॥

ನಡೆಮುಡಿ[2] ಕಱಿಬೋನ ಕಳಸಕನ್ನಡಿ ಹೆ । ಜ್ಜೊಡರುವೆರಸಿ ನಿನ್ನ ಬಳಿಗೆ ॥
ನಡೆವೆನೆನಗೆ ಸೋಲ್ತಡವಳೆಂದು ದೇವರಿ । ಗೊಡಬಡಿಕೆಯ ಮಾತ ನುಡಿದ ॥ ೧೨೫ ॥

ಬೇಡದ ಮುನ್ನ ಜೋಳಿಗೆ[3]ಗಟ್ಟಿ ಕಳುಪುವ । ನಾಡ ಕೊಡುವೆ ಲಕ್ಕವರೆಯ ॥
ಸೂಡಿದೊಡವಳೆನಗಿಂದು ಮಾಲೆಯನೆಂದು । ಬೇಡಿಕೊಂಡೋರ್ವ ಧ್ಯಾನಿಸಿದ[4] ॥ ೧೨೬ ॥

ಆ ಜಾನಕಿ ಸೋಲ್ದೊಡೆ ನಾ ನೂಱೆಂಟು । ರಾಜೀವಗಳೊಳು ನಿನ್ನಡಿಯ ॥
ಪೂಜಿಪೆನೆಂದು ತನ್ನಧಿ[5]ದೇವರನೋರ್ವ । ರಾಜಕುಮಾರ ಜಾನಿಸಿದ ॥ ೧೨೭ ॥

ಮಾಣಿಕದೊಳು ತಿದ್ದಿಸುವೆ ನಿನ್ನ ನಿನ್ನ ಮೋ । ಲಾಣೆ ಜಾನಕಿ ಸೋಲ್ತೆನಗೆ ॥
ಪ್ರಾಣೇಶ್ವರಿಯಾದೊಡೆಂದು ದೇವರನೋರ್ವ । ಮಾಣದೆದೆಯೊಳು ಧ್ಯಾನಿಸಿದ[6] ॥ ೧೨೮ ॥

ಶತಪತ್ರ ಶತಸಹಸ್ರದೊಳು ಪೂಜಿಪೆ ನಿನ್ನ । ನತಿಭಕ್ತಿಯಿಂದ ಜನಕನ ॥
ಸುತೆ ಸೋಲ್ದೊಡೆನಗೆಂದಿಷ್ಟದೇವರನೋರ್ವ । ನುತಿಸಿದ[7]ನಂತರಂಗದೊಳು ॥ ೧೨೯ ॥

---

ಮಾಡಿದನು. ॥ ೧೨೨ ॥ ಆ ಸೀತೆಗೆ ಮನಸೋತ ಇನ್ನೊಬ್ಬನು ತನ್ನ ಇಷ್ಟದೇವರನ್ನು ಮನಸ್ಸಿನಲ್ಲೇ ಪೂಜಿಸುತ್ತ – "ನಿನಗೆ ಮುತ್ತಿನ ಒಂದು ಕಟ್ಟನ್ನೇ ಸಮರ್ಪಿಸಿ, ಹಿಡಿ ಹೊನ್ನನ್ನು ಕಾಣಿಕೆಕೊಟ್ಟು ನಿನ್ನ ಪಾದದರ್ಶನವನ್ನು ಮಾಡುವೆನು" - ಎಂದನು ॥ ೧೨೩ ॥ ಎಲೈ ಚೇಳಿನಿಯೇ, ಆ ರಾಜಕುಮಾರರಲ್ಲಿ ಇನ್ನೊಬ್ಬನು – "ಆ ರಾಜಕುಮಾರಿ ನನಗೆ ವಶಳಾದರೆ, ಆಕೆಯಿಂದಲೇ ನಿನ್ನನ್ನು ತಿದ್ದಿಸಿ, ಸೌಂದರ್ಯವನ್ನುಂಟುಮಾಡುವೆನು" ಎಂದು ತನ್ನ ಇಷ್ಟದೇವತೆಯನ್ನು ಆರಾಧಿಸಿ ಕೊಂಡನು. ॥ ೧೨೪ ॥ "ಅವಳು ನನಗೆ ವಶಳಾದರೆ, ನಾನು ನಡೆಮುಡಿ, ನೈವೇದ್ಯ, ಕಲಶ, ಕನ್ನಡಿ, ದೊಡ್ಡ ದೀಪಗಳನ್ನು ತೆಗೆದುಕೊಂಡು ನಿನ್ನನ್ನು ಪೂಜಿಸಲು ಬರುವೆನು" ಎಂದು ಒಬ್ಬನು ತನ್ನ ದೇವರಿಗೆ ಒಡಂಬಡಿಕೆಯ ಮಾತನ್ನಾಡಿದನು. ॥ ೧೨೫ ॥ "ಈ ದಿವಸ ಸೀತೆಯು ನನಗೆ ಮಾಲೆಯನ್ನು ಹಾಕಿದರೆ, ಕೇಳುವುದಕ್ಕೆ ಮೊದಲಾಗಿಯೇ ಧನಧಾನ್ಯಗಳನ್ನು ಗಂಟುಕಟ್ಟಿ ಕಳುಹಿಸತಕ್ಕಂತಹ ಒಂದು ಲಕ್ಷ ವರೆಯ ಭೂಮಿಯನ್ನು ನಿನಗೆ ಉಂಬಳಿಯಾಗಿ ಕೊಡುವೆನು" ಎಂದು ಒಬ್ಬ ರಾಜಕುಮಾರನು ತನ್ನ ದೇವರನ್ನು ಬೇಡಿಕೊಂಡು, ಧ್ಯಾನಮಾಡಿದನು. ॥ ೧೨೬ ॥ "ಜನಕರಾಯನ ಮಗಳು ನನಗೆ ವಶಳಾದರೆ ನಾನು ನೂರೆಂಟು ತಾವರೆ ಹೂಗಳಿಂದ ನಿನ್ನ ಪಾದಪೂಜೆಯನ್ನು ಮಾಡುವೆನು" ಎಂದು ಒಬ್ಬ ರಾಜಕುಮಾರನು ತನ್ನ ಅಧಿದೇವತೆಯನ್ನು ಧ್ಯಾನಿಸಿಕೊಂಡನು. ॥ ೧೨೭ ॥ ಜಾನಕಿಯು ನನಗೆ ಸೋತು ನನ್ನ ಪ್ರಾಣದೊಡತಿಯಾದರೆ ನಿನ್ನಾಣೆ ಯಾಗಿಯೂ ನಾನು ನಿನಗೆ ಕೊಡಬೇಕಾದುದನ್ನೆಲ್ಲಾ ಮಾಣಿಕ್ಯರೂಪದಲ್ಲೇ ಸಲ್ಲಿಸುವೆನು – ಎಂದು ಒಬ್ಬನು ತನ್ನ ದೇವರನ್ನು ಮನಸ್ಸಿನಲ್ಲೇ ಸ್ಮರಿಸಿಕೊಂಡನು. ॥ ೧೨೮ ॥ ಜನಕನ ಮಗಳು ನನ್ನನ್ನು ವರಿಸಿದರೆ ನಾನು ಬಹಳ ಭಕ್ತಿಯಿಂದ ನೂರುಸಾವಿರ

---

[1] ದೈವವನಿಂತು (ಗ) ದೇವರನಿಂತು (ಚ). [2] ಮದಿ (ಗ). [3] ಜಾಳಿಗೆ (ಕ). [4] ಜಾನಿಸಿದ (ಗ ಚ) [5] ತನ್ನಿಷ್ಟ (ಚ). [6] ಜಾನಿಸಿದ (ಗ ಚ) [7] ಸ್ತುತಿಸಿದ (ಗ). ತುತಿಸಿದ (ಚ). ೧೨೭ನೇ ಪದ್ಯ ಕ ದಲ್ಲಿಲ್ಲ

ಸಾವಿರ ಹೇಮಸುಮನದಿಂದ ನಿನ್ನಡಿ । ದಾವರೆಯರ್ಚಿಪೆನೆಂದು ॥
ಆ ವಿಧುವದನೆಗೆ ಭ್ರಮಿಸಿಯೊರ್ವನು ಕಾಮ । ದೇವರನಾರಾಧಿಸಿದನು ॥ ೧೩೦ ॥

ಎಂದಿಂತು ತಮ್ಮ ದೇವರುಗಳನಾ ನೃಪ । ನಂದನರೊಳಗೆ ಕೆಲಬರು ॥
ಅಂದು ಧ್ಯಾನಿಸುತಿರ್ದರವಳ ಬಯಸಿಯರ । ವಿಂದದಳಾಕ್ಷಿ ಮತ್ತಲ್ಲಿ ॥ ೧೩೧ ॥

ಕೆಲರಂಜನವನಾಕರ್ಷಣ ವಿದ್ಯೆಯ । ಕೆಲರು ವಶ್ಯಾದಿ ತಿಲಕವ ॥
ಕೆಲರದೃಶ್ಯದ ಕೋಟಲೆಯೊಳಗಿರ್ದರಾ । ಲಲನೆಯ ಬಯಸಿ ಭೂಭುಜರು ॥ ೧೩೨ ॥

ಮಂತ್ರದಿಂ ಕೆಲರು ಕೆಲರು ತಮ್ಮ ನಿಜ ತಳ । ತಂತ್ರದಿಂ ಕೆಲರು ಕೆಲಬರು ॥
ಯಂತ್ರದಿಂದಿವಳ ಗೆಲುವೆವು ನಾವೆಂದೆಂಬ । ತಂತ್ರದೊಳಿರ್ದರರೆಬರು ॥ ೧೩೩ ॥

ಬಾರದ ವಸ್ತುವ ಬಯಸಿ ಕಂಗೆಡುವರು । ಕೂರದ ಪೆಣ್ಗೆ ಮೋಹಿಪರು ॥
ಸಾರ ನಿಸ್ಸಾರವೆಂಬುದನಱಿಯರು ಮೇಲ । ನಾರೈವರೆ ಕಾಮಿಜನರು ॥ ೧೩೪ ॥

ಮಱೆವರು ಮೆಯ್ಯ ಕಣ್ಬೇಟಕೆ ಮರುಳಾಗಿ । ತೊಱೆವರಸುವ ಸೋಲ್ತರೆಡೆಗೆ[1] ॥
ಅಱಿಯರು ಚೇತನಾಚೇತನವೆಂದೆಂಬ । ತೆಱನ ಮೋಹಿಗಳು ಬಡವರೇ ॥ ೧೩೫ ॥

ನುಡಿವರೋರ್ವರು ನುಡಿಯದ ಮಾತನಲ್ಲದ । ನಡೆಯ ನಡೆವರು ಲಜ್ಜೆಯನು ॥
ಬಿಡುವರೆಂದೆನೆ ಲೋಕದೊಳು ಮೋಹಿಜನಗಳ । ನಡೆನುಡಿ ಸತ್ಯವಲ್ಲಬಲೆ ॥ ೧೩೬ ॥

---

ತಾವರೆಹೂಗಳಿಂದ ನಿನ್ನನ್ನು ಪೂಜಿಸುವನು – ಎಂದು ಒಬ್ಬನು ಇಷ್ಟದೇವತೆಯನ್ನು ಮನಸ್ಸಿನಲ್ಲೇ ಸ್ತುತಿಸಿದನು ॥ ೧೨೯ ॥ ಚಂದ್ರಮುಖಿಯಾದ ಸೀತೆಯನ್ನು ವರಿಸುವ ಭ್ರಾಂತಿಯಿಂದ ಒಬ್ಬ ರಾಜಕುಮಾರನು ಮನ್ಮಥನನ್ನು ಪೂಜಿಸುತ್ತ "ನಿನ್ನ ಪಾದಕಮಲವನ್ನು ನಾನು ಸಾವಿರ ಚಿನ್ನದ ಹೂಗಳಿಂದ ಅರ್ಚಿಸುವೆನು" ಎಂದು ಹೇಳಿದನು ॥ ೧೩೦ ॥ ಎಲೈ ಚೇಳಿನಿಯೇ, ಆ ರಾಜಕುಮಾರರಲ್ಲಿ ಕೆಲವರು ಸೀತೆಯನ್ನು ಬಯಸಿ, ಹೀಗೆ ತಮ್ಮ ದೇವರುಗಳನ್ನು ಧ್ಯಾನಿಸುತ್ತಿದ್ದರು ಇನ್ನು ಕೆಲವರು ಬೇರೆ ಸಾಧನಗಳಲ್ಲಿ ಉದ್ಯುಕ್ತರಾಗಿದ್ದರು ॥ ೧೩೧ ॥ ಆ ಸ್ತ್ರೀಯನ್ನು ಬಯಸಿದ ಇತರ ಕೆಲವರು ಅಂಜನವನ್ನೂ, ಆಕರ್ಷಣ ವಿದ್ಯೆಗಳನ್ನೂ, ವಶೀಕರಣ ತಿಲಕವನ್ನೂ ಪ್ರಯೋಗಿಸುತ್ತಿದ್ದರು ಇನ್ನು ಕೆಲವರು ಮಾಯಾವಿದ್ಯೆಯ ತೊಂದರೆಗೂ ಒಳಗಾಗಿದ್ದರು ॥ ೧೩೨ ॥ ಕೆಲವರು ಮಂತ್ರಶಕ್ತಿಯಿಂದಲೂ ಕೆಲವರು ತಮ್ಮ ಕಪಟೋಪಾಯದಿಂದಲೂ ಕೆಲವರು ಯಂತ್ರ ಪ್ರಯೋಗದಿಂದಲೂ ಈಕೆಯನ್ನು ಗೆಲ್ಲುವೆವೆಂಬ ಉಪಾಯದಿಂದಿದ್ದರು. ॥ ೧೩೩ ॥ ಕಾಮುಕರಾದ ಜನರು ತಮ್ಮ ಕೈಸೇರದ ವಸ್ತುವನ್ನು ಬಯಸಿ ದಿಕ್ಕುಕಾಣದಾಗುವರು, ತಮ್ಮನ್ನು ಪ್ರೀತಿಸದಿರುವ ಹೆಣ್ಣಿಗಾಗಿ ಮೋಹಗೊಳ್ಳುವರು, ಯಾವುದು ಸಾರವುಳ್ಳುದು, ಯಾವುದು ಸಾರಹೀನವಾದುದು ಎಂಬುದನ್ನು ತಿಳಿಯರು ಅಂಥವರು ಶ್ರೇಷ್ಠವಾದುದನ್ನು ವಿಚಾರಿಸುವರೆ? ॥ ೧೩೪ ॥ ಮೋಹಕ್ಕೆ ಒಳಗಾದವರು ಕಣ್ಣಿನ ನೋಟದಿಂದ ಕಾಮವಶರಾಗಿ ದೇಹವನ್ನೇ ಮರೆಯುವರು, ಪ್ರಾಣವನ್ನೂ ತೊರೆದುಬಿಡುವರು ಇಂಥವರು ಚೇತನ - ಅಚೇತನವೆಂಬ ವಿಷಯವನ್ನೇ ತಿಳಿಯರು ॥ ೧೩೫ ॥ ಮೋಹಿಜನರು ಹೇಳಲುಬಾರದ ಮಾತುಗಳನ್ನು ಹೇಳುವರು ವರ್ತಿಸಬಾರದ ರೀತಿಯಲ್ಲಿ ಪ್ರವರ್ತಿಸುವರು, ನಾಚಿಕೆಯನ್ನು ತೊರೆಯುವರು ಹೀಗಿರುವಾಗ ಲೋಕದಲ್ಲಿ ಮೋಹಿಗಳಾದ ಜನರ ನಡತೆಯಾಗಲೀ

---

[1] ಸೋಲ್ತೆಡೆಗೆ (ಗ ಚ)

ಕೋಟಲೆಗೊಂಬರು ನೆನೆದ ವಸ್ತುಗೆ ಕಿವಿ । ವೇಟದ ಪೆಣ್ಗೆ ಮನದೊಳು ॥
ದೋಟಿಯನಿಕ್ಕುವರೆಂದೆನೆ ಕಾಮಿಗ । ಳಾಟ ಸದರವೆ ಲೋಕದೊಳು ॥ ೧೩೭ ॥

ತರುಣಿ ಕೇಳವಳ ನೋಡಿದ ನೋಟಕರ ಕಾಣು । ತರಲಂಬನಿದು ವೇಳೆಯೆಂದು ॥
ಅರಲ ಬಾಣಗಳಿಂದೆಸಲು ವಿರಹದಿಂ । ದುರುಳ್ವರದೇನ ಬಣ್ಣಿಪೆನು ॥ ೧೩೮ ॥

ಬಗ್ಗಿತು ಬಗೆ ಜಾಣು ಪೈಸರಿಸಿತು ಧೈರ್ಯ । ತಗ್ಗಿತು ತವಕ ತಳ್ಳಂಕ ॥
ಒಗ್ಗಾದವು[1] ಕುವರಿಯ ಮುಖಚಂದ್ರನ । ಮುಗ್ಗಿ ನೋಡಿದ ಮೋಹಿಗಳಿಗೆ ॥ ೧೩೯ ॥

ಪಾಡಳಿದುದು ಪಂಥ ಕೆಟ್ಟುದು ಮೊಱೆ ಧರ್ಮ । ಪೋದಿತು ಮನದಿಂದಿರದೆ ॥
ನಾಡೆ ನಿಟ್ಟಿಸಿದ ನೋಟಕರಿಗೆಂದೆನೆ ಕಡು । ಗಾಡಿಯನೇನೆಂಬೆನವಳ[2] ॥ ೧೪೦ ॥

ಮಱೆದರು ಮೆಯ್ಯ ಮನಸಿಜನೈಗೋಲಿಗೆ । ಗುಱಿಯಾದರು ರಾಜ್ಯವನು ॥
ತೊಱೆದರವಳ ಮುದ್ದು ಮೊಗವ ನಿಟ್ಟಿಸಿದ ನಾ । ಡೆಱೆಯರುಗಳ ನಂದನರು ॥ ೧೪೧ ॥

ಮನ್ನಣೆಗೆಟ್ಟರು ಮರುಳಾದರು ತಮ್ಮ । ಚೆನ್ನಿಗತನ ಜಾರಿದುದು ॥
ಚೆನ್ನೆಯ ನಿಟ್ಟಿಸಿ ಕಾವನಂಬಿಂ ನನ್ನಾ । ನನ್ನಿಯಾದರು[3] ನೋಟಕರು ॥ ೧೪೨ ॥

ಬರಹದ ಜನರೊ ಕೈಮಾಟದ ಮನುಜರೊ । ಮರವಾನಿಸರೊ ಮಾಡಿದವರ ॥
ಇರವಿನಂತುಲಿಯದೊಲೆಯದೆ ಮೆಯ್ಯಾಡದೆ । ನೆರವಿ ನೋಡಿದುದಂದವಳ ॥ ೧೪೩ ॥

---

ಮಾತಾಗಲೀ ಸತ್ಯವಲ್ಲ. ॥ ೧೩೬ ॥ ಎಲೈ ಚೇಳಿನಿಯೇ, ಕಾಮುಕ ಜನರು ತಾವು ನೆನೆಸಿಕೊಂಡಿರುವ ವಸ್ತುವಿಗಾಗಿ ತೊಂದರೆಪಡುವರು; ಹೆಣ್ಣಿನ ಸುದ್ದಿ ಕೇಳಿದ ಮಾತ್ರದಿಂದಲೇ ಕಾಮುಕತೆ ತಾಳಿ, ಆ ಹೆಣ್ಣಿಗೆ ದೋಟಿಯನ್ನಿಕ್ಕುವರು. ಹೀಗಿರುವಾಗ ಅಂತಹ ಕಾಮಿಜನರ ಆಟವು ಸಾಮಾನ್ಯವಲ್ಲ. ॥ ೧೩೭ ॥ ಎಲೈ ಚೇಳಿನಿಯೇ ಕೇಳು. ಆ ಜಾನಕಿಯನ್ನು ನೋಡಿದವರನ್ನು ಕಂಡು ಮನ್ಮಥನು ಇದು ತಕ್ಕ ಸಮಯವೆಂದು ತಿಳಿದು, ಪುಷ್ಪಬಾಣಗಳಿಂದ ಎಸೆಯಲು, ಅವರು ವಿರಹದ ದುಃಖಕ್ಕೆ ಒಳಗಾಗಿ ಬಿದ್ದುಹೋಗುವಂತಾದರು. ಅದನ್ನು ಏನೆಂದು ವರ್ಣಿಸಲಿ! ॥ ೧೩೮ ॥ ರಾಜಕುಮಾರಿಯ ಚಂದ್ರನಂತಹ ಮುಖವನ್ನು ನೋಡಿ ಮೋಹಗೊಂಡವರ ಮನಸ್ಸು ಕುಗ್ಗಿತು, ಬುದ್ಧಿಯು ಕಾಣ್ತೆಗೆಯಿತು. ಧೈರ್ಯವು ಕುಂದಿತು. ಅವಸರವೂ ಭಯವೂ ಒಟ್ಟಾದುವು ॥ ೧೩೯ ॥ ಆಕೆಯನ್ನು ನೋಡಿದವರ ಮನೋವ್ಯವಸ್ಥೆಯು ನಾಶವಾಯಿತು; ಪಂಥವು ಕೆಟ್ಟುಹೋಯಿತು; ನಂಟುತನ ಧರ್ಮವಿಚಾರಗಳು ಮನಸ್ಸಿನಿಂದ ಒಡನೆ ಓಡಿಹೋದುವು – ಎನ್ನುವಾಗ ಆಕೆಯ ಸೊಬಗನ್ನು ಏನೆನ್ನಲಿ! ॥ ೧೪೦ ॥ ಸೀತೆಯ ಮುದ್ದಾದ ಮುಖವನ್ನು ನೋಡಿದ ರಾಜಕುಮಾರರು ಮೈಮರೆತು ಹೋದರು; ಮನ್ಮಥನ ಪಂಚಬಾಣಗಳಿಗೆ ಗುರಿಯಾದರು; ತಮ್ಮ ರಾಜ್ಯವನ್ನೇ ಬಿಟ್ಟುಬಿಟ್ಟರು. ॥ ೧೪೧ ॥ ಆ ಸುಂದರಿಯಾದ ಸೀತೆಯನ್ನು ನೋಡಿದವರು ಮಾನಹೀನರಾದರು. ಹುಚ್ಚರಾದರು, ತಮ್ಮ ಚೆಲುವುತನವನ್ನು ಕಳೆದುಕೊಂಡರು. ಮಾತ್ರವಲ್ಲ ಮನ್ಮಥನ ಬಾಣಕ್ಕೆ ಗುರಿಯಾಗಿ ಜೂರುಜೂರಾದರು ॥ ೧೪೨ ॥ ಚಿತ್ರದಲ್ಲಿ ಬಂದಿರುವ ಜನರೋ, ಕೈಯಿಂದ ಮಾಡಿದ ಮನುಷ್ಯರೋ, ಮರದಿಂದ ರಚಿತವಾದ ಮನುಷ್ಯರೋ ಎಂಬಂತೆ ನಿರ್ಮಿತವಾದ ಜನರ ಸ್ಥಿತಿಯಂತೆ ಅಲ್ಲಿದ್ದ ಜನಸಮೂಹವು ಮಾತಾಡದೆ, ಅಲುಗಾಡದೆ, ಮೈಯನ್ನು ಚಲಿಸದೆ ಸೀತೆಯನ್ನು ನೋಡಿತು. ॥ ೧೪೩ ॥

---

[1] ಒಗ್ಗಾದವು (ಗ). [2] ಗಾಡಿಯ ನೆನೆದೇನನೆಂಬೆ (ಕ). [3] ಕಾವನಂಬಿಗೆ ಬೇಗ ನನ್ನಿಯಾದರು (ಗ).

ಈ ತೆರದಿಂದ ನೋಟಕರು ತೋಡುತಲಿರ । ಲಾ ತರಳಾಕ್ಷಿಯ ಬಳಿಗೆ ॥
ಆತುರದಿಂ ಬಂದು ಮಂತ್ರಿಯಿಂತೆಂದನಾ । ಭೂತಳಪತಿಯನುಮತಿಯಿಂ ॥ ೧೪೪ ॥

ದೇವಿ ಚಿತ್ತೈಸು[1] ಚಪ್ಪನ್ನದೇಶವನಾಳ್ವ । ಭೂವರರುಗಳೊಳು ನಿನ್ನ ॥
ಭಾವಕೆ ಬಂದವರಿಗೆ ಮಾಲೆಯ ಸೂಡು । ಭಾವೆ ಭಾವಜನಧಿದೇವಿ ॥ ೧೪೫ ॥

ನೋಡಿ ಮನಸು ಬರದವನಿಗೆ[2] ಮಾಲೆಯ । ಸೂಡಿ[3] ಮನಸು ಬಂದವನ[4] ॥
ನಾಡೆ ನಾಚ್ಚಿಸಿ ಬಾರೇಳೈವತ್ತಾರು । ನಾಡನಾಳುವ ರಾಜಸುತರ ॥ ೧೪೬ ॥

ಆ ಮಾತ ನುಡಿದ ಮಂತ್ರೀಶನೊಡನೆಯಾ । ಸಾಮಜಗಮನೆಯೈತರಲು ॥
ಭೂಮಿಪತಿಗಳ ಪೆಸರನಿಂತು ಕಂಚುಕಿ । ತಾಮಸವಿಲ್ಲದೊರೆದಳು ॥ ೧೪೭ ॥

ಸಕಲ ಬಲವ ಕೂಡಿ ಮಂತ್ರಿ ಬರಲು ಪಿಂದೆ । ಸುಕುಮಾರಿಯ ಮುಂಗಡೆಯೊಳು ॥
ಸಕಲ ನೃಪರುಗಳ ಪೆಸರ ಕಂಚುಕಿಯಾಗ[5] । ಪ್ರಕಟಿಸಿಕೊಳುತೈದಿದಳು[6] ॥ ೧೪೮ ॥

ಲಾಟ ಗುಜ್ಜರ ಗೌಳ ಹಮ್ಮೀರರಾಂಧ್ರ[7] ಕ । ರ್ಣಾಟ ತಿಗುಳ[8] ಕಾಂಭೋಜ ॥
ಭೋಟ[9] ತುರುಷ್ಕ ದೇಶಂಗಳನಿರದಾಳ್ವ । ಮೀಟನ ನೃಪರ ನೀ ನೋಡು ॥ ೧೪೯ ॥

ಅಂಗ ವಂಗ ಕರ್ಬರ[10] ಕಾಶ್ಮೀರ ಕಾ । ಳಿಂಗ[11] ಮಗಧದೇಶಗಳ ॥
ಹಿಂಗದಾಳುವ ಭೂಪರಿವರ ನಿರೀಕ್ಷಿಸು[12] । ತುಂಗಪಯೋಧರಯುಗಳೆ ॥ ೧೫೦ ॥

---

ಈ ರೀತಿಯಾಗಿ ನೋಟಕರು ನೋಡುತ್ತಿರುವಾಗ ಮಂತ್ರಿಯು ಜನಕರಾಜನ ಆಜ್ಞೆಯಂತೆ ಸೀತೆಯ ಬಳಿಗೆ ಆತುರದಿಂದ ಬಂದು ಹೀಗೆಂದನು ॥ ೧೪೪ ॥ ಎಲೈ ಮನ್ಮಥನ ಅಧಿದೇವತೆಯೆನಿಸುವ ಜಾನಕೀದೇವಿಯೇ, ಕೇಳು ಐವತ್ತಾರು ದೇಶಗಳನ್ನಾಳುವ ರಾಜರುಗಳಲ್ಲಿ ನಿನ್ನ ಮನಸ್ಸಿಗೆ ಬಂದವರಿಗೆ ನೀನು ಮಾಲೆಯನ್ನು ಹಾಕು ॥ ೧೪೫ ॥ ಐವತ್ತಾರು ದೇಶಗಳನ್ನಾಳುವ ರಾಜರ ಮಕ್ಕಳಲ್ಲಿ ನಿನಗೆ ಮನಸ್ಸು ಬಾರದವನನ್ನು ನೋಡಿ, ಮನಸ್ಸು ಬಂದವನಿಗೆ ಮಾತ್ರ ಹೂಮಾಲೆಯನ್ನು ಹಾಕಿ, ನಾಚಿಕೆಪಡಿಸಿ ಬಾ, ಏಳು – ಎಂದು ಮಂತ್ರಿ ಹೇಳಿದನು ॥ ೧೪೬ ॥ ಆನೆಯಂತೆ ಮೆಲ್ಲನೆ ನಡೆಯುವ ಸೀತೆಯು ಹೀಗೆ ಮಾತನ್ನಾಡಿದ ಮಂತ್ರೀಶನೊಡನ ಸಭೆಯಲ್ಲಿ ಬರುತ್ತಿದ್ದಳು ಆಗ ಕಂಚುಕಿಯು ತಡವಿಲ್ಲದೆ ರಾಜರ ಹೆಸರುಗಳನ್ನು ಹೀಗೆ ಹೇಳಿದಳು, ॥ ೧೪೭ ॥ ಸಮಸ್ತ ಬಲವನ್ನೂ ಕೂಡಿಕೊಂಡು ಹಿಂದಿನಿಂದ ಮಂತ್ರಿಯು ಬರುತ್ತಿದ್ದನು ಆಗ ಸೀತೆಯ ಮುಂದುಗಡೆಯಲ್ಲಿ ಕಂಚುಕಿಯು ಸಮಸ್ತ ರಾಜರುಗಳ ಹೆಸರನ್ನು ಪ್ರಕಟಪಡಿಸುತ್ತಾ ತೆರಳಿದಳು ॥ ೧೪೮ ॥ ಲಾಟ, ಗುರ್ಜರ, ಗೌಳ, ಹಮ್ಮೀರ, ಆಂಧ್ರ, ಕರ್ಣಾಟ, ತಮಿಳ, ಕಾಂಭೋಜ, ಭೋಟ, ತುರುಕ-ಎಂಬ ದೇಶಗಳನ್ನು ಆಳುವ ವೀರರಾದ ರಾಜರು ಇಲ್ಲಿದ್ದಾರೆ ಇವರನ್ನು ನೀನು ನೋಡು ॥ ೧೪೯ ॥ ಎಲೈ ಉನ್ನತ ಕುಚಗಳುಳ್ಳ ಸೀತೆಯೇ, ಇಲ್ಲಿರುವ ಅಂಗ, ವಂಗ, ಕರ್ಬರ, ಕಾಶ್ಮೀರ, ಕಾಳಿಂಗ, ಮಗಧ – ಎಂಬ ದೇಶಗಳನ್ನಾಳುವ ರಾಜರನ್ನು ಚೆನ್ನಾಗಿ ನೋಡು ॥ ೧೫೦ ॥ ಎಲೈ ಎಳತಾದ ಬಾಳೆಯಂತಹ ತೊಡೆಯ ಸುಂದರಾಂಗಿಯೇ, ಮಾಳವ,

---

[1] ನೋಡೇಳು (ಗ) [2] ಬಾರದವನಿಗೆ (ಗ) [3] ಸೂಡು (ಗ) [4] ಬಂದವರ (ಗ) [5] ಕಂಚುಕಿಯಿಂತು (ಚ) [6] ಪ್ರಕಟಿಸಿದಳು ಕೇಳಿಂತು (ಚ) [7] ಹಮ್ಮೀರಂಧ್ರ (ಗ) ಹಮ್ಮೀಲಾಂಧ್ರ (ಚ) [8] ತಿವುಳ (ಗ ಚ). [9] ಬೋಟ (ಗ ಚ) [10] ಕರ್ಪೂರ (ಗ) [11] ಕಳಿಂಗ (ಗ) [12] ಭೂವರರ ನೀನೀಕ್ಷಿಸು (ಚ)

ಮಾಳವ ಮಲೆಯಾಳ ತಿವುಳ ಕೊಂಕಣ ನೇ । ಪಾಳ ಕನ್ನೋಜ[1] ದೇಶಗಳ ॥
ಆಳುವರಸುಗಳಿವರ ನೋಡು ನೋಡೆಳೆ । ವಾಳೆತೊಡೆಯ ಲಲಿತಾಂಗಿ ॥ ೧೫೧ ॥

ನೋಡಿವ ಹೂಣ ಹೊಯ್ಸಳ ಚೋಳ ಬರ್ಬರ ನೋಡು ದ್ರಾವಿಡ[2] ದೇಶಗಳ ॥
ನಾಡೆ ಪಾಲಿಪ ಭೂಪರಿವರೀಗ ಚೆನ್ನಾಗಿ[3] । ನೋಡು ನೋಡೆಳೆವೆಣ್ಗಳರಸಿ ॥ ೧೫೨ ॥

ಕುರುಜಾಂಗಣ ಸಿಂಧು ಸಿಂಹಣ[4] ಕೌಶಲ । ವರ ಪಾಂಚಾಲ ಪಾರಸಿಕ ॥
ತರಳಾಕ್ಷಿ ಪಾಂಡ್ಯದೇಶಂಗಳನಿರದಾಳ್ವ । ನರನಾಥರಿವರ ನೀ ನೋಡು ॥ ೧೫೩ ॥

ಇಂತವರೆಲ್ಲರ[5] ಪೆಸರ ಪೇಳಿದೊಡಾ । ಕಾಂತೆ ನೋಡಿದುದಿಲ್ಲವವಳ[6] ॥
ಅಂತರಂಗವನರಿದೋರ್ವ ಕಂಚುಕಿ ಬಂ । ದಿಂತು ಬಿನ್ನಹವ ಮಾಡಿದಳು ॥ ೧೫೪ ॥

ವನಿತೆ ನಿರೀಕ್ಷಿಸು ವಿನಿತಾನಗರೇಶ[7] । ಜನಪತಿ ದಶರಥನೃಪನ ॥
ತನುಜ ಶ್ರೀರಾಮನಿವನನೆಂದು ಕಂಚುಕಿ । ಯನುವಡಿಸಿದಳವಳೊಡನೆ ॥ ೧೫೫ ॥

ಅಂಗನೆ ನಿಟ್ಟಿಸಯೋಧ್ಯಾಪುರನಾಥ[8] । ತುಂಗವಿಕ್ರಮ ದಶರಥನ ॥
ಅಂಗೋದ್ಭವನಂಗಜರೂಪನ ದಿ । ವ್ಯಾಂಗನಮಲ ಗುಣಯುತನು ॥ ೧೫೬ ॥

ಸಾಕೇತಪುರವನಾಳುವ ದಶರಥಗತಿ । ಬೇಕಾದ ಪ್ರಿಯನಂದನನು ॥
ಲೋಕೈಕವೀರ ಶ್ರೀರಾಮಚಂದ್ರಮನೆಂ । ದಾ ಕುವರಿಗೆ ತೋರಿಸಿದಳು[9] ॥ ೧೫೭ ॥

---

ಮಲೆಯಾಳ, ತಿವುಳ, ಕೊಂಕಣ, ನೇಪಾಳ, ಕನೋಜ – ಎಂಬ ದೇಶಗಳನ್ನಾಳುವ ಈ ಅರಸುಗಳನ್ನು ನೋಡು. ॥ ೧೫೧ ॥ ಎಲೈ ಎಳೆಯ ಹೆಣ್ಣುಗಳ ಒಡತಿಯೇ, ಇವನನ್ನು ನೋಡು ಇವನು ಹೂಣನು, ಇವನು ಹೊಯ್ಸಳನು, ಇವನು ಚೋಳನು, ಇವನು ಬರ್ಬರನು. ನೋಡು – ಇವನು ದ್ರಾವಿಡ ದೇಶದ ಅರಸನು. ಇವರನ್ನೆಲ್ಲಾ ನೀನು ಚೆನ್ನಾಗಿ ನೋಡು. ॥ ೧೫೨ ॥ ಎಲೈ ಚಂಚಲವಾದ ಕಣ್ಣಿನವಳೇ, ಕುರುಜಾಂಗಣ, ಸಿಂಧು, ಸಿಂಹಳ, ಕೌಶಲ, ಪಾಂಚಾಲ, ಪಾರಸಿಕ, ಪಾಂಡ್ಯ – ಎಂಬ ದೇಶಗಳನ್ನು ಆಳುವ ರಾಜರು ಇಲ್ಲಿರುವರು. ಇವರನ್ನು ನೀನು ನೋಡು. ॥ ೧೫೩ ॥ ಹೀಗೆ ಅವರೆಲ್ಲರ ಹೆಸರುಗಳನ್ನು ಹೇಳಿದರೂ ಆ ಸೀತೆಯು ಅವರೊಬ್ಬರನ್ನೂ ನೋಡಲಿಲ್ಲ. ಅವಳ ಮನಸ್ಸನ್ನು ತಿಳಿದ ಓರ್ವ ಕಂಚುಕಿಯು ಬಂದು ಅವಳಿಗೆ ಆಗ ಹೀಗೆಂದು ಬಿನ್ನೈಸಿದಳು. ॥ ೧೫೪ ॥ ಎಲೈ ವನಿತೆಯೇ ಇಲ್ಲಿ ನೋಡು. ವಿನೀತಾನಗರದ ಒಡೆಯನಾದ ದಶರಥರಾಜನ ಮಗನಾದ ಶ್ರೀರಾಮನೇ ಇವನು – ಎಂದು ಕಂಚುಕಿಯು ಅವಳಿಗೆ ತಿಳಿಸಿದಳು. ॥ ೧೫೫ ॥ ಎಲೈ ಸೀತೆಯೇ ನೋಡು. ಅಯೋಧ್ಯಾಪುರಕ್ಕೆ ಒಡೆಯನೂ, ಬಹಳ ಪರಾಕ್ರಮಿಯೂ ಆದ ದಶರಥನ ಮಗನೂ ಮನ್ಮಥ ಸ್ವರೂಪನೂ ದಿವ್ಯವಾದ ದೇಹವುಳ್ಳವನೂ ಸದ್ಗುಣವಂತನೂ ಆಗಿರುವವನು ಇವನು. ॥ ೧೫೬ ॥ ಸಾಕೇತ ಪಟ್ಟಣವನ್ನಾಳುವ ದಶರಥನಿಗೆ ಅತ್ಯಂತ ಪ್ರೀತಿಯ ಮಗನೂ ಲೋಕದಲ್ಲಿ ಒಬ್ಬನೇ ಎನಿಸಿದ ಪರಾಕ್ರಮಿಯೂ ಆದ ಶ್ರೀರಾಮಚಂದ್ರನೇ ಇವನು – ಎಂದು ಕಂಚುಕಿಯು ಆ ರಾಜಕುಮಾರಿಗೆ ತೋರಿಸಿದಳು. ॥ ೧೫೭ ॥ ಎಲೈ ಕುಮಾರಿಯೆ, ಕೌಶಲ

---

[1] ಕನ್ನೋಜ (ಗ). [2] ದ್ರಾವಿಡ (ಚ). [3] ಭೂಪಾಲಕರಿವರೀಗ (ಗ. ಚ) [4] ಸಿಂಗಾ (ಗ) [5] ಇಂತಿವರೆಲ್ಲರ (ಗ ಚ)
[6] ದಿಲ್ಲವವರ (ಗ) [7] ವಿನತಾ ನಗರೀಶ (ಗ. ಚ) ೧೫೫ ಉತ್ತರಾರ್ಧವೂ ೧೫೬ ಪೂರ್ವಾರ್ಧವೂ ಗ.ದಲ್ಲಿ ಪಾತವಾಗಿದೆ. [8] ನರನಾಥ (ಕ).
[9] ತೋರಿದಳು (ಗ ಚ.)

ಕುವರಿ ನೀ ನೋಡು ಕೌಶಲದೇಶವನಾ । ಳ್ವವನಿಪ ದಶರಥನೃಪನ ॥
ಕುವರನ ಭುವನ ವಿಕ್ರಮನುರು ಕೀರ್ತಿಯು । ದಿವಿಜವಿಭವ ಸಂಯುತನ ॥ ೧೫೮ ॥

ಮುಗುಳಂಬನ ಮುಂದುಗೆಡಿಪ ರೂಪಿನ ಸಂ । ಪಗೆಯ ನಗುವ ನಾಸಿಕದ ॥
ಹೊಗರೆದ್ದ ಹೊಸ ಹರೆಯದ ಬಲಭದ್ರನ । ನಗೆಗಣ್ಣ ನೀಱೆ[1] ನಿಟ್ಟಿಪುದು ॥ ೧೫೯ ॥

ನಳನಳಿಪೆಳೆಮೀಸೆ ನಳಿತೋಳು ಕುಡುವುರ್ಬು । ಪೊಳೆವ ಕದಪಿನ ಪೇರುರದ ॥
ಎಳವರೆಯದ ರಾಮಚಂದ್ರನಿವನ ನೋ । ಡೆಳೆದುಂಬಿಗುರುಳ ಲತಾಂಗಿ ॥ ೧೬೦ ॥

ಬಿಳಿಯ ತಾವರೆಯ ದಳದ[2] ನಟ್ಟನಡುವೆ ಕ । ಣ್ಗೊಳಿಸುವ ತುಂಬಿಯಂದದೊಳು[3] ॥
ತೊಳಪ ಕಂಗಳ ಬಲರಾಮನಿವನ ನೋ । ಡೆಳೆವೆಣ್ಗಳ ತಲೆವಣಿಯೆ ॥ ೧೬೧ ॥

ಹರೆಯ ಸೊಬಗು ರೂಪು ರೇಖೆ ಬೆಡಗು ಬಿಂಕ । ಸಿರಿಸಿಂಗರ[4] ಜಾಣ್ಮೆವಡೆದ ॥
ಸರಸಲಾವಣ್ಯದಂಗದ ಬಲಭದ್ರನ । ಸರಸಿಜವದನೆ ನೀ ನೋಡು ॥ ೧೬೨ ॥

ಎಂದು ನುಡಿದ ಕಂಚುಕಿಯ ಮಾತು ಕಿವಿವೊಗ । ಲಂದಿರದವನ[5] ನಿಟ್ಟಿಸಲು ॥
ಅಂದೊಯ್ಯನೆ ಸಾತ್ವಿಕೋದಯ ಹೃದಯದೊಳ್ । ನಿಂದುದು ಸೀತೆಗಬ್ಜಾಕ್ಷಿ ॥ ೧೬೩ ॥

ಭಾವಚಿತ್ರದ ಪುರುಷನ ಕಂಡು ಶ್ರೀಮತಿ । ಗಾವರಿಸಿತು[6] ಭವಸ್ಮರಣೆ ॥
ಭಾವಜತಾಪವಡೆದ ಭವಸ್ನೇಹವ । ದಾವ ಮನುಜರ ಬಿಟ್ಟಪುದು ॥ ೧೬೪ ॥

---

ದೇಶವನ್ನಾಳುವ ರಾಜನಾದ ದಶರಥನ ಕುಮಾರನಾದ, ಲೋಕದಲ್ಲಿ ಪರಾಕ್ರಮಿಯೆನಿಸಿದ, ಬಹಳ ಕೀರ್ತಿಶಾಲಿಯಾದ, ದೇವೇಂದ್ರನಂತೆ ವೈಭವಶಾಲಿಯಾದ ಈತನನ್ನು ನೋಡು ॥ ೧೫೮ ॥ ಎಲೈ ನಗೆಗಣ್ಣಿನ ಸುಂದರಿಯೇ, ಮನ್ಮಥನನ್ನು ಸೋಲಿಸತಕ್ಕ ಸೌಂದರ್ಯವುಳ್ಳ, ಸಂಪಗೆ ಮುಗುಳನ್ನು ಹೀನೈಸುವ ಮೂಗುಳ್ಳ, ಕಾಂತಿಯುತವಾಗಿ ತೋರುವ ಹೊಸ ಯೌವನವುಳ್ಳ ಬಲರಾಮನನ್ನು ನೋಡು. ॥ ೧೫೯ ॥ ಎಲೈ ಮರಿದುಂಬಿಯಂತೆ ಕಪ್ಪಾದ ಕೂದಲಿನವಳೇ, ಹೊಳೆಯುವ ಎಳಮೀಸೆ, ಸುಂದರವಾದ ಕೈ, ಬಾಗಿರುವ ಹುಬ್ಬು, ಕಾಂತಿಯಿಂದ ಕಂಗೊಳಿಸುವ ಕೆನ್ನೆ, ವಿಶಾಲವಾದ ಎದೆ, ಎಳೆಯ ಪ್ರಾಯ – ಇವುಗಳಿಂದ ಕೂಡಿರುವ ಈ ಶ್ರೀರಾಮಚಂದ್ರನನ್ನು ನೋಡು. ॥ ೧೬೦ ॥ ಎಲೈ ಎಳೆಹೆಂಗಳ ಶಿರೋರತ್ನದಂತಿರುವವಳೇ, ಬಿಳಿದಾದ ತಾವರೆಯ ಎಸಳಿನ ನಡುವೆ ಮನೋಹರವಾಗಿ ಕಾಣಿಸುವ ತುಂಬಿಯಂತೆ ಹೊಳೆವ ಕಣ್ಣುಗಳಿಂದ ಕೂಡಿದ ಈ ಬಲರಾಮನನ್ನು ನೋಡು ॥ ೧೬೧ ॥ ಎಲೈ ಕಮಲಮುಖಿಯೇ, ಪ್ರಾಯ, ಸೌಂದರ್ಯ, ರೂಪ, ರೇಖೆ, ಬೆಡಗು, ಅಭಿಮಾನ, ಕಾಂತಿ, ಶೃಂಗಾರ, ಬುದ್ಧಿಮತ್ತೆಗಳನ್ನು ಪಡೆದಿರುವವನೂ, ರಸಿಕತೆ ಲಾಲಿತ್ಯವುಳ್ಳವನೂ ಆದ ಬಲರಾಮನನ್ನು ನೀನು ನೋಡು. ॥ ೧೬೨ ॥ ಹೀಗೆ ಹೇಳಿದ ಕಂಚುಕಿಯ ಮಾತನ್ನು ಸೀತೆಯು ಕೇಳಿ ಶ್ರೀರಾಮನನ್ನು ನೋಡಿದಳು ಆಗ ಅವಳ ಹೃದಯದಲ್ಲಿ ಮೆಲ್ಲನೆ ಸಾತ್ವಿಕಭಾವವು ಉದಿಸಿ ನೆಲೆಗೊಂಡಿತು ॥ ೧೬೩ ॥ ಸೀತೆಯು ತನ್ನ ಭಾವನೆಯ ಚಿತ್ರದಲ್ಲಿ ಇಟ್ಟುಕೊಂಡಿದ್ದ ಪುರುಷನಾದ ಶ್ರೀರಾಮನನ್ನು ಪ್ರತ್ಯಕ್ಷವಾಗಿ ಕಂಡು, ಪೂರ್ವಜನ್ಮದ ಸ್ಮರಣೆಯುಂಟಾಯಿತು ಮನ್ಮಥತಾಪವನ್ನು ಪಡೆದಂತಹ ಜನ್ಮಾಂತರದ ಸ್ನೇಹವು ಯಾವ ಮನುಷ್ಯನನ್ನೂ ಬಿಡದು ॥ ೧೬೪ ॥

---

[1] ಬಾಲೆ (ಚ) [2] ನಾಳದ (ಗ) ದಾಳದ (ಚ) [3] ತುಂಬಿಯಂತೆಸೆವ (ಗ) [4] ಸಿಂಗರತೆ (ಗ) [5] ಕಿವಿಯೊಗಲಂದಿರದವನ (ಗ ಚ.)
[6] ಶ್ರೀಮತಿಗಾವರಿಸಲು (ಕ)

ಬರಹದ ಪುರುಷನ ಕಂಡೊಡಾ ತೆರನವ । ರಿರವನಿರದೆ ನಿಟ್ಟಿಸಿದ ॥
ತರಳಾಕ್ಷಿಯರು ಮೋಹಿಸುವುದು ಸೋಲ್ವುದ । ಚ್ಚರಿಯಲ್ಲ ಮೃಗಶಿಶುನಯನೆ ॥ ೧೬೫ ॥

ಹಿಂದಣ ಜನ್ಮಾಂತರದ ನೇಹ[1] ಕಿವಿವೇಟ । ದಿಂದಾದ ಸೋಲವವಳಿಗೆ ॥
ಸಂಧಿಸಲವಳವನಿಗೆ ಸೋಲ್ತಳೆನೆ ಮೋಹ । ದಿಂದಲಗ್ಗಳ[2]ವಾವುದಬಲೆ ॥ ೧೬೬ ॥

ಬಳಿಕಲಂದಾ ಸೀತೆ ಶ್ರೀರಾಮಚಂದ್ರಗೆ । ತಳುವದಿಕ್ಕಲು[3] ಮಾಲೆಯನು ॥
ಮೊಳಗಿದವಂದು ನಾನಾ ವಾದ್ಯಂಗಳು । ಇಳೆ ಘೂರ್ಣಿಸುವಂದದೊಳು ॥ ೧೬೭ ॥

ಮಱೆಯೇಕೆ[4] ಪರಮಗೆ ದಶರಥಗಲ್ಲದಾ । ಗೆಱಗದ ರಾಮಚಂದ್ರಮನ ॥
ಎಱಗಿಸಿದುದು ಸೀತೆಯಾಸೆ ನಿಮ್ಮಾಸೆಗೆ[5] । ಯೆಱಗದರಾರಂಬುಜಾಕ್ಷಿ ॥ ೧೬೮ ॥

ಮೋಸ ಬಂದಪುದೆಂದು ಜನಕ ಭೂಪಾಲನ । ಲೇಸಿನ ಸುಭಟರೈತಂದು ॥
ಓಸರಿಸದೆ ಬಂದು ಬಳಸಿಕೊಂಡುದು ಬಲ । ಸಾಸಿಗ ಶ್ರೀರಾಮನನು[6] ॥ ೧೬೯ ॥

ಆ ಸೀತೆ ಮಾಲೆಯ ಧರಿಸಲು ಜನಕ ಭೂ । ಮೀಶನ ಬಲ ಸುತ್ತುವರಲು[7] ॥
ಆ ಸುಕುಮಾರರುಗಳಿಗೆ ಮನದೊಳು ನಿ । ರಾಸೆಯಾದುದು ಮೃಗನಯನೆ ॥ ೧೭೦ ॥

[8]ಅಂದು ಶ್ರೀರಾಮಗೆ ಸೀತೆ ಮಾಲೆಯ ಹಾಕ । ಲಂದು ಜನಕನನುಮತದಿ ॥
ತಂದು ಪಿಡಿಯಲು ಪಲ್ಲಕ್ಕಿಯೇರಲು ಮುಂದ । ದಿಂದಲ್ಲಿಂದ ಸಾಗಿದರು ॥ ೧೭೧ ॥

---

ಚಿತ್ರದ ಪುರುಷನನ್ನು ಕಂಡೊಡನೆಯೇ ಮೋಹಗೊಳ್ಳತಕ್ಕ ಹೆಂಗುಸರು ಅಂತಹ ಪುರುಷನನ್ನು ಪ್ರತ್ಯಕ್ಷ ಕಂಡಾಗ ಮೋಹಗೊಂಡು ಸೋಲುವುದು ಆಶ್ಚರ್ಯವಲ್ಲ. ॥ ೧೬೫ ॥ ಸೀತೆಯು ಹಿಂದಿನ ಜನ್ಮಾಂತರದ ಸ್ನೇಹದಿಂದಲೂ, ವಾರ್ತೆ ಕೇಳಿದುದರಿಂದುಂಟಾದ ಮೋಹದಿಂದಲೂ, ಸೋಲವುಂಟಾಗಿ ರಾಮನಿಗೆ ಸೋತಳು. ಹೀಗಿರುವಾಗ ಎಲೈ ಚೇಳಿನಿಯೇ ಮೋಹದಿಂದ ಶ್ರೇಷ್ಠವೆನಿಸುವಂಥದು ಯಾವುದಿದೆ? ॥ ೧೬೬ ॥ ಆ ಮೇಲೆ ಸೀತೆಯು ತಡಮಾಡದೆ ಶ್ರೀರಾಮನಿಗೆ ಮಾಲೆಯನ್ನಿಕ್ಕಿದಳು. ಆಗ ಭೂಮಂಡಲವೇ ಚಬ್ಬಾಯಮಾನವಾಗುವಂತೆ ಹಲವಾರು ಮಂಗಳವಾದ್ಯಗಳು ಮೊಳಗಿದವು. ॥ ೧೬೭ ॥ ಪರಮ ಜಿನೇಶ್ವರನಿಗೂ, ತಂದೆಯಾದ ದಶರಥನಿಗೂ ಮಾತ್ರವೇ ಎರಗತಕ್ಕ ಶ್ರೀರಾಮಚಂದ್ರನನ್ನು ಸೀತೆಯ ಆಸೆಯು ಎರಗಿಸಿಬಿಟ್ಟಿತು. ಹೀಗಿರುವಾಗ ಎಲೈ ಚೇಳಿನಿಯೇ ನಿಮ್ಮ (ಹೆಂಗುಸರ) ಆಸೆಗೆ ವಶರಾಗದವರು ಯಾರು? ॥ ೧೬೮ ॥ ಸೀತೆಯು ರಾಮನನ್ನು ವರಿಸಿದೊಡನೆ, ಅಲ್ಲಿದ್ದ ಇತರ ರಾಜರಿಂದ ರಾಮನಿಗೆ ತೊಂದರೆ ಬರಬಹುದೆಂದು ಜನಕರಾಜನ ಸೈನಿಕರು ಹಿಂಜರಿಯದೆ ಅಲ್ಲಿಗೆ ಬಂದು ಸಾಹಸಿಯಾದ ಶ್ರೀರಾಮನನ್ನು ಸುತ್ತುವರಿದು ನಿಂತರು. ॥ ೧೬೯ ॥ ಆ ಸೀತೆಯು ಶ್ರೀರಾಮನಿಗೆ ಮಾಲೆಹಾಕಲು, ಜನಕರಾಜನ ಸೈನ್ಯವು ಆವರಿಸಿ ನಿಲ್ಲಲು ಅಲ್ಲಿದ್ದ ಇತರ ರಾಜಕುಮಾರರ ಮನಸ್ಸಿನಲ್ಲಿ ನಿರಾಶೆಯುಂಟಾಯಿತು ॥ ೧೭೦ ॥ ಶ್ರೀರಾಮನಿಗೆ ಸೀತೆ ಮಾಲೆಯನ್ನು ಹಾಕಲು, ಜನಕನ ಆಜ್ಞೆಯಂತೆ

---

[1] ಜನ್ಮದ ಸ್ನೇಹವ (ಗ ಚ). [2] ದಿಂದವಗ್ಗಳ (ಚ) [3] ತಳುವದಿಕ್ಕಿದಳು (ಗ). [4] × (ಗ). [5] ಯಾಸೆ ಯವಗೆ (ಗ). [6] ಒಬು ಮಾಸಾಳುಗಳು ಮನದೊಳಗೆ (ಗ)......ಮೂಱು ಲಕ್ಷ (ಚ). [7] ಆ ಶಶಿವವನೆಯವಗೆ ಮಾಲೆಯ ಸುವಿ । ರಾಸದಿಂ ಸೂಪಲ್ಲಿರ್ಪ (ಗ. ಚ.). [8] ೧೭೧ ಗದಲ್ಲಿಲ್ಲ. ಅದಕ್ಕೆ ಸ್ಥಾನಿಯಾಗಿ ಕೆಳಗಿನ ಪದ್ಯವಿದೆ—

ಅಂದಾ ಶ್ರೀರಾಮಗೆ ಸೀತೆ ಮಾಲೆಯ । ತಂದಿಕ್ಕಲಾ ಸ್ವಯಂಬರಕೆ ॥
ಒಂದರಸುಗಳ ವದನ ಕಂದಿ ಮನದೊಳು । ನೊಂದಲ್ಲಿಂದ ಸಾಗಿದರು ॥ ೧೭೧ ॥

ಕಟ್ಟಿಗೆಯವರ ಕೂಗಾಟದಿಂ ನೋಡಲಂ । ದಿಟ್ಟಣಿಸಿದ ಮಂದಿಗಳ[1] ॥
ದಟ್ಟಿಸಿ ಹಿಂದಿಕ್ಕಿ ಭೋರೆಂಬ ವಾದ್ಯದಿ । ಪಟ್ಟಣ ದೆಸೆಗೆ ನಡೆದರು[2] ॥ ೧೭೨ ॥

ಕೋಟಿಭಟರು ಜನಕನ[3] ವ್ಯೆಗಾಪಿನ । ಮೀಟನ[4] ಸುಭಟರ್ಕೈತಂದು ॥
ನೋಟಕರನು ನೋಡಲೀಯದವರ ಕೂ । ಗಾಟ ಮಸಗಿದುದಬ್ಜಾಕ್ಷಿ[5] ॥ ೧೭೩ ॥

ಪರೆದುದಂದಲ್ಲಿ ನೆರೆದ ರಾಯರುಗಳ । ನೆರವಿ ತಂತಮ್ಮ ನಗರಿಗೆ[6] ॥
ಭರದೊಳು ಕಲ್ಲ ತಾಗಿದ ಮಂಟೆಯಂತಂ । ಬುರುಹದಳಾಯತ ನೇತ್ರೆ ॥ ೧೭೪ ॥

ಕಾಲಗವಮನದೊಳು ಭೂಲೋಲರೆದ್ದರು । ಮೇಲ ನೋಡದೆ ರೌದ್ರದೊಳು ॥
ಕಾಲಲಂದಿಗೆಯ ತೊಡವ ನೋಡದೆ ನೃಪ । ಜಾಲ ತೆರಳಿದುದಂದಿರದೆ ॥ ೧೭೫ ॥

ಸೆಱಗ ನಿಱುಕಿಕೊಳ್ಳುತ ಮುಂದೆ ಪೋಪಂತ[7] । [8]ತೆಱಹ ಬಿಡೆನುತ ಭೂಭುಜರು ॥
ತುಱುಗಿದ ಲಜ್ಜೆಯಿಂ ಬೆಳ್ವೆರಲೆಗೆ ಬಲು । ಗಱು ಪುಟ್ಟಿದಂತೆ ತೆರಳಿತು ॥ ೧೭೬ ॥

[9]ಹದ್ದಿನ ಬರವ ಕಾಣುತ ಕುಕ್ಕುಟ ಸರ್ಪ । ಯೆದ್ದೋಡುವಂತೆ ಭೂವರರು ॥
ಇದ್ದ ನೆಲೆಯ ಬಿಟ್ಟು ತೆರಳಿತು ತಮ್ಮಯ । ಹೊದ್ದಿದ ಬಲ ಸಹವಾಗಿ ॥ ೧೭೭ ॥

---

ಅಲ್ಲಿಗೆ ಪಲ್ಲಕಿಯನ್ನು ತಂದರು ರಾಮ ಸೀತೆಯರು ಆ ಪಲ್ಲಕಿಯನ್ನೇರಿ ಸಂತೋಷದಿಂದ ಅಲ್ಲಿಂದ ತೆರಳಿದರು ॥ ೧೭೧ ॥ ಆಜ್ಞಾಕಾರಕರ ಕೂಗಾಟವು ಕೇಳಿಸುತ್ತಿರಲು, ಅಲ್ಲಿ ನೋಡುವುದಕ್ಕಾಗಿ ಗುಂಪುಕೂಡಿದ ಜನರನ್ನು ಗದರಿಸಿ, ಹಿಂದೆ ನಿಲಿಸಿಕೊಂಡು ಭೋರೆಂದು ಶಬ್ದಮಾಡುತ್ತಿರುವ ವಾದ್ಯದೊಡನೆ ಅವರು ಪಟ್ಟಣದ ಕಡೆಗೆ ನಡೆದರು. ॥ ೧೭೨ ॥ ಎಲೈ ಚೆಲುವೆಯೇ, ಜನಕರಾಜನ ವ್ಯೆಗಾವಲಿನ ಪರಾಕ್ರಮಿಗಳಾದ ಅಸಂಖ್ಯಾತ ಸೈನಿಕರು ಬಂದು, ನೋಟಕ ಜನರನ್ನು ತಡೆಯುತ್ತಿರುವ ಕೂಗಾಟವು ಹೆಚ್ಚಾಯಿತು ॥ ೧೭೩ ॥ ಎಲೈ ಕಮಲದಂತೆ ವಿಶಾಲವಾದ ಕಣ್ಣಿನ ಚೆಲುವೆಯೇ, ಅಲ್ಲಿ ಸೇರಿದ ರಾಜರುಗಳ ಸಮೂಹವು ಕಲ್ಲತಾಗಿದ ಮಣ್ಣಹೆಂಟೆಯಂತೆ ವಿಘಟಿತರಾಗಿ ತಮ್ಮ ತಮ್ಮ ನಗರಗಳಿಗೆ ತೆರಳಿದರು. ॥ ೧೭೪ ॥ ಮುಂದೇನಾಗುವುದೆಂಬುದನ್ನು ಯೋಚಿಸದೆ ಸಿಟ್ಟಾಗಿ ಮೇಲಕ್ಕೆದ್ದ ರಾಜರುಗಳು, ಹೆದರಿದವರಾಗಿ ತಮ್ಮ ಕಾಲು ನಡೆಯುತ್ತಿರುವಾಗ ಕಾಲಿನ ಆಭರಣಗಳು ಒಂದಕ್ಕೊಂದು ತೊಡಕಿಕೊಳ್ಳುವುದನ್ನು ಕೂಡ ಲೆಕ್ಕಿಸದೆ, ಒಡನೆ ತೆರಳಿದರು ॥ ೧೭೫ ॥ ರಾಜರುಗಳು ತಮ್ಮ ವಸ್ತ್ರದ ಸೆರಗನ್ನು ನಿರುಕಿಸಿಕೊಂಡು ದಾರಿಗೆ ಅಡ್ಡವಾಗಿ ನಿಂತವರನ್ನು ಬದಿಗೆ ಸರಿಯುವಂತೆ ಹೇಳುತ್ತ ತಮಗೆ ತುಂಬಿಬಂದ ನಾಚಿಕೆಯನ್ನು ತಾಳಿಕೊಂಡು, ಬಿಳಿ ಜಿಂಕೆಗೆ ಗರಿಮೂಡಿದ ರೀತಿಯಲ್ಲಿ ಓಡಿಹೋದರು ॥ ೧೭೬ ॥ ಗಿಡುಗನು ಬರುವುದನ್ನು ಕಂಡು ಕೋಳಿ-ಹಾವುಗಳು ಎದ್ದು ಓಡಿಹೋಗುವ ರೀತಿಯಲ್ಲಿ ಅಲ್ಲಿದ್ದ ಭೂಪಾಲಕರು ತಮ್ಮ

---

[1] ಮಂದಿಯನು (ಗ ಚ) [2] ಒಡಿದೆಡ ಬಲಕೆ ನೂಕುವ ಜಗ । ಜಟ್ಟಿಗಳೆಸೆವರಂದಲ್ಲಿ (ಗ ಚ) [3] ಲೂಟಿಯೆದ್ದಪುದೆಂ ದವನ (ಗ ಚ) [4] ಮೇಟನ (ಚ) [5] ಮಸಗಿದುದಂದಿರದೆ (ಚ) [6] ನೆರೆದ ನೃಪಾಲರು ಸಿರವೆತ್ತಿ ಬಿರುಗಣ್ಣ । ತೆರೆದು ತಮ್ಮೊಳು ಯೋಚಿಸಿದರು (ಕ)
೧೭೫ರ ಸ್ಥಾನಿ ಚ ಪ್ರತಿಯ ಪದ್ಯ— ಕಾಲ ಕಡೆಯವ ಮೇಲಕೆ ನೂಕುತ ಸಾಣ್ಟೆ । ಮೇಲ ಮುಸುಕನಿಕ್ಕಿಕೊಳುತ ॥
ಕೀಲು ಸಡಿಲಿದ ತೊಡವ ನೋಡದೆ ನೃಪ । ಜಾಲ ತೆರಳಿದುದಂದಿರದೆ ॥ ೧೭೫ ॥
ಸಡಿಲಿದ ತೊಡವನು . (ಗ). [7] ಪೋಪರ (ಚ) [8] ದೊರೆಗಳು ಒಲಗೂಡಿ ತಮ್ಮ ॥ ಪುರಕೆ ತೆರಳಿತು ನಾನಾ ವಾದ್ಯದ ರವ । ಶರಧಿ ಘೂರ್ಣಿಸುವುತಾಗಿ (ಕ)
[9] ೧೭೭ ಪಾಠಾಂತರ— ಹದ್ದಿನ ಬರವ ಕಾಣುತ ಕೋಳಿಗಳ ಹಿಂ । ಡೆದ್ದೋಡುವಂತೆ ಭೂಭುಜರು ॥
ಬಿದ್ದ ಬಂಗಾರವ ಬಿಟ್ಟು ತೆರಳಿದರಂ । ದಿದ್ದರಿಕೆಯೊಳು ಮೃಗಾಕ್ಷಿ ॥ ೧೭೭ ॥ (ಗ)
[ಹಿಂಡು । ಯೆದ್ದು ಹೋಹಂತೆ] (ಚ)

ಸಿಗ್ಗುವಡೆದು[1] ಸಿಡಿಮಿಡಿಗೊಂಡು ಮನದೊಳು । ತಗ್ಗದ ಕೋಪದಿಂ ನೊಂದು ॥
ಬಗ್ಗಿದ ತಲೆಯನೆತ್ತದೆ ತೆರಳಿದರಂ । ದೊಗ್ಗೊಡೆದಾ ನೃಪವರರು[2] ॥ ೧೭೮ ॥

ವನಿತಾಮಣಿ ಸೀತೆಯನು ಬಯಸಿ ಬಂದ । ಮನುಜಾಧಿಪರು ತಮ್ಮ ತಮ್ಮ[3] ॥
ತನುಮನವಚನಕುಬ್ಬೆಗವಾಗಿ ನಡೆದರು । ಜನಕನ ನೆನೆವುತೆದೆಯಲಿ ॥ ೧೭೯ ॥

ಲಜ್ಜೆಯ ಪುಟ್ಟಿಸಿ ಮನದೊಳು ಮದನನ[4] । ಸಜ್ಜುಕಶರಕೀಡಾಗಿ ॥
ಗುಜ್ಜುನಡೆಯೊಳು ನೃಪಾಲರು ನಡೆದರು[5] । ಪಜ್ಜಳಿಸುವ ಪದ್ಮವದನೆ ॥ ೧೮೦ ॥

ಅತ್ತಲವರು ಪೋಗಲಿತ್ತ ಜನಕ ಭೂ । ಪೋತ್ತಮನಾ ಜಾನಕಿಯ ॥
ಉತ್ತಮ ಲಗ್ನದಿಂ ರಾಮಚಂದ್ರಗೆ ಮುದ । ವೆತ್ತು ಮದುವೆಮಾಡಲೆಂದು[6] ॥ ೧೮೧ ॥

ಆನೆಯನಡರಿ ದಂಪತಿಗಳನೊಡಗೊಂ । ಡಾ ನರನಾಥನು ತನ್ನ ॥
ಸೇನಾಚಕ್ರವೆರಸು ಬಂದು ಪೊಕ್ಕನಂ । ದಾನದಾ ಪುರವರಕಾಗಿ[7] ॥ ೧೮೨ ॥

ಆ ಜಾನಕಿಗೂಡಿ ಬಲಭದ್ರವೆರಸಿಯಂ । ತಾ ಜನಕನು ಲೀಲೆಯೊಳು[8] ॥
ಆ ಜನದುಲುಹಿಂದ ಬಂದು ಪೊಕ್ಕನು ಸುರ । ರಾಜ ವೈಭವದೊಡಗೂಡಿ ॥ ೧೮೩ ॥

ಆಕಲಂಕಚರಿತನಮಲ ಗುಣಸಂಯುತ । ಸುಕುಮಾರನು ದಿವ್ಯಾಂಗ ॥
ಮುಕುತಿವಲ್ಲಭ ಶ್ರೀರಾಮನು ಪಂಕಜ । ಸಖ ಸುಖದೊಳಗೊಪ್ಪಿದನು[9] ॥ ೧೮೪ ॥

---

ಸೇನಾಸಹಿತ ಇದ್ದ ಸ್ಥಳದಿಂದ ಎದ್ದು ತೆರಳಿದರು. ॥ ೧೭೭ ॥ ಆ ರಾಜರುಗಳು ನಾಚಿಕೆಪಟ್ಟು, ತಬ್ಬಿಬ್ಬಾಗಿ, ಮನಸ್ಸಿನಲ್ಲೇ ಹೆಚ್ಚಾದ ಕೋಪದಿಂದ ನೊಂದವರಾಗಿ, ಬಾಗಿಸಿದ ತಲೆಯನ್ನು ಮೇಲೆತ್ತದೆ ಗುಂಪಿನಿಂದ ಚದರಿ ಓಡಿಹೋದರು. ॥ ೧೭೮ ॥ ಸ್ತ್ರೀರತ್ನವೆನಿಸಿದ ಸೀತೆಯ ಮೇಲೆ ಬಯಕೆಯಿಟ್ಟು ಬಂದ ರಾಜರು ತಮ್ಮ ಮನೋವಾಕ್-ಕಾಯಗಳಲ್ಲಿ ಉದ್ವೇಗವನ್ನು ತಾಳಿ, ಮನಸ್ಸಿನಲ್ಲಿ ಜನಕನನ್ನೇ ನೆನೆದುಕೊಂಡು ತೆರಳಿದರು. ॥ ೧೭೯ ॥ ನಾಚಿಕೆಯನ್ನು ತಾಳಿ ಮನಸ್ಸಿನಲ್ಲಿ ಮನ್ಮಥನ ಬಾಣಕ್ಕೆ ಗುರಿಯಾಗಿ ಚಿಕ್ಕ ಚಿಕ್ಕ ಹೆಜ್ಜೆಗಳನ್ನಿಡುತ್ತ ರಾಜರು ತೆರಳಿದರು. ॥ ೧೮೦ ॥ ಆ ರಾಜಕುಮಾರರು ಹೀಗೆ ಅತ್ತ ತೆರಳಲು, ಇತ್ತ ರಾಜಶ್ರೇಷ್ಠನಾದ ಜನಕನು ಉತ್ತಮವಾದ ಮುಹೂರ್ತದಲ್ಲಿ ಜಾನಕಿಯನ್ನು ಶ್ರೀರಾಮನಿಗೆ ಮದುವೆ ಮಾಡಬೇಕೆಂದು ನಿರ್ಣಯಿಸಿದನು. ॥ ೧೮೧ ॥ ಜನಕರಾಜನು ಆ ದಂಪತಿಗಳಿನ್ನು ಒಡಗೊಂಡು ಆನೆಯ ಮೇಲೇರಿಕೊಂಡು ತನ್ನ ಸೈನ್ಯಸಹಿತವಾಗಿ ಬಂದು, ತಡವಿಲ್ಲದೆ ಪಟ್ಟಣವನ್ನು ಪ್ರವೇಶಿಸಿದನು. ॥ ೧೮೨ ॥ ಜಾನಕಿಯನ್ನೂ ಬಲರಾಮನನ್ನೂ ಕೂಡಿಕೊಂಡು ಜನಕರಾಜನು ಸಂತೋಷದಿಂದ ಬಂದು ದೇವೇಂದ್ರನ ವೈಭವದಿಂದ ಕೂಡಿ, ಜನರ ಮಾತುಗಳು ಕೇಳಿಸುತ್ತಿರಲು, ಪಟ್ಟಣವನ್ನು ಪ್ರವೇಶ ಮಾಡಿದನು. ॥ ೧೮೩ ॥ ಕಳಂಕವಿಲ್ಲದ ನಡತೆಯವನೂ, ನಿರ್ಮಲವಾದ ಗುಣಗಳಿಂದ ಕೂಡಿದ ಸುಕುಮಾರನೂ, ದಿವ್ಯವಾದ ದೇಹವುಳ್ಳವನೂ, ಮೋಕ್ಷವೆಂಬ ಸ್ತ್ರೀಯ ಒಡೆಯನೂ, ಸೂರ್ಯನಂತಿರುವವನೂ

---

[1] ಒಗ್ಗೊಡೆಯದ (ಕ). [2] ದೊಗ್ಗೊಡೆಯವೆ ತಮ್ಮ ಪುರಿಗೆ (ಕ) [3] ಮನವ ಮನ್ಮಥಗೆ ಪಟ್ಟಣದ ದಾರಿಗೆ ತಮ್ಮ ತನುವನೊಪ್ಪಿಸಿ ನೃಪವರರು (ಗ ಚ.) [4] ಪುಂಜ ನಾಣಿನ ಬೀಡು ಸಿಗ್ಗಿನ (ಗ ಚ ). [5] ಬಲುಹೀಯಾಳಿಕೆಯ । ಸೆಜ್ಜೆಯೆನಲು ನೃಪವರರು ತೆರಳಿದರು (ಗ ಚ.). [6] ಪತ್ತಿಸಿ ಪಾಲಕಿ ಶ್ರೀರಾಮ ಸಹವಾಗಿ । ಪತ್ತನಕಭಿಮುಖನಾದ (ಕ) [7] ಮಿಥಿಲಾಪುರವ (ಗ ಚ.) [8] ಆ ಜನಕಾತ್ಮಜೆ ಶ್ರೀರಾಮಚಂದ್ರನು, ಆ ಜನಪತಿಗಳ ನಡುವೆ (ಕ) [9] ಗುಣನಭಿನವ । ಮಕರಕೇತನ ಗುಣನಿಳಯ ॥ ಸುಕವಿಜನಾಂಬುಜದಿನಕರ ಪರವಧೂನಿಕರವಿಮುಖನೊಪ್ಪಿದನು (ಗ. ಚ.)

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೮೫ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದತಿ ಜಸವೆತ್ತುದು ಸಪ್ತಮಸಂಧಿ ॥ ೧೮೬ ॥

---

ಆದ ಶ್ರೀರಾಮನು ಸುಖದಿಂದಿದ್ದನು ॥ ೧೮೪ ॥ ಈ ದಿವಸ ನಾನು ಮುಂದಿನ ಕಥೆಗಳನ್ನು ತಿಳಿಸುವೆನೆಂದು ಹೇಳಿದಂತೆ ಮುಂದುವರಿಸಿಕೊಂಡು ಬರುತ್ತ ಇಲ್ಲಿಗೆ ಸಂಧಿಯು ಕೊನೆಗೊಂಡಿತು. ಎಲೈ ಮೃಗಾಕ್ಷಿಯಾದ ಚೇಳಿನಿಯೇ ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು ಕೇಳು – ಎಂದು ಶ್ರೇಣಿಕನು ಹೇಳಿದನು ॥ ೧೮೫ ॥ ಬ್ರಾಹ್ಮಣವಂಶಜನೂ, ಹೊಸ ಮನ್ಮಥನಂತೆ ಸುಂದರನೂ, ನಿರ್ಮಲವಾದ ಗುಣಗಳಿಂದ ಕೂಡಿದ ಜಿನೇಶ್ವರನ ಪಾದಕಮಲಗಳಿಗೆ ಎರಗತಕ್ಕ ಸೊಕ್ಕುದುಂಬಿಯಂತೆ ಇರುವವನೂ, ವಾಗ್ದೇವಿಯ ಸ್ವಚ್ಛವಾದ ಮುಖಕ್ಕೆ ಅತಿಶ್ರೇಷ್ಠವಾದ ಕನ್ನಡಿಯಂತೆ ಇರುವವನೂ, ಪವಿತ್ರವಾದ ನಡತೆಯುಳ್ಳವನೂ, ಸಚಿವನೂ ಆಗಿರುವ ದೇವಪ್ಪನು ಸಂತೋಷದಿಂದ ಹೇಳಿರತಕ್ಕ ರಾಮವಿಜಯದಲ್ಲಿ ಸೇರಿದಂತೆ ರಚಿತವಾಗಿರುವ ಏಳನೆಯ ಸಂಧಿ ಅತಿಪ್ರಸಿದ್ಧವಾಯಿತು. ॥ ೧೮೬ ॥

# ೮. ಸೀತೆಯ ಮದುವೆ

ಶ್ರೀದಿವಿಜೇಂದ್ರ ವಂದಿತ ಪಾದನ[1] ಮುಕ್ತಿ । ಶ್ರೀದಯಿತಾ[2]ವಲ್ಲಭನ ॥
ಮಾದೇವನ ಮುನಿಸುವ್ರತ ಜಿನಪನ । ಪಾದಪಂಕಜಕೆರಗುವೆನು ॥ ೧ ॥

ಮುಕುತಿವಲ್ಲಭ ಜಿನಭಕ್ತ ಧರ್ಮಾಸಕ್ತ । ಸುಕವಿ ಮನೋಹರಗಾತ್ರ[3] ॥
ಪ್ರಕಟಸುವರು ನಿನ್ನ ಕಲೆ ರೂಪು ಗಾಡಿಯ । ನಕಲಂಕ ಚಾರುಚರಿತ್ರ ॥ ೨ ॥

ವಿನಯದೊಳ್ ವಿತರಣಗುಣದೊಳು ಶೀಲದೊ । ಳ್ಜಿನ[4]ಭಕ್ತ ಮುನಿಗಣವಂದ್ಯ ॥
ಮನದನ್ನ ಮನೋಹರ ಪೇಳು ಮುಂಗಥೆಯನು । ಮನವೊಲಿದಾನು ಕೇಳುವೆನು[4] ॥ ೩ ॥

ಇಂದುವದನೆಯಿಂದೀವರಲೋಚನೆ । ಮಂದಗಮನೆ ಮಮತೆಯೊಳು ॥
ಮುಂದಣ ಕಥೆಯ ಪೇಳುವೆ ಕೇಳು ನೀನಾ । ನಂದದಿಂ ಜನಕ ಭೂವರನು[5] ॥ ೪ ॥

ಕರೆಸಿ ಜೋಯಿಸರ ಬರಿಸಿ ಬಂಧುಜನಗಳ[6] । ತರಿಸಿ ಮಂಗಲವಸ್ತುಗಳನು ॥
ಇರದೆ ಮದುವೆಯ ಮಂಟಪವಂದತಿ ಸಿಂ । ಗರವ ಮಾಡಿದರು ಲೀಲೆಯೊಳು[7] ॥ ೫ ॥

ಸಾಲುಮುತ್ತಿನ ಕುಚ್ಚು ಝಲ್ಲಿ ಪಟ್ಟಿಗಳಿಂದ । ಸಾಲುಸ್ವರ್ಣದ ಬೊಂಬೆಯಿಂದ ॥
ಸಾಲುಗೋಪುರ ಕನ್ನಡಿ ಕಳಸಗಳಿಂದ । ಲೀಲೆಯನಿರದೆ ಪುಟ್ಟಿಪುದು[8] ॥ ೬ ॥

---

ಶ್ರೀ ದೇವೇಂದ್ರನಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳವನೂ. ಮೋಕ್ಷ ಲಕ್ಷ್ಮೀದೇವಿಯ ರಮಣನೂ, ಮಹಾದೇವನೂ ಆದ ಮುನಿಸುವ್ರತ ಜಿನೇಶ್ವರನ ಪಾದಕಮಲಕ್ಕೆ ನಾನು ನಮಸ್ಕರಿಸುತ್ತೇನೆ ॥ ೧ ॥ ಚೇಳಿನಿಯು ಶ್ರೇಣಿಕನೊಡನೆ – ಎಲೈ ಮೋಕ್ಷಕ್ಕೆ ಒಡೆಯನಾದ ಜಿನನಲ್ಲಿ ಭಕ್ತಿಯುಳ್ಳವನೇ. ಧರ್ಮದಲ್ಲಿ ಪ್ರೀತಿಯುಳ್ಳವನೇ, ಸಂಕವಿಯೇ, ಮನೋಹರವಾದ ಶರೀರವುಳ್ಳವನೇ, ಕಳಂಕವಿಲ್ಲದೆ ಮನೋಹರವಾಗಿರುವ ನಡತೆಯುಳ್ಳವನೇ, ನಿನ್ನ ಕಲೆ-ರೂಪ-ಸೌಂದರ್ಯಗಳನ್ನು ಜನರು ವಿವರಿಸುತ್ತಿದ್ದಾರೆ. ॥ ೨ ॥ ವಿನಯ, ದಾನ, ಶೀಲ ಮುಂತಾದ ಗುಣಗಳುಳ್ಳವನೂ ಜಿನ ಭಕ್ತಿಯುಳ್ಳವನೂ ಮುನಿ ಸಮೂಹದಿಂದ ನಮಸ್ಕಾರಗೊಳ್ಳತಕ್ಕವನೂ ಆದ ಪ್ರಿಯನೇ, ಮನೋಹರನೇ. ಮುಂದಿನ ಕಥೆಯನ್ನು ಹೇಳು. ನಾನು ಮನಮೆಚ್ಚಿ ಕೇಳುವೆನು – ಎಂದು ಚೇಳಿನಿ ಹೇಳಿದಳು. ॥ ೩ ॥ ಆಗ ಶ್ರೇಣಿಕನು ಹೀಗೆಂದನು – ಚಂದ್ರನಂತಹ ಮುಖದ ನೈದಿಲೆಯಂತಹ ಕಣ್ಣಿನ ಮೆಲುನಡೆಯ ಚೇಳಿನಿಯೇ, ಮುಂದಿನ ಕಥೆಯನ್ನು ನಾನು ಪ್ರೀತಿಯಿಂದ ಹೇಳುವೆನು ನೀನು ಸಂತೋಷದಿಂದ ಕೇಳು. ॥ ೪ ॥ ಆ ಮೇಲೆ ಜನಕರಾಜನು ಜೋಯಿಸರನ್ನು ಕರೆಸಿದನು. ಬಂಧುಜನರನ್ನೆಲ್ಲ ಬರಮಾಡಿದನು. ಮಂಗಳಕರ ವಸ್ತುಗಳನ್ನು ತರಿಸಿದನು. ಒಡನೆಯೇ ಮದುವೆಯ ಮಂಟಪವನ್ನು ಬಹಳ ಶೃಂಗಾರವಾಗಿ ಸಿದ್ಧಗೊಳಿಸಿದರು. ॥ ೫ ॥ ಆ ಮದುವೆ ಮಂಟಪವು ನಾಲುನಾಲಾಗಿರುವ ಮುತ್ತಿನ ಗೊಂಚಲುಗಳಿಂದಲೂ, ಝಲ್ಲಿ ಪಟ್ಟಿಗಳಿಂದಲೂ, ಸಾಲಾಗಿರುವ ಚಿನ್ನದ ಬೊಂಬೆಗಳಿಂದಲೂ, ಸಾಲುಗೋಪುರಗಳ ಕನ್ನಡಿಕಲಶಗಳಿಂದಲೂ ಸಂತೋಷವನ್ನು

---

[1] × (ಗ ಚ). [2] ದೈವತಾ (ಕ) [3] ಸಕಲಾಗಮ ಕೋವಿದರು ಕೊನಬುಗಳು ಮಕರಾಂಕರೂಪಸನ್ನಿಭರು (ಗ) [4] ಭಕ್ತಿಯೊಳು [ನೇಮದೊಳು] । ಮನುಜರೊಳೆಣೆಯಿಲ್ಲವೆನೆ ಶ್ರೇಣಿಕ ನಿ । ನ್ನನುಪಮತೆನಿತೆನ್ನಬಹುದೆ (ಗ ಚ) [ಸಂಯಮದೊಳು]–ಚ). [5] ಶ್ರೀರಾಮಚಂದ್ರ ಜಾನಕಿಯ ಮದುವೆಯ (ಕ). [6] ಅರಸು ಜನಕ ಭೂಪಾಲನು ಧರೆಯೊಳು (ಕ). [7] ಮಂಟಪವ ಸಿಂಗರಿಸಿದ । ರುರು ಮುದದಿಂದ ಬೇಗದೊಳು (ಗ ಚ) [8] ನೀಲದ ನೆಲಗಟ್ಟಿಂದ ವಜ್ರದ ಪಟ್ಟ । ಸಾಲೆಗಳಿಂದ ಪಳುಕಿನ ॥ ನಾಲು ಬೊಂಬೆಗಳಿಂದಾ ಮಂಟಪ ಕಣ್ಗೆ । ಲೀಲೆಯನಿರದೆ ಪುಟ್ಟಿಪುದು ॥ ೬ ॥ (ಗ ಚ).

ಕಿನ್ನರಮಿಥುನಗಳಿಂದ ಕಿಂಪುರುಷರ । ಚಿನ್ನ ಪೊಂಬರಿಜುಗಳಿಂದ ॥
ಉನ್ನತವಹ ಸುರದಂಪತಿಗಳ ಬಲು । ರನ್ನಗರುಗಳಿಂದೆಸೆದುದು[1] ॥ ೭ ॥

ಮುತ್ತಿನ ರತ್ನದ ನೀಲದ ಹವಳದ । ಮೊತ್ತದ ಲಂಬಣಗಳನು ॥
ಸುತ್ತ ಬಳಸಿ ಕಟ್ಟಲಾ ಮಂಡಪವಂ । ದಿತ್ತುದು ಕಣ್ಗೆ ಕೌತುಕವ ॥ ೮ ॥

ಪಟ್ಟೆ ದೇವಾಂಗ ನಾನಾ ವಸ್ತ್ರಗಳ ಮೇಲು । ಕಟ್ಟಿಂದ ಬಲು ಝಲ್ಲಿಗಳನು ॥
ಕಟ್ಟಲಂದಾ ಮದುವೆಯ ಮಂಟಪದ ಸವು । ಕಟ್ಟ ನಾನೇನ ಬಣ್ಣಿಪೆನು[2] ॥ ೯ ॥

ಎಳೆಮುತ್ತಿನ ರಂಗವಲಿಯಿಂದ[3] ಪನಿನೀರ । ಚಳೆಯದಿಂ ಪರಿಮಳದಿಂದ ॥
ವಿಲಸಿತವಾದ ಪೂಮಾಲೆಗಳಿಂ ಕ । ಣ್ಗೊಳಿಸಿದುದಾ ಮಂಟಪವು ॥ ೧೦ ॥

ಚಾರುದುಕೂಲದ ವೈಜಯಂತಿಗಳು ಕ । ಣ್ಗೋರಂತೆಸೆದವಂದಲ್ಲಿ ॥
ತಾರಗೆಗಳನಲೆವುತ ತರಣಿಯ ಬಲು । ತೇರಿಗೆ ಕೊಡದೆ ದಾರಿಯನು ॥ ೧೧ ॥

ಮಗಮಗಿಪಗರು ಧೂಪದ ಪೊಗೆಗಳನೆಂಟಿ । ಸಗೆವಳಿನಿಚಯವೊಪ್ಪಿದುದು ॥
ಸೊಗಯಿಸಿ ತೋರ್ಪ ತಮಾಲದ ಲತೆಯೊಳ[4] । ಗೊಗೆದ ಪಲಗಳೆಂಬಂತೆ ॥ ೧೨ ॥

ಪರಿಣಯಮಂಟಪದೆಂಟು ದೆಸೆಯೊಳು ಪೂ । ವೆರಸಿದ ಪೊಂಬಾಳೆಗಳು ॥
ಕರಮೆಸೆದವು ಮಂಟಪದ ಚೆಲ್ವಿಕೆಗಂ । ದಿರದೆ ಕರವ ಮುಗಿದಂತೆ ॥ ೧೩ ॥

ಪಸಿಯಡಕೆಯ ಪಲಸಿನ ಮಾತುಳುಂಗದ । ಯೆಸೆವ ಚೆಂದೆಂಗು ಬಾಳೆಗಳ ॥
ಮಿಸುಪ ಜಂಬೀರ ನಾರಂಗ ಫಲಂಗಳ । ನಿಸರದಿಂದದು ರಾಜಿಸಿದುದು ॥ ೧೪ ॥

---

ಹುಟ್ಟಿಸುತ್ತಿತ್ತು ॥ ೬ ॥ ಕಿನ್ನರ ದಂಪತಿಗಳಿಂದಲೂ, ಕಿಂಪುರುಷರ ಚಿನ್ನದ ಆಕೃತಿಗಳಿಂದಲೂ, ಶ್ರೇಷ್ಠವೆನಿಸುವ ದೇವತಾ ದಂಪತಿಗಳ ರತ್ನದ ಗೊಂಬೆಗಳಿಂದಲೂ, ಆ ಮಂಟಪವು ಶೋಭಿಸಿತು ॥ ೭ ॥ ಮುತ್ತು, ರತ್ನ, ನೀಲ, ಹವಳಗಳ ಸಮೂಹವನ್ನು ಜೋಲುವಂತೆ ಸುತ್ತಲೂ ಕಟ್ಟಿದುದರಿಂದ ಆ ಮಂಟಪವು ಕಣ್ಣಿಗೆ ಆಶ್ಚರ್ಯವನ್ನುಂಟುಮಾಡುತ್ತಿತ್ತು ॥ ೮ ॥ ಪಟ್ಟೆವಸ್ತ್ರ ದೇವಾಂಗವಸ್ತ್ರ ಮುಂತಾದ ಹಲವಾರು ವಿಧದ ವಸ್ತ್ರಗಳ ಮೇಲುಕಟ್ಟಿನಿಂದಲೂ, ಬಹಳವಾದ ಝಲ್ಲಿಗಳನ್ನು ಕಟ್ಟಿದುದರಿಂದಲೂ ಚೆನ್ನಾಗಿ ಕಾಣುತ್ತಿದ್ದ ಆ ವಿವಾಹಮಂಟಪದ ಸುವ್ಯವಸ್ಥೆಯನ್ನು ನಾನು ಏನೆಂದು ವರ್ಣಿಸಲಿ! ॥ ೯ ॥ ಎಳೆಯ ಮುತ್ತಿನ ರಂಗೋಲೆಯಿಂದಲೂ, ಪನ್ನೀರಿನ ಸೇಚನೆಯಿಂದಲೂ ಸುವಾಸನೆಯಿಂದ ಶೋಭಿಸುವ ಹೂಮಾಲೆಗಳಿಂದಲೂ ಆ ಮಂಟಪವು ಮನೋಹರವಾಗಿದ್ದಿತು ॥ ೧೦ ॥ ಮನೋಹರವಾದ ರೇಶ್ಮೆಯ ಪತಾಕೆಗಳು ಅಲ್ಲಿ ಕಣ್ಣಿಗೆ ಒಂದೇ ಸಮನೆ ಶೋಭಿಸುತ್ತಿದ್ದುವು ಅವು ನಕ್ಷತ್ರಗಳನ್ನು ಕೂಡ ಅಡ್ಡಗಟ್ಟುತ್ತಿದ್ದು ಸೂರ್ಯನ ರಥಸಂಚಾರಕ್ಕೆ ದಾರಿ ಕೊಡದಿರುವ ರೀತಿಯಲ್ಲಿ ಕಾಣಿಸುತ್ತಿದ್ದುವು. ॥ ೧೧ ॥ ಮಗಮಗಿಸುವ ಅಗರು ಧೂಪಗಳ ಹೊಗೆಯನ್ನು ಸೇವಿಸಿ ತುಂಬಿಗಳು ಮೇಲಕ್ಕೆ ಏಳುತ್ತಿದ್ದುವು ಆಗ ಅವು ಚೆಲುವಾದ ತಮಾಲದ ಬಳ್ಳಿಯ ಪಲಗಳಂತೆ ಕಾಣುತ್ತಿದ್ದುವು ॥ ೧೨ ॥ ವಿವಾಹಮಂಟಪದ ಎಂಟು ದಿಕ್ಕುಗಳಲ್ಲಿ ಹೂವಿನಿಂದ ಕೂಡಿದ ಹೊಂಬಾಳೆಗಳು ಮಂಟಪದ ಚೆಲುವಿಕೆಗೆ ಕೈಮುಗಿಯುತ್ತಿರುವಂತೆ ಚೆನ್ನಾಗಿ ಶೋಭಿಸುತ್ತಿದ್ದುವು ॥ ೧೩ ॥ ಆ ಮದುವೆಯ ಮಂಟಪವು ಹಸಿ ಅಡಕೆಯ ಗೊನೆಯಿಂದಲೂ

---

[1] ರನ್ನೆಯರಿಂದತಿ ಮಿಗಿಲು ॥ ಪನ್ನಿರೆದುದು ಪುರಜನ ಪರಿಜನ ತಮ್ಮ ಚೆನ್ನೇರು ಸಹಮಾಗಿ ಬಂದು (ಕ) [2] ಪೇಳುವೆನು (ಗ). [3] ರಂಗವಲೆಯಿಂದ (ಗ) [4] ತಮಾಲ ಲತೆಗಳೊಳ (ಗ)

ಕಳಸ ಕನ್ನಡಿ ವಿಲಸಿತದೂರ್ವೆ ಪೊಂಬಾಳೆ । ನಳಿನಜಾಗರದ ಪಡಲಿಗೆ ॥
ಕಳವೆಯಾಕ್ಷತೆ ವಾರಿ ಪೂರ್ಣಕಲಶಗಳಿಂ । ದಳವಾದುದು ಭದ್ರವೇದಿ ॥ ೧೫ ॥

ಚೂತ ಪಲ್ಲವಗಳಿಂ[1] ಪರಿಮಳಂಗಳ ಪುಷ್ಪ । ಜಾತಿಯಿಂ[2] ಸೊಬಗಾಂತೆಸೆವ ॥
ನೂತನ ಮಂಗಲ ವಸ್ತುಗಳಿಂದತಿ । ರೀವಿವಡೆದುದದು ಕಣ್ಗೆ ॥ ೧೬ ॥

ಮಿಸುನಿಯ ಪಸೆಯ ಮಣೆಯ ಮುಂದೆ ರನ್ನದಿಂ । ದೆಸೆವ ಮೆಟ್ಟಕ್ಕಿ[3] ಗೂಡೆಗಳ
ಶಶಿಮುಖಿಯರು ತಂದಿರಿಸಿ ತೆರೆಸೀರೆಯ । ನೊಸೆದು ಪಿಡಿದರು ಲೀಲೆಯೊಳು[4] ॥ ೧೭ ॥

ಉತ್ತಮ ಲಗ್ನವರಿದು ಜೋಯಿಸರು ಮುದ । ವೆತ್ತು ದಂಪತಿಗಳ ಕರಸಿ ॥
ಮತ್ತವರಾ ಸಮಯದೊಳು ಜನಕ ಭೂ । ಪೋತ್ತಮನನು ಬರಿಸಿದರು ॥ ೧೮ ॥

ಗಳಿಗೆ ಸಮೀಪವಾದುದು ನೃಪವರ ಪೂರ್ಣ । ಕಳಸವನೆತ್ತಿ ಕುವರಿಗೆ[5]
ತಳುವದೆ ಕೈಧಾರೆಯನೆರೆಯೆಂದವ । ರೊಳು ನುಡಿಯಿಂದ ನುಡಿಯಲು ॥ ೧೯ ॥

ವಿಲಸದಿಕ್ಷ್ವಾಕು ವಂಶೇಕ್ಷುಕುಲಕೆ ನೀರ । ನೊಲಿದೆರೆವಂತಾ ನೃಪತಿ ॥
ಉಲಿಯೆ ವಾದ್ಯಗಳು ಶ್ರೀರಾಮಗೆ ಸೀತೆಯ । ನಲವಿಂದ ಧಾರೆಯೆರೆದನು ॥ ೨೦ ॥

ರನ್ನದ ಪೂರ್ಣಕುಂಭವನೆತ್ತಿ ಪಿಡಿದೀ । ಕನ್ನೆಯ ನಿನಗೀಗಲಾನು[6] ॥
ನನ್ನಿಯಿಂದಿತ್ತೆನು ಸ್ವೀಕಾರವ ಮಾ । ಡೆನ್ನುತ ಕೈಧಾರೆಯೆರೆದ ॥ ೨೧ ॥

---

ಹಲಸು, ಮಾದಳೆ, ಕೆಂಪು ತೆಂಗು, ಬಾಳೆ. ಜಂಬು ನೇರಳೆ, ಕಿತ್ತಳೆ – ಮುಂತಾದುವುಗಳ ಫಲಗಳಿಂದಲೂ ಶೋಭಿಸುತ್ತಿತ್ತು. ॥ ೧೪ ॥ ವಿವಾಹದ ಮಂಗಳಕರವಾದ ವೇದಿಕೆಯು ಕಲಶ, ಕನ್ನಡಿ, ಗರಿಕೆ, ಹೊಂಬಾಳೆ, ತಾವರೆ ಹೂ, ತಟ್ಟೆ, ಅಕ್ಷತೆ, ನೀರು ತುಂಬಿದ ಕಲಶಗಳಿಂದ ಸಿದ್ಧವಾಯಿತು. ॥ ೧೫ ॥ ಮಾವಿನ ಚಿಗುರಂಗಳಿಂದಲೂ, ಸುವಾಸನೆಯ ವಿವಿಧ ಪುಷ್ಪಗಳಿಂದಲೂ. ಸೊಗಸಾಗಿ ತೋರುವ ಹೊಸತಾದ ಮಂಗಳಕರ ವಸ್ತುಗಳಿಂದಲೂ, ಅದು ಕಣ್ಣಿಗೆ ಆಡಂಬರದಿಂದ ಕಾಣುತ್ತಿತ್ತು. ॥ ೧೬ ॥ ಆ ಮದುವೆಯ ಮಂಟಪದಲ್ಲಿ ಹೆಂಗುಸರು ಚಿನ್ನದ ಚಾಪೆ ಮಣೆಗಳನ್ನು ತಂದಿಟ್ಟರು. ಅವುಗಳ ಮುಂದುಗಡೆ ರತ್ನದಿಂದ ಶೋಭಿಸುವ ಮೆಟ್ಟಕ್ಕಿಯ ಗೂಡೆಗಳನ್ನಿಟ್ಟರು ಆ ಮೇಲೆ ಸಂತೋಷದಿಂದ ವರದೆಯನ್ನು ಹಿಡಿದರು. ॥ ೧೭ ॥ ಜೋಯಿಸರು ಪ್ರಶಸ್ತವಾದ ಮುಹೂರ್ತವನ್ನು ತಿಳಿದು ದಂಪತಿಗಳನ್ನು ಸಂತೋಷದಿಂದ ಕರೆಸಿದರು. ಆ ಮೇಲೆ ಜನಕ ರಾಜನನ್ನು ಬರಮಾಡಿಸಿದರು ॥ ೧೮ ॥ ಎಲೈ ರಾಜನೇ, ಮುಹೂರ್ತವು ಸನ್ನಿಹಿತವಾಯಿತು. ಪೂರ್ಣ ಕುಂಭವನ್ನು ಎತ್ತಿ ನಿನ್ನ ಮಗಳ ಕೈಗೆ ಧಾರೆಯನ್ನೆರೆ – ಎಂದು ಅವರು ಒಳ್ಳೆಯ ಮಾತುಗಳಿಂದ ಹೇಳಿದರು. ॥ ೧೯ ॥ ಶೋಭಿಸುವ ಇಕ್ಷ್ವಾಕುವಂಶವೆಂಬ ಕಬ್ಬಿನ ಸಮೂಹಕ್ಕೆ ನೀರನ್ನೆರೆವಂತೆ ಜನಕನು ಶ್ರೀರಾಮನಿಗೆ ಸೀತೆಯನ್ನು ಧಾರೆಯೆರೆದನು. ಆಗ ಮಂಗಲವಾದ್ಯಗಳು ಮೊಳಗಿದುವು. ॥ ೨೦ ॥ ಜನಕರಾಜನು ತುಂಬಿದ ನೀರಿನ ರತ್ನದ ಪಾತ್ರೆಯನ್ನೆತ್ತಿ ಹಿಡಿದು, ನಾನು ನಿನಗೆ ಈ ಕನ್ಯೆಯನ್ನು ಸತ್ಯಪೂರ್ವಕವಾಗಿ ಕೊಟ್ಟಿರುತ್ತೇನೆ, ಸ್ವೀಕರಿಸು – ಎನ್ನುತ್ತ ಕೈಧಾರೆಯನ್ನೆರೆದನು. ॥ ೨೧ ॥ ಆಗ ಮಂಗಳಗಾಯಕಿಯರು ಮಂಗಳಗೀತಗಳನ್ನು ಹಾಡಿದರು ಮಂಗಳವಾದ್ಯಗಳು ಮೊಳಗಿದುವು. ಎಲ್ಲ ಕಡೆಯೂ ಸತ್ಪುರುಷರು

---

[1] ಚೂತಫಲಗಳಿಂ (ಗ) [2] ಜಾತದಿಂ (ಗ) [3] ಮೆಟ್ಟಿಕ್ಕಿ (ಕ) [4] ಬೇಗದೊಳು (ಗ ಚ) [5] ಕುವರಗೆ (ಗ) [6] ನಿನಗೀಗ ನಾನು (ಗ ಚ)

ಮಂಗಲಗಾಯಿನಿಯರು ಮಂಗಲವಾಡೆ । ಮಂಗಲವಾದ್ಯ ವೊಳಗಲು ॥
ಮಂಗಲ ಮಂಗಲವೆಂದೆಂಬ ಪುಣ್ಯ[1] ಜ । ನಂಗಳ ಘೋಷವೆಸೆಯಲು ॥ ೨೨ ॥

ಭೂಸುರರುಗಳಾಶೀರ್ವಾದ ನೆರೆದ ವಿ । ಲಾಸಿನಿಯರ ಗಾನನಿನದ[2] ॥
ಆ ಸುಜನರು ಪರಸುವ ಪರಕೆಯ ಬಲು । ಘೋಷಣೆ ಮಸಗಿದುದಾಗ ॥ ೨೩ ॥

ಪಾಡುವ ಗಾನರಿಂ[3] ಬಿಡದೆ ಕೈಯೆತ್ತಿ ಕೊಂ । ಡಾಡುವ ವಂದಿಗಳಿಂದ ॥
ಕೂಡೆ ಪಾರಕರುಲುಪೆಸೆಯಲಾ ಮದುವೆಯ । ಗಾಡಿಯನೇನ ಬಣ್ಣಿಪೆನು ॥ ೨೪ ॥

ರಾಯನನುಜ್ಞೆಯಿಂದರಮನೆಯಿಂ ಬಂದ । ರಾಯತಾಕ್ಷಿಯರು[4] ಲೀಲೆಯೊಳು ॥
ತೋಯಜಾನನೆಯರುಗಳಿಗೆ ರತ್ನಂಗಳ । ಬಾಯಿನಗಳ ಕೊಟ್ಟರಾಗ ॥ ೨೫ ॥

ಪಟ್ಟೆಯ ಸೀರೆಯ ಕಣ್ಗೆ ಸಂತಸವನು । ಪುಟ್ಟಿಸುವಾಭರಣಗಳ ॥
ಬಟ್ಟ ಜವ್ವನೆಯರು ಮುತ್ತೈದೆಯರಿಗ । ಕೊಟ್ಟರು ಬಾಯಿನಗಳನು ॥ ೨೬ ॥

ಮುತ್ತಿನ ರತ್ನದ ತೊಡವುಗಳನು ಚೆ । ಲ್ವೆತ್ತ ನೂತನ ವಸ್ತ್ರಗಳ ॥
ಇತ್ತರು ಕರ್ಪೂರ ವೀಳೆಯಗಳನಾ । ಮುತ್ತೈದೆಯರಿಗಬಲೆಯರು ॥ ೨೭ ॥

ಅತ್ತಲವರು ಬಾಯಿನಗಳ ಕೊಡುತಲಿರ । ಲಿತ್ತಲಾ ನೃಪತಿ ಭೂಸುರರ ॥
ವೊತ್ತಕ್ಕೆ ವಸ್ತ್ರಾಭರಣ ವಿತ್ತಂಗಳ । ನಿತ್ತು ದಣಿಸಿದನಳ್ತಿಯೊಳು ॥ ೨೮ ॥

ಸಮದೊರೆಗಳಿಗೆ ಸಾಮಜ ಜಾತಿತುರಗವ । ರಮಣೀಯಮಪ್ಪ ಭೂಷಣವ ॥
ಮಮತೆಯಿಂದಿತ್ತ ನೃಪಗೆ ನೋಡಲುಳಿದ ಭೂ । ರಮಣರುಗಳು ಪಾಸಟಿಯೇ ॥ ೨೯ ॥

---

ಮಂಗಲ, ಮಂಗಲ – ಎಂದು ಉದ್ಘೋಷ ಮಾಡುತ್ತಿದ್ದರು ॥ ೨೨ ॥ ಆಗ ಬ್ರಾಹ್ಮಣರ ಆಶೀರ್ವಾದವೂ ಅಲ್ಲಿ ಸೇರಿದ ಸುಮಂಗಲಿಯರ ಗಾನದ ಶಬ್ದವೂ, ಸತ್ಪುರುಷರು ಹರಸುವ ಹರಕೆಯ ಘೋಷಣೆಯೂ ಹೆಚ್ಚಾಯಿತು ॥ ೨೩ ॥ ಹಾಡುವ ಗಾಯಕರಿಂದಲೂ, ಕೈಯೆತ್ತಿ ಹೊಗಳುವ ವಂದಿಗಳಿಂದಲೂ, ಕೂಡಿ ಅವುಗಳೊಡನೆ ಪಾರಕರ ಮಾತುಗಳೂ ಶೋಭಿಸುತ್ತಿರಲು ಆ ಮದುವೆಯ ಸೊಗಸನ್ನು ಏನು ವರ್ಣಿಸಲಿ! ॥ ೨೪ ॥ ಆಗ ರಾಜನ ಅಪ್ಪಣೆಪ್ರಕಾರವಾಗಿ ಅರಮನೆಯಿಂದ ಸುಂದರಿಯರಾದ ಸ್ತ್ರೀಯರು ಬಂದು, ಅಲ್ಲಿದ್ದ ಸ್ತ್ರೀಯರಿಗೆ ರತ್ನಗಳ ಬಾಗಿನಗಳನ್ನು ಕೊಟ್ಟರು ॥ ೨೫ ॥ ಅರಮನೆಯ ಯುವತಿಯರು ಪಟ್ಟೆಸೀರೆಗಳನ್ನೂ, ಕಣ್ಣಿಗೆ ಸಂತೋಷವನ್ನುಂಟುಮಾಡುವ ಆಭರಣಗಳನ್ನೂ, ಮುತ್ತೈದೆಯರಿಗೆ ಬಾಯಿನ ದಾನಗಳಾಗಿ ಕೊಟ್ಟರು ॥ ೨೬ ॥ ಮುತ್ತು ರತ್ನಗಳ ಆಭರಣಗಳನ್ನೂ, ಸೊಗಸಾದ ಹೊಸ ವಸ್ತ್ರಗಳನ್ನೂ, ಕರ್ಪೂರದೀದ ಕೂಡಿದ ವೀಳ್ಯಗಳನ್ನೂ ಅಲ್ಲಿನ ಹೆಂಗುಸರು ಮುತ್ತೈದೆಯರಿಗೆ ಕೊಟ್ಟರು ॥ ೨೭ ॥ ಹೀಗೆ ಒಂದೆಡೆ ಅವರು ಬಾಯಿನಗಳನ್ನು ಕೊಡುತ್ತಿದ್ದಾಗ, ಇತ್ತ ಜನಕರಾಜನು ಬ್ರಾಹ್ಮಣರಿಗೆ ಬಟ್ಟೆ - ತೊಡಿಗೆ - ಹಣಗಳನ್ನು ಕೊಟ್ಟು ಪ್ರೀತಿಯಿಂದ ತೃಪ್ತಿ ಪಡಿಸಿದನು ॥ ೨೮ ॥ ತನಗೆ ಸಮಾನರಾದ ರಾಜರಿಗೆಲ್ಲ ಜನಕನು ಆನೆಗಳನ್ನೂ, ಒಳ್ಳೆಯ ಜಾತ್ಯಶ್ವಗಳನ್ನೂ, ಮನೋಹರವಾದ ಅಲಂಕಾರಗಳನ್ನೂ ಪ್ರೀತಿಯಿಂದ ಕೊಟ್ಟನು ಅಂತಹ ಜನಕರಾಜನಿಗೆ ಇತರ ರಾಜರು ಎಣೆಯಾಗುವರೆ? ॥ ೨೯ ॥ ಕವಿಗಳಿಗೆ, ವಾದಿಗಳಿಗೆ, ಗಮಕಿಗಳಿಗೆ, ವಾಗ್ಮಿಗಳಿಗೆ ಜನಕರಾಜನು ಪೆಟ್ಟಿಗೆ ಪೆಟ್ಟಿಗೆಗಳಲ್ಲಿ ವಟ್ರೆವಸ್ತ್ರ - ಆಭರಣಗಳನ್ನು

---

[1] ಪಣ್ಯ (ಚ) [2] ವಿಲಾಸಿನಿ ಜನದುಲುಹಿಂದ (ಕ) [3] ಗಾಯಕರಿಂ (ಗ) [4] ಬಂದಾಯತಾಕ್ಷಿಯರು (ಗ)

ಕೊಟ್ಟನು ಕವಿವಾದಿಗಮಕಿವಾಗ್ಮಿಗಳಿಗೆ । ಪೆಟ್ಟಿಗೆ ಪೆಟ್ಟಿಗೆವೆರಸು ॥
ಪಟ್ಟೆವಸ್ತ್ರಾಭರಣಂಗಳನವನಿಗೆ ಹೊಟ್ಟೆಹೊರಕ ನೃಪರೆಣೆಯೆ ॥ ೩೦ ॥

ದಣಿಯಿಸಿದನು ಬಂದ ಯಾಚಕರನು ಹೊನ್ನು । ಹಣ ವಸ್ತ್ರಾಭರಣಗಳಿಂ ॥
ಗಣನೆಯಿಲ್ಲದೆ ಕೊಟ್ಟ ಜನಕಭೂಪಾಲನಿ । ಗೆಣೆಯೆ ಮಿಕ್ಕವರು ಮೃಗಾಕ್ಷಿ ॥ ೩೧ ॥

ಹಿರಿಯರು ಮಾನ್ಯರು ಬಂಧುಜನಂಗಳಂ । ತರವರಿದವರ ಸತ್ಕರಿಸಿ ॥
ಪಿರಿದು ಸಂತೋಷದೊಳ್ಳೈದಿದ ನೃಪ ತ । ನ್ನರಮನೆಗತಿ ವಿಭವದೊಳು ॥ ೩೨ ॥

ಮದುಮಕ್ಕಳ ಮನೆದುಂಬಿಸಿಯಂದಾ[1] । ಮದವತಿಯರು ಶೋಭನವ ॥
ಮುದದಿಂದ ಪಾಡಲು ವೈದೇಹಿಯಳಿಯನ । ವದನವ ಕಂಡು ನಲಿದಳು ॥ ೩೩ ॥

ನಾಗವಲಿಯ ನಾಲ್ಕು ದಿನದೊಳು ಮನ್ನಿಸಿ । ಯಾ ಗುಣಮಣಿ ಸೀತೆಯೊಳು ॥
ರಾಗದೊಳಿರ್ದೊಂದು ದಿನ ತಮ್ಮ ನಗರಿಗೆ । ಪೋಗಬೇಕೆಂದು ಮನದೊಳು ॥ ೩೪ ॥

ನೆನೆದು ತನ್ನಾಪ್ತಸಚಿವನಿಂದಲಂದಾ । ಜನಕ ಭೂವರಗೆ ಪೇಳಿಸಲು ॥
ವಿನಯನಿಧಾನನವನ ನುಡಿಯನು ಕೇಳಿ । ಮನದೊಳಿಂತೆಂದೆಣಿಸಿದನು ॥ ೩೫ ॥

ತಡೆಯಬಾರದು ಪೋಗುವರ ಪೋಪರೆ ಮನ । ವೊಡಬಡದವರಿಗುತ್ತರವ ॥
ನುಡಿದೊಡಬಡಿಕೆಯ[2] ಕಾಣದಂದೊಡಬಟ್ಟ । ಪೊಡವಿಪನವರ ಪಯಣಕೆ ॥ ೩೬ ॥

ಪಟ್ಟೆಯ ಸುರುಳು ಭಂಗಾರ ವಸ್ತ್ರಂಗಳ । ಪೆಟ್ಟಿಗೆ ಪೆಟ್ಟಿಗೆವೆರಸು ॥
ಕೊಟ್ಟನು ಕರಿತುರಗಗಳ ಜನಕ ಬೀಳು । ಕೊಟ್ಟನು ರಾಮಲಕ್ಷ್ಮಣರ ॥ ೩೭ ॥

---

ಕೊಟ್ಟಂತಹ ಜನಕರಾಜನಿಗೆ ಉದರಾರ್ಥಿಗಳಾದ ರಾಜರು ಹೇಗೆ ತಾನೆ ಸಮಾನರಾಗುವರು ! ॥ ೩೦ ॥ ಜನಕನು ತನ್ನಲ್ಲಿಗೆ ಬಂದ ಬೇಡುವವರಿಗೆ ಚಿನ್ನ, ಹಣ, ಬಟ್ಟೆ ತೊಡಿಗೆಗಳನ್ನು ಕೊಟ್ಟು ದಣಿಯಿಸಿದನು. ಎಲೈ ಚೆಳಿನಿಯೇ, ಹೀಗೆ ಲೆಕ್ಕವಿಲ್ಲದಷ್ಟು ದಾನಗಳನ್ನು ಮಾಡಿದ ಜನಕರಾಜನಿಗೆ ಇತರರು ಸಮಾನರೆ ! ॥ ೩೧ ॥ ಅವರವರ ತಾರತಮ್ಯವನ್ನು ತಿಳಿದು, ಜನಕನು ಹಿರಿಯರನ್ನೂ ಮಾನವಂತರನ್ನೂ ಬಂಧುಜನರನ್ನೂ ಸತ್ಕರಿಸಿ, ಬಹಳ ಸಂತೋಷದಿಂದಲೂ ವೈಭವದಿಂದಲೂ ತನ್ನ ಅರಮನೆಗೆ ತೆರಳಿದನು. ॥ ೩೨ ॥ ಮದುಮಕ್ಕಳನ್ನು ಮನೆತುಂಬಿಸಿ, ಹೆಂಗುಸರು ಸಂತೋಷದಿಂದ ಶೋಭನ ಗೀತವನ್ನು ಹಾಡಿದರು. ಸೀತೆಯ ತಾಯಿಯಾದ ವೈದೇಹಿಯು ಅಳಿಯನ ಮುಖವನ್ನು ನೋಡಿ ಸಂತೋಷಪಟ್ಟಳು. ॥ ೩೩ ॥ ನಾಗವಲ್ಲಿಯಾಗಿ ನಾಲ್ಕನೆಯ ದಿನದವರೆಗೆ ಶ್ರೀರಾಮನು ಗುಣರತ್ನವೆನಿಸಿದ ಸೀತೆಯ ಒಡನೆ ಪ್ರೀತಿಯಿಂದ ಇದ್ದನು. ಆ ಮೇಲೆ ತನ್ನ ನಗರಕ್ಕೆ ಒಂದುದಿನ ಹೋಗಬೇಕೆಂದು ನೆನಸಿದನು. ॥ ೩೪ ॥ ತನ್ನ ನಗರಕ್ಕೆ ತೆರಳುವ ತನ್ನ ಇಚ್ಛೆಯನ್ನು ರಾಮನು ತನ್ನ ಆಪ್ತಮಂತ್ರಿಯ ಮೂಲಕ ಜನಕರಾಜನಿಗೆ ತಿಳಿಸಿದನು. ವಿನಯಗುಣಕ್ಕೆ ಆಶ್ರಯನಾದ ಜನಕನು ಆ ಮಾತನ್ನು ಕೇಳಿ ಮನಸ್ಸಿನಲ್ಲಿ ಹೀಗೆ ಯೋಚಿಸಿದನು. ॥ ೩೫ ॥ ಹೋಗುವವರನ್ನು ತಡೆಯುವುದು ಸರಿಯಲ್ಲ. ಹೋಗಲು ಮನಸ್ಸಿಗೆ ಒಪ್ಪಿಗೆಯಾಗದು. ಅವರ ಕೇಳಿಕೆಗೆ ಉತ್ತರಕೊಟ್ಟು ಒಡಂಬಡಿಸಲು ಸಾಧ್ಯವಿಲ್ಲವೆಂದು ತಿಳಿದು, ಜನಕರಾಜನು ಅವರ ಪ್ರಯಾಣಕ್ಕೆ ಸಮ್ಮತಿಯಿತ್ತನು. ॥ ೩೬ ॥ ಜನಕನು ಪಟ್ಟೆಗಳ – ಸುರುಳುಗಳನ್ನೂ, ಚಿನ್ನವನ್ನೂ,

---

[1] ಮನೆದುಂಬಿಸಿಯೆಂದಾ (ಕ). [2] ನುಡಿಗೊಡಬಡಿಕೆಯ (ಕ).

ನೆನೆದು ನಿನ್ನನ್ವಯವನು ಕುವರಿಯು ನಿನ್ನ । ಘನತರಮಪ್ಪ ನೇಹವನು ॥
ನೆನೆದು ನಮ್ಮನು ನಮ್ಮ ನೆನದೆದೆಗೆಡದಂತೆ[1] । ತನುಜೆಯ ಪಾಲಿಪುದೆಂದು ॥ ೩೮ ॥

ನುಡಿದ ನುಡಿಯ ಕೇಳಿ ಮನದೊಳು ನಲಿವುತಂ । ದೊಡಬಟ್ಟ ರಾಮಚಂದ್ರಮನು ॥
ಪಡಗೊಡೆದಂತೆ[2] ಜನಕ ಭೂಪಾಲನಿ । ಗುಡುಗೊಱೆಯಿತ್ತು ಮನ್ನಿಸಿದ ॥ ೩೯ ॥

ವಾರದೊಡಿಗೆಯ[3] ಭಂಗಾರವ[4] ದುಗುಲದ । ಸೀರೆಯ ದಿಂಡು ದಿಂಡುಗಳ[5] ॥
ಆ ರಾಮಚಂದ್ರ ವೈದೇಹಿಗೆ[6] ಕೊಟ್ಟನ । ದಾರ ಬಣ್ಣಿಸುವರಿಳೆಯೊಳು[7] ॥ ೪೦ ॥

ವೆಚ್ಚಿಸಿದನು ವಸ್ತ್ರಾಭರಣಂಗಳ । ನಚ್ಚರಿವಡೆ[8] ಬಂಧುಗಳಿಗೆ ॥
ಮಚ್ಚರಿಸಿದುದಾ ಸುರಕುಜವವನೊಳು । ಬೆಚ್ಚಿದೆರಲೆಗಂಗಳಬಲೆ ॥ ೪೧ ॥

ಮಾವನ ಕೈಯಿಂದ ಕಳುಹಿಸಿಕೊಳುತಲಾ । ಮಾವನರಸಿಯ ಪರಕೆಯ ॥
ಭಾವದೊಳಾಂತು ಲಕ್ಷ್ಮೀಧರವೆರಸಿಯಂ । ದಾ ವಿಭು ತೆರಳ್ದನಲ್ತಿಯೊಳು ॥ ೪೨ ॥

ಬಂದೆಱಗಿದ ಸೀತಾದೇವಿಯ ವದ । ನೇಂದುವ ನೋಡಿ ನಿಟ್ಟಿಸುತ[9] ॥
ಅಂದು ಬುದ್ಧಿಯ ಪೇಳಿ ಪೋಗಿ ಬಾರಮ್ಮ ನೀ । ನೆಂದು ಜನಕನೃಪ ಬಳಿಕ ॥ ೪೩ ॥

ಕಿಱುಪಿಲ್ಲಿ ಪಿಲ್ಲಿಮುಂಟಿಗೆ[10] ಕಾಲುಂಗುರ । ಮಿಱುಪ ಪೆಂಡೆಯ ಲುಳಿತಾತಿ ॥
ಕಿಱುಗೆಜ್ಜೆ ಸರ ಘಂಟೆ[11] ವೀರಮುದ್ರಿಕೆಗಳ[12] । ತೆಱನಱಿದಿತ್ತ ಕುವರಿಗೆ ॥ ೪೪ ॥

---

ವಸ್ತ್ರಗಳನ್ನೂ ಪೆಟ್ಟಿಗೆಗಳಲ್ಲಿ ತುಂಬಿಸಿಕೊಟ್ಟನು. ಆನೆಕುದುರೆಗಳನ್ನೂ ಕೊಟ್ಟು ರಾಮಲಕ್ಷ್ಮಣರನ್ನು ಕಳುಹಿಸಿಕೊಟ್ಟನು ॥ ೩೭ ॥ ಸೀತೆಯನ್ನು ಕಳುಹಿಸಿಕೊಡುತ್ತ ಜನಕರಾಜನು ರಾಮನೊಡನೆ ಹೀಗೆ ಹೇಳಿದನು—ನಿನ್ನ ವಂಶವು ಎಂಥದೆಂಬುದನ್ನು ನೆನಸಿಕೊಂಡು, ಈ ಕುಮಾರಿಗೂ ನಿನಗೂ ಪರಸ್ಪರವಾಗಿ ಘನವಾಗಿರುವ ಪ್ರೀತಿಯನ್ನೂ ನೆನೆದುಕೊಂಡು, ನಮ್ಮನ್ನೂ ನೆನೆದುಕೊಂಡು, ಈಕೆ ನಮ್ಮನ್ನು ನೆನೆದು ಅಧೈರ್ಯಗೊಳ್ಳದಂತೆ ಈಕೆಯನ್ನು ಪಾಲಿಸಬೇಕು ॥ ೩೮ ॥ ಹೀಗೆ ಹೇಳಿದ ಜನಕ ರಾಜನ ಮಾತನ್ನು ಕೇಳಿ, ಶ್ರೀರಾಮನು ಮನಸ್ಸಿನಲ್ಲೇ ಸಂತೋಷಪಟ್ಟು ಒಡಂಬಟ್ಟನು. ಹಡಗಿನಿಂದಲೇ ಒಡೆದು ತರಲಾಯಿತೋ ಎಂಬಂತೆ ಉಡುಗೊರೆಗಳನ್ನು ಜನಕರಾಜನಿಗೆ ಕೊಟ್ಟು ಮರ್ಯಾದೆಮಾಡಿದನು ॥ ೩೯ ॥ ಮಾವನಾದ ಜನಕನಿಗೆ ಕೊಟ್ಟಂತೆಯೇ ಅತ್ತೆಯಾದ ವೈದೇಹಿಗೂ ಶ್ರೀರಾಮನು ವಾರದೊಡಿಗೆಗಳನ್ನೂ, ಚಿನ್ನವನ್ನೂ, ಪಟ್ಟೆಸೀರೆಯ ಮೂಟೆಗಳನ್ನೂ ಕೊಟ್ಟನು ಹೀಗೆ ಕೊಟ್ಟ ವಿವರವನ್ನು ಈ ಭೂಮಿಯಲ್ಲಿ ಯಾರು ತಾನೇ ವರ್ಣಿಸಬಲ್ಲರು? ॥ ೪೦ ॥ ಎಲೈ ಚೇಳಿನಿಯೇ, ಶ್ರೀರಾಮನು ಬಂಧುಗಳಿಗೆ ವಸ್ತ್ರ–ಆಭರಣಗಳನ್ನು ಕೊಟ್ಟನು ಇದು ಎಲ್ಲರೂ ಆಶ್ಚರ್ಯಪಡುವಂತಿತ್ತು. ಶ್ರೀರಾಮನ ಈ ಕೊಡುಗೈತನಕ್ಕೆ ಕಲ್ಪವೃಕ್ಷವು ಅಸೂಯೆಪಟ್ಟಿತು, ॥ ೪೧ ॥ ಶ್ರೀರಾಮನು ಲಕ್ಷ್ಮಣಸಮೇತನಾಗಿ ತನ್ನ ಮಾವನಿಂದ ಬೀಳ್ಕೊಂಡು, ತನ್ನ ಅತ್ತೆಯ ಆಶೀರ್ವಾದವನ್ನು ಮನಸ್ಸಿನಲ್ಲಿ ತಾಳಿಕೊಂಡು ಮಿಥಿಲಾನಗರದಿಂದ ತೆರಳಿದನು. ॥ ೪೨ ॥ ಆ ಸಂದರ್ಭದಲ್ಲಿ ಜನಕನು ತನ್ನ ಪಾದಕ್ಕೆ ಬಂದು ವಂದಿಸಿದ ಸೀತಾದೇವಿಯ ಚಂದ್ರನನ್ನು ಹೋಲುವ ಮುಖವನ್ನು ನೋಡಿ, ತಕ್ಕ ಬುದ್ಧಿವಾದವನ್ನು ಹೇಳಿ 'ನೀನು ಹೋಗಿ ಬಾರಮ್ಮ' ಎಂದು ಹೇಳಿದನು. ॥ ೪೩ ॥ ಆ ಸಂದರ್ಭದಲ್ಲಿ ಜನಕನು ತನ್ನ ಮಗಳಿಗೆ ಚಿಕ್ಕ ಪಿಲ್ಲಿ, ಪಿಲ್ಲಿಮಂಟಿಗೆ, ಕಾಲುಂಗುರ. ಹೊಳೆವ ಬಳೆ, ಲುಳಿ, ತಾತಿ, ಚಿಕ್ಕಗೆಜ್ಜೆ,

---

1 ಗೆಡದಂತೀ (ಗ) 2 ಪೊಗಗೊಡದಂತೆ (ಗ) ಪಡಗೊಡದಂತು (ಚ) 3 ವಾರದುಡುಗೆಯ (ಚ), 4 ಭಂಗಾರದ (ಕ). 5 ದಿಂಡು ವಿಂಡುಗಳ (ಗ) 6 ವಯಿದೆ ಬಾನೆ (ಚ) 7 ಬಣ್ಣಿಪರಿಳೆಯೊಳಗೆ (ಚ) 8 ವಡೆದ (ಗ) ಯೆನೆ (ಚ) 9 ಪರಸುತ (ಗ. ಚ) 10 ಮಟ್ಟಿಗೆ (ಗ) ಮಂಜಿಗೆ (ಚ) 11 ಗಳನವ (ಗ ಚ) 12 × × (ಗ ಚ)

ನಡುವಿನ ಚಿಂತಾಕುವರಳೆಲೆ ಕಟಿಸೂತ್ರ । ಬಿಡದೊಪ್ಪುವ ವಂಕಿ ಗೆಜ್ಜೆ ॥
ಕಡುರಯ್ಯ[1]ವಡೆದ ನಿಱಿಯುಗೊಂಡೆಯುವನಂ । ದೊಡನೆ ಕೊಡಿಸಿದ ನಂದನೆಗೆ ॥ ೪೫ ॥

ಲುಳಿ ಹಸ್ತ ರವಿ[2]ಬೆರಲುಂಗುರ ಕಡಗ ತೋ । ಳ್ವಳೆ ಕಂಕಣ ಸೂಡಗವ[3]
ಚಳಕಿಗೆ[4] ಭುಜಕೀರ್ತಿ ಗೌಳಸರಗಳಷ್ಟ । ದಳವ ತರಿಸಿ ಕೊಟ್ಟನವನು ॥ ೪೬ ॥

ಹಾರ ತಿಸರ ಪದಸರ[5] ಕಂಠಮಾಲೆಯು । ಚಾರುಪದಕ ಬಂದಿ ಲುಳಿಯು ॥
ತೋರ ಮುತ್ತಿನ ಹತ್ತೆಗಟ್ಟು ತಾತಿಯು[6]ನಂ । ದಾ ರಾಯನಿತ್ತ ನಂದನೆಗೆ[7] ॥ ೪೭ ॥

ಕೆತ್ತಿದ ವಜ್ರಮಾಣಿಕದೋಲೆಗಳ ಹೊಸ । ಮುತ್ತಿನೆಂಟೆಳೆಯ ಬಾಬುಲಿಯು[8] ॥
ಉತ್ತಮವಾಗಿರ್ದ ತೋರ ಮೂಕುತಿಯುನಂ । ದಿತ್ತನಾ ರಾಯಮಗಳಿಗೆ[9] ॥ ೪೮ ॥

ತುಱುಬಿನ ಸುಳಿ ಪಣೆಗಟ್ಟು ಕೆನ್ನೆಯ ಗಱಿ । ಹೆಱೆ ರವಿ ಮಸ್ತಕಮಣಿಯು ॥
ಮಿಱುಗುವ[10] ಮುತ್ತಿನ ಬಲೆ ಜೂಳಯುವ ಮುನ । ದೆಱಕದಿಂದಿತ್ತ ನಂದನೆಗೆ ॥ ೪೯ ॥

ಮುತ್ತಿನ ಸತ್ತಿಗೆ ಮುತ್ತಿನ ಹೆಗ್ಗಾಳೆ[11] । ಮುತ್ತಿನ ಬಲು ಪಂಜರಗಳ ।
ಮುತ್ತಿನ ಪಲ್ಲಕ್ಕಿ ದಂಡಿಗೆಗಳನಂ । ದಿತ್ತನಾ ರಾಯ ಮಗಳಿಗೆ ॥ ೫೦ ॥

ಕೊಟ್ಟನಂದಿವು ಮೊದಲಾದ ವಸ್ತ್ರಂಗಳ । ಪೆಟ್ಟಿಗೆಗಳ ತನ್ನ ಸುತೆಗೆ ॥
ಕೊಟ್ಟ ಜನಕ ಭೂಪಾಲಗೆ ಸರಿದೊರೆ । ಗಟ್ಟಬಹುದೆ ಮಿಕ್ಕ ನೃಪರ ॥ ೫೧ ॥

ಗಿಂಡಿ ಕರಗ ಕಾಳಾಂಜಿ ಕರ್ಪೂರ ಕ । ರಂಡ ಪಡಿಗದೂಳಿಗದ[12] ॥
ಪುಂಡರೀಕಾಕ್ಷಿಯುರನು ಕಳುಹಿದನಾ । ಮಂಡಲಪತಿ ಮಗಳೊಡನೆ ॥ ೫೨ ॥

---

ಸರಗಂಟೆ, ವೀರಮುದ್ರಿಕೆ—ಮುಂತಾದ ಆಭರಣಗಳನ್ನು ಕ್ರಮವರಿತು ಕೊಟ್ಟನು. ॥ ೪೪ ॥ ನಡುವಿನ ಚಿಂತಾಕು ಅರಳೆಲೆ, ಸೊಂಟದ ನೇವಾಳ, ಶೋಭಿಸುವ ವಂಕಿ, ಗೆಜ್ಜೆ, ಮನೋಹರವಾದ ನಿರಿಯಗೊಂಡೆ—ಮುಂತಾದವನ್ನು ಮಗಳಿಗೆ ಕೊಟ್ಟನು. ॥ ೪೫ ॥ ಲುಳಿ, ಹಸ್ತರವಿ, ಬೆರಳಿನ ಉಂಗುರ, ಕಡಗ, ತೋಳಿನ ಬಳೆ, ಕೈಬಳೆ, ಸೂಡಗ, ಚಳಕಿಗೆ, ಭುಜಕೀರ್ತಿ, ಗೌಳಸರ, ಅಷ್ಟದಳ—ಮುಂತಾದವನ್ನು ತರಿಸಿ ಮಗಳಿಗೆ ಕೊಟ್ಟನು, ॥ ೪೬ ॥ ಹಾರ, ಮೂರೆಳೆಯ ಸರ, ಪದ ಸರ, ಕಂಠಮಾಲೆ, ಮನೋಹರವಾದ ಪದಕ. ಬಂದಿ. ಲುಳಿ, ದೊಡ್ಡಮುತ್ತಿನ ಹತ್ತೆಗಟ್ಟು, ತಾತಿ—ಮುಂತಾದುವನ್ನು ಆ ರಾಜನು ತನ್ನ ಮಗಳಿಗೆ ಕೊಟ್ಟನು. ॥ ೪೭ ॥ ಕೆತ್ತಿದ ವಜ್ರಮಾಣಿಕ್ಯಗಳ ಓಲೆಗಳನ್ನೂ, ಹೊಸಮುತ್ತಿನ ಎಂಟು ಎಳೆಗಳಿರುವ ಬಾಹುಪೂರವನ್ನೂ, ಶ್ರೇಷ್ಠವಾದ ದೊಡ್ಡ ಮೂಗುತಿಯನ್ನೂ ಜನಕನು ತನ್ನ ಮಗಳಿಗೆ ಕೊಟ್ಟನು. ॥ ೪೮ ॥ ತುರುಬಿನ ಸುಳಿ, ಹಣೆಗಟ್ಟು, ಕೆನ್ನೆಯ ಗರಿ, ಚಂದ್ರ, ಸೂರ್ಯ (ಆಭರಣ ವಿಶೇಷ), ತಲೆಯ ರತ್ನ, ಹೊಳೆವ ಮುತ್ತಿನಿಂದ ಕೂಡಿದ ಜೌರಿ—ಇವನ್ನೆಲ್ಲ ಮಗಳಿಗಿತ್ತನು, ॥ ೪೯ ॥ ಮುತ್ತಿನ ಕೊಡೆ, ಮುತ್ತಿನ ಕೊಂಬು, ಮುತ್ತಿನ ದೊಡ್ಡ ಪಂಜರ, ಮುತ್ತಿನ ಪಲ್ಲಕ್ಕಿ, ಮುತ್ತಿನ ವೀಣೆ—ಮುಂದಾದುವನ್ನೆಲ್ಲಾ ಮಗಳಿಗೆ ಕೊಟ್ಟನು. ॥ ೫೦ ॥ ಅಂದು ಜನಕರಾಜನು ಇವೇ ಮೊದಲಾದ, ವಸ್ತ್ರದ ಪೆಟ್ಟಿಗೆಗಳನ್ನೇ ತನ್ನ ಮಗಳಿಗೆ ಬಳುವಳಿಯಾಗಿ ಕೊಟ್ಟನು. ಹೀಗೆ ಕೊಟ್ಟಂತಹ ಜನಕರಾಜನಿಗೆ ಇತರ ರಾಜರನ್ನು ಸರಿಗಟ್ಟಬಹುದೆ? ॥ ೫೧ ॥ ಇಷ್ಟು ಮಾತ್ರವಲ್ಲದೆ ಜನಕನು ತನ್ನ ಮಗಳೊಡನೆ ಗಿಂಡಿ, ಕೊಡ, ಪನ್ನೀರುಕುಪ್ಪಿ

---

[1] ರಂಗು (ಗ. ಚ.) [2] ಹಸ್ತ ಸರ (ಗ) [3] ಸೂಡಂಗ (ಗ) ಸೂಡಗದ (ಚ). [4] ಛಳತಿಗೆ (ಕ). [5] ಪಂಚಸರ (ಗ ಚ). [6] ಪುಸ್ತಿಯ (ಗ) [7] ರಾಯನಿತ್ತ ನಾ ಸುತೆಗೆ (ಗ) [8] ಮುತ್ತಿನ ಪೆಂಟೆಯಗಳನು (ಗ). [9] ನೃಪತಿ ಕುವರಿಗೆ (ಚ) . . . ಮಗಳಿಗೆ (ಗ). [10] ಗಱಿವೂ (ಚ) [11] ಹೆಗ್ಗಳೆ. [12] ಪಡುಗದೂಳಿಗದ (ಕ) ಪಡಿಗಳೂಳಿಗದ (ಗ)

ಕನ್ನಡಿ ಕನಕಚವರ ಬೀಸಣಿಗೆ ಪೊಸ । ಪೊನ್ನ ಕಾವಿನ ಕುಂಚದವರ ॥
ರನ್ನದ ಪಾವುಗೆಯೂಳಿಗದವರನಾ । ಚೆನ್ನೆಯೊಡನೆ ಕಳುಪಿದನು ॥ ೫೩ ॥

ವೀಣೆ ಕಿನ್ನರಿ ಸ್ವರಮಂಡಲ[1] ತುಂಬುರ । ವೀಣೆಗಳನು ಬಾಜಿಸುವ ॥
ಜಾಣೆಯರನು ಕಳುಪಿದನಂದಾ ನೃಪ । ಯೇಣಾಕ್ಷಿಯೊಡನೆ ರಾಗದೊಳು ॥ ೫೪ ॥

ಹಲವು ಮಾತೇನು ನಾನಾ ಪೊಳಿಗಕಂದು । ಸಲುವ ಸಲ್ಲಲಿತಾಂಗಿಯರ ॥
ನೆಲೆಮಾಡಿ ಮಗಳ ಸಂಗಡ ಕಳುಪಿದನವ । ಲಲನೆ ಕೇಳತಿವಿಭವದೊಳು ॥ ೫೫ ॥

ಲೆಕ್ಕಿಗರನು ಲಕ್ಕಣಿಗ ಪಾರಕರನು । ಅಕ್ಕರಿಗರ ಜೋಯಿಸರ ॥
ಅಕ್ಕಸಾಲೆಗಳಂಗಡಿಕಾಱರ ಮಗ । ಳೊಕ್ಕಲಾಗಿಯೆ ಕಳುಪಿದನು ॥ ೫೬ ॥

ಚಿತ್ರವ ಬರೆವರುಗಳ ಚಿಪ್ಪಿಗರನವ । ನೇತ್ರಾವಳಿಯ ನೇವವರ[2] ॥
ಪುತ್ರಿಕೆಗಳ ತಿದ್ದುವರೊಕ್ಕಲ ತನ್ನ । ಪುತ್ರಿಯೊಡನೆ ಕಳುಪಿದನು ॥ ೫೭ ॥

ಮಡಿವಾಳರ ಮಾಲೆಗಾಱರುಗಳ ಪೂ । ವಡಿಗರ ಬಲು ಚಕ್ರಿಗಳ[3] ॥
ಬಡಗಿಗಳನು ಗಾಣಿಗರ ನಾವಿದರ[4] ಮಗ । ಳೊಡನೊಕ್ಕಲಾಗಿ ಕಳುಪಿದ ॥ ೫೮ ॥

ಅಟ್ಟಿದ ಚೀಟಿ[5] ಕಾಣದ ಮುನ್ನ ಜೋಳಿಗೆ । ಗಟ್ಟ ಕಳುಪುವ ನಾಡೊಳಗೆ ॥
ಕೊಟ್ಟನೇಳೆಂಟು ಲಕ್ಕದ ಸೀಮೆಯ ತನ್ನ । ಪಟ್ಟದ ಸುತೆಗುಂಬಳಿಯ[6] ॥ ೫೯ ॥

ಕೊಟ್ಟಗೆ ಕೊಲ್ಲಾರ ಬೊಕ್ಕಸ ಭಂಡಾರ । ಕಟ್ಟದ ಜಾಳಿಗೆಗಳನು[7] ॥
ಕೊಟ್ಟು ಪಲ್ಲಕ್ಕಿಯನಿತ್ತಾ ನೃಪ ಬೀಳು । ಕೊಟ್ಟನು ಸುತೆಯ ಮೋಹದೊಳು ॥ ೬೦ ॥

---

ಕರ್ಪೂರದ ಕರಡಿಗೆ, ಉಗುಳುಬುಡ್ಡಿ—ಮುಂತಾದವುಗಳನ್ನು ಹಿಡಿದ ಸೇವಕೀ ಸುಂದರಿಯರನ್ನು ಕಳುಹಿಸಿದನು ॥ ೫೨ ॥ ಕನ್ನಡಿ, ಚಿನ್ನದ ಚಾಮರ, ಬೀಸಣಿಗೆ, ಹೊಸಚಿನ್ನದ ಹಿಡಿಯಿರುವ ಕುಂಚ, ರತ್ನದ ಪಾದುಕೆ—ಮುಂತಾದ ಊಳಿಗವನ್ನು ಮಾಡತಕ್ಕ ಸುಂದರಿಯರನ್ನು ಜತೆಯಲ್ಲಿ ಕಳುಹಿಸಿದನು ॥ ೫೩ ॥ ವೀಣೆ, ಕಿನ್ನರಿ, ಸ್ವರಮಂಡಲ, ತುಂಬುರವೀಣೆಗಳನ್ನೂ ವಾದನ ಮಾಡತಕ್ಕ ಕಲಾವಿದೆಯರನ್ನೂ ಜನಕನು ಪ್ರೀತಿಪೂರ್ವಕವಾಗಿ ಸೀತಾದೇವಿಯೊಡನೆ ಕಳುಹಿಸಿದನು. ॥ ೫೪ ॥ ಎಲೇ ಚೆಲುವೆಯೇ ಕೇಳು ಇನ್ನು ಹೆಚ್ಚು ಮಾತೇಕೆ? ಜನಕನು ಅಂದು ತನ್ನ ಮಗಳೊಡನೆ ಹಲವಾರು ವಿಧದ ಸೇವೆಗೆ ಯೋಗ್ಯರಾದ ಸುಂದರಿಯರನ್ನು ಸುವ್ಯವಸ್ಥೆಯಿಂದ ವೈಭವದಿಂದ ಕಳುಹಿಸಿದನು ॥ ೫೫ ॥ ಗಣಿತಜ್ಞರನ್ನೂ, ಲಾಕ್ಷಣಿಕರನ್ನೂ, ವಿದ್ವಜ್ಜನರನ್ನೂ, ಜೋಯಿಸರನ್ನೂ, ಅಕ್ಕಸಾಲೆಗಳನ್ನೂ, ಅಂಗಡಿಕಾರರನ್ನೂ ಒಕ್ಕಲಾಗಿ ನೆಲಸುವಂತೆ ಮಗಳೊಡನೆ ಕಳುಹಿಸಿದನು ॥ ೫೬ ॥ ಚಿತ್ರಕಾರರನ್ನೂ, ಬಟ್ಟೆಹೊಲಿಯುವವರನ್ನೂ, ಹೊಸಸೀರೆಗಳನ್ನು ನೇಯುವವರನ್ನೂ, ಪ್ರತಿಮೆಗಳನ್ನು ಮಾಡುವ ಶಿಲ್ಪಿಗಳನ್ನೂ ಒಕ್ಕಲಾಗಿ ನೆಲಸುವಂತೆ ತನ್ನ ಮಗಳೊಡನೆ ಕಳುಹಿದನು ॥ ೫೭ ॥ ಅಗಸರು, ಮಾಲೆಗಾರರು, ಹೂವಡಿಗರು, ಕುಂಬಾರರು, ಬಡಗಿಗಳು, ಗಾಣಿಗರು, ಕ್ಷೌರಿಕರು—ಮುಂತಾದವರನ್ನು ಮಗಳೊಡನೆ ಒಕ್ಕಲಾಗಿ ಕಳುಹಿಸಿದನು ॥ ೫೮ ॥ ಕಳುಹಿಸಿಕೊಟ್ಟಿರುವ ಚೀಟನ್ನು ಕಾಣುವುದರೊಳಗಾಗಿಯೇ ಕಪ್ಪಕಾಣಿಕೆಗಳನ್ನು ಮೂಟೆಕಟ್ಟಿ ಕೊಡತಕ್ಕಂತಹ ಸಮೃದ್ಧಿಯ ತನ್ನ ನಾಡಿನಲ್ಲಿ ಏಳೆಂಟುಲಕ್ಷ ಸೀಮೆಗಳನ್ನು ಮಗಳಿಗೆ ಉಂಬಳಿಯಾಗಿ ಕೊಟ್ಟನು ॥ ೫೯ ॥

---

[1] ಸರಮಂಡಲ (ಗ ಚ) [2] ಸೈವವರ (ಚ) [3] ಚಕ್ರಗಳ (ಗ) [4] ನಾವಿಳಿರ (ಚ) [5] ಚೀಟ (ಗ) [6] ಗುಂಬಳಿಯನು (ಗ)
[7] ಜೋಳಿಗೆಗಳನು (ಚ).

ಇಂತುಂಬಳಿಯುಡುವಳಿ[1] ಬಳುವಳಿಯ ಭೂ । ಕಾಂತ ಮಗಳಿಗಿತ್ತು ಕಳುಹೆ[2] ॥
ಅಂತರಿಸದೆಯಲ್ಲಿಂ ಪೊಱಮಟ್ಟಾ[3] । ಕಾಂತೆ ಬಂದಳು ತಾಯ ಬಳಿಗೆ ॥ ೬೧ ॥

ಅಡಿಗೆಱಗಿದ ಕುವರಿಯನೆತ್ತಿ ಗಲ್ಲವ । ಹಿಡಿದು ಮುದ್ದಿಸಿ ಮುಂಡಾಡಿ ॥
ಬಿಡದೆ ಸೀತೆಗೆ ವೈದೇಹಿ ಬುದ್ಧಿಯನಿಂತು । ನುಡಿದಳಂಬುಜದಳನೇತ್ರೆ ॥ ೬೨ ॥

ಗಂಡನ ಮಾತ ಮೀಱದ ಸತಿಯರು ಭೂ । ಮಂಡಲದೊಳು ಪೂಜ್ಯರದಱಿಂ ॥
ಗಂಡನ ಮಾತನುದ್ದಂಡಿಸಬೇಡೆಂದು । ತೊಂಡೆವಾಯಬಲೆಗೊರೆದಳು ॥ ೬೩ ॥

ಗತಿಗತಿ ದೂರತೆ[4]ಯತಿಹಿತವರು ತನ । ಗತಿಕಷ್ಟವನೆಸಗುವರು ॥
ಪತಿಯಾಜ್ಞೆಯ ಮೀಱಿ ಮೀಱದಿರೆಂದಾ । ಸತಿ ಬುದ್ಧಿವೇಳ್ದಳಾ ಸುತೆಗೆ ॥ ೬೪ ॥

ಅತ್ತೆ ಮಾವ ಮೈದುನ ನಾದಿನಿಯೋರೆ । ಗಿತ್ತಿಯತ್ತಿಗೆ ಸವತಿಯರ ॥
ಚಿತ್ತವಱಿದು ಕೂರ್ತೆರವಿಲ್ಲದಿರೆಂದು । ನ್ಮತ್ತ ಯೌವನೆಗೆ ಪೇಳಿದಳು ॥ ೬೫ ॥

ಶಕಲ ಜನರೊಳು ವಿನಯವ ಮಾಡದೆ ನೀ । ಸಕಲ ಜನರೊಳು ವಿನಯವ ॥
ಪ್ರಕಟಿಸೆನುತ ವೈದೇಹಿ ತನ್ನಣುಗಿನ[5] । ಸುಕುಮಾರಿಗೆ ಪೇಳಿದಳು ॥ ೬೬ ॥

ಇರು ಸತ್ಯದೊಳಿರು ಮುಕ್ತಕೋಪದೊಳೊಲಿ । ದಿರು ಪುರುಷನ ಚಿತ್ತವಱಿದು ॥
ಇರು ಮೃದುವಚನವ ಬಿಡದೆ ಮುತ್ತೈದೆಯಾ । ಗಿರು ನೀನೆಂದು ಪೇಳಿದಳು ॥ ೬೭ ॥

ಎಂದಿವಾದಿಯ ನೀತಿವಾತುಗಳನು ತನ್ನ । ನಂದನೆಗಱುಪಿ ಪರಸುತ ॥
ಅಂದು ಮನಸಿನುಮ್ಮಳವತಿಸಂತಸ । ದಿಂದ ಕಳುಪಿಯಂದವಳು[6] ॥ ೬೮ ॥

---

ಕೊಟ್ಟಿಗೆ, ಕೊಲ್ಲಾರ (ಕಮ್ಮಾರ ಕೊಟ್ಟಿಗೆ), ಹಣದ ಕೋಶ, ಮೂಟೆಕಟ್ಟಿದ ವಸ್ತುಗಳನ್ನೆಲ್ಲಾ ಕೊಟ್ಟು, ಪಲ್ಲಕ್ಕಿಯನ್ನೂ ಕೊಟ್ಟು ಜನಕನು ಪ್ರೀತಿಯಿಂದ ಮಗಳನ್ನು ಬೀಳ್ಕೊಟ್ಟನು. ॥ ೬೦ ॥ ಹೀಗೆ ಜನಕನು ತನ್ನ ಮಗಳಿಗೆ ಉಂಬಳಿ, ಉಡುವಳಿ, ಬಳುವಳಿಗಳನ್ನು ಕೊಟ್ಟು ಕಳುಹಿಸಲು, ಸೀತೆಯು ಏನೂ ವ್ಯತ್ಯಾಸವಿಲ್ಲದೆ ಅಲ್ಲಿಂದ ಹೊರಟು, ತನ್ನ ತಾಯ ಬಳಿಗೆ ಬಂದಳು. ॥ ೬೧ ॥ ತನ್ನ ಪಾದಕ್ಕೆ ವಂದಿಸಿದ ಮಗಳನ್ನು ವೈದೇಹಿಯು ಹಿಡಿದು ಎತ್ತಿ, ಗಲ್ಲವನ್ನು ಹಿಡಿದು, ಮುದ್ದಿಸಿ, ಮೈಸವರಿ. ಹೀಗೆ ನೀತಿಯನ್ನು ಉಪದೇಶಿಸಿದಳು. ॥ ೬೨ ॥ ಗಂಡನ ಮಾತನ್ನು ಮೀರದಿರುವ ಸ್ತ್ರೀಯರು ಲೋಕದಲ್ಲಿ ಪೂಜನೀಯರೆನಿಸುವರು. ಆದುದರಿಂದ ನೀನು ಎಂದಿಗೂ ಗಂಡನ ಮಾತನ್ನು ಉಲ್ಲಂಘಿಸಬಾರದು—ಎಂದು ವೈದೇಹಿ ಹೇಳಿದನು. ॥ ೬೩ ॥ ನಿನಗೆ ನಿನ್ನ ಹಿತವಂತರೆನಿಸುವವರಿಂದಲೇ ಆಗಲಿ–ಯಾವ ಕಷ್ಟವುಂಟಾದರೂ ಗಂಡನ ಆಜ್ಞೆಯನ್ನು ಎಂದಿಗೂ ಮೀರಬೇಡ—ಎಂದು ಮಗಳಿಗೆ ಬುದ್ಧಿ ಹೇಳಿದಳು. ॥ ೬೪ ॥ ಅತ್ತೆ, ಮಾವ, ಮೈದುನ, ನಾದಿನಿ, ಓರಗಿತ್ತಿ, ಅತ್ತಿಗೆ, ಸವತಿ–ಮುಂತಾದವರ ಮನಸ್ಸನ್ನು ತಿಳಿದುಕೊಂಡು, ಪ್ರೀತಿಯಿಂದ ಯೋಗ್ಯರೀತಿಯಲ್ಲಿ ವರ್ತಿಸು—ಎಂದು ಆ ಯುವತಿಗೆ (ಸೀತೆಗೆ) ಹೇಳಿದಳು. ॥ ೬೫ ॥ ಮಗಳೇ, ನೀನು ಕೆಲವರಲ್ಲಿ ಮಾತ್ರ ವಿನಯ ತೋರಿಸುವವಳಾಗದೆ, ಎಲ್ಲರಲ್ಲಿಯೂ ವಿನಯದಿಂದ ವರ್ತಿಸು—ಎಂದು ತನ್ನ ಪ್ರೀತಿಯ ಮಗಳಿಗೆ ವೈದೇಹಿಯು ಹೇಳಿದಳು. ॥ ೬೬ ॥ ನೀನು ಸತ್ಯವಂತಳಾಗಿರು, ಸಿಟ್ಟಿಲ್ಲದಿರು, ಗಂಡನ ಮನಸ್ಸನ್ನು ತಿಳಿದಿರು, ವಿನಯದಿಂದ ಮಾತಾಡುವುದನ್ನು ಬಿಡದಿರು, ಸುಮಂಗಲಿಯಾಗಿರು—ಎಂದು ಮಗಳಿಗೆ ಹೇಳಿದಳು. ॥ ೬೭ ॥ ವೈದೇಹಿಯು ಇವೇ ಮೊದಲಾದ ನೀತಿವಾಕ್ಯಗಳನ್ನು ತನ್ನ ಮಗಳಿಗೆ

---

[1] ಯಡಿವಳಿ (ಗ ಚ.) [2] ಕಳುಹಿ (ಗ) [3] ಪೊಱಮಟ್ಟಳಾ (ಚ). ೬೨ ಈ ಪದ್ಯ ಗದಲ್ಲಿಲ್ಲ. [4] ಧೂರತೆ (ಕ). [5] ತನ್ನಣುಗಿಗಾ (ಗ)
[6] ಕಳುಪಿದಯಂತವಳು (ಕ).

ಮಡದಿ ಕೇಳಾ ಜನಕನು ಜಾನಕಿಯ ಸಂ । ಗಡ ಪೋಗಿ ಬಾರೆಂದು ತನ್ನ ॥
ಪಡೆವಾಳನ[1] ಪಡೆವೆರಸು ಕಳುಪಲಂ । ದೊಡನೆ ತೆರಳಿದರಂದವರು[2] ॥ ೬೯ ॥

ಉಭಯಬಲವ ಕೂಡಿಕೊಂಡಾ ಪೊಳಲನು । ಶುಭದಿನದೊಳು ಪೊಱಮಟ್ಟು ॥
ಅಭಿಮತಸಿದ್ಧಿಯಕ್ಕೆಂದು ಭೂಸುರರೆನೆ । ವಿಭುಗಳು ತೆರಳಿದರಂದು ॥ ೭೦ ॥

ಚಿನ್ನತಿತ್ತಿರಿ ಱುಂಚೆ ಮುಱು ತಾಪು ಹೆಗ್ಗಾಳೆ । ಮನ್ನೆಯಗಹಳೆ ಪಿನಾಕಿ ॥
ಉನ್ನತವಹ ಶಂಖ ಪಟಹಡಿಂಡಿಮ ಮಡ್ಡು । ಸನ್ನಾಹ ಭೇರಿ ಮೊಳಗಲು ॥ ೭೧ ॥

ಡೋಳು ಡಮರು[3] ಗಿಡುಬಿಡಿ ವೀರವಂದ ನಿ । ಸ್ಸಾಳ ಡವುಡೆ ಜಿನವೆಸರ ॥
ಕಾಳೆ ಚೆಂಬಕವಱೆ ಮೊಳಗಲಾ ವಾದ್ಯದ । ಮೇಳದೊಳೈದಿದನಂದು ॥ ೭೨ ॥

ಕುಲಗಿರಿಗಳನೊಡೆಹಾಯ್ದು ದಿಕ್ಪತಿಗಳ । ಸಲೆ ಬೆದಱಿಸಿ ದಿಕ್ಕರಿಗಳ ॥
ತಲೆಗೊಡಹಿಸಿ ತಳಮುಳಲೇಳಿಸಿದುದಾ । ಜಲಧಿಯನಾ ವಾದ್ಯನಿನದ ॥ ೭೩ ॥

ಒಪಳೆ ಸಕಲ ವೈಭವದಿಂದೊಯ್ಯನಂ । ದಾ ಪೊಳಲನು ಪೊಱಮಟ್ಟು ॥
ಶ್ರೀಪತಿವೆರಸು ಜಾನಕಿಗೂಡಿ ದಶರಥ । ಭೂಪತಿಸುತ[4]ನೈದಿದನು[5] ॥ ೭೪ ॥

ಕಳುಪಲೈದಿದ ಬಂಧುಜನಗಳ ಪಿಂದಕೆ । ಕಳುಪಿ ಮುಂದಕೆ ನಡೆತರುತ ॥
ತಳುವದೆ ಪಯಣ ಪಯಣಗತಿಯೊಳಗಾ । ಯೆಳೆಯಣ್ಮನತಿ ರಾಗದೊಳು ॥ ೭೫ ॥

ತಂದೆಯ ಬಳಿಗೋರ್ವ ಮುಖ್ಯ ಚರನ ಪೋ । ಗೆಂದು ಶ್ರೀರಾಮಚಂದ್ರಮನು ॥
ಅಂದುಸುರಲು ಪಗಲಿರುಳಾಗಿ ಬೇಗದೊಳ್ । ಬಂದು ಕಂಡನು ದಶರಥನ ॥ ೭೬ ॥

---

ಹೇಳಿ ಆಶೀರ್ವದಿಸಿ, ಅಂದು ತನ್ನ ಮನಸ್ಸಿಗಾದ ದುಃಖ–ಸಂತೋಷಗಳಿಂದ ಕಳುಹಿಸಿದಳು ॥ ೬೮ ॥ ಎಲೈ ಚೇಳಿನಿಯೇ ಕೇಳು ಜನಕನು ತನ್ನ ಮಗಳೊಡನೆ ನೀನೂ ಹೋಗೆಂದು ಸೇನಾಪತಿಯನ್ನು ಸೈನ್ಯಸಹಿತವಾಗಿ ಕಳುಹಿಸಿದನು ಆಗ ಅವರೆಲ್ಲರೂ ತೆರಳಿದರು ॥ ೬೯ ॥ ಎರಡು ಸೈನ್ಯವನ್ನೂ ಕೂಡಿಕೊಂಡು ರಾಮಲಕ್ಷ್ಮಣರು ಶುಭಮುಹೂರ್ತದಲ್ಲಿ ಮಿಥಿಲಾಪಟ್ಟಣದಿಂದ ಹೊರಟರು ಆಗ ಬ್ರಾಹ್ಮಣರು 'ನಿಮ್ಮ ಇಷ್ಟಾರ್ಥವು ಸಿದ್ಧಿಸಲಿ' ಎಂದು ಆಶೀರ್ವಾದ ಮಾಡಲು, ಇವರು ತೆರಳಿದರು. ॥ ೭೦ ॥ ಆ ಹೊತ್ತಿಗೆ ಚಿನ್ನದ ತುತೂರಿ, ರುಂಚೆ, ಮುರಿ (ಕೊಂಬು), ತಾಪು, ದೊಡ್ಡ ತುತೂರಿ, ಮನ್ನೆಕಾಳೆ, ಪಿನಾಕಿ, ಶ್ರೇಷ್ಠವಾದ ಶಂಖ, ಪಟಹ, ಡಿಂಡಿಮ, ಮಡ್ಡು, ಸಿದ್ಧತೆಯ ಭೇರಿ—ಮುಂತಾದವು ಶಬ್ದಮಾಡಿದವು ॥ ೭೧ ॥ ಡೋಲು, ಡಮರು, ಗಿಡುಬಿಡಿ, ವೀರವಂದ, ನಿಸ್ಸಾಳ, ದೌಡೆ, ಜಿನಗಾಳೆ, ಚೆಂಬಕವರೆ—ಮುಂತಾದ ವಾದ್ಯಗಳು ಧ್ವನಿಮಾಡಲು ಅವುಗಳೊಡನೆ ರಾಮನು ತೆರಳಿದನು ॥ ೭೨ ॥ ಆಗ ಮೊಳಗುತ್ತಿದ್ದ ವಾದ್ಯಗಳ ಶಬ್ದವು ಕುಲಪರ್ವತಗಳನ್ನು ಚೆದರಿಸಿತು, ದಿಕ್ಪಾಲಕರನ್ನು ಭೀತಿಗೊಳಿಸಿತು, ದಿಗ್ಗಜಗಳು ತಲೆಯನ್ನು ಕೊಡಹುವಂತೆ ಮಾಡಿತು, ಸಮುದ್ರದ ತಳದ ಮರಳನ್ನು ಮೇಲೆಬ್ಬಿಸಿತು ॥ ೭೩ ॥ ಎಲೈ ಚೇಳಿನಿಯೇ, ದಶರಥ ರಾಜನ ಮಗನಾದ ಶ್ರೀರಾಮನು ಎಲ್ಲಾ ರೀತಿಯ ವೈಭವದಿಂದ ಮೆಲ್ಲನೆ ಆ ಪಟ್ಟಣದಿಂದ ಹೊರಟು ಲಕ್ಷ್ಮಣ ಮತ್ತು ಸೀತೆ ಇವರನ್ನು ಕೂಡಿಕೊಂಡು ತೆರಳಿದನು. ॥ ೭೪ ॥ ತನ್ನನ್ನು ಕಳುಹಿಸಿಕೊಡುವುದಕ್ಕಾಗಿ ಬಂದ ಬಂಧುಜನರನ್ನು ಹಿಂದಕ್ಕೆ ಕಳುಹಿಸಿ, ಶ್ರೀರಾಮನು ಮುಂದಕ್ಕೆ ಪಯಣಗತಿಯಲ್ಲಿ ನಿಲ್ಲದೆ ಸಂತೋಷದಿಂದ ಬರುತ್ತಿದ್ದನು ॥ ೭೫ ॥ ಹೀಗೆ ಬರುತ್ತ ಶ್ರೀರಾಮನು ತನ್ನ ತಂದೆಯ ಬಳಿಗೆ ಮುಂದಾಗಿ ಒಬ್ಬ ಚಾರಕನನ್ನು

---

[1] ಪಡೆವಳ್ಳನ (ಗ), [2] ತೆರಳಿದರಲ್ಲಿಂದ (ಗ ಚ) [3] ದಗಮು (ಚ) [4] ಭೂಪನ ಸುತ (ಗ ಚ) [5] ತೆರಳಿದನು (ಚ)

ಧರಣಿಗೆ ಬಿಳ್ದೀಳ್ದತಿಭಕ್ತಿಯೊಳು ತನ್ನ । ಶಿರದೊಳು ಕರಕಂಜವನು ॥
ಇರಿಸಿ ತೆಗೆದು ದಶರಥ ಭೂವರಗಾ । ಚರನಿಂತು ಬಿನ್ನವಿಸಿದನು ॥ ೭೭ ॥

ರಾಯ ಚಿತ್ತೈಸೈವತ್ತಾರು ದೇಶದ । ರಾಯರುಗಳು ತಮತಮಗೆ ॥
ಖೋಯೆನುತಿರೆ[1] ನಿನ್ನ ನಿಜಕುಲಾಂಬರ ದಿನ । ನಾಯಕನಾ ರಾಮಚಂದ್ರ ॥ ೭೮ ॥

ಹಸೆನಿಂದು ಸೀತಾದೇವಿಯರನು ತ । ನ್ನಸಮಬಲವ ಕೂಡಿಕೊಂಡು ॥
ಅಸಹಾಯಶೂರ ರಾಘವ ಬಂದಪನೆಂ । ದುಸುರಲಂದದ ಕೇಳುತವೆ[2] ॥ ೭೯ ॥

ಬಿಟ್ಟನು ಬಹುವಾಡವನಂಗಚಿತ್ತವ । ಕೊಟ್ಟನು ಮನದಣಿವಂತು[3] ॥
ಪಟ್ಟಣವನು ಸಿಂಗರಿಸೆಂದು ಮಂತ್ರಿಯ । ನೆಟ್ಟನೆ ಕರೆಸಿ ಪೇಳಿದನು ॥ ೮೦ ॥

ಆ ನುಡಿಗೇಳುತಂದಾ ಮಂತ್ರೀಶನಂ । ದಾನದ್ಯೈತಂದು ಬೇಗದೊಳು ॥
ಆ ನಗರವ ಸಿಂಗರಿಸಿದನಿರದಂ । ದಾನದನೇನ ಪೇಳುವೆನು[4] ॥ ೮೧ ॥

ತೋರ ಮುತ್ತಿನ ರಂಗವಲಿಯಿಂದ ಸಾದಿನ । ಸಾರಣೆಯಿಂದ ಕುಂಕುಮದ ॥
ಕಾರಣೆಯಿಂದ ಕಣ್ಗೆಸೆವಂತೆ ಪೊಳಲ ಸಿಂ । ಗಾರವನಂದು ಮಾಡಿದರು ॥ ೮೨ ॥

ಎಡೆವಿಡದೊಪ್ಪುವ ಕೇರಿಕೇರಿಯ ಮುಂ । ಗಡೆಯೊಳು ಕಟ್ಟಿ ರಂಜಿಸುವ ॥
ಗುಡಿತೋರಣ ಕೋಟಾಕೋಟಿಯಿಂದದು । ಪಡೆದುದು ಕಣ್ಗೆ ಕೌತುಕವ ॥ ೮೩ ॥

ಅಲ್ಲಲ್ಲಿ ಕಟ್ಟಿದ ಚಿತ್ರಪಟಗಳಿಂದ । ಝುಲ್ಲಿಗಳಿಂದ ರಾಜಿಸುವ ॥
ಪುಲ್ಲಿ[5]ಪಟ್ಟೆಯ ನೇಜೆಯ[6]ದಿಂದಲದ ತಳು । ವಿಲ್ಲದೆ ಸಿಂಗರಿಸಿದರು ॥ ೮೪ ॥

---

ಕಳುಹಿಸಿದನು. ಅವನು ಹಗಲಿರುಳೆನ್ನದೆ ನಡೆದು ಬೇಗನೆ ಬಂದು ದಶರಥನನ್ನು ಕಂಡನು ॥ ೭೬ ॥ ದಶರಥನನ್ನು ಕಂಡೊಡನೆ ಆ ದೂತನು ಸಾಷ್ಟಾಂಗ ನಮಸ್ಕಾರಮಾಡಿ, ಎದ್ದುನಿಂತು ಕೈಗಳನ್ನು ಮುಗಿದು ಹೀಗೆ ವಿಜ್ಞಾಪನೆ ಮಾಡಿದನು. ॥ ೭೭ ॥ ಎಲೈ ರಾಜನೇ ಕೇಳು. ಮಿಥಿಳೆಯಲ್ಲಿ ಸೀತಾಸ್ವಯಂವರಕ್ಕೆ ಬಂದ ಐವತ್ತಾರು ದೇಶದ ರಾಜರೆಲ್ಲರು 'ಖೋ' ಎಂದು ಉದ್ಗಾರಮಾಡುತ್ತಿರಲು, ನಿನ್ನ ವಂಶವೆಂಬ ಆಕಾಶಕ್ಕೆ ಸೂರ್ಯನಂತಿರುವ ರಾಮನು ॥ ೭೮ ॥ ಸೀತಾದೇವಿಯನ್ನು ವರಿಸಿ, ತನ್ನ ಅಸಮಾನವಾದ ಸೈನ್ಯವನ್ನು ಕೂಡಿಕೊಂಡು, ಅಸಹಾಯಶೂರನಾಗಿ ಬರುತ್ತಿದ್ದಾನೆ—ಹೀಗೆಂದು ದೂತನು ಹೇಳಿದನು. ॥ ೭೯ ॥ ದಶರಥನು ಈ ಸಂತೋಷವಾರ್ತೆಯನ್ನು ಕೇಳಿದೊಡನೆ, ಆ ದೂತನಿಗೆ ಕೆಲವು ಉಂಬಳಿಭೂಮಿಯನ್ನು ಬಿಟ್ಟುಕೊಟ್ಟನು, ಮನಸ್ಸು ತೃಪ್ತಿಪಡುವಂತೆ ಉಡುಗೊರೆಗಳನ್ನು ಕೊಟ್ಟನು. ಒಡನೆ ಮಂತ್ರಿಯನ್ನು ಕರೆಸಿ ತನ್ನ ಪಟ್ಟಣವನ್ನು ಸಿಂಗರಿಸಲು ಆಜ್ಞೆಮಾಡಿದನು. ॥ ೮೦ ॥ ಆ ಮಾತನ್ನು ಕೇಳಿ, ಮಂತ್ರೀಶ್ವರನು ಒಡನೆ ಬಂದು, ಬೇಗನೆ ಪಟ್ಟಣವನ್ನು ಶೃಂಗಾರಮಾಡಿಸಿದನು. ಆ ಸಂಗತಿಯನ್ನು ನಾನು ಏನು ಹೇಳಲಿ! ॥ ೮೧ ॥ ದೊಡ್ಡ ಮುತ್ತುಗಳ ರಂಗೋಲೆಯಿಂದಲೂ, ಸಾದಿನ (ಪರಿಮಳ ವಸ್ತುವಿನ) ಸಾರಣೆಯಿಂದಲೂ, ಕುಂಕುಮದ ಗೀರುಗಳಿಂದಲೂ, ಕಣ್ಣಿಗೆ ಸೊಗಸಾಗಿ ಕಾಣುವಂತೆ ಅಂದು ಪಟ್ಟಣವನ್ನು ಶೃಂಗಾರಮಾಡಿದರು. ॥ ೮೨ ॥ ನಿಬಿಡವಾಗಿದ್ದು ಶೋಭಿಸುವ ಬೀದಿಗಳ ಮುಂದುಗಡೆಯಲ್ಲಿ ಕಟ್ಟಿ, ರಾಜಿಸುವ ಗುಡಿತೋರಣಗಳಿಂದಲೂ, ಗೋಡೆಯ ತುದಿಗಳಿಂದಲೂ ಆ ಪಟ್ಟಣವು ಕಣ್ಣಿಗೆ ಅಚ್ಚರಿಯೆನಿಸಿತು. ॥ ೮೩ ॥ ಅಲ್ಲಲ್ಲಿ ಕಟ್ಟಿದ ಚಿತ್ರಪಟಗಳಿಂದಲೂ, ನಾಲುಸಾಲಾಗಿ ಮೆರೆಯುತ್ತಿರುವ ಹುಲ್ಲೆಪಟ್ಟೆಯ

---

[1] ಭೋಯೆನುತಿರೆ (ಗ ಚ). [2] ಕೇಳಿ ಕೇಳಿ (ಗ). [3] ದಣಿವಂತೆ (ಚ) [4] ಬಣ್ಣಿಪೆನು (ಗ. ಚ.) [5] ಪುಲ್ಲೆ (ಗ). [6] ನೇರ್ಝಿಯ (ಕ).

ಕಟ್ಟಿದ ಕೇತನ ವೈಜಯಂತಿಗಳು ಬಾಂ । ಬಟ್ಟೆಗರೆಡೆಯಾಟವನು ॥
ಕಟ್ಟ ರಾಜಿಪವೆಂದೆನೆ ಪೇಳ್ವೆನೇನನಾ । ಪಟ್ಟಣದತಿ ಚೆಲ್ವಿಕೆಯ ॥ ೮೫ ॥

ಅಂಬುಜವದನೆ ನಾನಾ ರತ್ನಗಳ ಬಲು । ಲಂಬಣಗಳ ತರವಿಡಿದು ॥
ತುಂಬಿ ಕಟ್ಟಿದವೆಂದೆನಲಾ[1] ಪೊಳಲಾ । ಡಂಬರವನು ಪೇಳ್ವೆನೇನ ॥ ೮೬ ॥

ಪೊಳಲನೀ ತೆಱದೊಳು ಸಿಂಗರವನು ಮಾಡಿ[2] । ಕಳಸ ಕನ್ನಡಿ ಗುಡಿವೆರಸು ॥
ನಳಿನಾಕ್ಷಿಯರೊಡವರೆ ಮಂತ್ರಿ ಕುವರನ । ಬಳಿಗಿದಿರಾಗಿ ನಡೆದನು ॥ ೮೭ ॥

ಬಂದಪ ಗಡ ಶ್ರೀರಾಮ ಸೀತೆಯ ಹಸೆ । ನಿಂದನು ಗಡ ನಾವವನ ॥
ನಿಂದು ನೋಡುವ ಬನ್ನಿಯೆಂಬ ಜನರ ಬಲು । ಸಂದಣಿ ಮಸಗಿದುದಾಗ ॥ ೮೮ ॥

ನೋಡಬೇಕವನ ಸೀತಾದೇವಿಯರ ಪೊಸ । ಗಾಡಿಯನೆಂದವರೊಡನೆ ॥
ಕೂಡಿದ ಜನವೈದಿದುದವನೆಡೆಗದ । ನಾಡುವೆನೇನ ಬಾಯುಳಿದು ॥ ೮೯ ॥

ಎಡಬಲದೊಳಗೊಂದೆರಡು[3] ಗಾವುದವೆಡೆ । ವಿಡದೆ[4] ನೋಡುವ ನೋಟಕರ ॥
ನಡುವೆ ದಂಪತಿಗಳಾನೆಯನೇಱಿ ಮೆಲ್ಲನೆ । ನಡೆದರು ಮೃಗಶಿಶುನಯನೆ ॥ ೯೦ ॥

ಹಲವು ವಾದ್ಯದ ಬಲು ಘೋಷದಿಂ ಬಹುಜನ । ದುಲುಹಿಂದ ಕಟ್ಟಿಗೆಯವರ ॥
ಕಲಕಲದಿಂದ ಭಟರ ಕೂಗಾಟದಿಂ । ಬಲ ನಡೆದುದು ಗಮಕದೊಳು[5] ॥ ೯೧ ॥

ತುರಗನಿಚಯ ತೆರೆ ಬೆಳ್ಗೊಡೆ ಬೆಳ್ನೊರೆ । ಪರಿವಾರ ಮೀನಸಿಕಾಂತಿ ॥
ಶರ[6] ವಾದ್ಯರವ ಘೋಷವಾಗಲಂದಾ ಬಲು । ನೆರವಿ ಪಾಲ್ಗಡಲಂತೆಸೆದುದು ॥ ೯೨ ॥

---

ಬಾಣಾಕೃತಿಗಳಿಂದಲೂ ಆ ಪಟ್ಟಣವನ್ನು ತಡವಿಲ್ಲದೆ ಶೃಂಗಾರಮಾಡಿದರು ॥ ೮೪ ॥ ಎಲ್ಲೆಡೆ ಧ್ವಜಪತಾಕೆಗಳನ್ನು ಕಟ್ಟಿದುದರಿಂದ ಆಕಾಶಮಾರ್ಗದಲ್ಲಿ ಸಂಚರಿಸುವವರಿಗೆ ತಡೆಯುಂಟಾಯಿತು ಹೀಗಿರುವಾಗ ಆ ಪಟ್ಟಣದ ಚೆಲುವನ್ನು ಏನೆನ್ನಲಿ! ॥ ೮೫ ॥ ಎಲೈ ಚೇಳಿನಿಯೇ ಕೇಳು ಹಲವಾರು ವಿಧದ ರತ್ನದ ಗೊಂಚಲುಗಳನ್ನು ಕ್ರಮದಂತೆ ಅಲ್ಲಲ್ಲ ಕಟ್ಟಿದ್ದರು ಇದರಿಂದ ಆ ಪಟ್ಟಣಕ್ಕೆ ಉಂಟಾದ ಸಂಭ್ರಮವನ್ನು ಏನೆನ್ನಲಿ! ॥ ೮೬ ॥ ಮಂತ್ರಿಯು ಈ ರೀತಿಯಾಗಿ ಪಟ್ಟಣವನ್ನು ಶೃಂಗಾರಗೊಳಿಸಿ, ಕಲಶ–ಕನ್ನಡಿ–ಪತಾಕೆಗಳನ್ನು ಹಿಡಿದ ಸುಂದರಿಯರು ತನ್ನ ಜೊತೆಯಲ್ಲಿ ಬರುತ್ತಿರಲು ಶ್ರೀರಾಮನನ್ನು ಇದಿರುಗೊಳ್ಳಲು ನಡೆದನು ॥ ೮೭ ॥ ಆಗ ಜನರು ಗುಂಪುಗುಂಪಾಗಿ ಬರುತ್ತ ಹೀಗೆಂದರು—ಶ್ರೀರಾಮನು ಬರುತ್ತಿದ್ದಾನಂತೆ! ಅವನು ಸೀತೆಯನ್ನು ವರಿಸಿರುವನಂತೆ! ನಾವು ನಿಂತುಕೊಂಡು ಅವನನ್ನು ನೋಡುವ,ಬನ್ನಿ ॥ ೮೮ ॥ ಶ್ರೀರಾಮನನ್ನೂ ನೋಡಬೇಕು–ಅವನೊಡನಿರುವ ಸೀತಾದೇವಿಯ ಹೊಸಚೆಲುವನ್ನೂ ನೋಡಬೇಕು–ಎಂದು ಹೇಳುತ್ತ ಮಂತ್ರಿಯೊಡನೆ ಜನರು ಗುಂಪಾಗಿ ಶ್ರೀರಾಮನನ್ನು ಎದುರುಗೊಳ್ಳಲು ನಡೆದರು—ಅದನ್ನು ಏನು ಹೇಳಲಿ! ॥ ೮೯ ॥ ಎಡಬಲಗಳಲ್ಲಿ ಒಂದೆರಡು ಗಾವುದಗಳ ದೂರದವರೆಗೂ ಕಿಕ್ಕಿರಿದು ನೋಡುತ್ತಿರುವ ಜನರ ನಡುವೆ ಈ ನವದಂಪತಿಗಳು ಆನೆಯನ್ನೇರಿ ಮೆಲ್ಲನೆ ಬರುತ್ತಿದ್ದರು ॥ ೯೦ ॥ ಹಲವು ವಿಧವಾದ ವಾದ್ಯಗಳ ಶಬ್ದದಿಂದಲೂ, ಬಹುಸಂಖ್ಯೆಯಲ್ಲಿದ್ದ ಜನರ ಬೊಬ್ಬೆಗಳಿಂದಲೂ, ಆಜ್ಞಾಧಾರಿಗಳ ಶಬಗಳಿಂದಲೂ, ಸೈನಿಕರ ಕೂಗಾಟದಿಂದಲೂ, ಸೈನ್ಯವು ಠೀವಿಯಿಂದ ನಡೆಯಿತು ॥ ೯೧ ॥ ಕುದುರೆಗಳ ಸಮೂಹವೇ ತರಂಗ

---

[1] ಕಟ್ಟಿದರೆಂದೆನಲಾ (ಚ) [2] ಮಾಡೆ (ಕ ಚ) [3] ದೊಳಗೇಳೆಂಟು (ಗ ಚ) [4] ಗಾವುದನೆಡವಿಡದೆ (ಗ) ಗಾವುದಯೆಡೆವಿಡದೆ (ಕ)
[5] ಭರದೊಳಗೆ (ಗ), ೯೧ನೆ ಪದ್ಯದಿಂದ ೧೧೭ನೇ ಪದ್ಯದ ವರೆಗಿನ ೨೭ ಪದ್ಯಗಳು (ಚ) ಪ್ರತಿಯಲ್ಲಿಲ್ಲ [6] ಸ್ವರ (ಗ ಚ)

ಇಕ್ಕೆಲದೊಳಗೈದುವ ಮಂದಿ ಕುದುರೆಯ । ಸೊಕ್ಕಾನೆಗಳ ಸಂದಣಿಯೊಳು ॥
ಅಕ್ಕರಿಗರ ಪಾಠಕರುಲುಹಿಂ ಬಂದು । ಪೊಕ್ಕನು ಪೊಳಲನಾ ಕುವರ ॥ ೯೩ ॥

ಉತ್ತಮ ವಿಪ್ರರಾಶೀರ್ವಾದದಿಂದ[1] । ತ್ಯುತ್ತಮಮಪ್ಪ ಲಗ್ನದೊಳು ॥
ಪತ್ತನವನು ಬಂದು ಪೊಕ್ಕನೊಯ್ಯನೆ ಕೈ । ಯೆತ್ತಿ ಕೊಂಡಾಡೆ ವಂದಿಗಳು ॥ ೯೪ ॥

ದಳಪತಿಗಳು ಮಂತ್ರಿಗಳು ಮನ್ನೆಯರು ಮಂ । ಡಳಿಕರು ಬಂಧುಜನಗಳು ॥
ಅಳಿಯಂದಿರರಮಕ್ಕಳಾಪ್ತಜನರುಗಳು । ತಳುವದೆ ಬಪ್ಪ ಕುವರಗೆ ॥ ೯೫ ॥

ಇಟ್ಟ ನಿವಾಳಿಯ ವಸ್ತ್ರವಿಕ್ಕೆಲದೊಳ । ಗೊಟ್ಟಿದವೆಂತೆಸೆ[2] ಕಣ್ಗೆ ॥
ಬೆಟ್ಟಗಳಂತೆ ಮೆಱೆದವು ಸಿರಿಯ ಬಾಯಿ । ವಿಟ್ಟು[3] ನುಡಿಯಲೋರ್ವರಳವೆ ॥ ೯೬ ॥

ಇಂತತಿ ವೈಭವದೊಡಗೂಡಿ ಬಲರಾಮ । ರಂತರಿಸದೆ ಪುರದೊಳಗೆ ॥
ಸಂತಸದಿಂ ನಡೆತರುತಿರೆ ನಗರದ । ಕಾಂತಾಜನ ನೋಡಿತಬಲೆ[4] ॥ ೯೭ ॥

ಮಾಡ ಮದಿಲು[5] ಮಾಳಿಗೆ ಚಪ್ಪರ ಕರು । ಮಾಡದಗ್ರದ[6] ನೆಲೆಗಳೊಳು ॥
ನಾಡೆ ನೆರೆದು ನಿಂದು ನೋಡಿದುದವನ ಸು । ಗಾಡಿಯ ಗಾಡಿಕಾತಿಯರು ॥ ೯೮ ॥

ಬಿಟ್ಟ ಮುಡಿಯ ಕಟ್ಟದೆ ಮುಂದೆಯಳುತಿರ್ದ । ತೊಟ್ಟಿಲ ಮಗುವ ನಿಟ್ಟಿಸದೆ ॥
ಕಟ್ಟುಕಾವಲಿಗಳುಕದೆ ಬಂದವನ ಕ । ಣ್ಣಿಟ್ಟು ನೋಡಿತು ಕಾಂತೆಯರು[7] ॥ ೯೯ ॥

---

ಗಳು, ಬಿಳಿಕೊಡೆಯೇ ಬಿಳಿನೊರೆ, ಪರಿವಾರದವರು ಮೀನುಗಳು, ಖಡ್ಗದ ಪ್ರಕಾಶವು ನೀರು, ವಾದ್ಯಗಳ ಧ್ವನಿಯೇ ಭೋರ್ಗರೆತವೆನಿಸಲು, ಆ ಸಮೂಹವು ಕ್ಷೀರಸಾಗರದಂತೆ ಶೋಭಿಸಿತು. ॥ ೯೨ ॥ ಎರಡೂ ಬದಿಗಳಲ್ಲಿ ಹೋಗುತ್ತಿರುವ ಜನಸಮೂಹದಿಂದಲೂ ಕುದುರೆಗಳ, ಹಿಂಡಿನಿಂದಲೂ, ಮದ್ದಾನೆಗಳ ಗುಂಪಿನಿಂದಲೂ, ವಿದ್ವಾಂಸರ ಮತ್ತು ಸ್ತುತಿಪಾಠಕರ ಮಾತುಗಳಿಂದಲೂ ಶ್ರೀರಾಮನ ಬಂದು ಪುರಪ್ರವೇಶವನ್ನು ಮಾಡಿದನು ॥ ೯೩ ॥ ಶ್ರೀರಾಮನು ಬಹಳ ಶ್ರೇಷ್ಠವೆನಿಸುವ ಮುಹೂರ್ತದಲ್ಲಿ ತನ್ನ ಪಟ್ಟಣವನ್ನು ಪ್ರವೇಶಿಸಿದನು ಆಗ ಶ್ರೇಷ್ಠರಾದ ಬ್ರಾಹ್ಮಣರು ಆಶೀರ್ವಾದ ಮಾಡಿದರು. ಸ್ತುತಿಪಾಠಕರು ಕೈಯೆತ್ತಿ ಹೊಗಳಿದರು. ॥ ೯೪ ॥ ಶ್ರೀರಾಮನ ಜೊತೆಯಲ್ಲಿ ಸೇನಾಪತಿಗಳು, ಮಂತ್ರಿಗಳು, ಜನನಾಯಕರು, ಆಶ್ರಿತ ರಾಜರು, ಬಾಂಧವರು, ಅಳಿಯಂದಿರು, ರಾಜಕುಮಾರರು, ಸ್ನೇಹಿತರು—ಮುಂತಾದವರು ತಡಮಾಡದೆ ಬಂದರು. ॥ ೯೫ ॥ ರಾಮನ ಎರಡೂ ಬದಿಗಳಲ್ಲಿ ತಂದಿಟ್ಟ ನಿವಾಳಿಯ ವಸ್ತ್ರಗಳು ಬೆಟ್ಟಗಳಂತೆ ಕಣ್ಣಿಗೆ ಕಾಣುತ್ತಿದ್ದುವು. ಅದರ ಸಿರಿಯನ್ನು ಯಾರೊಬ್ಬರಿಗೂ ವರ್ಣಿಸಲು ಸಾಧ್ಯವಾಗದು. ॥ ೯೬ ॥ ಈ ರೀತಿಯಾಗಿ ಬಹಳ ವೈಭವದಿಂದ ಬಲರಾಮನು ತಡವಿಲ್ಲದೆ ಸಂತೋಷದಿಂದ ಪಟ್ಟಣದ ಒಳಗೆ ಬಂದನು ಆಗ ನಗರದ ಸ್ತ್ರೀಯರು ಅವನನ್ನು ನೋಡಿದರು ॥ ೯೭ ॥ ಸುಂದರಿಯರಾದ ಸ್ತ್ರೀಯರು ರಾಮನನ್ನು ನೋಡುವುದಕ್ಕಾಗಿ, ಮಾಡು, ದಿಣ್ಣೆ, ಮಾಳಿಗೆ, ಚಪ್ಪರ, ಉಪ್ಪರಿಗೆ, ಮುಂದಾದವುಗಳ ನೆಲೆಗಳಲ್ಲಿ ಒಟ್ಟುಸೇರಿ ನಿಂತು, ಅವನ ಸೌಂದರ್ಯವನ್ನು ನೋಡಿದರು. ॥ ೯೮ ॥ ಹೆಂಗುಸರು ರಾಮನನ್ನು ದೃಷ್ಟಿಯಿಟ್ಟು ನೋಡುವ ಕುತೂಹಲದಲ್ಲಿ ಬಿಟ್ಟುಹೋದ ಕೂದಲನ್ನು ಕಟ್ಟಲಿಲ್ಲ. ತಮ್ಮ ಮುಂದೆ ಅಳುವ ತೊಟ್ಟಿಲ ಮಗುವಿನ ಕಡೆಗೂ ನೋಡಲಾರದಾದರು ತಾವು ಅನುಸರಿಸಬೇಕಾಗಿದ್ದ ನಿಯಮಕ್ಕಾಗಲೀ

---

[1] ವಿಪ್ರರುಗಳನಾಶೀರ್ವಾದದ (ಕ). [2] ಗೊಟ್ಟಿದ್ದವೆಂತೆನೆ (ಗ) [3] ಬಾಯ್ಬಿಟ್ಟು (ಗ) [4] ನೋಡಿತಿಂತು(ಗ) [5] ಮಳಲು (ಕ) [6] ವಾಡದಗ್ರದ (ಕ) [7] ನೋಡಿದರಂಗನೆಯರು (ಗ).

ಪರಿಭವಕಗಿಯದೆ[1] ಪರಿಹಾಸಕಂಜದೆ । ಪುರುಷರಾಜ್ಞೆಗಳಿಗಳುಕದೆ ॥
ಪರಮ ಕಾತರದಿಂದ ಪರವಧುಗಳು ಬಂ । ದಿರದೆ ನೋಡಿದರು ಕುವರನ ॥ ೧೦೦ ॥

ಮಾವ ಮೈದುನನತ್ತೆಯತ್ತಿಗೆಯರ ಮಾತ । ಭಾವಿಸದಿದಿರಿಗಳುಕದೆ ॥
ಕಾವಲವರ ಕಳ್ದು[2] ಕಾಮಿನಿಯರು ಬಂ । ದಾ ವಿಭುವನು ನೋಡುವರು ॥ ೧೦೧ ॥

ಹೊಲಬುದಪ್ಪುವುದೆಂದು[3] ಮನೆವೆಣ್ಣು ಕೈಸಂ । ಕಲೆಯ[4] ತಂತೊಳ್ತಿರ ಕೈಗೆ ॥
ನೆಲೆಮಾಡಿಯವರ ಬೆಂಬಿಡದಾ ಕುವರನ । ಚೆಲುವ ಬಂದಿರದೆ ನೋಡುವರು[5] ॥ ೧೦೨ ॥

ಪಳುಕು ಪವಳ ಪಚ್ಚೆ ಪದ್ಮರಾಗಂಗಳ । ವಿಳಸಿತ ನೀಲ ಕೆಂಗಲ್ಲ ॥
ಪೊಳೆವ ಮಾಡಮನೇಱಿ ಮಾನಿನಿಯರು ಬಂ । ದೆಳಸಿ ನೋಡಿದರಂದವನ[6] ॥ ೧೦೩ ॥

ಕಡೆಗಣ್ಣ ಕಾಂತಿ ಪರಿದು ಪಸರಿಸಲಂ । ದೊಡನೆ ಮೈಗಂಪು ದೆಸೆಯೊಳು ॥
ಬಿಡುಮುಡಿಯಬಲೆಯರ್ಕೈತಂದವನ ಕ । ಣ್ಬಿಡಿದು[7] ನೋಡಿದರೆಡೆವಿಡದೆ ॥ ೧೦೪ ॥

ಸೆಱಗ ಪಿಡಿದು ನಿಲ್ಲೆಂದರಿಗೆ[8] ಕೈಲಂಚವ । ತೆಱುತಿಳಿದವನಿಗೆ ಬೀಳ್ವ ॥
ನಿಱಿಯು ಮಱೆದು ನೀಱೆಯರು ತಮ್ಮ ಕಂಗಳ । ಬಱಬಱೆವಂತು ನೋಡಿದರು ॥ ೧೦೫ ॥

ನಡೆಯಲೀಯದ ಹಂಸೆಗಳಿಗೆ ಮುತ್ತಿನ ಬಲು । ತೊಡವನೀಡಾಡಿ ಬಳಿಯೊಳು ॥
ನಡೆಯಲೀಯದ ಕಟಿ ಕುಚಕೆಯೆನುವೆನೆಂದು[9] । ಬಿಡದೆ ಬೈದಪಳೋರ್ವಳಜನ ॥ ೧೦೬ ॥

---

ತಮ್ಮ ರಕ್ಷಣಾ ವಿಷಯಕ್ಕಾಗಲೀ ಮನಕೊಡಲಿಲ್ಲ ॥ ೯೯ ॥ ಅಪಮಾನಕ್ಕೆ ಹೆದರದೆ, ಪರಿಹಾಸ್ಯಕ್ಕೆ ಅಂಜದೆ, ಗಂಡಂದಿರ ಆಜ್ಞೆಯನ್ನೂ ಲೆಕ್ಕಿಸದೆ, ಹೆಚ್ಚಾದ ಕಾತರವನ್ನು ತಾಳಿದವರಾಗಿ ಪರಸ್ತ್ರೀಯರು ರಾಮನನ್ನು ನೋಡಿದರು ॥ ೧೦೦ ॥ ಕಾಮಚೇಷ್ಟೆಯುಳ್ಳ ಸ್ತ್ರೀಯರು ತಮ್ಮ ಮಾವ, ಮೈದುನ, ಅತ್ತೆ, ಅತ್ತಿಗೆಯವರ ಮಾತನ್ನು ಮನಸ್ಸಿಗೆ ತೆಗೆದುಕೊಳ್ಳದೆ, ಅವರಿಗೆ ವಿರೋಧವಾಗುವುದೆಂಬುದಕ್ಕೂ ಹೆದರದೆ, ತಮ್ಮನ್ನು ಕಾಯುತ್ತಿರುವವರ ಕಣ್ಣುತಪ್ಪಿಸಿ ಬಂದು, ಆ ಒಡೆಯನಾದ ಶ್ರೀರಾಮನನ್ನು ನೋಡಿದರು. ॥ ೧೦೧ ॥ ಮನೆಯ ಹೆಂಗುಸರು ತಮಗೆ ದಿಕ್ಕು ತಪ್ಪಿಹೋಗದಂತೆ ತಮ್ಮ ಕೈಯ ಸಂಕಲೆಯನ್ನು ಸೇವಕಿಯರ ಕೈಗೆ ಕೊಟ್ಟು, ಅನುಸರಿಸಿ ಬಂದು, ಶ್ರೀರಾಮನ ಚೆಲುವನ್ನು ಎಡೆಬಿಡದೆ ನೋಡುವರು, ॥ ೧೦೨ ॥ ಸ್ತ್ರೀಯರು ಬಿಳಿ ಶಿಲೆ, ಹವಳ, ನೀಲರತ್ನ, ಪದ್ಮರಾಗ, ಕೆಂಪು ಕಲ್ಲುಗಳಿಂದ ಹೊಳೆಯುವ ಉಪ್ಪರಿಗೆಗಳನ್ನೇರಿ, ಶ್ರೀರಾಮನನ್ನು ಆಸೆಪಟ್ಟು ನೋಡುತ್ತಿದ್ದರು ॥ ೧೦೩ ॥ ಬಿಟ್ಟಜಡೆಯ ಹೆಂಗುಸರು ಬಂದು, ಅವರ ಕಡೆಗಣ್ಣಿನ ಪ್ರಕಾಶವು ಹರಿದು ಪ್ರಸಾರಗೊಳ್ಳಲು, ದೇಹದ ಸುವಾಸನೆಯು ದಿಕ್ಕುಗಳಲ್ಲಿ ಹರಡಿಕೊಳ್ಳಲು, ಶ್ರೀರಾಮನನ್ನು ಎಡೆಬಿಡದೆ ಕಣ್ಣಿಟ್ಟು ನೋಡುತ್ತಿದ್ದರು ॥ ೧೦೪ ॥ ತಮ್ಮನ್ನು ಯಾರಾದರೂ ಸೆರಗನ್ನು ಹಿಡಿದು–ನಿಲ್ಲು, ಎಂದು ಹೇಳಿದರೆ, ಅಂಥವರ ಕೈಗೆ ಲಂಚವನ್ನು ಕೊಡುತ್ತ, ತಮ್ಮ ಸೀರೆಯ ನೆರಿಯು ಕೆಳಗೆ ಜಾರಿ ನೆಲಕ್ಕೆ ಬೀಳುವುದನ್ನೂ ಮರೆತವರಾಗಿ, ತಮ್ಮ ಕಣ್ಣುಗಳಿಗೆ ಪೂರ್ಣ ತೃಪ್ತಿಯಾಗುವಂತೆ ನೋಡಿದರು. ॥ ೧೦೫ ॥ ತನಗೆ ನಡೆಯಲು ತೊಡಕಾಗುವುದೆಂದು ಮುತ್ತಿನ ಆಭರಣವನ್ನು ಹಂಸೆಗಳಿಗೆ ಕೊಟ್ಟು, ಆ ಮೇಲೆಯೂ ನಡೆಯಲು ತೊಡಕನ್ನು ಉಂಟುಮಾಡುತ್ತಿದ್ದ ತಮ್ಮ ಮೊಲೆ ಮತ್ತು ನಿತಂಬಗಳಿಗಾಗಿ ಅವನ್ನು ಕೊಟ್ಟಿರುವ ಬ್ರಹ್ಮನನ್ನು ಒಬ್ಬಳು ನಿಂದಿಸಿದಳು ॥ ೧೦೬ ॥ ಒಬ್ಬಳ ಉಡಿದಾರವು

---

[1] ಕಳುಕದೆ (ಗ) [2] ಕಟ್ಟು (ಗ) [3] ಹೊಲಬುದಪ್ಪುವೆವೆಂದು (ಗ) [4] ಕೈಸನ್ನೆಕಲೆಯ (ಕ). [5] ನೋಡಿದರು ಬಂದಿರದೆ (ಗ)
[6] ನೋಡುವರು ಬಂದವನ (ಗ) [7] ಕಣ್ಪಿಡಿದು (ಗ) [8] ನಿಲ್ಲೆಂದರ್ಗೆ (ಗ). [9] ಕುಚಕೆಸವೆನೆಂದು (ಗ)

ಉಡಿದಾರವಿಳಿದು ನಡೆಯಲೀಯದೆ ಕಾ । ಲ್ದೊಡರಿನಿಂದವನ ನಿಟ್ಟಿಸುವ ॥
ಮಡದಿ ಕಣ್ಗೆಸೆದಳು ತಳಸಂಕಲೆಯನಂದು । ತೊಡರ್ದ ಮದೇಭವೆಂಬಂತೆ ॥ ೧೦೭ ॥

ನಡೆ ದಡದಡಿಸುತ ನುಡಿ ತಡಬಡಿಸುತ । ಪೊಡವಿಗೆ ಬೀಳುತೇಳುತವೆ ॥
ಕಡು ಕಾತರದಿಂದ ಕಾಮಿನಿಯರು ಕಂ । ಗೆಡುತ ಬಂದವನ ನೋಡುವರು ॥ ೧೦೮ ॥

ಕಟಿಸೂತ್ರವ ಕೊರಲಿಗೆ ಕಂಠಮಾಲೆಯ । ಕಟಿಗೆ ಕಾಲಂದುಗೆಗಳನು ॥
ಚಟುಲಾಕ್ಷಿಯರು ಕರದೊಳು ತೊಡಚುತ ಸಂ । ಕಟದೆ[1] ಬಂದವನ ನೋಡುವರು ॥ ೧೦೯ ॥

ಜಾಳಾಂದರದೊಳವನ ನೋಡುವ[2] ಪೊಂ । ಬಾಳೆದೊಡೆಯ ನೀಱೆಯರ ॥
ನೀಳಲೋಚನಗಳೆಸೆದವಂದಿರ ದಿರು । ಗೂಳಿಯ[3] ಮೀನುಗಳಂತೆ ॥ ೧೧೦ ॥

ನಲ್ಲನಲ್ಲರ ಸವಿಗೂಟಗಳನು[4] ಸವಿ । ಸೊಲ್ಲ ಸೊಗಸುವೇಟಗಳ ॥
ನಿಲ್ಲದುಳಿದು ನಿಂದು ನಿಟ್ಟಿಸುವರು ಸರ್ವ । ವಲ್ಲಭೆಯರು ಬಂದವನ ॥ ೧೧೧ ॥

ಲೇಸುಮಾಡಿದ ಜಾಣಜವ್ವನಿಗನ ಕೂಟ । ದಾಸೆಯನುಳಿದು ಬಂದಿರದೆ ॥
ಆ ಸುಕುಮಾರನ ಸದ್ವಿಲಾಸವನು ವಿ । ಲಾಸಿನಿಯರು ನೋಡುವರು ॥ ೧೧೨ ॥

ಮಱೆದರು ಮನೆ ಮನೆವಾರ್ತೆಯ ಹಂಬಲ । ತೊಱೆದರು ಗಂಡಮಕ್ಕಳನು ॥
ಸೆಱೆಯಾಗಿ ಕಣ್ಣಸವಿಗೆ ನಿಂದು ನೋಡಿತು । ನಿಱಿಗುರುಳಬಲಾ ನಿಕರ ॥ ೧೧೩ ॥

ತಂಗಾಳಿಯ ತಳಿರನು ತಾವರೆಯ ಬೆ । ಳ್ದಿಂಗಳನಂಬುಜಾಕರವ ।
ಹಿಂಗದೆ ಬಯಸಿದರವನ ನೋಡಿದ ಲಲಿ । ತಾಂಗಿಯರಂಬುಜನೇತ್ರೆ ॥ ೧೧೪ ॥

---

ಕೆಳಕ್ಕೆ ಜಾರಿ, ಪಾದಕ್ಕೆ ಬಂದುದರಿಂದ, ನಡೆಯಲು ಸಾಧ್ಯವಾಗದೆ ಆಕೆ ರಾಮನನ್ನೇ ನೋಡುತ್ತಿದ್ದಳು. ಆಗ ಅವಳು ಪಾದಕ್ಕೆ ಸಂಕಲೆಯನ್ನು ಇಕ್ಕಿದ ಮದಗಜದಂತೆ ಕಾಣುತ್ತಿದ್ದಳು. ॥ ೧೦೭ ॥ ಕಾಮಚೇಷ್ಟೆಗೆ ಒಳಗಾದ ಹೆಂಗುಸರು ಕಾತರವನ್ನು ತಾಳಿ, ನಡೆಯು ದಡದಡವಾಗುತ್ತಿರಲು, ಮಾತು ತಡವರಿಸುತ್ತಿರಲು, ನೆಲಕ್ಕೆ ಬೀಳುತ್ತ ಏಳುತ್ತ ಬಂದು, ದಿಕ್ಕು ತೋರದೆ ರಾಮನನ್ನೇ ನೋಡುತ್ತಿದ್ದರು. ॥ ೧೦೮ ॥ ವಿಭ್ರಮಕ್ಕೆ ಒಳಗಾದ ಚಂಚಲಾಕ್ಷಿಯರು ಉಡಿದಾರವನ್ನು ಕೊರಲಿಗೂ, ಕೊರಲಿನ ಸರವನ್ನು ಸೊಂಟಕ್ಕೂ, ಕಾಲಿನ ಬಳೆಗಳನ್ನು ಕೈಗೂ ತೊಟ್ಟುಕೊಂಡು ಬಹಳ ಕಷ್ಟದಿಂದ ನಡೆದು-ಕೊಂಡು ಬಂದು ಅವನನ್ನು ನೋಡುತ್ತಿದ್ದರು. ॥ ೧೦೯ ॥ ಹೊನ್ನಿನ ಬಾಳೆಯಂತಹ ತೊಡೆಗಳುಳ್ಳ ಸುಂದರಿಯರು ಶ್ರೀರಾಮನನ್ನು ಕಿಟಕಿಗಳಲ್ಲಿ ನೋಡುತ್ತಿದ್ದರು. ಆಗ ಅವರ ನೀಲಬಣ್ಣದ ಕಣ್ಣುಗಳು ತಿರುಕುಳಿ ಮೀನುಗಳಂತೆ ಕಾಣುತ್ತಿದ್ದುವು. ॥ ೧೧೦ ॥ ಸೂಳೆಹೆಂಗುಸರು ತಮ್ಮ ಬೇರೆ ಬೇರೆ ಇನಿಯರ ಸವಿಯಾದ ಒಡನಾಟವನ್ನೂ, ಸವಿಮಾತುಗಳನ್ನೂ, ಸೊಗಸಾದ ಕಾಮಾಭಿಲಾಷೆಗಳನ್ನೂ, ಒಡನೆಯೇ ಬಿಟ್ಟು, ಬಂದು ನಿಂತು ಶ್ರೀರಾಮನನ್ನು ನೋಡುತ್ತಿದ್ದರು. ॥ ೧೧೧ ॥ ವಿಲಾಸವತಿಯರಾದ ಹೆಂಗುಸರು ಚೆನ್ನಾಗಿ ಈಡೇರತಕ್ಕ ಜಾಣನಾದ ತರುಣನ ಒಡನಾಟವನ್ನು ಬಿಟ್ಟು ಬಂದು, ಆ ಶ್ರೀರಾಮನ ವಿಲಾಸವನ್ನು ಎಡೆಬಿಡದೆ ನೋಡುತ್ತಿದ್ದರು. ॥ ೧೧೨ ॥ ಕೊಂಕುಕುರುಳಿನ ಹೆಂಗುಸರು ತಮ್ಮ ಮನೆಯನ್ನೂ ಮನೆಗೆಲಸದ ಆಸೆಯನ್ನೂ ಮರೆತರು. ತಮ್ಮ ಗಂಡುಸರನ್ನು ಬಿಟ್ಟು, ಶ್ರೀರಾಮನ ಸೌಂದರ್ಯದ ಸವಿಗೆ ವಶವರ್ತಿಗಳಾಗಿ ನಿಂತು ಅವನನ್ನೇ ನೋಡಿದರು. ॥ ೧೧೩ ॥ ಎಲೈ ಚೇಳಿನಿಯೇ, ಶ್ರೀರಾಮನನ್ನು ನೋಡಿದ ಸುಂದರಾಂಗಿ –

---

[1] ಸಂಕಟದಿ (ಗ) [2] ನೋಡಿದ (ಗ) [3] ದಿರುಕೂಳಿಯ (ಗ) [4] ಸವಿಕೂಟಗಳನು (ಗ) ಗುಟುಕಗಳನು (ಗ).

ಮುತ್ತಿನಾರತಿ ಮಣಿಯಾರತಿ ಬಗೆಬಗೆ । ವೆತ್ತು ರಾಜಿಸುವಾರತಿಗಳ ॥
ಎತ್ತಿದರಾ ಕುವರಗೆ ನೀಱೆಯರು । ನ್ಮತ್ತ ಮದಾಲಸಗಮನೆ ॥ ೧೧೫ ॥

ಬಡನಡುವಿನ ಬಟ್ಟವೊಲೆಯ ಬಂದುಗೆವಾಯ । ಕುಡಿತೆಗಂಗಳ ಕೊಂಕುಗುರುಳ ॥
ಮಡದಿಯರಾರತಿವಿಡಿದು ನಡೆದರೆಡೆ । ವಿಡದಾ ಪೊಳಲ ಬೀದಿಯಲಿ[1] ॥ ೧೧೬ ॥

ಪದ್ಮಗಂಧದ ಪದ್ಮಾರಿನೊಸಲ ಚೆಲ್ವ । ಪದ್ಮವದನದ ಕೋರಕಿತ ॥
ಪದ್ಮಕುಚದ ಪದ್ಮನೇತ್ರೆಯರ್ಕೈದಿತು । ಪದ್ಮದಾರತಿಗಳನಾಂತು ॥ ೧೧೭ ॥

ಪೊಳೆವ ಲಾವಣ್ಯದ ಪೊಳೆವಾಳೆಗಂಗಳ । ನಳಿನ ನೇತ್ರದ ನಳಿತೋಳ ॥
ಕಳಹಂಸಗತಿಯ ಕಾಮಿನಿಯರ್ಕೈದಿದರಂದು । ಕೊಳದಾರತಿಗಳನಾಂತು ॥ ೧೧೮ ॥

ಮಣಿಮುಕುರದ ಚೆಲ್ವನೇಳಿಪ ಕದಪಿನ । ಮಣಿದೊಡವಿನ ಮಂದಗತಿಯ ॥
ಗಣಿಕಾಜನವೈದಿದುದಂದು ನಲಿವುತ । ಮಣಿಯಾರತಿಗಳನಾಂತು ॥ ೧೧೯ ॥

ಮಲಯಜಗಂಧದ ಮಲ್ಲಿಗೆದುಱುಬಿನ[2] । ಜಲರುಹದಳನೇತ್ರಗಳ
ಲಲಿತಾಂಗಿಯರು ಲತೆಯಾರತಿಗಳನಾಂತು[3] । ಲಲಿತಾಂಗನಿಗೆತ್ತಿದರು ॥ ೧೨೦ ॥

ಪರಮನ ಮೇಗಣ ನಂಬುಗೆಯಲ್ಲದೆ । ಪುರುಷರುಗಳ[4] ವ್ರತವೆಮಗೆ ॥
ಇರಲಱಿಯದುಯಿವನುಳ್ಳನ್ನೆವರೆಂದು । ವಿರಹದಿಂ ನುಡಿವರರೆಬರು ॥ ೧೨೧ ॥

---

ಯರು ವಿರಹಾಗ್ನಿಗೆ ಗುರಿಯಾಗಿ ತಂಗಾಳಿ, ಚಿಗುರು, ತಾವರೆ, ಬೆಳ್ದಿಂಗಳು, ಸರೋವರ–ಮುಂತಾದ ತಂಪಿನ ವಸ್ತುಗಳನ್ನು ಬಯಸಿದರು ॥ ೧೧೪ ॥ ಎಲೈ ಮೆಲುನಡೆಯ ಚೆಳಿನೆಯೇ, ಸುಂದರಿಯರಾದ ಸ್ತ್ರೀಯರು ಆ ಶ್ರೀರಾಮನಿಗೆ ಮುತ್ತಿನಾರತಿ, ರತ್ನದಾರತಿ ಮತ್ತು ವಿವಿಧವಾದ ಆರತಿಗಳನ್ನು ಎತ್ತಿದರು. ॥ ೧೧೫ ॥ ತೆಳುವಾದ ಸೊಂಟದ, ವೃತ್ತಾಕಾರದ ಮೊಲೆಯ, ಕಿಸುಗಾರ ಹೂವಿನಂತೆ ಕೆಂಪಾದ ಬಾಯಿಯ, ಓರೆಗಣ್ಣಿನ, ಗುಂಗುರು ಕೂದಲಿನ, ಹೆಂಗುಸರು ಆರತಿಗಳನ್ನು ಹಿಡಿದುಕೊಂಡು ಆ ಪಟ್ಟಣದ ಬೀದಿಗಳಲ್ಲಿ ಒತ್ತೊತ್ತಾಗಿ ನಡೆದುಕೊಂಡು ಹೋದರು ॥ ೧೧೬ ॥ ತಾವರೆಯ ಪರಿಮಳವುಳ್ಳ, ಚಂದ್ರನಂತಹ ಹಣೆಯ, ಸುಂದರವಾದ ತಾವರೆಯಂತಹ ಮುಖದ, ತಾವರೆ ಮುಗುಳಿನಂತಹ ಮೊಲೆಯ, ಕಮಲಾಕ್ಷಿಯರು ತಾವರೆಯ ಆರತಿಗಳನ್ನು ಹಿಡಿದುಕೊಂಡು ಹೋದರು ॥ ೧೧೭ ॥ ಹೊಳೆಯುವ ಸೌಂದರ್ಯವುಳ್ಳ ಪೊಳೆಮೀನಿನಂತಹ ಕಣ್ಣುಗಳುಳ್ಳ, ತಾವರೆಯಂತಹ ಕಣ್ಣುಗಳುಳ್ಳ, ನಯವಾದ ಕೈಗಳುಳ್ಳ, ಹಂಸದಂತೆ ನಿಧಾನವಾದ ನಡಿಗೆಯುಳ್ಳ ಹೆಂಗುಸರು ಕೊಳದಂತಿರುವ ಆರತಿಗಳನ್ನು ಹಿಡಿದುಕೊಂಡು ಹೋದರು ॥ ೧೧೮ ॥ ರನ್ನಗನ್ನಡಿಯ ಸೊಬಗನ್ನು ಹೀನೈಸುವ ಕೆನ್ನೆಗಳುಳ್ಳ, ರತ್ನದ ಆಭರಣವುಳ್ಳ, ನಿಧಾನವಾದ ನಡಿಗೆಯುಳ್ಳ ವೇಶ್ಯಾಸ್ತ್ರೀಯರು ಸಂತೋಷದಿಂದ ರತ್ನದ ಆರತಿಗಳನ್ನು ಹಿಡಿದುಕೊಂಡು ಹೋದರು ॥ ೧೧೯ ॥ ಶ್ರೀಗಂಧದ ಪರಿಮಳವುಳ್ಳ, ಮಲ್ಲಿಗೆಯ ತುರುಬುಳ್ಳ, ತಾವರೆಯಂತಹ ಕಣ್ಣುಗಳುಳ್ಳ ಸುಂದರಿಯರು, ಸುಂದರಾಂಗನಾದ ಶ್ರೀರಾಮನಿಗೆ ಬಳ್ಳಿಯಾರತಿಗಳನ್ನು ಹಿಡಿದು ಎತ್ತಿದರು ॥ ೧೨೦ ॥ ಆ ಸ್ತ್ರೀಯರಲ್ಲಿ ಕೆಲವರು 'ಈ ರಾಮನು ಇರುವ ತನಕ, ನಮಗೆ ಜಿನೇಶ್ವರನಲ್ಲಿ ನಂಬಿಕೆಯಿರುವುದಲ್ಲದೆ, ಇತರ ಪುರುಷ ವ್ರತವೆಂಬುದು ಇರಲಾರದು' ಎಂದು ವಿರಹದಿಂದ ಹೇಳಿಕೊಳ್ಳುತ್ತಿದ್ದರು ॥ ೧೨೧ ॥ ಗೃಹಿಣಿಯೊರ್ವಳು ತನ್ನ

---

೯೧–೧೧೭ ಈ ನಡುವಣ ೨೭ ಪದ್ಯಗಳು ಚ ದಲ್ಲಿಲ್ಲ [1] ಬೀದಿಯೊಳು (ಗ) [2] ಮಲ್ಲಿಗೆ ಮುಡಿ ಚೆಲ್ವ (ಕ) [3] ಯಾರತಿಗಳನಾತು (ಗ ಚ) ೧೧೮ ಈ ಪದ್ಯ ಕ ದಲ್ಲಿಲ್ಲ [4] ಪರಮಪುರುಷ (ಗ ಚ)

ತೊತ್ತಿರ ತೊಡವುಗಳನು[1] ತೊಟ್ಟು ಬೂದಿಯ । ಬಿತ್ತರದಿಂ ಮೈಗೆ ಪೂಸಿ ॥
ತೊತ್ತಿರ[2] ನೆರವಿಯೊಡನೆ ಬಂದವರ ಮನ । ವೆತ್ತು[3] ನೋಡಿತು ಮನೆವೆಣ್ಣು ॥ ೧೨೨ ॥

ಕರುಮಾಡಗಳ[4] ತುತ್ತತುದಿನೆಲೆಯೊಳು ನಿಂದು । ನೆರೆದು ನೋಡುವ ನೀಱೆಯರು ॥
ಕರಮೆಸೆದರು ಕುವರನ ನೋಡ ಬಂದ । ಚ್ಚರವೆಣ್ಗಳೆಂಬಂದದೊಳು ॥ ೧೨೩ ॥

ದಿವಿಜಲೋಕದ ವಿದ್ಯಾಧರಲೋಕದ । ಯುವತೀಜನ ಗಗನದೊಳು[5] ॥
ಅವಿರಳವಿಲ್ಲದೆ ನೆರೆದು ನೋಡಿದರೆನ । ಲವರ ಸಂಪದವನೇನೆಂಬೆ ॥ ೧೨೪ ॥

ನೆಱೆಯದು ದೆಸೆ ದಿಕ್ಪಾಲಕರಿಗೆ ಪುರ । ನೆಱೆಯದು ನೆರೆದ ನೆರವಿಗೆ ॥
ನೆಱೆಯದಂಬರ ಸುರಸಮಿತಿಗೆ ಸಿರಿಬಾಯಿ । ದೆಱೆದು[6] ನುಡಿವರಾರವನ ॥ ೧೨೫ ॥

ಗಗನದೊಳಮರಸಮಿತಿಯಂತರಾಳದೊಳ್ । ಗಗನಚರರು ಪುರದೊಳಗೆ ॥
ಮಿಗೆ ನೆರೆದಿರ್ದ ನೆರವಿಯಾ ಕುವರನ । ಪೊಗಳುತಿರಲು ತಮತಮಗೆ ॥ ೧೨೬ ॥

ಈ ತೆಱದಿಂದ ನೆರೆದ ನೋಟಕರು ಸಂ । ಪ್ರೀತಿಯಿಂ ನೋಡುತಮಿರಲು[7] ॥
ನೀತಿನಿಪುಣ ನಿಜಭಾವದಿಂ ದೈದಿದ । ಮಾತೇನರಮನೆಗಾಗಿ ॥ ೧೨೭ ॥

ಪರಸತಿಯರ ಕಂಡು ಪರವಶನಾಗುವ । ಧರಣಿಪಾಲರ ಗಂಡನೆಂಬ ॥
ವರ ಚಾರುಬಿರುದಿಗೂಣೆಯ ಬಾರದಂತಾ । ನರನಾಥಸುತನೈದಿದನು[8] ॥ ೧೨೮ ॥

ನೀಂದರಮನೆಯ ಬಾಗಿಲ ಮುಂದೆ ತನ್ನೊಡ । ವಂದ ನೃಪರಿಗೆ ಜನಕನ ॥
ಸಂದ ಸೇನಾಧಿನಾಯಕಗುಲುಪೆಯ[9] ಮಾಡಿ । ಸೆಂದು ಮಂತ್ರಿಗೆ ಪೇಳಿ ಬಳಿಕ ॥ ೧೨೯ ॥

---

ಸೇವಕಿಯರ ಆಭರಣಗಳನ್ನು ತೊಟ್ಟು, ಮೈಗೆ ಬೂದಿಯನ್ನು ಸವರಿಕೊಂಡು, ಸೇವಕಿಯರ ಗುಂಪಿನಲ್ಲೇ ಬಂದು ರಾಮನನ್ನು ಹೃತ್ಪೂರ್ವಕವಾಗಿ ನೋಡಿದಳು. ॥ ೧೨೨ ॥ ಉಪ್ಪರಿಗೆಗಳ ತುತ್ತತುದಿಯ ನೆಲೆಯಲ್ಲಿ ನಿಂತು ಒಟ್ಟಾಗಿ ನೋಡುತ್ತಿದ್ದ ಸುಂದರಿಯರು ಶ್ರೀರಾಮನನ್ನು ನೋಡಲು ಬಂದ ದೇವತಾ ಸ್ತ್ರೀಯರೋ ಎಂಬಂತೆ ಶೋಭಿಸುತ್ತಿದ್ದರು. ॥ ೧೨೩ ॥ ದೇವಲೋಕ-ವಿದ್ಯಾಧರಲೋಕಗಳ ಸ್ತ್ರೀಯರು ಆಕಾಶದಲ್ಲಿ ನಿಬಿಡವಾಗಿ ನಿಂತು ನೋಡುತ್ತಿದ್ದರು–ಎನ್ನುವಾಗ ಅವರ ಸಂಪತ್ತನ್ನು ಏನೆನ್ನಲಿ ! ॥ ೧೨೪ ॥ ಆ ಸಂದರ್ಭದಲ್ಲಿ ದಿಕ್ಪಾಲಕರಿಗೆ ನಿಂತು ನೋಡಲು ದಿಕ್ಕುಗಳು ಸಾಕಾಗವು. ಅಲ್ಲಿ ಸೇರಿದ ಜನಸಮೂಹಕ್ಕೆ ಪಟ್ಟಣವೇ ಸಾಲದು ದೇವತೆಗಳ ಸಮೂಹಕ್ಕೆ ಆಕಾಶವೇ ಸಾಲದು. ಹೀಗಿರುವಾಗ ಶೋಭಿಸುವ ಬಾಯನ್ನು ತೆರೆದು ಅವನನ್ನು ವರ್ಣಿಸುವವರು ಯಾರು? ॥ ೧೨೫ ॥ ಆಕಾಶದಲ್ಲಿ ದೇವತೆಗಳ ಸಮೂಹವೂ, ನಡುವೆ ಖೇಚರರೂ, ಪಟ್ಟಣದಲ್ಲಿ ವಿಶೇಷವಾಗಿ ಸೇರಿದ ಜನವೃಂದವೂ ಶ್ರೀರಾಮನನ್ನು ತಮ್ಮತಮ್ಮೊಳಗೆ ಹೊಗಳುತ್ತಿದ್ದರು. ॥ ೧೨೬ ॥ ಈ ರೀತಿಯಲ್ಲಿ ಅಲ್ಲಿ ಸೇರಿದ ನೋಟಕರು ಬಹಳ ಪ್ರೀತಿಯಿಂದ ನೋಡುತ್ತಿರಲು, ನೀತಿಯಲ್ಲಿ ನಿಪುಣನೆನಿಸಿದ ಶ್ರೀರಾಮನು ತನ್ನ ಸಹಜಭಾವದಿಂದ ಕೂಡಿದವನಾಗಿ ಅರಮನೆಯ ಕಡೆಗೆ ಹೋದನು. ॥ ೧೨೭ ॥ ಪರಸ್ತ್ರೀಯರನ್ನು ಕಂಡು ಮೈಮರೆಯುವ ರಾಜರಿಗೆ ವಿಪತ್ಕಾರಕನೆಂಬ ಮನೋಹರವಾದ ತನ್ನ ಬಿರುದಿಗೆ ಕೊರತೆ ಬಾರದಂತೆ ಆ ರಾಜಕುಮಾರನು (ರಾಮನು) ಹೋದನು. ॥ ೧೨೮ ॥ ರಾಮನು ಅರಮನೆಯ ಬಾಗಿಲಿನ ಎದುರಿಗೆ ಬಂದು, ತನ್ನೊಡನೆ ಬಂದಿದ್ದ

---

[1] ತೊಡಿಗೆಗಳನು (ಗ) [2] ಒತ್ತಿನ (ಗ) [3] ಮನವಿತ್ತು (ಚ) [4] ಕರುವಾಪಗಳ (ಕ) [5] ನಗರದೊಳು (ಗ). [6] ಸಿರಿ ಬಾಯ್ದೆಱೆದು (ಚ) [7] ನೋಡುತರಿಹರು (ಗ) [8] ಸುತನೈತಂದು (ಗ.ಚ). [9] ನಾಯಕರುಲುಪೆಯ (ಗ).

ಕಳುಪಿದ ಮಂತ್ರಿ ಮನ್ನೆಯ ಮಂಡಳಿಕರ । ಕಳುಪಿದ ಸೇನಾಧಿಪತಿಯ ॥
ಕಳುಪಿದ ಗಡಿಯ[1] ಕಾವಲ ನಾಯಕರನು । ಕಳುಪಿದ ಬಲು ಸಹಣಿಗಳ ॥ ೧೩೦ ॥

ರಾಯಸದರ ರಾವುತರ ಕರಣಿಕ ಕಾಲು । ಪಾಯಕರನು ಜೋಯಿಸರ ॥
ನಾಯಕಮಕ್ಕಳುಗಳ ಕಳುಪಿದನಾ । ರಾಯನ ಸುತ ರಾಮಚಂದ್ರ ॥ ೧೩೧ ॥

ಅಳಿಯಂದಿರರಮಕ್ಕಳ ಮಾವಟಿಗರ । ಕೆಳೆಯರ ಬಲು ಸಹಣಿಗಳ[2] ॥
ತುಳಿಲಾಳ್ಗಳ ತುಳುವರ ಪಾರಕರನಂದು[3] । ಕಳುಪಿದನಾ ರಾಯಗುವರ ॥ ೧೩೨ ॥

ಅಕ್ಕರಿಗರ ಪಾರಕರ ವೈಗಾಪಿನ । ಯೆಕ್ಕಟಿ[4]ಗರನುಪಚರಿಸಿ ॥
ತಕ್ಕರ[5] ತವಕದಿಂ ಕಳುಪಿಯಾ ಕುವರನು । ಪೊಕ್ಕನು ತನ್ನರಮನೆಯ ॥ ೧೩೩ ॥

ಪಿಡಿಪೊನ್ನ ಕಾಣಿಕೆಯಿಕ್ಕಿ ಜಿನೇಶ್ವರ । ರೆಡೆಗೆ ಲಕ್ಷ್ಮಣಸೀತೆವೆರಸು ॥
ಪೊಡವಟ್ಟು ತಂದೆಯಿರ್ದೆಡೆಗೆ ರಾಘವನಂದು । ನಡೆದನು ಲೀಲೆ ಕೈಮಿಗಲು ॥ ೧೩೪ ॥

ರಾಯನ ಚರಣಕೆಱಗಿ ತಾಯ ಪಾದಕಾ । ರಾಯಗುವರ ನತನಾಗಿ ॥
ತೋಯಜಾನನೆ ಜಾನಕಿಗೂಡಿ ತನ್ನ ಲೀ । ಲಾಯತವನು ಪೊಕ್ಕನಂದು ॥ ೧೩೫ ॥

ಕುಲವನ ಚೈತ್ರ ಸಜ್ಜನಕುವಲಯಮಿತ್ರ । ಸುಲಲಿತ ಸದ್ಗುಣಗಾತ್ರ ॥
ಸಲೆ ದಾನಿ ಸಮ್ಯಕ್ತ್ವ ರತ್ನಾಕರನು । ಜ್ವಲಕೀರ್ತಿಯುತನೊಪ್ಪಿದನು ॥ ೧೩೬ ॥

---

ರಾಜರಿಗೂ, ಜನಕರಾಯನ ಸೇನಾಪತಿಗೂ ಊಟ-ವಸತಿ ವ್ಯವಸ್ಥೆಗಳನ್ನು ಧಾರಾಳವಾಗಿ ಮಾಡುವಂತೆ ಮಂತ್ರಿಗೆ ಹೇಳಿದನು ॥ ೧೨೯ ॥ ಆ ಮೇಲೆ ಮಂತ್ರಿ, ಜನನಾಯಕರು, ಆಶ್ರಿತರಾಜರು, ಸೇನಾಪತಿ, ರಾಜ್ಯದ ಗಡಿಯ ರಕ್ಷೆಯ ಮುಖಂಡರು, ಕುದುರೆ ಪಳಗಿಸುವವರು—ಮುಂತಾದವರನ್ನೆಲ್ಲ ಕಳುಹಿಸಿದನು ॥ ೧೩೦ ॥ ದಶರಥರಾಜ ಪುತ್ರನಾದ ರಾಮನು ರಾಯಸದವರನ್ನೂ, ಕುದುರೆ ಸವಾರರನ್ನೂ, ಕರಣಿಕರನ್ನೂ, ಕಾಲಾಳುಗಳನ್ನೂ, ಜೋಯಿಸರನ್ನೂ, ಬಾಲಕರ ಮುಖಂಡರನ್ನೂ ಕಳುಹಿಸಿದನು ॥ ೧೩೧ ॥ ಅಳಿಯಂದಿರನ್ನೂ, ರಾಜಕುಮಾರರನ್ನೂ, ಮಾವುತರನ್ನೂ, ಸ್ನೇಹಿತರನ್ನೂ, ಬಹಳಮಂದಿ ಅಶ್ವಶಿಕ್ಷಕರನ್ನೂ, ಸೇವಕರನ್ನೂ, ತುಳುವ ಪಾರಕರನ್ನೂ ಅಂದು ಕಳುಹಿಸಿದನು ॥ ೧೩೨ ॥ ವಿದ್ವಾಂಸರನ್ನೂ, ಗ್ರಂಥ ವಾಚಕರನ್ನೂ, ವೈಗಾವಲಿನವರನ್ನೂ, ಏಕಾಂತದ ಸಲಹೆಯವರನ್ನೂ ಉಪಚಾರಮಾಡಿ, ಕಳುಹಬೇಕಾದವರನ್ನು ಕಳುಹಿಸಿ ಶ್ರೀರಾಮನು ಅರಮನೆಯನ್ನು ಪ್ರವೇಶಿಸಿದನು ॥ ೧೩೩ ॥ ರಾಘವನು ಜಿನೇಶ್ವರನಿಗೆ ಹಿಡಿಹೊನ್ನಿನ ಕಾಣಿಕೆಯನ್ನು ಅರ್ಪಿಸಿ, ಲಕ್ಷ್ಮಣ ಸೀತೆ ಸಹಿತವಾಗಿ ನಮಸ್ಕರಿಸಿ, ಹೆಚ್ಚಾದ ಸಂತೋಷದಿಂದ ತಂದೆಯಿರುವಲ್ಲಿಗೆ ನಡೆದನು ॥ ೧೩೪ ॥ ಶ್ರೀರಾಮನು ತನ್ನ ತಂದೆ ತಾಯಿಯರ ಪಾದಕ್ಕೆ ನಮಸ್ಕರಿಸಿ, ಜಾನಕಿಯೊಡನೆ ತನ್ನ ಲೀಲಾಗೃಹವನ್ನು ಪ್ರವೇಶಿಸಿದನು. ॥ ೧೩೫ ॥ ತನ್ನ ವಂಶವೆಂಬ ಉದ್ಯಾನಕ್ಕೆ ವಸಂತಮಾಸದಂತೆ ಇರುವವನೂ, ಸತ್ಪುರುಷರಿಗೆಲ್ಲ ಸ್ನೇಹಿತನಂತಿರುವವನೂ, ಸೌಂದರ್ಯ ಸದ್ಗುಣಗಳಿಂದ ಕೂಡಿದ ದೇಹವುಳ್ಳವನೂ, ವಿಶೇಷವಾದ ದಾನಗುಣವುಳ್ಳವನೂ, ಜೈನಧರ್ಮಕ್ಕೆ ಸಾಗರನೂ, ಚೆನ್ನಾಗಿ ಪ್ರಕಾಶಿಸುವ ಕೀರ್ತಿಯುಳ್ಳವನೂ ಆದ ಶ್ರೀರಾಮನು ಮೆರೆಯುತ್ತಿದ್ದನು. ॥ ೧೩೬ ॥ ಎಲೈ ಚೇಳಿನಿಯೇ, ಇಂದು ಮುಂದಿನ ಕಥೆಗಳನ್ನು ಹೇಳುತ್ತಾ, ಮುಂದುವರಿದು ಬಂದು, ಇಲ್ಲಿಗೆ ಸಂಧಿ ಕೊನೆಗೊಂಡಿತು ಇಲ್ಲಿಂದ ಮುಂದಿನ ಕಥೆಯನ್ನು

---

[1] ಕಳುಪಿದಡಿಯ (ಗ) [2] ಮನ್ನೆಯರ (ಗ ಚ) [3] ಪಾಲಕರನಂದು (ಗ) [4] ಯಕ್ಕಟಿ (ಗ) [5] × (ಗ]

ಇಂದು ಮುಂದಣ ಕಥೆಗಳನಾಶ್ರಯಿಸುವೆ ॥ ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೩೭ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಿಂ ಪಡೆದತಿ ಜಸವೆತ್ತುದು ಅಷ್ಟಮಸಂಧಿ ॥ ೧೩೮ ॥

---

ಸಂತೋಷದಿಂದ ಹೇಳುವೆನು. ॥ ೧೩೭ ॥ ಬ್ರಾಹ್ಮಣವಂಶಜನೂ, ಹೊಸ ಮನ್ಮಥನಂತೆ ಸುಂದರನೂ, ನಿರ್ಮಲವಾದ ಗುಣಗಳಿಂದ ಕೂಡಿದ ಜಿನೇಶ್ವರನ ಪಾದಕಮಲಗಳಿಗೆ ಎರಗತಕ್ಕ ಸೊಕ್ಕುದುಂಬಿಯಂತೆ ಇರುವವನೂ, ವಾಗ್ದೇವಿಯ ಸ್ವಚ್ಛವಾದ ಮುಖಕ್ಕೆ ಅತಿಶ್ರೇಷ್ಠವಾದ ಕನ್ನಡಿಯಂತೆ ಇರುವವನೂ, ಪವಿತ್ರವಾದ ನಡತೆಯುಳ್ಳವನೂ, ಸಚಿವನೂ ಆಗಿರುವ ದೇವಪ್ಪನು ಸಂತೋಷದಿಂದ ಹೇಳಿರತಕ್ಕ ರಾಮವಿಜಯದಲ್ಲಿ ಸೇರಿದಂತೆ ರಚಿತವಾಗಿರುವ ಎಂಟನೆಯ ಸಂಧಿ ಅತಿಪ್ರಸಿದ್ಧವಾಯಿತು. ॥ ೧೩೮ ॥

# ೯. ವಾರಣಾಸಿ ಪ್ರವೇಶ

ಕಬ್ಬುವಿಲ್ಲನ ಕಂಗೆಡಿಸಿ ಮೋಹಮಲ್ಲನ । ಕೊಬ್ಬ ಮುಱಿದು ಕಾಲಾಂತಕನ ॥
ತಿಬ್ಬುಳಿಗೆಡಿಸಿದ ಮುನಿಸುವ್ರತಗೆ ಮನ । ವೊಬ್ಬುಳಿ[1]ಯಿಂದೆಱಗುವೆನು ॥ ೧ ॥

ಮುಂದಣ ಕಥೆಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೨ ॥

ಕರ್ಣಾಂತಾಯತಲೋಚನೆ ಕೇಳು ಪೂ । ರ್ಣೇಂದುವದನೆ ಸುಸುಖದ ॥
ಅರ್ಣವೆಯಮೃತಾಧರ ದಾಹೋತ್ತರ । ಸ್ವರ್ಣಕಲಶಕುಚದಬಲೆ ॥ ೩ ॥

ಮಱೆಯಿಸಿ ಮಿಥ್ಯಾತ್ವವ ಜಿನರಡಿಯನು । ಅಱಿಯಿಸಿ ಸಂಸಾರಸುಖವ ॥
ತೊಱೆಯಿಸಿಯಾತ್ಮಗೆ[2] ಗತಿಕಾಣಿಸಿದೆ ನನ್ನ । ಮಱೆಯಬಹುದೆ ನಿನ್ನನಬಲೆ ॥ ೪ ॥

ಏಕಿನಿತುಪಚಾರದ[3] ವಾಕ್ಯವೆನ್ನೊಡ । ನೇಕೆ ಮನ್ಮಥಸಮರೂಪ ।
ಲೋಕದೊಳ್ ಜಸವೆತ್ತು ಪಡೆದೆ ನಿನ್ನಿಂದಲ । ನೇಕ ಸುಖವನೆಂದಳವಳು ॥ ೫ ॥

ಎಂದು ನುಡಿದ ತನ್ನ ಪ್ರಾಣಕಾಂತೆಯು ವದ । ನೇಂದುವ ನೋಡಿ ರಾಗದೊಳು ॥
ಅಂದಾ ಶ್ರೀರಾಮಚಂದ್ರನ ಕಥೆಯನಿಂ । ತೆಂದು ಪೇಳಿದನವಳೊಡನೆ ॥ ೬ ॥

---

ಮನ್ಮಥನನ್ನು ಕಂಗೆಡುವಂತ ಮಾಡಿ, ಮೋಹವೆಂಬ ಜಟ್ಟಿಯ ಗರ್ವವನ್ನು ಮುರಿದು, ಕಾಲದ ಮತ್ತು ಯಮನ ತೀವ್ರತೆಯನ್ನು ಅಥವಾ ಗರ್ವವನ್ನು ನಾಶಗೊಳಿಸಿದ ಮುನಿಸುವ್ರತಸ್ವಾಮಿಗೆ ನಾನು ಮನಸ್ಸಿನ ಹಿಗ್ಗಿನಿಂದ ನಮಸ್ಕರಿಸುತ್ತೇನೆ ॥ ೧ ॥ ಚೇಳಿನಿಯು ಶ್ರೇಣಿಕನೊಡನೆ, "ಎಲೈ ಮನ್ಮಥಸ್ವರೂಪನೇ, ಮುಂದಿನ ಕಥೆ ಯಾವುದು? ಅದರ ವೃತ್ತಾಂತ ವೇನು? ಎಂಬುದನ್ನು ಸ್ವಲ್ಪವೂ ಉಳಿಯದ ರೀತಿಯಲ್ಲಿ ನನಗೆ ನಿರೂಪಿಸಬೇಕು"—ಎನ್ನಲು, ಶ್ರೇಣಿಕನು ಹೀಗೆಂದನು—ಎಲೈ ಚೇಳಿನಿಯೇ ಕೇಳು ॥ ೨ ॥ ಕಿವಿವರೆಗೆ ನಿಡಿದಾಗಿರುವ ಕಣ್ಣುಗಳುಳ್ಳ, ಪೂರ್ಣಚಂದ್ರನಂತಹ ಮುಖವುಳ್ಳ, ಸುಖಕ್ಕೆ ಸಮುದ್ರದಂತಿರುವ, ಅಮೃತದಿಂದ ಕೂಡಿದ ಕೆಳತುಟಿಯುಳ್ಳ, ಕಾಯ್ದ ಕಾಂಚನದ ಚಿನ್ನದ ಕೊಡದಂತಿರುವ ಸ್ತನವುಳ್ಳವಳೇ, ಕೇಳು ॥ ೩ ॥ ಎಲೈ ಮಡದಿಯೇ, ನೀನು ನನ್ನಲ್ಲಿದ್ದ ಮಿಥ್ಯಾತ್ವವನ್ನು ಮರೆಯುವಂತೆ ಮಾಡಿರುತ್ತಿ ಜಿನೇಶ್ವರರ ಪಾದವನ್ನು ತಿಳಿಯುವಂತೆ ಮಾಡಿ ಸಾಂಸಾರಿಕಸುಖವನ್ನು ಬಿಡಿಸಿ. ಆತ್ಮನ ಕಡೆಗೆ ನನ್ನನ್ನು ಅಭಿಮುಖಗೊಳಿಸಿರುತ್ತಿ ನಿನ್ನನ್ನು ಮರೆಯಲೂ ನನಗೆ ಸಾಧ್ಯವೆ? ॥ ೪ ॥ ಆಗ ಚೇಳಿನಿಯು—"ಎಲೈ ಮನ್ಮಥನಂತಹ ರೂಪವುಳ್ಳವನೇ, ನನ್ನಲ್ಲಿ ಇಷ್ಟೊಂದು ಉಪಚಾರದ ಮಾತು ಯಾಕೆ? ನಿನ್ನಿಂದಲಾಗಿ ನಾನು ಲೋಕದಲ್ಲಿ ಕೀರ್ತಿಯನ್ನೂ ಅನೇಕ ಸುಖಗಳನ್ನೂ ಪಡೆದಿದ್ದೇನೆ." ಎಂದು ಹೇಳಿದಳು. ॥ ೫ ॥ ಹೀಗೆ ಹೇಳಿದ ತನ್ನ ಪ್ರಾಣವಲ್ಲಭೆಯ ಚಂದ್ರನಂತೆ ಸುಂದರವಾದ ಮುಖವನ್ನು ನೋಡಿ, ಶ್ರೇಣಿಕನು ಪ್ರೀತಿಯಿಂದ ಅಂದು ಆ ಶ್ರೀರಾಮಚಂದ್ರನ ಕಥೆಯನ್ನು ಅವಳಿಗೆ ಹೀಗೆ ಹೇಳಿದನು ॥ ೬ ॥ ಎಲೈ ಆನೆಯಂತಹ ಮೆಲುನಡೆಯ, ತಾವರೆಯೆಸಳಿನಂತಹ ಕಣ್ಣಿನ, ದೊಡ್ಡದಾದ ಮೊಲೆಯ, ಮನ್ಮಥನು

---

[1] ಮನಮೊಬ್ಬುಳಿ (ಚ) [2] ಯಾತಗೆ (ಚ) [3] ಸಾಕಿನಿತುಪಚಾರವ (ಗ ಚ) ಈ ಸಂಧಿಯ ಕ ಪ್ರತಿಯ ಆದಿಯ ೬ ಪದ್ಯಗಳು (ಗ ಚ) ಪ್ರತಿಗಳಲ್ಲಿ ೧೦ನೆಯ ಸಂಧಿಯ ಆದಿಯಲ್ಲಿವೆ, ಮತ್ತು ಕ ಪ್ರತಿಯ ೧೦ನೆಯ ಸಂಧಿಯ ಆದಿಯ ೧೧ ಪದ್ಯಗಳು (ಗ ಚ) ಪ್ರತಿಗಳ ೯ನೆಯ ಸಂಧಿಯ ಆದಿಯಲ್ಲಿವೆ ೭ನೆ ಪದ್ಯ (ಗ ಚ ದಲ್ಲಿಲ್ಲ) ೬ನೇ ಪದ್ಯ (ಕ ದಲ್ಲಿಲ್ಲ) ಇದು 'ಚ ದಲ್ಲಿ ೧೧ನೆಯ ಸಂಧಿಯಲ್ಲಿದೆ.

ವಾರಣಗಮನೆ ವಾರಿಜಪತ್ರಲೋಚನೆ । ತೋರ ಮೊಲೆಯಳೆ ಮನ್ಮಥನ ॥
ಆರಾಧಿಸುವಧಿದೇವತೆ ಲಾಲಿಸು । ಮಾರವಿಜಯನ ಕಥೆಯನು ॥ ೭ ॥

ಲಲನೆ ಕೇಳಾ ರಾಮಚಂದ್ರ ಸುಖದ ತಲೆ । ನೆಲೆಯೆನಿಸುವ ಸೀತೆಯೊಳು ॥
ಪಲವು ಪಗಲು ಸುಖವಿರಲೊಂದು ದಿನ ತಮ್ಮ । ಕುಲವೃದ್ಧನೋರ್ವನವನಿಗೆ ॥ ೮ ॥

ಹಿಂದಣ ವೃತ್ತಾಂತವನವನೊಂದಾ । ನೊಂದು ಪ್ರಸಂಗಾಯುತದೊಳು ॥
ಅಂದು ಪೇಳಲು ಕೇಳ್ದಿರದೆ[1] ಬಂದವ ತನ್ನ । ತಂದೆಗೆ ಕರಗಳ ಮುಗಿದು ॥ ೯ ॥

ದೇವ ಬಿನ್ನಪ ನಮ್ಮ ಪೂರ್ವದ ಪಟ್ಟಣ । ವಾವುದಾ ಪುರವರದೊಳಗೆ ॥
ಆವವನಿರ್ದಪನೆಂದೆನೆ ದಶರಥ । ಭೂವರನಿಂತು ನುಡಿದನು ॥ ೧೦ ॥

ಪಟ್ಟಣವದು ವಾರಣಾಸಿಯದನು ನಾವು । ಬಿಟ್ಟೆವೀ ಸಾಕೇತವೆಮಗೆ ॥
ಪುಟ್ಟಿದ ನೆಲದಂತೆ ಸುಖವೀವುದದಱಿಂದ । ಮುಟ್ಟಿ ವಿಚಾರಿಸಿತಿಲ್ಲ[2] ॥ ೧೧ ॥

ಜಿನಪತಿಯನು ಗುರುವನು ನಿಜ ಜನನಿಯ । ಜನಕನ ಜನ್ಮಭೂಮಿಯನು ॥
ಮನವೊಲಿದುಳಿದವರುಂಟೆ ಬಿನ್ನಪವಿದ । ಜನನಾಥ ಲಾಲಿಪುದೆನುತ ॥ ೧೨ ॥

ಏತಱ ಜಸವೇತಱ ಭುಜಬಲ ನಮ । ಗೇತಱ ಜಯವೇತಱಿರವು ॥
ಏತಱ ವೀರವಾ ಪುರವನು ದಾಯಾದ್ಯ । ರೀ ತೆಱದೊಳಗಾಳುತಿರಲು ॥ ೧೩ ॥

ಹಮ್ಮ ಮುಱಿದು ನಾನವನ ಪಿಡಿದು ತಂದು । ನಿಮ್ಮ ಕಾಣಿಸಿಯಾ ಪೊಳಲ ॥
ನಮ್ಮ ನೆಮ್ಮುಗೆ ಮಾಡಿಕೊಳುವೆವು ನಾವಿನ್ನು । ಸುಮ್ಮನಿಹುದು ಕಾರ್ಯವಲ್ಲ ॥ ೧೪ ॥

---

ಪೂಜಿಸುವ ಶ್ರೇಷ್ಠದೇವತೆಯೆನಿಸುವ ಚೆಲುವೆಯೇ, ಮನ್ಮಥ ವಿಜಯನ ಕಥೆಯನ್ನು ಕೇಳು ॥ ೭ ॥ ಆ ಶ್ರೀರಾಮನು ಸುಖಕ್ಕೆ ಹೆಚ್ಚಿನ ನೆಲೆಯಾದವಳೆಂದೆನಿಸಿದ ಸೀತೆಯೊಡನೆ ಬಹುಕಾಲ ಸುಖದಿಂದ ಇದ್ದನು, ಹೀಗಿರುವಾಗ ಒಂದು ದಿವಸ ಕುಲವೃದ್ಧನೊಬ್ಬನು ಅವನಿಗೆ ಕುಲದ ಪೂರ್ವ ವೃತ್ತಾಂತವನ್ನು ತಿಳಿಸುತ್ತಿದ್ದನು. ॥ ೮ ॥ ಆ ಕುಲವೃದ್ಧನು ಹೀಗೆ ಹಿಂದಿನ ವೃತ್ತಾಂತವನ್ನು ಘಟನಾತ್ಮಕವಾಗಿ ವಿವರಿಸಿ ಹೇಳಲು, ಶ್ರೀರಾಮನು ಕೇಳಿ, ಒಡನೆ ತನ್ನ ತಂದೆಯ ಬಳಿಗೆ ಬಂದು ಕೈಮುಗಿದನು. ॥ ೯ ॥ ಎಲೈ ಪಿತೃದೇವನೇ, ವಿಜ್ಞಾಪನೆ ಮಾಡುತ್ತೇನೆ. ನಮ್ಮ ಪೂರ್ವಜರ ಪಟ್ಟಣವು ಯಾವುದು? ಆ ಪಟ್ಟಣದಲ್ಲಿ ಈಗ ಯಾವನಿರುವನು? ಎಂದು ರಾಮನು ತಂದೆಯೊಡನೆ ಕೇಳಿದನು. ಆಗ ದಶರಥರಾಜನು ಹೀಗೆಂದನು— ॥ ೧೦ ॥ ನಮ್ಮ ಪೂರ್ವಕಾಲದ ಪಟ್ಟಣವು ವಾರಣಾಸಿ. ಅದನ್ನು ನಾವು ಬಿಟ್ಟಿದ್ದೇವೆ. ಈಗ ನಮಗೆ ಈ ಸಾಕೇತವು ಜನ್ಮಭೂಮಿಯಾಗಿದ್ದು ಸುಖವನ್ನು ಕೊಡುತ್ತಿದೆ. ಆದುದರಿಂದ ಆ ಹಿಂದಿನ ಪಟ್ಟಣದ ಗೊಡವೆಯನ್ನೇ ಬಿಟ್ಟಿದ್ದೇವೆ— ಎಂದು ದಶರಥನು ಹೇಳಿದನು. ॥ ೧೧ ॥ ಆಗ ರಾಮನು ತಂದೆಯೊಡನೆ ಹೀಗೆಂದನು—"ಎಲೈ ರಾಜನೇ, ವಿಜ್ಞಾಪನೆಗಳು. ಜಿನೇಶ್ವರನನ್ನು, ಗುರುವನ್ನು, ಹೆತ್ತ ತಾಯಿಯನ್ನು, ತಂದೆಯನ್ನು, ಜನ್ಮಭೂಮಿಯನ್ನು ಮನಮೆಚ್ಚಿ ಬಿಟ್ಟವರು ಯಾರಾದರೂ ಇರುವರೇ? ॥ ೧೨ ॥ ನಮ್ಮ ಆ ಪಟ್ಟಣವನ್ನು ದಾಯಾದಿಗಳು ಆಳುತ್ತಿರುವಾಗ. ನಮಗೆ ಕೀರ್ತಿಯೆಲ್ಲಿಯದು? ಪರಾಕ್ರಮವೆಲ್ಲಿಯದು? ಜಯವೆಲ್ಲಿ? ಇರವೆಲ್ಲಿ? ವೀರತ್ವವೆಲ್ಲಿ? ॥ ೧೩ ॥ ನಾನು ಆ ದಾಯಾದಿಯ ಗರ್ವವನ್ನು ಮುರಿದು, ಅವನನ್ನು ಹಿಡಿದು ತಂದು ನಿಮಗೆ ಕಾಣಿಸುವೆನು, ಆ ಪಟ್ಟಣವನ್ನು ನಮ್ಮ ವಶಗತವಾಗಿ

---

[1] ಕೇಳಿರದೆ (ಗ. ಚ ). [2] ವಿಚಾರಿಸಲಿಲ್ಲ (ಗ).

ಎಂದು ನುಡಿದ ಶ್ರೀರಾಮಚಂದ್ರನ ವದ । ನೇಂದುವ ನೋಡಿ ರಾಗದೊಳು[1]
ಬಂದು ನಲಿದು ಕುವರನಿಗಾ ರಾಯನಿಂ । ತೆಂದು ಪೇಳಿದನು ಬುದ್ಧಿಯನು ॥ ೧೫ ॥

ಕೋಪವ ಮಾಡದ ಸಖಿಯರೊಳಗೆ ಸ್ನೇ । ಗಾಹಿನ ಬಲುಭಟರೊಳಗೆ ॥
ದೀಪರಕ್ಷಕರೊಳು ವೈದ್ಯರೊಳಗೆ ನೀ । ಕೋಪವ[2] ಬಿಡದೆಚ್ಚತ್ತಿಹುದು ॥ ೧೬ ॥

ಸಜ್ಜೆಯಲೀಯದಿರರಿಷಡ್ವರ್ಗಂಗಳ । ಸಜ್ಜೆ ಶಕ್ತಿತ್ರಯಂಗಳೊಳು ॥
ಮಜ್ಜೆಯದಿರೇಳುಪಾಯವನೇಳು ವ್ಯಸನವ । ಮಜ್ಜೆಯೆಂದು ಬುದ್ಧಿವೇಳಿದನು ॥ ೧೭ ॥

ದುಷ್ಟರ ದುರ್ಮಂತ್ರಿಗಳ ದುರ್ಜನರ ಕಡು । ಕಷ್ಟರ ಪೆರ್ಚಿಸಬೇಡ ॥
ಶಿಷ್ಟರುಗಳಿಗಿಷ್ಟರಿಗೆ ನೀ ಮನದೊಳ । ನಿಷ್ಟವ[3] ಚಿಂತಿಸಬೇಡ ॥ ೧೮ ॥

ನುಡಿದು ತಪ್ಪದಿರು ಕಪಟಯೊಳು ಹೃದಯವ । ನೊಡೆಯದಿರಲ್ಲದ[4] ನಡೆಯ ॥
ನಡೆಯದಿರನುಜಾತ್ಮಜ ಮಿತ್ರರೊಳಗೊ । ಗ್ಗೊಡಯದಿರೆಂದು ಪೇಳಿದನು ॥ ೧೯ ॥

ರಾಜಮರಾಳನ ರವಿಯ ತುಂಬಿಯ ಮೃಗ । ರಾಜನ ಕರಿಯ ದರ್ಪಣವ ॥
ರಾಜಿಸ ರತ್ನಾಕರದೊಳಗೊಂದೊಂ । ದೋಜೆಯನನುಕರಿಸಿಹುದು[5] ॥ ೨೦ ॥

ಎಂದಿಪ್ಪ ಮೊದಲಾದ ನೀತಿಮಾತನು ತನ್ನ । ನಂದನಗೊರೆಯಲು ಕೇಳ್ದು ॥
ತಂದೆಯ ಪಾದಕೆಱಗಿ ಕಳುಹಿಸಿಕೊಂಡು । ಬಂದು ತಾಯಡಿಗೆಱಗಿದನು ॥ ೨೧ ॥

ಚರಣಕೆರಗಿದ ಮಗನ ತೆಗೆದಮರ್ದಪ್ಪಿ । ಧರೆ ಚಂದ್ರ ರವಿಯುಳ್ಳನಕ ॥
ಅರಸನಾಗಿಳೆಗರಿಗಳಿಗೆ ಜಯುವನೀಯು । ದಿರುನೀನೆಂದಾಗ ಪರಸಿ ॥ ೨೨ ॥

ಆರಿಂದ ಬಂದುದೀ ಪಯಣ ಮಲೆತು ನಿಂದ । ರಾರು ನಿನಗೆ ಧರೆಯೊಳಗೆ ॥
ಆರೊಳಗುಂಟು ಬವರವೆಂದೊಯ್ಯನೆ । ನಾರಿ ಕೇಳಿದಳು ಮಗನನು ॥ ೨೩ ॥

ಜನಪತಿ ಮಂತ್ರಿ ಸಹಾಯು[1] ಸತ್ಪರಿವಾರ । ಜನಪದ ದುರ್ಗ ಭಂಡಾರ ॥
ಅನುಗುಣವಾಗಿರಲಿವು ನಮ್ಮ ಸಿರಿಗಿನ್ನು । ಮುನಿವವರುಂಟೆ ಧರೆಯೊಳು[2] ॥ ೨೪ ॥

ಮೀಱುವರಿಲ್ಲ ನಿನ್ನಯ ಗಂಡನಾಜ್ಞೆಯ । ಮಾಱಾಂಪರಿರಾಯರಿಲ್ಲ ॥
ತೋಱಿತು ವಾರಣಾಸಿಗೆ ಪೋಗುವ ಬುದ್ಧಿ । ಬೇಱೊಂದು ಕಾರ್ಯವಿಲ್ಲೆನಗೆ ॥ ೨೫ ॥

ಎಂದು ನುಡಿದು ಕಳುಹಿಸಿಕೊಂಡು ಬಂದಾ । ನಂದದಿಂ ಲಕ್ಷ್ಮಣವೆರಸು ॥
ಮಂದಿ ಕುದುರೆ ರಥ[3] ಕೂರಾನೆಗಳ ಬಲು । ಸಂದಣಿಯಿಂದ ತೆರಳಿದ[4] ॥ ೨೬ ॥

ಸಾಕೇತ ನಗರವ ಪೊಱಮಟ್ಟು ತಮಗತಿ । ಬೇಕಾದ ದೊರೆಗಳುವೆರಸು ॥
ಜೋಕೆಯಿಂ ತೆರಳಿ ಬಂದರು ವಾರಣಾಸಿಗಂ । ದಾ ಕುಮಾರಕರು ಲೀಲೆಯೊಳು ॥ ೨೭ ॥

ಗಿಡುಬಿಡಿ[5] ದಗಮು ನಿಸ್ಸಾಳ ಡವುಡೆ ಡೋಳು । ಬಿಡದೆ ಪೊಡೆವ ಭೇರಿಯಿಂದ ॥
ನುಡಿವ ಮೃದಂಗ ಕರಡೆಗಳ[6] ರಭಸದಿಂ । ನಡೆತಂದಾ ಕುಮಾರಕರು[7] ॥ ೨೮ ॥

ಚಿನ್ನತಿತ್ತಿರಿ ಱುಂಚೆ ಮುಱು ತಾಪು ಹೆಗ್ಗಾಳೆ । ಮನ್ನೆಯ ಗಹಳೆ ಪಿನಾಕಿ ॥
ಚೆನ್ನುವಡೆದ ನಾಗಸರದುರುರವದಿಂದ । ಮನ್ನೆಯ ರಾಯ ತೆರಳಿದ ॥ ೨೯ ॥

---

ಭೂಮಿಗೆ ಒಡೆಯನಾಗು, ವೈರಿಗಳಿಗೆ ಜಯವನ್ನು ಉಂಟುಮಾಡದಿರು" ಎಂದು ಹೇಳಿ, ಆಶೀರ್ವದಿಸಿದಳು. ॥ ೨೨ ॥ ಅವಳು ಮಗನೊಡನೆ "ಈ ಪ್ರಯಾಣವು ಯಾರಿಂದ ಬಂತು? ನಿನಗೆ ಈ ಭೂಮಿಯಲ್ಲಿ ಪ್ರತಿಭಟನೆಗೆ ನಿಂತವರು ಯಾರಿರುವರು? ಯಾರೊಡನೆ ನೀನು ಯುದ್ಧಮಾಡಲಿರುವೆ? " ಎಂದು ಮೆಲ್ಲನೆ ಕೇಳಿದಳು ॥ ೨೩ ॥ ರಾಜ, ಮಂತ್ರಿ, ಸ್ನೇಹಿತ. ಪರಿವಾರ, ದೇಶ, ದುರ್ಗ, ಭಂಡಾರ – ಎಂಬೀ ಸಪ್ತಾಂಗಗಳು ನಮಗೆ ಅನುಗುಣವಾಗಿರುವಾಗ, ನಮ್ಮ ಸಂಪತ್ತಿಗಾಗಿ ಈ ಭೂಮಿಯಲ್ಲಿ ದ್ವೇಷಿಸುವವರು ಇರುವರೆ? ॥ ೨೪ ॥ ಆ ಮಾತಿಗೆ ರಾಮನು ತಾಯಿಯೊಡನೆ ಹೀಗೆಂದನು – ತಂದೆಯವರ ಆಣತಿಯನ್ನು ಮೀರತಕ್ಕ ಶತ್ರುರಾಜರು ಯಾರೂ ಇಲ್ಲ. ನನಗೆ ವಾರಣಾಸಿಗೆ ಹೋಗಬೇಕೆಂದು ಬುದ್ಧಿ ತೋರಿತು; ಬೇರೆ ಯಾವುದೊಂದು ಕಾರ್ಯವೂ ಇಲ್ಲ ॥ ೨೫ ॥ ಶ್ರೀರಾಮನು ಹೀಗೆ ಹೇಳಿ, ತಾಯಿಯಿಂದ ಅನುಜ್ಞೆಯನ್ನು ಪಡೆದುಕೊಂಡು, ಸಂತೋಷದಿಂದ ಬಂದು, ಲಕ್ಷ್ಮಣ ಸಹಿತನಾಗಿ ಆನೆ-ಕುದುರೆ-ರಥ-ಕಾಲಾಳುಗಳೆಂಬ ಚತುರಂಗ ಸೈನ್ಯದೊಡನೆ ತೆರಳಿದನು. ॥ ೨೬ ॥ ಆ ರಾಮಲಕ್ಷ್ಮಣರು ಸಾಕೇತನಗರದಿಂದ ಹೊರಟು, ತಮಗೆ ಆವಶ್ಯಕವಾದ ರಾಜರುಗಳನ್ನು ಕೂಡಿಕೊಂಡು, ಕ್ರಮಬದ್ಧತೆಯಿಂದ ಹೋಗುತ್ತ ವಿನೋದದಿಂದ ವಾರಣಾಸಿಗೆ ಬಂದರು. ॥ ೨೭ ॥ ಗಿಡುಬಿಡಿ, ದಗಮು, ನಿಸ್ಸಾಳ, ದೌಡೆ, ಡೋಳು, ಮುಂತಾದ ವಾದ್ಯಗಳ ಧ್ವನಿಯಿಂದಲೂ, ನಿಲ್ಲಿಸದೆ ಹೊಡೆಯುವ ಭೇರಿಯಿಂದಲೂ, ಶಬ್ದ ಮಾಡುತ್ತಿರುವ ಮೃದಂಗ, ಕರಡೆಗಳ ರಭಸದಿಂದಲೂ ಆ ರಾಜಕುಮಾರರು ಬಂದರು. ॥ ೨೮ ॥ ಜನನಾಯಕರ ಒಡೆ

---

[1] ಸುಮಿತ್ರ (ಗ ಚ) [2] ಲೋಕದೊಳು (ಗ ಚ.). [3] ಬಲು (ಗ ಚ) [4] ಯಿಂ ತೆರಳಿದನು (ಚ) [5] ಗಿಡಬಿಡಿ (ಗ ಚ ).
[6] ಮೃದಂಗ ಕಹಳೆಗಳ (ಗ). ರವದಿಂದ ನಡೆದರು ರಾಮಲಕ್ಷ್ಮಣರು (ಗ ಚ)

ಕಡುಜಾಣರ ರಸಿಕರ ಕೋವಿದರ ಬಲು । ಗಡಿಯ[1] ಮನ್ನೆಯರ ನಾಯಕರ ॥
ಗಡಣ ಬಳಸಿ ಬರೆ ತೆರಳಿದರೊಯ್ಯನೆ । ಮಡದಿ ಕೇಳಾ ರಾಯಸುತರು ॥ ೩೦ ॥

ಬಿಟ್ಟಲ್ಲಿ ಬೀಡ ಬಿಡದೆ ಬೇಗದೊಳು[2] ತಾವು । ತುಟ್ಟಿದ ಪೊಳಲ ಗಡಿಯಲಿ ॥
ಬಿಟ್ಟರಲಾ ವಾರ್ತೆ ಗಡಿಯ ನಾಯಕರಿಂದ । ಮುಟ್ಟಿದುದಾ ನೃಪವರಗೆ ॥ ೩೧ ॥

ಆ ಮಾತ ಕೇಳುತ ವಾರಣಾಸಿಯನಾ । ಳ್ವ ಮಹೀಪತಿ ಜಯಸೇನ ॥
ತಾಮಸವಿಲ್ಲದೆ ಸಭೆಯೊಳಿಂತಾಡಿದ । ತಾಮರಸಾಯತನೇತ್ರೆ ॥ ೩೨ ॥

ರಾಮ ಲಕ್ಷ್ಮೀಧರರಂತೆಯವರು ತಮ್ಮ । ಸೀಮೆಯಿಂ ಬಂದು ನಾನಾಳ್ವ[3] ॥
ಸೀಮೆಗೆ ಬಂದು ಪೋಗುವ ಕಾರ್ಯವೇನೆಂ । ದಾ ಮಹೀಪತಿಯಾಡಿದನು ॥ ೩೩ ॥

ಮೀಸೆ ಕುಣಿಯೆ ಕಣ್ಣು ಕಿಡಿಯೇಳೆ[4] ಮೊಗವಂದು । ಸೂಸೆ ಪೊಗೆಯು ನಿಡುಪುರ್ಬು ॥
ಓಸರಿಸದೆ ಗಂಟಿಕ್ಕೆ ಮೈನಡುಗಲಂ । ದಾಸುರನಂತೆ ಘರ್ಜಿಸಿದ ॥ ೩೪ ॥

ನಿಡುಸುಯ್ಲಿನಿಂದ ನೀರೇರುವಕ್ಷಿಗಳಿಂ । ದೊಡನೆ ಸುರಿವ ಬೆಮರಿಂದ ॥
ಮಿಡುಕುವ ತುಟಿ ಕೌರಿಡುವ[5] ರೋಮಗಳಿಂದ । ನುಡಿದನಿಂತತಿ ಕೋಪದೊಳು ॥ ೩೫ ॥

ಸಾಕೇತನಗರದರಸುತನ ತಮಗಿನ್ನು । ಸಾಕೆಂದು ನಮ್ಮ ಪಟ್ಟಣಕೆ ॥
ನೂಕಿ ಬಂದಪನಲ್ಲದೊಡೆ ಬಾರನೆಂದಾ । ಭೂಕಾಂತ ಸಭೆಯೊಳಾಡಿದನು ॥ ೩೬ ॥

---

ಯನಾದ ರಾಮನು ಚಿನ್ನತಿತ್ತಿರಿ, ರುಂಜೆ, ಮುರು, ತಾಷ್ಪ, ಹೆಗ್ಗಾಳೆ, ಮನ್ನೆಯ ಕಹಳೆ, ಪಿನಾಕಿ, ಚೆಲುವಾದ ನಾಗಸರ ಮುಂತಾದ ವಾದ್ಯಗಳ ನಿನಾದದೊಡನೆ ತೆರಳಿದನು ॥ ೨೯ ॥ ಎಲೈ ಚೇಳಿನಿಯೇ, ಆ ರಾಜಕುಮಾರರು ತೆರಳುತ್ತಿದ್ದಾಗ ಬಹಳ ತಿಳಿವಳಿಕೆಯುಳ್ಳವರೂ, ರಸಿಕರೂ, ವಿದ್ವಾಂಸರೂ, ಗಡಿಪ್ರದೇಶದ ಮುಖಂಡರೂ ನಾಯಕರೂ, ಗುಂಪಾಗಿ ಸುತ್ತುವರಿದು ಬರುತ್ತಿದ್ದರು ॥ ೩೦ ॥ ಇವರು ಬಿಟ್ಟಲ್ಲಿ ಬೀಡುಬಿಡದೆ, ಬೇಗನೇ ಸಾಗಿ ತಾವು ಉದ್ದೇಶಿಸಿದ ವಾರಣಾಸಿ ಪಟ್ಟಣದ ಗಡಿಯಲ್ಲಿ ಬೀಡುಬಿಟ್ಟರು ಈ ವಾರ್ತೆಯು ಗಡಿಯ ನಾಯಕರಿಂದ ಅಲ್ಲಿನ ರಾಜನಿಗೆ ತಲುಪಿತು. ॥ ೩೧ ॥ ಎಲೈ ಚೇಳಿನಿಯೇ, ವಾರಣಾಸಿಯ ಅರಸನಾದ ಜಯಸೇನನು ರಾಮಲಕ್ಷ್ಮಣರು ಸೈನ್ಯಸಮೇತ ಬಂದು ಬೀಡುಬಿಟ್ಟಿರುವ ವರ್ತಮಾನವನ್ನು ಕೇಳಿ ತನ್ನ ಸಭೆಯಲ್ಲಿ ಹೀಗೆ ಹೇಳಿದನು. ॥ ೩೨ ॥ ರಾಮನಂತೆ! ಲಕ್ಷ್ಮಣನಂತೆ! ಅವರು ತಮ್ಮ ಸೀಮೆಯಿಂದ ಬಂದು ನಾನು ಆಳುವ ಸೀಮೆಗೆ ಬಂದು ಹೋಗಲಿರುವ ಕಾರ್ಯವೇನು? – ಎಂದನು. ॥ ೩೩ ॥ ಜಯಸೇನನು ಸಿಟ್ಟುಗೊಂಡನು ಅವನ ಮೀಸೆ ಕುಣಿಯಿತು, ಕಣ್ಣಿನಲ್ಲಿ ಕಿಡಿಗಳೇರಿದವು ಮುಖದಲ್ಲಿ ಹೊಗೆ ಹೊರಟಿತು. ಉದ್ದವಾದ ಹುಬ್ಬುಗಳು ಗಂಟಿಕ್ಕಿದವು ಮೈ ನಡುಗಿತು ಆಗ ಅವನು ರಾಕ್ಷಸನಂತೆ ಗರ್ಜನೆಮಾಡಿದನು ॥ ೩೪ ॥ ದೀರ್ಘವಾದ ನಿಃಶ್ವಾಸದಿಂದಲೂ, ನೀರುತುಂಬುವ ಕಣ್ಣುಗಳಿಂದಲೂ, ತಡವಿಲ್ಲದೆ ಸುರಿಯುವ ಬೆವರಿನಿಂದಲೂ, ಅಲುಗುವ ತುಟಿಯಿಂದಲೂ, ನೆಟ್ಟಗಾಗುವ ರೋಮಗಳಿಂದಲೂ ಕೂಡಿದವನಾಗಿ ಸಿಟ್ಟಿನಿಂದ ಹೀಗೆಂದನು ॥ ೩೫ ॥ ದಶರಥನ ಕುಮಾರನು ತನಗೆ ಸಾಕೇತನಗರದ ಒಡೆತನವು ಸಾಕೆಂದು ನಮ್ಮ ಪಟ್ಟಣಕ್ಕೆ ಬಂದನಲ್ಲದೆ, ಬೇರೆ ಕಾರಣದಿಂದ ಬಂದಿಲ್ಲ—ಎಂದು ಜಯಸೇನನು ಸಭೆಯಲ್ಲಿ ಹೇಳಿದನು. ॥ ೩೬ ॥ ಅವನು ಬಂದರೇನಾಯಿತು? ಅವನನ್ನು ಮೊದಲು ಸೆರೆಹಿಡಿವೆನು ಆ

---

[1] ಬಲುಗಡೆಯ (ಗ) [2] ಬೆಡದೊಳು (ಗ) [3] ನಾವಾಳ್ವ (ಚ) [4] ಕಿಡಿಯೇಳೆ (ಚ) [5] ಕಾರಿಡುವ (ಕ)

ಬಂದನಾದೊಡೆ ತನ್ನ ಬಂದಿವಿಡಿವೆ ಮೇಲೆ । ಸಂದ ಸಾಕೇತ ನಗರಕೆ ॥
ಮಂದಿ ಕುದುರೆಯ ರಾಣಿಯುವನಿಕ್ಕದೆ ಬಿಡೆ । ನೆಂದು ಕೋಪದೊಳಾಡಿದನು ॥ ೩೭ ॥[1]

ಎಲ್ಲಿಯು ಲಕ್ಷ್ಮಣನೆಲ್ಲಿಯು ಶ್ರೀರಾಮು । ಬಲ್ಲೆನವರ ತಂದೆಗಳು[2] ॥
ನಿಲ್ಲದೆಮ್ಮೊಳಗೊಡೆದವರ[3] ಮಕ್ಕಳುಗಳು । ನಿಲ್ಲಬಲ್ಲರೆ ಕಾಳೆಗಕೆ ॥ ೩೮ ॥

ಹಲವು ಮಾತೇಕೆಮ್ಮ ಗಡಿಯ ಮೆಟ್ಟದ ಮುನ್ನ । ಬಲವ ಬೆದಱಿಸಿ[4] ನಾನವನ ॥
ಹೊಲಬುಗೆಡಿಸಿ ಹೋಱಿ ಹೊಱವಡಿಸುವೆನೆನ್ನ । ನೆಲದಿಂದಲೆಂದು ನುಡಿದನು ॥ ೩೯ ॥

ರಣಭೇರಿಯ ಪೊಯ್ಸು ದಳಪತಿ ಕೇಳೆನ್ನ । ರಣಕಿದಿರಾದೊಡೆಯುವನ[5] ॥
ರಣರಣಕವನೈದಿಸುವೆನೆಂದವನ ಮೀಸೆ । ಕುಣಿಯೆ ಕೋಪದೊಳಾಡಿದನು ॥ ೪೦ ॥

ಪಡೆಯನೆಲ್ಲವ ಕೂಡಿಕೊಂಡವನಿದಿರಾಗಿ । ನಡೆ ನೀನೆಂದು ಬೇಗದೊಳು ॥
ಪಡೆವಾಳಗೆ[6] ಪೇಳಿ ಮಂತ್ರಶಾಲೆಗೆಯುವ । ನಡೆದ ಮಂತ್ರಿಗಳೊಡಗೂಡಿ ॥ ೪೧ ॥

ಏನಿದಱಿರವಾವುದು ರಾಜಕಾರ್ಯ ತಾ । ನೇನಹುದೆಣಿಕೆ ಮತ್ತೇನು ॥
ಆನದೆ ಪೇಳು ನೀನೆಂದು[7] ಮಂತ್ರೀಶನ । ಭೂನಾಥನು ಬೆಸಗೊಳಲು ॥ ೪೨ ॥

ಚಿತ್ತೈಸು ರಾಯ ಬಿನ್ನಪವಿದ ನೀನೇಕ । ಚಿತ್ತದಿಂ ನಿನ್ನವರೀಗ ॥
ಎತ್ತಿ ಬಂದಪರಿವರವರೆನ್ನದೆ[8] ನೀನು । ಚಿತ್ತದಿಂದೊತ್ತರಿಸುವದು ॥ ೪೩ ॥

ಈ ಕಾಲದ ಬಲವಾಸುದೇವರ್ಕಳು । ಲೋಕೈಕವೀರರವರೊಳು ॥
ನೂಕದು ಕಾಳೆಗ ನಮಗೆಂದು ಸಚಿವನಂ । ದೇಕಾಂತದೊಳಾಡಿದನು ॥ ೪೪ ॥

---

ಮೇಲೆ ಪ್ರಸಿದ್ಧವಾದ ಸಾಕೇತನಗರಕ್ಕೆ ಕಾಲಾಳುಗಳನ್ನೂ ಕುದುರೆಗಳನ್ನೂ ಕೊಂಡುಹೋಗಿ ಅಲ್ಲಿ ಸೇನೆಯ ರಾಣ್ಯವನ್ನಿಕ್ಕದೆ ಬಿಡೆನು—ಎಂದು ಕೋಪದಿಂದ ನುಡಿದನು. ॥ ೩೭ ॥ ಆ ಲಕ್ಷ್ಮಣನೆಲ್ಲಿಯವನು? ಶ್ರೀರಾಮನೆಲ್ಲಿಯವನು? ಅವರ ತಂದೆಯನ್ನೇ ಬಲ್ಲವನು ನಾನು. ನಮ್ಮ ವಂಶದವರೇ ಆಗಿದ್ದು ಕವಲೊಡೆದು ಹೋದವರ ಮಕ್ಕಳು ಅವರು! ಅವರೇನು ಯುದ್ಧಕ್ಕೆ ನಿಲ್ಲುವಷ್ಟರ ಪರಾಕ್ರಮವುಳ್ಳವರೆ? ॥ ೩೮ ॥ ಹೆಚ್ಚು ಮಾತೇಕೆ? ಅವರು ನಮ್ಮ ರಾಜ್ಯದ ಗಡಿಗೆ ತಲಪುವ ಮೊದಲೇ ಅವರನ್ನು ಹೆದರಿಸಿ, ದಿಕ್ಕುಗೆಡಿಸಿ, ಕಾದಾಡಿ, ನನ್ನ ನೆಲದಿಂದ ಹೊರಗಟ್ಟುವೆನು – ಎಂದು ನುಡಿದನು. ॥ ೩೯ ॥ ಎಲೈ ಸೇನಾಪತಿಯೇ, ಈಗಲೇ ರಣಭೇರಿಯನ್ನು ಹೊಡೆಸು. ನನ್ನ ಮಾತನ್ನು ಕೇಳು. ನನ್ನೊಡನೆ ಆ ರಾಮನು ಯುದ್ಧಕ್ಕೆ ಬಂದರೆ, ಅವನ ಮಡದಿಗೆ ವಿರಹಕಾತರತೆಯನ್ನು ಉಂಟುಮಾಡುವೆನು – ಎಂದು, ಮೀಸೆ ಕುಣಿಯುತ್ತಿರಲು ಕೋಪದಿಂದ ಹೇಳಿದನು. ॥ ೪೦ ॥ ಜಯಸೇನನು ದಳಪತಿಯೊಡನೆ – "ನೀನು ಸೈನ್ಯವನ್ನೆಲ್ಲ ಕೂಡಿಕೊಂಡು ಬೇಗನೆ ಅವನಿಗೆ ಎದುರಾಗಿ ಹೋಗು." ಎಂದು ಆಜ್ಞೆಮಾಡಿ, ಮಂತ್ರಿಗಳೊಡನೆ ಮಂತ್ರಶಾಲೆಗೆ ಹೋದನು. ॥ ೪೧ ॥ ರಾಜನು ಮಂತ್ರೀಶನೊಡನೆ, "ಏನು? ಈಗಿನ ಸ್ಥಿತಿ ಎಂಥದು? ಈ ಸಂದರ್ಭದಲ್ಲಿ ರಾಜಕೀಯ ಕಾರ್ಯವಾವುದು? ಏನು ನಿನ್ನ ಯೋಚನೆ? ಒಡನೆಯೇ ಹೇಳು" – ಎಂದು ಕೇಳಿದನು. ॥ ೪೨ ॥ ಆಗ ಮಂತ್ರಿಯು "ಎಲೈ ರಾಜನೇ ನನ್ನ ವಿಜ್ಞಾಪನೆಯನ್ನು ಏಕಮನಸ್ಸಿನಿಂದ ಕೇಳು ನಿನ್ನ ದಾಯಾದಿಗಳು ಈಗ ದಂಡೆತ್ತಿ ಬಂದಿದ್ದಾರೆ. ಆದುದರಿಂದ ಅವರು ಇವರು ಎಂದು ಹೇಳಿಕೊಳ್ಳದೆ ಬದಿಗೆ ಸರಿಯುವುದೇ ಲೇಸು. ॥ ೪೩ ॥

---

[1] ೩೭ ಈ ಪದ್ಯ ಕ.ದಲ್ಲಿಲ್ಲ [2] ತಂದೆ ತಾನು (ಚ). [3] ನಿಲ್ಲದೆಮ್ಮೊಳಗೋಡಿವವರ (ಚ) [4] ಬಡಿದು (ಗ). [5] ರಾದೊಡಿನ್ನವರ (ಗ) ರಾದೊಡಿನ್ನವನ (ಚ). [6] ಪಡೆವಳ್ಳಿಗೆ (ಚ). [7] ಪೇಳಿ ನೀವೆಂದು (ಗ. ಚ) [8] ಒಂದಪರೆತ್ತರವರಿವರೆನ್ನದೆ (ಗ) ಬಂದಪರೇತಱಿವರಿವರೆನ್ನದೆ (ಚ).

ಭೂಚರ ಖೇಚರರೆಣೆಯಿಲ್ಲವೆಂದೆಂ । ಬಾ ಚಕ್ರವರ್ತಿಗಳುಕದೆ ॥
ಭೂಚಕ್ರವಱಿಯೆ ಸ್ವಯಂವರದೊಳು ತಂದ । ನಾ ಚಟುಲಾಕ್ಷಿ ಸೀತೆಯನು ॥ ೪೫ ॥

ಅಲ್ಲಿ ನೆರೆದ ನೃಪರಿವರೊಳು ಹೋರಿದು । ದಿಲ್ಲವೆ[1] ಮಿಡುಕಿದುದಿಲ್ಲ ॥
ಬಲ್ಲಿದರಿವರೀ ಕಾಲಕಿವರ ಕೇಳಿ । ಬಲ್ಲೆ ನೀವೇನಱಿಯದುದೆ ॥ ೪೬ ॥

ಬಲಕಿದಿರಾಗಿ ಕಾದುವೊಡಿದು ಪರಿಮಿತ[2] । ಬಲವವರಿಗೆಯಪರಿಮಿತ[3] ॥
ಬಲವದಱಿಂದವರೊಳು ಕಾದಿ[4]ನಮಗಿನ್ನು । ಗೆಲವಾಗದೆಂದು ನುಡಿದನು ॥ ೪೭ ॥

ಮುತ್ತಿಗೆಗೊಳಗಾಗಿ ಕಾದಲು ಪಡಿಬಲ । ವೆತ್ತಿ ಬಂದೆಮ್ಮ ಪಟ್ಟಣದ ॥
ಮುತ್ತಿಗೆಯನು ತೆಗೆಸುವರಿಲ್ಲವೆಂದು ಭೂ । ಪೋತ್ತಮಗಿಂತು[5] ಪೇಳಿದನು ॥ ೪೮ ॥

ಆರು ನಮಗೆ ನಮ್ಮವರಾಗಿ ಬಲಯುತ । ರಾರು ಬವರಕೊದಗುವರು ॥
ಆರಿರ್ದಪರು ದೊರೆಗಳೊಳೆಂಬುದನು ವಿ । ಚಾರಿಸಿಕೊಳಬೇಕು ನೃಪರು ॥ ೪೯ ॥

ನಾಕುವಾಯದ ನೆಲೆಗಳನಱಿಯದೊಡಾ । ನಾಕನಾಯಕನಾದೊಡವಗೆ ॥
ನೂಕದು ರಾಜಕಾರ್ಯದ ತೆಱನೆಂದಾ । ಭೂಕಾಂತಗವನು ಪೇಳಿದನು ॥ ೫೦ ॥

ಗಡಿಯ ಸೀಮೆಯ ಹೊಕ್ಕಿಱಿದು ತುಱುಸೆಱೆಗಳ । ಹಿಡಿಯದ ಮುನ್ನ ಕಾಳೆಗಕೆ ॥
ನಡೆದುಬಾರದ ಮುನ್ನ ಪೋಗಿ ಕಾಣ್ಬುದು ಕಾರ್ಯ । ಪೊಡವೀಶ್ವರ ಕೇಳಿದನು ॥ ೫೧ ॥

---

ಆ ಶ್ರೀರಾಮಲಕ್ಷ್ಮಣರು ಈ ಕಾಲದ ಬಲರಾಮಶ್ರೀಕೃಷ್ಣರೇ ಆಗಿರುತ್ತಾರೆ ಅವರು ಲೋಕದಲ್ಲಿ ಎಲ್ಲರನ್ನೂ ಮೀರಿಸುವ ಪರಾಕ್ರಮಿಗಳು ಅವರಲ್ಲಿ ಯುದ್ಧಮಾಡಲು ನಮಗೆ ಸಾಧ್ಯವಾಗದು" – ಎಂದು ಸಚಿವನು ರಾಜನಿಗೆ ಏಕಾಂತದಲ್ಲಿ ತಿಳಿಸಿದನು ॥ ೪೪ ॥ ಆ ಶ್ರೀರಾಮನು ಸಾಮಾನ್ಯನಲ್ಲ ಸ್ವಯಂವರದ ಸಂದರ್ಭದಲ್ಲಿ ಅವನು ನೆಲದಲ್ಲಿ ಸಂಚರಿಸುವವರಾಗಲೀ ಆಕಾಶದಲ್ಲಿ ಚಲಿಸುವವರಾಗಲೀ ಸಮಾನರಲ್ಲವೆಂದೆನಿಸುವ ಚಕ್ರವರ್ತಿಗಳಿಗೆ ಕೂಡ ಹೆದರದೆ, ಲೋಕವೇ ತಿಳಿಯುವಂತೆ ಆತನು ಸೀತೆಯನ್ನು ಗೆದ್ದು ತಂದಿರುತ್ತಾನೆ ॥ ೪೫ ॥ ಅಲ್ಲಿ ಸೇರಿದ ರಾಜರು ಈ ರಾಮಲಕ್ಷ್ಮಣರೊಡನೆ ಹೋರಾಡಲು ಸಮರ್ಥರಾಗಲಿಲ್ಲ; ಅವರೆಲ್ಲ ಕಣ್ಣಿನ ಎವೆಯನ್ನೂ ಮಿಡುಕದೆ ಇದ್ದರು ಈ ಕಾಲಕ್ಕೆ ಇವರೇ ಬಲಿಷ್ಠರು ನನಗೆ ಇವರನ್ನು ಕೇಳಿ ಗೊತ್ತು ನೀವೂ ತಿಳಿಯದುದಲ್ಲ ॥ ೪೬ ॥ ಅವರ ಸೈನ್ಯಕ್ಕೆ ಎದುರಾಗಿ ಕಾದಾಡುವುದೆಂದರೆ, ನಮ್ಮದು ಪರಿಮಿತಿಯುಳ್ಳ ಸೈನ್ಯವಾಗಿದೆ, ಅವರ ಸೈನ್ಯವು ಅಪರಿಮಿತವಾದುದು ಆದುದರಿಂದ ನಮಗೆ ಅವರೊಡನೆ ಕಾದಿ, ಜಯ ದೊರೆಯದು ಎಂದು ಹೇಳಿದನು ॥ ೪೭ ॥ ನಮ್ಮ ವಿರೋಧಿಸೈನ್ಯವೇ ಬಂದು ನಮ್ಮ ಮೇಲೆ ಮುತ್ತಿಗೆ ಹಾಕಿರುವುದರಿಂದ, ನಾವು ಅವರ ಮೇಲೆ ಮುತ್ತಿಗೆ ಹಾಕಿ ಕಾದುವವೆಂಬ ವಿಷಯವೇ ಇಲ್ಲ – ಎಂದು ಮಂತ್ರಿಯು ರಾಜನಿಗೆ ಹೇಳಿದನು. ॥ ೪೮ ॥ ಯುದ್ಧವನ್ನು ನಿರ್ಣಯಿಸುವ ಮೊದಲು, ನಮಗೆ ನಮ್ಮವರಾಗಿದ್ದು ಬಲಿಷ್ಠರಾದವರು ಯಾರಿದ್ದಾರೆ? ಯುದ್ಧಕ್ಕೆ ಸಹಾಯಕರು ಯಾರಿದ್ದಾರೆ? ರಾಜರುಗಳಲ್ಲಿ ನಮ್ಮ ಪಕ್ಷ ವಹಿಸುವವರು ಯಾರಿರುವರು? ಎಂಬುದನ್ನು ರಾಜರು ವಿಚಾರಿಸಿಕೊಳ್ಳುವುದೇ ನೀತಿಯಾಗಿದೆ ॥ ೪೯ ॥ ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯಗಳನ್ನು ತಿಳಿಯದಿದ್ದರೆ, ಆ ದೇವೇಂದ್ರನಿಗೂ ರಾಜಕಾರ್ಯವನ್ನು ನಡೆಸಲು ಸಾಧ್ಯವಾಗದು – ಎಂದು ಮಂತ್ರಿಯು ರಾಜನಿಗೆ ಹೇಳಿದನು. ॥ ೫೦ ॥ ಎಲೈ ರಾಜನೇ, ಕೇಳು ಈಗ ದಂಡೆತ್ತಿ ಬಂದಿರುವವರು ನಮ್ಮ ರಾಜ್ಯದ ಗಡಿಯ

---

[1] ಹೋರಿಮದಿಲ್ಲವೆ (ಚ) [2] ಕಾದುವೊಡಿದಪರಿಮಿತ (ಕ) [3] ಯಪರಮಿತ (ಕ) [4] ಹೋರಿ(ಚ). [5] ಭೂಪೋತ್ತಮಗವನು (ಚ).

ಓಡಿ ಬದುಕುವುದು ಕಾರ್ಯವಲ್ಲಸುವ ನೀ । ಗಾಡುವುದದು ಬುದ್ಧಿಯಲ್ಲ[1] ॥
ಪಾಡುಗೆಡದೆ ಪಂಥವಳಿಯದವರೊಳಿನ್ನು । ಕೂಡಿ ಬದುಕುವುದು ಕಾರ್ಯ ॥ ೫೨ ॥

ಸತ್ತ ಬಳಿಕ ನಾನಾ ವಸ್ತುಗಳು ಬಂ । ದೆತ್ತಬಲ್ಲವೆ ಜೀವವನು ॥
ತೆತ್ತೆಮಗುಳ್ಳುದನಾದೊಡೊಮ್ಮೆಗೆ ಭೂ । ಪೋತ್ತಮ ಕಾಣ್ಬುದು ಕಾರ್ಯ ॥ ೫೩ ॥

ತಲೆಯಿರಲಿಲೆಯನು[3] ಮಾಱಿ ಹರಣವಿರೆ । ಸಲೆ ಹಾಡಿ ಬಾಳ್ವರೆಂದೆಂಬ[4] ॥
ಬಲು ನೀತಿಕಾಱರ[5] ಮತವುಂಟದ[6] ಭೂ । ಲಲನೇಶ ಕೇಳೆನಲೊಡನೆ ॥ ೫೪ ॥

ಒಡಬಟ್ಟುದು ಬುದ್ಧಿ ಮೆಚ್ಚಿದುದಾ ಮನ । ಬಿಡದೊಪ್ಪಿದುದಹಂಕಾರ ॥
ಪಡೆದುದು ಸಂತಸವನು ಚಿತ್ತ ಮಂತ್ರಿಯ । ನುಡಿಗೇಳಿಯಾ ನೃಪವರನ ॥ ೫೫ ॥

ಅರಸರೊಪ್ಪಿದರಾಪ್ತರೊಡಬಟ್ಟರು ಪ್ರಜೆ । ಪರಿವಾರ ಪರಿಣಮಿಸಿದುದು ॥
ಪಿರಿದು ಕೊಂಡಾಡಿದರುಳಿದರು ಮಂತ್ರೀ । ಶ್ವರನಾಡಿದ ನುಡಿಗಳಿಗೆ[7] ॥ ೫೬ ॥

ಎಂದಾಳೋಚನೆ ಮಾಡಿಯದಕೆ ಮನ । ಸಂದಿರಲಾ[8] ಸಮಯದೊಳು ॥
ಬಂದನಂದಾ ಶ್ರೀರಾಮಚಂದ್ರನ ಬಳಿ । ಯಿಂದೋರ್ವ ಬಲು ರಾಯಭಾರಿ ॥ ೫೭ ॥

ಬಂದ ಸುದ್ದಿಯನೋರ್ವ ಬಾಗಿಲವನು ಪರಿ । ತಂದು ಪೇಳಲು ನೃಪವರಗೆ ॥
ಅಂದು ಕರಸಿ ಕಾಣಿಸಿಕೊಂಡವನಿಂ । ತೆಂದು ನುಡಿದ ವಿನಯವನು ॥ ೫೮ ॥

---

ಸೀಮೆಗೆಳಿಗೆ ನುಗ್ಗಿ ಕಾದಾಡಿ ಹಸುಗಳನ್ನು ಸೆರೆಹಿಡಿಯುವ ಮೊದಲು, ಯುದ್ಧಕ್ಕೆ ಎದುರಾಗಿ ಬಂದು ನಿಲ್ಲುವ ಮೊದಲು, ಅವರನ್ನು ಹೋಗಿ ಕಾಣುವುದೇ ಈಗ ನಾವು ಮಾಡಬೇಕಾದುದು. ॥ ೫೧ ॥ ಕಾದುವುದು ಸಾಧ್ಯವಲ್ಲವೆಂದು ಹೆದರಿ ಓಡಿ ಬದುಕುವುದು ಯೋಗ್ಯವಲ್ಲ. ಕಾದಾಡಿ ಪ್ರಾಣವನ್ನು ನೀಗುವುದೂ ಬುದ್ಧಿವಂತಿಕೆಯಲ್ಲ. ನಮ್ಮ ಕ್ರಮವನ್ನಾಗಲೀ ಪಂಥವನ್ನಾಗಲಿ ಬಿಡದೆ, ಅವರಲ್ಲಿ ಸಂಧಿಮಾಡಿ ಸೇರಿ ಬದುಕುವುದೇ ನಮಗೆ ಯೋಗ್ಯವಾದ ಕಾರ್ಯವು. ॥ ೫೨ ॥ ಸತ್ತು ಹೋದನಂತರ ಹಲವಾರು ವಸ್ತುಗಳಿದ್ದರೂ ಅವು ಬಂದು ಪ್ರಾಣವನ್ನು ಎತ್ತಲಾರವು. ಆದುದರಿಂದ ನಮ್ಮಲ್ಲಿರುವ ವಸ್ತುಗಳೆಲ್ಲವನ್ನೂ ಒಮ್ಮೆಗೆ ಕೊಟ್ಟು ಅವರನ್ನು ಕಾಣುವುದೇ ಒಳ್ಳೆಯದು. ॥ ೫೩ ॥ ಎಲೈ ರಾಜನೇ ಕೇಳು. "ತಲೆಯಿದ್ದರೆ ಎಲೆಮಾರಿ ಜೀವಿಸಬಹುದು" "ಹರಣವಿದ್ದರೆ ಹಾಡಿ ಜೀವಿಸಬಹುದು" ಎಂದು ನೀತಿಕಾರರ ಅಭಿಪ್ರಾಯವಿದೆ" – ಎಂದನು. ॥ ೫೪ ॥ ಮಂತ್ರಿಯ ಮಾತನ್ನು ಕೇಳಿ ಆ ರಾಜನ ಬುದ್ಧಿಗೆ ಒಪ್ಪಿಗೆಯಾಯಿತು; ಮನಸ್ಸಿಗೆ ಪ್ರಿಯವೆನಿಸಿತು; ಆತ್ಮ ಗೌರವಕ್ಕೂ ಸಮ್ಮತವಾಯಿತು. ಚಿತ್ತಕ್ಕೆ ಸಂತೋಷವಾಯಿತು. ॥ ೫೫ ॥ ಮಂತ್ರೀಶನು ಹೇಳಿದ ಸೂಕ್ತಿಗಳಿಗೆ ಅರಸನು ಒಪ್ಪಿದನು, ಆಪ್ತರು ಒಡಂಬಟ್ಟರು. ಪ್ರಜೆ ಪರಿವಾರದವರಿಗೂ ಅವು ಪರಿಣಾಮಕಾರಿಯಾದವು. ಉಳಿದವರೆಲ್ಲರೂ ಮಂತ್ರಿಯನ್ನು ಚೆನ್ನಾಗಿ ಹೊಗಳಿದರು ॥ ೫೬ ॥ ಜಯಸೇನರಾಜನು ಹೀಗೆ ಆಲೋಚನೆಮಾಡಿ, ಅದೇ ವಿಷಯಕ್ಕೆ ಮನಸ್ಸನ್ನಿಟ್ಟಿದ್ದನು. ಆ ಹೊತ್ತಿಗೆ ಶ್ರೀರಾಮಚಂದ್ರನ ಬಳಿಯಿಂದ ಒಬ್ಬ ರಾಯಭಾರಿಯು ಬಂದನು. ॥ ೫೭ ॥ ರಾಯಭಾರಿಯು ಬಂದ ವರ್ತಮಾನವನ್ನು ಒಬ್ಬ ದ್ವಾರಪಾಲನು ರಾಜನಿಗೆ ಬಂದು ತಿಳಿಸಿದನು. ಆಗ ರಾಜನು ಆ ರಾಯ ಭಾರಿಯನ್ನು ಕರೆಸಿ, ಅವನಿಗೆ ಕಾಣಿಸಿಕೊಂಡು ಹೀಗೆ ವಿನಯದ ಮಾತನ್ನಾಡಿದನು. ॥ ೫೮ ॥ ರಾಜನಾದ ರಾಮಚಂದ್ರನು

---

[1] ಕಾರ್ಯವಲ್ಲ (ಗ) [2] ತೆತ್ತೆಮಗುಳ್ಳದ (ಗ). [3] ತಲೆಯಿರೆ ಯೆಲೆಯನು (ಗ) [4] ಬಾಳ್ವುದೆಂದೆಂಬ (ಗ ಚ). [4] ನೀತಿಕಾಜರ (ಚ) [6] ಮತವುಂಟದ (ಗ). [7] ನುಡಿಗೇಳಿ (ಗ). [8] ಮನದಂದಿರಲಾ (ಗ ಚ.).

ಪೋಗಿ ಶ್ರೀರಾಮಚಂದ್ರನ ಪಾದಕೆ ತಲೆ । ವಾಗಲವನ ಪಿಡಿದೆತ್ತಿ[1] ॥
ಆಗ ನುಡಿದನು ವಿನಯವಚನವನನು[2] । ರಾಗವೆದೆಗೆ ಪುಟ್ಟುವಂತೆ ॥ ೬೭ ॥

ಕೊಟ್ಟನವಗೆ ಬೇಡಿದ ರಾಜ್ಯವ ಬೇಱೆ । ಕೊಟ್ಟನೈ ಸಾಸಿರಗಜವ ॥
ಕೊಟ್ಟನೆರಡು ಮೂಱುಲಕ್ಷ[3] ತುರಗಗಳ । ಕೊಟ್ಟನು ಮನದಣಿವಂತೆ ॥ ೬೮ ॥

ಅಲ್ಲಲ್ಲಿ ಬೀಡ ಬಿಡುತ ಬಂದವರನಂ । ದಲ್ಲಲ್ಲಿ ಕಾಣಿಸಿಕೊಳುತ ॥
ನಿಲ್ಲದೆ ನಲವಿಂ ನಡೆದು ಬಂದನು ನವ । ಪಲ್ಲವಾಧರೆಯಾ ನೃಪನು[4] ॥ ೬೯ ॥

ಬಂದವರನು ಕಾಣಿಸಿಕೊಂಡು ಬಾರದೆ । ನಿಂದು ಮಲೆತ ಮನ್ನೆಯರ ॥
ಬಂದಿವಿಡಿದು ವಾರಣಾಸಿಯ ಪುರವನು । ಬಂದು ಪೊಕ್ಕನು ರಾಮಚಂದ್ರ ॥ ೭೦ ॥

ಕಾಣಿಕೆಯಿಕ್ಕಿ ಕಂಡರು ಕೆಲಬರು ಬಂದು । ಮಾಣದೆ ಮಣಿದರರೆಬರು ॥
ಪ್ರಾಣಧಾರೆಯ ಬಂಟರಾದರರೆಬರಂದು । ರಾಣುವೆ[5] ಕೈವಶವಾಯ್ತು ॥ ೭೧ ॥

ವೀರಕಗಿದು[6] ವಿತರಣಕಾನಂದಿಸಿ । ಚಾರುವಿನಯಕಳ್ತಿವಟ್ಟು ॥
ಭೂರಿಗುಣಂಗಳಿಗೊಡಬಟ್ಟವನಿಗಂ । ದಾ ರಾಜ್ಯ ಕೈಸೇಱಿದುದು[7] ॥ ೭೨ ॥

ಸಾರಹೃದಯ ಗಡ ಸದ್ಗುಣಿ ಗಡ ಸುವಿ । ಚಾರಿ ಗಡತಿವಿವೇಕಿ ಗಡ ॥
ವೀರಗಡತಿಧೀರೋದಾತ್ತಗಡೆಂದು । ಸೇರಿದರಿಳೆಯಾಣ್ಮರವನ ॥ ೭೩ ॥

ಪೊನ್ನೀವ ಗಡ ಲೇಸನಾಡುವ ಗಡ ನೋಡಿ । ಮನ್ನಿಪ ಗಡ ರಣದೊಳಗೆ ॥
ಬೆನ್ನೀವನಲ್ಲ ಗಡೆಂದವನನು ಬಲು । ಮನ್ನೆಯರುಗಳು ಸೇರಿದರು ॥ ೭೪ ॥

---

ಬೇಗನೆ ದೀರ್ಘಪ್ರಯಾಣವನ್ನು ಕೈಕೊಂಡು ಬಂದನು. ॥ ೬೬ ॥ ಬೇಗನೆ ಬಂದು ಶ್ರೀರಾಮನ ಪಾದಕ್ಕೆ ನಮಸ್ಕರಿಸಿದನು. ಆಗ ಅವನನ್ನು ಹಿಡಿದು ಎತ್ತಿ, ಅವನ ಮನಸ್ಸಿಗೆ ಪ್ರೀತಿ ಹುಟ್ಟುವಂತೆ ವಿನಯ ವಚನಗಳನ್ನು ಆಡಿದನು. ॥ ೬೭ ॥ ಶ್ರೀರಾಮನು ಅವನಿಗೆ ಬೇಡಿದ ರಾಜ್ಯವನ್ನು ಕೊಟ್ಟನು. ಅಲ್ಲದೆ ಸಾವಿರ ಆನೆಗಳನ್ನೂ ಎರಡುಮೂರು ಲಕ್ಷ ಕುದುರೆಗಳನ್ನೂ ಮನಸ್ಸಿಗೆ ತೃಪ್ತಿಯಾಗುವ ರೀತಿಯಲ್ಲಿ ಕೊಟ್ಟನು. ॥ ೬೮ ॥ ಶ್ರೀರಾಮನು ಅಲ್ಲಲ್ಲಿ ಬೀಡುಬಿಡುತ್ತ ತನ್ನನ್ನು ಕಾಣಲು ಬಂದವರಿಗೆ ಅಲ್ಲಲ್ಲಿಯೇ ಕಾಣಿಸಿಕೊಳ್ಳುತ್ತ ನಿಲ್ಲದೆಯೆ ಸಂತೋಷದಿಂದ ಬಂದನು. ॥ ೬೯ ॥ ತನ್ನನ್ನು ಕಾಣ[illegible] ಬಂದವರಿಗೆ ಕಾಣಿಸಿಕೊಂಡು, ಬಾರದೆ ನಿಂತು ಪ್ರತಿಭಟಿಸಿದ ಮುಖಂಡರುಗಳನ್ನು ಸೆರೆಹಿಡಿದು, ಶ್ರೀರಾಮನು ವಾರಣಾ[illegible] ಪುರವನ್ನು ಪ್ರವೇಶಿಸಿದನು. ॥ ೭೦ ॥ ಅಂದು ಹಲವರು ಕಾಣಿಕೆಗಳನ್ನು ಕೊಟ್ಟು ಶ್ರೀರಾಮನನ್ನು ನೋಡಿದರು. [illegible] ಬಂದು ಒಡನೆಯೇ ವಿನಮಿತರಾದರು. ಇನ್ನು ಹಲವರು ತಮ್ಮ ಪ್ರಾಣವನ್ನೇ ಧಾರೆಯೆರೆಯತಕ್ಕ ಸೇವಕರಾಗಿ ಪರಿಣ[illegible], ಸೈನ್ಯವು ರಾಮನಿಗೆ ಕೈವಶವಾಯಿತು. ॥ ೭೧ ॥ ಶ್ರೀರಾಮನ ಶೌರ್ಯಕ್ಕೆ ಹೆದರಿಯೂ, ದಾನಗುಣಕ್ಕೆ ಸಂತೋ[illegible] ತಾಳಿಯೂ, ಮನೋಹರವಾದ ವಿನಯಕ್ಕೆ ಪ್ರೀತಿಸಿಯೂ, ಹೆಚ್ಚಾದ ಸದ್ಗುಣಗಳಿಗೆ ಒಪ್ಪಿಯೂ ಆ ರಾಜ್ಯ[illegible] ವಾಯಿತು ॥ ೭೨ ॥ ಶ್ರೀರಾಮನು ಸತ್ವಯುಕ್ತವಾದ ಹೃದಯವುಳ್ಳವನಂತೆ, ಒಳ್ಳೆಯ ಗುಣಶಾಲಿಯಂತೆ, [illegible] ನಂತೆ, ಅತ್ಯಂತ ವಿವೇಕಿಯಂತೆ, ವೀರನಂತೆ, ಧೀರೋದಾತ್ತಗುಣವುಳ್ಳವನಂತೆ – ಎನ್ನುತ್ತ ರಾಜರು ಅ[illegible] ಸಿದರು. ॥ ೭೩ ॥ ಶ್ರೀರಾಮನು ಚಿನ್ನವನ್ನು ಕೊಡುವವನಂತೆ, ಒಳ್ಳೆಯ ಮಾತುಗಳನ್ನಾಡುವವನಂತೆ [illegible]

---

[1] ಪಿಡಿದೆತ್ತಿ (ಗ ಚ.) [2] ನುಡಿದನವನಾಗ ನಿನ್ನವನೆಂದು (ಕ) [3] ಲಕ್ಕ (ಗ ಜ.). [4] ನೃಪರು (ಕ). [5] ರಾಣಿವೆ [illegible] (ಗ) ವೀರಪೆರ್ಚಿತು (ಚ). [7] ಕೈಸಾರಿದುದು (ಗ ಚ.).

ನುಡಿವನಲ್ಲ ಗಡನೃತವ ಮಱೆಪ್ರೋಕ್ಷರ । ಕೊಡುವನಲ್ಲ ಗಡ ಕೃಪಣದೊಳು ।
ನಡೆವನಲ್ಲಗಡೆಂದು ಬಂದು ಪ್ರೋಕ್ಷರು ಬಲು । ಗಡಿಯ ಮುಸ್ಕಿಯರೀ ನೃಪನ ॥ ೭೫ ॥

ಭೀತನು ಗಡ ದುರಿತದೊಳು ರಣದೊಳು ನ । ಭೀತನು ಗಡ ಸೌಲಭ್ಯದೊಳು ।
ಸೀತೆಯುತಗಡೆಂದು ಬಂದೆಯ್ದಿನೆ ನೃಪ । ವ್ರಾತ ಸೇರಿದುದು ರಾಘವನ ॥ ೭೬ ॥

ಪರಧನಕಾಟಿಪನಲ್ಲ ಗಡನ್ಯರ । ವರವನಿತೆಯರ ನೋಡ ಗಡ ।
ಪರಪುರುಷಾರ್ಥಿ[1]ಗಡೆಂದು ಬಂದುದು[2] ಬಲು । ತರದವಿರದರಸರೀಡಿಗೆ[3] ॥ ೭೭ ॥

ಎಱಗಿಸಿಕೊಂಡನೆಂದೆಂದಾರಿಗೆಱಗದ । ನೆಱೆಗಲಿಗಳ ನೃಪವರರು ।
ಎಱೆಯನೋರ್ವನೆಯಾದ ರಾಘವನಂಘ್ರ್ಯ । ನೆಱೆಗಲಿಯರು ಲೋಕದೊಳು ॥ ೭೮ ॥

ಇಂತಿರೆ ಜನ ಜಯವನು ತಾಳೆ ಲಕ್ಷ್ಮಿಪ । ಕಾಂತಗುಡಿಯಾ ಸಂಪದೊಳು ।
ಚಿಂತೆಯನುಳಿದು ಶ್ರೀರಾಮಾಂಘ್ರ್ಯಮ[4] ತನ್ನ । ಸ್ವಾಂತದೊಳಿಟ್ಟು ಸುಖಿಸಿದರು ॥ ೭೯ ॥

ವಿನಯನು ವಿವರಣ ಗುಣಮಣಿ ಬಂಧು । ಮಣಿ ಸ್ಮರರೂಪ[5] ಸನ್ನಿಭ ।
ಜನಪತಿ ಚರಣಕಮಲ ಭೃಂಗ ರಘುಕುಲ । ವನಧಿ ಚಂದ್ರನೆನಿಸಿದನು ॥ ೮೦ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೆಯ್ದಿನೆ ನಡೆವಂದು ।
ನಿಂದುದಿಲ್ಲಿಗೆ ಸಂಧಿ ನಲವತ್ತು ಹೇಳ್ವೆನು । ಮುಂದಣ ಕಥೆಯ ಮನ್ನಣಕ್ಕೆ ॥ ೮೧ ॥

ಇದು ಭೂಸುರವಂಶೋದ್ಭವನಭಿನವ ।
ಮದನನಮಲಗುಣ-ಜಿನ-ಪಾದಾಂಬುಜ ॥
ಮದಮಧುಕರನತ್ಯುತ್ತಮವಾಣೀ[ನಿರ್ಮಲ]ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ್ ।
ಗೊದವಿ ರಚನೆಯುಂ ಪಡೆದತಿ ಜಸವೆತ್ತುದು ಸಂಧಿಪದಾರ್ಥಂ ॥ ೮೨ ॥

---

ಬ್ರಾಹ್ಮಣಕುಲದಲ್ಲಿ ಹುಟ್ಟಿದವನೂ, ಹೊಸ ಮನ್ಮಥನೂ, ನಿರ್ಮಲಗುಣಂದ ಕೂಡಿದವನೂ, ಜಿನಪಾದಕಮಲಕ್ಕೆ ಸೋಕ್ಕಿದ ತುಂಬಿಯಂತಿರುವವನೂ, ವಾಗ್ದೇವಿಗೆ ಅತ್ಯುನ್ನತವಾದ ಸ್ವಚ್ಛವಾದ ರತ್ನದ ಕನ್ನಡಿಯಂತಿರುವವನೂ. ಪರಿಶುದ್ಧವಾದ ನಡತೆಯುಳ್ಳವನೂ. ಸಚಿವನೂ ಆದ ದೇವಪ್ಪನು ಸಂತೋಷದಿಂದ ಭವ್ಯರಿಗೆ ಹೇಳಿದ ರಾಮವಿಜಯ ಕಾವ್ಯದಲ್ಲಿ ಸೇರಿದಂತೆ ರಚಿತವಾಗಿ ಒಂಭತ್ತನೆಯ ಸಂಧಿಯು ಕೀರ್ತಿಯುತವಾಯಿತು ॥ ೮೨ ॥

# ೧೦. ಚಂದ್ರಿಕಾವಿಹಾರ

ಕಂದರ್ಪನ ಕಂಗೆಡಿಸಿ ಮೋಹಮಲ್ಲನ । ಮುಂದುಗೆಡಿಸಿ ದಂಡಧರನ ॥
ಬಂದಿವಿಡಿದ ಮುನಿಸುವ್ರತ ಜಿನಪನ[1] । ವಂದಿಸುವೆನು ಮಮತೆಯೊಳು ॥ ೧ ॥

ಮುಂದಣ ಕಥೆ ಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೨ ॥

ಮುಂದಣ ಕಥೆ ಯಾವುದು[2] ರಾಯ ಚಿತ್ತೈ । ಸಂದೆನಲತಿ ಮಮತೆಯೊಳು ॥
ಇಂದುವದನೆಯಿಂದೀವರ ನಯನೆಯಾ । ನಂದದೊಳೊರವೆ ಲಾಲಿಪುದು ॥ ೩ ॥

ಪಿಡಿನಡುವಿನ ಪಿಂಡುದುಂಬಿಗುರುಳ ತಳಿ । ರಡಿಗಳ ತಾರಾಪತಿಯ ॥
ನಡೆಯ ನಲ್ವೆಣ್ಣ ಸೋಲಿಸುತಿವೆ[4] ನಿನ್ನಯ । ನುಡಿ ನುಡಿವಕ್ಕಿ ನುಡಿಯಳೆ ॥ ೪ ॥

ಮುದ್ದುವೆಣ್ಗಳ ಮೂಗಿನ ಮೂಕುತಿಯೆ ಮದ । ವೆದ್ದೆಳೆಜವ್ವನದೊಡತಿ ॥
ಮುದ್ದುನುಡಿಯ ಮೃದುಗತಿಯ ಲಾವಣ್ಯದ । ಮುದ್ದೆ ಲಾಲಿಪುದೀ ಕಥೆಯ ॥ ೫ ॥

ಪತ್ತಿಬಿಡದ ಮಿಥ್ಯೆಯ ತೊಲಗಿಸಿ ಭ । ವ್ಯೋತ್ತಮನೆನಿಸಿ ಜಸವನು ॥
ಪತ್ತು ದೆಸೆಗೆ ಪಸರಿಸಿದೆ[5] ನಿನ್ನಿಂದಾ । ಪತ್ತಿಗರೆನಗಾರಬಲೆ[6] ॥ ೬ ॥

ಎಂದು ನುಡಿದ ಜೀವಕಾಂತನ ವದನಾರ । ವಿಂದವನೊಲಿದೀಕ್ಷಿಸುತ ॥
ಅಂದು ಸಂತಸಗಡಲೊಳಗಾಳುತೇಳುತಿಂ । ತೆಂದು[7] ನೃಪತಿಗೆ ಪೇಳಿದಳು[8] ॥ ೭ ॥

---

ಮನ್ಮಥನನ್ನು ದಿಕ್ಕುಕಾಣದಂತೆ ಮಾಡಿ, ಮೋಹವೆಂಬ ಮಲ್ಲನ ಭವಿಷ್ಯವನ್ನೇ ಹಾಳುಮಾಡಿ, ಯಮನನ್ನು ಸೆರೆಹಿಡಿದ ಮುನಿಸುವ್ರತ ಜಿನೇಂದ್ರನನ್ನು ಭಕ್ತಿಯಿಂದ ವಂದಿಸುವೆನು ॥ ೧ ॥ ಚೇಳಿನಿಯು ಶ್ರೇಣಿಕನೊಡನೆ, ಮುಂದಿನ ಕಥೆ ಯಾವುದು? ಅದರ ಸಂಗತಿಯೇನು? ಎಂಬುದನ್ನು ಮನ್ಮಥ ಸ್ವರೂಪರಾದ ನೀವು ಒಂದಿಷ್ಟೂ ಉಳಿಯದಂತೆ ಸಮಗ್ರವಾಗಿ ತಿಳಿಸಬೇಕು ಎಂದು ಹೇಳಿದಳು ಅದಕ್ಕೆ ಶ್ರೇಣಿಕನು—ಎಲೈ ನೈದಿಲೆಯಂತಹ ಕಣ್ಣುಳ್ಳ ಚೇಳಿನಿಯೇ, ಹೇಳುತ್ತೇನೆ, ಕೇಳು – ಎಂದನು ॥ ೨ ॥ ಎಲೈ ರಾಜನೇ, ಮುಂದಿನ ಕಥೆ ಯಾವುದು? ತಿಳಿಸು ಎಂದು ಚೇಳಿನಿ ಹೇಳಲು, ಎಲೈ ಚಂದ್ರನಂತಹ ಮುಖವುಳ್ಳ, ನೈದಿಲೆಯಂತಹ ಕಣ್ಣುಳ್ಳ ಚೇಳಿನಿಯೇ, ಅದನ್ನು ನಾನು ಸಂತೋಷದಿಂದ ಹೇಳುವೆನು ಕೇಳು – ಎಂದನು ॥ ೩ ॥ ಎಲೈ ಗಿಳಿಮಾತಿನ ಚೇಳಿನಿಯೇ, ನಿನ್ನ ಮಾತುಗಳು ಕೈಹಿಡಿಯ ನಡುವಿನ, ತುಂಬಿಯ ಹಿಂಡಿನಂತಿರುವ ತಲೆಗೂದಲಿನ, ಚಿಗುರಿನಂತಹ ಪಾದಗಳ. ಚಂದ್ರನಂತಪ ನಡಿಗೆಯ ಸುಂದರಿಯಾದ ಸ್ತ್ರೀಯನ್ನು ಸೋಲಿಸುತ್ತಿವೆ ॥ ೪ ॥ ಮುದ್ದಾದ ಹೆಂಗುಸರ ಮೂಗಿನ ಮೂಗುತಿಯೇ, ಸೊಕ್ಕಿದ ಎಳೆಯ ತಾರುಣ್ಯದ ಒಡತಿಯೇ, ಮುದ್ದುಮಾತಿನಿಂದಲೂ ಮೆಲುನಡೆಯಿಂದಲೂ ಕೂಡಿದ ಸೌಂದರ್ಯದ ಮುದ್ದೆಯೇ, ಈ ಕಥೆಯನ್ನು ಕೇಳು. ॥ ೫ ॥ ಮಡದಿಯೇ, ನಿನ್ನಿಂದಾಗಿ ನಾನು, ಹತ್ತಿದಮೇಲೆ ಬಿಡದಿರುವ ಮಿಥ್ಯೆಯನ್ನು ದೂರಮಾಡಿ, ಭವ್ಯರಲ್ಲಿ ಶ್ರೇಷ್ಠನೆನಿಸಿ ಕೀರ್ತಿಯನ್ನು ದಶದಿಶೆಗೆ ಹಬ್ಬಿಸಿರುತ್ತೇನೆ ನಿನಗಿಂತ ಮಿಕ್ಕಿದ ಒಡನಾಡಿಗಳು ನನಗೆ ಯಾರಿರುವರು? ॥ ೬ ॥ ಹೀಗೆ ಹೇಳಿದ ಪ್ರಾಣವಲ್ಲಭನಾದ ಶ್ರೇಣಿಕನ

---

[1] ಜಿನಪಗೆ (ಗ, ಚ) [2] ಯಾವುದದ (ಗ) [3] ನಾಲ್ವೆಣ್ಣ (ಕ) [4] ನಲ್ವೆಣ್ಣನೊಲಿಸುತಿವೆ (ಚ) [5] ಪೊತ್ತು, ದೆಸೆಯರಿಗೆ ಪಸರಿಸಿ (ಗ ಚ) [6] ಪತ್ತಿಗರಾರೆನಗಬಲೆ (ಗ ಚ) [7] ತಿಂತೆಂದಾ (ಗ) [8] ನೃಪತಿಗೊಱೆವಳು (ಗ ಚ) ಈ ಸಂಧಿಯ ಪದ್ಯ ೧ರಿಂದ ೧೧ ವರೆಗಿನವು ಗ ಚ ಪ್ರತಿಗಳ ೯ನೆಯ ಸಂಧಿಯ ಆದಿಯಲ್ಲಿ ಬಂದಿವೆ

ತರುವಿಂದ ತಳಿರು ತಣ್ಗೊಳದಿಂದಂಬುಜ ಸಿತ । ಕರನಿಂದ[1] ತಿಳಿಜೊನ್ನದೇಳ್ಗೆ ॥
ಇರದೊಪ್ಪುವದೆಂತಂತಾನು ನಿಮ್ಮಿಂದ । ಧರೆಯೊಳು ಕೀರ್ತಿವಡೆದೆನು ॥ ೮ ॥

ತೇಜದೊಳಗೆ ರವಿ ರೂಪಿನೊಳಂಗಜ । ರಾಜರಾಜನು ನಿನ್ನ[2] ಸಿರಿಗೆ ॥
ಸೋಜಿಗವಟ್ಟು ಮಚ್ಚರಿಸುವರೆನೆ ನಿ । ನ್ನೋಜೆಯನೇನ ಬಣ್ಣಿಪೆನು ॥ ೯ ॥

ಎಂದು ನುಡಿದ ಚೇಳಿನಿದೇವಿಯ ವದ । ನೇಂದುವ ನೋಡಿ ನಲಿವುತ ॥
ಮಂದಗಮನೆಗಾ ರಾಯನ ಕಥೆಯ[3]ನಿಂ । ತೆಂದು ಪೇಳಿದನು ರಾಗದೊಳು ॥ ೧೦ ॥

ಜಿನಮತ ಶರಧಿ ಸಂಪೂರ್ಣ ಶಶಾಂಕನು । ಜನನುತ ಗುಣಗಣನಿಳಯ ॥
ಮನುವಂಶಾಗ್ರಗಣ್ಯನ ಕಥೆಯನು ಕೇಳು । ಮನಸಿಜನೃಪನಧಿದೇವಿ ॥ ೧೧ ॥

ಚಂದ್ರಿಕಾಪರ್ಯಟನಕ್ಕೆಂದಾ ರಾಮ । ಚಂದ್ರ ಸುಮಿತ್ರರುವೆರಸು[4] ॥
ಚಂದ್ರೋದಯದೊಳು ಪೊಱಮಟ್ಟರದ[5] ಪೇಳ್ವೆ । ನಿಂದ್ರಗಜೋನ್ಮತ್ತಯಾನೆ ॥ ೧೨ ॥

ಅಸುರಾಚಲಕೆ ಸುರಾಚಲವನು ತೂಗೆ । ಸಸಿನಬಾರದ ಸುರನಗಕೆ ॥
ಬಿಸಜಸಂಭವನಿಕ್ಕಿದ[6] ಗುಂಜಿಯಂತೆ ರಾ । ಜಿಸಿತು ಮೂಡುವ ಚಂದ್ರಬಿಂಬ ॥ ೧೩ ॥

ಉದಯಕಾಲದೊಳಿಂದ್ರನ ಮಮಕಾರದ[7] । ಸುದತಿಯವನಿಗಂದಿರದೆ[8] ।
ಮುದದಿ ಪಿಡಿದ ರನ್ನಗನ್ನಡಿಯೆಂಬಂ । ತುದಯಿಸಿದುದು[9] ಚಂದ್ರಬಿಂಬ ॥ ೧೪ ॥

---

ಮುಖಾರವಿಂದವನ್ನು ಪ್ರೀತಿಯಿಂದ ನೋಡಿ, ಸಂತೋಷಸಾಗರದಲ್ಲಿ ಮುಳುಗುತ್ತ ಏಳುತ್ತ ರಾಜನೊಡನೆ ಹೀಗೆಂದಳು. ॥ ೭ ॥ ಮರದಿಂದ ಚಿಗುರೂ, ತಣ್ಣಗಾದ ಕೊಳದಿಂದ ತಾವರೆಯೂ, ಚಂದ್ರನಿಂದ ಸ್ವಚ್ಛವಾದ ಬೆಳುದಿಂಗಳೂ ಶೋಭಿಸುವಂತೆ ನಾನು ನಿಮ್ಮಿಂದಾಗಿ ಲೋಕದಲ್ಲಿ ಕೀರ್ತಿಯನ್ನು ಪಡೆದಿರುತ್ತೇನೆ. ॥ ೮ ॥ ನಿನ್ನ ತೇಜಸ್ಸಿಗೆ ಸೂರ್ಯನೂ, ರೂಪಿಗೆ ಮನ್ಮಥನೂ, ಐಶ್ವರ್ಯಕ್ಕೆ ಕುಬೇರನೂ ಆಶ್ಚರ್ಯಗೊಳ್ಳುವರಲ್ಲದೆ ಅಸೂಯೆ ತಾಳುವರೆನ್ನುವಾಗ. ನಿನ್ನ ರೀತಿಯನ್ನು ಏನೆಂದು ವರ್ಣಿಸುವೆನು ! ॥ ೯ ॥ ಹೀಗೆ ಚೇಳಿನಿಯು ಹೇಳಲು, ಶ್ರೇಣಿಕನು ಆಕೆಯ ಚಂದ್ರನಂತಿರುವ ಮುಖವನ್ನು ನೋಡಿ, ಸಂತೋಷಪಡುತ್ತ, ಆ ರಾಯನ ಕಥೆಯನ್ನು ಪ್ರೀತಿಯಿಂದ ಈ ರೀತಿ ಹೇಳಿದನು. ॥ ೧೦ ॥ ಎಲೈ ಮನ್ಮಥರಾಜನ ಅಧಿದೇವಿಯೇ, ಜೈನಮತವೆಂಬ ಸಾಗರಕ್ಕೆ ಪೂರ್ಣಚಂದ್ರನೂ, ಜನರಿಂದ ಸ್ತುತಿಸಲ್ಪಡುವವನೂ, ಗುಣಗಳ ಸಮೂಹಕ್ಕೆ ಆಶ್ರಯನೂ, ಮನುಕುಲದಲ್ಲಿ ಶ್ರೇಷ್ಠನೂ ಆದ ಶ್ರೀರಾಮನ ಕಥೆಯನ್ನು ಕೇಳು. ॥ ೧೧ ॥ ಎಲೈ ಐರಾವತದಂತೆ ಮದಯುತವಾದ ನಡಿಗೆಯವಳೇ, ಶ್ರೀರಾಮನು ತನ್ನ ಮಿತ್ರರನ್ನು ಕೂಡಿಕೊಂಡು, ಚಂದ್ರೋದಯದ ಸಮಯದಲ್ಲಿ ಚಂದ್ರಿಕಾವಿಹಾರಕ್ಕೆ ಹೊರಟ ಸಂಗತಿಯನ್ನು ತಿಳಿಸುವೆನು. ॥ ೧೨ ॥ ದೇವತೆಗಳ ಪರ್ವತವನ್ನೂ (ಪೂರ್ವಾದ್ರಿ) ರಾಕ್ಷಸರ ಪರ್ವತವನ್ನೂ ತೂಕಮಾಡುವಲ್ಲಿ ತೂಕವು ಸಮವಾಗದುದಕ್ಕಾಗಿ ದೇವತೆಗಳ ಪರ್ವತಕ್ಕೆ ಬ್ರಹ್ಮನು ಇಟ್ಟಂತಹ ಗುಂಜಿಯ ಬೀಜವೋ ಎಂಬಂತೆ ಮೂಡುವ ಚಂದ್ರಮಂಡಲವು ಶೋಭಿಸಿತು. ॥ ೧೩ ॥ ಉದಯದ ಸಮಯದಲ್ಲಿ ದೇವೇಂದ್ರನ ಪ್ರೀತಿಯ ಪತ್ನಿಯು ಸಂತೋಷದಿಂದ ಅವನ ಮುಖಕ್ಕೆ ಹಿಡಿದ ರತ್ನದ ಕನ್ನಡಿಯೋ ಎಂಬಂತೆ ಚಂದ್ರಬಿಂಬವು ಮೂಡಿತು.

---

[1] ಶೀತಕರನಿಂದ (ಗ ಚ). [2] ರಾಜರಾಜರು ನಿಮ್ಮ (ಕ.) [3] ರಾಯರ ರಾಯ (ಗ ಚ.) [4] ವೆರಸಿ (ಚ) [5] ಪೊಱಮಟ್ಟುದ (ಗ) ಪೊಱಮಟ್ಟನವ (ಚ) [6] ಸಂಬವಗಿಕ್ಕಿದ (ಕ). [7] ವದನಕೆ ಚೆಲ್ವ (ಕ) [8] ಯುವನಿಗಿಂದಿರದೆ (ಗ. ಚ). [9] ಮುದದಿಂದ ಪಿಡಿದ ರನ್ನಗನ್ನಡಿಯೆನೆ । ಉದಯಿಸಿದುದು (ಗ).

ಧರೆಯು ಬಹಳ ಕಾಲ ಪೊತ್ತು ಬೇಸತ್ತು ನಿ । ತ್ತರಿಸಲಾಱದೆ ಫಣಿರಾಜ ।
ಸಿರವನೆತ್ತಲು ರಂಗುವಡೆದು ತೋರುವ ರತ್ನ । ದಿರವೆನಲೆಸೆದುದಾ ಚಂದ್ರ ॥ ೧೫ ॥

ಮೃಡನೊಳು ಸೂಡುಪಾಡಿಗೆ ಕಾದಲೆಂದಾ । ಕುಡುವಿಲ್ಲ ರತ್ನದಿಂ ಸಮೆದು ।
ಪಿಡಿದ ಖೆಡೆಯು[1]ವೆಂಬಂತೆಸೆದುದು ಮೂಡ । ಗಡೆಯು ಮೂಡುವ ಚಂದ್ರಬಿಂಬ ॥ ೧೬ ॥

ಕರವ ನೀಡಲು ಕುಮುದಿನಿಯೆಂದಾ ಚಂ । ದಿರ[2] ಕಮಲಿನಿಗಾ ಸುದತಿ ॥
ಇರದೆ ಮೊಗವ ತಿರುಪಲು ನಾಣ್ಚಿದವೋಲು । ಕರ ಬಿಳುಪಾದಬ್ಜಾಕ್ಷಿ[3] ॥ ೧೭ ॥

ಅಂಬರ ಮಧ್ಯದೊಳಾರಾತ್ರಿಯು[4] ಚಂದ್ರ । ಬಿಂಬವೆಸೆದುದೆಂತೆನಲು[5] ॥
ಅಂಬರವೆಂಬ ಕೊಳದೊಳು ರಾಜಿಪ ಧವ । ಲಾಂಬುಜದಂತಂಬುಜಾಕ್ಷಿ ॥ ೧೮ ॥

ತರಣಿಯು ಕರದ ಘಾತದಿ ಬೆಂದವೆಂದೀ । ಧರೆಯು ಸಸ್ಯಾಳಿಗಮೃತದ ॥
ಸರಿವಳೆಯನುಯಿಂದ್ರ ಸುರಿವಂತವನ ಚೆಲ್ವ । ಕಿರಣಗಳೆಸೆದವಬ್ಜಾಕ್ಷಿ[6] ॥ ೧೯ ॥

ಹರಿಣಾಂಕನೆಂಬ ಸೇವಗೆಯೊಳ್ಪೊರಲೊಳ । ಗಿರಿಸಿ ಸುಧೆಯ ಪಿಂಡವನು ॥
ಸರಸಿಜಭವನೊತ್ತಲೆಸೆವ ಸೇವಗೆಗಳ । ಸರವೆನಲೆಸೆದುದಾ ಜೊನ್ನ[7] ॥ ೨೦ ॥

ಕುಲಟೆಯರಂಬಕವೆಂಬ ಝುಷವ ಕ । ತ್ತಲೆದೋಱಿ ದಡಿಯೊಳು ನಿಂದು ॥
ಅಲರಂಬನೆಂಬ ಬಿಯದ ಬೀಸಿದ ಬೆಳು । ವಲೆಯೆನಲೆಸೆದುದಾ[8] ಜೊನ್ನ ॥ ೨೧ ॥

---

॥ ೧೪ ॥ ಆದಿಶೇಷನು ಈ ಭೂಮಿಯನ್ನು ಬಹಳಕಾಲ ಹೊತ್ತುಕೊಂಡಿದ್ದು ಸಹಿಸಲಾರದೆ, ತಲೆಯನ್ನೆತ್ತಲು ಒಳ್ಳೆಯ ಬಣ್ಣದಿಂದ ಕಾಣಿಸುವ ರತ್ನವೋ ಎಂಬಂತೆ ಚಂದ್ರಬಿಂಬವು ಶೋಭಿಸಿತು ॥ ೧೫ ॥ ಮನ್ಮಥನು ಶಿವನೊಡನೆ ಪಂಥ ಪೌರುಷಗಳಿಂದ ಹೋರಾಡುವುದಕ್ಕಾಗಿ ರತ್ನದಿಂದ ಮಾಡಿ ಹಿಡಿದುಕೊಂಡ ಒಂದು ಅಡ್ಡಣವೋ ಎಂಬಂತೆ ಪೂರ್ವದಿಕ್ಕಿನಲ್ಲಿ ಉದಯಿಸುವ ಚಂದ್ರಬಿಂಬವು ಶೋಭಿಸಿತು ॥ ೧೬ ॥ ಚಂದ್ರನು ತನ್ನ ಪ್ರಿಯೆಯಾದ ಕುಮುದಿನಿ (ನೈದಿಲೆ) ಈಕೆಯೆಂದು ಭಾವಿಸಿ ಕಮಲಿನಿಗೆ (ತಾವರೆಗೆ) ಕೈಯನ್ನು ನೀಡಲು, ಆಕೆಯು ಮುಖವನ್ನು ತಿರುಗಿಸಲು, ತಾನೂ ನಾಚಿಕೆಪಟ್ಟಂತೆ ಚಂದ್ರ ಬಿಂಬವು ಬೆಳ್ಳಗಾಗಿ ತೋರಿತು ॥ ೧೭ ॥ ಎಲೈ ಚೆಲುವೆಯೇ, ಆಕಾಶವೆಂಬ ಸರೋವರದಲ್ಲಿ ಶೋಭಿಸುವ ಬಿಳಿತಾವರೆ ಹೂವಿನಂತೆ ಆ ರಾತ್ರಿಯ ಚಂದ್ರಮಂಡಲವು ಆಕಾಶದ ನಡುವೆ ಶೋಭಿಸಿತು. ॥ ೧೮ ॥ ಸೂರ್ಯನ ಕಿರಣಗಳ ಹೊಡೆತದಿಂದ ಲೋಕದ ಸಸ್ಯಗಳು ಬೆಂದುಹೋಗುವವೆಂದು ತಿಳಿದು, ಇಂದ್ರನು ಅಮೃತದ ಮಳೆಯನ್ನು ಸುರಿಸುವನೋ ಎಂಬಂತೆ ಚಂದ್ರನ ಕಿರಣಗಳು ಶೋಭಿಸಿದುವು ॥ ೧೯ ॥ ಬ್ರಹ್ಮನು ಚಂದ್ರನೆಂಬ ಸೇವಗೆಯ ಒರಲಿನಲ್ಲಿ ಅಮೃತದ ಹಿಟ್ಟಿನ ಮುದ್ದೆಯನ್ನು ಒತ್ತಲು, ಶೋಭಿಸುವ ಸೇವಗೆಯ ಎಳೆಗಳೋ ಎಂಬಂತೆ ಬೆಳುದಿಂಗಳು ರಮಣೀಯವಾಗಿತ್ತು. ॥ ೨೦ ॥ ಮನ್ಮಥನೆಂಬ ಬೇಡನು ಕತ್ತಲೆಯಲ್ಲಿ ದಡದ ಬಳಿಗೆ ಬಂದು ನಿಂತು, ಜಾರಿಣಿಯರ ಕಣ್ಣೆಂಬ ಮೀನನ್ನು ಹಿಡಿಯಲು ಬೀಸಿರುವ ಬಿಳಿದಾದ ಬಲೆಯೋ ಎಂಬಂತೆ ಬೆಳುದಿಂಗಳು ಮನೋಹರವಾಗಿತ್ತು. ॥ ೨೧ ॥ ಆಕಾಶವೆಂಬ ಸ್ತ್ರೀಯು ತಲೆಯಲ್ಲಿರುವ ಚಂದ್ರಬಿಂಬವೆಂಬ ಕೊಡದಲ್ಲಿ ಅಮೃತವನ್ನು ತುಂಬಿಸಿ, ಅದನ್ನು ಭೂಮಿಗೆ ಚೆಲ್ಲುತ್ತಿರುವಳೋ ಎಂಬಂತೆ ಆ

---

[1] ಪಿಡಿದು ಖಿಡೆಯ (ಕ) ಪಿಡಿದ ಕೆಡೆಯ (ಗ) [2] ಕುಮುದಿನಿ ನಸುನಕ್ಕಂದಿರ (ಕ) [3] ಬಿಳುಪಾದುದಾ ಚಂದ್ರ (ಕ) [4] ರಾತ್ರೆಯು (ಕ ಗ.) [5] ಬಿಂಬವು ತಳತಳಿಸುತ್ತ (ಕ) [6] ಸಸ್ಯಾಳಿಗಳಾಗ ॥ ಹರಣವ ಬಿಡುವವೆನುತ ದಯೆಯಿಂ ಸಿತಕರ ಕರವೆಸೆದವಬ್ಜಾಕ್ಷಿ (ಕ) [7] ಲೆಸೆದುದಬ್ಜಾಂಶು (ಚ) [8] ಬೆಳುವಲೆಯಾಗಲೆಸೆದುದಾ (ಗ) ೨೧ನೆ ಪದ್ಯ ಕ.ದಲ್ಲಿಲ್ಲ

ಅಂಬರವೆಂಬ ಸುದಶಿಶಿರದೊಳು[1] ಚಂದ್ರ । ಬಿಂಬವೆಂದೆಂಬ ಕುಂಭದೊಳು ॥
ತುಂಬಿ ಸುಧೆಯ ಧರಣಿಗೆ ಸೂಸುವಂತೆ ಕ । ಣ್ಗೆಂಬಾದುದಾ ತಿಳಿಜೊನ್ನ ॥ ೨೨ ॥

ಶಿವಸಾಕ್ಷಿ ಕಮಲಿನಿಗಳುಪೆನೆನುತ ಶಶಿ । ರವಿಗೆ ಪ್ರಮಾಣಮಾಡಿದಡೆ ॥
ರವಿ ತನ್ನ ತೇಜವ ಶಶಿಗಿತ್ತನೆನೆ ರಾತ್ರಿ । ತವೆ ರಾಜಿಸಿತು ಪಗಲಂತೆ ॥ ೨೩ ॥

ಕ್ಷೀರಾಬ್ಧಿಯೆಂಬುದ ಹರಿ ಹಂಸೆಯೆಂಬುದ । ವಾರಿಜಭವ ರೂಪ್ಯಗಿರಿಯ[2] ॥
ಮಾರಾರಿ ಸುರಪ ತತ್ಕರಿಯ ನಱಿವ[3]ನೆನೆ । ಲಾರು ಬಣ್ಣಿಪರು ಚಂದ್ರಿಕೆಯ ॥ ೨೪ ॥

ಇಂತು ರಾರಾಜಿಪ ಚಂದ್ರೋದಯದೊಳು । ಕಂತುಸನ್ನಿಭ ರಾಮಚಂದ್ರ ॥
ಸಂತಸದಿಂ ಮಿತ್ರರುಗೂಡಿಯಂದೇ । ಕಾಂತದಿಂ ಪೊಱಮಟ್ಟನಬಳೆ ॥ ೨೫ ॥

ನೆಲನಾಗಸವಾದಿಯ ಪತ್ತುದೆಸೆಯೊಳು । ಜ್ವಲಿಸುವ ಬೆಳುದಿಂಗಳೊಳು[4] ॥
ನೆಲದಾಣ್ಮನೆಲ್ಲೆಡೆಗಳ ಜನಪದದೊಂದು । ನಲವ ನೋಡುತಲೈದಿದನು ॥ ೨೬ ॥

ಬರೆ ಬರೆ ಮುಂದೆ ಕಂಡನು ಮನ್ಮಥನದೊಂದು । ನೆರವಿಯ[5] ವಿಟರ ಸುಖವನು ॥
ನೆರಪಿ ತೋಱುವ ವಾರನಾರೀಜನಂಗಳ । ಪರಿಯನಂದಾ ರಾಮಚಂದ್ರ ॥ ೨೭ ॥

ನೆತ್ತ ಪಗಡೆ ಚದುರಂಗದಾಯುವ ತ । ಮ್ಮುತ್ತಮ ವಿಟರೊಳಾಡುತ್ತ ॥
ಹೊತ್ತುಗಳೆವ ರೂಪಜೀವಿ ಜನಂಗಳ । ಮೊತ್ತವ ಕಂಡನಾ ನೃಪತಿ ॥ ೨೮ ॥

ನಲ್ಲನಲ್ಲರ ಕೈವೊಯ್ದು ನಗುತ ಸವಿ । ಸೊಲ್ಲಿಂದ ಸೋಲಿಸಿ[6]ಕೊಳುತ ॥
ನಿಲ್ಲದೆ ಮುನಿವುತೊಸೆವುತ ಜೀವಿಪ ಸರ್ವ । ವಲ್ಲಭೆಯರ ಕಂಡನವನು ॥ ೨೯ ॥

---

ಸ್ವಚ್ಛವಾದ ಬೆಳುದಿಂಗಳು ಕಣ್ಣಿಗೆ ಸೊಗಸಾಗಿ ತೋರುತ್ತಿತ್ತು ॥ ೨೨ ॥ ಚಂದ್ರನು ತಾನು ಶಿವಸಾಕ್ಷಿಯಾಗಿ ಕಮಲಿನಿಗೆ ಎಂದೂ ಮೋಹಗೊಳ್ಳೆನು ಎಂದು ಸೂರ್ಯನಲ್ಲಿ ಪ್ರಮಾಣವಚನವನ್ನು ಕೊಡಲು. ಸೂರ್ಯನು ತನ್ನ ಪ್ರಕಾಶವನ್ನು ಚಂದ್ರನಿಗೆ ಕೊಟ್ಟನೋ ಎಂಬಂತೆ ರಾತ್ರಿಯು ಬೆಳುದಿಂಗಳಿನಿಂದ ಹಗಲಿನಂತೆಯೇ ತೋರಿತು. ॥ ೨೩ ॥ ಆ ಬೆಳದಿಂಗಳನ್ನು ಶ್ರೀಮನ್ನಾರಾಯಣನು ಹಾಲಿನ ಕಡಲೆಂತಲೂ, ಬ್ರಹ್ಮನು ತನ್ನ ವಾಹನವಾದ ಹಂಸವೆಂತಲೂ. ಶಿವನು ಬೆಳ್ಳಿಬೆಟ್ಟವೆಂತಲೂ, ಇಂದ್ರನು ಐರಾವತವೆಂತಲೂ ತಿಳಿಯುವರು – ಎನ್ನುವಾಗ ಆ ಬೆಳ್ದಿಂಗಳನ್ನು ಬಣ್ಣಿಸುವವರಾರು? ॥ ೨೪ ॥ ಎಲೈ ಜೇಳಿನಿಯೇ, ಹೀಗೆ ಶೋಭಿಸುವ ಚಂದ್ರೋದಯ ಕಾಲದಲ್ಲಿ ಮನ್ಮಥನಂತಿರುವ ಶ್ರೀರಾಮನು ಸಂತೋಷದಿಂದ ತನ್ನ ಗೆಳೆಯರನ್ನು ಕೂಡಿಕೊಂಡು ಏಕಾಂತದಿಂದ ಹೊರಟನು. ॥ ೨೫ ॥ ನೆಲ. ಆಕಾಶ ಮೊದಲಾದ ಹತ್ತು ದಿಕ್ಕುಗಳಲ್ಲಿಯೂ ಪ್ರಕಾಶಿಸುವ ಬೆಳುದಿಂಗಳಿನಲ್ಲಿ ಶ್ರೀರಾಮನು ಎಲ್ಲಾ ಕಡೆಯ ಜನಸಮೂಹದ ಸಂತೋಷವನ್ನು ನೋಡುತ್ತ ಹೋದನು. ॥ ೨೬ ॥ ಆ ರಾಮನು ಮುಂದೆ ಬರುತ್ತ ಮನ್ಮಥನ ಆದೊಂದು ಬಿಂಡಿನಂತೆ ಇದ್ದು. ವಿಟರಿಗೆ ಸುಖವನ್ನು ಕೊಡುವ ಸೂಳೆಯರ ಸ್ಥಿತಿಯನ್ನು ಕಂಡನು. ॥ ೨೭ ॥ ತಮಗೆ ಉತ್ತಮರೆನಿಸಿದ ವಿಟಜನರೊಡನೆ ನೆತ್ತ. ಪಗಡೆ, ಚದುರಂಗ-ಮುಂತಾದ ಆಟಗಳನ್ನು ಆಡುತ್ತ ಹೊತ್ತುಗಳೆಯುವ ಸೂಳೆಯರ ಸಮೂಹವನ್ನು ಶ್ರೀರಾಮನು ನೋಡಿದನು. ॥ ೨೮ ॥ ಶ್ರೀರಾಮನು ನೋಡಿದ ಆ ಸೂಳೆಯರು ತಮ್ಮ ಇನಿಯರ ಕೈಗೆ ಬಡಿದು ನಗುತ್ತಿದ್ದರು ಸವಿಮಾತುಗಳಿಂದ ಸೋಲಿಸಿ

---

[1] ಅಂಬರವೆಂಬುಜೋದರನಾ (ಗ. ಚ) [2] ವಾರಿಜಭವರು ಪೇಳಿದು (ಗ) . ಭವರೂಪೆಗಿರಿಯು (ಚ) [3] ಕರಿಯುಪೇಳುವ (ಗ)
[4] ದಿಂಗಳೊಳಗೆ (ಚ) [5] ಪರಿಯ (ಕ. ಗ). [6] ಸೊಲ್ಲಿಸಿ (ಕ. ಚ)

ನಾಲ್ಕು ಜಾತಕದ ಪೆಣ್ಗಂಡುಗಳಾ ಹದಿ । ನಾಲ್ಕು ಲೋಕದ ಸುಖಗಳನು ॥
ನಾಲ್ಕಡಿಮಾಡುತ ನರ[1]ಸುರ ಮಿಥುನಕ್ಕೆ । ಕಾಲ್ಕಣ್ಣಿ[2]ಯಾದರಬ್ಜಾಕ್ಷಿ ॥ ೩೦ ॥

ಚಾಟುನುಡಿಯ ಚತುರೋಕ್ತಿಯ ಚೇಟದ । ಕೂಟವ ಗೆಳೆವೆಣ್ಣುಗಳಿಗೆ[3] ॥
ನಾಟಿಸಿ ತೋಱುವ ಮುದಿಪಾಱಿಯರದೊಂ । ದಾಟವ ನೋಡುತ್ತೈದಿದನು ॥ ೩೧ ॥

ವಂಚನೆ ವೈಶಿಕ ಹುರುಡು[4]ಹೋರಟೆ ಬಲು । ಸಂಚು ಸನ್ಮಾನ ಸಾಹಸವ ॥
ನೀಂ ಚದುರಿಂ ಕಲಿ ಎಂಬ ವೃದ್ಧೆಯರ ಪ್ರ । ಪಂಚವ ನೋಡುತ್ತೈದಿದನು ॥ ೩೨ ॥

ಒಳಗಾಗದರ[5]ನೊಳಗಾಗಿಸಿ ಪೊಂಗಳ । ತಳುವದೆ ತೆಗೆದು ವಿಟರಿಗೆ ॥
ಒಳಗುದೋಱದೆ ನಡೆಯೆಂಬ ವೃದ್ಧೆಯರ[6] ಕಂ । ಡಿಳೆಯಾಣ್ಮ ನಗುತಲೈದಿದನು[7] ॥ ೩೩ ॥

ಜಾಣ ಜವ್ವನಿಗನೊಲಿದು ಮೋಹಿಸಿ ಕೊಟ್ಟ । ಕಾಣಿಯೆ[8] ಕೋಟಿ ಪೊನ್ನೆಂಬ[9]
ಏಣಾಕ್ಷಿಯರಮನೆಯೊಳಗಾ ಸಿರಿ ಬೀಡು । ದಾಣವಾಗಿಹಳು ನಿನ್ನಾಣೆ ॥ ೩೪ ॥

ಪಗಲಿರುಳೆಂದಱಿಯದೆ[10] ವಿಟರೊತ್ತಿನಿಂ[11] । ದಗಲದೆ ಸುಖದ ಸುಗ್ಗಿಯನು ॥
ಮಿಗೆ ಕಾಣಿಸಬಲ್ಲ ಬೆಲೆವೆಣ್ಗೆ ವಿಟರು ಕೈ । ಬಗಸೆಯೊಳೀಯರೆ ಧನವ ॥ ೩೫ ॥

ವಿನಯವ ನುಡಿಯುಪಚಾರವ ಬಿಡದಿರು । ಮನವ ನೋಯಿಸದಿರು ವಿಟರ ॥
ತನುತನು ಬೆಚ್ಚಂತಿರ್ದು ಧನವ[12] ತೆಗೆ । ತನುಜೆ ನೀನೆಂದು ಪೇಳಿದಳು ॥ ೩೬ ॥

---

ಕೊಳ್ಳುತ್ತಲೂ ಸಿಟ್ಟು, ಪ್ರೀತಿಗಳನ್ನು ತೋರಿಸಿ ಜೀವಿಸುವವರಾಗಿದ್ದರು ॥ ೨೯ ॥ ನಾಲ್ಕು ಕುಲಸಂಬಂಧಗಳಿಂದ ಕೂಡಿದ ಹೆಣ್ಣುಗಳೂ ಗಂಡುಗಳೂ ಅಲ್ಲಿದ್ದು, ಹದಿನಾಲ್ಕು ಲೋಕದ ಸುಖಗಳನ್ನು ನಾಲ್ಕು ಪಾದಗಳಿಂದ ಅಳೆಯುತ್ತ ಮನುಷ್ಯರ ಮತ್ತು ದೇವತೆಗಳ ಹೆಣ್ಣು ಗಂಡಿನ ಜೊತೆಗೆ ಕಾಲಿನ ಹಗ್ಗವಾಗಿ ತೋರುತ್ತಿದ್ದರು ॥ ೩೦ ॥ ಮೆಚ್ಚಿನ ಮಾತನ್ನೂ, ಚದುರತನದ ನುಡಿಯನ್ನೂ, ಕಾಮಕ್ರೀಡೆಯನ್ನೂ, ಗೆಳತಿಯರಾದ ಹೆಣ್ಣುಗಳಿಗೆ ಮನಸ್ಸಿಗೆ ನಾಟುವಂತೆ ತಿಳಿಸುವ ಮುದಿಸೂಳೆಯರ ಆಟವನ್ನು ನೋಡುತ್ತ ರಾಮನು ಮುಂದುವರಿದನು ॥ ೩೧ ॥ ಅಲ್ಲಿ ಮುದುಕಿಯರು ಎಳೆಯ ಹೆಣ್ಣುಗಳಿಗೆ "ವಂಚನೆ, ವಶೀಕರಣ, ಮತ್ಸರ, ಹೋರಾಟ, ಕೃತ್ರಿಮತೆ, ಮರ್ಯಾದೆ, ಸಾಹಸ – ಮುಂತಾದ ಗುಣಗಳನ್ನು ಚಾತುರ್ಯದಿಂದ ಕಲಿತುಕೋ" ಎಂದು ಬೋಧಿಸುತ್ತಿರುವುದನ್ನು ನೋಡುತ್ತ ಹೋದನು ॥ ೩೨ ॥ "ತನಗೆ ವಶರಾಗದವರನ್ನು ವಶಮಾಡಿ, ಅವರಿಂದ ಹೊನ್ನುಗಳನ್ನು ತೆಗೆದುಕೋ ವಿಟರಿಗೆ ನಿಜವಾದ ಅಂತರ್ಯವನ್ನು ತೋರದೆ ನಡೆದುಕೋ" – ಎನ್ನುವ ಮುದುಕಿಯರನ್ನು ಕಂಡು, ಶ್ರೀರಾಮನು ನಗುತ್ತ ನಡೆದನು ॥ ೩೩ ॥ ಬುದ್ಧಿವಂತನಾದ ತರುಣನು ಮೆಚ್ಚಿ ಮೋಹಗೊಂಡು ಕೊಟ್ಟಂತಹ ಕಾಣಿಯು (ಬರೇ ಚಿಕ್ಕ ನಾಣ್ಯ) ಕೋಟಿಹೊನ್ನಿಗೆ ಸರಿಯೆಂದು ತಿಳಿಯತಕ್ಕ ಸುಂದರಿಯ ಮನೆಯಲ್ಲಿ ನಿನ್ನಾಣೆಯಾಗಿಯೂ ಲಕ್ಷ್ಮೀದೇವಿಯು ವಾಸಮಾಡಂವಳು ॥ ೩೪ ॥ ಹಗಲೂ ಇರುಳೂ ವಿಟರ ಜೊತೆಯನ್ನು ಬಿಡದೆ, ಅವರಿಗೆ ಸಂತೋಷದ ಆಧಿಕ್ಯವನ್ನು ಕೊಡಬಲ್ಲ ವಾರನಾರಿಗೆ ವಿಟರು ಕೈಬೊಗಸೆಯಲ್ಲಿ ತುಂಬಿದ ಹಣವನ್ನು ನಿಶ್ಚಯವಾಗಿಯೂ ಕೊಡುವರು. ॥ ೩೫ ॥ "ಎಲೈ ಮಗಳೇ, ವಿಟರೊಡನೆ ನೀನು ವಿನಯದಿಂದ ಮಾತಾಡು. ಉಪ-

---

[1] ಪರಿ (ಗ. ಚ) [2] ಕಾಲ್ಕಣ್ಣೆ (ಗ) [3] ಕೋಟದನೆಳೆವೆಣ್ಣುಗಳಿಗೆ (ಗ) ಕೂಟದನೆಳೆವೆಣ್ಣುಗಳಿಗೆ (ಚ) [4] ಮುರುಡು (ಗ). [5] ಒಳಗಾದವರ (ಚ) [6] × (ಚ) [7] ನಗುತ್ತೈದಿದನು (ಚ) [8] ಕಾಣೆಯ (ಗ) [9] ಕೋಟಿಯೆಂದೆಂಬ (ಚ) [10] ದೆರೆಯದೆ (ಗ) [11] ವಿಟನೆತ್ತಿನಿಂ (ಗ) ವಿಟನೊತ್ತಿನಿಂ (ಚ) [12] ದ್ರವ್ಯವ (ಗ ಚ)

ಗುಣವ ಕಾಣಿಸಿ ಕಾಮತಂತ್ರದಿಂ ವಿಟರ ವ್ರಾ । ಗಣೆಯುಗೊಪ್ಪಿಸಿ ಲೇಸ ನುಡಿದು ॥
ಹಣವನಿರದೆ ತೆಗೆಯೆಂದೋರ್ವಳು ಬಾಲ । ಗಣಿಕೆಗೆ ಬುದ್ಧಿ ಪೇಳಿದಳು ॥ ೩೭ ॥

ಹೊತ್ತುಱಿಯದೆ ಹೊಲಬಱಿಯದೆ ವಿಟರ ಮೈ । ಯೊತ್ತಿನಿಂದಗಲದೆ ಸುಖದ ॥
ತುತ್ತತುದಿಯ ಕಾಣಿಸಬಲ್ಲ ಚೆಲೆವೆಣ್ಗೆ । ವಿತ್ತವ ತೆಱೆರೆ ಮೋಹಿಗಳು[1] ॥ ೩೮ ॥

ಅಱಿಪದಿನಾಱುತಾಣವ ಚುಂಬಿಪೆಡೆಯ ನೀ । ನಱಿ ನಾನಾ ಕಲೆಗಳನು ॥
ಅಱಿ ಬೊಜಂಗರ[2] ವಶಮಾಡುವ ಮಂತ್ರವ । ನಱಿಯೆಂದೋರ್ವೆ ಪೇಳಿದಳು ॥ ೩೯ ॥

ವಿಟರ ತವಕ ತಕ್ಕೆಗೂಟವ ಮೋಹಿಪ । ದಿಟವ[3] ಸೋಲವ ವೈಶಿಕವ ॥
ಸಟಿಯ ಸವಡುನುಡಿಗಳೊಳು ಮಗಳೆ ನೀ । ಪಟುವಾಗೆಂದು ಪೇಳಿದಳು[3] ॥ ೪೦ ॥

ಕುಪಿತ ಕುಮಾರ್ಗ ಕುಚೇಷ್ಟೆ ಕುತ್ಸಿತಗಳ । ಕಪಟ ಕಟಕಿ ವೈಶಿಕವ[4] ॥
ಜಪಿಸೆಂದು ವೃದ್ಧೆಯೋರ್ವಳು ಬಾಲಗಣಿಕೆಗೆ । ಯುಪದೇಶಿಪುದ ಕಂಡನವನು[5] ॥ ೪೧ ॥

ಬಳಿನೀರ ಕುಡಿದು ಪುತ್ತೂರಿ ನಿಱಿಯ ದಾಂಟಿ[6] । ತಳುವದೆ ಬಲು ಸೂರುಳಿಗೆ[7] ॥
ಅಳುಕದೆ ಮೋಹಿಸಿ ವಿಟರ ಕೈಯಿಂ ಪೊನ್ನ । ಗಳಿಸೆಂದು ಬುದ್ಧಿ ಪೇಳಿದಳು ॥ ೪೨ ॥

ಎಂದಿವಾದಿಯ ಸೂಳೆಸಿದ್ಧಾಂತದ ಮಾತ । ನೆಂದು ವೃದ್ಧೆಯರು ತಂತಮ್ಮ ॥
ನಂದನೆಯರಿಗೆ ಪೇಳುತಲಿರೆ ಕೇಳುತ । ಲ್ಲಿಂದ[8] ಮುಂದಕೆ ತೆರಳಿದರು[9] ॥ ೪೩ ॥

---

ಜಾರಮಾಡುವುದನ್ನು ಬಿಡಬೇಡ. ಅವರ ಮನಸ್ಸಿಗೆ ನೋವನ್ನು ಉಂಟುಮಾಡಬೇಡ. ದೇಹಗಳು ಪರಸ್ಪರವಾಗಿ ಬೆಸುಗೆ ಹಾಕಿದಂತೆ ಇದ್ದು, ಹಣವನ್ನು ಪಡೆದುಕೋ" ಎಂದು ಒಬ್ಬಳು ಹೇಳಿದಳು ॥ ೩೬ ॥ ಇನ್ನೊರ್ವಳು ವೃದ್ಧೆಯು ಬಾಲ ಸೂಳೆಯೊಡನೆ, "ವಿಟರಿಗೆ ಗುಣವಂತೆಯಾಗಿ ಕಾಣಿಸಿ, ಕಾಮತಂತ್ರದಿಂದ ಅವರನ್ನು ಮನ್ಮಥನಿಗೆ ವಶವಾಗಿಸಿ, ಒಳ್ಳೆಯ ಮಾತನ್ನಾಡಿ, ತಡವಿಲ್ಲದೆ ಅವರಿಂದ ಹಣವನ್ನು ತೆಗೆದುಕೋ" ಎಂದು ಬುದ್ಧಿ ಹೇಳಿದಳು. ॥ ೩೭ ॥ ಯಾವ ಸೂಳೆಯು ಹೊತ್ತು-ಹೊಲಬುಗಳ ಗೊಡವೆಯಿಲ್ಲದೆ ವಿಟರ ಸಮೀಪದಿಂದ ತೊಲಗದೆ ರತಿಸುಖದ ಪರಾಕಾಷ್ಠೆಯನ್ನು ಕಾಣಿಸುವಳೋ, ಆಕೆಗೆ ಮೋಹಿಗಳು ಎಷ್ಟು ಹಣವನ್ನೂ ಕೊಡುವರು. ॥ ೩೮ ॥ ನೀನು ಚುಂಬಿಸಿದ ಹದಿನಾರು ಸ್ಥಾನಗಳನ್ನೂ ತಿಳಿದಿರು. ಹಲವಾರು ವಿಧದ ಕಾಮಕಲೆಗಳನ್ನೂ ತಿಳಿದಿರು ವಿಟರನ್ನು ವಶಮಾಡುವ ಉಪಾಯ ವನ್ನೂ ತಿಳಿ – ಎಂದು ಒಬ್ಬಳು ಹೇಳಿದಳು. ॥ ೩೯ ॥ ಎಲೈ ಮಗಳೇ, ನೀನು ವಿಟರೊಡನೆ ತವಕ, ಆಲಿಂಗನ, ಒಡನಾಟ, ಮೋಹಿಸುವ ನಿಜವಾದ ಕ್ರಮ, ಸೋಲ. ವಶೀಕರಣ, ಸುಳ್ಳುಮಾತು, ಕೊಳೆಮಾತು – ಮುಂತಾದವುಗಳಲ್ಲಿ ಬಹಳ ಸಮರ್ಥಳಾಗು – ಎಂದು ಒಬ್ಬಳು ಹೇಳಿದಳು. ॥ ೪೦ ॥ ಎಲೈ ಮಗಳೇ ನೀನು ಸಿಟ್ಟಾಗತಕ್ಕ ಕುಮಾರ್ಗ, ಕೆಟ್ಟ ಚೇಷ್ಟೆ, ವಂಚನೆ, ಕಪಟ, ವ್ಯಂಗ್ಯ, ವಶೀಕರಣ – ಮುಂತಾದುವನ್ನೇ ಜಪಿಸುತ್ತ ಇರು – ಎಂದು ಒಬ್ಬಳು ಮುದುಕಿ ಎಳೆಯ ಸೂಳೆಗೆ ಉಪದೇಶಮಾಡುವುದನ್ನು ರಾಮನು ಕಂಡನು. ॥ ೪೧ ॥ ವಿಟರೊಡನಿದ್ದು ಜತೆಯಲ್ಲಿಯೇ ಪಾನೀಯ ವನ್ನು ಕುಡಿದು, ಪ್ರತಿಜ್ಞೆಗೆ ಹೆದರದೆ, ಹಿಂಜರಿಯದೆ, ಮೋಹಿಸಿ ಅವರ ಕೈಯಿಂದ ಹೊನ್ನನ್ನು ಸಂಪಾದಿಸು – ಎಂದು ಒರ್ವಳು ಹೇಳಿದಳು. ॥ ೪೨ ॥ ಹೀಗೆ ಅಂದು ಹಲವರು ಮುದುಕಿಯರು ಇವೇ ಮೊದಲಾದ ಸೂಳೆ ಸಿದ್ಧಾಂತದ

---

[1] ಕಾಮಿಗಳು (ಗ ಚ). [2] ಬುಜಂಗರ (ಚ). [3] ಪ್ರಿಯ ಸೋಲವನು । ಆಟಮಟವಱಿದೊಡಗೂಡಿ ಪಾವಾತಿ । ಕುಟಿಲದಿಃ ನೆಪೊವಳವರು (ಗ ಚ) [4] ವೈಶಿಕವ (ಚ) [5] ಮಗಳೆಂದಿಯ । ದುಪದೇಶಿಪ್ಪದ ಕೇಳ್ದನವನು (ಗ ಚ) [6] ಕುಡಿಪ್ಪತಪ್ಪದೆ ಗಿರಿಯ ದಾಟು (ಕ). [7] ಸೂರಳಿಗೆ (ಚ). [8] ಪೇಳಲು ಕೇಳುತವನಲ್ಲಿಂದ (ಚ). [9] ತೆರಳಿದನು (ಗ. ಚ.).

ಅಲ್ಲಿ ಕೆಲವು ಬಾಲಗಣಿಕಾಜನ ತ । ಮ್ಮುಲ್ಲಾಸದಿಂ ಕಂತುಕವ[1] ॥
ನಿಲ್ಲದೆ[2] ನಲಿನಲಿದಾಡುತಲಿರೆ ಭೂ । ವಲ್ಲಭ ನಿಂತು[3] ನೋಡಿದನು ॥ ೪೪ ॥

ನಿಂದು ಮಲೆತು ಚೆಂಡ ತೂಗುವ ಗಮಕವ । ನಿಂದು[4] ಲಗ್ಗೆಯ ನಿಟ್ಟಿಸುವ ॥
ಚಂದವ ಚದುರಿಂದಲಿಡುವ ಪೆಣ್ಗಳದೊಂ । ದಂದವ ಕಂಡನಂದರಸ ॥ ೪೫ ॥

ಪೊಡೆಯೆ ಪೊಡೆಯೆ ಪುಟ ನೆಗೆದು ಬಪ್ಪುದು ಚೆಂಡು । ಬಿಡದವಳಧರವ[5] ಕಂಡು ॥
ಬಿಡುವರೆ ಪೊಡೆಯೆ ಬಯ್ಯಲು ಮುದ್ದುವೆಣ್ಗಳ[6] । ಕಡುಕಾಮಿಗಳು[7] ಕಮಲಾಕ್ಷಿ ॥ ೪೬ ॥

ಕರತಳವನು ಸೋಂಕೆ ಮಾಣಿಕವೀಕ್ಷಿಸೆ । ಹರಿನೀಲ ಮೌಕ್ತಿಕ ನಗೆಯಿಂ ॥
ಇರದೆ ಮೂವಣ್ಣವಪ್ಪುದು ಕಂತುಕ ಪೆಣ್ಣ । ವರಿಸಿದವರು ವರ್ಣಗೆಡರೆ ॥ ೪೭ ॥

ಪಿಡಿದ ಕಂತುಕದಿಂದೋರ್ವಳೋರ್ವಳನಂ । ದಿಡಲು ತಪ್ಪಲು ತಪ್ಪಿ ಚೆಂಡು ॥
ಪೊಡವಿಗೆ ಬಿದ್ದು ಬಳಲಿ ಬಂದೋರ್ವಳ । ಅಡಿಯ[8] ಮುಂದೆಸೆದುದೆಂತೆನಲು ॥ ೪೮ ॥

ಕೊಂದ ಕಾಮನ ಹರನೆಂಬ ಸುದ್ದಿಯ ಪೇಳ । ಬಂದು[9] ರತಿಯ ಕಾಲ್ಗೆಱಗಿದ ॥
ಇಂದುವಿನಂದದೊಳೆಸೆದುದಾ ಸುದತಿಯ । ಮುಂದಣ ಮುತ್ತಿನ ಚೆಂಡು ॥ ೪೯ ॥

ನಡೆಯ ವಿಲಾಸವ ಕೊಡು ನನ್ನ ಶಿಶುವಿಗೆಂ । ದಡಿಯ[10] ಹಿಡಿದು ಮಮತೆಯೊಳು ॥
ಬಿಡದಿಪ್ಪ ಹಂಸೆಯೆಂಬಂದದೊಳದೆ[11] ನಿಡು । ಮುಡಿಯಳ ಮುಂದಳ ಚೆಂಡು ॥ ೫೦ ॥

---

ಮಾತುಗಳನ್ನು ತಮ್ಮ ಪುತ್ರಿಯರಿಗೆ ಹೇಳುತ್ತಿರಲು, ಅವನ್ನೆಲ್ಲ ಕೇಳುತ್ತ, ಇವರು ಅಲ್ಲಿಂದ ಮುಂದೆ ತೆರಳಿದರು. ॥ ೪೩ ॥ ಅಲ್ಲಿ ಕೆಲವರು ಬಾಲವೇಶ್ಯೆಯರು ತಮಗಾದ ಉಲ್ಲಾಸದಿಂದ ಚೆಂಡನ್ನು ಆಡುತ್ತ, ನಲಿದಾಡುತ್ತಿರಲು ಶ್ರೀರಾಮನು ನಿಂತು ನೋಡುತ್ತಿದ್ದನು ॥ ೪೪ ॥ ನಿಂತುಕೊಂಡು ಎದುರಾಗಿ ಚೆಂಡನ್ನು ತೂಗುವ ತ್ವರೆಯುಳ್ಳ, ಹೇಗೆ ಹೊಡೆಯ ಬೇಕೆಂದು ನೋಡುವ ಚೆಂದವುಳ್ಳ, ಚಾತುರ್ಯದಿಂದ ಚೆಂಡನ್ನು ಹೊಡೆಯುವ ಹೆಂಗುಸರ ಅಂದವನ್ನು ರಾಮನು ಕಂಡನು ॥ ೪೫ ॥ ಚೆಂಡನ್ನು ಎಷ್ಟು ಹೊಡೆದರೂ ಅದು ಅವಳ ಕೆಳತುಟಿಯನ್ನು ಕಂಡು ಮೋಹಿಸಿ ಬರುವ ರೀತಿಯಲ್ಲಿ ಪುಟನೆಗೆದು ಬರುತ್ತಿತ್ತು. ಎಲೈ ಚೆಳಿನಿಯೇ, ಹೊಡೆದರೂ ಬೈದರೂ ಅತ್ಯಂತ ಕಾಮುಕರಾದವರು ಮುದ್ದುತನದ ಹೆಂಗುಸರನ್ನು ಬಿಡುತ್ತಾರೆಯೆ? ॥ ೪೬ ॥ ಆ ಚೆಂಡು ಹೆಂಗುಸಿನ ಅಂಗೈಗೆ ಬಂದಾಗ ಕೈಯ ಕೆಂಪು ಪ್ರಕಾಶದಿಂದ ಮಾಣಿಕ್ಯವಾಗಿ ತೋರುತ್ತಿತ್ತು. ಸ್ತ್ರೀಯು ನೋಡಿದಾಗ ನೀಲರತ್ನವಾಗಿ ಕಾಣುತ್ತಿತ್ತು. ನಗೆಯನ್ನು ಬೀರಿದಾಗ ಮುತ್ತಿನಂತೆ ತೋರುತ್ತಿತ್ತು. ಹೀಗೆ ಒಂದೇ ಚೆಂಡು ಮೂರು ಬಣ್ಣಗಳನ್ನು ತಾಳುತ್ತಿತ್ತು. ಹೆಣ್ಣನ್ನು ವರಿಸಿದವರು ಬಣ್ಣಕೆಡದೆ ಇರುತ್ತಾರೆಯೆ? ॥ ೪೭ ॥ ಒಬ್ಬಳು ಚೆಂಡನ್ನು ಹಿಡಿದು ಇನ್ನೊಬ್ಬಳಿಗೆ ಹೊಡೆದಾಗ ಅದು ಗುರಿತಪ್ಪಿ, ನೆಲಕ್ಕೆ ಬಿದ್ದು, ಮತ್ತೊಬ್ಬಳ ಪಾದದ ಮುಂದೆ ಬಂದು ಬಿದ್ದಿತು. ಆಗ ಆ ಚೆಂಡು ಹೀಗೆ ತೋರಿತು ॥ ೪೮ ॥ ಮನ್ಮಥನನ್ನು ಶಿವನು ಸಂಹರಿಸಿದನೆಂಬ ಸುದ್ದಿಯನ್ನು ಹೇಳುವುದಕ್ಕಾಗಿ ಬಂದು, ರತೀದೇವಿಯ ಕಾಲಿಗೆರಗಿದ ಚಂದ್ರನೋ ! ಎಂಬಂತೆ, ಆ ಸುದತಿಯ ಪಾದದ ಬಳಿಗೆ ಬಂದು ಮುತ್ತಿನ ಚೆಂಡು ಶೋಭಿಸುತ್ತಿತ್ತು. ॥ ೪೯ ॥ ನನ್ನ ಮಗುವಿಗೆ ನಡೆಯುವ ಚೆಲುವನ್ನು ಹೇಳಿಕೊಡು – ಎಂದು ಹಂಸೆಯು ಬಂದು ಪ್ರೀತಿಯಿಂದ ಕಾಲುಹಿಡಿದು, ಬಿಡದೆ ಇರುವಂತೆ, ಆ ನಿಡುಗೂದಲಿನ ಹೆಂಗುಸಿನ ಮುಂದುಗಡೆ ಇರುವ

---

[1] ಕಂದುಕವ (ಗ) [2] ನಲಿದಾಡುತಿರಲವನಾ (ಗ ಚ) [3] ನಿಂದು (ಗ ಚ) [4] ಗಮಕವನಂದು (ಗ ಚ) [5] ಳಗಿರುವ (ಗ) [6] ಮುದ್ದುವೆಂಗಳು (ಗ) [7] ಕಡುಗಾಮಿಗಳು (ಗ) [8] ಅಡೆಯ (ಗ) [9] ಪೇಳಲಂದು (ಗ) [10] ಶಿಶುವಿಗೊದಡೆಯ (ಗ) ಶಿಶುವಿಗೆಯಡಿಯ (ಕ) [11] ಯೆಂಬಂದದೊಳಗೆ (ಗ)

ಸವತಿಮತ್ಸರ ಬೇಡೆನ್ನೊಳೆನುತ ಕೀರ್ತಿ । ಯುವತಿ ಕಂತುಕವೇಷವಾಂತು ॥
ತವಕದಿಂ ಬಂದು ಕಾಲ್ಗೆಱಗಿದಂತೆಸೆದುದಂ । ದವಳ ಮುಂದಣ ಚೆಂಡಿನಿರವು ॥ ೫೧ ॥

ಕಡೆಗಣ್ಣ ಕಾಂತಿಗೆ ಸರಿಯೆಂದು[1] ನಾ ನಿನ್ನ । ನುಡಿದುದಿಲ್ಲೆಂದು ಕಾರ್ಮಿಂಚು ॥
ಅಡಿಗೊಬ್ಬುಳಿಗೊಂಡೆಱಗಿದಂತೆಸೆದುದಾ । ಮಡದಿಯ ಮುಂದಣ ಚೆಂಡು ॥ ೫೨ ॥

ಅಂಗದ ಕಾಂತಿಯ ಕೊಳನೆಂದು ಪದವ ಪ । ದ್ಮಂಗಳೆಂದಾ ಹಂಸೆ ಬಂದು ॥
ಹಿಂಗದಿತ್ತು ಪೋದ ತತ್ತಿಯಂತಿದೆ[2] ಕೋಮ । ಲಾಂಗಿಯ ಮುಂದಣ ಚೆಂಡು ॥ ೫೩ ॥

ಈ ಪರಿಯಲ್ಲಿ ಚೆಂಡಾಡುತ ನಲಿವುತಿ । ರ್ಪ್ಪ ಪಣ್ಯಾಂಗನಾ ಜನವ ॥
ಏ ಪೊಗಳುವೆ ನೋಡುನೋಡುತಲೈದಿದ[3] । ಭೂಪತಿಯಲ್ಲಿಂದ ಮುಂದೆ ॥ ೫೪ ॥

ತಪ್ಪಿ ನುಡಿವುತ ಮಾತುಗಳ ಧರಣಿಗಂದು[4] । ತೊಪ್ಪಗೆ[5] ಬೀಳುತೇಳುತ್ತ ॥
ಸೊಪ್ಪಾದ ಮೈಮನದಿಂದ ಸುರೆಯನುಂಡ । ರೊಪ್ಪವನೇನ ಪೇಳುವೆನು[6] ॥ ೫೫ ॥

ಸೊಕ್ಕೇಱಿದ ಕಣ್ಣಿಂದ ವದನಕಂ । ದಿಕ್ಕಿದ ಚೆಂಗೈಯಿಂದ ॥
ದಿಕ್ಕನೆ ಸೋಮಪಾನವ ಮಾಳ್ಪರನಂ । ದಿಕ್ಕೆಲದೊಳು ಕಂಡ ನೃಪತಿ ॥ ೫೬ ॥

ಸೊಕ್ಕುವರ್ ಕೆಲರು ಕೆಕ್ಕನೆ ಕೆಲಕೆಲವರು । ಬಿಕ್ಕಸಬಡುವರು ಕೆಲರು ॥
ಆಕ್ಕಱಿಂ ಕೆಲರು ರಕ್ಕಸಿಯಂತೆ ಕೆಲಬರು । ಯಿಕ್ಕೆಲದೊಳು ಕಂಡ ನೃಪತಿ ॥ ೫೭ ॥

ಮಧುಪಾನವ ಮಾಡಿ ಮೈಮಱೆದೊಯ್ಯನೆ । ಅಧಮವೃತ್ತಿಯಲಿ ವರ್ತಿಸುವ ॥
ವಧುವರರುಗಳ ನೋಡುತ ನೋಡುತ್ತೈದಿದ । ಬುಧಜನಪಾಲನಬ್ಜಾಕ್ಷಿ ॥ ೫೮ ॥

---

ಚೆಂಡು ಶೋಭೆಯನ್ನು ಬೀರುತ್ತಿತ್ತು. ॥ ೫೦ ॥ ಕೀರ್ತಿಯೆಂಬ ಸ್ತ್ರೀಯು ಚೆಂಡಿನ ರೂಪವನ್ನು ತಾಳಿ ಬೇಗ ಬಂದು "ನನ್ನೊಡನೆ ಸವತಿ ಮತ್ಸರವನ್ನು ಮಾಡಬೇಡ" ಎಂದು ಕಾಲಿಗೆ ಎರಗಿದಂತೆ ಆಕೆಯ ಮುಂದೆ ಬಿದ್ದ ಚೆಂಡಿನ ಸ್ಥಿತಿಯು ತೋರುತ್ತಿತ್ತು. ॥ ೫೧ ॥ ಮಳೆಗಾಲದ ಮಿಂಚು ಬಂದು, "ನಿನ್ನ ಕಡೆಗಣ್ಣಿನ ಕಾಂತಿಗೆ ನಾನು ಎಣೆಯಾಗಿರುವೆನೆಂದು ಹೇಳಿಲ್ಲ" ಎಂದು ಆ ಹೆಂಗುಸಿನ ಪಾದದ ಸಮೀಪಕ್ಕೆ ಬಂದು ಮಣಿಯುವಂತೆ ಆ ಚೆಂಡು ಮನೋಹರವಾಗಿತ್ತು. ॥ ೫೨ ॥ ಆ ಸುಂದರವಾದ ಸ್ತ್ರೀಯ ದೇಹಕಾಂತಿಯು ಸರೋವರವೆಂತಲೂ ಪಾದವು ತಾವರೆಯೆಂತಲೂ ತಿಳಿದು, ಹಂಸೆಯು ಬಂದು. ಹಿಂಜರಿಯದೆ ಇಕ್ಕಿಹೋದ ಮೊಟ್ಟೆಯೋ! ಎಂಬಂತೆ ಆ ಚೆಂಡು ತೋರಿತು. ॥ ೫೩ ॥ ಈ ರೀತಿಯಲ್ಲಿ ಚೆಂಡಾಡುತ್ತ ನಲಿಯುತ್ತಾ ಇರುವ ಆ ಬೆಲೆವೆಣ್ಣುಗಳನ್ನು ನೋಡುತ್ತ ನೋಡುತ್ತ, ಶ್ರೀರಾಮನು ಅಲ್ಲಿಂದ ಮುಂದೆ ತೆರಳಿದನು. ॥ ೫೪ ॥ ಮುಂದೆ ಶ್ರೀರಾಮನಿಗೆ ಸುರಾಪಾನ ಮಾಡಿದವರು ಕಾಣಸಿಕ್ಕಿದರು. ಅವರು ತಪ್ಪುಮಾತುಗಳನ್ನಾಡುತ್ತ. ನೆಲಕ್ಕೆ ಧೊಪ್ಪನೆ ಬೀಳುತ್ತ, ಏಳುತ್ತ. ಪುಡಿಯಾದ ದೇಹ ಮನಸ್ಸುಗಳುಳ್ಳವರಾಗಿದ್ದರು. ಅವರ ಸೊಬಗನ್ನು ಏನೆನ್ನಲಿ! ॥ ೫೫ ॥ ಅಮಲೇರಿದ ಕಣ್ಣಿನಿಂದಲೂ ಮುಖದಲ್ಲಿ ಇಟ್ಟ ಕೆಂಪಾದ ಕೈಯಿಂದಲೂ ಕೂಡಿ, ಅಮಲು ರಸವನ್ನು ಕುಡಿದವರು ಶ್ರೀರಾಮನು ಹೋಗುತ್ತಿದ್ದ ಬೀದಿಯ ಎರಡೂ ಕಡೆಗಳಲ್ಲಿ ಇದ್ದರು. ॥ ೫೬ ॥ ಕೆಲವರು ಹುಚ್ಚುಗಟ್ಟುತ್ತಿದ್ದರು. ಕೆಲವರು ಬಾಯಿಗೆ ಬಂದಂತೆ ಕೆರೆಯುತ್ತಿದ್ದರು. ಕಲವರು ಬೆಚ್ಚಿಕೊಳ್ಳುತ್ತಿದ್ದರು, ಕೆಲವರು

---

[1] ಪಡೆಯೆಂದು (ಗ) ಪಡಿಯೆಂದು (ಜ) [2] ತತ್ತಿಯೆಂತಿದೆ (ಗ ಜ). [3] ನಾನಿಂತೆಂದ ಶಕ್ತ್ಯವು (ಕ) [4] ಧರಣಿಗಾಗ (ಗ). [5] ತೊಪ್ಪನೆ (ಜ).
[6] ನುಂಡರೊಪ್ಪಿದರಾ ಸಮಯದೊಳು (ಗ. ಜ) ೫೬ನೇ ಪದ್ಯ ಕ ದಲ್ಲಿಲ್ಲ ೫೭ ಗ ಜ ಗಳಲ್ಲಿಲ್ಲ

ಅಲ್ಲಲ್ಲಿ ಕಾಮಶಾಸ್ತ್ರಗಳನೋದುವರ[1] ಮ । ತ್ತಲ್ಲಲ್ಲಿ ಮೋಹಮಂತ್ರಗಳ ॥
ಅಲ್ಲಲ್ಲಿ ಕಲಿವವರನು ನೋಡುತ್ತೈದಿದ[2] । ನಲ್ಲಿಂದ ಮುಂದಕಾ ನೃಪತಿ ॥ ೫೯ ॥

ಅಲ್ಲಲ್ಲಿ ಚೌಸೀತಿ ಬಂಧಗಳನು ಪೇಳ್ವ । ರಲ್ಲಿ ಚೌಷಷ್ಠಿ ಕಲೆಗಳ ॥
ಅಲ್ಲಲ್ಲಿಯುಪದೇಶಿಪರ ನೋಡುತ ನೃಪ । ನಲ್ಲಿಂದ ಮುಂದಕ್ಕೈದಿದನು ॥ ೬೦ ॥

ಅಲ್ಲಲ್ಲಿ ಜೂಜನಾಡುವರು[3] ಗೆಡೆಯು ಕಟ್ಟಿ । ಯಲ್ಲಲ್ಲಿ ಖೋಯೆಂದುಲಿವರು ॥
ಅಲ್ಲಲ್ಲಿ ಬೊಬ್ಬಾಟಗಳ ಮಾಡುವರ ನೋಡು । ತಲ್ಲಿಂದ ಮುಂದಕ್ಕೈದಿದನು[4] ॥ ೬೧ ॥

ನುಡಿ ಕಮ್ಮನೆ ನೋಡುವ ಕಣ್ಣು ಕಮ್ಮನೆ । ನಡೆವ ಜನರು ಕಮ್ಮನಾಗೆ ॥
ಉಡುಪಾಂಶು ಕಮ್ಮನೆ ದೆಸೆ ಕಮ್ಮನಾಗಲಾ । ನಡೆದ ಪೂವಿನ ಸಂತೆಗಾಗಿ[5] ॥ ೬೨ ॥

ಸಣ್ಣ ಮಲ್ಲಿಗೆ[6] ಸಂಪಗೆಯು ಸರೋಜವ । ಬಣ್ಣಗೇದಗೆಯು ಬಂದುಗೆಯು ॥
ಬಣ್ಣಿಸಿ ಮಾಱುವ ಹೆಣ್ಣಸೊಬಗ ನೆಲ । ವೆಣ್ಣಾಣ್ಮ ನೋಡುತ್ತೈದಿದನು ॥ ೬೩ ॥

ಕರ್ಣಿಕಾರವ ಕನ್ನೈದಿಲ ಜಾಜಿಯು । ವರ್ಣದ ಚೆಂಗಣಗಿಲೆಯು ॥
ಕರ್ಣಾಂತಾಯತಾಕ್ಷಿಯರು ಮಾಱುವುದನಾ । ಕರ್ಣಾಟಪತಿ ಕಂಡನಬಲೇ ॥ ೬೪ ॥

ನಾಗಸಂಪಗೆ ನಲವೆತ್ತವಾದರಿ ತಲೆ । ದೂಗಿಪ ಸುರಹೊನ್ನೆಯುರಲ[7] ॥
ನಾಗಕೇಸರವ ಮಾಱುವ ನಾರಿಯರ ಕಂಡ । ನಾ ಗುಣಮಣಿ ರಾಮಚಂದ್ರ ॥ ೬೫ ॥

---

ಪ್ರೀತಿ ತೋರ್ಪಡಿಸುತ್ತಿದ್ದರು ಇನ್ನು ಕೆಲವರು ರಾಕ್ಷಸಿಯರಂತೆ ತೋರುತ್ತಿದ್ದರು ಇಂಥವರನ್ನು ಶ್ರೀರಾಮನು ತನ್ನ ಎರಡೂ ಪಾರ್ಶ್ವಗಳಲ್ಲಿ ಕಂಡನು ॥ ೫೭ ॥ ಎಲ್ಲೈ ಚೆಲುವೆಯೇ, ಕೆಲವರು ಗಂಡಹೆಂಡಿರು ಮದ್ಯಸೇವನೆ ಮಾಡಿ, ಎಚ್ಚರತಪ್ಪಿದವರಾಗಿ ಮೆಲ್ಲನೆ ನೀಚಕಾರ್ಯದಲ್ಲಿ ತೊಡಗಿದ್ದರು ಅಂಥವರನ್ನೂ ನೋಡುತ್ತ ವಿದ್ವಜ್ಜನರ ರಕ್ಷಕನಾದ ಶ್ರೀರಾಮನು ಮುಂದುವರಿದನು ॥ ೫೮ ॥ ಕೆಲವೆಡೆ ಕಾಮಶಾಸ್ತ್ರವನ್ನು ಓದುವವರನ್ನೂ, ಇನ್ನು ಕೆಲವೆಡೆ ಮೋಹಿಸುವ ಮಂತ್ರವನ್ನು ಓದುವವರನ್ನೂ, ಅಲ್ಲಲ್ಲಿ ನೋಡುತ್ತ ಆ ರಾಜನು (ರಾಮನು) ಮುಂದಕ್ಕೆ ಹೋದನು ॥ ೫೯ ॥ ಅಲ್ಲಲ್ಲಿ ಕಾಮಕಲೆಯ ಎಂಬತ್ತನಾಲ್ಕು ವಿಧದ ಬಂಧಗಳನ್ನೂ, ಅರುವತ್ತನಾಲ್ಕು ವಿದ್ಯೆಗಳನ್ನೂ ಹೇಳಿಕೊಡುತ್ತಿರುವವರನ್ನು ನೋಡುತ್ತ ರಾಜನು ಮುಂದೆ ಹೋದನು ॥ ೬೦ ॥ ಅಲ್ಲಲ್ಲಿ ಪಗಡೆಯಾಡುವವರನ್ನೂ ಸ್ಪರ್ಧೆ ಕಟ್ಟಿಕೊಂಡು ಖೋಯೆಂದು ಕೂಗುವವರನ್ನೂ ಬೊಬ್ಬಿಡುವವರನ್ನೂ ನೋಡುತ್ತ ರಾಮನು ಅಲ್ಲಿಂದ ಮುಂದುವರಿದನು ॥ ೬೧ ॥ ಶ್ರೀರಾಮನು ಮುಂದೆ ಹೋಗುತ್ತ ಹೂವಿನ ಸಂತೆಗಾಗಿ ನಡೆದನು ಅಲ್ಲಿ ಕೇಳಿಬರುವ ಮಾತುಗಳು, ನೋಡುವ ನೋಟಗಳು, ನಡೆವ ಜನರು, ಚಂದ್ರನ ಬೆಳಕು, ದಿಕ್ಕುಗಳು – ಎಲ್ಲವು ಪರಿಮಳದಿಂದ ಕೂಡಿದುವೆನಿಸುತ್ತಿದ್ದವು ॥ ೬೨ ॥ ಅಲ್ಲಿ ಕಿರುಮಲ್ಲಿಗೆ, ಸಂಪಗೆ, ತಾವರೆ ಬಣ್ಣದ ಕೇದಗೆ, ಬಂದುಗೆ – ಮುಂತಾದ ಹೂಗಳನ್ನು ವರ್ಣನೆ ಮಾಡುತ್ತ, ಮಾರುವ ಹೆಂಗುಸರ ಚೆಲುವನ್ನು ನೋಡುತ್ತ ರಾಮನು ಹೋದನು ॥ ೬೩ ॥ ಕರ್ಣಾಟಪತಿಯಾದ ಶ್ರೀರಾಮನು ಕರ್ಣಿಕಾರ, ಕನ್ನೈದಿಲೆ, ಜಾಜಿ, ಬಣ್ಣದಿಂದ ಶೋಭಿಸುವ ಕೆಂಪುಕಣಗಿಲೆ – ಮುಂತಾದ ಹೂವುಗಳನ್ನು ಮಾರುವ ವಿಶಾಲಾಕ್ಷಿಯರನ್ನು ಕಂಡನು ॥ ೬೪ ॥ ಗುಣಗಳ ರತ್ನನೆನಿಸಿದ ರಾಮನು ನಾಗಸಂಪಗೆ ವಾದರಿ, ಮೆಚ್ಚುಗೆಯುನ್ನುಂಟುಮಾಡುವ ಸುರಹೊನ್ನೆ

---

[1] [ಶಾಸ್ತ್ರವ] ನೋದುವರು (ಚ) ಶಾಸ್ತ್ರಗಳ (ಗ) [2] ಕಾಣುತ್ತೈದಿದ (ಚ) [3] ಜೂದನಾಡುವರು (ಚ) [4] ನೋಡುತಲ್ಲಿರದೈದಿದನವನು (ಗ ಚ) [5] ಸಂಧಿಗಾಗಿ (ಕ) ಸಂಧೆಗಾಗಿ (ಚ) [6] ಮಲ್ಲಿಗೆಯ (ಚ) [7] ಹೊನ್ನೆಯಲರು (ಗ).

ಕಮ್ಮೆಣ್ಣೆ ಕಸ್ತೂರಿ[1] ಪುಣುಗು ಜವಾದಿಯ । ಕಮ್ಮಲರುಗಳ[2] ಪೊಟ್ಟಣವ ॥
ಸಮ್ಮದದಿಂ ಮಾಱುವರ ಕಂಡನಾ ನೃಪ । ಕಮ್ಮಗಣೆಯನ ಕನ್ನಡಿಯೋ ॥ ೬೬ ॥

ಪನಿನೀರ ಪಚ್ಚೆವಳುಕ ಚೂಡ ಪನ್ನೆಯ । ತನಿಗಂಪನೀವ ಭಾಸ್ಕರನ ॥
ಮನವೊಲ್ದು ಮಾಱುವ ಮಾನಿನಿಯರನಾ । ಜನಪತಿ ನೋಡುತ್ತೈದಿದನು ॥ ೬೭ ॥

ಚಂದ್ರಕಾಂತದ ಬಟ್ಟಲೊಳು ಚಂದನವ ತುಂಬಿ । ಚಂದ್ರಮುಖಿಯರು ಕೊಂಬವರ್ಗೆ ॥
ಸಾಂದ್ರಸಂತೋಷದಿಂ ಮಾಱುವವರ ರಾಮ । ಚಂದ್ರ ನೋಡುತ ನಡೆತಂದ ॥ ೬೮ ॥

ಕಿನ್ನರಿ ಸ್ವರಮಂಡಲ[3] ಕೂರ್ಮವೀಣೆಯು । ಸನ್ನುತ ಧನುರ್ವೀಣೆಗಳ ॥
ಮನ್ನಿಪ ಚಂದ್ರಮಂಡಲವ ಮುಟ್ಟುವರನಾ[4] । ತನ್ನರನಾಥ ನೋಡಿದನು ॥ ೬೯ ॥

ದಂಡಿಗೆವಿಡಿದಲ್ಲಲ್ಲಿ ಬತ್ತಿಸರಾ । ಗಂಗಂಡು ಕಾಕುಳಿಯೊಗದೆ[5] ।
ಕೊಂಡಾಡೆ ಜಾಣರು ಪಾಡುವ ಗಾಣರ[6] । ತಂಡವ ಕಂಡನಾ ನೃಪತಿ[7] ॥ ೭೦ ॥

ಅಲ್ಲಲ್ಲಿ ಛಂದೋಲಂಕಾರಗಳ ಕೇಳ್ವ । ರಲ್ಲಲ್ಲಿ ಮದನಶಾಸ್ತ್ರಗಳ ॥
ಅಲ್ಲಲ್ಲಿ ವಿದ್ಯಾಗೋಷ್ಠಿಗಳನು ನೋಡು । ತಲ್ಲಿಂ[8]ದೈದಿದನಬಲೇ ॥ ೭೧ ॥

ಈ ತೆಱದೊಳು ಚಂದ್ರಿಕಾವಿಹರಣ ಮಾಡಿ । ಭೂತಳಪತಿಯರಮನೆಯ ॥
ಪ್ರೀತಿಯಿಂ ಪೊಕ್ಕು ಪರಮನ ಜಾನಿಸಿ[9] ನಿ । ದ್ರಾತರುಣಿಯ ನಿಟ್ಟಿಸಿದನು[10] ॥ ೭೨ ॥

---

ಹೂವು, ನಾಗಕೇಸರ – ಇವನ್ನು ಮಾರುವ ಹೆಂಗುಸರನ್ನು ಕಂಡನು. ॥ ೬೫ ॥ ಎಲ್ಲೈ ಮನ್ಮಥನ ಕನ್ನಡಿಯಂತಿರುವ ಚೆಳಿನಿಯೇ, ಆ ರಾಮನು ಪರಿಮಳದ ತೈಲ, ಕಸ್ತೂರಿ, ಪುಣುಗು, ಜವಾದಿಗಳನ್ನೂ, ಸುವಾಸನೆಯ ಹೂವುಗಳ ಪೊಟ್ಟಣಗಳನ್ನೂ ಸಂತೋಷದಿಂದ ಮಾರುವ ಹೆಂಗುಸರನ್ನು ಕಂಡನು. ॥ ೬೬ ॥ ಪನ್ನೀರು, ಪಚ್ಚೆಕರ್ಪೂರ, ಊದ್ರಿ, ಕರ್ಪೂರ. ಸುವಾಸನೆಯ ದ್ರವ್ಯಗಳನ್ನು ಪ್ರೀತಿಯಿಂದ ಮಾರುವ ಸ್ತ್ರೀಯರನ್ನು ರಾಜನು ನೋಡುತ್ತ ಹೋದನು. ॥ ೬೭ ॥ ಚಂದ್ರಕಾಂತ ಶಿಲೆಯ ಬಟ್ಟಲಿನಲ್ಲಿ ಶ್ರೀಗಂಧವನ್ನು ತುಂಬಿಸಿಕೊಂಡು, ಚಂದ್ರನಂತಹ ಮುಖದ ಸ್ತ್ರೀಯರು ಕೊಳ್ಳುವವರಿಗೆ ಹೆಚ್ಚಾದ ಆನಂದದಿಂದ ಮಾರುವವರನ್ನು ರಾಮಚಂದ್ರನು ನೋಡುತ್ತ ಹೋದನು. ॥ ೬೮ ॥ ಕಿನ್ನರಿ, ಸ್ವರಮಂಡಲ, ಕೂರ್ಮವೀಣೆ. ಧನುರ್ವೀಣೆ. ಚಂದ್ರಮಂಡಲ – ಮುಂತಾದ ವಿವಿಧ ವಾದ್ಯಗಳನ್ನು ಬಾಜಿಸುವವರನ್ನು ಆ ರಾಜನು ನೋಡಿದನು. ॥ ೬೯ ॥ ಗಾಯಕರು ಕೈಯಲ್ಲಿ ವೀಣೆಯನ್ನು ಹಿಡಿದು, ಮೂವತ್ತೆರಡು ರಾಗಗಳನ್ನು ಇಂಪು ಒಕ್ಕು ಹೋಗದಂತೆಯೂ ಜಾಣರು ಹೊಗಳುವಂತೆಯೂ ಹಾಡುತ್ತಿರುವುದನ್ನು ಕಂಡನು. ॥ ೭೦ ॥ ಅಲ್ಲಲ್ಲಿ ಛಂದಸ್ಸು – ಅಲಂಕಾರಗಳನ್ನು ಕೇಳುತ್ತಿರುವುದನ್ನೂ. ಅಲ್ಲಲ್ಲಿ ಕಾಮಶಾಸ್ತ್ರಗಳನ್ನು ಕೇಳುತ್ತಿರುವುದನ್ನೂ, ಇನ್ನು ಕೆಲವೆಡೆ ವಿದ್ಯೆಗೆ ಸಂಬಂಧಿಸಿದ ಸಭೆಗಳು ನಡೆಯುತ್ತಿರುವುದನ್ನೂ ನೋಡುತ್ತ ಶ್ರೀರಾಮನು ಅಲ್ಲಿಂದ ತೆರಳಿದನು. ॥ ೭೧ ॥ ಹೀಗೆ ಶ್ರೀರಾಮನು ಬೆಳುದಿಂಗಳಲ್ಲಿ ಸಂಚಾರವನ್ನು ಪೂರ್ಣಗೊಳಿಸಿ ಅರಮನೆಯನ್ನು ಪ್ರೀತಿಯಿಂದ ಬಂದುಹೊಕ್ಕನು. ಆ ಮೇಲೆ ಜಿನೇಶನನ್ನು ಧ್ಯಾನಮಾಡಿ, ನಿದ್ರಿಸಿದನು ॥ ೭೨ ॥ ಆ ಇರುಳನ್ನು ಹೀಗೆ ಕಳೆಯಲು. ಬೆಳಗಾಗಲು. ರಾಮನು ಸೂರ್ಯೋದಯಕ್ಕೆ ಮೊದಲೇ ಎದ್ದು ನಿತ್ಯಕರ್ಮವನ್ನು ಮಾಡಿ,

---

[1] ಕತ್ತೂರಿ (ಚ). [2] ಕಮ್ಮನಲರ (ಗ) [3] ಸರಮಂಡಲ (ಗ ಚ.) [4] ಮೂವರನಾ (ಕ). [5] ಕಾಕುಳಿಯೊಳದೆ (ಕ) ಕಾಕುಳಿಂಯೊಳಗೆ
[6] ಗಾನರ (ಚ). [7] ತಂಡವನೋಡುತ್ತೈದಿದನು (ಚ) [8] ನೋಡುತಲ್ಲಲ್ಲಿಂ (ಗ. ಚ). [9] ಧ್ಯಾನಿಸಿ (ಕ). [10] ದಾಟಿಸಿದ (ಕ)

ಆ ರಾತ್ರಿಯುನಿಂತು ಕಳಿಯಲು ಬೆಳಗಾಗ । ಲಾ ರಾಯ ನಿತ್ಯಕರ್ಮವನು ॥
ಆ ರವಿಯುದಯದಿಂದೆದ್ದು ಧ್ಯಾನಿಸಿದನು[1] । ಮಾರವಿಜಯನಡಿದಳಿರ ॥ ೭೩ ॥

ಯುವತಿ ಮುತ್ತಿನ ತೊಡವನು ತೊಟ್ಟು ಪೊದೆದಂದು[2] । ಧವಲಾಂಬರವ ಸಂತಸದಿ ॥
ಭುವನೇಶ ಚಾವಡಿಗೈದಿ ಮಂಡಿಸಿದನು । ನವರತ್ನ ಸಿಂಹಪೀಠದೊಳು ॥ ೭೪ ॥

ಕರಗ ಕಾಳಾಂಜಿ ಕನ್ನಡಿ ಚಾಮರ ಸೀ । ಗುರಿಯು ಕುಂಚದ[3] ಪಾವುಗೆಯು ॥
ತರತರದಿಂದಾಂತು ತರಳೆಯರೆಸೆದರಾ । ನರನಾಥನೋಲಗದೊಳಗೆ ॥ ೭೫ ॥

ಮಂಡಳಿಕರ ಮಂತ್ರಿಗಳ[4] ಮಂಡಳಿಯಿಂದ । ದಂಡನಾಥರ ಕರಣಿಕರ[5] ॥
ಮಂಡಳಿಯಿಂದ ಮನೋಹರವಾದುದಾ । ಮಂಡಲೇಶ್ವರನಾಸ್ಥಾನ[6] ॥ ೭೬ ॥

ಅಳಿಯಂದಿರಿಂದಾಪ್ತರಿಂದರಮಕ್ಕಳಿಂ । ತುಳುವಪಾರಕರುಲುಹಿಂದೆ[7] ॥
ತುಳಿಲಾಳ್ಗಳ ತುತ್ತುರುಬಿಂ ಸಭೆ ಕಣ್ಗೆ । ತಳೆದುದು ಗಾಡಿಗಮಕವ[8] ॥ ೭೭ ॥

ಕವಿಗಳಿಂ ಗಮಕಿಗಳಿಂ ವಾದಿವಾಗ್ಮಿ । ನಿವಹದಿಂ ಜೋಯಿಸರಿಂದ ॥
ವಿವಿಧರಿಂ ವಿದ್ವಾಂಸರಿಂ ವಿನೋದಗಳಿಂ । ದವೆ ರಾಜಿಸಿದುದಾಸ್ಥಾನ ॥ ೭೮ ॥

ನಂಟರಿಂ ನಾಯಕರಿಂ ಮೈಗಾವಲ । ಬಂಟರಿಂ ಬಲ್ಲಿದರಿಂದ ॥
ಗಂಟುಪಡಿಯ ಗರುವರುಗಳಿಂ ಸಭೆ ಕ । ಣ್ಗೆಂಟಾಗಿ ರಾರಾಜಿಪುದು[9] ॥ ೭೯ ॥

ಶ್ಯಾನಭಾವರುಗಳಿಂ[10] ಸೇರುವೆಗಾಱರಿಂ । ಸೇನಾಧಿಪರುಗಳಿಂದ ॥
ಮಾನನಿಧಿ[11]ಗಳಿಂದ ಮನ್ನಣೆವಡೆದುದಂ । ದಾ ನರನಾಥನಾಸ್ಥಾನ ॥ ೮೦ ॥

---

ಮನ್ಮಥವಿಜಯನಾದ ಜಿನೇಶನ ಚಿಗುರಿನಂತಹ ಪಾದವನ್ನು ನೆನೆಸಿಕೊಂಡನು ॥ ೭೩ ॥ ಎಲೈ ಶ್ರೇಣಿಕನೇ, ರಾಮನು ಮೇಲೆ ಮುತ್ತಿನ ಆಭರಣವನ್ನು ತೊಟ್ಟು, ಬಿಳಿಯ ವಸ್ತ್ರವನ್ನು ಹೊದೆದು, ಸಂತೋಷದಿಂದ ಚಾವಡಿಗೆ ಬಂದು ನವರತ್ನ ಮಯವಾದ ಸಿಂಹಾಸನವನ್ನು ಅಲಂಕರಿಸಿದನು ॥ ೭೪ ॥ ಆಗ ನೀರಿನ ಗಡಿಗೆ, ಪನ್ನೀರಿನ ಬುಡ್ಡಿ, ಕನ್ನಡಿ, ಚಾಮ ಸೀಗುರಿ (ಒಂದು ಬಗೆಯ ಚಾಮರ), ಕುಂಚ, ಪಾದುಕೆ – ಮುಂತಾದುವನ್ನು ಹಿಡಿದುಕೊಂಡು ಬಂದಿರುವ ಹೆಂಗುಸರು ರಾಜ ಓಲಗದಲ್ಲಿ ಕಾಣಿಸಿದರು ॥ ೭೫ ॥ ಮಂಡಲೇಶ್ವರನಾದ ಆ ಶ್ರೀರಾಮನ ಆಸ್ಥಾನವು ಮಂಡಳಿಕರಿಂದಲೂ, ಮಂ ಮಂಡಲಗಳಿಂದಲೂ, ಸೇನಾಪತಿಗಳಿಂದಲೂ, ಕರಣಿಕ ಸಮೂಹದಿಂದಲೂ ಮನೋಹರವಾಯಿತು ॥ ೭೬ ॥ ಆ ಸಭೆಯ ಅಳಿಯಂದಿರಿಂದಲೂ, ಆಪ್ತ (ಸಭ್ಯ) ರಿಂದಲೂ ರಾಜಕುಮಾರರಿಂದಲೂ. ತುಳುವ ಪಾರಕರ ಮಾತಿನಿಂದಲೂ, ಸೇವಕರ ಗದ್ದ ದಿಂದಲೂ, ಸೊಬಗನ್ನೂ ರೀತಿಯನ್ನೂ ತಾಳಿದ್ದಿತು ॥ ೭೭ ॥ ಆ ಆಸ್ಥಾನವು ಕವಿ-ಗಮಕಿ-ವಾದಿ-ವಾಗ್ಮಿಗಳ ಸಮೂ ದಿಂದಲೂ, ಜೋಯಿಸರಿಂದಲೂ, ವಿವಿಧವಾದ ಜನರಿಂದಲೂ, ವಿದ್ವಾಂಸರಿಂದಲೂ, ವಿನೋದಶಾಲಿಗಳಿಂದಲೂ ಶೋಭಿಸಿತ ॥ ೭೮ ॥ ನಂಟರಿಂದಲೂ, ಅಂಗರಕ್ಷಕ ಸೈನಿಕರಿಂದಲೂ, ಬಲಿಷ್ಠರಿಂದಲೂ, ಗಂಟುಪಡಿಗಳನ್ನು ಕೊಡುವ ಗೌರವಶಾ ಗಳಿಂದಲೂ ಆ ಸಭೆಯು ಕಣ್ಣಿಗೆ ಸೊಗಸಾಗಿ ತೋರುವುದು ॥ ೭೯ ॥ ಆ ರಾಜನ ಆಸ್ಥಾನವು ಶಾನಭಾಗರಿಂದಲ

---

[1] ವಂದಿಸಿದನು (ಗ ಚ) [2] ಪೊದೆದ (ಗ ಚ) [3] ಸೀಗುರಿ ಕುಂಚ ಚವರ (ಕ) [4] ಮನ್ನೆಯ (ಗ) ಮನ್ನೆಯರ (ಚ) [5] ಮಂತ್ರಿಗ (ಗ. ಚ) [6] ಮಂಡಲಪತಿಯಾಸ್ಥಾನ (ಚ). [7] ಪಾಲಕರುಲು ಪಿಂದೆ (ಗ) ಪಾಲಕರುಲುಪ್ಪುಗಳಿಂ (ಚ) [8] ಕಡುಸೊಬಗಾಂತು (ಚ [9] ರಾರಾಜಿಸಿತು (ಚ). [10] ಸೇನಬೋವರುಗಳಿಂ (ಗ ಚ) [11] ಮೋನನಿಧಿ (ಕ)

ಪಱುಮೆಗುರುಳ ಕೋಕಿಲನಿಭವಾಣಿಯ । ಸೆಱೆವೆಱೆವೊಗದಂಚೆಗತಿಯ ॥
ತುಱುಗೆವೆಗಣ್ಣಕಾಂತಿಯ ಕಾಂತೆಯರು ಕಿ । ಕ್ಕಿಱಿದಿರಲೆಸೆದುದಾಸ್ಥಾನ[1] ॥ ೮೧ ॥

ನಿಱಿಯ ಗೊಂಡೆಯುಡ ದೂವಟದ ಸೀರೆಯ[2] ತೋರ । ದುಱುಬಿನ ತೊಂಡೆವಾಯ್ದೆಱೆಯ ॥
ಪೆಱೆಯ ನೊಸಲ ವಾರನಾರಿಯರಿಂ ಸಭೆ । ಮೆಱೆದುದು ಕಡುಸೊಬಗಾಂತು ॥ ೮೨ ॥

ಹುಲ್ಲೆಗಂಗಳ ಹುಸಿನಡುವಿನ ನವಚೂತ । ಪಲ್ಲವಾಧರದೆಳೆನಗೆಯ ॥
ಮೆಲ್ಲಡಿಗಳ ಸರ್ವವಲ್ಲಭೆಯರು ಸಭೆ । ಯಲ್ಲಿಹರಾ[3]ನೃಪವರನ ॥ ೮೩ ॥

ಉಡಿದಾರವುಂಗುರ ತೋಳ್ವಳೆ ಲುಳಿಕೈಯ । ಕಡಗಕಂಕಣ ಸೂಡಗದ[4] ॥
ನಡುವಿನ ಚಿಂತಾಕುಗಳ ವಿಲಾಸಿನಿಯರ । ಗಡಣವೆಸೆದುದೋಲಗದೊಳು ॥ ೮೪ ॥

ಇಂದ್ರಗೋಪದ ಬರಹದ ಹೊಂಬಣ್ಣದ । ಚಂದ್ರಗಾವಿಯ ದೂವಟದ ॥
ಇಂದ್ರಾಣಿಯ ಸೀರೆಯನುಟ್ಟು ಮೆಱೆದರು । ಚಂದ್ರಮುಖಿಯರೋಲಗದೊಳು ॥ ೮೫ ॥

ಕಚಕೆ ತಳಿದ ಕತ್ತುರಿಗಂಪಿಂ ನವ । ಕುಚದ ಕರ್ದಮದ ಕಂಪಿಂದ ॥
ವಚನದಿಂ ಬರ್ಪ ಕಪ್ಪುರಗಂಪಿಂ ಪೆಣ್ಣ । ನಿಚಯವೆಸೆದುದಂದಲ್ಲಿ ॥ ೮೬ ॥

ಪಾಡುವರಿಂ ಪಂಥಮಾಡುವರಿಂ ಕೊಂ । ಡಾಡುವರಿಂ ಕೋವಿದರಿಂ ॥
ಪಾಡುಮಾಡುವರಿಂ ಪರಿಹಾಸಕರಿಂದ[5] । ನಾಡೆ ರಂಜಿಸಿದುದಾಸ್ಥಾನ ॥ ೮೭ ॥

---

ಸಭಾಜನರಿಂದಲೂ. ಸೇನಾಪತಿಗಳಿಂದಲೂ, ಮರ್ಯಾದೆಯುಳ್ಳವರಿಂದಲೂ ಮನ್ನಣೆಗೆ ಆಸ್ಪದವಾಗಿದ್ದಿತು. ॥ ೮೦ ॥ ಆ ಆಸ್ಥಾನ ದಲ್ಲಿ ತುಂಬಿಯಂತಹ ಕೂದಲಿನ, ಕೋಗಿಲೆಯಂತೆ ಇಂಪಾದ ಧ್ವನಿಯುಳ್ಳ ಮಾತಿನ, ಚಂದ್ರನಂತಹ ಮುಖದ, ಹಂಸೆ ಯಂತಹ ನಡಿಗೆಯ, ನಿಬಿಡವಾದ ಅಕ್ಷಿರೋಮಗಳಿಂದ ಶೋಭಿಸುವ ಕಣ್ಣಿನ ಕಾಂತಿಯ, ಕಾಂತೆಯರು ತುಂಬಿದ್ದರು. ॥ ೮೧ ॥ ನಿರಿಯಗೊಂಡೆಯನ್ನುಳ್ಳ ದೂಪಟ್ಟದ ಸೀರೆಯುಳ್ಳ. ದೊಡ್ಡದಾದ ತುರುಬಿನಿಂದ ಕೂಡಿದ, ತೊಂಡೆಯಂತಹ ತುಟಿಯುಳ್ಳ. ಚಂದ್ರನಂತಹ ಹಣೆಯುಳ್ಳ ವೇಶ್ಯಾಸ್ತ್ರೀಯರಿಂದ ಆ ಸಭೆಯು ಸೊಗಸಾಗಿತ್ತು. ॥ ೮೨ ॥ ಆ ರಾಜನ ಸಭೆಯಲ್ಲಿರುವ ಸೂಳೆಯರು ಜಿಂಕೆಗಣ್ಣಿನವರು, ತೆಳುವಾದ ಹೊಟ್ಟೆಯವರು, ಹೊಸ ಮಾವಿನ ಚಿಗುರಿನಂತಹ ಕೆಳದುಟಿ ಯವರು, ಮುಗುಳುನಗೆಯುಳ್ಳವರು ಮೃದುವಾದ ಪಾದವುಳ್ಳವರು, ॥ ೮೩ ॥ ಸೊಂಟಪಟ್ಟಿ, ಉಂಗುರ, ತೋಳಬಳೆ, ಲುಳಿ, ಕೈಕಡಗ, ಕಂಕಣ. ಸೂಡಗ. ನಡುವಿನ ಚಿಂತಾಕು—ಮುಂತಾದ ಆಭರಣಗಳನ್ನು ಧರಿಸಿದ ಸುಂದರಸ್ತ್ರೀಯರು ಆ ಓಲಗದಲ್ಲಿದ್ದರು ॥ ೮೪ ॥ ಚಂದ್ರನನ್ನು ಹೋಲುವ ಮುಖದ ಸುಂದರಿಯರು ಇಂದ್ರಗೋಪದ (ಕೆಂಬುಳುವಿನ) ಬರಹ ವುಳ್ಳ. ಚಿನ್ನದ ಬಣ್ಣವುಳ್ಳ. ಚಂದ್ರಗಾವಿಯ ದುಪ್ಪಟವನ್ನೂ ಇಂದ್ರಾಣಿಯ ಸೀರೆಯನ್ನೂ ಉಟ್ಟುಕೊಂಡು, ಆ ರಾಜ ಸಭೆಯಲ್ಲಿ ಮೆರೆಯುತ್ತಿದ್ದರು ॥ ೮೫ ॥ ತಲೆಗೂದಲಿಗೆ ಸಿಂಪಿಸಿದ ಕಸ್ತೂರಿಯ ಪರಿಮಳದಿಂದಲೂ. ಮೊಲೆಗೆ ತೊಡೆ ದಿರುವ ಹೊಸ ಅನುಲೇಪದ ಸುವಾಸನೆಯಿಂದಲೂ. ಮಾತಾಡುತ್ತಿರುವಾಗ ಸೂಸುವ ಕರ್ಪೂರ ಸೌರಭದಿಂದಲೂ ಕೂಡಿದ ಸ್ತ್ರೀಯರ ಹಿಂಡವು ಅಲ್ಲಿ ಶೋಭಿಸಿತು ॥ ೮೬ ॥ ಆ ಆಸ್ಥಾನವು ಹಾಡುವವರಿಂದಲೂ. ಪಂಥಮಾಡುವವರಿಂದಲೂ ಹೊಗಳುವವರಿಂದಲೂ, ವಿದ್ವಾಂಸರಿಂದಲೂ ಹಾಡು ನಿರ್ಮಿಸುವವರಿಂದಲೂ ಹಾಸ್ಯಗಾರರಿಂದಲೂ. ಶೋಭಿಸಿತು. ॥ ೮೭ ॥

---

[1] ೮೧ನೇ ಪದ್ಯ ಗ ದಲ್ಲಿಲ್ಲ [2] ಸಿರದ (ಕ ಗ). [3] ಸಭೆಯುಲ್ಲಿಯರಾ (ಗ). [4] ಸೂಡವಾಗ (ಗ) [5] × (ಗ).

ನಟ್ಟುವರಿಂ ನಾನಾ ವಾದ್ಯದವರಿಂದ[1] । ಜಟ್ಟಿಗಳಿಂ ಚಾಣರಿಂದ ॥
ಕಟ್ಟಿಗೆಯವರುಲುಹಿಂದವನೋಲಗ । ದಿಟ್ಟಿಗೆ ಸೊಗಸೀವುತಿಹುದು ॥ ೮೮ ॥

ಪಂಚಮಹಾವಾದ್ಯಂಗಳ ಕೈವಾಯ । ಸಂಚಿಂದ ತೋಱಿ ಮೋಹಿಸುವ ॥
ಸಂಚಲಾಕ್ಷಿ[2]ಯರಿಂದವನೋಲಗವದ[3] । ದೇಂ ಚದುರತೆಯ ಪಡೆದುದೋ ॥ ೮೯ ॥

ಹೊಱಬಾಗಿಲೊಳಗಿರ್ದವರ ಪೆಸರನು ರಾಯ । ಗಱುಪೆ[4]ಕರೆಸಿ ಕಾಣಿಸುವ[5] ॥
ತಱಿಸಂದು ಕಳುಹಿಸಿ ಕೊಡುವ ಚರರುಗಳಿಂ । ಮೆಱೆದುದೋಲಗ ಗಾಡಿವೆತ್ತು[6] ॥ ೯೦ ॥

ಪರಮನ್ನೆಯರುಗಳಟ್ಟಿದ ಪಾವುಡಗಳ । ಥರಥರವಿಡಿದು[7] ಕಾಣಿಸುವ ॥
ಚರರಿಂದ ಚಾಟುನುಡಿಯ ಜನರಿಂದದು । ಕರವೆಸೆದುದು ಕಮಲಾಕ್ಷಿ ॥ ೯೧ ॥

ಇಂತತಿ ವೈಭವದೊಳಗೋಲಗಗೊಟ್ಟು । ಸಂತಸದೊಳಗಿರುತಿರಲು ॥
ಅಂತರಿಸದೆ ವನಪಾಲ ಬಂದುದ ಭೂ । ಕಾಂತನಿಗೋರ್ವನೊರೆದನು ॥ ೯೨ ॥

ಕರೆಸಲು ಬಂದು ಕಂಡರಸನ ಚರಣವ । ಧರಣಿಗೆ ಬೀಳುತೇಳುತವೆ ॥
ಕರವ ಮುಗಿದು ನಿಂದು ಕಡುಭೀತಿಯೊಳು ತಂ । ದರಲ ಪೊಟ್ಟಣನಿತ್ತನಾಗ[8] ॥ ೯೩ ॥

ಕಂಜವ ಕಲ್ಹಾರವ ಚೆಂಗಣಗಿಲ । ಕೆಂಜಾಜಿಯ ಕೇತಕಿಯ ॥
ರಂಜಿಪ ಚಂಪಕಗಳನಿತ್ತನವ ಸುರ । ಕುಂಜರಗಮನೆ ರಾಯನಿಗೆ ॥ ೯೪ ॥

---

ನಾಟ್ಯಕಾರರಿಂದಲೂ, ಹಲವಾರು ವಾದ್ಯಕಾರರಿಂದಲೂ, ಮಲ್ಲರಿಂದಲೂ, ಚಾಣರಿಂದಲೂ, ನಿಯಮನಿಯಾಮಕರ ಧ್ವನಿಯಿಂದಲೂ ಅವನ ರಾಜಸಭೆಯು ಕಣ್ಣಿಗೆ ಚೆಲುವಾಗಿ ತೋರುತ್ತಿತ್ತು ॥ ೮೮ ॥ ಕೊಂಬು, ತಂಬಟೆ, ಶಂಖ, ಭೇರಿ, ಜಾಗಟೆ – ಮುಂತಾದ ಪಂಚಮಹಾ ವಾದ್ಯಗಳನ್ನು ತಮ್ಮ ಕೈಬಾಯಿಗಳ ಸೂಚನಗಳಿಂದ ತೋರಿಸಿ ಮೋಹಗೊಳಿಸತಕ್ಕ ಚೆಲುವೆಯರಿಂದ ಅವನ ರಾಜಸಭೆಯು ಏನೊಂದು ಚಾತುರ್ಯಯುಕ್ತವಾಗಿ ಕಾಣಿಸಿತೋ ! ॥ ೮೯ ॥ ಹೊರ ಬಾಗಿಲ ಕಡೆಗೆ ಬಂದವರ ಹೆಸರನ್ನು ರಾಜನಿಗೆ ತಿಳಿಸಿ, ಅವರನ್ನು ಒಳಗೆ ಕರೆತಂದು, ರಾಜನಿಗೆ ಕಾಣಿಸಿ, ಆ ಮೇಲೆ ಪುನಃ ಕಳುಹಿಸಿಕೊಡುವ ದೂತರಿಂದ ಆ ರಾಜಸಭೆ ಸೊಗಸಾಗಿತ್ತು ॥ ೯೦ ॥ ಎಲೈ ಚೆಲುವೆ, ಅಲ್ಲಿ ಪರಕೀಯ ಜನನಾಯಕರು ಕಳುಹಿಸಿಕೊಟ್ಟ ಉಡುಗೊರೆಗಳನ್ನು ಕ್ರಮವಾಗಿ ರಾಜನಿಗೆ ಕಾಣಿಸುವ ಚಾರಕರಿದ್ದರು ಹೊಗಳು ಮಾತುಗಳನ್ನಾಡುವವರೂ ಇದ್ದರು ಇವರಿಂದ ಸಭೆಯು ಚೆನ್ನಾಗಿ ಶೋಭಿಸಿತು ॥ ೯೧ ॥ ಈ ರೀತಿಯಾಗಿ ರಾಮನು ವೈಭವದಿಂದ ಓಲಗವನ್ನು ಕೊಟ್ಟು ಸಂತೋಷದಿಂದ ಇರುತ್ತಿರಲು, ವನಪಾಲಕನು ಬಂದ ವಾರ್ತೆಯನ್ನು ಒಬ್ಬನು ಬಂದು ತಿಳಿಸಿದನು ॥ ೯೨ ॥ ರಾಜನು ಅವನನ್ನು ಕರೆಸಿದನು. ಆಗ ಆ ವನಪಾಲನು ಬಂದು ರಾಜನ ಪಾದವನ್ನು ಕಂಡೊಡನೆ ಸಾಷ್ಟಾಂಗ ವಂದಿಸಿ, ಕೈಮುಗಿದು ನಿಂತು, ಬಹಳ ಭಯದಿಂದ ಕೂಡಿದವನಾಗಿ, ಒಂದು ಹೂವಿನ ಪೊಟ್ಟಣವನ್ನು ಅರ್ಪಿಸಿದನು ॥ ೯೩ ॥ ಎಲೈ ಚೆಲುವೆ, ಆ ವನಪಾಲನು ರಾಜನಿಗೆ ತಾವರೆ, ನೈದಿಲೆ, ಕೆಂಪುಕಣಗಿಲೆ, ಕೆಂಪುಜಾಜಿ, ಕೇದಗೆ, ಸಂಪಗೆ ಹೂಗಳನ್ನು ಕಾಣಿಕೆಗೊಟ್ಟನು ॥ ೯೪ ॥ ಆ ವನಪಾಲನು ಮಲ್ಲಿಗೆ ಹೂ, ಮಾವಿನ ಚಿಗುರು, ಮಂದಾರ

---

[1] × (ಗ) [2] ಚಂಚಲಾಕ್ಷಿ (ಗ). [3] ನೋಲಗವ (ಕ ಗ) [4] ರಾಯಗಱುಪಿ (ಚ) [5] ಕಾಣಿಸುತ (ಗ) [6] ಗಾಡಿವಟ್ಟು (ಗ)
[7] ತರತರವಿಡಿದು (ಗ) [8] ಪೊಟ್ಟಣವಿತ್ತನವನು (ಗ. ಚ ).

ಮಲ್ಲಿಗೆಯರಲ ಮಾಂದಳಿರ ಮಂದಾರವ । ಮೊಲ್ಲೆಯೀ[1] ಮೊದಲಾದವನು ॥
ನಿಲ್ಲದೆ ನೃಪಗಿತ್ತು ಪೇಳಿದನವ ಸವಿ । ವಿಲ್ಲ ಬಂದನು ಬನಕೆಂದು ॥ ೯೫ ॥

ಸುಳಿದುದು ಬಂದು ತಂಬೆಲರು ತಾವರೆಗೊಳ । ತಿಳಿದುದು ಮಾಧವಿ ಪೂವ ॥
ತಳಿದುದುಳಿದ ತರು ತಳಿರಾದುದಂಗಜ । ತಳುವದೈದಿದ ನಮ್ಮ ವನವ[2] ॥ ೯೬ ॥

ಪಂಕಜ ಕಳೆಯೇಱಿದವು ವಲ್ಲಿಲತೆಗಳು । ವಂಕುರಿಸಿತು[3] ತರುನಿಚಯು ॥
ಶಂಕೆಯು ಬಿಟ್ಟು[4] ಕೋರಕಿತವಾದವು ಮಕ । ರಾಂಕ ಬರಲು ನಮ್ಮ ವನಕೆ[5] ॥ ೯೭ ॥

ಬಿಟ್ಟುದು ಮೌನವ್ರತವ ಕೋಗಿಲೆ ಮನ । ಮುಟ್ಟ ಕೂಗಿದುದಾ ಸೋಗೆ ॥
ಬಿಟ್ಟುದು ಮಾಗಿ ಮಾಧವ ಮನಸಿಜ ಬಂದು । ಬಿಟ್ಟ ಬೀಡನು ಬನದೊಳಗೆ[6] ॥ ೯೮ ॥

ಕೊಲ್ಲದ ಕೊಲೆಯ ಕೊಲಿಸುತ ವಿರಹಿಗಳ । ನೊಲ್ಲೆ ಪೆಣ್ಗಳನೆಂಬವರ ॥
ಬಿಲ್ಲಿಂದ ಬಡಿದು ಬಗ್ಗಿಸಿ ಭಂಗಿಸುತ ಸವಿ । ವಿಲ್ಲ ಬಂದನು ನಮ್ಮ ವನಕೆ[7] ॥ ೯೯ ॥

ಮೂಱುಲೋಕದೊಳುಳ್ಳ ದೇವಮಾನವರನು । ನೀಱೆಯರಿಂ ಕಂಗೆಡಿಸುತ ॥
ಗಾಱುಮಾಡುತ ಕಾವನೆಂದೆಂಬ ಬಿಲ್ವಿ । ಲ್ಗಾಱನೈದಿದ ನಮ್ಮ ವನವ ॥ ೧೦೦ ॥

ಮಾಮರನೆಂಬ ಮಹಾಮಂತ್ರಿ ತಳಿರೆಂಬ । ಚಾಮರ ಸೇನಾಧಿಪನು ॥
ಆ ಮಂದಮಾರುತನಾಗಲೆಸೆದನಂದು । ಕಾಮರಾಜನು ಬನದೊಳಗೆ ॥ ೧೦೧ ॥

ಅಳಿಗಳ ಪೌಜಿಂದಂಚೆಯ ಪೌಜಿಂದ । ಗಿಳಿಗಳ ಬಲು ಪೌಜಿಂದ ॥
ಕೊಳರ್ವಕ್ಕಿ ಕೋಗಿಲೆಗಳ ಪೌಜಿಂ ಕಾವ । ತಳೆದನೋಲಗವ ಬನದೊಳು ॥ ೧೦೨ ॥

---

ಹೂವು ಮೊಲ್ಲೆ ಹೂ – ಮೊದಲಾದವನ್ನು ಒಡನೆಯೇ ರಾಜನಿಗೆ ಕಾಣಿಕೆ ಕೊಟ್ಟು ಮನ್ಮಥನು ಉದ್ಯಾನಕ್ಕೆ ಆಗಮಿಸಿರುವನೆಂದು ಹೇಳಿದನು. ॥ ೯೫ ॥ ಅವನು ಮತ್ತೆ ಹೀಗೆಂದನು – ಎಲೈ ರಾಜನೇ, ಮನ್ಮಥನು ನಮ್ಮ ವನಕ್ಕೆ ಬಂದುದರಿಂದ ತಂಗಾಳಿ ಬಂದು ಸುತ್ತಾಡುತ್ತಿದೆ; ತಾವರೆಗೊಳವು ಸ್ವಚ್ಛವಾಗಿದೆ; ದುಂಡುಮಲ್ಲಿಗೆ ಹೂಗಳು ಕಾಣಿಸುತ್ತಿವೆ; ಇತರ ಮರಗಳೆಲ್ಲ ಚಿಗುರಿವೆ ॥ ೯೬ ॥ ಆ ಮನ್ಮಥನು ನಮ್ಮ ಉದ್ಯಾನಕ್ಕೆ ಬರಲು ತಾವರೆಗೆ ಶೋಭೆ ಹೆಚ್ಚಾಗಿದೆ; ಮಲ್ಲಿಗೆ ಬಳ್ಳಿಗಳು ಚಿಗುರಿವೆ; ವೃಕ್ಷಸಮೂಹವು ಮೊಗ್ಗೆಗಳಿಂದ ತುಂಬಿದೆ. ॥ ೯೭ ॥ ಕೋಗಿಲೆಯು ತನ್ನ ಮೌನವ್ರತವನ್ನು ಬಿಟ್ಟಿದೆ; ನವಿಲು ಮನಮುಟ್ಟುವಂತೆ ಕೇಗತೊಡಗಿದೆ; ಚಳಿಯು ಬಿಟ್ಟುಹೋಗಿದೆ. ವಸಂತವು ಬಂದಿದೆ ಮನ್ಮಥನು ಉದ್ಯಾನವಲ್ಲಿ ಬೀಡುಬಿಟ್ಟಿದ್ದಾನೆ. ॥ ೯೮ ॥ ಕಬ್ಬುಬಿಲ್ಲಿನವನಾದ ಮನ್ಮಥನು ಅಗಲಿದ ಪ್ರಣಯಿಗಳನ್ನು ಕೊಲ್ಲದಿರುವ ಕೊಲೆಗೆ ಗುರಿಪಡಿಸುತ್ತಲೂ, ಸ್ತ್ರೀಯರನ್ನು ಒಲ್ಲೆನೆಂಬವರನ್ನು ಬಿಲ್ಲಿನಿಂದ ಬಡಿದು ಬಗ್ಗಿಸಿ ಅಪಮಾನಪಡಿಸುತ್ತಲೂ ನಮ್ಮ ಉದ್ಯಾನಕ್ಕೆ ಬಂದಿದ್ದಾನೆ. ॥ ೯೯ ॥ ಸುಂದರಿಯರ ಮೂಲಕವಾಗಿ ಮೂರುಲೋಕದ ದೇವತೆಗಳನ್ನೂ ಮನುಷ್ಯರನ್ನೂ ಕಂಗೆಡಿಸುತ್ತಲೂ. ಶೋಷಣೆ ಮಾಡುತ್ತಲೂ ಮನ್ಮಥನೆಂಬ ಮಹಾ ಧನುರ್ಧಾರಿಯು ನಮ್ಮ ವನಕ್ಕೆ ಬಂದಿದ್ದಾನೆ. ॥ ೧೦೦ ॥ ಮಾವಿನ ಮರವೆಂಬ ಮಹಾ ಮಂತ್ರಿಯಿಂದಲೂ. ಚಿಗುರೆಂಬ ಚಾಮರದಿಂದಲೂ. ಮೆಲುಗಾಳಿಯೆಂಬ ಸೇನಾಪತಿಯಿಂದಲೂ ಮನ್ಮಥನೆಂಬ ರಾಜನು ಉದ್ಯಾನದಲ್ಲಿ ಶೋಭಿಸಿದನು. ॥ ೧೦೧ ॥ ಮನ್ಮಥನು ಉದ್ಯಾನದಲ್ಲಿ ತುಂಬಿಗಳ ಸೈನ್ಯದಿಂದಲೂ,

---

[1] ಮೊಲ್ಲೆಯು (ಚ) [2] ದೈದಲು ವನದೊಳಗೆ (ಗ) [3] ವಲ್ಲೀಲತೆಯು ಕುರಿಸಿತು (ಚ) [4] ಶಂಕೆಯನಳಿಸಿ (ಕ) [5] ವನಕಾಗಿ (ಚ).
[6] ಮಾಧವ ಒಂದು ಬೀಡನು । ಬಿಟ್ಟನಂಗಜ ವನದೊಳಗೆ (ಗ ಚ). [7] ಸವಿವಿಲ್ಲನೈದಿದ ನಮ್ಮ ವನವ (ಗ ಚ).

ಎಂದು ನುಡಿದ ವನಪಾಲಗೆ ರಾಯನಿಂ । ತೆಂದನು ನಾವು ನಂದನಕೆ ॥
ಬಂದಪರೆಂದು ನಿನ್ನೊಡೆಯಗಱಿಪು ಪೋ । ಗೆಂದೆನೆ ಪೋದನಂದವನು ॥ ೧೦೩ ॥

ಬಳಿಕೋಲಗದಿಂದೆದ್ದೊಯ್ಯನರಮನೆ । ಯೊಳಪೊಕ್ಕು ಸ್ನಾನಭೋಜನವ ॥
ತಳುವದೆ ಮಾಡಿ ವನಕೆ ಸತಿಯರುಗೂಡಿ[1] । ಯಿಳೆಯಾಣ್ಮ ತೆರಳಿದನಬಲೆ ॥ ೧೦೪ ॥

ಅವನ ಸಂಗಡ ಸೀತಾದೇವಿಯರಂ । ದವಳ ಸಂಗಡವಾಳಿಯರು ॥
ಯುವತೇರು ಪರಿಪುರಜನ ಭೇರಿರವಗೇಳಿ । ತವಕದಿಂ ಪೊರಟರಬ್ಜಾಕ್ಷಿ[2] ॥ ೧೦೫ ॥

ರತ್ನದ ಪಲ್ಲಕ್ಕಿಯ ಮೇಲಂದು[3] ಪ್ರ । ಯತ್ನದಿಂದಾ ಭೂವರನ[4] ।
ಪತ್ನಿ ತೆರಳೆ ತೆರಳಿದರಂಗನೆಯರಂದು । ಪತ್ನಿ ಲಾಲಿಸು ವನಕಾಗಿ ॥ ೧೦೬ ॥

ಸರ್ವಸನ್ನಹದಿಂದ ಸಕಲ ದ್ರವ್ಯವ ಮನಃ । ಪೂರ್ವಕದಿಂದಾಂತು ವನಕೆ ॥
ಉರ್ವೀಶನ ಸತಿಯೊಡನೆ ತೆರಳಿದರು । ಕರ್ವುವಿಲ್ಲನ ಪಡೆಯಂತೆ ॥ ೧೦೭ ॥

ತಳಿರಡಿಗಳ ತಾವರೆಮೊಗ್ಗೆಮೊಲೆಗಳ । ಕಳಹಂಸಗತಿಯ ಕೈರವದ ॥
ತೊಳಪ ಕಂಗಳ[5] ತಳೋದರಿಯರು ತಳುವದಾ । ನಳಿನಾಕ್ಷಿಯೊಡನೈದಿದರು ॥ ೧೦೮ ॥

ಪಿಕನಿನದದ ಪಿಂಡುದುಂಬಿಗುರುಳ ನವ । ಚಕಿತ ಚಕೋರೇಕ್ಷಣದ ॥
ಸುಕ[6]ನುಡಿಗಳ ಸುದತಿಯರೈದಿದರಾ । ಸುಕುಮಾರಿಯೊಡನೆಡೆವಿಡದೆ ॥ ೧೦೯ ॥

---

ಹಂಸೆ-ಗಿಳಿ-ಜೊತೆಪಕ್ಕಿ-ಕೋಗಿಲೆಗಳ ಸೈನ್ಯದಿಂದಲೂ ಕೂಡಿ ಸಭೆ ನಡೆಸುತ್ತಿರುವನು ॥ ೧೦೨ ॥ ಹೀಗೆ ವನಪಾಲಕನು ಹೇಳಲು ಶ್ರೀರಾಮನು ಹೀಗೆ ಹೇಳಿದನು "ನಾವು ಉದ್ಯಾನಕ್ಕೆ ಬರುತ್ತೇವೆಂಬುದನ್ನು ನಿನ್ನ ಒಡೆಯನಿಗೆ ತಿಳಿಸು, ಹೋಗು' ಹೀಗೆನ್ನಲು ಅವನು ತೆರಳಿದನು. ॥ ೧೦೩ ॥ ಎಲೈ ಚೆಳಿನಿಯೇ ಆ ಮೇಲೆ ರಾಮನು ಸಭೆಯಿಂದೆದ್ದು, ಮೆಲ್ಲನೆ ಅರಮನೆಯ ಒಳಗೆ ಹೋದನು ಅಲ್ಲಿ ತಡವಿಲ್ಲದ ಸ್ನಾನ ಊಟಗಳನ್ನು ಮಾಡಿ, ಹೆಂಗುಸರನ್ನು ಕೂಡಿಕೊಂಡು ಉದ್ಯಾನಕ್ಕೆ ತೆರಳಿದನು ॥ ೧೦೪ ॥ ಶ್ರೀರಾಮನ ಸಂಗಡವೇ ಸೀತಾದೇವಿಯವರೂ ಆಕೆಯ ಸಂಗಡ ಗೆಳತಿಯರೂ, ಪರಿಜನ ಪುರಜನರಾದ ಹೆಂಗುಸರೂ. ಪ್ರಸ್ಥಾನಭೇರಿಯ ಧ್ವನಿಯನ್ನು ಕೇಳಿ ಹೊರಟರು ॥ ೧೦೫ ॥ ಎಲೈ ಮಡದಿ ಚೆಳಿನಿಯೇ, ರಾಜಪತ್ನಿಯಾದ ಸೀತೆ ರತ್ನದ ಪಲ್ಲಕ್ಕಿಯ ಮೇಲೆ ಕುಳಿತು ತೆರಳಲು ಆಕೆಯೊಡನೆ ಇತರ ಸ್ತ್ರೀಯರೂ ಉದ್ಯಾನಕ್ಕೆ ತೆರಳಿದರು ॥ ೧೦೬ ॥ ಆ ಸ್ತ್ರೀಯರು ಎಲ್ಲಾ ಸಿದ್ಧತೆಗಳಿಂದ ಕೂಡಿ, ಎಲ್ಲಾ ಉಪಯುಕ್ತ ವಸ್ತುಗಳನ್ನೂ ಮನದ ಮೆಚ್ಚಿನಿಂದ ತೆಗೆದುಕೊಂಡು, ರಾಜಪತ್ನಿಯಾದ ಸೀತೆಯೊಡನೆ ವನಕ್ಕೆ ತೆರಳಿದರು ಆಗ ಅವರು ಕಾಮಚಕ್ರೇಶನ ಸೈನ್ಯದಂತೆ ಕಾಣುತ್ತಿದ್ದರು ॥ ೧೦೭ ॥ ಆ ಸೀತೆಯೊಡನೆ ಚಿಗುರಿನಂತಹ ಪಾದವುಳ್ಳ, ತಾವರೆ ಮುಗುಳಿನಂತಹ ಮೊಲೆಗಳುಳ್ಳ, ಹಂಸದಂತಹ ನಡಿಗೆಯುಳ್ಳ, ನೈದಿಲೆಯಂತಹ ಕಣ್ಣಿನ, ತೆಳುವಸಿರಿನ ಹೆಂಗುಸರು ತಡವಿಲ್ಲದೆ ತೆರಳಿದರು ॥ ೧೦೮ ॥ ಕೋಗಿಲೆಯಂತಹ ಸ್ವರದ, ತುಂಬಿಹಿಂಡಿನಂತಿರುವ ತಲೆಗೂದಲಿನ ಹೆದರಿದ ಚಕೋರ ಪಕ್ಷಿಗಳಂತಹ ಕಣ್ಣಿನ ಗಿಳಿಯಂತಹ ಮಾತುಗಳ ಹೆಂಗುಸರು ಸೀತೆಯೊಡನೆ ಒತ್ತೊತ್ತಾಗಿ ನಡೆದರು ॥ ೧೦೯ ॥ ನುಣ್ಣಗಾದ ಬುಗರಿ ಕಾಯಂತೆ ಚೆಲುವಾದ ಮೊಲೆಗಳ, ತೊಂಡೆಹಣ್ಣಿನಂತಹ ತುಟಿಯ, ಮೃದು ಚರಣದ ತಣ್ಣಗಾದ ಮಳಲದಿನ್ನೆಯಂತಹ ನಿತಂಬದ ಹೆಂಗುಸರ

---

[1] ವನ ಕ್ರೀಡೆಗೆಂದಾ (ಗ ಚ) [2] ಸಂಗಡ ಕೆಳದಿಯರ ॥ ನಿವಹ ತೆರಳಿದವ ನೀವಣ್ಣಿಸುವೆನು । ತವಕದಿಂ ತರಳಾಯತಾಕ್ಷಿ (ಗ ಚ)
[3] ರತ್ನವಿಚಿತ್ರದ ದಾಪುಗೆ ಮೆಟ್ಟಿ ನಡೆದು (ಕ) [4] ಭೂವರನು (ಕ) [5] ತಳಿಪದಂಗಳ (ಗ) [6] ಶುಕ (ಕ ಗ)

ನುಣ್ಬೊಗರಿಯ ಚೆಲ್ವಿನ ಕುಚಗಳ ತೊಂಡೆ । ವಣ್ಬಾಯಿದೆಱೆಯ ಮೆಲ್ಲಡಿಯ ॥
ತಣ್ಬೆಳಿನದ ತಾಣದಂತಪ್ಪ ಪೊಱವಾಱ । ಪೆಣ್ಬಲವೈದಿದುದಾಗ ॥ ೧೧೦ ॥

ಕೊರ್ವಿದ ಕುಚದ ಕೋಕನವದನದ ನಿಡು । ವುರ್ವಿನ ಹುಸಿಯ ನಡುವಿನ ॥
ಪರ್ವಿದ ಬಾಸೆಯ ಪದ್ಮಗಂಧದ ಪೆಣ್ಣ । ಪೆರ್ವಲವೈದಿದುದಾಗ ॥ ೧೧೧ ॥

ಸೋಗೆಗಂಗಳ ಸೊಂಪುವೆತ್ತೆಳಲತೆಮೈಯ । ಕೋಗಿಲೆನುಡಿ[1] ಸೋಮಗತಿಯ ॥
ಬೀಗಿ ಬೆಳೆದ ಪೊಱವಾಱ ಪೆಣ್ಗಳ ತಂಡ । ಸಾಗಿ ಬಂದುದು ಸೀತೆಯೊಡನೆ ॥ ೧೧೨ ॥

ಅಂಗನೆ ಕೇಳು ಬಹುತರವಿನಿಯೋ । ಗಂಗಳ[2] ಗಾಡಿಕಾತಿಯರು ॥
ಸಿಂಗರವಾಂತು ತೆರಳಿದರು ಸೀತೆಯ । ಸಂಗಡ ಪದ್ವನಕಾಗಿ ॥ ೧೧೩ ॥

ಹೊಕ್ಕು ವನವ ಕೇತಕಿವೇಲಿಯನಂದು । ಹಿಕ್ಕಿ ತಿಱಿದು ಪೂಗಳನು ॥
ಚಕ್ಕನೆ ಸೀತೆಗೆ ಕೈಗಾಣಿಕೆಯನಂ । ದಿಕ್ಕಿ ಕಂಡರು ಕಾಂತೆಯರು[3] ॥ ೧೧೪ ॥

ಆ ನಂದನ ತನ್ನ ಸಿರಿ ಚೆಲ್ವ ಸೊಬಗಿಗಂ । ದಾ ನಾಕದ ನಂದನವ ॥
ತಾನದ ಚುನ್ನವಾಡುವುದೆಂದೆನೆಯದ । ನೇನ ಬಣ್ಣಿಪೆನಂಬುಜಾಕ್ಷಿ ॥ ೧೧೫ ॥

ದಾಡಿಮ ದ್ರಾಕ್ಷೆ ಖರ್ಜೂರ ಮಾವು ಮೊದಲಾದ । ಗಾಡಿಯ ಜಂಬು ಜಂಬೀರ ॥
ಕೋಡುಬೇರುಗಳೊಳು ಫಲವೆತ್ತ ಪಲಸನಾ । ನಾಡೆಱೆಯನು ಕಂಡನಲ್ಲಿ ॥ ೧೧೬ ॥

ಬಾಳೆಲೆ[4]ಬಾವನ್ನ ಬಕುಳ ಬಂದುಗೆ ಮುಡಿ । ವಾಳ ತಮಾಳ ಭೂತಾಳ ॥
ತಾಳವೃಕ್ಷವನರೆ[5]ನೆಲ್ಲಿಯ ಕರ್ಪೂರ । ವಾಳೆಯನವ ಕಂಡನಲ್ಲಿ ॥ ೧೧೭ ॥

---

ತಂಡವು ಆಗ ತೆರಳಿತು. ॥ ೧೧೦ ॥ ಕೊಬ್ಬಿದ ಮೊಲೆ, ತಾವರೆಯಂತಹ ಮುಖ, ನೀಳವಾದ ಹುಬ್ಬು, ತೆಳ್ಳಗಾದ ನಡು, ಹರಡಿದ ಉದರರೋಮ, ತಾವರೆಯ ಪರಿಮಳ – ಇವುಗಳಿಂದ ಕೂಡಿದ ಹೆಂಗುಸರ ದೊಡ್ಡ ಸೇನೆಯು ತೆರಳಿತು ॥ ೧೧೧ ॥ ನವಿಲನ್ನು ಹೋಲುವ ಕಣ್ಣು, ಸೊಗಸಾದ ಎಳೆಬಳ್ಳಿಯಂತಹ ದೇಹ, ಕೋಗಿಲೆಯಂತಹ ಮಾತು, ಚಂದ್ರನಂತಿರುವ ನಡಿಗೆ, ಉಬ್ಬಿ ಬಳೆದಿರುವ ನಿತಂಬ – ಇವುಗಳಿಂದ ಕೂಡಿದ ಸ್ತ್ರೀ ಸಮೂಹವು ಸೀತೆಯೊಡನೆ ಬಂದಿತು. ॥ ೧೧೨ ॥ ಎಲೈ ಚೇಳಿನಿಯೆ ಕೇಳು. ಬಹುವಿಧವಾದ ಕೆಲಸಗಳಿಗೆ ನಿಯುಕ್ತರಾದ ಸೊಬಗುಗಾರ್ತಿಯರು ಶೃಂಗಾರಮಾಡಿಕೊಂಡು ಸೀತೆಯೊಡನೆ ಆ ಉದ್ಯಾನಕ್ಕೆ ತೆರಳಿದರು. ॥ ೧೧೩ ॥ ಆ ಹೆಂಗುಸರು ಹೀಗೆ ಉದ್ಯಾನವನ್ನು ಪ್ರವೇಶಿಸಿ ಕೇದಗೆ ಬೇಲಿಯಲ್ಲಿ ಹೂಗಳನ್ನು ಆಯ್ದು ಕೊಯ್ದು, ತಂದು ಸೀತೆಗೆ ಕೈಕಾಣಿಕೆಯಾಗಿ ಕೊಟ್ಟು ಸಂದರ್ಶಿಸಿದರು. ॥ ೧೧೪ ॥ ಆ ಪುರೋದ್ಯಾನವು ತನ್ನ ಸಿರಿ ಸೊಬಗುಗಳಿಂದ ದೇವಲೋಕದ ನಂದನೋದ್ಯಾನವನ್ನು ಹೀನೈಸುವುದು ಹೀಗಿರುವಾಗ ಎಲೈ ಚೇಳಿನಿಯೇ, ನಾನು ಅದನ್ನು ಹೇಗೆ ವರ್ಣಿಸಲಿ ! ॥ ೧೧೫ ॥ ಶ್ರೀರಾಮನು ಆ ಉದ್ಯಾನದಲ್ಲಿ ದಾಳಿಂಬ, ದ್ರಾಕ್ಷೆ, ಖರ್ಜೂರ, ಮಾವು ಮೊದಲಾದುವುಗಳ ಸೊಬಗನ್ನಲ್ಲದೆ ಜಂಬುನೇರಿಳೆ, ನಿಂಬೆ ಮೊದಲಾದವನ್ನೂ ಕೊಂಬೆಗಳಿಂದ ಬೇರುಗಳ ವರೆಗೆ ಫಲವನ್ನು ಹೊತ್ತಿರುವ ಹಲಸಿನ ಮರಗಳನ್ನೂ ಕಂಡನು ॥ ೧೧೬ ॥ ಬಾಳೆಲೆ, ಶ್ರೀಗಂಧ, ಬಕುಳ, ಬಂದುಗೆ ಮುಡಿವಾಳ, ತಮಾಳ, ಭೂತಾಳೆ, ತಾಳೆಮರ, ಅರನೆಲ್ಲಿ, ಕರ್ಪೂರಬಾಳೆ – ಮುಂತಾದುವನ್ನು ಅವನು ಅಲ್ಲಿ ಕಂಡನು. ॥ ೧೧೭ ॥ ಎಲೆಬಳ್ಳಿ, ತೆಂಗು, ಅಡಕೆಮರ, ದೊಡ್ಡ ಏಲಕ್ಕಿ, ಸಂತೋಷವನ್ನುಂಟುಮಾಡುವ ಸಂಪಗೆ, ಪಾದರಿ—ಮುಂತಾ

---

[1] ಸೋಗೆಮುಡಿಯ (ಚ) [2] ಬಹತ್ತರವಿಸೆಯೋಗಂಗಳ (ಕ. ಚ.) [3] ಕೇಳವರು (ಕ) [4] × (ಗ ಚ) [5] ನೆರೆ (ಗ)

ನಾಗವಲ್ಲಿಗಳಿಂ ನಾಳಿಕೇರಗಳಿಂ । ಪೂಗವೇಲಾಲತೆಯಿಂದ ॥
ರಾಗಿಪ ಚಂಪಕ ಪಾಟಲಿಯಿಂ ವನ । ರಾಗವನಿತ್ತುದಾ ನೃಪಗೆ ॥ ೧೧೮ ॥

ನೋಡು ಮೃಗೇಕ್ಷಣೆ ಚಕ್ರವಾಕವ ನೀ । ನೋಡು ಲತಾಂಗಿ ವಲ್ಲರಿಯ ॥
ನೋಡೆಳದಳಿರ ನೀ ನೋಡೆಂದವಳೊಳ । ಗಾಡುತ್ತೈದಿದನಲ್ಲಿ ಭೂಪ[1] ॥ ೧೧೯ ॥

ಇಂತುಪ[2]ವನವನೀಕ್ಷಿಸುತ್ತೈತರೆಯಲ್ಲಿ[3] । ಕಾಂತೆವೆರಸುಸಿರಪಾಣಿ[4] ॥
ಮುಂತೆಸೆದುದು ಕಾಸಾರ ಮಂಜುಳದಿಂದೆ[5] । ಕಾಂತೆ ಕಂತುವಿನ ಲತಾಂಗಿ ॥ ೧೨೦ ॥

ಬಣ್ಣದಾವರೆಗಳಿಂ ಚೆನ್ನೈದಿಲುಗಳಿಂ । ಚಿಣ್ಣಂಚೆಯ[6] ಸಂದಣಿಯಿಂ ॥
ಹೆಣ್ಣುದುಂಬಿಗಳಿಂ ಕೊಳರ್ವಕ್ಕಿಯಿಂ ಕೊಳ । ಕಣ್ಣಿಗೆ ರಾರಾಜಿಸಿತು ॥ ೧೨೧ ॥

ಕೋಕನ ಕೋಕನನಿಚಯಗಳಿಂ ನವ[7] । ಕೋಕಕದಂಬಕದಿಂದೆ ॥
ಶ್ರೀಕರದಿಂದ[8] ಶ್ರೀಕರವಾದುದಿರದಂ । ದಾ ಕೊಳ ಕೋಕಿಲಾಲಾಪೆ ॥ ೧೨೨ ॥

ದಿವಸದಂದದೆ ದಿವಿಯಂತೆ ಪ್ರಭಾತದ । ದಿವಸಾಧೀಶ್ವರನಂತೆ ॥
ದಿವಿಜಾಗ್ರನಂತೆ[9] ದಿವಸಂಚಯದಂತೆ[10] । ತವೆ ಕಣ್ಗೆ ಕೊಳ ರಾಜಿಸಿತು ॥ ೧೨೩ ॥

ಮಧುನಿಚಯಗಳಿಂ ಮಧುಜಾಲದಿಂ ನವ । ಮಧುವಿಂದೆ ಮಧುಕರದಿಂದೆ ॥
ಮಧುನಿಸ್ವನದಿಂದೆ[11] ತವೆ ಮೆಱೆದುದು ನವ । ಮಧುರಾಳಾಪೆ ಕಾಸಾರ ॥ ೧೨೪ ॥

ಇಂತು ಮೆರೆವ ಕಾಸಾರಕ್ಕೆ ಭೂಮಿೀ । ಕಾಂತ ಕಾಂತಾಜನಗೂಡಿ ॥
ಕಂತು ಜಲಕ್ರೀಡೆಗೈದುವಂತೈದಿದ । ನಂತ ವೈಭವದೊಡಗೂಡಿ[12] ॥ ೧೨೫ ॥

---

ಮವನ್ನು ಅವನು ಅಲ್ಲಿ ಕಂಡನು ॥ ೧೧೮ ॥ ರಾಜನಾದ ರಾಮನು ಸೀತೆಯೊಡನೆ, ಎಲೈ ಜಿಂಕೆಗಣ್ಣಿನವಳೇ, ಚಕ್ರವಾಕಗಳನ್ನು ನೋಡು, ಲತಾಂಗಿಯೆ, ಬಳ್ಳಿಗಳನ್ನು ನೋಡು, ಎಳತಾದ ಚಿಗುರನ್ನು ನೋಡು—ಎಂದು ಅವಳೊಡನೆ ಹೇಳುತ್ತ ಮುಂದುವರಿದನು. ॥ ೧೧೯ ॥ ಎಲೈ ಚೇಳಿನಿಯೇ, ಶ್ರೀರಾಮನು ಹೀಗೆ ಸೀತೆಯೊಡಗೂಡಿ ಉದ್ಯಾನವನ್ನು ನೋಡುತ್ತ ಬರಲು, ಮುಂದೆ ತುಂತುರು ಹನಿಗಳಿಂದ ಕೂಡಿದ ಸರೋವರವು ಮನೋಹರವಾಗಿ ಕಾಣಿಸಿತು ॥ ೧೨೦ ॥ ಆ ಸರೋವರವು ಬಣ್ಣದ ತಾವರೆ ಹೂಗಳಿಂದಲೂ, ಕೆಂಪು ನೈದಿಲೆಗಳಿಂದಲೂ, ಹಂಸೆಯ ಮರಿಗಳ ಸಮೂಹದಿಂದಲೂ, ಹೆಣ್ಣುತುಂಬಿಗಳಿಂದಲೂ, ಚಕ್ರವಾಕ ಪಕ್ಷಿಗಳಿಂದಲೂ ಕಣ್ಣಿಗೆ ಶೋಭಾಯಮಾನವಾಗಿತ್ತು ॥ ೧೨೧ ॥ ಎಲೈ ಕೋಗಿಲೆಯಂತಹ ಮಾತುಳ್ಳ ಚೇಳಿನಿಯೇ ಆ ಸರೋವರವು ತಾವರೆ ಹೂಗಳ ಸಮೂಹದಿಂದಲೂ, ಹೊಸ ಚಕ್ರವಾಕಗಳ ಸಮೂಹದಿಂದಲೂ, ತುಂತುರುಹನಿಗಳಿಂದಲೂ ಶೋಭಿಸುತ್ತಿತ್ತು ॥ ೧೨೨ ॥ ಆ ಕೊಳವು ಹಗಲಂತೆಯೂ, ಸ್ವರ್ಗಲೋಕದಂತೆಯೂ, ಬಾಲಸೂರ್ಯನಂತೆಯೂ ದೇವೇಂದ್ರನಂತೆಯೂ. ಆಕಾಶದ ನೇರಿಕೆಯಂತೆಯೂ ಶೋಭಿಸಿತು. ॥ ೧೨೩ ॥ ಆ ಸರೋವರವು ಮಧುವಿನ ಸಮೂಹದಿಂದಲೂ ಅಶೋಕ ವೃಕ್ಷಗಳ ಸಮೂಹದಿಂದಲೂ, ಹೊಸ ವಸಂತಮಾಸದಿಂದಲೂ, ತುಂಬಿಗಳಿಂದಲೂ, ಇಂಪಾದ ಸ್ವರದಿಂದಲೂ ಶೋಭಿಸಿತು ॥ ೧೨೪ ॥ ರಾಜನಾದ ಶ್ರೀರಾಮನು ಸ್ತ್ರೀಯರನ್ನು ಕೂಡಿಕೊಂಡು ಹೀಗೆ

---

[1] ತೈದಿದನು ಭೂಪಾಲ (ಒ) [2] ಇಂತಪ್ಪ (ಗ) [3] ವನವ ನಿರೀಕ್ಷಿಸುತ್ತೈತರೆ (ಜ) [4] ಸೀರಪಾಣಿ (ಗ) ಶಿರಪಾಣಿ (ಚ)
[5] ಮುಂಜುಳದಿಂದೆ (ಗ ಚ) [6] ಚಿಣ್ಣದುಂಬಿಯ (ಕ ಗ) [7] ವನ (ಜ) [8] ಶ್ರೀಕರದಿಂದ (ಜ) [9] ದಿವಿಜಾಗ್ರಜನಂತೆ (ಗ).
[10] ದಿವಿಸಂಚಯದಂತೆ (ಕ) [11] ನಿಸ್ವನದಂತೆ (ಕ) [12] ವೈಭವದ ಮೇಳದಲಿ (ಚ)

ಕೊಳನನಿಳಿದು ನಿಂದಲ್ಲಲ್ಲಿ ರಾಜಿಸು । ವೆಳೆವೆಣ್ಗಳಾಸ್ಯವೆಸೆದುದು ॥
ನಳಿನಾಕರವೆಂಬಾಗಸದೊಳಗು । ಜ್ವಳಿಸುವ ಚಂದ್ರಗಳಂತೆ[1] ॥ ೧೨೬ ॥

ತರುಣಿಯರುರುಗಳೊಗ್ಗಾಗಿ[2] ನಲಿದು ಭೂ । ವರನ ಮೇಲಂಬುವ ಸೂಸೆ[3]
ಅರಸ ನಲಿದು[4] ಮುಗುಳ್ದಂಗನೆಯರ ಮೇ । ಲಿರದೆ ಸೂಸಿದನು[5] ವಾರಿಯನು ॥ ೧೨೭ ॥

ಅರಸನ ಮೇಲೆ ವಾರಿಯ ಸೂಸಲಂದೋರ್ವ । ತರಳಾಕ್ಷಿ ಪಿಡಿದ ಪಳುಕಿನ ॥
ಕರಗವೆಸೆದುದು ಶೋಣಾಂಬುಜದೊಳಗಣ[6] । ವರಹಂಸನೆಂಬಂದದೊಳು[7] ॥ ೧೨೮ ॥

ಮಡದಿಯೋರ್ವಳು ಪೊಂಗೊಡದೊಳಂಬುವ ತುಂಬಿ । ದೊಡನೆ[8] ರಾಜಿಸಿದುದೆಂತೆನಲು ॥
ಪಡಿಯೆಂದೆ ಗಡ ನಮ್ಮ ಕುಚಕೆಂದದ ತಂದು । ಹುಡುಕು ನೀರನು ಮೆಟ್ಟುವಂತೆ[9] ॥ ೧೨೯ ॥

ತರುಣಿಯೋರ್ವಳ ನಿಬಿಡಸ್ತನಗಳ ಮೇ । ಲರಸ ಚೆಲ್ಲಲು ನಿಂದ ನೀರು ॥
ಕರವೆಸೆದುದು ಕಮಲಾಕ್ಷಿ ಪೆಣ್ಗಳು ಪಯೋ । ಧರೆಯರೆಂಬುದ ಸೂಚಿಪಂತೆ ॥ ೧೩೦ ॥

ಇಳೆಯಾಣ್ಮನ ಕರದಿಂದೋರ್ವ ತರುಣಿ ಪೊಂ । ಗಳಸವ ತೆಗದಿಡೆ ಕೊಳಕೆ ॥
ತಳುವದೊಪ್ಪಿದುದಸ್ತಾದ್ರಿಯಿಂ ಸಾಗರ । ದೊಳಗೆ ಬೀಳುವ ಸೂರ್ಯನಂತೆ ॥ ೧೩೧ ॥

ತರುಣಿ[10]ಯೋರ್ವಳ ಮೇಲೆ ಜೀರ್ಕೊಳವಿಯೊಳಂ । ದರಸ[11] ಕುಂಕುಮಜಲವಿಡಲು ॥
ಕರವೆಸೆದಿತ್ತಂಗಲತೆ[12] ಕೆಂಜಾಜಿಯೊ । ಳ್ಪರಲ[13] ಧರಿಸಿ ರಾಜಿಪಂತೆ ॥ ೧೩೨ ॥

---

ಶೋಭಿಸುವ ಸರೋವರಕ್ಕೆ ವೈಭವದಿಂದ ಬಂದನು. ಅವನ ಬರವು ಮನ್ಮಥನು ಜಲಕೇಳಿಗೆ ಬರುವಂತೆ ಕಾಣಿಸಿತು. ॥ ೧೨೫ ॥ ಆ ಸ್ತ್ರೀಯರು ಸರೋವರಕ್ಕೆ ಇಳಿದು ನಿಂತುಕೊಂಡಾಗ ಅಲ್ಲಲ್ಲಿ ಶೋಭಿಸುವ ಆ ಎಳೆಯ ಹೆಂಗುಸರ ಮುಖಗಳು, ಆ ಸರೋವರವೆಂಬ ಆಕಾಶದಲ್ಲಿ ಹೊಳೆಯುವ ಚಂದ್ರಮಂಡಲಗಳಂತ ಕಾಣಿಸಿದವು. ॥ ೧೨೬ ॥ ಆ ಮೇಲೆ ಆ ಸ್ತ್ರೀಯರೆಲ್ಲರೂ ಒಟ್ಟಾಗಿ ಸಂತೋಷದಿಂದ ರಾಜನ ಮೇಲೆ ನೀರನ್ನು ಸೇಚಿಸಲು, ರಾಜನೂ ತಿರುಗಿ ಆ ಹೆಂಗುಸರ ಮೇಲಿಗೆ ನೀರನ್ನೆರಚಿದನು. ॥ ೧೨೭ ॥ ಒಬ್ಬಳು ರಾಜನ ಮೇಲೆ ನೀರನ್ನು ಚೆಲ್ಲುವುದಕ್ಕಾಗಿ ಹಿಡಿದ ಚಂದ್ರಕಾಂತದ ಗಡಿಗೆಯು ಕೆಂದಾವರೆಯೊಳಗಿರುವ ಶ್ರೇಷ್ಠವಾದ ಹಂಸದಂತೆ ಶೋಭಿಸಿತು. ॥ ೧೨೮ ॥ ಒಬ್ಬಳು ಹೆಂಗುಸು ಚಿನ್ನದ ಕೊಡದಲ್ಲಿ ನೀರನ್ನು ತುಂಬಲು, ಅದು ತಮ್ಮ ಸ್ತನಕ್ಕೆ ಸಮಾನವೆನಿಸುವುದೆಂದು ಕೋಪಗೊಂಡು ಅದನ್ನು ಕುದಿನೀರಲ್ಲಿ ಅದ್ದುವಂತೆ ಕಾಣಿಸಿತು. ॥ ೧೨೯ ॥ ಎಲೈ ಚೇಳಿನಿಯೇ, ಓರ್ವ ತರುಣಿಯ ಒತ್ತೊತ್ತಾದ ಮೊಲೆಗಳ ಮೇಲೆ ರಾಜನು ನೀರನ್ನು ಚೆಲ್ಲಲು, ಆಗ ಅಲ್ಲಿ ನಿಂತ ನೀರು ಹೆಂಗುಸರು ಪಯೋಧರೆಯರು (ಪಯ=ಹಾಲು; ನೀರು) ಎಂದು ಸೂಚಿಸುವಂತೆ ತೋರಿತು ॥ ೧೩೦ ॥ ಒಬ್ಬಳು ರಾಜನ ಕೈಯಲ್ಲಿದ್ದ ಚಿನ್ನದ ಕೊಡವನ್ನು ಸೆಳೆದು, ನೀರಿಗೆ ಇಕ್ಕಿದಳು. ಆಗ ಆ ಕೊಡವು ಅಸ್ತಮಾನದ ಬೆಟ್ಟದಿಂದ ಸಮುದ್ರಕ್ಕೆ ಬೀಳುವ ಸೂರ್ಯನಂತೆ ಕಾಣಿಸಿತು. ॥ ೧೩೧ ॥ ಅರಸನು ಪಿಚಕಾರಿಯಿಂದ ಒಬ್ಬಳ ಮೇಲಿಗೆ ಕುಂಕುಮದ ನೀರನ್ನು ಎರಚಿದನು. ಆಗ ದೇಹವೆಂಬ ಬಳ್ಳಿಯು ಕೆಂಪು ಜಾಜಿಯ ಹೂವನ್ನು ಧರಿಸಿದಂತೆ ಸೊಗಸಾಗಿ ತೋರಿತು. ॥ ೧೩೨ ॥ ರಾಜನು ಆ ಸ್ತ್ರೀಯರ ಮೇಲಿಗೆ ಕಸ್ತೂರಿಯ ನೀರನ್ನು ಸೇಚಿಸಿದನು. ಆಗ ಆ

---

[1] ಜ್ವಳಿಸುವಭ್ರುಗಳಂತೆ (ಗ) [2] ಒಳಗಾಗಿ (ಕ) [3] ಸುರಿಯೆ (ಗ ಚ) [4] ಅರಸಸೂಲಿದು (ಗ ಚ) [5] ಸುರಿದನು (ಚ)
[6] ದೊಳಗಿರ್ಪ (ಗ. ಚ) [7] ಹಂಸೆಯೆಂಬಂದದೊಳು (ಗ) [8] ತುಂಬಲೊಡನೆ (ಗ ಚ) [9] ಹುಡುಕುವಂದದೊಳಾಡುವಂತೆ (ಕ).
[10] ತರುಳಿ (ಗ) [11] ಜೀರ್ಕೊಳವೆಯೊಳಂ (ಗ ಚ). [12] ಕರವೆಸೆದಂಗಲತೆಗೆ (ಗ) ಕರವೆಸೆದತ್ತಂಗಲತೆ (ಚ) [13] ಜಾಜಿಯೊಳರಲ (ಗ ಚ).

ಕತ್ತುರಿಜಲವನರಸ ವಧುಗಳ ಮೇ । ಲೊತ್ತಲೆಸೆದುದಾ ಕ್ಷಣದೆ ॥
ಮತ್ತೆ ವರುಣ ಹರಿನೀಲದಿಂ ಸಮೆದ ಪೆ । ಣ್ಪುತ್ತಳಿಗಳೊ ಎಂಬಂತೆ ॥ ೧೩೩ ॥

ಚಂದನಜಲವ ನೃಪತಿ ನಲಿವುತಲಂ । ದಿಂದುಮುಖಿಯರ ಮೇಲೆಸಲು ॥
ಇಂದೂಪಲದಿಂ[1]ದೊಗೆದ ಪೆಣ್ಪುತ್ತಳಿ । ಯಂದವಡೆದು ರಾಜಿಸಿದುದು ॥ ೧೩೪ ॥

ಇಂತು ಜಲಕ್ರೀಡೆಯನುಳಿದಾ ಭೂ । ಕಾಂತ ತಡಿಗೆಯ್ತರಲು ॥
ಪಿಂತೆ ಬಳಲ್ಮುಡಿ ನನೆದಂಗದ[2] ನೃಪ । ಕಾಂತೆಯರೈದಿದರಾಗ ॥ ೧೩೫ ॥

ಸೋಗೆವಿಂಡಿಳಿದು ನೀರೀಂಟಿ ಕೊಳನ ಪತ್ತಿ । ರಾಗದಿಂ ನಲಿವುತ ತಡಿಗೆ ॥
ಸಾಗುವಂದದೆ ಬಿಡುಮುಡಿಯ ಪೆಣ್ಗಳ ತಂಡ । ಸಾಗಿ ನಡೆದುದೊಗ್ಗಿನಲಿ ॥ ೧೩೬ ॥

ಮುಡಿ ಮಡಕಿಳಿದಿರೆ ನಿಂದೋರ್ವ ಕೋಮಲೆ । ಬಿಡದೊಪ್ಪಿದಳು ಕಾಂಚನದ ॥
ನಿಡುಬೊಂಬೆ[3] ನೀಲದ ಕಂಬವ ನೆಮ್ಮಿದ । ಬೆಡಗಿನಂತರಸನ ಮುಂದೆ ॥ ೧೩೭ ॥

ಉಟ್ಟು ದುಗುಲವ ಚಂದನವಿಟ್ಟು ತೊಡಿಗೆಯ । ತೊಟ್ಟು ಬಿಟ್ಟಿರ್ದ[4] ಮುಡಿಗಳ ॥
ಕಟ್ಟಿ ಕಾಂತೆಯರು ಸಿಂಗರಿಸಿದ ರೊಯ್ಯನೆ[5] । ದಿಟ್ಟಿಗೆ ಸೊಗಸೀವಂತೆ ॥ ೧೩೮ ॥

ಲಲನೆ ಕೇಳಾ ಸೀತಾದೇವಿ ತನ್ನೆಡ । ಬಲದೊಳಗಿರ್ದಾಳಿಯರನು ॥
ಅಲರ ತಿಱಿದುಕೊಂಡು ಬರಲೆಂದಟ್ಟಲು । ನಲಿವುತ್ತೈದಿದರಾ ಕ್ಷಣದೊಳು ॥ ೧೩೯ ॥

ಬಿಡದೋರ್ವಳು ಬಂದು ಪರುಶನ[6]ದಿಂದಂದು । ಕಡುಪ್ರೀತಿಯೊಳು[7] ಪ್ರಿಯಂಗುವನು ॥
ತಡೆಯದೆ ಪುಳಕವೇಳಿಸಿ ಪೂವ ಕೊಯ್ದಳು । ಮಡದಿ ಕೇಳಾರಾಮದೊಳು ॥ ೧೪೦ ॥

---

ಸ್ತ್ರೀಯರು ವರುಣನಿಂದ ನಿರ್ಮಿತವಾದ ಹೆಣ್ಣುಗೊಂಬೆಗಳಂತೆ ಕಾಣಿಸಿದರು. ॥ ೧೩೩ ॥ ರಾಜನು ಶ್ರೀಗಂಧದ ನೀರನ್ನು ಆನಂದದಿಂದ ಆ ಸುಂದರಿಯರ ಮೈಮೇಲೆ ಚೆಲ್ಲಿದನು ಆಗ ಅವರು ಚಂದ್ರಕಾಂತ ಶಿಲೆಯಿಂದ ಮಾಡಿದ ಹೆಣ್ಣುಗೊಂಬೆಗಳಂತೆ ಕಾಣಿಸಿದರು ॥ ೧೩೪ ॥ ಹೀಗೆ ನೀರಾಟವನ್ನಾಡಿ ಶ್ರೀರಾಮನು ಸರೋವರದ ದಡಕ್ಕೆ ಹತ್ತಿಬಂದನು ಆಗ ಆ ರಾಜವನಿತೆಯರು ಜೋತಾಡುವ ಕೂದಲಿನಿಂದಲೂ ಒದ್ದೆಯಾದ ದೇಹದಿಂದಲೂ. ಕೂಡಿದವರಾಗಿ ಹಿಂದಿನಿಂದಲೇ ಬಂದರು. ॥ ೧೩೫ ॥ ನವಿಲಿನ ಹಿಂಡು ಕೊಳದಲ್ಲಿ ನೀರುಕುಡಿದು ಸಂತೋಷದಿಂದ ನಲಿದು, ಹತ್ತಿಕೊಂಡು ಬರುವ ರೀತಿಯಲ್ಲಿ ಆ ಬಿಟ್ಟ ಕೂದಲಿನ ಹೆಂಗುಸರ ತಂಡವು ಒಟ್ಟಾಗಿ ನಾಗಿ ಬಂದಿತು ॥ ೧೩೬ ॥ ಅರಸನ ಮುಂದುಗಡೆ ಓರ್ವಳು ಹೆಂಗುಸು ತನ್ನ ಹಿಮ್ಮಡಿ ತನಕ ನೀಡಿರುವ ಕೂದಲುಳ್ಳವಳಾಗಿ ನಿಂತಿದ್ದಳು. ಆಗ ಆಕೆಯು ಕಪ್ಪಾದ ಕಂಬವನ್ನು ಆಶ್ರಯಿಸಿ ನಿಂತ ಒಂದು ಚಿನ್ನದ ಗೊಂಬೆಯಂತೆ ಸೊಗಯಿಸಿದಳು ॥ ೧೩೭ ॥ ಆ ಹೆಂಗುಸರು ಪಟ್ಟೆಸೀರೆಯನ್ನುಟ್ಟರು ಗಂಧದ ಅನುಲೇಪವನ್ನು ಮಾಡಿ ಆಪರಣಗಳನ್ನು ತೊಟ್ಟರು ಬಿಟ್ಟ ತರೆಗೂದಲನ್ನು ಕಟ್ಟಿ ಮೆಲ್ಲನೆ ಶೃಂಗಾರಮಾಡಿದರು ಆಗ ಅವರು ಕಣ್ಣಿಗೆ ಸೊಗಸಾಗಿ ತೋರಿದರು ॥ ೧೩೮ ॥ ಎಲೈ ಜೇಳಿನಿಯೇ ಕೇಳು ಆ ಸೀತಾದೇವಿಯು ತನ್ನ ಎಡಬಲಗಳಲ್ಲಿದ್ದ ಗೆಳತಿಯರನ್ನು ಹೂಕೊಯ್ದು ತರುವುದಕ್ಕಾಗಿ ಕಳುಹಿಸಲು, ಅವರು ಒಡನೆ ಸಂತೋಷದಿಂದ ತೆರಳಿದರು ॥ ೧೩೯ ॥ ಅವರಲ್ಲಿ ಒಬ್ಬಳು ಸ್ಪರ್ಶದಿಂದ ಸಂತೋಷ ತಾಳಿದವಳಾಗಿ, ರೋಮಾಂಚನ ತಾಳಿ ಆ ಉದ್ಯಾನದಲ್ಲಿ ಪ್ರಿಯಂಗುವಿನ

---

[1] ಇಂದುತ್ಪಲದಿಂ (ಗ) ಇಂದೂತ್ಪಲದಿಂ (ಚ) [2] ನನೆದೈದಿದ (ಕ) [3] ಗೊಂಬೆ (ಚ) [4] ತೊಟ್ಟಿರ್ದರಂದು (ಗ). [5] ಸಿಂಗರಿಸಿತು ನೃಪತಿಯ (ಗ ಚ) [6] ಪರುಷನ (ಗ) ಪರಾಶನ (ಚ) [7] ಪ್ರೀತಿಯಿಂ (ಚ)

ಚಕಿತ ಚಕೋರೇಕ್ಷಣೆ[1]ಯೋರ್ವಳು ಪೋಗಿ । ಬಕುಳದಡಿಯೊಳಾಗ ನಿಂದು ॥
ಪ್ರಕಟಸಿ ಗಂಡೂಷವ ಮಾಡಿಯುವಜಲ್ಲಿ[2] । ವಿಕಸಿತದರಲನೆತ್ತಿದಳು ॥ ೧೪೧ ॥

ಸುದತಿ ಕೇಳಾರಾಮದೊಳಗೋರ್ವಳು ಮೃದು । ಪದತಳದಿಂದಶುಗೆಯನು ॥
ಒದೆಯಲೊಡನೆ ತಳಿರಾದುದೆಂದೆನೆ ಪೆ । ಣ್ಗಿದೆಗೆಡದವರುಗಳುಂಟೆ ॥ ೧೪೨ ॥

ಮತ್ತೋರ್ವ ಮದಿರಾಂಬಕಿ[3] ತಿಲಕಾಂಘ್ರಿಪ । ದೊತ್ತಿಲಿ ನಿಂದು ನಿಟ್ಟಿಸಲು ॥
ಪೆತ್ತುದು ಪೂವನೆಂದೆನೆ ಪೆಣ್ಗಳ ನಗೆ[4] । ವೆತ್ತ ಕಣ್ಗಾರು ಸೋಲದರು ॥ ೧೪೩ ॥

ಅಂಗನೆಯೋರ್ವಳು ಕುರವಕತರುವನಾ । ಲಿಂಗನದಿಂ ತುಷ್ಟಿಬಡಿಸಿ[5] ॥
ಹಿಂಗದೊಳ್ಪರಲೆತ್ತಿದಳು[6] ಪೆಣ್ಗಳ ಸವಿ । ಸಂಗಕ್ಕೆ ಸೋಲದರಾರು ॥ ೧೪೪ ॥

ಮಂದಗಮನೆ ಮಂದಾರ ಸುರಭಿ ಗಂಧಿ । ಮಂದಾರದಗ್ರಭಾಗದಲಿ ॥
ನಿಂದು ನಿಟ್ಟಿಸಿ ನುಡಿದರಲ ತಿಱಿದಳಾ । ನಂದದಿಂದಾರಾಮದೊಳಗೆ ॥ ೧೪೫ ॥

ಹರಗಲ್ಲ ನಿಮ್ಮ ಗಂಧವನುಂಡರಲುಣಿ । ಮರಣವ ಪಡೆದಪವೆಂದು[7] ॥
ಪರಿಹಾಸದಿಂದ ನಗುತ ಚಂಪಕದೊ । ಳ್ಪರಲನೆತ್ತಿದಳೊರ್ವ ಕಾಂತೆ ॥ ೧೪೬ ॥

ಕಂದರ್ಪಗೊಂದನೆಯಂಬು ನೀನೇತಱ[8] । ದೆಂದು ವಕ್ರಿಸಿಯಾಡುತ್ತ ॥
ಬಂದು[9] ಮಾಮರನನಲರಿಸಿ ತಳಿರನೋರ್ವ । ಮಂದಗಮನೆ ಕೊಯ್ದಳಾಗ ॥ ೧೪೭ ॥

---

ಹೂವನ್ನು ಕೊಯ್ದಳು. ॥ ೧೪೦ ॥ ಬೆದರಿದ ಚಕೋರಪಕ್ಷಿಯಂತಹ ಕಣ್ಣಿನವಳೋರ್ವಳು ಹೋಗಿ ಒಂದು ಬಕುಳ ಮರದ ಅಡಿಯಲ್ಲಿ ನಿಂತು ಅದರ ಮೇಲಕ್ಕೆ ಉಗುಳಿ, ಅದರಲ್ಲಿ ಅರಳಿದ ಹೂಗಳನ್ನುಂಟುಮಾಡಿ, ತಿರಿದು ತಂದಳು. ॥ ೧೪೧ ॥ ಎಲೈ ಚೇಳನಿಯೇ ಕೇಳು. ಆ ಉಪವನದಲ್ಲಿ ಇನ್ನೊಬ್ಬಳು ತನ್ನ ಕೋಮಲವಾದ ಪಾದದಿಂದ ಅಶೋಕ ವೃಕ್ಷವನ್ನು ಒದೆದಳು. ಆ ಕ್ಷಣದಲ್ಲೇ ಅದರಲ್ಲಿ ಚಿಗುರುಗಳು ಕಾಣಿಸಿದುವು ಹೀಗಿರುವ ಹೆಂಗುಸಿನ ವರ್ತನೆಯಿಂದ ಎದೆಗೆಟ್ಟುಹೋಗದವರು ಇರುವರೆ? ॥ ೧೪೨ ॥ ಮದಿರೆಯ ಅಮಲುಗಣ್ಣಿನ ಇನ್ನೊಬ್ಬಳು ಒಂದು ತಿಲಕವೃಕ್ಷದ ಸಮೀಪಕ್ಕೆ ಬಂದು ದೃಷ್ಟಿಹಾಯಿಸಲು ಆ ಮರದಲ್ಲಿ ಹೂವುಗಳಾದವು. ಹೀಗಿರುವಾಗ ಸ್ತ್ರೀಯರ ನಗೆಗಣ್ಣಿಗೆ ಸೋಲದೆ ಇರುವವರು ಯಾರು? ॥ ೧೪೩ ॥ ಒಬ್ಬಳು ತರುಣಿಯು ಗೋರಂಟೆ ಮರವನ್ನು ಅಪ್ಪುಗೆಯಿಂದ ಸಂತೋಷಪಡಿಸಿ ಅದರಲ್ಲಿ ಹೂವುಗಳನ್ನು ಉಂಟುಮಾಡಿ ಒಳ್ಳೆಯ ಹೂವನ್ನು ಆಯ್ದುಕೊಂಡಳು. ಹೆಂಗುಸರ ಮಧುರವಾದ ಒಡನಾಟಕ್ಕೆ ಮರುಳಾಗದವರು ಯಾರು? ॥ ೧೪೪ ॥ ಮಂದವಾದ (ನಿಧಾನವಾದ) ನಡಿಗೆಯವಳೂ. ಮಂದಾರ ಪುಷ್ಪದ ಪರಿಮಳ ವುಳ್ಳವಳೂ, ಆದ ಒಬ್ಬಳು ಮಂದಾರ ವೃಕ್ಷದ ಎದುರು ನಿಂದು ನೋಡಿ, ಮಾತಾಡುತ್ತ ಸಂತೋಷದಿಂದ ಹೂವನ್ನು ಕೊಯ್ದಳು. ॥ ೧೪೫ ॥ ಒಬ್ಬಳು ಹೆಂಗುಸು ಸಂಪಗೆಹೂವಿನ ಸಮೀಪಕ್ಕೆ ಬಂದು. "ನಿಮ್ಮ ಪ್ರಭಾವವು ಹಗುರವಾದು ದಲ್ಲ. ನಿಮ್ಮ ಪರಿಮಳವನ್ನು ಸೇವಿಸಿದ ತುಂಬಿಗಳು ಸತ್ತುಹೋಗುತ್ತವೆ" ಎಂದು ಪರಿಹಾಸ್ಯಮಾಡಿ ನಗುತ್ತ, ಸಂಪಗೆಯ ಒಳ್ಳೆಯ ಹೂವನ್ನು ಎತ್ತಿದಳು. ॥ ೧೪೬ ॥ ಒಬ್ಬಳು ಮೆಲುನಡೆಯ ಸುಂದರಿಯು ಮಾವಿನ ಬಳಿಗೆ ಬಂದು, "ಮನ್ಮಥ ನಿಗೆ ನೀನೆಂತಹ ಮೊದಲನೆಯ ಬಾಣ!" ಎಂದು ವಕ್ರೋಕ್ತಿಯಿಂದ ನುಡಿದು ಮಾವಿನ ಮರದ ಚಿಗುರನ್ನು ಕೊಯ್ದಳು.

---

[1] ಚಕೋರರೋಚನೆ (ಗ ಚ). [2] ಯದನಲ್ಲಿ (ಗ). [3] ಮಧುರಾಂಬಿಕಿ (ಗ) [4] ಪೆಣ್ಗಳಾವಗೆ (ಗ). [5] ತುಟ್ಟಬಡಿಸಿ (ಗ). ತುಷ್ಟಿಪಡಿಸಿ (ಚ). [6] ದೊಳ್ಪರಲನೆತ್ತಿದಳು (ಚ) [7] ಪಡೆದಪಳೆಂದು (ಕ). [8] ಗೊಂದನೆಯನ್ನೀ ತೆರದಿಂ (ಗ). [9] ಬಂದ (ಚ).

ಗಾನರಸಾಮೃತವನು[1] ಸೂಸಿಯಂದೋರ್ವ । ಮಾನಿನಿಯಾ ನಮೇರುವನು[2] ॥
ಯಾನಲೇರಿ[3] ಕೊಯ್ದಳಾ ಪೂವ ಪುಸಿಯಲ್ಲ । ಮಾನಿನಿಯಾರಾಮದೊಳು ॥ ೧೪೮ ॥

ವರ್ಣಿ[4] ಕೇಳಾರಾಮದೊಳಗೆ ನಾನಾ ಚೆಲ್ವ । ವರ್ಣಂಗಳಿಂ ಕೊಂಡಾಡಿ ॥
ಕರ್ಣಿಕಾರವನಿರದೆತ್ತಿದಳಂದೋರ್ವ[5] । ಕರ್ಣಾಂತಾಯತನೇತ್ರೆ ॥ ೧೪೯ ॥

ಈ ಪರಿಯೊಳು ನಾನಾ ಪುಷ್ಪಗಳ ತಂ । ದಾ ಪೆಣ್ಗಳು ಜಾನಕಿಗೆ[6] ॥
ಆ ಪದದೊಳು ಕೊಡಲವಳಿತ್ತಿಯೊಳು ತ । ನ್ನೋಪನಿಗಿತ್ತಳಬ್ಜಾಕ್ಷಿ ॥ ೧೫೦ ॥

ಪರಮನ ಪೂಜಿಸಿ[7] ಪರಮಭಕ್ತಿಯೊಳಂ । ದರಸ[8] ತನ್ನರಸಿಯ[9]ರ್ವೆರಸು ॥
ಹರಿಸದಿಂ ವನಭೋಜನವ[10]ಮಾಡಿ ಸುಖದೊಳ । ಗಿರುತಿರ್ದರತಿರಾಗದೊಳು ॥ ೧೫೧ ॥

ಇಂತತಿ ಸಂತಸವೆಂಬ ಸಾಗರದೊಳ । ಗಂತರಿಸದೆ ಯಾ ದಿನವ[11] ॥
ತಾಂ ತಡೆಯದೆ ಕಳಿವುತಲಿರಲದನಾ । ನೆಂತುಸುರುವೆನು[12] ಕಂಜಾಕ್ಷಿ ॥ ೧೫೨ ॥

ಕವಿಜನ ಚಿಂತಾಮಣಿ ಕಾಂತಾಜನ । ಸವಿವಿಲ್ಲ ಸಜ್ಜನ ಜನದ ॥
ತವಿರು[13] ಬೇಡುವ ಜನ ಕಲ್ಪಭೂರುಹವೆನ । ಲವನೊಪ್ಪಿದನಂಬುಜಾಕ್ಷಿ ॥ ೧೫೩ ॥

ಇದು ಸರಸತಿಯಂಗಭೂಷಣ ಕೇಳ್ವರ । ಹೃದಯಕಮಲ ದಿವಸೇಂದ್ರ ॥
ಇದು ರಸಿಕರ ಕಿವಿಗಮೃತರಸಾಯನ । ವಿದು ಭವ್ಯಕುಮುದ ಚಂದ್ರಮನು ॥ ೧೫೪ ॥

---

॥ ೧೪೭ ॥ ಇನ್ನೊಬ್ಬಳು ಸ್ತ್ರೀಯು ಗಾನವನ್ನು ಹಾಡುತ್ತ ಆ ಉದ್ಯಾನದಲ್ಲಿರುವ ಒಂದು ಸುರಗಿಮರವನ್ನೇರಿ ಹೂವನ್ನು ಕೊಯ್ದಳು ॥ ೧೪೮ ॥ ಒಳ್ಳೆಯ ಮೈಬಣ್ಣವುಳ್ಳ ಚೇಳಿನಿಯೇ ಕೇಳು ಆ ಉದ್ಯಾನದಲ್ಲಿ ಕಿವಿವರೆಗೆ ನೀಡಿರುವ ಕಣ್ಣುಳ್ಳ ಸುಂದರಿಯೊರ್ವಳು ಹಲವಾರು ಬಣ್ಣಗಳ ಹೂವುಗಳನ್ನು ಹೊಗಳುತ್ತ, ಕಣಗಿಲೆ ಹೂವನ್ನು ಎತ್ತಿಕೊಂಡಳು. ॥ ೧೪೯ ॥ ಆ ಹೆಂಗಸರು ಈ ರೀತಿಯಾಗಿ ವಿವಿಧವಾದ ಹೂಗಳನ್ನು ಸೀತೆಗೆ ಆ ಸಂದರ್ಭದಲ್ಲಿ ತಂದುಕೊಟ್ಟರು ಆಗ ಅವಳು ಆ ಹೂಗಳನ್ನು ತನ್ನ ಗಂಡನಿಗೆ ಕೊಟ್ಟಳು ॥ ೧೫೦ ॥ ಶ್ರೀರಾಮನು ಜಿನೇಶ್ವರನನ್ನು ಅತ್ಯಂತ ಭಕ್ತಿಯಿಂದ ಪೂಜಿಸಿ, ತನ್ನ ಅರಸಿಯರೊಡನೆ ವನಭೋಜನವನ್ನು ತೀರಿಸಿದನು ಅವರೆಲ್ಲರೂ ಬಹಳ ಪ್ರೀತಿಯಿಂದಲೂ ಸಂತೋಷದಿಂದಲೂ ಇದ್ದರು ॥ ೧೫೧ ॥ ಎಲೈ ಕಮಲಾಕ್ಷಿಯಾದ ಚೇಳಿನಿಯೇ. ಹೀಗೆ ಅವರು ಬಹಳ ಸಂತೋಷವೆಂಬ ಸಮುದ್ರದಲ್ಲಿದ್ದುಕೊಂಡು ಆ ದಿನವನ್ನು ಕಳೆಯುತ್ತಿದ್ದುದನ್ನು ನಾನು ಹೇಗೆ ತಿಳಿಸಲಿ ! ॥ ೧೫೨ ॥ ಎಲೈ ಚೇಳಿನಿಯೇ, ಆ ಶ್ರೀರಾಮನು ಕವಿಜನರಿಗೆ ಚಿಂತಾಮಣಿಯಾಗಿಯೂ, ಸ್ತ್ರೀಜನರಿಗೆ ಕಂದರ್ಪನಾಗಿಯೂ, ಸಾಧು ಜನರಿಗೆ ತಾಯಿಮನೆಯಾಗಿಯೂ ಬೇಡುವ ಜನರಿಗೆ ಕಲ್ಪವೃಕ್ಷವಾಗಿಯೂ ಶೋಭಿಸಿದನು ॥ ೧೫೩ ॥ ಈ ರಾಮವಿಜಯ ಕಾವ್ಯವು ಸರಸ್ವತೀದೇವಿಯ ಮೈಯ ತೊಡಿಗೆಯೂ, ಶ್ರೋತೃಗಳ ಹೃತ್ಕಮಲವನ್ನು ವಿಕಾಸಪಡಿಸುವ ಸೂರ್ಯನೂ, ರಸಿಕರ ಕಿವಿಗೆ ಅಮೃತದ ರಸಾಯನವೂ, ಸತ್ಪುರುಷರೆಂಬ ನೈದಿಲೆಗೆ ಚಂದ್ರನೂ ಆಗಿದೆ ॥ ೧೫೪ ॥ ವಿದ್ವಜ್ಜನರ ಹೃದಯ ಕಮಲಕ್ಕೆ ಸೂರ್ಯನೂ, ವಿದ್ಯಾದೇವಿಯ ಮುಖಕ್ಕೆ ರನ್ನ

---

[1] ರಸಾಮೃತಗಳ (ಚ) [2] ಯಾ ಮೇರುವನು (ಗ) [3] ಯಾನಲರಸಿ (ಕ ಚ) [4] ವಣ್ಣಿ (ಗ) [5] ದೆತ್ತಿದಳೋರೋರ್ವ (ಗ)
[6] ಚೆಲುವಿಂದ (ಕ) [7] ಪೂಜೆಯ (ಕ) [8] ಪರಸಿ (ಕ) [9] ತನ್ನಾರಿಯರ್ (ಗ) [10] ಪುರವನು ಪೊಕ್ಕು ಭೋಜನ (ಕ ಗ) [11] ದಿವಸ (ಕ ಗ)
[12] ನೆಂತು ಬಣ್ಣಿಪೆನು [13] ತವರು (ಚ) ೧೫೪, ೧೫೫ (ಕದಲ್ಲಿಲ್ಲ)

ಕೋವಿದರುಗಳ ಹೃತ್ಕಮಲ ಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ॥
ಭಾವಕರುಗಳ ಸಂತಸಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೧೫೫ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ಸಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೫೬ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ-ಜಿನ-ಪಾದಾಂಬುಜ
ಮದಮಧುಕರನತ್ಯುತ್ತಮವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದತಿ ಜಸವೆತ್ತುದು ಪತ್ತನೆ ಸಂಧಿ ॥ ೧೫೭ ॥

---

ಗನ್ನಡಿಯಂತೆ ಇರುವವನೂ ಭಾವಕರ ಸಂತೋಷಕ್ಕೆ ಸಮುದ್ರನೂ ಮಿತ್ರನೂ ಆದ ದೇವಪ್ಪನು ರಚಿಸಿದ ಕಾವ್ಯವಿದು. ॥ ೧೫೫ ॥ ಶ್ರೇಣಿಕನು ಹೀಗೆಂದನು–'ಎಲೈ ಹುಲ್ಲೆಗಣ್ಣಿನ ಚೇಳಿನಿಯೇ ಕೇಳು. ಈ ದಿವಸ ನಾನು ನಿನಗೆ ಮುಂದಣ ಕಥೆಗಳನ್ನು ಹೇಳುವೆನೆಂದ ಪ್ರಕಾರ ಮೆಲ್ಲನೆ ಮುಂದುವರಿಯುತ್ತ ಬಂದು ಇಲ್ಲಿಗೆ ಈ ಸಂಧಿ ಕೊನೆಯಾಯಿತು. ಇಲ್ಲಿಂದ ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು." ॥ ೧೫೬ ॥ ಬ್ರಾಹ್ಮಣಕುಲದಲ್ಲಿ ಹುಟ್ಟಿದವನೂ, ಹೊಸ ಮನ್ಮಥ ಸ್ವರೂಪನೂ, ನಿರ್ಮಲ ಗುಣಯುಕ್ತನೂ, ಜಿನೇಶ್ವರನ ಪಾದಕಮಲಕ್ಕೆ ಸೊಕ್ಕಿದ ತುಂಬಿಯಂತಿರುವವನೂ, ವಾಗ್ದೇವಿಗೆ ಅತ್ಯುನ್ನತವಾದ ಸ್ವಚ್ಛವಾದ ರತ್ನದ ಕನ್ನಡಿಯಂತಿರುವವನೂ, ಪರಿಶುದ್ಧ ಚಾರಿತ್ರವುಳ್ಳವನೂ ಸಚಿವನೂ ಆದ ದೇವಪ್ಪನು ಸಂತೋಷದಿಂದ ಹೇಳಿದ ರಾಮವಿಜಯದಲ್ಲಿ ಸೇರಿದಂತೆ ವಿರಚಿತವಾಗಿ ಹತ್ತನೆಯ ಸಂಧಿ ಖ್ಯಾತಿಪಡೆಯಿತು. ॥ ೧೫೭ ॥

---

# ೧೧. ಲಂಕಾಪುರ ವರ್ಣನೆ

ಇಂದ್ರ ನರೇಂದ್ರ ನಾಗೇಂದ್ರವಂದಿತಪಾದ । ರುಂದ್ರ[1] ತರಣಿ ಶಶಿ ಕೋಟಿ ॥
ಸಾಂದ್ರ ಕಿರಣ ಕಾಯ ಮುನಿಸುವ್ರತ ಜಿನ । ಚಂದ್ರಗಾನೊಲಿದೆಱಗುವೆನು ॥ ೧ ॥

ಮುಂದಣ ಕಥೆ ಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೨ ॥

ಸುಗತಿಯ ಸುಜ್ಞಾನವ ಸಚ್ಚರಿತವ । ನಗಣಿತ ಸುಖಸಂಪದವ ॥
ಅಗಲದಿರ್ಪರು ಜಿನಕಥೆಯ ಲಾಲಿಸಿದರು[2] । ಮೃಗನೇತ್ರೆ ಕೇಳು ನೀನೊಲಿದು ॥ ೩ ॥

ಕಕ್ಕಸಕುಚೆ ಕುವಲಯನೇತ್ರೆಯೆನ್ನಂ । ತಕ್ಕರೆ ಸವಿನುಡಿ ಸರಸಿ ॥
ಚೊಕ್ಕ ಪುತ್ತಳಿ ಜಿನಭಕ್ತೆ ಲಾಲಿಸು ಮೋಹ । ದಕ್ಕರಿಯಳೆ ಪ್ರಿಯುದಬಲೆ ॥ ೪ ॥

ನಲ್ಲಳೆ ನಯನಾನಂದೆ ಸುನಲವೆತ್ತ[3] । ಪಲ್ಲವಾಧರೆ ಪದ್ಮನೇತ್ರೆ ॥
ನಲ್ಲವೆಣ್ಗಳ ತಲೆವಣಿಯೆ ಲಾಲಿಸು ಮೋಹ । ಮಲ್ಲವಿಜಯನ ಕಥೆಯನು ॥ ೫ ॥

ಅಂಗಜರೂಪ ಶ್ರೀಜಿನಪಾದಾಂಬುಜ । ಭೃಂಗ ಸದ್ಗುಣಗಣ[4]ನಿಳಯ ॥
ತುಂಗವಿಕ್ರಮ ಕೀರ್ತಿಯುತ ಪೇಳೊಲಿದು ಮು । ಕ್ತ್ಯಂಗನೆಯಧಿಪನ[5] ಕಥೆಯ ॥ ೬ ॥

ಅತ್ತಲು[6] ರಾಮಚಂದ್ರಮ ಸೀತೆಯೊಳು ಮುಂದ । ವೆತ್ತು ವನಕ್ರೀಡೆಯನು ॥
ಚಿತ್ತರದಿಂದಾಡುತಿರಲೊಂದು ಕಥೆಯ ನಾ । ನಿತ್ತ ಪೇಳುವೆನು[7] ಲಾಲಿಪುದು ॥ ೭ ॥

---

ದೇವ-ಮನುಷ್ಯ-ನಾಗ ಲೋಕಗಳ ಒಡೆಯರಿಂದ ವಂದಿಸಲ್ಪಡುವ ಪಾದವುಳ್ಳ, ವಿಸ್ತಾರವಾದ ಸೂರ್ಯಚಂದ್ರರು ಕೋಟಿಸಂಖ್ಯೆಯಲ್ಲಿ ನೇರಿದಂತಹ ತೇಜಸ್ಸಿನ ದೇಹವುಳ್ಳ ಮುನಿಸುವ್ರತ ಜಿನೇಶ್ವರನಿಗೆ ನಾನು ಭಕ್ತಿಯಿಂದ ವಂದಿಸುತ್ತೇನೆ ॥ ೧ ॥ ಚೇಳಿನಿಯು ಶ್ರೇಣಿಕನೊಡನೆ, 'ಎಲೈ ಮನ್ಮಥ ಸ್ವರೂಪನೇ, ಮುಂದಿನ ಕಥೆಯಾವುದು? ಅದರ ಸಂಗತಿಗಳು ಯಾವುವು? ಎಂಬುದನ್ನು ಸಂಪೂರ್ಣವಾಗಿ ನನಗೆ ನೀವು ತಿಳಿಸಬೇಕು" ಎಂದಳು ಆಗ ಶ್ರೇಣಿಕನು "ಎಲೈ ನೈದಿಲೆಯಂತಹ ಚೆಲುವಾದ ಕಣ್ಣಿನ ಚೇಳಿನಿಯೇ ಕೇಳು" ಎಂದನು ॥ ೨ ॥ ಎಲೈ ಮೃಗನೇತ್ರೆಯೇ, ಜಿನಕಥೆಯನ್ನು ಕೇಳಿದವರು ಸದ್ಗತಿಯನ್ನೂ, ಒಳ್ಳೆಯ ಜ್ಞಾನವನ್ನೂ, ಒಳ್ಳೆಯ ನಡತೆಯನ್ನೂ, ಹೆಚ್ಚಾದ ಸುಖ ಸಂಪತ್ತುಗಳನ್ನೂ ಶಾಶ್ವತವಾಗಿ ಪಡೆಯುತ್ತಾರೆ ॥ ೩ ॥ ಎಲೈ ಕಠಿಣವಾದ ಸ್ತನವುಳ್ಳವಳೆ, ನೈದಿಲೆಗಣ್ಣಿನವಳೇ, ನನ್ನ ಸಮಾನ ಪ್ರೀತಿಯವಳೇ, ಸವಿಯಾದ ಮಾತಿನ ರಸಿಕಳೇ, ಶ್ರೇಷ್ಠವಾದ ಪುತ್ತಳಿ ಚಿನ್ನದಂತಿರುವವಳೇ, ಜಿನಭಕ್ತಿಯುಳ್ಳವಳೇ, ಮೋಹದ ಅಕ್ಷರಾತ್ಮಕೆಯೇ, ಪ್ರೀತಿಯ ಮಡದಿಯೇ ಕೇಳು ॥ ೪ ॥ ಪ್ರಿಯಳೇ, ಕಣ್ಣಿಗೆ ಸಂತೋಷವಾಗಿರುವವಳೇ, ಪ್ರೀತಿಯ ತಳಿರಿನಂತಹ ಕೆಳದುಟಿಯವಳೇ, ತಾವರೆಯಂತಹ ಕಣ್ಣಿನವಳೇ, ಒಳ್ಳೆಯ ಹೆಂಗುಸರಿಗೆ ಶಿರೋರತ್ನವಾಗಿರುವವಳೇ ಮೋಹಮಲ್ಲನನ್ನು ಜಯಿಸಿದ ಜಿನೇಶ್ವರನ ಕಥೆಯನ್ನು ಕೇಳು ॥ ೫ ॥ ಆಗ ಚೇಳಿನಿಯು ಪುನಃ ಹೀಗೆಂದಳು—ಎಲೈ ಮನ್ಮಥ ಸ್ವರೂಪನೇ, ಜಿನಭಕ್ತನೇ, ಒಳ್ಳೆಯ ಗುಣಗಳ ಸಮೂಹಕ್ಕೆ ಆಶ್ರಯನೇ, ಹೆಚ್ಚಾದ ಪರಾಕ್ರಮ ಕೀರ್ತಿಗಳಿಂದ ಕೂಡಿದವನೇ, ಮೋಕ್ಷವೆಂಬ ಸ್ತ್ರೀಯ ಗಂಡನ (ಜಿನೇಶನ) ಕಥೆಯನ್ನು ಹೇಳು—ಎಂದಳು ॥ ೬ ॥ ಆಗ ಶ್ರೇಣಿಕನು ಹೀಗೆ ಹೇಳತೊಡಗಿದನು—ಶ್ರೀ ರಾಮನು ಅತ್ತ

---

[1] ವೃಂದ (ಕ) [2] ರಾಲಿಸುವರು (ಗ) ನಾಲಿಸುವರು (ಚ) ೪ನೇ ಪದ್ಯ ಗ ಚ ದಲ್ಲಿಲ್ಲ [3] ಸೂನಲವೆತ್ತ (ಕ) [4] ಗುಣಗಳ (ಗ)
[5] ಯಧಿಪನ (ಗ) [6] ಅತ್ತಲಾ (ಚ) [7] × (ಗ ಚ)

ಅಂಗನೆ ಕೇಳತಿ ಸೊಂಪಿಂದ ಸೊಬಗಿಂದ । ಸಿಂಗರದಿಂ ಸಿರಿಯಿಂದ ॥
ಮಂಗಲಮಯವಾಗಿಹುದಾ ನಾಡ ಬೆ । ಡಂಗ ನಾನೇನ ಬಣ್ಣಿಪೆನು ॥ ೮ ॥

ಮಳೆಯಿಂದ ಪೊಳೆಯ ಕಾಲುವೆಗಳಿಂದಲ್ಲಲ್ಲಿ । ಬೆಳೆವ ನಾನಾ ಬೆಳೆಯಿಂದ ॥
ಕುಳಿರ್ವ ಕೊಳಗಳಿಂ ಪೂದೋಟಂಗಳಿಂ । ದೆಳಸಿಹುದಾ ನಾಡು ಕಣ್ಗೆ ॥ ೯ ॥

ಊರೂರ್ಗೆ ನಂದನವನ ಶಾಳೀವನ । ಊರೂರ್ಗೆ ಸರಸಿ ಪೂದೋಂಟ ॥
ಊರೂರ್ಗೆ ಕೆಱೆತೊಱೆಗಳ ಕಾಲುವೆಯಿರ[1] । ಲೂರೂರ್ಗಳಿರದೆ ರಾಜಿಪವು ॥ ೧೦ ॥

ಇಟ್ಟೆಡೆ[2]ಯೆಂಬುದಬಲೆಯರ ಕುಚದೊಳು । ಕಟ್ಟೆಂಬುದವರ ಮುಡಿಯೊಳು ॥
ಮೆಟ್ಟೆಂಬುದು ಸೋಪಾನದೊಳಲ್ಲದೆ । ಪುಟ್ಟಲಿಲ್ಲಾ[3] ನಾಡೊಳಗೆ ॥ ೧೧ ॥

ಹುಸಿಯೆಂಬುದು ಶಶಿಮುಖಿಯರ ಮಧ್ಯದೊ । ಳೆಸೆವ ಗರುಡಿಮನೆಯೊಳಗೆ ॥
ಅಸಿಯುಳೆ ಫಲವನೀಯದ ಪುಷ್ಪದೊಳಗಲ್ಲ । ದೆಸೆಯದಾ ನುಡಿಯದಱೊಳಗೆ ॥ ೧೨ ॥

ಹಿಡಿ ತಡೆಯೆಂಬುದು ಪರಿಣಯದೊಳು ಬಿಱು । ನುಡಿಯೆಂಬುದು ಬೀರದೊಳು ॥
ಕೊಡೆಯೆಂಬ ನುಡಿ[4] ಬೆಳುಗೊಡೆ[5]ಗಳೊಳಲ್ಲದೆ । ನುಡಿವವರಾ ನಾಡೊಳಿಲ್ಲ[6] ॥ ೧೩ ॥

ಮನವಚನದೊಳರುಹನ ನಂಬುಗೆ ಜಿನ । ಮುನಿಗಳ ಸೇವೆ ಸರ್ವರೊಳು ।
ವಿನಯವಚನ ಧರ್ಮವರ್ತನವಿಲ್ಲದ । ಮನುಜರಿಲ್ಲಾ ನಾಡೊಳಗೆ ॥ ೧೪ ॥

---

ಸೀತೆಯೊಡನೆ ವನಕ್ರೀಡೆಯನ್ನು ಆಡುತ್ತಿರಲು, ಇತ್ತ ನಾನು ಒಂದು ಕಥೆಯನ್ನು ಹೇಳುತ್ತೇನೆ, ಕೇಳು ॥ ೭ ॥ ಎಲೈ ಚೇಳಿನಿಯೇ, ಒಂದು ನಾಡು ಬಹಳ ಸೊಂಪಾಗಿಯೂ, ಸೊಗಸಾಗಿಯೂ, ಶೃಂಗಾರ ಸಂಪತ್ತುಗಳಿಂದ ಕೂಡಿ ಮಂಗಲಕರವಾಗಿ ಮೆರೆಯುತ್ತಿದೆ. ಅದರ ಬೆಡಗನ್ನು ನಾನು ಏನೆಂದು ವರ್ಣಿಸಲಿ! ॥ ೮ ॥ ಆ ನಾಡು ಮಳೆನೀರಿನಿಂದಲೂ, ನದಿಗಳ ಕಾಲುವೆನೀರಿನಿಂದಲೂ, ಅಲ್ಲಲ್ಲಿ ಬೆಳೆಯುವ ಹಲವಾರು ವಿಧದ ಬೆಳೆಗಳಿಂದಲೂ, ತಣ್ಣಗಾದ ಸರೋವರಗಳಿಂದಲೂ, ಹೂದೋಟಗಳಿಂದಲೂ ಕಣ್ಣನ್ನು ಸೆಳೆಯುವಂತಿದೆ. ॥ ೯ ॥ ಆ ನಾಡಿನಲ್ಲಿ ಯಾವ ಊರನ್ನು ನೋಡಿದರೂ ನಂದನವನ, ಬತ್ತದ ಗದ್ದೆಗಳು, ಸರೋವರ, ಹೂದೋಟ, ಕೆರೆ. ತೊರೆಗಳ ಕಾಲುವೆಗಳು ಕಾಣಿಸುತ್ತಿವೆ. ॥ ೧೦ ॥ ಆ ನಾಡಿನಲ್ಲಿ ಇಕ್ಕಟ್ಟಾದ ಸ್ಥಳವೆಂಬುದು ಹೆಂಗುಸರ ಮೊಲೆಗಳಲ್ಲಿಯೂ, ಕಟ್ಟು ಎಂಬುದು ಅವರ ತುರುಬಿನಲ್ಲಿಯೂ, ಮೆಟ್ಟು ಎಂಬುದು ಮೆಟ್ಟಲುಗಳಲ್ಲಯೂ ಇದೆಯಲ್ಲದೆ, ಬೇರೆ ಎಲ್ಲಿಯೂ ಇಲ್ಲ. ॥ ೧೧ ॥ ಎಲೈ ಚೇಳಿನಿಯೇ, ಹುಸಿ ಎಂಬ ಶಬ್ದವು ಹೆಂಗುಸರ ಕಟಿಯಲ್ಲಿಯೂ, ಗರುಡಿಮನೆಯಲ್ಲಿಯೂ. ಫಲಹೀನವಾದ ಹೂವಿನಲ್ಲಿಯೂ ಪ್ರಯೋಗಗೊಳ್ಳುವುದಲ್ಲದೆ, ಆ ನಾಡಿನಲ್ಲಿ 'ಸುಳ್ಳು' ಎಂಬ ಅರ್ಥದಲ್ಲಿ ಈ ಶಬ್ದವೇ ಇಲ್ಲ. ॥ ೧೨ ॥ ಹಿಡಿ ತಡೆ ಎಂಬ ಮಾತು ಮದುವೆಯಲ್ಲಿಯೂ. ಬಿರುನುಡಿ (ಕಠಿಣೋಕ್ತಿ) ಎಂಬುದು ಶೌರ್ಯದಲ್ಲಿಯೂ. 'ಕೊಡೆ' ಎಂಬುದು ಬೆಳ್ಗೊಡೆಯಲ್ಲಿಯೂ ಇರುವುವಲ್ಲದೆ, ಇಂತಹ ಶಬ್ದಗಳನ್ನಾಡುವ ಜನರು ಆ ನಾಡಿನಲ್ಲಿಲ್ಲ. ॥ ೧೩ ॥ ಆ ನಾಡಿನ ಮನುಷ್ಯರೆಲ್ಲರ ಮನಸ್ಸಿನಲ್ಲಿಯೂ. ಮಾತಿನಲ್ಲಿಯೂ ಜಿನೇಶ್ವರನಲ್ಲಿ ವಿಶ್ವಾಸವೂ ಜಿನಮುನಿಗಳ ಸೇವೆಯೂ ಇರುವುವು ಎಲ್ಲರಲ್ಲಿಯೂ ವಿನಯದ ಮಾತುಗಳೂ ಧರ್ಮದ ಆಚರಣೆಯೂ ಇರುವುವು ॥ ೧೪ ॥ ಆ ನಾಡು ತುಂಬಿಯಂತಹ ಕೂದಲಿನ. ತುಳುಕುತ್ತಿರುವ ಯೌವನದ, ಕೆಂದಾವರೆ

---

[1] ಕಾಲುವೆಗಳಿರ (ಚ)　[2] ಇಟ್ಟಡೆ (ಗ. ಚ)　[3] ಪುಟ್ಟಿಸಿಲ್ಲಾ (ಚ).　[4] ಕೊಡೆಯೆಂಬುದು (ಗ).　[5] ಗೊಡೆಯೊಳಗಲ್ಲದೆ (ಗ).
[6] ನುಡಿವ ಜನಾಂತ್ಯದೊಳಿಲ್ಲ (ಕ).

ತುಂಬಿಗುರುಳ ತುಳುಕುವ[1] ಜವ್ವನದ ಶೋ । ಣಾಂಬುಜಾನನ[2]ದೆಳನಗೆಯ ॥
ಕಂಬುಕಂಧರದ ಕಾಂತೆಯರಿಂದಾ ನಾಡು । ತುಂಬಿಹುದತಿ ಸೊಬಗಾಂತು ॥ ೧೫ ॥

ಕಂಜವದನದ ಕನಕಲತೆಯಂಗದ । ರಂಜಿಸುವರಗಿಳಿ ನುಡಿಯ ॥
ಕುಂಜರಗಮನದ ಕುಮುದಾಕ್ಷಿಯರಿಂದ । ಮಂಜುಳವಡೆದುದಾ ದೇಶ ॥ ೧೬ ॥

ಚಾಟುನುಡಿಯ ಚದುರೆಯರಿಂದಿನಿದೀವ । ಕೂಟದ ಕುಶಲೆಯರಿಂದ ॥
ಬೇಟದ ಬೆಲೆವೆಣ್ಗಳಿಂದಾ[3] ನಾಡು ಸ । ಘಾಟಿಕೆಯನು ಪಡದಿಹುದು ॥ ೧೭ ॥

ಮನ್ನಿಸಿ ಮನವೊಲ್ದು ಹಸಿದು ಬಂದವರಿಗಿ । ಷ್ಟಾನ್ನವನಿತ್ತುಪಚರಿಪ ॥
ಚೆನ್ನೆಯರಿಂದಲೆಸೆದವಾ ನಾಡೊಳ । ಗನ್ನಸತ್ರಗಳೆಡೆವಿಡದೆ ॥ ೧೮ ॥

ಆಱಿತ ಚಾತಕದಂತೆ[5] ನೀರಳ್ಕೆಯಿಂ ಬಾಯಿ । ದೆಱೆವ ಪಾಂಥರುಗಳಿಗೊಲಿದು ॥
ನಿಱುಪ ಪಯೋಧರೆಯರು[6] ನೀರನೆರೆದಲ್ಲಿ । ಪಱಿಪಡಿಸುವರು ತೃಷೆಯನು ॥ ೧೯ ॥

ಬಳಲಿದ ಪಾಂಥರುಗಳಿಗಿನಿರಸವನು । ತಳುವದಿತ್ತಪೆವು ನಾವೆಂದು ॥
ಒಳನುಡಿಯಿಂ ಕರೆವಂತಿಕ್ಷುಯಂತ್ರದ । ಬಳಗವಾ ನಾಡೊಳೊಪ್ಪಿದವು ॥ ೨೦ ॥

ಇಂತು ರಾ[6]ರಾಜಿಪ ನಾಡ ನಡುವೆ ಭೂ । ಕಾಂತೆಯ ನಗೆಮೊಗದಂತೆ ॥
ಕಾಂತೆ ಕೇಳೊಂದು ಪಟ್ಟಣವೊಪ್ಪುತಿರ್ಪುದ । ತ್ಯಂತ ವೈಭವದೊಡಗೂಡಿ ॥ ೨೧ ॥

ಬಳಸಿ ಪರಿವ ಪನಿನೀರ ಕಾಲುವೆ ಪೂ । ಗೊಳ ಶಾಳೀವನದಿಂದ ॥
ವಿಲಸಿತವಾಗಿ ರಂಜಿಸುವಾರಾಮದಿಂ । ತಳೆದುದು[1] ಪೊಳಲು ಚೆಲ್ವಿಕೆಯ ॥ ೨೨ ॥

---

ಯಂತಹ ಮುಖದ, ಮುಗುಳುನಗೆಯ, ಶಂಖದಂತಹ ಕೊರಲಿನ, ಹೆಂಗುಸರಿಂದ ತುಂಬಿ ಸೊಗಸಾಗಿರುವುದು ॥ ೧೫ ॥ ತಾವರೆಯಂತಹ ಮುಖ, ಚಿನ್ನದ ಬಳ್ಳಿಯಂತಿರುವ ದೇಹ, ಅರಸುಗಿಳಿಯಂತಹ ಮಾತು, ಆನೆಯಂತಹ ನಡಿಗೆ, ನೈದಿಲೆ ಯಂತಹ ಕಣ್ಣು—ಇರುವ, ಹೆಂಗುಸರಿಂದ ಆ ದೇಶವು ಮನೋಹರವಾಗಿರುವುದು ॥ ೧೬ ॥ ಮೋಹಕವಾದ ಮಾತ ನ್ನಾಡುವ ಚದುರೆಯರಿಂದಲೂ, ಸವಿಯನ್ನುಂಟುಮಾಡುವ ಒಡನಾಟದ ಕುಶಲೆಯರಿಂದಲೂ, ಕಾಮವನ್ನುಂಟುಮಾಡುವ ಗಣಿಕೆಯರಿಂದಲೂ ಆ ನಾಡು ಶ್ರೇಷ್ಠತೆಯನ್ನು ಹೊಂದಿದೆ ॥ ೧೭ ॥ ಆ ನಾಡಿನಲ್ಲಿ ಹಸಿದು ಬಂದವರನ್ನು ಮನ್ನಿಸಿ ಮನಃಪೂರ್ವಕವಾಗಿ ಪ್ರೀತಿಕರವಾದ ಭೋಜನವನ್ನಿತ್ತು ಉಪಚರಿಸುವ ಚೆಲುವೆಯರಿಂದ ಕೂಡಿದ ಅನ್ನಸತ್ರಗಳು ಬಹಳ ವಿದ್ದುವು. ॥ ೧೮ ॥ ಅಲ್ಲಿ ಶೋಭಿಸುವ ಪಯೋಧರೆಯರಾದ ಹೆಂಗುಸರು ಬಾಯಾರಿದ ಚಾತಕ ಪಕ್ಷಿಗಳಂತೆ ಬಾಯಾರಿ ನೀರು ಕಂಡಿಯಲು ಬಾಯಿ ತೆರೆವ ಪಯಣಿಗರಿಗೆ ಪ್ರೀತಿಯಿಂದ ನೀರನ್ನೆರೆದು ಅವರ ಬಾಯಾರಿಕೆಯನ್ನು ನೀಗುವರು. ॥ ೧೯ ॥ ಆ ನಾಡಿನಲ್ಲಿ ಕಬ್ಬಿನ ಗಾಣದ ಯಂತ್ರಗಳು ಇದ್ದುವು ಅವು "ಬಳಲಿದ ದಾರಿಗರಿಗೆ ಸವಿಯಾದ ರಸವನ್ನು ತಡ ವಿಲ್ಲದೆ ನಾವು ಕೊಡುವೆವು" ಎಂದು ಒಳ್ಳೆಯ ಮಾತಿನಿಂದ ಕರೆಯುವಂತೆ ಧ್ವನಿಗೊಡುತ್ತಿದ್ದುವು ॥ ೨೦ ॥ ಎಲೈ ಚೆಲುವಿನಿಯೇ ಕೇಳು ಹೀಗೆ ಶೋಭಿಸುವ ನಾಡಿನ ನಡುವೆ ಭೂದೇವಿಯ ನಗೆಮೊಗದ ಹಾಗೆ ಒಂದು ಪಟ್ಟಣವು ಬಹಳ ವೈಭವದಿಂದ ಶೋಭಿಸುವುದು. ॥ ೨೧ ॥ ಸುತ್ತಲೂ ಹರಿಯುವ ಪನ್ನೀರಿನ ಕಾಲುವೆಯಿಂದಲೂ, ಹೂಗೊಳದಿಂದಲೂ,

---

[1] ತುಂಬಿದ (ಚ). [2] ಯೋಣಾಂಬುಜಾನನ (ಚ). [3] ವೆಣ್ಗಳಿಂದಲಾ (ಗ). [4] ಛತ್ರ (ಕ) ಚಕ್ರ (ಗ) [5] ಆರಾತಕದಂತೆ (ಗ)
[6] ↓ (ಚ). [7] ತಳೆದುದಾ (ಚ)

ಆ ನಗರದ ಸಿರಿ ಪೆಂಪು ಚೆಲ್ವಿಕೆಗಂ । ದಾ ನಾಕ ಮಲುಮಲ ಮರುಗಿ ॥
ಅನದೆಯೆವೆಯಿಕ್ಕದೆ ನೋಡುವುದೆನೆ[1] । ನಾನದನೇನ ಬಣ್ಣಿಪೆನು ॥ ೨೩ ॥

ನಾಕನಾಯಕನ ಪೊಳಲ ಬೈವುದಳಕೆಯ । ನೂಕೆಂಬುದುರಗ ನಗರಿಯ ॥
ಸಾಕಂತಿರೆನ್ನೊಳಗೆಣೆಯೆ ನೀವೆಂದು ನಿ । ರಾಕರಿಸುವುದಾ ಪೊಳಲು ॥ ೨೪ ॥

ಜಲದುರ್ಗ ವನದುರ್ಗ ಗಿರಿದುರ್ಗವಾ ಬಲು । ಸ್ಥಲದುರ್ಗಗಳು ತಂತಮ್ಮ ॥
ಬಲುಮೆಯನಾ ಪುರಕಿತ್ತವೆಂದೆನಲದ[2] । ನೊಲಿದು ಪೇಳುವ ಕವಿಯಾರು ॥ ೨೫ ॥

ಜಲಧಿ ಬಳಸಿದಗಳಾಗೆ ತ್ರಿಕೂಟಾ । ಚಲವ ಬಳಸಿ ವಜ್ರಪರಿಖೇ ॥
ನೆಲಸಿರಲಾ ಪಟ್ಟಣದ[3] ನೆಲಬಲಿಕೆಯ । ನೊಲಿದು ಪೇಳುವ ಕವಿಯಾರು ॥ ೨೬ ॥

ಅಟ್ಟಣೆ[4]ಯಗಳಾಳ್ವೆರಿ ಪುಲಿಪೊಗ ಕಂ । ಣೆಟ್ಟು ನೋಡುವ ಚೋರಖಂಡಿ[5] ॥
ಮುಟ್ಟಿ ಮೂದಲಿಸುವ ಕೊತ್ತಳವೆಸೆಯಲಾ । ಪಟ್ಟಣವನು ಪೇಳ್ವೆನೇನ ॥ ೨೭ ॥

ಮಱೆಯಿಂದ[6] ಮೋಸದಿಂ ಸಿರಿ ಹಾಱಿಪೋದೊಡಾ[7] । ನಱಿಯೆ ನಾನಾ ಬಲದಿಂದ ॥
ಇಱಿದು ಕಡಿದು ಸೂರೆ[8]ಗೊಳ್ವಡಾ ಪುರಿ[9] ಸಗ್ಗ । ದೆಱೆಯಂಗೆ[10] ನೂಕದಬ್ಜಾಕ್ಷಿ ॥ ೨೮ ॥

ಭಾರತಿಯರಮನೆ ಜಸವೆಣ್ಣ ನೆಲೆವಾಡ । ವೀರ ಸತಿಯ ತವರೂರು ॥
ಆರಯ್ಕೆ ರತಿಯಾಡುವಾಣವೆಂದೆನೆ ಪೇಳ್ವ । ರಾರು ಲಂಕೆಯ ಗಾಡಿಯನು ॥ ೨೯ ॥

---

ಬತ್ತದ ಗದ್ದೆಗಳಿಂದಲೂ, ಚೆನ್ನಾಗಿ ಶೋಭಿಸುವ ಉದ್ಯಾನದಿಂದಲೂ ಆ ಪಟ್ಟಣವು ಸೊಬಗುವಡೆದಿದೆ. ॥ ೨೨ ॥ ಆ ನಗರದ ಐಶ್ವರ್ಯ, ಘನತೆ, ಸೌಂದರ್ಯಗಳಿಗೆ ಆ ಸ್ವರ್ಗಲೋಕವು ಅಸೂಯೆಪಟ್ಟು ಸಹಿಸದೆ ಕಣ್ಣನ್ನು ಮುಚ್ಚದೆ ನೋಡುತ್ತಲೇ ಇರುವುದು. ಹೀಗಿರುವಾಗ ನಾನು ಅದನ್ನು ಏನೆಂದು ವರ್ಣಿಸಲಿ!. ॥ ೨೩ ॥ ಆ ಪಟ್ಟಣವು ಅಮರಾವತಿಯನ್ನು ಬೈಯುವಂತಿದೆ. ಕುಬೇರನ ನಗರಿಯನ್ನು ಅತ್ತ ನೂಕು ಎನ್ನುವುದು ನಾಗಲೋಕದ ಪಟ್ಟಣವನ್ನು ಸಾಕು, ಹಾಗಿರಲಿ ನೀವು ನನಗೆ ಸಮಾನರೇ? ಎಂದು ತುಚ್ಛೀಕರಿಸುವುದು. ॥ ೨೪ ॥ ಜಲದುರ್ಗ, ವನದುರ್ಗ, ಗಿರಿದುರ್ಗ, ಸ್ಥಲದುರ್ಗಗಳು ಆ ಪಟ್ಟಣಕ್ಕೆ ತಮ್ಮ ಸಾಮರ್ಥ್ಯವನ್ನು ಕೊಟ್ಟಿವೆ. ಹೀಗಿರುವಾಗ ಆ ಪಟ್ಟಣವನ್ನು ವರ್ಣಿಸುವ ಕವಿ ಯಾವನು? ॥ ೨೫ ॥ ಸಮುದ್ರವೇ ಆವರಿಸಿಕೊಂಡಿರುವ ಕಂದಕವಾಗಿ. ತ್ರಿಕೂಟಪರ್ವತವೇ ಸುತ್ತುವರಿದ ವಜ್ರದ ಕೋಟೆಯಾಗಿರಲು, ಆ ಪಟ್ಟಣದ ಸುಭದ್ರತೆಯನ್ನು ವಿವರಿಸುವ ಕವಿ ಯಾವನು? ॥ ೨೬ ॥ ಅಟ್ಟಳೆ, ಅಗಳು, ಆಳುವೇರಿ, ಹುಲಿಮೋರೆ, ಕಣ್ಣಟ್ಟು ನಿರೀಕ್ಷಿಸ ತಕ್ಕ ಕಳ್ಳಕಂಡಿ—ಮುಂತಾದವುಗಳಿಂದ ಕೂಡಿದ ಕೊತ್ತಳವು ಶೋಭಿಸುತ್ತಿರುವ ಆ ಪಟ್ಟಣವನ್ನು ಏನೆನ್ನಲಿ! ॥ ೨೭ ॥ ಯಾರಿಗೂ ತಿಳಿಯದಂತೆ ಗುಪ್ತವಾಗಿ ಅಥವಾ ಮೋಸದಿಂದ ಅಲ್ಲಿಂದ ಸಂಪತ್ತು ಹಾರಿ ಹೋದರೆ ಏನೆನ್ನಲೂ ಬರುವುದಿಲ್ಲ. ಆದರೆ ನಾನಾ ವಿಧವಾದ ಸೇನೆಯನ್ನು ತಂದು ತಿವಿದು ಕಡಿದು ಆ ಪಟ್ಟಣವನ್ನು ಸೂರೆಮಾಡಲು ದೇವೇಂದ್ರನಿಗೂ ಸಾಧ್ಯವಾಗದು. ॥ ೨೮ ॥ ಆ ಲಂಕೆಯು ಸರಸ್ವತಿಯ ಅರಮನೆ ಕೀರ್ತಿವಧುವಿನ ನೆಲೆಮನೆ. ಶೌರ್ಯವೆಂಬ ಸ್ತ್ರೀಯ ತಾಯಿಮನೆ, ರತೀದೇವಿಯ ಆಟದ ಸ್ಥಳ—ಎನ್ನುವಾಗ ಅದರ ಸೊಬಗನ್ನು ತಿಳಿಸಬಲ್ಲವರು ಯಾರು? ॥ ೨೯ ॥ ಎಲ್ಲೈ ಚೇಳಿನಿಯೇ

---

[1] ನೋಳ್ಪುದೆಂದೆನೆ (ಕ) [2] ಕಿತ್ತವೆಂದೆನೆಬಲದ (ಕ) [3] × (ಗ) [4] ಅಟ್ಟಳೆ (ಗ ಚ) [5] ಗಂದಿ (ಗ) ಕಂಡಿ (ಚ). [6] ಮೊರೆಯಿಂದ (ಗ) ಮಱಹಿಂದ (ಕ). [7] ಪೋದೊಡ (ಗ). [8] ಕೋಳು (ಚ) [9] ಪುರ (ಗ) [10] ದೆಱೆಯದೆ (ಗ).

ನ್ಯಾಯದ ನಡೆಯ ನಡೆವರಲ್ಲದೆಯ । ನ್ಯಾಯವನೆಸಗಿ ಬದುಕುವ ॥
ನಾಯಕಾಭಾಸ[1]ರಿಲ್ಲಾ ಲಂಕೆಯೊಳಂಬು । ಜಾಯತೇಕ್ಷಣೆ ಕೇಳೊಲಿದು ॥ ೩೦ ॥

ಹೊಱಗತಿನಯ ನುಂಪುವಡೆದ ಹಾವಸೆಗಲ್ಲ । ತೆಱದಂತೆ ರಚನೆಯ ನುಡಿದು ॥
ಮಱೆಮಾಡಿ ಮನುಜರ ಕೆಡಿಸಿ ಬಾಳುವ ಮರೆ । ಯಿಱಿಗಾಱರಿಲ್ಲ[2] ಪುರದೊಳು[3] ॥ ೩೧ ॥

ಸವಿನುಡಿಗಳ ಸಕಲರೊಳಾಡಿ ನೃಪತಿಯ । ಕಿವಿಯೊಳಿರಿಸಿ[4] ಕೊಂಡೆಯವ ॥
ತವೆ ಮನುಜರ ಕೆಡಿಸುವ ಪಿಸುಣರುಗಳಿ । ಲ್ಲವನಿಪನಾಳ್ವ ಪುರದೊಳು ॥ ೩೨ ॥

ಉಂಡೆಡೆಗೆರಡ ಬಗೆದು ಕೂಡಿದವರೊಳು । ಪಿಂಡಿ ಪುಳಿಯ ಬಾಳ್ವವರ ॥
ಕಂಡು ಕಱುಬಿ ಕಾಣಲಾರದೆ ನರಕದ । ಕೊಂಡಕಿಳಿವರಿಲ್ಲವಲ್ಲಿ ॥ ೩೩ ॥

ಕ್ರೂರರ ಕೃಪಣರ ಕೃಪೆಹೀನರ ಭೂ । ಭಾರರ ಶಠರ ವಂಚಕರ ।
ಜಾರರ ಚೋರರ ಜಡರ ದುರ್ಜನರ ಸಂ । ಚಾರವಿಲ್ಲಾ ಪುರದೊಳಗೆ ॥ ೩೪ ॥

ಮಾಸದ ಮನುಜರ ಮೈಸಿರಿ ಗಂಡು ಕ । ಟ್ಟಾಸುರದಿಂ ನೃಪಗವರ ।
ಲೇಸ ಮಱಸಿ ಪಿಸುಣ್ನುಡಿದು ಕೆಡಿಸಿ ಬಾಳ್ವ । ಭಾಸರಿಲ್ಲಾ ಲಂಕೆಯೊಳು[5] ॥ ೩೫ ॥

ಸಿರಿವಂತರು ಸಿಂಗರವಡೆದರು ಪರ । ಪುರುಷಾರ್ಥಿಗಳು ಬಲ್ಲವರು ॥
ಸರಸರು ಸನ್ಮಾರ್ಗಯುತರಲ್ಲದಾ ಪುರ । ವರದೊಳುಂಟೇ ಗಾಂಪರಬಲೆ ॥ ೩೬ ॥

ಪ್ರೀತಿಯಿಂದ ಕೇಳು ಆ ಲಂಕೆಯಲ್ಲಿ ಎಲ್ಲರೂ ನ್ಯಾಯಮಾರ್ಗದಲ್ಲೇ ನಡೆವವರಲ್ಲದೆ ಅನ್ಯಾಯ ಮಾಡಿ ಬದುಕುವಂತಹ ಹಾಸ್ಯಾಸ್ಪದರಾದ ಮುಖಂಡರು ಇಲ್ಲವೇ ಇಲ್ಲ ॥ ೩೦ ॥ ಹೊರಗಿನಿಂದ ಕಾಣುವಾಗ ಬಹಳ ನಯ ನುಣುಪುಗಳಿಂದ ತೋರುವ ಹಾವಸೆಕಲ್ಲಿನಂತೆ ಒಳ್ಳೆಯ ಮಾತನ್ನಾಡಿ, ಆ ಮೇಲೆ ತಮ್ಮ ವರ್ತನೆಯನ್ನು ಮರೆಗೊಳಿಸಿ. ಇತರ ಮನುಷ್ಯರನ್ನು ಕೆಡಿಸಿ ಬಾಳುವ ಮರೆಯಿರಿಗಾರರು (ಮರೆಯಾಗಿದ್ದು ತಿವಿವವರು) ಆ ಪಟ್ಟಣದಲ್ಲಿಲ್ಲ ॥ ೩೧ ॥ ಎಲ್ಲರಲ್ಲಿಯೂ ಮಧುರ ವಚನಗಳನ್ನಾಡಿ, ರಾಜನ ಕಿವಿಯಲ್ಲಿ ಚಾಡಿಮಾತುಗಳನ್ನಾಡಿ, ಮನುಷ್ಯರನ್ನು ಹಾಳುಮಾಡುವ ಚಾಡಿಗಾರರು ರಾಜನಾಳುವ ಆ ಪಟ್ಟಣದಲ್ಲೇ ಇಲ್ಲ ॥ ೩೨ ॥ ಉಂಡ ಕಡೆಗೆ ದ್ರೋಹವನ್ನು ಬಗೆದು, ಒಂದು ಗೂಡಿದವರೊಳಗೆ ಹುಳಿ ಹಿಂಡಿ, ಚೆನ್ನಾಗಿ ಬಾಳುವವರನ್ನು ಕಂಡು ಅಸೂಯೆಗೊಂಡು, ಅವರನ್ನು ಕಾಣಲು ಸಾಧ್ಯವಿಲ್ಲದವರಾಗಿ ನರಕದ ಹೊಂಡಕ್ಕೆ ಇಳಿಯುವವರು ಅಲ್ಲಿಲ್ಲ. ॥ ೩೩ ॥ ಆ ಪಟ್ಟಣದಲ್ಲಿ ಕ್ರೂರಿಗಳು, ಕೃಪಣರು, ನಿರ್ದಯರು, ಭೂಮಿಗೆ ಭಾರವಾಗಿರುವವರು, ದುಷ್ಟರು, ಮೋಸಗಾರರು, ಜಾರರು, ಕಳ್ಳರು, ತಿಳಿಗೇಡಿಗಳು, ಕೆಟ್ಟವರು–ಇಂಥವರ ಸಂಚಾರವೇ ಇಲ್ಲ. ॥ ೩೪ ॥ ಮಸುಕಾಗದಿರುವ ಮನುಷ್ಯರ ತೇಜಸ್ಸನ್ನು ಕಂಡು, ಹೆಚ್ಚಾದ ಮದದಿಂದ ರಾಜನ ಬಳಿಗೆ ಹೋಗಿ, ಅವರ ಒಳ್ಳೆಯ ಗುಣಗಳನ್ನು ಮರೆಮಾಡಿ, ಚಾಡಿ ಮಾತಾಡಿ, ಕೆಡಿಸಿ ಬಾಳುವ ಗೂಗೆಗೇಣೆಯಾದ ಜನರು ಆ ಲಂಕೆಯಲ್ಲಿಲ್ಲ ॥ ೩೫ ॥ ಎಲೈ ಚೇಳಿನಿಯೇ, ಆ ಪಟ್ಟಣದಲ್ಲಿ ಐಶ್ವರ್ಯವುಳ್ಳವರು, ಶೃಂಗಾರದಿಂದ ಕೂಡಿದವರು, ಪರೋಪಕಾರಿಗಳು, ಜ್ಞಾನಿಗಳು, ರಸಿಕರು, ಸನ್ಮಾರ್ಗವರ್ತಿಗಳು ಅಲ್ಲದೆ, ದಡ್ಡರೆನಿಸುವವರು ಯಾರೂ ಇಲ್ಲ, ॥ ೩೬ ॥ ಎಲೈ ಕಮಲಮುಖಿಯಾದ ಚೇಳಿನಿಯೇ ಕೇಳು ಆ ಪಟ್ಟಣದಲ್ಲಿ

[1] ನಾಯಕ ಬಾಶ (ಗ) [2] ಮಱೆಯರಿಗಾರರಿಲ್ಲ (ಗ) [3] ರಿಲ್ಲಪವಱೊಳು (ಚ) [4] ಕಿವಿಯೊಳುಸುರಿ (ಚ) [5] ಬಾಹ್ಯಾಭಾಸರಿಲ್ಲಾ ಪುರದೊಳಗೆ (ಚ) ೩೨ ಈ ಪದ್ಯ ಕ ದಲ್ಲಿಲ್ಲ

ಚದುರರು ಜಿನಭಕ್ತರು ಸಾಧುಗಳು ಮೃದು । ಹೃದಯರು ನಿರ್ವಂಚಕರು ।
ಸದಮಲ ಚರಿತರಲ್ಲದೆಯಿಲ್ಲವಂಬುಜ । ವದನೆ ಕೇಳಾ ನಗರದೊಳು ॥ ೩೭ ॥

ಬೆಲೆವೆಣ್ಣು ಬೆಸವೆಣ್ಣು ಬಿಡುವೆಣ್ಣು ಮನೆವೆಣ್ಣು । ನೆಲೆವೆಣ್ಣುಗಳ ಸಂದಣಿಯಿಂ ।
ಲಲನೆ ಕೇಳಾ ಪುರ ಸಿರಿಸಿಂಗರ ಕಲೆ[1] । ನೆಲೆವನೆಯಾಗಿ ರಾಜಿಪುದು ॥ ೩೮ ॥

ಬಡನಡುವಿನ[2] ಬಡಬಾಸೆಯ ಬಡಬಡ । ನುಡಿಗಳ[3] ನಳಿನವದನದ ॥
ನಿಡುಗಣ್ಣ ನಿಡುಮುಡಿಗಳ ನೀಱೆಯರ ವಂ । ಗಡವಿರಲೆಸೆದುದಾ[4] ನಗರಿ ॥ ೩೯ ॥

ನಳಿತೋಳ ನಳಿನವದನದೆಳಲತೆ ಮೈಯ । ನಳನಳಿಪೆಳೆವಾಳೆದೊಡೆಯ ।
ತೊಳಪ ಕಂಗಳ ತೋರ ಮೊಲೆಯ ಪೆಣ್ಗಳ ತಂಡ । ವೆಳಸಲೆಳಸಿತಾ ಪೊಳಲು ॥ ೪೦ ॥

ಜಾಣೆಯರಿಂದ ಜವ್ವನೆಯರಿಂ ಜಸವೆತ್ತ । ವೀಣಾಲಾಪೆಯರಿಂದ ।
ಏಣನಯನೆಯರಿಂದೆಸೆದುದಾ ಪುರ ಪಂಚ । ಬಾಣನ ಬಯಕೆಯಾಗರವೆ[5] ॥ ೪೧ ॥

ಘಟ್ಟಿಮಗುಳ್ಚುವರಿಂದ ಪೂಮಾಲೆಯ । ಕಟ್ಟಿ ಜನರಿಗೊಲಿದೀವ ।
ನಿಟ್ಟೆಸಳ್ಗಣ್ಣ ನೀಱೆಯರಿಂದೆಸೆದುದಾ । ಪಟ್ಟಣ ಪದ್ಮದಳಾಕ್ಷಿ ॥ ೪೨ ॥

ಕಡೆಯಿಲ್ಲದ ಶಾಂತರಸವ ಬಲಿಸಿ[6]ಯಜ । ಕಡೆದು[7] ಕಂಡರಿಸಿದಂದದೊಳು ॥
ಬಿಡದೊಪ್ಪುತಿರ್ಪುವಾ ನಗರದ ಕೇರಿಗ । ಳೆಡೆಯೊಳು ಜಿನಮಂದಿರಗಳು ॥ ೪೩ ॥

ಪರಮನ ಮೋಗಣ ಪರಮಭಕ್ತಿಯೊಳಜ । ನುರುತರ ನವರತ್ನದಿಂದ ।
ಪಿರಿದಾದ ಕರಕುಶಲದೊಳು ರಚಿಸಿದಂತೆ । ವರಜಿನಗೃಹಗಳೊಪ್ಪಿದವು ॥ ೪೪ ॥

---

ಚಾತುರ್ಯವುಳ್ಳವರು, ಜಿನಭಕ್ತರು, ಸಾಧುಗಳು, ದಯಾಶೀಲರು, ಮೋಸವಿಲ್ಲದವರು, ಒಳ್ಳೆಯ ನಿರ್ಮಲವಾದ ವರ್ತನೆಯುಳ್ಳವರು ಅಲ್ಲದೆ ಇತರರು ಇಲ್ಲ. ॥ ೩೭ ॥ ಮಡದಿಯೇ ಕೇಳು ಆ ಪಟ್ಟಣವು ಬೆಲೆವೆಣ್ಣು (ಸೂಳೆ), ಕೆಲಸಹೆಣ್ಣು, ಬಿಡುವೆಣ್ಣು, ಮನೆಹೆಣ್ಣು, ನೆಲೆಹೆಣ್ಣು – ಮುಂತಾದ ಸ್ತ್ರೀವರ್ಗದಿಂದ ಸಂಪತ್ತು – ಶೃಂಗಾರ – ಕಲೆಗಳಿಗೆ ನೆಲೆಮನೆಯಾಗಿ ಶೋಭಿಸುವುದು. ॥ ೩೮ ॥ ತೆಳುವಾದ ಹೊಟ್ಟೆಯ, ತೆಳುವಾದ ಉದರರೋಮಪಂಕ್ತಿಯ, ತವಕದಿಂದಾಡುವ ಮಾತಿನ, ತಾವರೆಯಂತಹ ಮುಖದ, ನೀಳವಾದ ಕಣ್ಣಿನ, ಉದ್ದವಾದ ತಲೆಗೂದಲಿನ ಸುಂದರಿಯರ ವೃಂದದಿಂದ ಆ ನಗರವು ಶೋಭಿಸಿತು. ॥ ೩೯ ॥ ನಯವಾದ ಕೈಯ, ಹೊಳೆಯುತ್ತಿರುವ ಎಳತಾದ ಬಾಳೆಯಂತಿರುವ ತೊಡೆಯ, ಹೊಳೆಯುವ ಕಣ್ಣುಗಳ, ದಪ್ಪನಾದ ಮೊಲೆಗಳ ಹೆಂಗುಸರ ಸಮೂಹದಿಂದ ಆ ಪಟ್ಟಣವು ಶೋಭಿಸಿತು ॥ ೪೦ ॥ ಎಲೈ ಮನ್ಮಥನ ಇಷ್ಟಕ್ಕೆ ಆಶ್ರಯಳಾದ ಚೆಲುವೆಯೇ, ಆ ಪಟ್ಟಣವು ಚೆನ್ನಾಗಿ ತಿಳಿದಂತಹ, ಯೌವನದಿಂದ ಕೂಡಿದಂತಹ, ಪ್ರಖ್ಯಾತವಾದ ವೀಣೆಯ ಆಲಾಪವುಳ್ಳಂತಹ, ಮೃಗನೇತ್ರೆಯರಿಂದ ಶೋಭಿಸಿತು. ॥ ೪೧ ॥ ಆ ಪಟ್ಟಣವು ಗಂಧ ತೇಯುವ, ಹೂವನ್ನು ಮಾಲೆ ಕಟ್ಟಿ ಪ್ರೀತಿಯಿಂದ ಜನರಿಗೆ ಮಾರುವ, ಉದ್ದವಾದ ಹೂವಿನ ಎಸಳಿನಂತಹ ಕಣ್ಣುಳ್ಳ ಸುಂದರಿಯರಿಂದ ಶೋಭಿಸಿತು. ॥ ೪೨ ॥ ಆ ನಗರದ ಬೀದಿಗಳ ಎಡೆಗಳಲ್ಲಿ ಜಿನಾಲಯಗಳಿದ್ದುವು ಬ್ರಹ್ಮನು ಕೊನೆಯೇ ಇಲ್ಲದಂತಹ ಶಾಂತರಸವನ್ನೇ ಗಟ್ಟಿಗೊಳಿಸಿ, ಕಡೆದು ಕಂಡರಿಸಿದ ರೀತಿಯಲ್ಲಿ ಯಾವಾಗಲೂ ಅವು ಶೋಭಿಸುತ್ತಿರುವವು. ॥ ೪೩ ॥ ಬ್ರಹ್ಮನು ಜಿನೇಂದ್ರನ

---

[1] ರತಿ (ಗ). [2] ಬಿಡುನುಡಿಗಳ (ಗ). [3] ನಡುವಿನ (ಗ.ಚ) [4] ವಂಗಡದಿನೆಸೆದುದಾ (ಚ) [5] ಬಯಕೆಯಾರಣವೆ (ಗ) [6] ಬಲಿಸಿ (ಗ). [7] ಕಡದು (ಕ),

ಪಳುಕು[1] ಪವಳ ಪಚ್ಚೆ ನುತ ಪದ್ಮರಾಗ ಸ । ದ್ವಿಳಸಿತ ನೀಲ ಕೆಂಗಲ್ಲ ।
ತೊಳಪ ಮುತ್ತಿನ ಜಿನಬಿಂಬಂಗಳಾ ಜಿನ । ನಿಳಯದೊಳೆಸೆದವಬ್ಜಾಕ್ಷಿ ॥ ೪೫ ॥

ನುತಿಪ ನತಿಪ ನರ್ತಿವಾನಂದಿಪ ಭವ್ಯ । ತತಿಯಘಕುಲ ಸಂತತಿಯ ॥
ಹತಿಪ ಪರಂಜ್ಯೋತಿ ಪರವಸ್ತುಗಳ ಪ್ರತಿ । ಕೃತಿಗಳೊಪ್ಪಿದವಂದಲ್ಲಿ ॥ ೪೬ ॥

ಚರಿತೆ ಪುರಾಣಾಗಮ ತರ್ಕಶಾಸ್ತ್ರ ವ್ಯಾ । ಕರಣ ಛಂದೋಲಂಕಾರಗಳ ॥
ನಿರವಿಪ ಮುನಿಗಳಿಂ ಪಂಡಿತರಿಂ ಕೇಳ್ವ । ಗರುವರಿಂದೆಸೆದುದಾ ನಿಳಯ ॥ ೪೭ ॥

ಕೇರಿಕೇರಿಯ ಮನೆಮನೆಯಂಗಣದ ಸಿರಿ । ದಾರದ[2] ಮುಂಗಡೆ ನಿಂದು ॥
ವೀರ ಭಾವರಿಯನಿಕ್ಕುವ[3] ಮುನಿಗಳ ಭವ್ಯ । ರಾರೈವರಾ ನಗರದೊಳು ॥ ೪೮ ॥

ಪೊಸ ವಸ್ತುಗಳು ಬಂದೊಡಾ ಯತಿಗಳಿಗ । ರ್ಜಿಸಿ ಕೈಕೊಂಬರೊಳ್ಳೂಣಿಸ ॥
ಒಸೆದಿತ್ತು ಶೇಷಾನ್ನವ ಕೊಂಡು ಬಾಳ್ವ ಮಾ । ನಸರಲ್ಲದಿಲ್ಲ ಗಾವಿಲರು ॥ ೪೯ ॥

ಪೆಡತಲೆಗೈದಿದ ಕಣ್ಣು ಬೆನ್ನನು ಪತ್ತಿ । ದೊಡಲೆಡೆವಿಡದಂಗ[4]ದೊಳಗೆ ॥
ಅಡಸಿದ ಮಣ್ಣೆಸೆದಿರೆ[5] ಮುನಿವರರುಗ । ಳಡವಿಯಿಂ ಚರಿಗೆಗೈದುವರು[6] ॥ ೫೦ ॥

ಕಾಡೊಳಗಣ[7] ಕ್ರೂರ ಮೃಗವಾ[8]ಯತಿಯೊಡ । ಗೂಡಿ ಬರಲು ಪುರಜನರು ॥
ನೋಡಿ ಕೌತುಕವಡುತಿರ್ಪರಂದವನೊಡ[9] । ಗೂಡಿದ ಶಾಂತವಿನ್ನೆಂತೊ ॥ ೫೧ ॥

---

ಮೇಲಿನ ಅತ್ಯಂತವಾದ ಭಕ್ತಿಯಿಂದ, ಅತಿಶಯವಾದ ನವರತ್ನಗಳಿಂದ, ಹೆಚ್ಚಿನ ಕೈಯ ಕುಶಲತೆಯಿಂದ ನಿರ್ಮಾಣಮಾಡಿದನೋ ಎಂಬಂತೆ ಶ್ರೇಷ್ಠವಾದ ಜಿನಮಂದಿರಗಳು ಅಲ್ಲಿ ಶೋಭಿಸಿದವು ॥ ೪೪ ॥ ಎಲೈ ಚೇಳಿನಿಯೇ, ಆ ಜಿನಾಲಯಗಳಲ್ಲಿ ಬಿಳಿಶಿಲೆ, ಹವಳ, ಪಚ್ಚೆ, ಪದ್ಮರಾಗ, ನೀಲ, ಕೆಂಪುಕಲ್ಲು, ಹೊಳೆವ ಮುತ್ತು – ಎಂಬವುಗಳಿಂದ ಶೋಭಿಸುವ ಜಿನಪ್ರತಿಮೆಗಳು ಮೆರೆಯುತ್ತಿದ್ದವು. ॥ ೪೫ ॥ ಸ್ತುತಿಸುವ, ನಮಸ್ಕರಿಸುವ, ಕುಣಿಯುವ, ಆನಂದಪಡುವ ಸತ್ಪುರುಷರ ಸಮೂಹದ ಪಾಪ ಸಮೂಹವನ್ನು ನಾಶಗೊಳಿಸುವಂತಹ ಪರಂಜ್ಯೋತಿ ಪರಮಾತ್ಮವಸ್ತುಗಳ ಪ್ರತಿಮೆಗಳು ಅಲ್ಲಿದ್ದುವು ॥ ೪೬ ॥ ಆ ಜಿನಾಲಯವು ಚರಿತೆ, ಪುರಾಣ, ಧರ್ಮಶಾಸ್ತ್ರ, ತರ್ಕಶಾಸ್ತ್ರ, ವ್ಯಾಕರಣ, ಛಂದಸ್ಸು. ಅಲಂಕಾರ—ಮುಂತಾದುವನ್ನು ನಿರೂಪಣೆಮಾಡುವ ಮುನಿಗಳಿಂದಲೂ, ವಿದ್ವಾಂಸರಿಂದಲೂ, ಇವನ್ನೆಲ್ಲಾ ಕೇಳತಕ್ಕ ಗೌರವ ಶಾಲಿಗಳಿಂದಲೂ ಶೋಭಿಸಿತು. ॥ ೪೭ ॥ ಭವ್ಯಜನರು ಬೀದಿಬೀದಿಯ ಮನೆಮನೆಯ ಅಂಗಳದ ಶ್ರೀದ್ವಾರದ ಮುಂದುಗಡೆ ನಿಂತುಕೊಂಡು, ವೀರಭಾವರಿಯನ್ನು ಇಕ್ಕುವ ಜಿನಮುನಿಗಳನ್ನು ಪ್ರತೀಕ್ಷಿಸುವರು, ॥ ೪೮ ॥ ಆ ಪಟ್ಟಣದ ಜನರು ತಮಗೆ ಹೊಸ ವಸ್ತುಗಳೇನಾದರೂ ದೊರೆತರೆ ಅವನ್ನು ಮೊದಲು ಮುನಿಗಳಿಗೆ ಕೊಟ್ಟು. ಮತ್ತೆ ಸ್ವೀಕಾರ ಮಾಡುವರು ಉತ್ತಮ ಭೋಜನವನ್ನು ಋಷಿಗಳಿಗಿತ್ತು ಉಳಿದ ಅನ್ನವನ್ನು ಸೇವಿಸಿ ಬಾಳುವರು ಇಂಥವರಲ್ಲದೆ ಜಡಮತಿಗಳಾದ ಜನರು ಅಲ್ಲಿಲ್ಲ ॥ ೪೯ ॥ ಕಾಡಿನಲ್ಲಿ ತಪದಲ್ಲಿದ್ದ ಋಷಿಗಳು ಹಿಂದಲೆ ತನಕ ಗುಳಿಬಿದ್ದ ಕಣ್ಣುಳ್ಳವರಾಗಿ, ಬೆನ್ನಿಗೆ ಅಂಟಿದ ಹೊಟ್ಟೆಯುಳ್ಳವರಾಗಿ, ಸರ್ವಾಂಗವೂ ಮಣ್ಣಿನಿಂದ ಕೂಡಿದವರಾಗಿ ಕಾಣಿಸಿಕೊಂಡು ಅನ್ನಭಿಕ್ಷೆಗಾಗಿ ಆ ಪಟ್ಟಣಕ್ಕೆ ಬರುವರು ॥ ೫೦ ॥ ಕಾಡಿನ ಯತಿಯು ಅನ್ನಭಿಕ್ಷೆಗಾಗಿ ನಾಡಿಗೆ ಬರುವಾಗ ಆ ಕಾಡಿನ ಕ್ರೂರಮೃಗವೂ ಆತನೊಡನೆ ಬರುವುದು ಇದನ್ನು ನೋಡಿ ಪಟ್ಟಣಿಗರು ಆ

---

[1] ಪಳಿಕು (ಚ) [2] ಸಿರಿದ್ವಾರದ (ಗ) [3] ಬಾವಲಿಯಿಕ್ಕುವ (ಕ) ಬಾವಲಿಗಳಿಕ್ಕುವ (ಚ) [4] ವಿಡಿದಂಗ (ಗ ಚ) [5] ಮಣ್ಣೆಸೆದಿಹ (ಗ) ಮಣ್ಣೆಸದಿರೆ (ಕ) [6] ಚರಿಗೆಗೈದುವರು (ಕ) ಚರಿಗೆಗೈದಿದರು (ಚ) [7] ಕಾಡೊಳಗಳ (ಕ) [8] ಮೃಗದಾ (ಕ) [9] ತಿರ್ಪರೆಂದವನೊಡ (ಕ)

ಗಂಡವಿಮುಕ್ತರ[1] ಕಂಡು ನಲಿದು ಮುಂ । ಕೊಂಡು ನಿಲಿಸಿ ತಂದು[2] ಮನೆಗೆ ।
ಕೊಂಡೊಯ್ದುಣಲಿತ್ತು ಕಳುಪುವ ಭವ್ಯರ । ತಂಡವಾ ಪುರದೊಳೊಪ್ಪಿದುದು[3] ॥ ೫೨ ॥

[ನಡೆತರ್ಪ ಯತಿಯ][4] ಕಾಣುತ ಭಕ್ತಿಯಿಂ ಪೋಗಿ । ತಡೆದುಣಲಿತ್ತು ಸದ್ಗತಿಯ ॥
ಪಡೆವ ಭವ್ಯರುಗಳಲ್ಲದೆಯಭವ್ಯತೆಯಿಂದ । ಕೆಡುವವರಿಲ್ಲ ಲಂಕೆಯೊಳು ॥ ೫೩ ॥

ಅಲ್ಲಲ್ಲಿ ವಿದ್ಯಾಗೋಷ್ಠಿ ವಿನೋದಗ । ಳಲ್ಲಲ್ಲಿ ಕವಿ ವಾದಿಗಳ ॥
ಸೊಲ್ಲು ಸೊಗಸುವಾತಿಲ್ಲದ ಕೇರಿಗ । ಳಿಲ್ಲವಾ ಪುರದೊಳಗಬಲೆ ॥ ೫೪ ॥

ಅಲ್ಲಲ್ಲಿ ಯೊಸಗೆವಾಡೊಸಗೆದೋರಣ[5] ಮ । ತ್ತಲ್ಲಲ್ಲಿಯೊಸಗೆಯ ವಾದ್ಯ ॥
ಅಲ್ಲಲ್ಲಿ ಮಂಗಳ ಗಾನವಿಲ್ಲದ ಮನೆ । ಯಿಲ್ಲವಾ ನಗರದೊಳಬಲೆ ॥ ೫೫ ॥

ಅಲ್ಲಲ್ಲಿ ಸಾದಿನ ಸಾರಣೆ ಪೂವಲಿ । ಯಲ್ಲಲ್ಲಿ ಪನಿನೀರ ಚಳೆಯ ॥
ಅಲ್ಲಲ್ಲಿ ಮುತ್ತಿನ ರಂಗವಲಿಗಳಿರ್ಪ । ವಿಲ್ಲದ ಬೀದಿಗಳಿಲ್ಲ[6] ॥ ೫೬ ॥

ನಿಟ್ಟಿಸುವರ ಕಣ್ಣ ಬಱ ಬಱೆವುದು ಮೇಲೆ । ಪುಟ್ಟುವುದೆರ್ದೆಗೆ ಸಂತಸವ ।
ಕಟ್ಟಿದಿರೊಳು ಸಿರಿ ಕಣ್ದೆಱೆವಂತಾ[7] । ಪಟ್ಟಣವಿಹುದಂಬುಜಾಕ್ಷಿ ॥ ೫೭ ॥

ದಳಪತಿಗಳ ಮಂತ್ರಿಗಳ ಮನ್ನೆಯ ಮಂ । ಡಳಿಕರ ಸಾಮಂತರುಗಳ ॥
ಅಳಿಯಂದಿರರಮಕ್ಕಳ ಕೇರಿ ಬಳಸಿರ । ಲೆಳಸಿದುದಾ ರಾಜನಿಳಯ ॥ ೫೮ ॥

---

ಯತಿಯ ಶಾಂತಗುಣಕ್ಕಾಗಿ ಆಶ್ಚರ್ಯಪಡುವರು. ॥ ೫೧ ॥ ಗಂಡಾಂತರದಿಂದ ಬಿಡುಗಡೆ ಹೊಂದಿರುವ ಇಂತಹ ಜಿನಮುನಿಗಳನ್ನು ಕಂಡೊಡನೆ ಸಂತೋಷಗೊಂಡು, ತಮ್ಮ ಮನೆಗೆ ಕರೆತಂದು, ಭೋಜನವನ್ನಿತ್ತು ಕಳುಹಿಸುವ ಭವ್ಯರ ಸಮೂಹವು ಆ ಪಟ್ಟಣದಲ್ಲಿ ಇತ್ತು. ॥ ೫೨ ॥ ಆ ಪಟ್ಟಣದ ಭವ್ಯರು ನಡೆದುಕೊಂಡು ಬರುವ ಜಿನಮುನಿಯನ್ನು ಕಂಡೊಡನೆ ಭಕ್ತಿಯಿಂದ ಬಳಿಗೆ ಹೋಗಿ, ಕರೆತಂದು ನಿಲ್ಲಿಸಿ ಭೋಜನವನ್ನಿತ್ತು ಸದ್ಗತಿಯನ್ನು ಪಡೆಯುವರು. ಇಂಥವರಲ್ಲದೆ ಅಭವ್ಯ ವರ್ತನೆಯಿಂದ ಕೆಟ್ಟುಹೋಗುವ ಜನರು ಅಲ್ಲಿಲ್ಲ. ॥ ೫೩ ॥ ಎಲೈ ಚೇಳಿನಿಯೇ. ಆ ಪಟ್ಟಣದ ಬೀದಿಗಳಲ್ಲಿ ಅಲ್ಲಲ್ಲಿ ವಿದ್ಯೆಗೆ ಸಂಬಂಧಿಸಿದ ಸಭೆಗಳೂ, ಮನೋರಂಜನೆಗಳೂ, ಅಲ್ಲಲ್ಲಿ ಕವಿಗಳ ಮಾತುಗಳೂ. ವಾದಿಗಳ ಸೊಗಸಿನ ಮಾತುಗಳೂ. ಇದ್ದೇ ಇರುತ್ತವೆ. ॥ ೫೪ ॥ ಆ ನಗರದಲ್ಲಿ ಅಲ್ಲಲ್ಲಿ ಶೋಭನಗೀತಗಳು. ಮಂಗಳತೋರಣಗಳು, ಮಂಗಳವಾದ್ಯಗಳು, ಮಂಗಳ ಗಾನಗಳು ಇಲ್ಲದಿರುವ ಮನೆಗಳೇ ಇಲ್ಲ. ॥ ೫೫ ॥ ಆ ಬೀದಿಗಳಲ್ಲಿ ಎಲ್ಲಿ ನೋಡಿದರೂ ಅಲ್ಲಲ್ಲಿ ಪರಿಮಳ ವಸ್ತುಗಳ ಸಾರಣೆಗಳೂ, ಹೂವಿನ ಅರ್ಪಣೆಗಳು. ಅಲ್ಲಲ್ಲಿ ಪನ್ನೀರಿನ ಸೇಚನೆಗಳು, ಅಲ್ಲಲ್ಲಿ ಮುತ್ತಿನ ರಂಗೋಲಿಗಳು ಕಾಣಿಸುವವು. ಇವು ಇಲ್ಲದಿರುವ ಬೀದಿಗಳೇ ಇಲ್ಲ. ॥ ೫೬ ॥ ಅಲ್ಲಿ ನೋಡುವವರ ಕಣ್ಣಿನ ಬರಗಾಲವು ಪರಿಹಾರಗೊಳ್ಳುವುದು, ಅಲ್ಲದೆ ಮನಸ್ಸಿಗೆ ಸಂತೋಷವುಂಟಾಗುವುದು. ಆ ಪಟ್ಟಣವು ನಮ್ಮ ಕಣ್ಣೆದುರಿನಲ್ಲಿ ಲಕ್ಷ್ಮೀದೇವಿಯು ಕಣ್ಣುತೆರೆದು ನಿಂತ ಹಾಗೆ ಕಾಣಿಸುವುದು ॥ ೫೭ ॥ ಆ ನಗರದಲ್ಲಿರುವ ಅರಮನೆಯು ಸೇನಾಪತಿಗಳ, ಮಂತ್ರಿಗಳ. ಜನನಾಯಕರ, ಮಂಡಲಾಧಿಪತಿಗಳ, ಸಾಮಂತರಾಜರ, ಅಳಿಯಂದಿರ, ರಾಜಕುಮಾರರ ಬೀದಿಗಳಿಂದ ಆವೃತವಾಗಿ, ಆಸೆ ಹುಟ್ಟಿಸುವಂತಿದೆ. ॥ ೫೮ ॥ ಎಲೈ ಚೇಳಿನಿಯೇ ಆ ಅರಮನೆಯು ನೇರುವೆಗಾರರ. ಶಾಸುಭಾಗರ. ಆನೆ ಕುದುರೆಗಳನ್ನಿಟ್ಟುಕೊಂಡಿರುವವರ. ಬೀದಿಗಳ

---

[1] ದಂಡವಿಮುಕ್ತರ (ಗ) [2] ತಮ್ಮ (ಗ ಚ.). [3] ಳೊಪ್ಪಿದವು (ಗ). [4] ನಡೆದು ಬರ್ಪತಿಯ (ಕ ಗ ಚ.) [5] ವಸಗೆವಾಡೊಸಗೆ ದೋರಣ (ಗ) ಯೊಸವ ವಾಡೊಸಗ ದೋರಣ (ಚ) [6] ಬೀದಿಗಳಿಲ್ಲ (ಗ). [7] ಕಣ್ದೆಱೆದಂತಾ (ಚ).

ಸೇರುವೆಗಾಱಿರ ಶ್ಯಾನಭಾವರ[1] ಬಲು । ವಾರಣ ವಾಜಿ ವಾಹಕರ ॥
ಕೇರಿ ಕೇರಿಗಳ ಮಧ್ಯದೊಳು ಕಣ್ಗೆಸೆದುದಂ । ದಾ ರಾಜನಿಳಯವಬ್ಜಾಕ್ಷಿ ॥ ೫೯ ॥

ಸಾಲುವಿಡಿದ ನೆಲೆವಾಡಗಳಿಂ ಚಿತ್ರ । ಶಾಲೆ ನಾಟಕ ಶಾಲೆಗಳಿಂ ॥
ಲೀಲಾಗೃಹಗಳಿಂದರಮನೆ ಕಣ್ಗತಿ । ಲೀಲೆಯುನಿರದೆ ಪುಟ್ಟಿಪುದು ॥ ೬೦ ॥

ರನ್ನದ ಗೋಪುರನಿಚಯಗಳಿಂ ಪೊಸ । ಪೊನ್ನ ಬಾಗಿಲ್ವಾಡದಿಂದ[2] ॥
ಮುನ್ನೇಸಱಂತೆ ಪೊಳೆವ ಕಲಶಗಳಿಂದ[3] । ಮನ್ನಣೆವಡೆದುದಾ ನಿಳಯ ॥ ೬೧ ॥

ಅಂಬರ ಮುಟ್ಟೆ ಕಟ್ಟಿದ ಕೇತನದ ದುಗು । ಲಾಂಬರದಿಂದಲ್ಲಲ್ಲಿ ॥
ಚೆಂಬೊನ್ನಕಳಸವಿಕ್ಕಿದ[4] ಕುನಕಗಳಿಂ[5] । ದಿಂಬಾದುದು ಕಣ್ಗಬಲೆ ॥ ೬೨ ॥

ಮಜ್ಜನಮನೆ ಮಂತ್ರಾಲಯ ರಾಜಿಪ[6] । ಸೆಜ್ಜೆಯ ನಿಲಯ ಕೀಲಣೆಯ[7] ॥
ಉಜ್ಜುಗಿಸಿದ ಬಳ್ಳಿವಾಡಗಳಿಂದಂದು । ಪಜ್ಜಳಿಸಿದುದಾ ನಿಳಯ[8] ॥ ೬೩ ॥

ಈ ಪರಿಯೊಳಗೊಪ್ಪವಡೆದರಮನೆಯೊಳು । ಶ್ರೀಪತಿಸುತಗೈವಡಿಯ ॥
ರೂಪಿನಿಂದೆಸೆದನು[9] ರಾವಣನೆಂದೆಂಬ । ಭೂಪತಿಯತಿವಿಭವದೊಳು ॥ ೬೪ ॥

ಅವನ ಸಿರಿಯನವನುರುವಿಕ್ರಮಕಿ । ನ್ನವನ ಜಯಕೆ ಬಳಿಕವನ
ಅವಯವ ಸೌಂದರ್ಯಕೆ ಕೀರ್ತಿಗೆ ಪೇಳ್ವೊ । ಡವನಿಯೊಳೆಣೆಯಿಲ್ಲವಬಲೆ ॥ ೬೫ ॥

ಸಿರಿಯಿರವೆಂತೊ ಕುಬೇರನವನ ಬಂದು । ಪರಪತಿಯನು[10] ಬೇಡುವನು ॥
ಅರಸಾಜ್ಞೆಯೆಂತನ್ಯದಿಕ್ಪಾಲಕರವ । ಸರವ ಕಾದಿಹರನವರತ ॥ ೬೬ ॥

---

ನಡುವೆ ಕಣ್ಣಿಗೆ ಶೋಭಿಸುತ್ತಿರುವುದು ॥ ೫೯ ॥ ಸಾಲು ಸಾಲಾಗಿರುವ ನೆಲೆಮನೆಗಳಿಂದಲೂ ಚಿತ್ರಶಾಲೆಗಳಿಂದಲೂ ನಾಟಕಶಾಲೆಗಳಿಂದಲೂ ಮನೋರಂಜನಾ ಶಾಲೆಗಳಿಂದಲೂ ಆ ಅರಮನೆಯು ಕಣ್ಣಿಗೆ ಚೆಲುವಾಗಿ ಕಾಣಿಸುವುದು ॥ ೬೦ ॥ ರತ್ನದ ಗೋಪುರ ಸಮೂಹದಿಂದಲೂ ಹೊಸ ಚಿನ್ನದ ಬಾಗಿಲುಗಳಿರುವ ಮನೆಗಳಿಂದಲೂ, ಬಾಲಸೂರ್ಯನಂತೆ ಹೊಳೆಯುವ ಕಲಶಗಳಿಂದಲೂ ಆ ಅರಮನೆಯು ಗೌರವಯುತವಾಗಿ ಕಾಣಿಸುವುದು ॥ ೬೧ ॥ ಎಲೈ ಚೇಳಿನಿಯೇ, ಆಕಾಶವನ್ನು ತಗಲುವಂತೆ ಎತ್ತರವಾಗಿ ಕಟ್ಟಿರುವ ಪತಾಕೆಯ ಪಟ್ಟೆವಸ್ತ್ರವು ಅಲ್ಲಲ್ಲಿ ಕಾಣಿಸುವ ಕೆಂಪುಚಿನ್ನದ ಕಲಶದಿಂದಲೂ ಹಾಕಿದ ತುದಿಯುಂಗುರದಿಂದಲೂ ಕಣ್ಣಿಗೆ ಸೊಗಸಾಯಿತು ॥ ೬೨ ॥ ಆ ಅರಮನೆಯು ಸ್ನಾನಶಾಲೆ, ಮಂತ್ರಶಾಲೆಗಳಿಂದಲೂ, ಬಾಗಿಲು ಕೀಲುಗಳಿಂದ ಕೂಡಿದ ಶಯ್ಯಾಗೃಹದಿಂದಲೂ ನಾಲಾಗಿರುವ ಉಪ್ಪರಿಗೆಗಳಿಂದಲೂ ಹೊಳೆಯುತ್ತಿರುವುದು ॥ ೬೩ ॥ ಈ ರೀತಿಯಾಗಿ ಒಪ್ಪುತ್ತಿರುವ ಅರಮನೆಯಲ್ಲಿ ರಾವಣನೆಂಬ ರಾಜನು ಬಹಳ ವೈಭವದಿಂದ ಇರುವನು ಅವನು ರೂಪದಲ್ಲಿ ಮನ್ಮಥನಿಗೆ ಐದು ಮಡಿ ಮಿಗಿಲಾಗಿರುವನು ॥ ೬೪ ॥ ಭೂಲೋಕದಲ್ಲಿ ಆ ರಾವಣನ ಐಶ್ವರ್ಯಕ್ಕೂ ಪರಾಕ್ರಮಕ್ಕೂ, ಗೆಲವಿಗೂ, ದೇಹಸೌಂದರ್ಯಕ್ಕೂ, ಪ್ರಖ್ಯಾತಿಗೂ ಎಣೆಯಿಲ್ಲ ॥ ೬೫ ॥ ಅವನ ಐಶ್ವರ್ಯವೆಂಥದೋ !

---

[1] ಸೇನಬಾಪರ (ಗ) ಸೇನಬೋವರ (ಚ) [2] ಬಾಗಿಲ್ವಾಡಗಳಿಂ (ಗ ಚ) [3] ಕಳಸಗಳಿಂದ (ಗ ಚ) [4] ಕಲಸವಿಕ್ಕಿದ (ಕ) [5] ಕುರುಜುಗಳಿಂ (ಗ) [6] ಮಂತ್ರಶಾಲೆ ರಾರಾಜಿಪ (ಗ) [7] ಕೀಲಣೆಯಿಂ (ಚ) ಕೀರಣೆಯಿಂ (ಕ) [8] ಭವನ (ಗ ಚ) [9] ರೂಪಿನಿಂದೆಸೆವನು (ಗ) [10] ಪರಪತಿಯನು (ಗ),

ಪರದೇಶದರಸುಗಳವನ ಕಾಣ್ಕೆಗೆ ತಂದ । ಕರಿತುರಗಾದಿ ವಸ್ತುಗಳು ॥
ನೆರೆದರಮನೆಯ ಬಾಗಿಲೊಳಾವ ಕಾಲದೊ । ಳಿರುತಿರ್ಪರಂಬುಜನೇತ್ರೆ[1]　॥ ೬೭ ॥

ಅವನಿಯೊಳುಳ್ಳವನೀಶರ ಚರರುಗ । ಳವನವಸರಗೇಳ್ವ[2] ಪೇಳ್ವ ॥
ರವವೊಪ್ಪಿತು ಶರಧಿಯ ಘೋಷವೆಂಬಂ । ತವನ ಸಿರಿಯನೇನನೆಂಬೆ　॥ ೬೮ ॥

ಉರುಭುಜವೆಂಬ ರಕ್ಕಸಿ ಪಗೆರಾಯರ । ಹರಣವ ನುಂಗುವೆನೆಂದು ॥
ಭರದೆ[3] ನೀಡಿದ ನಾಲಗೆಯಂತವನ[4] ಚೆಲ್ವ । ಕರದ ಕೂರಸಿಯೊಪ್ಪಿದುದು　॥ ೬೯ ॥

ಧುರಧರಣಿಯೊಳಿದಿರಾದರಿರಾಯರ । ನೆರಪಿದ ನೆಲವೆಣ್ಣೊಳವಳ್[5] ॥
ಪುರುಷನಾದನು ಬಳಿಕಾ ನೃಪಲೋಕದ । ನರಪತಿಗಳಿಗುಂಟೆ ಲಜ್ಜೆ　॥ ೭೦ ॥

ಛಪ್ಪನ್ನ ದೇಶದರಸುಗಳ ಮನುಜರು । ಕಪ್ಪವ ತಂದು ಭೀತಿಯೊಳು ॥
ಒಪ್ಪಿಸಲೊಪ್ಪುವ ಬಾರದರಸುವಿಗೆ । ಮುಪ್ಪು ತಹನು ರಾವಣನು　॥ ೭೧ ॥

ಅಷ್ಟದಿಕ್ಪಾಲಕರುಗಳವನಿಯೊಳುಳ್ಳ । ದುಷ್ಟ ರಾಕ್ಷಸನೃಪವರರು[6] ॥
ಸೃಷ್ಟಿಯಜೀಯೆ ಬೆಸಕೈವರಾ ಭೂಪನ । ಧೃಷ್ಟತೆಯನು ಪೇಳ್ವೆನೇನ[7]　॥ ೭೨ ॥

ಪೆಸರ ಹಿಡಿಯಲಮ್ಮರು ರಾವಣನಿರ್ದ । ದೆಸೆಯ ನಿಟ್ಟಿಸರು ಸವನವ ॥
ಎಸಗಲಮ್ಮರು ಪಗೆರಾಯರವನ ಸಾ । ಹಸವನೇನೆಂಬೆನಬ್ಜಾಕ್ಷಿ　॥ ೭೩ ॥

---

ಕುಬೇರನು ಅವನ ಬಳಿಗೆ ಬಂದು ಪಾರುಪತ್ಯವನ್ನು ಬೇಡುತ್ತಿರುವನು ಇತರ ದಿಕ್ಪಾಲಕರು ಬಂದು ಯಾವಾಗಲೂ ಇದ್ದುಕೊಂಡು, ಅವನ ಸಮಯವನ್ನು ಕಾಯುತ್ತಿರುವರು. ಹೀಗಿರುವಾಗ ಅವನ ರಾಜಾಜ್ಞೆ ಎಂತಹದೋ ! ॥ ೬೬ ॥ ಎಲೈ ಚೇಳನಿಯೇ, ಅವನಿಗೆ ಕಾಣಿಕೆಗಾಗಿ ಪರದೇಶದ ರಾಜರು ಆನೆ, ಕುದುರೆ, ಒಡವೆಗಳನ್ನು ತಂದು, ಅವನ ಅರಮನೆಯ ಬಾಗಿಲಿನಲ್ಲಿ ಯಾವಾಗಲೂ ನೆರೆದಿರುವರು. ॥ ೬೭ ॥ ಲೋಕದಲ್ಲಿರುವ ಇತರ ರಾಜರುಗಳ ದೂತರು ಅಲ್ಲಿಗೆ ಬಂದು ರಾಜನನ್ನು ಕಾಣಲು ಸಮಯವನ್ನು ಕೇಳತಕ್ಕ ಮತ್ತು ಹೇಳತಕ್ಕ ಶಬ್ದವು ಸಮುದ್ರದ ಘೋಷದಂತೆ ಕೇಳುವುದು. ಅವನ ವೈಭವವನ್ನು ಏನು ಹೇಳಲಿ ! ॥ ೬೮ ॥ ಅವನ ಶ್ರೇಷ್ಠವಾದ ಭುಜವೆಂಬ ರಾಕ್ಷಸಿಯು ವೈರಿ ರಾಜರ ಪ್ರಾಣವನ್ನು ನುಂಗುವೆನೆಂದು ಉದ್ರೇಕದಿಂದ ನೀಡಿರುವ ನಾಲಗೆಯೋ ಎಂಬಂತೆ ಅವನ ಚೆಲುವಾದ ಕೈಯ ಖಡ್ಗವು ಶೋಭಿಸಿತು. ॥ ೬೯ ॥ ಯುದ್ಧರಂಗದಲ್ಲಿ ಅವನಿಗೆ ಇದಿರಾದ ವೈರಿಭೂಪರು ವಶಪಡಿಸಿದ್ದ ಭೂವನಿತೆಗೆ ಇವನೇ ಗಂಡನಾದನು – ಎನ್ನುವಾಗ ರಾಜಸಮೂಹದಲ್ಲಿರುವ ನರೇಂದ್ರರಿಗೆ ನಾಚಿಕೆಯುಂಟೆ? ॥ ೭೦ ॥ ಐವತ್ತಾರು ದೇಶಗಳ ರಾಜರು ಕಳುಹಿದ ದೂತರು ಕಪ್ಪವನ್ನು ತಂದು ಅರ್ಪಿಸಿದರೆ ಅವರ ಆಧಿಪತ್ಯವನ್ನು ಇವನು ಒಪ್ಪಿಕೊಳ್ಳುವನು ಕಪ್ಪ ಕೊಡದ ರಾಜನಿಗೆ ಮುಪ್ಪನ್ನು ಉಂಟು ಮಾಡುವನು. ॥ ೭೧ ॥ ಎಂಟು ದಿಕ್ಕುಗಳ ಒಡೆಯರೂ ಲೋಕದ ದುಷ್ಟ ರಾಕ್ಷಸರೂ ಭೂಮಿಯ ಜನರೆಲ್ಲರೂ ತಿಳಿಯುವಂತೆ ಅವನ ಆಜ್ಞಾನುವರ್ತಿಗಳಾಗಿರುವರು. ಆ ರಾಜನ (ರಾವಣನ) ಸಾಮರ್ಥ್ಯವನ್ನು ಏನೆನ್ನಲಿ ! ॥ ೭೨ ॥ ವೈರಿರಾಜರು ರಾವಣನ ಹೆಸರನ್ನೆತ್ತಲು ಹೆದರುವರು, ಅವರು ರಾವಣನಿರುವ ದಿಕ್ಕಿನ ಕಡೆಗೆ ನೋಡಲಾರರು, ಯುದ್ಧವನ್ನಂತೂ ಮಾಡಲಾರರು ಹೀಗಿರುವಾಗ ಆ ರಾವಣನ ಸಾಹಸವನ್ನು ಏನೆನ್ನಲಿ ! ॥ ೭೩ ॥ ರಾವಣನಿಗೆ ನಮಸ್ಕರಿಸಿದ

---

[1] ಳಿರುತಿರ್ಪವತಿ ಸಂಪದಬುಜೋಳು (ಗ ಜ)　[2] ಕೇಳ್ವ (ಗ ಜ)　[3] ಇರದ (ಜ)　[4] ಕರದೆಂಬಂತವನ (ಕ).　[5] ನಲವೆಣ್ಣೊಳವನಾ (ಜ).
[6] ನೃಪವರನ (ಕ)　ನೃಪವರನು (ಗ)　[7] ಧೃಷ್ಟನನೇನ ಪೇಳುವೆನು (ಜ) ೭೧ ಈ ಪದ್ಯ ಕ ದಲ್ಲಿಲ್ಲ.

ಎಱಗಿದವರಿಗಾ[1] ನೃಪಗೆ ಮಚ್ಚರದಿಂ । ದೆಱಗದ ಪಗೆರಾಯರಿಗೆ ॥
ನೆಱೆದುದು ಸ್ವಸ್ತ್ರೀನಿಬಿಡಾಲಿಂಗನ । ತೆಱನಂತವನ[2] ವಿಕ್ರಮದ ॥ ೭೪ ॥

ಆ ಜನಪನ ತೇಜದ ಮಧ್ಯದೊಳಾ[3] । ರಾಜೀವಸಖನೊಪ್ಪಿದನು ॥
ರಾಜವದನೆ[4] ಕೇಳು ನಡುವಗಲೊಳು ದೀಪ । ರಾಜಿಸುತಿಹುದೆಂತಂತೆ ॥ ೭೫ ॥

ಸಿರಿಕಂಡವ ಸಿರಿಪಚ್ಚೆಯ ಪನ್ನೀರ । ಸರಸಿಜದರಲ ತಂಬೆಲರ ॥
ಇರದೆ ಬಯಸಿ[5]ಬಾಯಾಱುವರವನಂಗ । ದಿರವ ನೋಡಿದ ಕೋಮಲೆಯರು ॥ ೭೬ ॥

ತಳಿರ ಹಾಸುವರು ತಣ್ಗೊಳನನಱಸುವರು । ಬೆಳುದಿಂಗಳ ಬಯಸುವರು ॥
ಎಳವಾಳೆಯೆಲೆಯ ಪಾಸುವರವನಂಗವ । ನೆಳಸಿ ನೋಡಿದ ಕಾಮಿನಿಯರು ॥ ೭೭ ॥

ಊಟವನುಣರು ಮೀಯರು ಪಾಸುದುಗುಲವ । ಪಾಟವಮಾಡರು ತಮ್ಮನಿಯರಾ ॥
ಕೂಟಕೆಳಸರಾ ನೃಪನ ನೋಡಿದ ಪೆಣ್ಗ । ಳಾಟವನೇನ ಪೇಳುವೆನು ॥ ೭೮ ॥

ನರನಾಥಾಹಿತ ಶೋಣಿತ ಪಂಕಿಲ । ವರ ಖಡ್ಗಧಾರಾ ಪಥದೆ[6] ॥
ಸಿರಿವೆಣ್ಣು ಬಂದುದು ಜಸವೆಣ್ಣು ಪೋದುದು । ಪಿರಿದು ಕೌತುಕವಂಬುಜಾಕ್ಷಿ ॥ ೭೯ ॥

ದಶಕಂಠನ ಜಸವೆಂಬ ಸಿತಾಬ್ಜದೊ । ಳೆಸೆದಿರ್ಪ ತುಂಬಿಯಂದದೊಳು ॥
ವಸುಧೆಯೊಪ್ಪುವುದೆನಲವನ ಕೀರ್ತಿಯದೊಂ । ದೆಸಕವನೇನ ಬಣ್ಣಿಪೆನು ॥ ೮೦ ॥

---

ರಾಜರಿಗೂ, ಮತ್ಸರಗೊಂಡು ನಮಸ್ಕರಿಸದಿರುವ ರಾಜರಿಗೂ ಸ್ವಸ್ತ್ರೀಯ (ತನ್ನ ಹೆಂಡತಿಯ; ಅಪ್ಸರ ಸ್ತ್ರೀಯ) ಬಿಗಿಯಾದ ಅಪ್ಪುಗೆಯು ದೊರೆಯುವುದು ಅವನ ಪರಾಕ್ರಮವು ಅಂಥದು. ॥ ೭೪ ॥ ಎಲೈ ಚಂದ್ರಮುಖಿ ಚೇಳಿನಿಯೇ. ಆ ರಾವಣರಾಜನ ತೇಜದ ನಡುವೆ ಸೂರ್ಯನು ಮಧ್ಯಾಹ್ನದ ಸಮಯದಲ್ಲಿ ದೀಪವು ಕಾಣುವಂತೆ ತೇಜೋಹೀನನಾಗಿ ಕಾಣಿಸುವನು ॥ ೭೫ ॥ ಅವನ ದೇಹ ಸೌಂದರ್ಯವನ್ನು ನೋಡಿದ ಹೆಂಗುಸರು ಕಾಮಸಂತಪ್ತರಾಗಿ ಶ್ರೀಗಂಧವನ್ನೂ, ಕರ್ಪೂರವನ್ನೂ ಪನ್ನೀರನ್ನೂ ತಾವರೆಹೂವನ್ನೂ, ತಂಗಾಳಿಯನ್ನೂ ತಡವಿಲ್ಲದೆ ಬಯಸಿ ಬಾಯಾರುವರು. ॥ ೭೬ ॥ ಅವನ ರೂಪವನ್ನು ಆಸೆಪಟ್ಟು ನೋಡಿದ ಸ್ತ್ರೀಯರು ಕಾಮತಾಪವೇರಿ ಅದರ ನಿವಾರಣೆಗಾಗಿ ಚಿಗುರನ್ನು ಹಾಸಿಕೊಳ್ಳುವರು, ತಣ್ಣೀರಿನ ಕೊಳವನ್ನು ಹುಡುಕುವರು, ಬೆಳ್ದಿಂಗಳನ್ನು ಬಯಸುವರು, ಎಳತಾದ ಬಾಳೆಯ ಎಲೆಯನ್ನು ಹಾಸಿಕೊಳ್ಳುವರು ॥ ೭೭ ॥ ರಾವಣನನ್ನು ನೋಡಿದ ಹೆಂಗುಸರು ಊಟವನ್ನು ಉಣ್ಣರು, ಸ್ನಾನಮಾಡರು, ಹಾಸುಗೆ ರೇಷ್ಮೆ ವಸ್ತ್ರಾದಿಗಳನ್ನು ಲಕ್ಷ್ಯಮಾಡರು, ತಮ್ಮ ನಲ್ಲರ ಒಡನಾಟವನ್ನೂ ಬಯಸರು ಹೀಗೆ ಅಂತಹ ಹೆಂಗುಸರ ಆಟವನ್ನು ಏನೆನ್ನಲಿ ! ॥ ೭೮ ॥ ಎಲೈ ಚೇಳಿನಿಯೇ, ಆ ರಾಜನ ವೈರಿಗಳ ರಕ್ತದಿಂದ ಕೆಸರಾದ ಆತನ ಶ್ರೇಷ್ಠವಾದ ಖಡ್ಗಧಾರೆಯ ದಾರಿಯಲ್ಲಿ ಸಂಪತ್ತೆಂಬ ಸ್ತ್ರೀಯು ಬಂದಳು, ಕೀರ್ತಿಯೆಂಬ ಸ್ತ್ರೀಯು ಹೋದಳು (ಕೀರ್ತಿ ವಿಸ್ತಾರಗೊಂಡಿತು)—ಇದು ಬಹಳ ಆಶ್ಚರ್ಯದ ಸಂಗತಿ ॥ ೭೯ ॥ ರಾವಣನ ಕೀರ್ತಿಯೆಂಬ ಬೆಳ್ದಾವರೆಯಲ್ಲಿ ಶೋಭಿಸುತ್ತಿರುವ ತುಂಬಿಯಂತೆ ಈ ಭೂಮಿಯು ಇರುವುದೆನ್ನುವಾಗ ಅವನ ಕೀರ್ತಿಯ ಶೋಭೆಯನ್ನು ಏನೆಂದು ವರ್ಣಿಸಲಿ ! ॥ ೮೦ ॥ ಆನೆಯ ಹಣೆಯಂತ ಉನ್ನತವಾದ ಸ್ತನವುಳ್ಳ ಚೇಳಿನಿಯೇ. ಆ ರಾವಣನಿಗೆ ಏಕಾದಶಸ್ಥಾನದಲ್ಲಿ ನವಗ್ರಹಗಳೂ ಸೇರಿವೆ ಅವನಿಗೆ ಶಿವನು

---

[1] ವರಿರಾಯು (ಜ) [2] ತೆಱದಂತವನ (ಚ) [3] ಮಧ್ಯದೊಳಗಾ (ಚ) [4] ರಾಜೀವಲೋಚನೆ (ಚ) [5] ಏಳಸಿ (ಚ)
[6] ಪಥದಿ (ಗ).

ಒಂಬತ್ತು ಗ್ರಹವಿಹವೇಕಾದಶದೊಳು । ಶಂಭು ಸಹಾಯನಾಗಿಹನು ॥
ಕುಂಭಿನಿಯೊಳಗವಗೆಣೆಯಿಲ್ಲ ಕುಂಭೀ । ಕುಂಭೋಪಮ ಕುಚದಬಲೆ　　॥ ೮೧ ॥

ಹುಸಿ ಹುಟ್ಟ ಹೂಣ್ಯವಳಿದು ಸಾಗರವೆಣ್ಣು । ಬೆಸುಗೆ ಸಡಿಲಿ ಪೆಱವೆಣ್ಗೆ[1] ॥
ವಶಗತನಾದೊಡೆ ಕೆಡುವನಲ್ಲದೆ ಯಾರ[2] । ವಶ ದಶಕಂಠನಬ್ಜಾಕ್ಷಿ　　॥ ೮೨ ॥

ಜಾಣೆ ಕೇಳಿಂತು ರಾಜಿಪ ರಾವಣಗೆ ಪಂಚ । ಬಾಣನರಸಿ ಬಹುರೂಪ ॥
ಮಾಣದೆ ಪಡೆದಳೆಂಬಂದದೊಳಿರ್ಪರು । ರಾಣಿಯರತಿ ರಾಗದೊಳು　　॥ ೮೩ ॥

ರೂಪು ಸೊಬಗು ವಿದ್ಯೆ ವಿನಯ ಸರಸ ಸ । ಲ್ಲಾಪದೊಳೆಣೆಯಿಲ್ಲವೆನಿಪ ॥
ಆ ಪೆಣ್ಣುವಂಗಡವಲ್ಲದೆ ಮುಗ್ಧೆಯ । ರಾ ಪರಿವೃಢಗಿಲ್ಲ[3]ವಬಲೆ　　॥ ೮೪ ॥

ಲೋಕದಂಗನೆಯರ ರೂಪು ಸೊಬಗನು ನಿ । ರಾಕರಿಸುವ ರೂಪಿನಿಂದ ॥
ನಾಕದ ಪೆಣ್ಗಳಿಗೆಣೆ ಮಿಗಿಲೆಂಬರ । ನೇಕ ಸತಿಯರಿಹರವಗೆ　　॥ ೮೫ ॥

ಇಂತೆಸೆವಬಲಾ ಜನದ ಮಧ್ಯದೊಳ । ತ್ಯಂತ ಸೊಬಗು ರೂಪನಾಂತು[4] ॥
ಕಾಂತೆಯೆ ಕೇಳು ಮಂಡೋದರಿಪೆಸರನಂ । ದಾಂತಿರ್ಪಳು ಪಟ್ಟದರಸಿ　　॥ ೮೬ ॥

ಅವಳ ಸಿಂಗರ ಸಿರಿಯವಳ ಜವ್ವನ ಗಾಡಿ । ಯವಳ ರೂಪವಳ ಚೆಲ್ವಿಕೆಗೆ ॥
ದಿವಿಜಾಂಗನೆಯರು ಪಡಿಯಲ್ಲದವಳಿಗಿ । ನ್ನವನಿಯ ಪೆಣ್ಣುಗಳೆಣೆಯೆ　　॥ ೮೭ ॥

ಮೆಲ್ಲಡಿ ಮೆಲ್ಮಾತು ಪೊಸದೇಸೆ ನವಚೂತ । ಪಲ್ಲವಾಧರ ಪದ್ಮಗಂಧ ॥
ಸಲ್ಲಲಿತಾಂಗವೆಸೆದವಾ[5] ಸುದತಿಗೆ । ನಲ್ಲವೆಣ್ಗಳ ತಲೆವಣಿಯೆ　　॥ ೮೮ ॥

---

ಸಹಾಯಕನು. ಲೋಕದಲ್ಲಿ ಅವನನ್ನು ಹೋಲುವವರಿಲ್ಲ. ॥ ೮೧ ॥ ಎಲೈ ಚೇಳಿನಿಯೇ, ಆ ರಾವಣನು ಕೆಟ್ಟುಹೋಗ ಬೇಕಾದರೆ ಸುಳ್ಳು ತಲೆದೋರಿ. ಪುಣ್ಯವು ಅಳಿದುಹೋಗಿ, ಲಕ್ಷ್ಮಿಯು ತೊಲಗಿ, ಪರಸ್ತ್ರೀಗೆ ವಶಗತನಾಗಬೇಕು. ಇಲ್ಲವಾದರೆ ಅವನನ್ನು ಸೋಲಿಸಲು ಯಾರಿಗೂ ಸಾಧ್ಯವಿಲ್ಲ. ॥ ೮೨ ॥ ಹೀಗೆ ಮೆರೆಯುತ್ತಿರುವ ರಾವಣನಿಗೆ ಹಲವು ಮಂದಿ ಅರಸಿಯರು ಅನುರಾಗದಿಂದ ಕೂಡಿ ಇರುವರು. ಅವರು ನೋಡುವಾಗ ರತಿದೇವಿಯೇ ಹಲವು ರೂಪಗಳನ್ನು ಪಡೆದಿರುವಂತೆ ಚೆಲುವೆಯರಾಗಿ ಇರುವರು ॥ ೮೩ ॥ ರೂಪದಲ್ಲಿ, ಚೆಲುವಿನಲ್ಲಿ, ವಿದ್ಯೆಯಲ್ಲಿ, ವಿನಯದಲ್ಲಿ, ರಸಯುಕ್ತವಾದ ಮಾತಿನಲ್ಲಿ ಹೋಲಿಕೆಯೇ ಇಲ್ಲವೆನಿಸುವ ಸ್ತ್ರೀಯರ ತಂಡವಲ್ಲದೆ, ಬುದ್ಧಿಹೀನೆಯರಾದ ಅರಸಿಯರು ಅವನಿಗಿಲ್ಲ. ॥ ೮೪ ॥ ಈ ಲೋಕದ ಸ್ತ್ರೀಯರ ರೂಪವನ್ನೂ ಚೆಲುವನ್ನೂ ತುಚ್ಛೀಕರಿಸುವಂತಹ ಮತ್ತು ಸೌಂದರ್ಯದಿಂದ ದೇವತಾ ಸ್ತ್ರೀಯರಿಗೆ ಸರಿಯೋ ಮಿಗಿಲೋ ಎನ್ನಿಸತಕ್ಕ ಅನೇಕ ಅರಸಿಯರು ಆ ರಾವಣನಿಗೆ ಇರುವರು. ॥ ೮೫ ॥ ಎಲೈ ಮಡದಿಯೇ ಕೇಳು. ಹೀಗೆ ಶೋಭಿಸುವ ಅರಸಿಯರ ನಡುವೆ ಪಟ್ಟದರಸಿಯಾಗಿ ಅತ್ಯಂತ ಸೌಂದರ್ಯವನ್ನೂ ರೂಪವನ್ನೂ ತಾಳಿ ಮಂಡೋದರಿ ಎಂಬವಳಿರುವಳು. ॥ ೮೬ ॥ ಅವಳ ಶೃಂಗಾರಕ್ಕೂ, ಅವಳ ತೇಜಸ್ಸಿಗೂ, ಅವಳ ಯೌವನಕ್ಕೂ, ಅವಳ ಸೊಬಗಿಗೂ, ಅವಳ ರೂಪಕ್ಕೂ, ಚೆಲುವಿಕೆಗೂ ಅಪ್ಸರಸ್ತ್ರೀಯರು ಎಣೆಯಲ್ಲ. ಇನ್ನು ಅವಳಿಗೆ ಭೂಲೋಕದ ಹೆಂಗುಸರು ಎಣೆಯೆನಿಸುವರೆ? ॥ ೮೭ ॥ ಎಲೈ ಒಳ್ಳೆಯ ಹೆಣ್ಣುಗಳಿಗೆಲ್ಲ ಶಿರೋರತ್ನದಂತೆ ಇರುವ ಚೇಳಿನಿಯೇ, ಆ ಮಂಡೋದರಿಗೆ ಮೃದು

---

[1] ಸಡುಲಿ ಪೆಱವೆಣ್ಗೆ (ಕ) ಸಡಿಲಿ ಪರಕಣ್ಗೆ (ಗ)　[2] ಕೆಡುವನಲ್ಲದೊಡಾರ　[3] ಪರಿವೃಢರಿಲ್ಲ (ಚ)　[4] ರೂಪಾಂತು (ಚ)　[5] ವೆಸೆದುದಾ (ಗ).

ಅರೆವೆಱೆನೊಸಲಂಬರಮಧ್ಯ ಸವಸರ । ಸಿರುಹವದನ ಸಂಕುಗೊರಲು[1] ॥
ಅರಸಂಚೆಗತಿಯರುಣಾಧರವ[2]ರಲುಣಿ । ಗುರುಳೊಪ್ಪಿತಾ ಕೋಮಲೆಗೆ ॥ ೮೯ ॥

ಕರಿ ಕೇಸರಿ ಗಿರಿ[3] ಕುಲಿಶ ಕಮಲ ಸಿತ । ಕರನೆಳೆಮೀನೆಣೆವಕ್ಕಿ[4] ॥
ಅರಲುಣಿ ಚಂಪಕಗಳು ವೈರವ ಬಿ । ಟ್ಟಿರುತಿರ್ಪವವಳಂಗದೊಳಗೆ ॥ ೯೦ ॥

ಮಡದಿ ಕೇಳಿಂತೊಪ್ಪವಡೆದ ಮಂಡೋದರಿ । ಯೊಡನೆ ಸಂತಸವೆಂಡೆಂಬ ॥
ಕಡಲೊಳಗಾಳುತೇಳುತಲಿರ್ದನಾ ನೃಪ । ನುಡಿವುದೇನವನ ಸಂಪದವ ॥ ೯೧ ॥

ವಿತರಣಶೀಲ ವಿವಿಧ ವಿದ್ಯಾನಂದ । ಶತಕ್ರತುವಿಭವನುನ್ನತನು ॥
ಜಿತ ಮನ್ಮಥರೂಪ ಜಿನಭಕ್ತ ಶೀಲಾಬ್ಧಿ । ಸಿತಕರನೊಪ್ಪಿದನಲ್ಲಿ[5] ॥ ೯೨ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ಸಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೯೩ ॥

ಇದು ಭೂಸುರವಂಶೋದ್ಭವನಭಿನವ । ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ । ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯುಂ ಪಡೆದುದು[6]ಪನ್ನೊಂದನೆಯ ಮಿಸುಪ ಸಂಧಿ ॥ ೯೪ ॥

---

ವಾದ ಪಾದ, ಮೃದುವಾದ ಮಾತು, ಹೊಸ ದೇಸೆ, ಹೊಸ ಮಾವಿನ ತಳಿರಿನಂತಹ ಕೆಳದುಟಿ, ತಾವರೆಯ ಸುವಾಸನೆ, ಸುಂದರವಾದ ದೇಹ – ಇವು ಒಪ್ಪುತ್ತಿವೆ ॥ ೮೮ ॥ ಆ ಕೋಮಲೆಗೆ ಅರ್ಧಚಂದ್ರನಂತಹ ಹಣೆ, ಆಕಾಶದಂತೆ ಶೂನ್ಯವಾದ ಹೊಟ್ಟೆ, ಹೊಸ ತಾವರೆಯಂತಹ ಮುಖ ಶಂಖದಂತಹ ಕೊರಳು, ರಾಜಹಂಸದಂತೆ ನಿಧಾನವಾದ ನಡಿಗೆ, ಕೆಂಪಾದ ಕೆಳತುಟಿ, ಹಾವಿನಂತಹ ಕೂದಲು – ಇವು ಒಪ್ಪಿದವು ॥ ೮೯ ॥ ಆನೆ – ಸಿಂಹ, ಪರ್ವತ - ವಜ್ರ, ತಾವರೆ – ಚಂದ್ರ, ಎಳೆಮೀನು – ಚಕ್ರವಾಕಪಕ್ಷಿ, ತುಂಬಿ – ಸಂಪಗೆ ಎಂಬಿವು ಪರಸ್ಪರ ದ್ವೇಷವನ್ನು ಬಿಟ್ಟು ಅವಳ ಅಂಗಾಂಗಗಳಲ್ಲಿ ನೆಲಸಿರುವವು ॥ ೯೦ ॥ ಎಲ್ಲೇ ಚೇಳಿನಿಯೆ ಕೇಳು ಹೀಗೆ ಒಪ್ಪಿರುವ ಮಂಡೋದರಿಯೊಡನೆ ಆ ರಾವಣರಾಜನು ಸಂತೋಷವೆಂಬ ಸಮುದ್ರದಲ್ಲಿ ಮುಳುಗುತ್ತ ತೇಲುತ್ತ ಇದ್ದನು ಅವನ ಸಂಪತ್ತನ್ನು ಹೇಳುವುದೇನು! ॥ ೯೧ ॥ ದಾನಶೀಲನೂ, ಹಲವಾರು ವಿದ್ಯೆಗಳಲ್ಲಿ ಆನಂದ ಪಡುವವನೂ, ದೇವೇಂದ್ರನಂತಹ ವೈಭವವುಳ್ಳವನೂ ಶ್ರೇಷ್ಠನೂ, ಮನ್ಮಥನ ರೂಪವನ್ನು ಸೋಲಿಸಿದವನೂ, ಜಿನಭಕ್ತನೂ, ಒಳ್ಳೆಯ ಗುಣಗಳೆಂಬ ಸಮುದ್ರವನ್ನು ಉಕ್ಕೇರಿಸುವ ಚಂದ್ರನಂತೆ ಇರುವವನೂ ಆದ ರಾವಣನು ಅಲ್ಲಿ ಶೋಭಿಸುತ್ತಿದ್ದನು ॥ ೯೨ ॥ ಎಲೈ ಮೃಗಾಕ್ಷಿಯಾದ ಚೇಳಿನಿಯೇ, ಈ ದಿನ ನಾನು ಮುಂದಿನ ಕಥೆಗಳನ್ನು ನಿನಗೆ ಹೇಳುವೆನೆಂದು ಮೆಲ್ಲನೆ ಮುಂದುವರಿಯುತ್ತ ಬಂದು ಇಲ್ಲಿಗೆ ಸಂಧಿ ಸಮಾಪ್ತವಾಯಿತು ಇನ್ನು ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು ॥ ೯೩ ॥ ಬ್ರಾಹ್ಮಣ ಕುಲದಲ್ಲಿ ಜನಿಸಿದವನೂ ಹೊಸ ಮನ್ಮಥನಂತೆ ಇರುವವನೂ, ನಿರ್ಮಲವಾದ ಗುಣಗಳುಳ್ಳವನೂ, ಜಿನಭಕ್ತನೂ, ಅತಿಶ್ರೇಷ್ಠಳಾದ ವಾಗ್ದೇವತೆಯ ಸ್ವಚ್ಛವಾದ ಮುಖಕ್ಕೆ ಕನ್ನಡಿಯಂತಿರುವವನೂ, ನಿರ್ಮಲಚಾರಿತ್ರನೂ ಆದ ಸಚಿವನಾದ ದೇವಪ್ಪನು ಸಂತೋಷದಿಂದ ತಿಳಿಸಿರುವ ರಾಮವಿಜಯದಲ್ಲಿ ಹನ್ನೊಂದನೆಯ ಸಂಧಿ ಇದು ಪೂರ್ಣವಾಯಿತು. ॥ ೯೪ ॥

---

[1] ಸಂಕುಗೋರು (ಗ) [2] ಯರಗಿಳಿ ನುಡಿಯ (ಗ ಜ). [3] ಗಿಳಿ (ಜ) [4] ಮೀನೆಣೆವಕ್ಕಿ (ಜ) [5] ಸಿತಕರನೊಪ್ಪಿದನಬಳಿ (ಜ)
[6] ಪಡೆದುಜಸವೆತ್ತುದು (ಕ)

## ೧೨. ರಾವಣ ಸೀತಾದೇವಿಯ ಕೊಂಡೊಯ್ದ ಸಂಧಿ

ಭಕ್ತಜನರ ಭವರೋಗ ವೈದ್ಯನೆ ಯುಕ್ತ । ಯುಕ್ತಿಗೆ ನಿಲುಕದಭವನೆ[1] ॥
ಮುಕ್ತಿವಲ್ಲಭ ಮುನಿಸುವ್ರತ ಜಿನಪಗೆ[2] । ಭಕ್ತಿಯಿಂದಭಿ[3]ವಂದಿಸುವೆನು ॥ ೧ ॥

ಸಿರಿಯ ಪಡೆವರು ಸಿಂಗರವ ಪಡೆವರು ಕೇಳ್ । ಪರಮಾಯುವನು ಪಡೆವರು ॥
ಪರಮಪದವ ಪಡೆವರು ಜಿನಕಥೆಯಿದ[4] । ಹರುಷದಿಂ[5] ಕೇಳಿದ ಜನರು ॥ ೨ ॥

ಅಸಿಯುಳಿ ಅಮೃತಾಧರೆಯಂಬುಜ ನೇತ್ರೆ । ಪುಸಿನಡುವಿನ ನಸುನಗೆಯ ॥
ಪೊಸ ಜವ್ವನೆ ಪೊಂಬಣ್ಣ ಮೆಯ್ಯಳೆ ಲಾ । ಲಿಸುವುದೀ ಕಥೆಯನಳ್ತಿಯೊಳು ॥ ೩ ॥

ವನಿತೆ ನೀ ಮಾಡಿದ ಪುರುಷಾರ್ಥವನೆನ್ನ । ಮನ ಬಲ್ಲುದು ಬಲ್ಲುದಾತ್ಮ[6] ॥
ಜಿನಪತಿ ಬಲ್ಲನಲ್ಲದೆಯನಿತಿನಿತೆಂ[7] । ದನುವಡಿಸುವರೆ[8] ಗೋಚರವೆ[9] ॥ ೪ ॥

ಕಿಱಿಯನಾಗಲಿ ಕಿಂಕರನಾಗಲಿ[10] ಬೋಧೆ । ಯಱಿಯಿಸಿಯಾತ್ಮಗೆ ಗತಿಯ ॥
ಗಱಿಗಟ್ಟಿಸಿದರ ಮಱೆದೊಡೆ ಪಾಪಕೆ । ಗುಱಿಯಾಗುವರೇಣನೇತ್ರೆ ॥ ೫ ॥

ಎಂದಿಗೆ ಸಂಸೃತಿ ಕೆಡುವುದೀಯಾತ್ಮನ । ದೆಂದಿಗೆ[11] ಮೋಕ್ಷವಡೆವುದು ॥
ಅಂದು ತನಕ ನಿನ್ನ ಸಂಗ ಸಂಗಡಿಸಬೇ । ಕೆಂದು[12] ಬಯಸುತಿದೆಯಬಲೆ ॥ ೬ ॥

ಗುರುಶಿಷ್ಯವೆಂಬುದು[13] ಸತಿಪತಿಯೆಂಬುದು । ಅರಸಾಳೆಂಬುದು ತನುವಿಡಿದ ॥
ನರರೊಳಲ್ಲದೆ ಯಾತ್ಮನೊಳಲ್ಲ[14]ವದಱಿಂದ । ಸರಿದೊರೆ ನಾನುನೀನಬಲೆ[15] ॥ ೭ ॥

---

ಭಕ್ತರ ಪುನರ್ಜನ್ಮವೆಂಬ ರೋಗಕ್ಕೆ ವೈದ್ಯನಂತಿರುವ, ಯೋಗ್ಯರ ಉಪಾಯಗಳಿಗೂ ಸಿಲುಕದಿರುವ. ಜನ್ಮರಹಿತನಾಗಿರುವ, ಮೋಕ್ಷಕ್ಕೆ ಒಡೆಯನಾಗಿರುವ ಮುನಿಸುವ್ರತ ಜಿನೇಂದ್ರನಿಗೆ ಭಕ್ತಿಯಿಂದ ನಮಸ್ಕರಿಸುತ್ತೇನೆ ॥ ೧ ॥ ಈ ಜಿನಕಥೆಯನ್ನು ಸಂತೋಷದಿಂದ ಕೇಳಿದ ಜನರು ಐಶ್ವರ್ಯವನ್ನೂ, ಸೊಬಗನ್ನೂ. ಪರಮಾಯುಷ್ಯವನ್ನೂ ಪಡೆಯುವರು. ಅಲ್ಲದೆ ಪರಮಪದವಿಯನ್ನೂ ಪಡೆಯುವರು. ॥ ೨ ॥ ಶ್ರೇಣಿಕರಾಜನು ಚೇಳಿನಿಯೊಡನೆ ಹೀಗೆಂದನು—ಎಲೈ ತೆಳ್ಳಗಿನ ದೇಹದ, ಅಮೃತದಿಂದ ಕೂಡಿದ ಕೆಳತುಟಿಯ, ತಾವರೆಯಂತಹ ಕಣ್ಣಿನ, ತೆಳ್ಳಸಿರಿನ, ಮುಗುಳುನಗೆಯ, ಹೊಸ ತಾರುಣ್ಯವುಳ್ಳವಳೇ ಚಿನ್ನದ ಬಣ್ಣವುಳ್ಳ ಮೈಯವಳೇ. ಈ ಕಥೆಯನ್ನು ಪ್ರೀತಿಯಿಂದ ಕೇಳು. ॥ ೩ ॥ ಎಲೈ ಮಡದಿಯೇ ನೀನು ಮಾಡಿರುವ ಪುರುಷಾರ್ಥವನ್ನು (ಪುಣ್ಯವನ್ನು) ನನ್ನ ಮನಸ್ಸು ತಿಳಿದಿದೆ. ಆತ್ಮವು ತಿಳಿದಿದೆ, ಜಿನೇಶ್ವರನೂ ಬಲ್ಲನು. ಅಲ್ಲದೆ ಅದನ್ನು ಅಷ್ಟು ಇಷ್ಟು ಎಂದು ತಿಳಿಸಲು ಇತರರಿಗೆ ಸಾಧ್ಯವಾದೀತೆ? ॥ ೪ ॥ ಎಲೈ ಚೇಳಿನಿಯೇ ಕಿರಿಯವನಾಗಲಿ, ಸೇವಕನಾಗಲಿ, ಯಾರೂ ಜ್ಞಾನವನ್ನು ಉಪದೇಶಿಸಿ ಆತ್ಮನಿಗೆ ಗತಿಯನ್ನು ಪ್ರಬಲಗೊಳಿಸಿದವರನ್ನು ಮರೆಯಬಾರದು; ಮರೆತವರು ಪಾಪಕ್ಕೆ ಗುರಿಯಾಗುವರು. ॥ ೫ ॥ ಎಲೈ ಚೇಳಿನಿಯೇ ಸಂಸಾರವು ಕೆಡುವ ವರೆಗೂ, ಈ ಆತ್ಮನಿಗೆ ಮೋಕ್ಷವು ದೊರೆವ ವರೆಗೂ, ನಿನ್ನ ಒಡನಾಟವು ನನಗೆ ಬೇಕೆಂದೆನಿಸುತ್ತಿದೆ. ॥ ೬ ॥ ಎಲೈ ಮಡದಿಯೇ, ಗುರುಶಿಷ್ಯ ಸಂಬಂಧವೂ, ಗಂಡಹೆಂಡತಿಯೆಂಬುದೂ,

---

[1] ದಭವನ (ಗ ಜ) [2] ಜಿನಪನ (ಗ). [3] ಯಿಂದಾನು (ಗ) [4] ಕಥೆಯಂ (ಗ). [5] ಹರಿಸದಿಂ (ಜ) [6] ಆತ್ಮಬಲ್ಲ (ಜ). [7] ಯನಿತನಿತಂ (ಜ). [8] ದನುವದಿಸುವಡೆ (ಗ). [9] ಗೋಚರವ್ವ (ಕ ಗ). [10] ಕಿನ್ನರನಾಗಲಿ (ಗ ಜ). [11] ಕೆಡುವುದು ಯೀಯಾತ್ಮವೆಂದಿಗೆ (ಕ). [12] ಸಂಗಡಿಸಾಬೇಕೆಂದು (ಜ) [13] ಗುರುಶಿಷ್ಯರೆಂಬುದು (ಗ ಜ). [14] ಯಾತ್ಮರೋಳಲ್ಲ (ಕ ಜ.). [15] ನಾ ನಿನಗಬಲೇ (ಗ)

ದೇವ ಚಿತ್ತೈಸು ಪಡೆದೆ ನಿಮ್ಮನು[1] ಮು । ನ್ನಾವ ನೋಂಪಿಯ ಫಲದಿಂದ ॥
ಪಾವನವಾದೆನು ನಿಮಗೇಕಿನಿತೆಂ । ದಾ ವಧು ಬಿನ್ನವಿಸಿದಳು ॥ ೮ ॥

ಮುಂದಣ ಕಥೆಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ । ನಿಂದೀವರಾಕ್ಷಿ ಲಾಲಿಪುದು ॥ ೯ ॥

ಲಲನೆ ಕೇಳಾ ರಾವಣ ಸಂತಸವೆಂಬ । ಜಲಧಿಯೊಳಾಳುತೇಳುತವೆ ॥
ಬಲುಹಿಂದೆ ಬಲದಿಂದೆ ಗೆಲವಿಂದೆ ರಾಜ್ಯವ । ನಲೆ ಪಾಲಿಸುತಿರುತಿರ್ದ ॥ ೧೦ ॥

ಪುಷ್ಕರ ಲೋಚನೆ ಲಾಲಿಸಾ[2] ದಶಕಂಠ । ತಸ್ಕರ ಕಥೆಗಳನುಳಿದು[3] ॥
ದುಷ್ಕರವಿಲ್ಲದೆ ಪಲಕಾಲ ರಾಜ್ಯವ । ನಿಷ್ಕಂಟಕದೊಳಾಳುತಿರಲು ॥ ೧೧ ॥

ಜಸದಿಂದೆ ಜವ್ವನದಿಂದೆ ಬಲ್ಸಿರಿಯಿಂದೆ । ಪೊಸಗಾಡಿಯಿಂದ ವಿಕ್ರಮದೆ[4] ॥
ಅಸಹಾಯ[5] ರಾವಣನೃಪ ರಾಜ್ಯವ ಸಂ । ತಸದಿಂದೆ ಪಾಲಿಸುತಿರ್ದ ॥ ೧೨ ॥

ಇಂತತಿ ವೈಭವದಿಂದೆ ಪಲವು ಕಾಲ । ಸಂತಸದಿಂ ರಾವಣನು ॥
ತಾಂ ತಡೆಯದೆ ಸುಖವಿರಲೊಂದು ದಿನವ । ತ್ಯಂತ ಸಂತಸದೆ[6] ನಾರದನು ॥ ೧೩ ॥

ದಂಡಕ[7] ಕೈಯ ಕಮಂಡಲ ಬೋಳಾದ । ಮಂಡೆ ಕಾವಿಯ ಕೈಪು ಪೊದೆದ ॥
ಖಂಡವಸನದಿಂದ[8] ಬಂದ ನಾರದನನು । ಕಂಡನು ರಾವಣನೃಪತಿ ॥ ೧೪ ॥

---

ಅರಸು ಆಳು ಎಂಬುದೂ, ದೇಹಧಾರಿಗಳಾದ ಮನುಷ್ಯರೊಳಗಲ್ಲದೆ ಆತ್ಮನಲ್ಲಿ ಇರುವುದಿಲ್ಲ ಆದುದರಿಂದ ನಾನೂ ನೀನೂ ಸಮಾನರು. ॥ ೭ ॥ ಆಗ ಚೇಳಿನಿಯು ಹೀಗೆಂದಳು—ದೇವನೇ ಕೇಳು ಹಿಂದೆ ನಿಮ್ಮನ್ನು ಯಾವ ವ್ರತವನ್ನು ಮಾಡಿ ಪಡೆದೆನೋ ತಿಳಿಯದು ನಾನು ಪವಿತ್ರಳಾದೆನು ನೀವೇಕೆ ಇಷ್ಟನ್ನೆಲ್ಲಾ ಆಡಬೇಕು? ॥ ೮ ॥ ಇನ್ನು ಮುಂದಿನ ಕಥೆ ಯಾವುದು? ಎಲೈ ಮನ್ಮಥ ಸ್ವರೂಪನೇ ಆ ವೃತ್ತಾಂತವನ್ನು ನನಗೆ ಸಂಪೂರ್ಣವಾಗಿ ತಿಳಿಸಬೇಕು, ಎಂದು ಚೇಳಿನಿ ಹೇಳಿದಳು. ಆಗ ಶ್ರೇಣಿಕನು ಹೀಗೆಂದನು—ಎಲೈ ನೈದಿಲೆಯಂತಹ ಕಣ್ಣುಳ್ಳ ಚೇಳಿನಿಯೇ, ಹೇಳುತ್ತೇನೆ ಕೇಳು ॥ ೯ ॥ ಆ ರಾವಣನು ಸಂತೋಷವೆಂಬ ಸಮುದ್ರದಲ್ಲಿ ಮುಳುಗುತ್ತ ತೇಲುತ್ತ ಸಾಮರ್ಥ್ಯದಿಂದಲೂ, ಶಕ್ತಿಯಿಂದಲೂ ಗೆಲವಿನಿಂದಲೂ ಚೆನ್ನಾಗಿ ರಾಜ್ಯಭಾರ ಮಾಡುತ್ತಿದ್ದನು. ॥ ೧೦ ॥ ಎಲೈ ತಾವರೆಯಂತಹ ಕಣ್ಣೆನವಳೇ, ಕೇಳು ಆ ರಾವಣನು ಕಳ್ಳರ ಕಥೆಗಳನ್ನು ಬಿಟ್ಟು, ಸುಲಭವಾಗಿ ಕಂಟಕವಿಲ್ಲದೆ ಹಲವು ಕಾಲ ರಾಜ್ಯವನ್ನು ಆಳುತ್ತಿದ್ದನು ॥ ೧೧ ॥ ಏಕಾಂಗವೀರನಾದ ರಾವಣನು ಕೀರ್ತಿಯಿಂದಲೂ, ತಾರುಣ್ಯದಿಂದಲೂ, ಹೆಚ್ಚಾದ ಐಶ್ವರ್ಯದಿಂದಲೂ, ಹೊಸ ಚೆಲುವಿನಿಂದಲೂ, ಪರಾಕ್ರಮದಿಂದಲೂ ಕೂಡಿ, ಸಂತೋಷದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು. ॥ ೧೨ ॥ ಹೀಗೆ ರಾವಣನು ಸಂತೋಷದಿಂದಲೂ, ಬಹಳ ವೈಭವದಿಂದಲೂ ಸುಖವಾಗಿದ್ದನು ಹೀಗಿರಲು ಒಂದು ದಿವಸ ನಾರದನು ಅಲ್ಲಿಗೆ ಆಗಮಿಸಿದನು ॥ ೧೩ ॥ ನಾರದನು ದಂಡಕಮಂಡಲುಗಳನ್ನು ಹಿಡಿದುಕೊಂಡು, ಬೋಳು ತಲೆಯುಳ್ಳವನಾಗಿ, ಕಾವಿವಸ್ತ್ರವುಳ್ಳವನಾಗಿ, ಹೊದೆದ ತುಂಡುಬಟ್ಟೆಯುಳ್ಳವನಾಗಿ ಬರಲು, ರಾವಣರಾಜನು ಅವನನ್ನು ಕಂಡನು. ॥ ೧೪ ॥ ಹೊನ್ನಿನಂತಹ ಜನಿವಾರ

---

[1] ನಿಮ್ಮನಾ (ಚ) [2] ಕೇಳಾ (ಚ) [3] ಬಾಧೆಯನುಳಿದು (ಗ ಚ) [4] ವಿಕ್ರಮದಿ (ಗ) [5] ಅಃ ಯಳಿ (ಗ ಚ) [6] ಸಂತಸದಿ (ಗ ಚ)
[7] ದಂಡುಕ (ಕ) [8] ಕಂಡಾ ವಸನದಿಂದ (ಗ)

ಪೊನ್ನ ಜನ್ನಿವಾರ ನೊಸಲ ಬಾಸರ ನಾಮ । ಮಿನ್ನುವಡೆದ ಸುಲಿಪಲ್ಲ ॥
ಚೆನ್ನುವಡೆದ ಚಂದ್ರಗೊಡೆವಿಡಿದಾಗಸ । ದಿನ್ನಪನೆಡೆಗೈದಿದನು[1] ॥ ೧೫ ॥

ಪೂಜಿಸಿ ನಾರದ ಮುನಿವನ ಪಾದ ಸ । ರೋಜವನತಿ ಭಕ್ತಿಯಲಿ ॥
ಸೋಜಿಗವೇನು ನೀವಿಲ್ಲಿಗೆ ಬಂದುದೆಂ । ದಾ ಜನಪತಿ[2] ಕೇಳಿದನು ॥ ೧೬ ॥

ತೊಳಲಿದ ದೇಶವಾವುದು ನೀವಾವಾವ । ಪೊಳಲ ಬಲ್ಲಿರಿಯವಱೊಳಗೆ ॥
ಮಳೆಯಿಂದೆ ಬೆಳೆಯಿಂದೆ ಜನಪದದಿಂದಾ । ಯಿಳೆ ಕ್ಷೇಮದೊಳಿರ್ದಪುದೆ ॥ ೧೭ ॥

ಎಂದು ನುಡಿದ ದಶಕಂಠಗೆ[3] ಮಾಯಾ । ಮಂದಿರನಾದ ನಾರದನು ॥
ಅಂದು ನುಡಿದ ತಾನು ಬಂದುದ[3]ನೊಂದಾ । ನೊಂದು ಪ್ರಸಂಗಾಯತದೊಳು ॥ ೧೮ ॥

ಕಂಡೆನು ಕೆಲವು ದೇಶವ ನಾಡು ಬೀಡನು[4] । ಕಂಡೆನು ಕೆಲವು ಪಟ್ಟಣವ ॥
ಕಂಡೆನು ವಾರಣಾಸಿಯನದು ಸುಖದೊಂದು । ಪಿಂಡವೆಂಬಂತೆ ರಾಜಿಪುದು[5] ॥ ೧೯ ॥

ಆ ಪಟ್ಟಣವನಾಳ್ವ ಶ್ರೀರಾಮನೆಂದೆಂಬ । ಭೂಪಾಲನ ಪಟ್ಟದರಸಿ ॥
ಚಾಪಲಲೋಚನೆ[6] ಸೀತೆಯೆಂದೆಂಬಳ । ರೂಪನದೇನ ಬಣ್ಣಿಪೆನು[7] ॥ ೨೦ ॥

ಅವಳ ಜವ್ವನ ಸಿರಿ ಸಿಂಗರ ಚಾಣ್ಮೆಯು । ನವಳ ಗಾಡಿಯು ಗರುವಿಕೆಯು ॥
ಅವಳ ಸೊಬಗು ಚೆಲ್ವಿಕೆಯು ಪೇಳ್ವಡೆಯಾ । ದಿವಿಜಾಂಗನೆಯರೊಳಿಲ್ಲ ॥ ೨೧ ॥

ಇಂದು ವದನೆ ಕೇಳಾ ರಾವಣಗಾ । ನಂದ ಮನಕೆ ಪುಟ್ಟುವಂತೆ ॥
ಅಂದು ನಾರದ ಪೇಳಿದ ಸೀತೆಯುದೊಂ । ದಂದವನತಿ ವಿಸ್ತರದೊಳು ॥ ೨೨ ॥

---

ದಿಂದಲೂ, ಹಣೆಯಲ್ಲಿ ಆನಂದಕರವಾದ ನಾಮದಿಂದಲೂ ಕೂಡಿ, ಸ್ವಚ್ಛವಾದ ಹಲ್ಲುಗಳುಳ್ಳವನಾಗಿ ಚೆಲುವಾದ ಚಂದ್ರಕೊಡೆಯನ್ನು ಹಿಡಿದುಕೊಂಡು ನಾರದನು ಆಕಾಶದಿಂದ ಇಳಿದು ರಾವಣನ ಬಳಿಗೆ ಬಂದನು. ॥ ೧೫ ॥ ರಾವಣನು ನಾರದನ ಪಾದಕಮಲವನ್ನು ಬಹಳ ಭಕ್ತಿಯಿಂದ ಪೂಜಿಸಿದನು. ಆ ಮೇಲೆ ರಾವಣನು—'ಇದು ಬಹಳ ಆಶ್ಚರ್ಯ. ನೀವು ಇಲ್ಲಿಗೆ ಬಂದ ಕಾರಣವೇನು?' ಎಂದು ಕೇಳಿದನು. ॥ ೧೬ ॥ ನೀವು ಸಂಚರಿಸಿದ ದೇಶಗಳು ಯಾವುವು? ಯಾವ ಯಾವ ಪಟ್ಟಣಗಳನ್ನು ನೀವು ಬಲ್ಲಿರಿ? ಅಲ್ಲಿನ ಭೂಮಿಯು ಮಳೆಬೆಳೆಗಳಿಂದಲೂ ಜನಸಮೂಹದಿಂದಲೂ ಕ್ಷೇಮಸ್ಥಿತಿಯಲ್ಲಿದೆಯೆ? ॥ ೧೭ ॥ ಹೀಗೆ ರಾವಣನು ಕೇಳಲು ಮಾಯೆಗೆ ಆಪ್ರಿಯನೆನಿಸಿದ ನಾರದನು ತಾನು ಬಂದ ಸಂಗತಿಯನ್ನು ಹೀಗೆ ಹೇಳಿದನು. ನಾನು ಹೀಗೆಯೇ ಒಂದಾನೊಂದು ಸಂದರ್ಭದಲ್ಲಿ. ॥ ೧೮ ॥ ಕೆಲವು ದೇಶಗಳನ್ನೂ, ಕೆಲವು ನಾಡುಬೀಡುಗಳನ್ನೂ ಕಂಡೆನು. ಕೆಲವು ಪಟ್ಟಣಗಳನ್ನೂ ನೋಡಿದೆನು. ಅವುಗಳಲ್ಲಿ ವಾರಣಾಸಿಯನ್ನೂ ಕಂಡೆನು. ಅದು ಸೌಖ್ಯದ ಒಂದು ರಾಶಿಯೋ ಎಂಬಂತೆ ಶೋಭಿಸುವುದು. ॥ ೧೯ ॥ ಆ ಪಟ್ಟಣವನ್ನು ಶ್ರೀರಾಮನೆಂಬ ರಾಜನು ಆಳುತ್ತಿರುವನು. ಅವನ ಪಟ್ಟದರಸಿ ಚಂಚಲಾಕ್ಷಿಯಾದ ಸೀತೆ ಆಕೆಯ ರೂಪವನ್ನು ಏನೆಂದು ವರ್ಣಿಸಲಿ! ॥ ೨೦ ॥ ಆ ಸೀತೆಗೆ ಇರುವ ಯೌವನ, ಕಾಂತಿ, ಶೃಂಗಾರ, ಜಾಣ್ಮೆ, ಸೊಬಗು, ಘನತೆ, ಚೆಲ್ವಿಕೆ—ಮುಂತಾದವು ಆ ದೇವತಾಸ್ತ್ರೀಯರಿಗೂ ಇಲ್ಲ. ॥ ೨೧ ॥ ಎಲೈ

---

[1] ಗ್ರೃದಲವನ (ಗ.ಜ)　[2] ಜನನಾಥ (ಗ ಜ).　[3] ಮಾಮುನಿಯುವನು ಮುಂತ್ರ ದೇಶಗಳ ॥ ಒಂದು ಗಳಿಗೆಯೊಳು ನೋಡಿದೆ (ಕ).
[4] ಕೆಲನಾಡನಾ (ಗ ಜ)　[5] ಸಿಂಗರವನು । ಕಂಡೆನು ರಾಮುಲಕ್ಷ್ಮಣರ (ಕ)　[6] ಚಂದ್ರಗೆ । ಚೋದಿಸು ಸವಸರನಾಗ ॥ ಓವಳು ಸರಿಯಲ್ಲ (ಕ)
[7] ಪೇಳುವೆನು (ಜ)

ಗಜಬಜ[1]ಬೇಡ ಸೀತೆಯ ರೂಪು ಗುಣಗಳ । ನಿಜವ ತಪ್ಪದೆ ಪೇಳೆನಲು ॥
ಸೃಜಿಸಿ ಪೇಳುವೆನೆಂದು[2] ತಿಳಿಯದೆ ನೀ ನಂಬು । ನಿಜವ ವಿಸ್ತರಿಪೆ ಲಾಲಿಪುದು ॥ ೨೩ ॥

ನುಡಿಯೆಲ್ಲ ನನೆಗಣೆ ನಡೆಯೆಲ್ಲ ಕಣ್ಸೋಲ । ಮುಡಿ ಮನ್ಮಥನ ಬಲುಪಾಶ[3] ॥
ಕಡುಗಾಡಿವಡೆದ ಮೈಯೆಲ್ಲ ಮೋಹನದೇಳ್ಗೆ । ನುಡಿವುದೇನವಳ ಚೆಲ್ವಿಕೆಯ ॥ ೨೪ ॥

ರನ್ನದ ಸಿರಿಯ ವಿದ್ರುಮದ ಕಾಂತಿಯ ಹೊಸ । ಹೊನ್ನ ತಾವರೆಯ ಮೈಸಿರಿಯ ॥
ಚಿನ್ನದಳಿರ[4] ಸಂಪದವ ಗೆಲಿದವಾ । ಚೆನ್ನೆಯ ಮೃದುಪದತಳವು ॥ ೨೫ ॥

ಅವನಿಪ ಕೇಳವಳಂಗಲಾವಣ್ಯಾ । ರ್ಣವದೊಳಡಗಿದ[5] ವಿದ್ರುಮದ ॥
ನವಕಳಿಕೆಯ ಚೆಲ್ವನಿಳಿಕೈದು ರಾಜಿಸು । ತವೆ ಕಾಲ ಬೆರಲ್ಗಳಾ ಸತಿಗೆ[6] ॥ ೨೬ ॥

ತರುಣಿಯ ನಗೆಯ[7] ಚೆಲ್ವಿಕೆಯ ನೋಡಲು ಚಂ । ದಿರ ಪತ್ತು ಮೊಗಗಳ ತಳೆದು ॥
ಇರದೆ ಬಂದಂತಿಪ[8] ಕಾಲುಗುರೆನಲವ । ಳಿರವ ನಾನೇನ ಬಣ್ಣಿಪೆನು ॥ ೨೭ ॥

ಕಡು ಕಾಮಿಗಳ ಚಿತ್ತವೆಂಬ ಲಗ್ಗೆಯ ಬೀಳ । ಲಿಡುವೆನೆನುತ[9] ಮನಸಿಜನು ॥
ಪಿಡಿದ ರತ್ನದ ಚೆಂಡಿನಂದದೊಳೆಸೆದುದಾ । ಮಡದಿಯ ಮಡ ಚೆಲ್ವಿನಿಂದ ॥ ೨೮ ॥

ಕೊಡು ಕೋಮಲೆ ನಿನ್ನೀ ಮೇಗಾಲ್ಗಳ । ಕಡು ಚೆಲ್ವುಗಳನೆಮಗೆಂದು ॥
ಅಡಿಗೆಱಗಿದ ಕೂರ್ಮ ಮಿಥುನದಂತೆಸೆದುವಾ । ಮಡದಿಯ ಮೇಗಾಲ್ಗಳಂದು ॥ ೨೯ ॥

---

ಚೇಳಿನಿಯೇ ಕೇಳು ಅಂದು ನಾರದನು ಆ ರಾವಣನಿಗೆ ಮನಸ್ಸಂತೋಷವಾಗುವಂತೆ ಸೀತೆಯ ಸೊಬಗನ್ನು ವಿಸ್ತಾರವಾಗಿ ವಿವರಿಸಿ ಹೇಳಿದನು ॥ ೨೨ ॥ ರಾವಣನು ನಾರದನೊಡನೆ 'ಏನೂ ಸಂಕೋಚವಡದೆ ಸೀತೆಯ ರೂಪ-ಗುಣಗಳ ಸತ್ಯಾಂಶವನ್ನು ಸ್ಪಷ್ಟವಾಗಿ ಹೇಳು' ಎಂದನು ಆಗ ನಾರದನು "ಎಲೈ ರಾವಣನೇ ನಾನು ಸೃಷ್ಟನೆಮಾಡಿ ಹೇಳುತ್ತೇನೆಂದು ಭಾವಿಸಬೇಡ ನನ್ನ ಮಾತಿನಲ್ಲಿ ವಿಶ್ವಾಸವಿಡು ನಿಜವನ್ನೇ ವಿಸ್ತಾರವಾಗಿ ವಿವರಿಸುತ್ತೇನೆ ಕೇಳು" ಎಂದನು ॥ ೨೩ ॥ ಅವಳ ಚೆಲುವನ್ನು ಏನೆನ್ನಲಿ! ಅವಳ ಮಾತೆಲ್ಲವೂ ಮನ್ಮಥನ ಹೂಮೊಗ್ಗೆಯ ಬಾಣಗಳು ನಡಿಗೆಯು ಕಣ್ಣನ್ನು ಸೆಳೆವಂಥದು ತುರುಬು ಮನ್ಮಥನು ಬಂಧಿಸಲು ಉಪಯೋಗಿಸುವ ಹಗ್ಗ ಸೌಂದರ್ಯದಿಂದ ಕೂಡಿದ ಆಕೆಯ ದೇಹವೆಲ್ಲವೂ ಮನಸ್ಸನ್ನು ಸೆಳೆವಂಥದು ॥ ೨೪ ॥ ಆಕೆಯ ಮೆಲ್ಲಡಿಗಳು ರತ್ನದ ಪ್ರಕಾಶವನ್ನೂ, ಹವಳದ ಕಾಂತಿಯನ್ನೂ, ಹೊಸ ಹೊಂದಾವರೆಯ ಶೋಭೆಯನ್ನೂ, ಚಿನ್ನದಂತಹ ಚಿಗುರಿನ ಸಂಪತ್ತನ್ನೂ ಗೆದ್ದುಕೊಂಡಿವೆ! ॥ ೨೫ ॥ ಎಲೈ ರಾವಣರಾಜನೇ ಕೇಳು ಅವಳ ದೇಹಸೌಂದರ್ಯವೆಂಬ ಸಮುದ್ರದಲ್ಲಿ ಅಡಗಿರುವ ಹವಳದ ಹೊಸ ಮೊಗ್ಗುಗಳ ಚೆಲುವನ್ನು ಹೀನೈಸುತ್ತ, ಅವಳ ಕಾಲಬರಳು ಚೆನ್ನಾಗಿ ಶೋಭಿಸುತ್ತಿವೆ ॥ ೨೬ ॥ ಸೀತೆಯ ಕಾಲುಗುರುಗಳು, ಆಕೆಯ ನಗೆಯ ಸೊಬಗನ್ನು ನೋಡುವುದಕ್ಕಾಗಿ ಚಂದ್ರನು ಹತ್ತು ಮೊಗಗಳನ್ನು ತಾಳಿಬಂದಂತೆ ಕಾಣುತ್ತವೆ ಹೀಗಿರಲು ಅವಳ ಸ್ಥಿತಿಯನ್ನು ನಾನು ಹೇಗೆ ವರ್ಣಿಸಲಿ ॥ ೨೭ ॥ ಮನ್ಮಥನು ಅತಿಕಾಮುಕರ ಮನಸ್ಸೆಂಬ ಲಗ್ಗೆ (ಮುತ್ತಿಗೆ) ಯನ್ನು ಹೊಡೆದು ಬೀಳಿಸುವೆನೆಂದು ಹಿಡಿದ ರತ್ನದ ಚೆಂಡೋ ಎಂಬಂತೆ ಆ ಹೆಂಗುಸಿನ ಹಿಮ್ಮಡಿ ಚೆಲ್ವಿನಿಂದ ಶೋಭಿಸಿತು ॥ ೨೮ ॥ "ಎಲೈ ಕೋಮಲೆಯಾದ ಸೀತೆಯೇ, ನಿನ್ನ

---

[1] ಗಜಬಜೆ (ಗ) [2] ಪೇಳುವನೆಂದು (ಗ ಚ) [3] ಬಲುಬಾಸ (ಚ) [4] ಚಿನ್ನದಳಿರ (ಗ ಚ) [5] ದೊಳೊಗೆದ (ಗ) [6] ಸತಿಯ (ಚ)
[7] ನಡೆಯ (ಚ) [8] ಬಂದಂತವೆ (ಗ ಚ) [9] ಲಿಡುವವೆನುತ (ಗ)

ಅಲರಂಬನ ದೀಹದ[1] ಹೊನ್ಮೃಗವಱ । ದಲೆಯೊಳೊಗೆದ ಶೃಂಗಕಜನು ॥
ಒಲಿದು ಟಿಟ್ಟವನಿಕ್ಕಿದಂದದೊಳೆಸೆದವಾ । ಲಲನೆಯ ಜಾನುಯುಗಲವು[2] ॥ ೩೦ ॥

ಕಾವನ ಕೈಯ ಗದೆಯು[3] ಮನ್ಮಥನ ಪೊಸ । ಪೂವಿನಂಬಿನ ಮೂಡಿಗೆಯು[4] ॥
ಆ ವಿಭುವಿನ ಬೀರಗಾಳೆಯಂತೆಸೆದುದಂ । ದಾ ವನಿತೆಯ ಜಂಘೆಯುಗಳ ॥ ೩೧ ॥

ಚಿಣ್ಣನಾಗಿರ್ದ ಕಾಲವೊಳಂಗಜನೃಪ । ನಣ್ಣೆವಾಲುಂಬ[5] ಕುಂದಣದ ॥
ಗಿಣ್ಣಿಲ ಮಗುಚಿದಂತೆಸೆದವು ಮೊಣಕಾಲ । ಚಿಣ್ಣಿಗಳಾ ಕೋಮಲೆಗೆ ॥ ೩೨ ॥

ಕಂದೆಂಬುದೊಂದೊಂದೆ ಫಲ[6] ನಾರೇಳ್ವುದು । ಕುಂದಣ ಬಾಳೆಯ ತೊಡೆಗೆ ॥
ಇಂದು ನಾನದನೂ ತರುಮರಗಳ[6] ಸರಿ । ಯೆಂದು ನುಡಿಯೆ ದೋಷ ಬಹುದು ॥ ೩೩ ॥

ಇಂಗೋಲ್ವಿಲ್ಲ ಕ್ರೀಡಿವ ಕೃತಕಾದ್ರಿಯ । ಶೃಂಗಾರರಸ ತೀವಿ ಸೊಱೆವ ॥
ಪೊಂಗೊಡಯುಗಲದಂತೆಸೆದವು ಚೆಲುವಿಂದ । ಲಂಗನೆ ಪೊಱವಾಱುನಿರವು[7] ॥ ೩೪ ॥

ಬಿಟ್ಟು ಬಳಸಿ[8] ನೋಡೆ[9] ಪೊಱವಾಱ ಬಾನೆಡೆ । ಗೆಟ್ಟಪುದೆಂದು ಪೊಂಗಟ್ಟ[10] ॥
ಕಟ್ಟಿದ ಬಿದಿಯೆಂಬಂದದಿಯೊಡ್ಯಾಣ । ವಿಟ್ಟಳ ನಡುವಿಗಾ ಸತಿಯ[11] ॥ ೩೫ ॥

ಇನ್ನೆಲೆ ನಡುಬಡವಾದೊಡೆ ರತಿಯಾಣೆ । ಯೆನ್ನಾಣೆ ಮೃಗಧರನಾಣೆ ॥
ಎನ್ನುತಂಗಜನಿಟ್ಟ ನೇಮದ ಗೆರೆಯಂತೆ । ಚೆನ್ನೆಯ ತ್ರಿವಳಿಯೊಪ್ಪಿದವು[12] ॥ ೩೬ ॥

---

ಮೇಗಾಲುಗಳ ಸೊಬಗನ್ನು ನಮಗೆ ಕೊಡು' ಎಂದು ಪಾದಕ್ಕೆ ಎರಗಿದ ಜೊತೆ ಆಮೆಗಳೋ ಎಂಬಂತೆ ಆಕೆಯ ಮೇಗಾಲಗಳು ಶೋಭಿಸುವವು. ॥ ೨೯ ॥ ಮನ್ಮಥನ ಕಪಟದ ಸುವರ್ಣಮೃಗದ ಮರಿಯ ತಲೆಯಲ್ಲಿ ಮೂಡಿದ ಕೋಡುಗಳಿಗೆ ಬ್ರಹ್ಮನು ಪ್ರೀತಿಯಿಂದ ಟೊಪ್ಪಿಗೆಯನ್ನು ಇಟ್ಟಂತೆ ಆಕೆಯ ಮೊಣಕಾಲುಗಳು ಶೋಭಿಸುವವು ॥ ೩೦ ॥ ಮನ್ಮಥನ ಕೈಯ ಗದೆಯಂತೆಯೂ, ಹೊಸ ಹೂವಿನ ಬಾಣಗಳ ಬತ್ತಳಿಕೆಯಂತೆಯೂ, ವೀರಕಹಳೆಯಂತೆಯೂ ಆಕೆಯ ಎರಡು ಕೆಳತೊಡೆಗಳು ಶೋಭಿಸುವವು. ॥ ೩೧ ॥ ಕಾಮಚಕ್ರೇಶ್ವರನನು ಚಿಕ್ಕವನಾಗಿದ್ದಾಗ ಶುದ್ಧವಾದ ಹಾಲನ್ನು ಕುಡಿಯಲು ಉಪಯೋಗಿಸಿದ ಚಿನ್ನದ ಗಿಣ್ಣಲುಗಳನ್ನು ಮಗುಚಿ ಇಟ್ಟಂತೆ, ಆಕೆಯ ಮೊಣಕಾಲಗಂಟುಗಳು ಶೋಭಿಸುವವು ॥ ೩೨ ॥ ಕುಂದಣ ಬಾಳೆ (ಕೆಂಪು ಬಾಳೆ) ಗಿಡಕ್ಕೆ ಒಂದೊಂದೆ ಗೊನೆಯಿರುತ್ತದೆ, ಅಲ್ಲದೆ ಅದು ನಾರಿನಿಂದ ಕೂಡಿರುತ್ತದೆ. ಹೀಗಿರುವಾಗ ಆ ಸೀತೆಯ ತೊಡೆಗಳನ್ನು ಬಾಳೆಯೇ ಮೊದಲಾದ ಮರಗಿಡಗಳಿಗೆ ಸರಿಯೆಂದು ಹೇಳುವುದು ತಪ್ಪಾಗುವುದು. ॥ ೩೩ ॥ ಕಬ್ಬುಬಿಲ್ಲಿನವನಾದ ಮನ್ಮಥನು ಆಡುವ ಕೃತಕ ಪರ್ವತದಲ್ಲಿ ಶೃಂಗಾರವೆಂಬ ರಸದಿಂದ ತುಂಬಿ ಮೆರೆಯುವ ಚಿನ್ನದ ಎರಡು ಮಡಕೆಗಳೋ ಎಂಬಂತೆ ಚೆಲುವಾಗಿ ಆಕೆಯ ನಿತಂಬಗಳು ತೋರುತ್ತಿವೆ. ॥ ೩೪ ॥ ಈ ನಿತಂಬವನ್ನು ಹೀಗೆಯೇ ಬಿಟ್ಟರೆ ಇನ್ನೂ ವಿಸ್ತಾರಹೊಂದಿ ರೂಪಕೆಟ್ಟುಹೋಗುವುದೆಂದು ಭಾವಿಸಿ. ಬ್ರಹ್ಮನು ಚಿನ್ನದಿಂದ ಬಿಗಿಯಾಗಿ ಕಟ್ಟಿದನೋ ಎಂಬಂತೆ ಆ ಸ್ತ್ರೀಯ ಸೊಂಟದಲ್ಲಿ ಒಡ್ಯಾಣವು ಸೊಗಸಾಗಿರುವುದು ॥ ೩೫ ॥ ಮನ್ಮಥನು "ಎಲೈ ನಡುವೇ, ಇನ್ನು ನೀನು ತೆಳ್ಳಗಾದರೆ.

---

[1] ಅಲರಂಬನ ಸದಿವಾದ (ಗ). [2] ಗಂಡದಲ್ಪಗಳು (ಗ) ಗೂಡಗುಲ್ಪಗಳು (ಚ) [3] ದೇವಿಯ ಕೇಳು ನೋಡಲು (ಕ) [4] ಮೂಡಿಗೆಯೊ (ಕಗ). [5] ಚಿಣ್ಣ ಮನ್ಮಥಂಗೆ ಶ್ರೀಹರಿ ನವರತ್ನ । ಹಣ್ಣಿದ ಚೆಲುವ (ಕ) [6] ನಾರೇಳ್ವದೊಂದಿಗುಣದ ವಾರಣಕೆ ॥ ಅಂದವಡೆದ ಚೆಲ್ವಿವೆಮ್ಮೂರುಗಳ (ಗಚ) [7] ಪೊಂಗೊಡಗಳ ಚೆಲ್ವನಿಳಿಕೆಯ್ದು ತವೆ ಕೋಮ । ಲಾಂಗಿಯ ಪೊಱವಾಱವಿಹವು (ಗ). [8] ಬಿಟ್ಟುಬರಿಸಿ (ಗ) ಬಿಟ್ಟುಬರಸಿ (ಚ) [9] ನೋಡಿ (ಗ) [10] ಪೊಂಗಲ್ಲ (ಚ) [11] ಬಿದಿಯೆಂಬಂದದೋಳಂದಲ್ । ವಟ್ಟ ಕಾಂಚೀಧಾಮವವಳ (ಗಚ) [12] ನೇಮದಂತೆಸೆದುದು । ರನ್ನೆಯ ಕಟಿಸೂತ್ರದಿರವು (ಕ)

ಆ ಕುವರಿಯ ಕೈಯ ಬೆರಲ್ಗಳೆಸೆದ[1]ವಂ । ದಾ ಕೋಮಲೆಯಂಗವೆಂಬ ॥
ಆ ಕಲ್ಪಕುಜದ ಶಾಖೆಯೊಳೊಗೆದೆಸೆಯುತಿ । ರ್ಪಾ ಕಳಿಕೆಗಳಂದದೊಳು[2] ॥ ೪೪ ॥

ಮಿಱುಪ ಕರದ ಬೆರಲುಗುರೆಸೆದವು ತ । ನ್ಮೆಱೆಯುಗೆ ಮೊಗ[3] ಶಶಿರುಚಿಯ ॥
ಎಱಕದಿಂದೀಯಬೇಕೆಂದವಳಿಗೆ ಕೈ । ಸೆಱೆಬಂದ ತಾರೆಗಳಂತೆ ॥ ೪೫ ॥

ಇಂದಿರೆಯಾತ್ಮಜ ದಿಗ್ವಿಜಯಕೆ ಪೋ । ಪಂದು [4]ಕೂಡಿದ ತನ್ನ ಬಲದಿ ॥
ಅಂದು ಪಿಡಿದ ಶಂಖನಿಳಿಕ್ಕೆ[4]ವುತೆಸೆದುದಾ[5] । ಯಿಂದುಮುಖಿಯ ನುಣ್ಗೊರಲು ॥ ೪೬ ॥

ವಿಧುಬಿಂಬದೊಳು ಬಿಂಬಫಲವನೊತ್ತೆಯನಿಕ್ಕಿ । [6]ಸುಧೆಯ ತಂದಾ ಕಾಮದೇವ ॥
ಅಧರದೊಳೊಯ್ಯನೆ[6] ತುಂಬಿದನೆನಲಾ । ವಿಧುಮುಖಿಯಧರವೊಪ್ಪಿದುದು ॥ ೪೭ ॥

ತಿಂಗಳ ಬಿತ್ತ ಸುಧೆಯೊಳೊಯ್ಯನೆ [7]ತೊಳೆ । ದಂಗಜ ಮಿಂಚಿನಿಂ ಪೊಳೆವ ॥
ಕಂಗೆಸೆವಂತಿಟ್ಟನೆನಲೆ[7]ಸೆದವು ಕೋಮ । ಲಾಂಗಿಯ ದಂತಪಂಕ್ತಿಗಳು ॥ ೪೮ ॥

ನಗೆಮೊಗ ಲಕ್ಷ್ಮಿಯನಂಗಜ ನೃಪತಿ ಬಂ । ದುಗೆಯಿಂ [8]ಪೂಜಿಸಿದಂತೆ ॥
ಮೃಗನೇತ್ರೆಯ ಬಾಯ್ದೆಱೆಯೊಪ್ಪಿತೆನೆ[8] ರೂಪಿ । ನಗಣಿತವನು ಪೇಳ್ವೆನೇನ ॥ ೪೯ ॥

ಚದುರಿಂದ ಕಮಲದೊಳೊಗೆದ ಸಂಪಗೆಯನಂ । ದದಱ ತುದಿಯೊಳು ಮಲ್ಲಿಗೆಯ ॥
ಮುದದಿಂದಿಟ್ಟಂತೆ ತೋರುತಿರ್ದುದು ಚೆಲ್ವ[9] । ಸುದತಿಯ ನಾಸಾಭರಣ ॥ ೫೦ ॥

---

ತಾವರೆನಾಳದಲ್ಲಿ ಉಂಟಾಗಿ ಶೋಭಿಸುವ ಹೊಂದಾವರೆಯೋ ಎಂಬಂತೆ ಆ ತರುಣಿಯ ಹಸ್ತವು ಶೋಭಿಸುವುದು. ॥ ೪೩ ॥ ಆ ರಮಣಿಯ ದೇಹವೆಂಬ ಕಲ್ಪವೃಕ್ಷದ ಕೊಂಬೆಯಲ್ಲಿ ಮೂಡಿ, ಶೋಭಿಸುವ ಮೊಗ್ಗುಗಳೋ ಎಂಬಂತೆ ಆಕೆಯ ಕೈಬೆರಲುಗಳು ಶೋಭಿಸುವವು. ॥ ೪೪ ॥ ತಾರೆಗಳು (ನಕ್ಷತ್ರಗಳು) ತಮ್ಮ ಒಡೆಯನಾದ ಚಂದ್ರನಿಗೆ ಕೊಡಲು, ಸೀತೆಯ ಮುಖವೆಂಬ ಚಂದ್ರನ ಕಾಂತಿಯನ್ನು ಕೊಂಡುಹೋಗಲು ಬಂದಾಗ ಆಕೆಯ ಕೈಗೆ ಸೆರೆಯಾದ ರೀತಿಯಲ್ಲಿ ಆಕೆಯ ಹೊಳೆಯುತ್ತಿರುವ ಕೈಯ ಬೆರಲಿನ ಉಗುರುಗಳು ಶೋಭಿಸಿದುವು ॥ ೪೫ ॥ ಕಾಮಚಕ್ರೇಶ್ವರನು ದಿಗ್ವಿಜಯಕ್ಕೆ ಹೋಗುವ ಸಂದರ್ಭದಲ್ಲಿ ತನ್ನ ಸೈನ್ಯದಲ್ಲಿ ಹಿಡಿದುಕೊಂಡ ಶಂಖವನ್ನು ಹೀನೈಸುವಂತೆ, ಆಕೆಯ ನುಣುಪಾದ ಕೊರಲು ಶೋಭಿಸುವುದು. ॥ ೪೬ ॥ ಕಾಮದೇವನು ಚಂದ್ರಮಂಡಲದಲ್ಲಿ ತೊಂಡೆಹಣ್ಣನ್ನು ಒತ್ತೆಯಿಟ್ಟು, ಅಮೃತವನ್ನು ತಂದು ಆಕೆಯ ಕೆಳತುಟಿಯಲ್ಲಿ ಮೆಲ್ಲನೆ ತುಂಬಿದನೋ ಎಂಬಂತೆ ಸೀತೆಯ ಕೆಳತುಟಿ ಶೋಭಿಸುವುದು. ॥ ೪೭ ॥ ಮನ್ಮಥನು ಚಂದ್ರನೆಂಬ ಬೀಜವನ್ನು ಅಮೃತದಲ್ಲಿ ಮೆಲ್ಲನೆ ತೊಳೆದು, ಮಿಂಚುತ್ತ ಹೊಳೆಯತಕ್ಕ ಕಣ್ಣಿಗೆ ಕಾಣಿಸುವಂತೆ ಇಟ್ಟ ರೀತಿಯಲ್ಲಿ ಕೋಮಲವಾದ ಅವಯವಗಳುಳ್ಳ ಆಕೆಯ ಹಲ್ಲಿನ ಸಾಲುಗಳು ಶೋಭಿಸುವವು. ॥ ೪೮ ॥ ಕಾಮಚಕ್ರೇಶ್ವರನು ಆಕೆಯ ನಗೆಮೊಗವೆಂಬ ಲಕ್ಷ್ಮೀದೇವತೆಯನ್ನು ಬಂದುಗೆ (ಕಿಸುಗಾರ) ಹೂವಿನಿಂದ ಪೂಜಿಸಿದಂತೆ ಆ ಸೀತೆಯ ತುಟಿಗಳು ಕೆಂಪಾಗಿ ಶೋಭಿಸುತ್ತಿವೆ. ಹೀಗಿರಲು ಆಕೆಯ ರೂಪಾತಿಶಯವನ್ನು ಏನೆನ್ನಲಿ ! ॥ ೪೯ ॥ ತಾವರೆಹೂವಿನಲ್ಲಿ ಹುಟ್ಟಿದ ಸಂಪಗೆಯ ಮುಗುಳಿನ ತುದಿಯಲ್ಲಿ

---

[1] ನಾಕದ ಕುಜದ ಶಾಖೆಯ ತೋಳ್ಗಳೆಸೆದ (ಕ). [2] ಕಳಿಕೆಗಳೆಂಬಂತೆ (ಗ ಚ) [3] ಬೆರಲಿಂದೊಪ್ಪುವ ನಖ । ದಿರವಂತಾ (ಕ) [4] ಮುಂಗಡೆ ನಾದಿಸುವ ॥ ಸಂದ ಸಂಕಿನ ಚೆಲ್ವನಿಳಿಕ್ಕೆ (ಗ ಚ) [5] ತೆಸೆದುದು (ಚ) [6] ವಿಧುಬಿಂಬ ತೋರ್ಪಂದದೊಳು ॥ ವಿಧುಬಿಂಬವೆನೆ ಸ್ಮರ (ಕ). [7] ತಳಿ । ವಂಗಜನನೆ ಮೊಳೆತಪ್ರೊಲು ॥ ಪಂಗಡ ತಾರಾತತಿಯೆ (ಕ) [8] ದೆಸವ ಮೊಗ್ಗೆಯನು ॥ ತೆಗದಿಟ್ಟ ನಾಸಿಕದಂತೊಪ್ಪಿತೆನೆ (ಕ) [9] ಪದುಮಸಂಭವ ರಚಿಸಿದವೋಲೆಸೆದವಾ (ಗ.ಚ).

ತಿಮಿರದೊಬ್ಬುಳಿಯಂತರಲ ಶರನ ಕೈಯ । ರಮಣೀಯಮಪ್ಪ ಕತ್ತುರಿಯಿಂ[1] ॥
ಸಮೆದಗ್ಗದ[2] ನೂತನ ಚೆಂಡಿನಂತಿದೆ[3] । ವಿಮಲಾಂಗಿಯ ತೋರದುಱುಬು ॥ ೫೮ ॥

ಲಲನೆ ನಿನ್ನೀ ಮುಖ ಚೆಲುವ ಕೊಟ್ಟೆನ್ನನು । ಸಲಹಿಕೊಳ್ಳೆಂದು ದೈನ್ಯದೊಳು ॥
ಮೊಲಗೆಳೆಯನ[4] ಕೆಳೆಗೊಳ ಬಂದಿದೆ[5]ರೂಪ । ನೊಲಿದು ಪೇಳುವರಾರವಳ[6] ॥ ೫೯ ॥

ಬಂದಿರುಳೊಂದು ಪಗಲು ಫಲವೀಯದ । ದೊಂದಕವಳ ಕಣ್ಮೊಗವ ॥
ಮಂದಹಾಸವ ಮೇಲನಱಿಯದೆ ಸರಿದೊರೆ । ಯೆಂದು ನುಡಿಯೆ ದೋಷ ಬಹುದು[7] ॥ ೬೦ ॥

ನಟಣೆಯ[8]ನಡೆಗಂಜಿ ಪರಭೃತವರ್ಧೇಂದು । ನಿಟಿಲೆಯ ಸ್ವರಕೆ ನುಣ್ನುಡಿಗೆ ॥
ದಿಟವರಗಿಳಿ ಬಂದು ಕಲಿಯಲೆನುತ ಸಂ ॥ ಕಟಗೊಳುತಿಪೆ ನಿನ್ನಾಣೆ ॥ ೬೧ ॥

ಉಸುರಿಕ್ಕುವ ಚಂಪಕ ನಲಿನಲಿದು ನಿ । ಟ್ಟಿಸುವ ನೈದಿಲು ನಸುನಗುವ ॥
ಪೊಸಮಲ್ಲಿಗೆ ಬಾಯಿದೆಱೆವ ಬಂದುಗೆಯೆನ್ನ । ದುಸುರುವುದೇನಂಗದಿರವ[9] ॥ ೬೨ ॥

ಉರವಿಂಬಿಲ್ಲ ಕುಚಕೆ ಮೊಗವಿಂಬಿಲ್ಲ । ಮೆರಲೆಗಣ್ಗಿಂಬಿಲ್ಲ[10]ಬೆನ್ನು ॥
ಸಿರಿಮುಡಿಗಿಂಬಿಲ್ಲ ನಡುಬಾಸೆಗೆನೆ ರೂಪಿ । ನಿರವ ನಾನೇನೆಂಬೆನವಳ ॥ ೬೩ ॥

ತರುಣಿಯ ಕುಚವ ನಿಟ್ಟಿಸಿ ಗಿರಿಗಳ ನೋಡೆ । ಗಿರಿ ಪರಮಾಣನಂತಿಹವು[11] ॥
ಪರಮಾಣು ನೋಡಿ ನಡುವ ನಿಟ್ಟಿಸಲಾ । ಪರಮಾಣು ಗಿರಿಯಂತಿಹವು[12] ॥ ೬೪ ॥

---

ಮುಡಿಯು ಕತ್ತಲಿನ ರಾಶಿಯಂತೆಯೂ, ಮನ್ಮಥನ ಕೈಯಲ್ಲಿರುವ ಮನೋಹರವಾದ ಕಸ್ತೂರಿಯಿಂದ ನಿರ್ಮಿಸಿದ ಶ್ರೇಷ್ಠವಾದ ಹೊಸ ಚೆಂಡಿನಂತೆಯೂ ಕಾಣಿಸುವುದು. ॥ ೫೮ ॥ 'ಎಲೈ ಸೀತೆಯೇ ನಿನ್ನ ಈ ಮುಖದ ಚೆಲುವನ್ನು ನನಗೆ ಕೊಟ್ಟು ಕಾಪಾಡಬೇಕು' ಎಂದು ಚಂದ್ರನು ದೈನ್ಯದಿಂದ ಬಂದು ಸ್ನೇಹಮಾಡುವಂತೆ ತೋರುವುದು. ಆಕೆಯ ರೂಪವನ್ನು ಹೇಳಬಲ್ಲವರು ಯಾರು? ॥ ೫೯ ॥ ಆಕೆಯ ಕಣ್ಣು, ಮುಖ, ಮುಗುಳುನಗೆ—ಇವುಗಳಲ್ಲಿ ಒಂದು (ಕಣ್ಣು) ಕತ್ತಲೆಯಂತೆ ಕಪ್ಪು, ಇನ್ನೊಂದು (ಮುಖವು) ಹಗಲಿನಂತೆ ಪ್ರಕಾಶವುಳ್ಳದು. ಮುಗುಳುನಗೆಯು ಫಲರಹಿತವಾಗಿರುವುದು. ಹೀಗಿರುವಾಗ ಇವುಗಳ ಮಹತ್ವವನ್ನೂ ತಿಳಿಯದೆ ಅದಕ್ಕೆ ಇದಕ್ಕೆ ಇವನ್ನು ಸರಿಗಟ್ಟುವುದು ತಪ್ಪಾಗುವುದು ॥ ೬೦ ॥ ಎಲೈ ರಾವಣನೇ, ಆ ಸೀತೆಯ ನಾಟ್ಯಯುಕ್ತವೆನಿಸುವ ನಡೆಗೆ ಹಂಸೆಯೂ, ಅರ್ಧಚಂದ್ರನಂತಹ ಮುಖವುಳ್ಳ ಆಕೆಯ ಧ್ವನಿಗೆ ತುಂಬಿಯೂ, ಆಕೆಯ ನಯವಾದ ಮಾತಿಗೆ ರಾಜಶುಕವೂ ಆಸೆಪಟ್ಟು ಬಂದು, ಕಲಿಯುವುದಕ್ಕಾಗಿ ಕಷ್ಟಪಡುತ್ತಿವೆ ॥ ೬೧ ॥ ಉಸಿರಾಡುವ ಸಂಪಗೆಯೆಂದು ಆಕೆಯ ಮೂಗನ್ನೂ, ಸಂತೋಷದಿಂದ ನೋಡುವ ನೈದಿಲೆಯೆಂದು ಕಣ್ಣನ್ನೂ, ನಸುನಗುವ ಹೊಸಮಲ್ಲಿಗೆಯೆಂದು ಹಲ್ಲುಗಳನ್ನೂ, ಬಾಯಿತೆರೆವ ಕಿಸುಗಾರವೆಂದು ತುಟಿಗಳನ್ನೂ ಹೇಳಬೇಕಲ್ಲದೆ, ಆಕೆಯ ದೇಹಸೌಂದರ್ಯವನ್ನು ಬೇರೆ ಏನೆನ್ನಬೇಕೋ ತಿಳಿಯದು. ॥ ೬೨ ॥ ಆಕೆಯ ಮೊಲೆಗೆ ಎದೆಯು ಸ್ಥಳನಾಲದಿರುವುದು ಜಿಂಕೆಯಂತಹ ಕಣ್ಣಿಗೆ ಮುಖವು ಇಂಬಾಗಿಲ್ಲ. ಆಕೆಯ ಸಿರಿಮುಡಿಗೆ ಬೆನ್ನು ಇಂಬಲ್ಲ. ಆಕೆಯ ಸೊಂಟವು ನಾಭಿರೋಮಕ್ಕೆ ಇಂಬಲ್ಲ. ಹೀಗಿರುವಾಗ ಅವಳ ರೂಪವನ್ನು ಏನೆನ್ನಲಿ! ॥ ೬೩ ॥ ಆ ಸೀತೆಯ ಮೊಲೆಗಳನ್ನು ನೋಡಿ ಬೆಟ್ಟಗಳನ್ನು ನೋಡಿದಾಗ ಆ ಬೆಟ್ಟಗಳು ಪರಮಾಣುವಿನಂತೆ

---

[1] ಕತ್ತುರಿಯಾ (ಗ) [2] ಸಮೆದಗ್ಗಳ (ಗ ಚ) [3] ಚೆಂಡಿನಂತವೆ (ಚ) [4] ಮೊಲಗೆಣೆಯನೆ (ಚ). [5] ಬಂದವೆ (ಗ ಚ). [6] ಪೇಳುವನಾರವಳ (ಚ). [7] ಪೇಳುವ ಕವಿಯಾರು (ಗ ಚ) [8] ನಟನೆಯ (ಗ) [9] ದೇಸವಳಿರವ (ಗ ಚ) [10] ಗಣ್ಣಿಂಬಿಲ್ಲ (ಕ). [11] ನಂತಿಹುದು (ಗ. ಚ.). [12] ನಂತಿಹುದು (ಗ ಚ).

ಕರಿ ಕರಿವೈರಿ ಕಮಲ ಕಮಲಾರಿಯು । ಗಿರಿಯನಿಮಿಷ ಚಕ್ರವಾಕ ॥
ಅರಲುಣಿ[1] ಚಂಪಕ ಕುಲಿಶ ವೈರವ ಬಿ । ಟ್ಟಿರುತಿರ್ಪವವಳಂಗದೊಳಗೆ ॥ ೬೫ ॥

ನಡೆವ ತಾವರೆ ನರ್ತಿಸುವ ಸೋಗೆ ನವಿಮಾತ । ನುಡಿವ ಕನ್ನಡಿ ಮೃದುಸವಿಯು ॥
ಪಡೆವ ಪವಳ ಪಾಡುವ ಕಂಬುವೆನ್ನದೆ । ನುಡಿವುದೇನವಳಂಗದಿರವ ॥ ೬೬ ॥

ಪಂಚಶರನು ಕನಕದ ಬೊಂಬೆಗಳವಡೆ । ಮಿಂಚಿನಿಂ ಪೊಳೆಪಿಟ್ಟಸುವ[2] ॥
ಸಂಚಲಿಸದೆ ಪೊಯ್ದನಲ್ಲದೆ ಹಳೆಯ ವಿ । ರಿಂಚನಿಗುಂಟೆ ಕೈಚಳಕ ॥ ೬೭ ॥

ಲೋಕವಶ್ಯದ ತಿಲಕವೊ ಭಾವಿಸೆ ಜಗ । ದೇಕರತ್ನವೊ ಮುನಿಜನದ ॥
ಆಕರುಷಣ ಮಂತ್ರವೊ ತಪಃಫಲದಂ । ತಾ ಕಮಲಾಕ್ಷಿ ರಾಜಿಪಳು ॥ ೬೮ ॥

ಅಚ್ಚರಿಯಿನಿತು ಕೊಂಡಾಡಿದೆಯುವಳೀ । ನಚ್ಚರವೆಣ್ಣಿನಲವಳ[3] ॥
ಅಚ್ಚಿನ ಪೆಣ್ಗಳಮರವೆಣ್ಗಳೆನೆ ರೂಪಿ । ನಚ್ಚರಿಯನು ಪೇಳ್ವೆನೇನ ॥ ೬೯ ॥

ನಾ ತೊಳಲದ ನಾಡಿಲ್ಲವಾ ನಾಡೊಳೀ । ರೀತಿಯ ಪೆಣ್ಣಿಗಿನ್ನೆಣೆಯು ॥
ಶಾತೋದರಿಯರಿಲ್ಲೆಂ[4]ದೇಕಾಂತದೊ । ಳಾತಗವನು ಪೇಳಿದನು ॥ ೭೦ ॥

ಪಡಿಯುವಳೆಡದ ಕಡೆಗೆ ಬಲಗಡೆ ನೋಡೆ । ಪಡಿಯುವಳ್ತನುಗೆ ತದ್ಬಿಂಬ ॥
ಪಡಿಯಲ್ಲದೆ ಪಡಿ ಪೆಣ್ಗಳೊಳಿಲ್ಲೆಂದು[5] । ನುಡಿದನವನಿಗಂಡವನು ॥ ೭೧ ॥

---

ತೋರುವುವು ಪರಮಾಣುವನ್ನು ನೋಡಿ ಆಕೆಯ ಸೊಂಟವನ್ನು ನೋಡಲು ಆ ಪರಮಾಣುವೇ ಪರ್ವತದಂತೆ ತೋರುವುದು ॥ ೬೪ ॥ ಸಿಂಹಕಟಿ, ಗಜಗಮನೆ ಕಮಲ ಕೋಮಲಪಾದೆ, ಚಂದ್ರವದನೆ, ಪರ್ವತ ನಿತಂಬೆ, ಅನಿಮಿಷನೇತ್ರೆ, ಚಕ್ರವಾಕಕುಚೆ, ಭ್ರಮರವೇಣಿ, ಚಂಪಕನಾಸೆ, ವಜ್ರಕಠೋರ ಸ್ತನೆ–ಆಗಿರುವ ಆಕೆಯ ದೇಹದಲ್ಲಿ ಸಿಂಹ-ಆನೆ, ತಾವರೆ-ಚಂದ್ರ, ಪರ್ವತ-ವಜ್ರ, ತುಂಬಿ-ಸಂಪಗೆ, ಮೀನು-ಚಕ್ರವಾಕಪಕ್ಷಿ–ಇವು ಹಗೆತನವನ್ನು ಬಿಟ್ಟು ನೆಲಸಿರುವವು ॥ ೬೫ ॥ ಅವಳ ದೇಹದ ವಿಷಯವನ್ನು ಹೇಳುವುದಾದರೆ, ನಡೆಯುವ ತಾವರೆಯೆಂದು ಪಾದವನ್ನು, ಕುಣಿವ ನವಿಲೆಂದು ಕೂದಲನ್ನು, ಸವಿ ಮಾತನ್ನಾಡುವ ಕನ್ನಡಿಯೆಂದು ಮುಖವನ್ನು ಮೃದುತ್ವಮಧುರತ್ವಗಳನ್ನು ಹೊಂದಿರುವ ಹವಳವೆಂದು ತುಟಿಯನ್ನು, ಹಾಡುವ ಶಂಖವೆಂದು ಕಂಠವನ್ನು ಹೇಳಬೇಕಲ್ಲದೆ, ಬೇರೆ ಏನೆನ್ನಲೂ ಸಾಧ್ಯವಿಲ್ಲ ॥ ೬೬ ॥ ಮನ್ಮಥನು ಚಿನ್ನದ ಬೊಂಬೆಗೆ ಮಿಂಚಿನ ಪ್ರಕಾಶವನ್ನು ಕೊಟ್ಟು ಪ್ರಾಣವನ್ನು ಕೊಟ್ಟನಲ್ಲದೆ, ಹಳೆಯವನಾದ ಆ ಬ್ರಹ್ಮನಿಗೆ ಆಕೆಯನ್ನು ಸೃಷ್ಟಿಸುವಂತಹ ಕೈಚಳಕವಿದೆಯೆ? ॥ ೬೭ ॥ ಆ ಕಮಲಾಕ್ಷಿಯು ಲೋಕದ ಜನರನ್ನೆಲ್ಲ ವಶಗೊಳಿಸುವ ತಿಲಕವೋ ಎಂಬಂತೆಯೂ, ಲೋಕವಲ್ಲಿ ಒಂದೇಒಂದೆನಿಸುವ ರತ್ನವೋ ಎಂಬಂತೆಯೂ ಮುನಿಗಳನ್ನು ಸೆಳೆಯುವ ಮಂತ್ರದೇವತೆಯೋ ತಪಸ್ಸಿನ ಫಲ ಸ್ವರೂಪೆಯೋ ಎಂಬಂತೆಯೂ ಶೋಭಿಸುವಳು ॥ ೬೮ ॥ ಇಷ್ಟೊಂದು ಆಶ್ಚರ್ಯಕರವಾಗಿ ಆಕೆಯನ್ನು ವರ್ಣಿಸಿದುದರಿಂದ ಆಕೆಯೇನು ದೇವತಾಸ್ತ್ರೀಯೆ? ಎಂದು ಕೇಳಬಹುದು ಆಕೆಯ ಅಚ್ಚಿನ ಹೆಂಗುಸರೇ ದೇವತಾಸ್ತ್ರೀಯರೆನ್ನುವಾಗ ಆಕೆಯ ಸೌಂದರ್ಯದ ಆಶ್ಚರ್ಯವನ್ನು ಏನೆನ್ನಲಿ! ॥ ೬೯ ॥ ನಾನು ಸಂಚರಿಸದಿರುವ ದೇಶವೇ ಇಲ್ಲ ಆ ದೇಶಗಳಲ್ಲಿ ಇಂತಹ ಹೆಣ್ಣಿಗೆ ಎಣೆಯಾಗುವ ಸುಂದರಿಯರೇ ಇಲ್ಲ – ಎಂದು ನಾರದನು ರಾವಣನಿಗೆ ಏಕಾಂತದಲ್ಲಿ ತಿಳಿಸಿದನು ॥ ೭೦ ॥ ಆಕೆಯ ದೇಹದ

---

[1] ಅರಗಿಣಿ (ಕ) ಅರಲುಣಿ (ಚ) [2] ಮಿಂಚಿನ ಪೊಟಪಿಟ್ಟಸುವ (ಚ) [3] ಪೆಣ್ಗನಲವಳ (ಗ) [4] ಶಾತೋದರಿಯರೆಯಿಲ್ಲೆಂ (ಚ)
[5] ಪೆಣ್ಗಳೊಳಿಲ್ಲವು (ಕ ಗ)

ಆವೆಡೆಗವಳೈದಲು ದಿವ್ಯಾಮೋದ । ತೀವುವುದ[1]ವಳ ಮೈಗಂಪು ॥
ಆವನವಳ ನಿಂದು ನಿಟ್ಟಿಸೆ ನಿನ್ಮಾಣಿ । ದೇವತ್ವವ ಪಡೆದಿಹನು[2] ॥ ೭೨ ॥

ಭಾವಜ ಶುಕ್ತಿ[3]ಭಾವಕಿಯಾದುದೊ ನವ । ಲಾವಣ್ಯರಸದ ಪುತ್ಥಳಿಯೊ ॥
ದೇವಾಂಗನೆ ಮಾನವ ಸತಿಯಾದಂ । ತಾ ವಧುವವಳೆ ಚೆಲ್ವಿಂದ ॥ ೭೩ ॥

ಚೆಲುವಿನ ಬೀಡು ಸಿಂಗರದಿಕ್ಕೆ ಸೊಬಗಿನ । ನೆಲೆ ಕಡುಗಾಡಿಯ ಗರಡಿ ॥
ಸುಲಲಿತ ಸುಖದ ಸಾಗರವೆನ್ನದೇನೆಂಬೆ । ಲಲನೆಯಂಗದ ಚೆಲ್ವಿನಿರವ ॥ ೭೪ ॥

ನಾಕನಾಯಕಿಯರ ರೂಪು ಸೊಬಗು ನಾಗ । ಲೋಕದ ಸತಿಯರ ರೀತಿ ॥
ಆ ಕುವರಿಗೆ ಪಡಿ ದೊರೆಯಲ್ಲವೆನೆ ನರ । ಲೋಕದ ಪೆಣ್ಣುಗಳೆಣೆಯೆ[4] ॥ ೭೫ ॥

ಕಣ್ಣಿನೊಳಗೆ ಕಂಡುದಿಲ್ಲ ಕಿವಿಯೊಳಗೆ[5] । ಬಣ್ಣಿಸಿ ಕೇಳಿದುದಿಲ್ಲ ॥
ಬಣ್ಣನಾತಲ್ಲ ಕೇಳಮುನು ನಾನಂತಪ್ಪ । ಹೆಣ್ಣ ಕಾಣೆನು[6] ಲೋಕದೊಳಗೆ ॥ ೭೬ ॥

ಆ ಸುಕುಮಾರಿಯ ಪಡೆದ ಜನನಿಯವ । ಳೇಸು ಪುಣ್ಯವ ಮಾಡಿದಳೊ ॥
ಆಸೆವಟ್ಟಾವ ನೋಂಪಿಯ ನೋಂತು[7] ಪಡೆದನಂ । ದಾ ಸುದತಿಯ ಜೀವಕಾಂತ[8] ॥ ೭೭ ॥

ನಾರದನವಳ ರೂಪಾತಿಶಯವನಂ । ದಾ ರಾವಣಗೆ ಪೇಳೆ ಕೇಳ್ದು ॥
ಮಾರಗೆ ಮನವನೊಪ್ಪಿಸಿದನು ಕಿವಿವೇಟ । ವಾರ ಸೋಲಿಸದು ಮೃಗಾಕ್ಷಿ ॥ ೭೮ ॥

---

ವಾಮಭಾಗಕ್ಕೆ ದಕ್ಷಿಣಭಾಗವೇ ಹೋಲಿಕೆ. ಅವಳ ದೇಹಕ್ಕೆ ಪ್ರತಿಬಿಂಬವೇ ಎಣೆಯಾದುದು. ಇದಲ್ಲದೆ ಅವಳಿಗೆ ಸಮಾನರಾಗುವ ಹೆಂಗುಸರು ಲೋಕದಲ್ಲೇ ಇಲ್ಲವೆಂದು ನಾರದನು ರಾವಣನಿಗೆ ಹೇಳಿದನು ॥ ೭೧ ॥ ಅವಳು ಹೋದ ಕಡೆಯಲ್ಲೆಲ್ಲಾ ಅವಳ ದೇಹದ ಸುವಾಸನೆಯು ತುಂಬಿಕೊಳ್ಳುವುದು ಯಾವನೇ ಆಗಲಿ, ಅವಳನ್ನು ನಿಂದು ನೋಡಿದನಾದರೆ ನಿನ್ಮಾಣಿಯಾಗಿಯೂ ದೇವನೇ ಆಗುವನು. ॥ ೭೨ ॥ ಕಾಮನೆಂಬ ಚಿಪ್ಪು ಸ್ತ್ರೀರೂಪವನ್ನು ತಾಳಿತೋ, ಆಕೆಯು ಹೊಸ ಸೌಂದರ್ಯವೆಂಬ ರಸದ ಗೊಂಬೆಯೋ, ದೇವತಾ ಸ್ತ್ರೀಯು ಮನುಷ್ಯ ಸ್ತ್ರೀಯಾದುದೋ ಎಂಬಂತೆ ಚೆಲ್ವಿನಿಂದ ಕೂಡಿರುವಳು. ॥ ೭೩ ॥ ಆ ಸ್ತ್ರೀಯ ಸೌಂದರ್ಯವಿಷಯವನ್ನು ಚೆಲುವಿನ ಬೀಡು ಎಂತಲೂ, ಶೃಂಗಾರದ ಆಶ್ರಯವೆಂತಲೂ, ಸೊಬಗಿನ ನೆಲೆಯೆಂತಲೂ, ಸೌಂದರ್ಯಾತಿಶಯದ ಅಭ್ಯಾಸ ಶಾಲೆಯೆಂತಲೂ, ಚೆಲುವಾದ ಸೌಖ್ಯದ ಸಮುದ್ರ ಎಂತಲೂ ಹೇಳಬೇಕಲ್ಲದೆ, ಬೇರೆ ಏನೆನ್ನಲೂ ಆಗದು. ॥ ೭೪ ॥ ಆ ಕುಮಾರಿಗೆ ದೇವಲೋಕದ ನಾಯಕಿಯರ ರೂಪಸೌಂದರ್ಯವೂ ನಾಗಲೋಕದ ಸ್ತ್ರೀಯರ ರೀತಿಯೂ ಎಣೆಯಲ್ಲವೆನ್ನುವಾಗ ಈ ಮಾನವಲೋಕದ ಸ್ತ್ರೀಯರು ಎಲ್ಲಿಯಾದರೂ ಸಮಾನರೆನಿಸುವುದುಂಟೆ? ॥ ೭೫ ॥ ಎಲೈ ರಾವಣನೇ ಕೇಳು ಇದು ವರ್ಣನೆಯ ಮಾತಲ್ಲ ನಾನು ಅಂತಹ ಹೆಣ್ಣುಗಳನ್ನು ಕಣ್ಣಿನಲ್ಲಿ ಕಂಡಿಲ್ಲ. ಕಿವಿಯಲ್ಲಿ ಕೇಳಿಲ್ಲ ಏನು ಆಶ್ಚರ್ಯವೋ ! ಭೂಲೋಕದಲ್ಲಿ ಆಕೆಯಂತಹ ಹೆಣ್ಣುಗಳಿಲ್ಲ ॥ ೭೬ ॥ ಆ ಸುಕುಮಾರಿಯನ್ನು ಹೆತ್ತ ತಾಯಿ ಅದೆಷ್ಟು ಪುಣ್ಯವನ್ನು ಮಾಡಿರುವಳೋ ! ಆಕೆಯ ಗಂಡನು ಆಸೆಪಟ್ಟು ಯಾವ ವ್ರತವನ್ನು ಮಾಡಿ ಆಕೆಯನ್ನು ಹೆಂಡತಿಯಾಗಿ ಪಡೆದನೋ ! ॥ ೭೭ ॥ ನಾರದನು ಹೀಗೆ ಸೀತೆಯ ಸೌಂದರ್ಯವನ್ನು ಆ ರಾವಣನಿಗೆ ಹೇಳಲು ಅವನು ಕೇಳಿ, ಕಾಮವಶನಾದನು. ಎಲೈ ಚೆಲುವೆಯೋ ಕಿವಿಯಾಸೆಯು ಯಾವನ ಮನವನ್ನು ತಾನೇ ಸೆಳೆಯದು ! ॥ ೭೮ ॥ ರಾವಣನು

---

[1] × (ಗ) [2] ಪಡೆದಿಹರು (ಕ) ಪಡೆದಿಹನೆ (ಗ, [3] ಸಕ್ತಿ (ಗ.ಚ). [4] ಪೆಣ್ಣು ಪಾಸಟಿಯೆ (ಗ.ಚ) [5] ಕಿವಿಯೊಳಾನು (ಗ ಚ.).
[6] ಹೆಣ್ಣುಗಳನು (ಕ) [7] ಮಾಡಿ (ಚ) [8] ಜೀವಕಾಂತೆ (ಚ)

ತಂದಪೆನಾವ[1] ಬಗೆಯೊಳಾ ಸೀತೆಯ । ನೆಂದು ಕೋಪದೊಳು ಸಭೆಯಲಿ ॥
ಅಂದು ನುಡಿದ ಮೇಲನಱಿಯದೆಯಾ ದಶ । ಕಂಧರನದ ಕೇಳಿ ಮುನಿಪ ॥ ೭೯ ॥

ರಾಮಲಕ್ಷ್ಮಣರಿಗೆ ಮೂಱು ಖಂಡದೊಳುಳ್ಳ । ಭೂಮಿಪತಿಗಳು ತಂತಮ್ಮ ॥
ಪ್ರೇಮದ ಸುತೆಯರ ಕೊಟ್ಟು ನಣ್ಪಿಂ[2]ದಿಪ್ಪ । ರಾ ಮಹೀಪತಿಯೊಳಗಾಗಿ ॥ ೮೦ ॥

ಆದಱಿಂದಲವರಿಗೆ ಕೂಟಾಟ ಬಲುಹಾಗಿ । ಪೊದಗುವುದವರೊಳು ನಿನಗೆ ॥
ಕದನ ಸಲ್ಲದು ನೀ ಸರಿಯಲ್ಲವೆನೆ ಕೋಪ । ಪೊದವಿ ನುಡಿದ ನಾರದಗೆ ॥ ೮೧ ॥

ನನ್ನ ಬಲುಮೆಯನವರ ಶಕ್ತಿಯ ನೀನು । ಚೆನ್ನಾಗಿ ನೋಡಿ ಪೋಗೆಂದು ॥
ಚುನ್ನವಾಡುತ ರಾಮಚಂದ್ರನ ದಶಕಂಠ । ತನ್ನ ತಾನಱಿಯದಾಡುತವೆ ॥ ೮೨ ॥

ಇರದಲ್ಲಿಂದೆದ್ದು ಮಂತ್ರಶಾಲೆಗೆ ಬಂದು । ಭರದಿ ಕರೆಸಿ ಮಾರೀಚನಿಗೆ[3] ॥
ವಿರಚಿಸಿದನು ಕಾರ್ಯಭಾಗಿಯ[4] ಮಾತನು । ತರಹರಿಸದೆ ಮನದೊಳಗೆ ॥ ೮೩ ॥

ಸ್ತ್ರೀರತ್ನ ಚಕ್ರೇಶ್ವರನಿಗಲ್ಲದೆ ಮ । ತ್ತಾ ರಾಮನಿಗೆ ಸಲುವುದೆ ॥
ದೂರೀಕರಿಸದೆ ನನ್ನ[5] ವಚನವ ವಿ । ಚಾರಿಸಿಕೊಂಡು ಪೇಳೆನಗೆ ॥ ೮೪ ॥

ಮಱೆ ಬೇಡ ಮಾಯ ನಿನಗೆ ಬೇಡ ಕಾರ್ಯದ । ಹೊಱಿಗೆಯ[6] ಹೇಳು ಹೇಳೆನಲು[7] ॥
ಉಱುಬೆಯನಿಕ್ಕಿಕ್ಕಿ ನುಡಿದ ಮಾರೀಚಗೆ । ತೆಱೆಪರಸಾಗಿ[8] ರಾವಣನು ॥ ೮೫ ॥

---

ತನ್ನ ಸಭೆಯಲ್ಲಿ ಆಗ ಕೋಪದಿಂದ ಆ ಸೀತೆಯನ್ನು ಯಾವ ರೀತಿಯಲ್ಲಿಯಾದರೂ ತರುವೆನು ಎಂದು ಮುಂದಾಲೋಚನೆಯಿಲ್ಲದೆ ಹೇಳಿದನು ಆಗ ನಾರದನು ಹೀಗೆ ಹೇಳಿದನು ॥ ೭೯ ॥ ಆ ರಾಮಲಕ್ಷ್ಮಣರು ಸಾಮಾನ್ಯರಲ್ಲ ಮಹಾಶೂರರಾದ ಅವರಿಗೆ ಮೂರು ಖಂಡಗಳಲ್ಲಿಯೂ ಇರತಕ್ಕ ರಾಜರು ತಮ್ಮ ತಮ್ಮ ಪ್ರೀತಿಯ ಹೆಣ್ಣುಮಕ್ಕಳನ್ನು ಕೊಟ್ಟು, ಅವರೊಡನೆ ಏರಕದಿಂದ ಬಾಳುತ್ತಿರುವರು ॥ ೮೦ ॥ ಆದುದರಿಂದ ಆ ರಾಮಲಕ್ಷ್ಮಣರಿಗೆ ಇತರ ರಾಜರ ಸಹಾಯಶಕ್ತಿ ಅಧಿಕವಾಗಿದೆ ಅವರೊಡನೆ ಯುದ್ಧವು ನಿನಗೆ ಸಾಧ್ಯವಾಗದು ಅವರಿಗೆ ನೀನು ಎಣೆಯಲ್ಲ—ಎಂದು ನಾರದನು ಹೇಳಲು ರಾವಣನು ಕ್ರೋಧದಿಂದ ಹೀಗೆ ಹೇಳಿದನು—॥ ೮೧ ॥ ಎಲೈ ನಾರದನೇ, ನನ್ನ ಸಾಮರ್ಥ್ಯವನ್ನೂ ಆ ರಾಮಲಕ್ಷ್ಮಣರ ಸಾಮರ್ಥ್ಯವನ್ನೂ ನೀನು ಚೆನ್ನಾಗಿ ನೋಡಿಹೋಗು—ಎಂದು ಹೇಳಿದನು ರಾವಣನು ಶ್ರೀರಾಮನನ್ನು ಅಣಕಿಸುತ್ತ ತನ್ನನ್ನು ತಾನು ತಿಳಿಯದೆ ಮಾತಾಡಿದನು ॥ ೮೨ ॥ ರಾವಣನು ಕೂಡಲೇ ಅಲ್ಲಿಂದ ಎದ್ದು ಮಂತ್ರಶಾಲೆಗೆ ಬಂದನು ಬೇಗನೇ ಮಾರೀಚನನ್ನು ಕರೆಸಿ, ಅವನಿಗೆ ಕಾರ್ಯಭಾಗವನ್ನು ವಹಿಸಲು ಹೀಗೆಂದನು ॥ ೮೩ ॥ ಎಲೈ ಮಾರೀಚನೇ, ಸ್ತ್ರೀರತ್ನವು ಮಹಾರಾಜನಾದ ನನಗೆ ಸಲಬೇಕಲ್ಲದೆ. ಆ ರಾಮನಿಗೆ ಸಲ್ಲಲು ಯೋಗ್ಯವ? ನನ್ನ ಮಾತನ್ನು ಅಲಕ್ಷಿಸದೆ ಚೆನ್ನಾಗಿ ಯೋಚಿಸಿ ನನಗೆ ತಿಳಿಸು ಎಂದನು ॥ ೮೪ ॥ ಎಲೈ ರಾವಣನೇ, ಮುಚ್ಚುಮರೆ ಯಾಕೆ? ಮಾಯೆಯ ಮಾತು ಯಾಕೆ? ಯಾವ ಕಾರ್ಯ ನನ್ನಿಂದ ಆಗಬೇಕೆಂಬುದನ್ನು ಹೇಳು—ಎಂದು ಮಾರೀಚನು ಹೇಳಿದನು ಆಗ ರಾವಣನು ಭಾವದ ಒತ್ತಡದಿಂದ ಮಾರೀಚನಿಗೆ ಹೀಗೆಂದನು ॥ ೮೫ ॥ ಜನಕರಾಜನ ಮಗಳಾದ ಸೀತೆಯನ್ನು ತರುವ ಒಂದು ಉಪಾಯವನ್ನು ನನಗೆ ಮನಪೂರ್ವ-

---

[1] ತಂದಪೆ ನಾನಾ (ಚ) [2] ನಣ್ಪಿಂ (ಗ ಚ) [3] ಬರಿಸಿ ಮಾರೀಚನನವನು (ಗ,ಚ) [4] ಕಾರ್ಯಬಾಗೆಯ (ಗ) ಕಾರ್ಯಭಾಗಯ (ಚ)
[5] ತನ್ನ (ಕ) [6] ಹರಿಗೆಯ (ಗ) [7] ಹೇಳೆಂದು (ಚ) [8] ತೆಱೆದರಿಪಾಗಿ (ಗ) ತೆಱೆದರೆ ಸಾಗಿ (ಚ)

ಜನಕನ ಸುತೆಯನು ತಹುದೊಂದುಪಾಯವ । ಮನವೊಡಬಡುವಂತೆ ನೀನು ॥
ಅನುವಡಿಸೆಂದು ರಾವಣ ಲಜ್ಜೆಯ ತನ್ನ । ಮನದಿಂದ[1] ಬಿಟ್ಟು ನುಡಿದನು ॥ ೮೬ ॥

ಎನಲೆಂದ ನೀನೆನಗಿದ ಕಾರ್ಯ ಪಾಪಕ್ಕೆ । ಜನನಸ್ಥಲವಪಕೀರ್ತಿ[2] ॥
ಜನಿಸುವ ನೆಲ ಮನೋವಚನದೊಳಿದ ನೀನು । ನೆನೆಯಬಹುದೆ ಖೇಚರೇಂದ್ರ[3] ॥ ೮೭ ॥

ಸಲ್ಲದು ನಿನಗಪಜಯ ಬೊಡ್ಡಿಯ[4] ಚೇಟ । ಸಲ್ಲದು ಕಿವಿವೇಟ ಪರರ ॥
ವಲ್ಲಭೆಯರ ತಹುದಾಗದಾಗದು ನಿನ । ಗಲ್ಲದ ನಡೆ ಬೇಡ ನೃಪತಿ ॥ ೮೮ ॥

ನುಡಿವೊಡೆ[5] ಬುದ್ಧಿಯ ಮಂತ್ರಿಯಲ್ಲೆನಗೆ ನೀ । ಪಡಿಮಾತುಗೊಡದೆ ರಾಘವನ ॥
ಮಡದಿಯ ತಪ್ಪೊಂದುಪಾಯವ[6] ನುಡಿ ನುಡಿ । ನುಡಿಯೆಂದವನೊತ್ತಿ ನುಡಿದ ॥ ೮೯ ॥

ಅವನ ದುರಾಗ್ರಹವನು ಕಂಡು ಮಾರೀಚ । ನವನಿಚ್ಛೆಯೊಳಿದು ನುಡಿದನು ॥
ಅವಳೆಡೆಗೋರ್ವರು ಮೊದಲೈದಿ ನುಡಿಯಲು । ಕಿವಿವೇಟಕೆ ಸೋಲುವಂತೆ ॥ ೯೦ ॥

ಒಡಬಡಿಕೆಯ ಮಾತಿಗನುರಕ್ತೆಯಾದೊಡಂ[7] । ದೊಡಬಟ್ಟಡೊಡಗೊಂಡು[8] ಬರಲಿ ॥
ಒಡಬಡದವಳು ವಿರಕ್ತೆಯಾದೊಡೆ ತನ್ನ । ಪಿಡಿದು ತಂದಪೆ ಬಲ್ಪಿನಿಂದೆ ॥ ೯೧ ॥

ಆಹುದು ಕಾಣೈ ನೀನಾಡಿದ ಕಾರ್ಯವಿ । ದಹುದಹುದೆಂದೊಡಬಟ್ಟು ॥
ವಹಿಲದೊಳವಳೆಡೆ[9]ಗಾರು ಪೋಪವ[10]ರೆಂದು । ಮಹಿಪತಿ ಚಿಂತಿಸುತಿರ್ದ ॥ ೯೨ ॥

ವಂತೆ ತಿಳಿಸು ಎಂದು ರಾವಣನು ನಾಚಿಕೆ ಬಿಟ್ಟು ಹೇಳಿದನು ॥ ೮೬ ॥ ಆಗ ಮಾರೀಚನು "ಎಲೈ ಖೇಚರರ ಅರಸನೇ, ನಿನ್ನ ಈ ಕಾರ್ಯವು ಪಾಪಕ್ಕೆ ಜನ್ಮಸ್ಥಾನವಾಗಿದೆ; ದುಷ್ಕೀರ್ತಿಗೆ ತವರಾಗಿದೆ ಇಂತಹ ಕೃತ್ಯದ ಯೋಚನೆ ನಿನ್ನ ಮನಸ್ಸಿನಲ್ಲಾಗಲೀ ಮಾತಿನಲ್ಲಾಗಲೀ ಬರಬಹುದೆ? ॥ ೮೭ ॥ ಎಲೈ ರಾಜನೇ ಅಪಜಯವೆಂಬ ದಾಸಿಯೊಡನೆ ಕಾಮಚೇಷ್ಟೆಯಿದು ನಿನಗೆ ಯೋಗ್ಯ ವಲ್ಲ ಹೆಣ್ಣಿನ ಸುದ್ದಿ ಕೇಳಿ ಮರುಳಾಗುವುದು ಯೋಗ್ಯವಲ್ಲ ಬೇರೆಯವರ ಹೆಂಡಿರನ್ನು ತರುವುದು ಅಯೋಗ್ಯವರ್ತನೆ! ನಿನಗೆ ಒಪ್ಪುವ ನಡತೆ ಇದಲ್ಲ ಆದುದರಿಂದ ಈ ಕೆಲಸ ಬೇಡ." ಎಂದನು ॥ ೮೮ ॥ ಆಗ ರಾವಣನು 'ಎಲೈ ಮಾರೀಚನೇ ನನಗೆ ನೀತಿಯನ್ನು ಹೇಳಲು ನೀನು ನನ್ನ ಮಂತ್ರಿಯಲ್ಲ. ಆದುದರಿಂದ ಪ್ರತ್ಯುತ್ತರವನ್ನು ಕೊಡದೆ, ರಾಮನ ಹೆಂಡತಿಯನ್ನು ತರುವ ಉಪಾಯವನ್ನು ಹೇಳು, ಹೇಳು, ಹೇಳು—ಎಂದು ಬಲಾತ್ಕರಿಸಿ ಹೇಳಿದನು ॥ ೮೯ ॥ ಮಾರೀಚನು ಆಗ ರಾವಣನ ಕೆಟ್ಟ ಹಟವನ್ನು ಕಂಡು, ಅವನ ಇಚ್ಛೆಗೆ ಅನುಸಾರವಾಗಿ ಹೀಗೆಂದನು—' ಆ ಸೀತೆಯ ಬಳಿಗೆ ಮೊದಲು ಯಾರಾದರೂ ಒಬ್ಬರು ಹೋಗಿ ಆಕೆಯು ನಿನ್ನ ಸುದ್ದಿ ಕೇಳಿ ಮೋಹಗೊಳ್ಳುವಂತೆ ಮಾತಾಡಬೇಕು ॥ ೯೦ ॥ ಆಕೆಗೆ ಒಪ್ಪಿಗೆಯಾಗುವಂತೆ ಆಡಿದ ಮಾತಿನಿಂದಲೇ ಅನುರಾಗಹೊಂದಿದರೆ, ಆಕೆಯನ್ನು ಹಾಗೆಯೇ ಕರೆದುಕೊಂಡು ಬರಲಿ. ಅವಳು ಒಪ್ಪದೆ, ವಿರಾಗ ಹೊಂದಿದರೆ, ಆಕೆಯನ್ನು ನಾನು ಸಾಮರ್ಥ್ಯದಿಂದ ಹಿಡಿದು ತರುವೆನು' ಎಂದನು. ॥ ೯೧ ॥ ಹೌದು ಕಾಣಯ್ಯ, ನೀನು ಹೇಳಿದ ಕಾರ್ಯವು ಸರಿ. ಎಂದು ರಾವಣನು ಒಪ್ಪಿ, ಆಕೆಯ ಸಮೀಪಕ್ಕೆ ಕೂಡಲೇ ಹೋಗತಕ್ಕವರು ಯಾರು?—ಎಂದು

[1] × (ಗ)   [2] ಜನನಸ್ಥಾನಾಪಕೀರ್ತಿ (ಚ)   [3] ಖಚರೇಂದ್ರ (ಗ ಚ)   [4] ಪೊಡ್ಡಿಯ (ಗ)   [5] ನುಡಿದೊಡೆ (ಚ)
[6] ತಪ್ಪೋಪಾಯವ (ಕ) ತಪ್ಪಿಪಾಯವ (ಚ)   [7] ಯಾಗಿಯುಂ (ಗ ಚ)   [8] ಬಟ್ಟೊಡೊಡಗೊಂಡು (ಚ)   [9] ವಹಿಲದಿಂದವಳೆಡೆ (ಚ).
[10] ಪೋದವ (ಗ)

ಕಡು ಮೂರ್ಖರು ಕಡುಕಾಮಿಗಳನೃತವ । ನುಡಿವರು ಮದ್ಯಪಾನಿಗಳು ॥
ಅಡಗ ತಿಂಬವರರವ[1] ಬೇಡೆನಲಾ ಮಾತ । ಪಿಡಿವರೆ ಪಾಪಕಂಜದರು ॥ ೯೩ ॥

ಎಂದು ತನ್ನೆರ್ದೆಯೊಳು[2] ಮಾರೀಚನು ಮನ[3] । ನೊಂದವನಲ್ಲಿಂದ ತನ್ನ ॥
ಮಂದಿರಕ್ಕೈದಿದ ರಾವಣನಿಗೆ ಮತ್ತೆ । ಬಂದುದು ವಿರಹಾವಸ್ಥೆ[4] ॥ ೯೪ ॥

ಹೇಳಲೊಡನೆ ನಾರದನಾ ಸೀತೆಗೆ । ಬೇಳಾದನು ಬೆಮರಿದನು ॥
ಕೋಳುಹೋದನು ಅಂಗಜನೃಪತಿಗೆ ಹಿಡಿ । ಯಾಳಾದನು ರಾವಣನು ॥ ೯೫ ॥

ಅವಳ ನುಡಿಗೆ ಕಿವಿಯವಳ ರೂಪಿಗೆ ಕ । ಣ್ಣವಳ ಮೈಗಂಪಿಗೆ ಮೂಗು ॥
ಅವಳ ತಕ್ಕೆಗೆ ತೋಳಧರಕ್ಕೆ ನಾಲಗೆ । ತವೆ ಸೋಲ್ತವಾ[5] ನೃಪವರನ ॥ ೯೬ ॥

ಒಡಬಟ್ಟುದಾ ಮನವೊಪ್ಪಿದುದಾ ಬುದ್ಧಿ । ಕಡುರಾಗಿಸಿದುದಾ ಚಿತ್ತ ॥
ಬಿಡದೆಸೆದುದಹಂಕಾರವಾ[6]ನೃಪತಿಯು । ನುಡಿವುದೇನವಳ್ಗೆ* ಸೋಲ್ತುದನು ॥ ೯೭ ॥

ನುಡಿಯಲಮ್ಮದು ಬುದ್ಧಿ ನೋಡಲಮ್ಮದು ನೀತಿ । ಮಿಡುಕಲಮ್ಮದು ಮೊಱೆ ಧರ್ಮ ॥
ಅಡಿಯಿಡಲಮ್ಮದು ಧೈರ್ಯವೆಂದೆನಲವ । ಕಡು ಸೋಲ್ತ[7]ನವಳಿಗಬ್ಜಾಕ್ಷಿ ॥ ೯೮ ॥

ಉಸುರಲಮ್ಮದು ವ್ರತ ತಲೆಯೆತ್ತಿ ನಿಲುಕಿ ನಿ । ಟ್ಟಿಸಲಮ್ಮದು ಸಚ್ಚರಿತ ॥
ಎಸಗಲಮ್ಮದು ವಿವೇಕತೆಯೆಂದೆನಲವ । ವಶವಾದನಾ ಕೋಮಲೆಗೆ ॥ ೯೯ ॥

---

ಯೋಚಿಸುತ್ತಿದ್ದನು ॥ ೯೨ ॥ ಆಗ ಮಾರೀಚನು ತನ್ನ ಮನಸ್ಸಿನಲ್ಲೇ ಹೀಗೆ ಹೇಳಿಕೊಂಡನು—'ಅತ್ಯಂತ ಮೂರ್ಖರು ಬಹಳ ಕಾಮುಕತೆಯುಳ್ಳವರು, ಅಸತ್ಯವಾದಿಗಳು ಮದ್ಯಪಾನಮಾಡುವವರು, ಮಾಂಸಾಹಾರಿಗಳು—ಪಾಪಕೃತ್ಯಕ್ಕೆ ಹೆದರದಿರುವ ಇಂಥಾ ಜನರು 'ಅದು ಬೇಡ ಇದು ಮಾಡಬಾರದು' ಎಂದೆಲ್ಲ ಹೇಳಿದರೆ ಮಾತನ್ನು ಕೇಳುವರೆ?" ॥ ೯೩ ॥ ಮಾರೀಚನು ಹೀಗೆ ಮನನೊಂದವನಾಗಿ ಅಲ್ಲಿಂದ ತನ್ನ ಮನೆಗೆ ತೆರಳಿದನು ರಾವಣನಿಗೆ ಸೀತಾವ್ಯಾಮೋಹದಿಂದ ಆ ಮೇರೆ ವಿರಹಾವಸ್ಥೆಯುಂಟಾಯಿತು ॥ ೯೪ ॥ ನಾರದನು ಸೀತೆಯ ಸೊಬಗನ್ನು ವಿವರಿಸಿದೊಡನೆ ರಾವಣನು ಸೀತೆಗೆ ಮರುಳಾದನು ಬೆವರಿದನು ಕೊಳ್ಳೆಯಾದನು ಕಾಮಚಕ್ರೇಶ್ವರನ ಕೈದಿಯಾದನು ॥ ೯೫ ॥ ಆ ರಾವಣನ ಕಿವಿ ಅವಳ ಮಾತಿಗೂ, ಕಣ್ಣು ಅವಳ ರೂಪಕ್ಕೂ, ಮೂಗು ಆಕೆಯ ದೇಹದ ಪರಿಮಳಕ್ಕೂ, ಕೈಯು ಆಕೆಯ ಆಲಿಂಗನಕ್ಕೂ, ನಾಲಗೆಯು ಆಕೆಯ ಕೆಳ ತುಟಿಗೂ ಸೋತವು ॥ ೯೬ ॥ ಅವನ ಮನಸ್ಸು ಸೀತೆಯನ್ನು ಒಡಂಬಟ್ಟಿತು, ಬುದ್ಧಿಗೆ ಒಪ್ಪಿಗೆಯಾಯಿತು ಚಿತ್ತವು ಪ್ರೀತಿಪಟ್ಟಿತು ಅಹಂಕಾರವು ಉಜ್ವಲವಾಯಿತು ಆ ರಾವಣನು ಸೀತೆಗೆ ಸೋತುದನ್ನು ಏನೆನ್ನಲಿ! ॥ ೯೭ ॥ ಎಲೈ ಜೇಳಿನಿಯೇ ಆ ರಾವಣನ ಬುದ್ಧಿಯು ಬೇರೆ ಮಾತಾಡಗೊಡದು ನೀತಿಯು ಮಂಕಾಯಿತು ನಂಟುತನವು ಕದಲದಂತಾಯಿತು ಧರ್ಮವು ಹೆಜ್ಜೆಯಿಡದು ಅವನ ಧೈರ್ಯವು ಉಡುಗಿತು ಇಷ್ಟೊಂದು ಅವನು ಸೀತೆಗೆ ಮರುಳಾದನು ॥ ೯೮ ॥ ರಾವಣನು ಸೀತೆಗೆ ಮಾರುಹೋದುದರಿಂದ ಅವನ ವ್ರತವು ಉಸುರಿಕ್ಕುವಂತಿಲ್ಲ ಒಳ್ಳೆ ನಡತೆಯು ತಲೆಯೆತ್ತಿ ನಿಲುಕಿ ನೋಡುವಂತೆಯೇ ಇಲ್ಲ ವಿವೇಕವು ಕ್ರಿಯಾಶೂನ್ಯವಾಯಿತು ॥ ೯೯ ॥ ನೀತಿಯು ಅವನನ್ನು 'ನಿಲ್ಲು' ಎಂದು ತಡೆಯಲಾರದು. ಧೈರ್ಯಗುಣವು ಬೇಡವೆನ್ನದು ಸದ್ಗುಣವು ಹೌದು ಅಲ್ಲವೆಂಬ ಯಾವ ಶಬ್ದವನ್ನೂ ಎನ್ನುವಂತಿಲ್ಲ ರಾವಣನು ಈ ರೀತಿಯಲ್ಲಿ

---

[1] ತಿಂಬವರವ್ವ (ಗ ಚ) [2] ತನ್ನೆದೆಯೊಳು (ಕ) ತನ್ನೆಡೆಯೊಳು (ಗ) [3] ಮಾರೀಚ ನುಡಿವುತ (ಗ ಚ) [4] ಕೈದೆ ರಾವಣಗೆ ವಿರಹಾವಸ್ಥೆ। ಬಂದುದಱಸ ಬಣ್ಣಿಪೆನು (ಕ) [5] ಸೋಲುತ (ಕ) [6] ಬಿಡದೆಸೆದುದು ಅಹಂಕಾರವಾ (ಕ) [7] ಸೋತ (ಚ)

ನಿಲ್ಲೆನ್ನಲಮ್ಮದು ನೀತಿ ನೀ ಬೇಡೆಂದು । ನೊಲ್ಲಿಸಲಮ್ಮದು ಧೈರ್ಯ ॥
ಅಲ್ಲಹುದೆನಲಮ್ಮದು ಸದ್ಗುಣ ಸವಿ । ವಿಲ್ಲನಿಗೊಳಗಾದನವನು ॥ ೧೦೦ ॥

ಶರಧಿಯ ವಡಬನೆಂತಂತೆ ಗುಹೆಯ ಕಿಚ್ಚಿ । ನಿರವೆಂತುಟಂತೆ ತರುವಿನ ॥
ವರಸಪ್ತಾರ್ಚಿಯೆಂತಂತವ ಬೇವುತ್ತ । ವಿರಹದಿಂದಿರ್ದನಬ್ಜಾಕ್ಷಿ ॥ ೧೦೧ ॥

ಆ ರಾವಣನ ವಿರಹಾಗ್ನಿಗೆ ಕಡುನೊಂ । ದಾ ರವಿ ಪಡುವಣ ದೆಸೆಯ ॥
ವಾರಿಧಿಯೊಳಗಾಳ್ದನೆನೆ ಬಾಳ್ವರೆಡರನ । ದಾರು ಸೈರಿಪರೇಣನೇತ್ರೆ ॥ ೧೦೨ ॥

ಅಂಚೆಗಮನೆ ಪರಾಕ್ರಮ ಪಂಥಗಳು ಹಱಿ । ಹಂಚಾಗದೆ ಬಾಳ್ವವಗೆ[1] ॥
ಸಂಚಿತ ಕರ್ಮದಿಂದೆಡರಡಸಲು ಚಿತ್ತ । ಸಂಚಲವಾಗದೆ ಬುಧರ ॥ ೧೦೩ ॥

ರೂಪು ಸಂಪದ ವಿತರಣ ವಿದ್ಯೆ ಸತ್ಕೀರ್ತಿ । ವ್ಯಾಪಿಸಿ ಬಾಳ್ವ ಬಲ್ಲಿದಗೆ ॥
ಪಾಪದ ಫಲದಿಂದೆಡರಡಸಿದೊಡೆ ಪ್ರ । ಳಾಪಿಸದಿಹರೆ ಬಲ್ಲವರು ॥ ೧೦೪ ॥

ನಾಕನಾಯಕನ ಸಂಪದವನಲ್ಲೆಂದೆಂಬ । ನೇಕವಿಧ[ದಿ][2] ಬಾಳ್ವವಗೆ ॥
ಆ ಕರ್ಮವಶದಿಂದೆಡರಡಸಿದೊಡೆ ವಿ । ವೇಕಿ ದುಃಖಿಸನೆ ಮೃಗಾಕ್ಷಿ ॥ ೧೦೫ ॥

ಕರ್ಮಾಧೀನ ತಾನಲ್ಲದೆ ಭಾವಿಸೆ । ಕರ್ಮ ತನ್ನಾಧೀನವಲ್ಲ ॥
ಧರ್ಮಜ ಪದ್ಮಜಾಧೋಕ್ಷಜರಳಿದರಾ । ಕರ್ಮದಿಂ ಬಲ್ಲಿದರಾರು ॥ ೧೦೬ ॥

ಕಾಂತೆ ಕೇಳಾ ದಶಕಂಠಗೆ ಕಾವನ । ತ್ಯಂತ ಸಂಕಟವನೆಸಗಲು ॥
ತಾಂ ತಾಳಲಾಱದೆ ವಿರಹದಿಂ ಕಡುನೊಂ । ದಿಂತು ಚಿಂತಿಸಿದ[3]ಚಿತ್ತದೊಳು ॥ ೧೦೭ ॥

---

ಕಾಮವಶನಾದನು. ॥ ೧೦೦ ॥ ಎಲೈ ಚೇಳಿನಿಯೇ ಆ ರಾವಣನು ಸಮುದ್ರದ ವಡಬಾಗ್ನಿಯಂತೆಯೂ. ಗುಹೆಯೊಳಗಣ ಬೆಂಕಿಯಂತೆಯೂ, ಮರದೊಳಗಣ ಅನಲನಂತೆಯೂ ಒಳಗೊಳಗೆ ಬೇಯುತ್ತ ವಿರಹದಿಂದ ಇದ್ದನು. ॥ ೧೦೧ ॥ ರಾವಣನು ವಿರಹಾಗ್ನಿಗೆ ಗುರಿಯಾದುದನ್ನು ನೋಡಿ ಸೈರಿಸಲಾರದೆ ನೊಂದು, ಸೂರ್ಯನು ಪಶ್ಚಿಮಸಮುದ್ರದಲ್ಲಿ ಮುಳುಗಿದನು. ಹೀಗೆನ್ನುವಾಗ ಜೀವಿಸುವವರ ಕಷ್ಟವನ್ನು ನೋಡಿ ಸಹಿಸುವವರಾರು? ॥ ೧೦೨ ॥ ಎಲೈ ಅಂಚೆನಡೆಯ ಚೇಳಿನಿಯೇ, ಪಂಥ ಪರಾಕ್ರಮಗಳನ್ನು ಪೂರ್ಣವಾಗಿ ಉಳಿಸಿಕೊಂಡು ಜೀವಿಸುವ ಮಹಾನುಭಾವನಿಗೆ ಪೂರ್ವ ಕರ್ಮಫಲದಿಂದ ಕಷ್ಟವು ಬಂತೆಂದರೆ, ವಿದ್ವಾಂಸರ ಮನಸ್ಸು ಕೂಡ ಕದಲದೆ ಇರುವುದೆ? ॥ ೧೦೩ ॥ ಸೌಂದರ್ಯ, ಐಶ್ವರ್ಯ. ದಾನ, ವಿದ್ಯೆ. ಒಳ್ಳೆಯ ಕೀರ್ತಿ ಮುಂತಾದವುಗಳಿಂದ ಕೂಡಿ ಜೀವಿಸತಕ್ಕ ಪರಾಕ್ರಮಿಗೆ ಯಾವುದೋ ಪಾಪದ ಪರಿಣಾಮದಿಂದ ಕಷ್ಟವು ಬಂದರೆ, ತಿಳಿದವರು ದು:ಖಿಸದೆ ಇರುವರೆ? ॥ ೧೦೪ ॥ ದೇವೇಂದ್ರನ ಸಂಪತ್ತನ್ನು ಕೂಡ ಅಲ್ಲಗಳೆಯುವ ಅನೇಕ ರೀತಿಯ ವೈಭವದಿಂದ ಬಾಳುವವನಿಗೆ ಪೂರ್ವಕರ್ಮದ ಫಲದಿಂದ ಕಷ್ಟವು ಬಂದಾಗ ವಿವೇಕಿಯಾದ ಮನುಷ್ಯನು ಕಳವಳಪಡನೆ? ॥ ೧೦೫ ॥ ಮನುಷ್ಯನು ಕರ್ಮಕ್ಕೆ ಅಧೀನನು, ಕರ್ಮವು ಮನುಷ್ಯನ ಅಧೀನವಲ್ಲ ಶಿವ, ಬ್ರಹ್ಮ, ವಿಷ್ಣು ಮುಂತಾದವರೂ ನಾಶವಾಗುವವರೇ ಆಗಿದ್ದಾರೆ. ಕರ್ಮಕ್ಕಿಂತ ಬಲಿಷ್ಠವಾದುದು ಯಾವುದೂ ಇಲ್ಲ. ॥ ೧೦೬ ॥ ಎಲೈ ಚೇಳಿನಿಯೇ ಕೇಳು. ಮನ್ಮಥನಿಂದ ರಾವಣನು ಬಹಳವಾಗಿ ಸಂಕಟಪಟ್ಟು ಸಹಿಸಲಾರದೆ ವಿರಹದುಃಖದಿಂದ ನೊಂದು ಮನಸ್ಸಿನಲ್ಲಿ ಹೀಗೆ ಚಿಂತಿಸಿದನು ॥ ೧೦೭ ॥

---

[1] ಬಾಳವಗೆ (ಗ). [2] ವಿಧದೆ (ಚ). [3] ಕಡುನೊಂದು । ಚಿಂತಿಸಿದನು (ಗ).

ಆ ಹರಿಣಾಕ್ಷಿಯ ತಂದು ಕಾಣಿಸಿ ನ । ನ್ನೀ ಹರಣವನುಳಿಯಿಸುವ[1] ॥
ಸಾಹಸಿಗಳೊಳಾರುಂಟೆಂದು ದಶಕಂಠ । ನೂಹಿಸಿದನು ಮನದೊಳಗೆ ॥ ೧೦೮ ॥

ಆರಿಗುಸುರುವೆ ನಾನಾರಿಗೊರೆವೆ ನಾ । ನಾರೊಳಿರದೆ ಪೇಳುವೆನು ॥
ಆರಿಗಱುಪುವೆನಾರಿಗೆ ಸೂಚಿಪೆ ನನ । ಗಾರುಂಟೆನಗೆಂದೆಣಿಸಿದ[2] ॥ ೧೦೯ ॥

ಕಿವಿಗಿವಿಯಱಿಯದೆ ಬಲುವಂಚನೆಯೊಳತಿ । ತವಕದಿಂದವಳ ಕಾಣಿಸುವ ॥
ವಿವರವುಳ್ಳವರಾರುಂಟೆಂದು ದಶಕಂಠ । ತವೆ ಚಿಂತಿಸಿದ ನೆಡೆಯೊಳು[3] ॥ ೧೧೦ ॥

ಆರವಳನು ತಂದು ಕೊಡುವ ಬಲ್ಲಿದರೆನ । ಗಾರುಂಟೆನ್ನ ದುಃಖವನು ॥
ಆರು ನಿವಾರಿಸುವವರಾರೆಂದಾಗ । ಲಾ[4] ರಾವಣ ಚಿಂತಿಸಿದ[5] ॥ ೧೧೧ ॥

ತಿಳಿಯಬೇಕವನಿಗಂಗಜ ಮಾಡುವ ದಳ । ದುಳವ[6]ನೆನುತ ಮೂಡ ಗಿರಿಯ ॥
ನಳಿನಮಿತ್ರನು ಬಂದಡರಲು ತೆಳ್ಳನೆ[7] । ಬೆಳಕಾದುದು[8] ಬಳಿಕವನು ॥ ೧೧೨ ॥

ಕರಸಿದನವ ತನ್ನನುಜೆ ಶೂರ್ಪನಖಿಯೊಡ । ನೊರೆದ ತನಗೆ[9] ಮನಸಿಜನು ॥
ಭರದಿಂದ ಮಾಡುವುಬ್ಬೆಗವನವಳಿಗ । ಚ್ಚರಿ ಪುಟ್ಟುವಂತೆ ಮೃಗಾಕ್ಷಿ ॥ ೧೧೩ ॥

ನಾರದ ಬಂದು ಜಾನಕಿಯಿರ್ದ ತಾಣವ । ವಾರಣಾಸಿಯ ಪಟ್ಟಣದ ॥
ದಾರಿಯ ತನಗೆ ಪೇಳಿದುದ ಪೇಳಿದನಾ । ನಾರಿಗೆ ಕಡು ದೈನ್ಯದೊಳು ॥ ೧೧೪ ॥

---

'ಆ ಜಾನಕಿಯನ್ನು ತಂದು ನನಗೆ ಕಾಣಿಸಿ ನನ್ನ ಪ್ರಾಣವನ್ನು ಉಳಿಸುವವರು ನನ್ನಲ್ಲಿರುವ ಸಾಹಸಿಗಳಲ್ಲಿ ಯಾರಿರುವರು?' ಎಂದು ರಾವಣನು ತನ್ನ ಮನಸ್ಸಿನಲ್ಲೇ ಯೋಚಿಸಿದನು ॥ ೧೦೮ ॥ ಯಾರೊಡನೆ ಉಸುರಲಿ. ಯಾರಿಗೆ ಒರೆಯಲಿ ಯಾರಲ್ಲಿ ನಾನು ತಿಳಿಸಲಿ, ಯಾರಿಗೆ ಅರುಹಲಿ, ಯಾರಿಗೆ ಸೂಚಿಸಲಿ! ನನಗೆ ಯಾರಿದ್ದಾರೆ! ಎಂದು ರಾವಣನು ಭಾವಿಸಿಕೊಂಡನು ॥ ೧೦೯ ॥ ಒಂದು ಕಿವಿಗೆ ತಿಳಿದುದು ಮತ್ತೊಂದು ಕಿವಿಗೆ ತಿಳಿಯಬಾರದೆಂಬಂತೆ ರಹಸ್ಯವಾಗಿ ಮೋಸದಿಂದಲೂ, ಶೀಘ್ರತೆಯಿಂದಲೂ ಸೀತೆಯನ್ನು ತಂದು ಕಾಣಿಸುವ ವಿಶೇಷಗುಣವುಳ್ಳವರು ತನ್ನಲ್ಲಿ ಯಾರು ಇರುವರೆಂದು ರಾವಣನು ಮನಸ್ಸಿನಲ್ಲಿ ಯೋಚಿಸಿದನು ॥ ೧೧೦ ॥ ಆ ಸೀತೆಯನ್ನು ತಂದು ಕೊಡುವ ಸಾಮರ್ಥ್ಯವುಳ್ಳವರು ಯಾರು? ನನಗೆ ಯಾರಿರುವರು? ನನ್ನ ದುಃಖವನ್ನು ಪರಿಹರಿಸುವವರು ಯಾರು? ಎಂದು ಆ ರಾವಣನು ಆಗ ಚಿಂತಿಸಿದನು ॥ ೧೧೧ ॥ ಆ ರಾವಣನಿಗೆ ಕಂದರ್ಪನು ಮಾಡುವ ಪೀಡೆಯನ್ನು ತಿಳಿಯಬೇಕೆಂಬ ಕುತೂಹಲದಿಂದ ಸೂರ್ಯನು ಮೂಡುವೆಟ್ಟವನ್ನು ಏರಿದನು ಆಗ ನಸು ಬೆಳಕಾಯಿತು ॥ ೧೧೨ ॥ ರಾವಣನು ಆಮೇಲೆ ತನ್ನ ತಂಗಿ ಶೂರ್ಪನಖಿಯನ್ನು ಕರೆಸಿ, ತನಗೆ ಮನ್ಮಥನು ಉಂಟು ಮಾಡುವ ಉದ್ವೇಗವನ್ನು ಆಕೆಗೆ ಆಶ್ಚರ್ಯವುಂಟಾಗುವಂತೆ ತಿಳಿಸಿದನು. ॥ ೧೧೩ ॥ ವಾರಣಾಸಿ ಪಟ್ಟಣಕ್ಕೆ ದಾರಿಯನ್ನೂ ಅಲ್ಲಿ ಸೀತೆಯು ಇರುವ ತಾಣವನ್ನೂ ನಾರದನು ಬಂದು ತನಗೆ ತಿಳಿಸಿರುವುದನ್ನು ರಾವಣನು ಶೂರ್ಪನಖಿಗೆ ತಿಳಿಸಿದನು ॥ ೧೧೪ ॥ ಆ ಸೀತೆಗೆ ಸರಿಯೆನಿಸುವವರು ದೇವಲೋಕದಲ್ಲಿಲ್ಲವಂತೆ! ನಾಕಲೋಕದ ಸ್ತ್ರೀಯರಲ್ಲಿ ಇಲ್ಲವಂತೆ! ಮನುಷ್ಯ

---

[1] ನುಳುಹಿಸುವ (ಚ) [2] ಆರಿಗಱಿಪುವೆ ನಾನಾರಿಗೆ ಸೂಚಿಪೆ । ನಾರುಂಟೆನಗೆಂದೆಣಿಸಿದ (ಗ ಚ) [3] ನೆದೆಯೊಳಗೆ (ಗ ಚ)
[4] ವವರಾರೆಂದಾ (ಗ ಚ) [5] ಚಿಂತಿಸಿದನು (ಚ) [6] ದಳದುಳಿವ (ಗ) [7] ಬಂದು ಮೂಡಲು ಮೆಲ್ಲನೆ (ಗ) [8] ಬೆಳಗಾದುದು (ಗ, ಚ)
[9] ನೊರೆದನವನು (ಕ)

ಸುರಲೋಕದೊಳಗಿಲ್ಲ ಗಡ ನಾಕಲೋಕದ । ತರುಣಿಯರೊಳಗಿಲ್ಲ ಗಡ ॥
ನರಲೋಕದ ನಾರಿಯರೊಳಿಲ್ಲ ಗಡ ಸರಿ । ದೊರೆಯುವಳ್ಗೆಂದು ಪೇಳಿದನು ॥ ೧೧೫ ॥

ಅಜಸೃಷ್ಟಿಯಲ್ಲ ಗಡಂಗಜ ಪರಮನ । ಭಜಿಸಿ ನೆನಹಿನಿಂದಲವಳ[1] ॥
ಸೃಜಿಸಿದ ಗಡ ದಿವ್ಯ ರೂಪೆಂದು ನಾರದ । ನಿಜವೆಂದೆನ್ನೊಡನೆ ಪೇಳಿದನು ॥ ೧೧೬ ॥

ಎಲ್ಲಿಯ ನಾರದನೆಲ್ಲಿಯ ಸುದ್ದಿ ತಾ । ನೆಲ್ಲಿಯದಾ ವಾರಣಾಸಿ ॥
ಎಲ್ಲಿರ್ದಪುದೆಂದಚ್ಚರಿವಟ್ಟಿದೆ । ಯಲ್ಲಿ ಚಿಂತಿಸಿದಳಾ ಸುದತಿ[2] ॥ ೧೧೭ ॥

ಸಿರವನೊಲೆದು ಮೂಗಿನ ತುದಿಯಲಿ ಕೈಯ । ಬೆರಲನಿರಿಸಿಯುಂಗುಟದಲಿ[3] ॥
ಧರಣಿಯ ಬರೆವುತೆಲ್ಲಿಯ ಮಾರಿ ಬಂದಿತೆಂ । ದಿರದೆ ಚಿಂತಿಸಿದಳೆಂದವಳು ॥ ೧೧೮ ॥

ಕೆಟ್ಟನಿನ್ನೇಕೆ[4] ರಾವಣನೆಂದವಳು ಮರ । ವಟ್ಟಿರಲವನಂಗಜನ[5] ॥
ಅಟ್ಟುಳಿಗಗಿದು ಲಜ್ಜೆಯನವನೊಯ್ಯನೆ । ಬಿಟ್ಟಿಂತು ಪೇಳ್ದನವಳೊಳು ॥ ೧೧೯ ॥

ಹಲವು ಮಾತೇನು ಹರಿಣಲೋಚನೆ ಸೀತೆ । ಯೊಲಿವಂತೆ ಪೇಳಿ ಬುದ್ಧಿಯನು ॥
ಹಲವು ಬಗೆಯೊಳು ನೀ ತಾರದಿರಲು ಬಿಟ್ಟು । ತೊಲಗದಿರದು ಜೀವ ತನ್ನ ॥ ೧೨೦ ॥

ಒಡಬಡಿಕೆಯ ಮಾತ ನುಡಿವೆನಾ ನುಡಿಗಳಿ । ಗೊಡಬಡದಿರಲು ಬುದ್ಧಿಯನು ॥
ಬಿಡದೆ ಪೇಳುವೆ ಕೇಳದಿರಲೊಯ್ಯನೆ ಕಾ । ಲ್ಪಿಡಿದು ತಂದಪೆನು[6] ನಾನವಳ ॥ ೧೨೧ ॥

ಎಂದಾಸೆಮಾತ[7]ನುಡಿದು ಶೂರ್ಪನಖಿಯು । ಲ್ಲಿಂದೆದ್ದು ಕಳುಹಿಸಿಕೊಂಡು ॥
ಬಂದಳು ಭರದೊಳು ಜಾನಕಿಯಾಡುವ । ನಂದನವನು ಸಾರುತವೆ ॥ ೧೨೨ ॥

---

ಸ್ತ್ರೀಯರಲ್ಲಿಯೂ ಇಲ್ಲವಂತೆ ! ಎಂದು ರಾವಣನು ಹೇಳಿದನು. ॥ ೧೧೫ ॥ ಆಕೆಯನ್ನು ಬ್ರಹ್ಮನು ಸೃಷ್ಟಿಸಿದುದು ಅಲ್ಲವಂತೆ ! ಮನ್ಮಥನು ಜಿನೇಶ್ವರನನ್ನು ಭಜಿಸಿ ತನ್ನ ನೆನಹಿನ ಬಲದಿಂದ ಅವಳನ್ನು ಸೃಷ್ಟಿಸಿದನಂತೆ ! ಆಕೆಯ ರೂಪವು ನಿಜವಾಗಿ ದಿವ್ಯವಾದುದೆಂದು ನಾರದನು ನನ್ನಲ್ಲಿ ಹೇಳಿರುವನು. ॥ ೧೧೬ ॥ ಹೀಗೆ ರಾವಣನು ಹೇಳಲು ಶೂರ್ಪನಖಿಯು "ಎಲ್ಲಿಯ ನಾರದನೊ? ಎಲ್ಲಿಯ ಸುದ್ದಿಯೊ? ಇನ್ನೆಲ್ಲಿಯ ವಾರಣಾಸಿಯೊ? ಅದು ಎಲ್ಲಿದೆಯೋ !" ಎಂದು ಆಶ್ಚರ್ಯಪಟ್ಟು ಮನಸ್ಸಿನಲ್ಲಿ ಯೋಚಿಸಿದಳು. ॥ ೧೧೭ ॥ ಆ ಶೂರ್ಪನಖಿಯು ತಲೆದೂಗಿ, ಮೂಗಿನ ತುದಿಯಲ್ಲಿ ಕೈಬೆರಲನ್ನು ಇಟ್ಟು, ಕಾಲಿನ ಉಂಗುಟದಿಂದ ನೆಲವನ್ನು ಗೀರುತ್ತ ತನಗೆ ಎಲ್ಲಿಂದ ಈ ಮಾರಿ ಬಂತೋ ! ಎಂದು ಕೂಡಲೇ ಚಿಂತಿಸಿದಳು. ॥ ೧೧೮ ॥ ರಾವಣನು ಕೆಟ್ಟನು, ಏನು ಮಾಡಲಿ ! ಎಂದು ಆಕೆಯು ಸ್ತಬ್ಧಳಾಗಿ ನಿಂತಳು. ಆಗ ರಾವಣನು ಮನ್ಮಥನ ಬಾಧೆಗೆ ಹೆದರಿ, ನಾಚಿಕೆಯನ್ನೇ ಬಿಟ್ಟು ಆ ಶೂರ್ಪನಖಿಯೊಡನೆ ಹೀಗೆಂದನು. ॥ ೧೧೯ ॥ "ಎಲೈ ತಂಗಿಯೇ, ಹೆಚ್ಚು ಮಾತನ್ನಾಡೆನು. ನೀನು ಆ ಮೃಗಾಕ್ಷಿಯಾದ ಸೀತೆಯು ನನಗೆ ಒಲಿಯುವಂತೆ, ಹಲವಾರು ವಿಧದಲ್ಲಿ ಬುದ್ಧಿ ಹೇಳಿ, ಆಕೆಯನ್ನು ತರಬೇಕು. ತಾರದೆ ಇದ್ದರೆ, ಪ್ರಾಣ ನನ್ನನ್ನು ತೊಲಗದಿರದು." ॥ ೧೨೦ ॥ ಅದಕ್ಕೆ ಶೂರ್ಪನಖಿಯು ಹೀಗೆಂದಳು—"ನಾನು ಹೋಗಿ ಸೀತೆಯು ಒಡಂಬಡುವಂತಹ ಮಾತುಗಳನ್ನೇ ಆಡುವೆನು. ಆ ಮಾತುಗಳಿಗೆ ಒಪ್ಪದಿದ್ದರೆ, ಬುದ್ಧಿ ಹೇಳುವೆನು ಅದಕ್ಕೂ ಕೇಳದಿದ್ದರೆ ಮೆಲ್ಲನೆ ಕಾಲುಹಿಡಿದು ನಾನು ಅವಳನ್ನು ತರುವೆನು." ॥ ೧೨೧ ॥ ಹೀಗೆ ಶೂರ್ಪನಖಿಯು ರಾವಣನಿಗೆ ಆಶಾ

---

[1] ನೆನಹಿ ನಿಂದವಳ (ಗ ಚ). [2] ತರುಣಿ (ಚ) [3] ಯುಂಗುಟದಿ (ಗ). [4] ಕೆಟ್ಟಿತಿನ್ನೇಕೆ (ಗ.ಚ) [5] ಲವಳಂಗಜನ (ಚ). [6] × (ಗ.ಚ.)
[7] ಎಂದಾಸೆವಾತ (ಚ)

ಬರುತ ಬರುತ ಲಕ್ಷ್ಮಣನ ಕಂಡು ಕಾಮಿಸಿ । ಕರ ನೊಂದಾ ಶೂರ್ಪನಖಿಯು[1] ॥
ಇರದೆ ಮಾಯಾವೃದ್ಧೆಯಾಗಿ ಸೀತೆಯ ಕಾಣ್ಬಾ । ತುರದಿಂದ ಮುಂದಕ್ಕೈದಿದಳು ॥ ೧೨೩ ॥

ಮರಕತ ಶಿಲೆಯ ಮೇಲಸುಗೆಯ ನೆಳಲೊಳು । ತರುಣೀ ಜನದೋಲಗದೊಳು ॥
ಕರಮೆಸೆದಿರ್ಪ ಸೀತೆಯ ಕಂಡು ಮಾಯಾ । ಜರತಿ ಸಾರಿದಳಾಳಿಯರ[2] ॥ ೧೨೪ ॥

ಬಂದುದೆಲ್ಲಿಂದ ನೀನಾರೆಂದೆನುತ ಕೇಳ । ಲಂದವಳಾಳಿಯರುಗಳು ॥
ಬಂದೆನೀ ಧನವಾಲಕಿಯ[3] ನೋಡಲು ಬೇ । ಕೆಂದು ಪೇಳುತಲಾ ವೃದ್ಧೆ ॥ ೧೨೫ ॥

ಆವ ನೋಂಪಿಯ ನೋಂತಾವ ದೇವರ ಪೊರ್ದಿ । ಯಾವ ಬಗೆಯಲೀ[4] ಪುರುಷನ ॥
ನೀವು ಪಡೆದಿರಿದ ಪೇಳ್ದೊಡಂತೆಯೆ ಗೈ । ದೀ ವಿಭುವನು ಪಡೆವೆನು ॥ ೧೨೬ ॥

ಸತಿಯಾಗಿ ನಿಮಗೆ ಮಚ್ಚರವ ಪುಟ್ಟಿಸಿಯೀ । ಕ್ಷಿತಿಪತಿಯೊಳು ಸುಖವಡೆದು ॥
ಹಿತದಿಂದಿರ್ಪೆನೆಂದವಳ ಮಾತನು ಕೇಳಿ । ಸತಿಯರು ಕೈವೊಯ್ದು ನಗುತ ॥ ೧೨೭ ॥

ಮನವೆಳದಿವಳಂಗ ಮುಪ್ಪೆಂದಾಡುವ । ವನಿತೆಯರುಗಳ ಮಾತುಗಳ ॥
ಜನಕಾತ್ಮಜೆ ಕೇಳಿ ಸ್ತ್ರೀಯತ್ವವ ನೀ । ನೆನವುದಲ್ಲೆಂದು ಪೇಳುತವೆ ॥ ೧೨೮ ॥

ಬಸುಱೊಳಗಾದ[5] ರುಜೆಯ ಹೆಱುವೆಡೆಯ ಸಾ । ಹಸವನಾ ಸುತ ಸಾಯಲದಱ ॥
ಪೊಸ ದುಃಖವ ಪೇಳಲರಿದು ಪೆಣ್ತನವ ಬ । ಯಸುವರೆಗ್ಗರು[6] ಕೇಳು ವೃದ್ಧೆ ॥ ೧೨೯ ॥

---

ದಾಯಕವಾದ ಮಾತುಗಳನ್ನಾಡಿ, ಅಲ್ಲಿಂದ ಎದ್ದು ಬೀಳ್ಕೊಂಡು ಹೊರಟಳು ಆಕೆ ಬೇಗನೆ ಬರುತ್ತ ಸೀತೆಯು ಕ್ರೀಡಿಸುತ್ತಿರುವ ಉದ್ಯಾನಕ್ಕೆ ಬಂದಳು ॥ ೧೨೨ ॥ ಶೂರ್ಪನಖಿಯು ಬರುತ್ತ ಲಕ್ಷ್ಮಣನನ್ನು ಕಂಡ ಕೂಡಲೇ ಕಾಮೋತ್ತೇಜಿತಳಾಗಿ ಬಹಳ ನೊಂದುಕೊಂಡಳು ಆ ಮೇಲೆ ಕೂಡಲೇ ಆಕೆ ಮಾಯಾವೃದ್ಧೆಯ ರೂಪವನ್ನು ತಾಳಿ ಸೀತೆಯನ್ನು ಕಾಣುವ ತವಕದಿಂದ ಮುಂದೆ ನಡೆದಳು ॥ ೧೨೩ ॥ ಸೀತೆಯು ನೀಲರತ್ನದ ಶಿಲೆಯ ಮೇಲೆ ಅಶೋಕ ವೃಕ್ಷದ ನೆರಳಿನಲ್ಲಿ ಸ್ತ್ರೀಸಮೂಹದ ಸಭೆಯಲ್ಲಿ ಶೋಭಿಸುತ್ತಿದ್ದಳು ಅವಳನ್ನು ಕಂಡು ಈ ಮಾಯೆಯ ಮುದುಕಿ ಅಲ್ಲಿದ್ದ ಗೆಳತಿಯರ ಗುಂಪಿನಲ್ಲಿ ಸೇರಿದಳು ॥ ೧೨೪ ॥ ಆಗ ಸೀತೆಯ ಗೆಳತಿಯರು 'ನೀನು ಎಲ್ಲಿಂದ ಬಂದೆ? ನೀನು ಯಾರು?" ಎಂದು ಕೇಳಿದರು ಅದಕ್ಕೆ ಈ ಮುದುಕಿಯು 'ನಾನು ಈ ವೈಭವದ ಒಡತಿಯನ್ನು ಕಾಣಬೇಕೆಂಬ ಆಸೆಯಿಂದ ಬಂದೆನು' ಎಂದಳು ॥ ೧೨೫ ॥ 'ನೀವು ಯಾವ ವ್ರತವನ್ನು ಮಾಡಿ, ಯಾವ ದೇವರನ್ನು ಆಶ್ರಯಿಸಿ, ಯಾವ ವಿಧದಿಂದ ಶ್ರೀರಾಮನನ್ನು ಗಂಡನಾಗಿ ಪಡೆದಿರುವಿರಿ?—ಈ ಸಂಗತಿಯನ್ನು ಹೇಳಿದರೆ ನಾನೂ ಹಾಗೆಯೇ ಮಾಡುತ್ತಿದ್ದೆ. ॥ ೧೨೬ ॥ ನಾನು ರಾಮನನ್ನು ಪಡೆದು, ಅವನ ಹೆಂಡತಿಯಾಗಿ ನಿಮಗೆಲ್ಲಾ ಮತ್ಸರವನ್ನು ಹುಟ್ಟಿಸಿ, ಈತನಲ್ಲಿ ಸುಖವನ್ನು ಪಡೆದು ಹಿತದಿಂದ ಇರುತ್ತಿದ್ದೆ ಎಂದಳು ಆಗ ಆ ಮಾತನ್ನು ಕೇಳಿ ಆ ಸ್ತ್ರೀಯರು ಕೈ ಚಪ್ಪಾಳೆ ಹೊಡೆದು ನಗುತ್ತ ಹೀಗೆಂದರು ॥ ೧೨೭ ॥ ಇವಳ ಮನಸ್ಸು ಎಳೆಯದು, ಆದರೆ ಇವಳ ದೇಹವು ಮುಪ್ಪುಗೊಂಡಿದೆ ಎಂದು ಹೇಳತಕ್ಕ ಗೆಳತಿಯರ ಮಾತುಗಳನ್ನು ಸೀತೆಯು ಕೇಳಿ "ನೀನು ಹೆಂಡತಿತನವನ್ನು ನೆನೆಯುವುದು ತಕ್ಕುದಲ್ಲ" ಎಂದಳು ॥ ೧೨೮ ॥ ಎಲೈ ಮುದುಕಿಯೇ ಕೇಳು ಸತಿಯಾದವಳು ಗರ್ಭಿಣಿಯಾದಾಗ ಆದ ರೋಗವನ್ನೂ, ಹೆರುವ ಸಂದರ್ಭದ ಸಾಹಸವನ್ನೂ ಹೆತ್ತ ಪುತ್ರನು ಮಡಿದರೆ ಆಗುವ ಆ ಹೊಸ ಕಳವಳವನ್ನೂ ಹೇಳ-

---

[1] × (ಚ) [2] ಸೇರಿದಳಾಳಿಯರ (ಚ) [3] ಬಂದೆನಿದನ ಪಾಲಕಿಯ (ಗ) [4] ಬಗೆಯೋಳೀ (ಚ) [5] ಬಸಿಜಿೊಳಗಾದ (ಚ)
[6] ರೆದ್ದರು (ಗ)

ಬರಡೆಯಾಗಲು ನೋವು ಸಿಗುಡಿ[1]ಯಾಗಲು ದುಃಖ । ಪರಿಹಾಸಗೈವರು ಪೆಣ್ಣ ॥
ವರನಳಿಯಲು ವಿಧವಾವಸ್ಥೆ[2]ಯದೊಂದು । ಪರಿಯನದೇನ[3] ಪೇಳುವೆನು ॥ ೧೪೦ ॥

ವರರೂಪುಳ್ಳ ಗಂಡರ ಕಂಡು ಪೆಣ್ಗಳು । ನೆರೆಯಬೇಕೆಂದು ವಾಂಛಿಪರು ॥
ನೆರೆಯದಿರಲು ವಿರಹಾವಸ್ಥೆಯಿಂ ಸತ್ತು । ನರಕದಿ ದುಃಖವಡೆವರು[4] ॥ ೧೪೧ ॥

ವರಚಕ್ರಿಯ ಸುತೆಯಾದೊಡಾ ಸತಿಗೆ ಕಿಂ । ಕರ[5] ಭಾವದೊಳಿರಬೇಕು[6] ॥
ಅರಿದು ಸವತಿಯರ ಮಚ್ಚರವನು ತಾಳ್ವು । ದರಿದು ಪೆಣ್ತನ ಬೇಡವದಱಿಂ ॥ ೧೪೨ ॥

ಇವು ಮೊದಲಾದ[7] ಸತಿಯರ ಬೀಭತ್ಸವ । ಯುವತಿ ಪೇಳಲು ಕೇಳ್ದವಳು ॥
ಸವಿನುಡಿಗಳಿಗೊಳಗಾಗುವ[8]ಳಲ್ಲೆನು । ತವೆ ತೆರಳಿದಳಲ್ಲಿಂದ ॥ ೧೪೩ ॥

ಬಂದೊಯ್ಯನೆ ಶೂರ್ಪನಖಿ ತಮ್ಮಣ್ಣನ । ನಂದು ಕಂಡವಳಾಡಿದುದ ॥
ಒಂದುಳಿಯದೆ ಪೇಳೆ ಕೇಳ್ದು ಕೋಪಾನಲ । ದಿಂದ ಬೇವುತಲಿಂತೆಂದ ॥ ೧೪೪ ॥

ನುಡಿವೆದೆಯಾಳವ[9] ಕಾಣಿಸಿಕೊಳ್ಳದಾ । ಮಡದಿಯ ಮನವನಱಿಯದೆ ॥
ಬಿಡುನುಡಿಗಳಿಗೆ ಬೆದಱಿ ಬಂದು ಕಾರ್ಯವ । ಕೆಡಿಸಿದೆಯೆಂದನು ನೃಪತಿ ॥ ೧೪೫ ॥

ಸತಿಯರ ಮನ ಬುದ್ಧಿ ಸಂಚಲ[10]ವೆಂದೆಂಬ । ಸ್ಥಿತಿಯನಱಿಯದೆ ನೀನವಳ[11] ॥
ಅತಿವಿರಕ್ತತೆಯ[12] ನುಡಿಗೆ ನಂಬಿ ಕೇಳದೆ । ಮತಿಗೆಟ್ಟು ಬಂದೆಯೆಂದೆನಲು ॥ ೧೪೬ ॥

---

ಲಕ್ಷ್ಮೀ ಸಾಧ್ಯವಾಗದು. ಹೆಣ್ತನವನ್ನು ಬಯಸುವವರು ತಿಳಿಗೇಡಿಗಳು. ॥ ೧೩೯ ॥ ಸತಿಯು ಬಂಜೆಯಾಗಿದ್ದರೆ ವ್ಯಸನ ತಪ್ಪಿದ್ದಲ್ಲ. ಅಶ್ಲೀಲೆಯಾಗಿದ್ದರೆ ದುಃಖವೆ. ಹೆಣ್ಣನ್ನು ಎಲ್ಲರೂ ಅಪಹಾಸ್ಯಮಾಡುವರು. ಗಂಡನು ಮೃತನಾದರೆ ವಿಧವಾವಸ್ಥೆಯ ವಿಷಯವನ್ನು ಹೇಳುವುದೇ ಅಸಾಧ್ಯ. ॥ ೧೪೦ ॥ ಹೆಂಗುಸರು ಒಳ್ಳೆಯ ರೂಪವಂತರಾದ ಗಂಡುಸರನ್ನು ಕಂಡಾಗ, ಅವರನ್ನು ಒಡನಾಡಲು ಬಯಸುವರು. ಅದಕ್ಕೆ ಅನುಕೂಲವಾಗದಿರಲು ವಿರಹಾವಸ್ಥೆಯನ್ನು ತಾಳಿ ಸತ್ತು, ನರಕಕ್ಕಿಳಿದು ದುಃಖವನ್ನು ಅನುಭವಿಸುವರು. ॥ ೧೪೧ ॥ ಹೆಂಗುಸು ತಾನು ಚಕ್ರವರ್ತಿಯ ಮಗಳೇ ಆದರೂ ಗಂಡನ ಸೇವಕಳಾಗಿ ಇರಬೇಕಾಗುತ್ತದೆ. ಆ ಸಂದರ್ಭದಲ್ಲಿ ಸವತಿಮತ್ಸರವನ್ನಂತೂ ಸಹಿಸುವುದೇ ಅಸಾಧ್ಯ. ಆದುದರಿಂದ ಹೆಣ್ಣುತನವು ತ್ಯಾಜ್ಯವೇ ಸರಿ. ॥ ೧೪೨ ॥ ಸೀತೆಯು ಇವೇ ಮೊದಲಾದ ಸ್ತ್ರೀಜೀವನದ ಅಸಹ್ಯತೆಗಳನ್ನು ಹೇಳಲು, ಆ ಮಾಯಾ ವೃದ್ಧೆಯು ಕೇಳಿ, ಈಕೆಯು ಮಧುರವಚನಗಳಿಗೆ ವಶಳಾಗುವವಳು ಅಲ್ಲವೆಂದು ನಿರ್ಧರಿಸಿ ಅಲ್ಲಿಂದ ಹಿಂದೆರಳಿದಳು. ॥ ೧೪೩ ॥ ಶೂರ್ಪನಖಿಯು ಮೆಲ್ಲನೆ ಹಿಂದೆರಳಿ ಅಣ್ಣನಾದ ರಾವಣನನ್ನು ಕಂಡು, ಅವಳು ಆಡಿದುದನ್ನೆಲ್ಲ ಹೇಳಿದಳು. ಆಗ ರಾವಣನು ಕೋಪಾಗ್ನಿಯಿಂದ ಬೇಯುತ್ತ ಹೀಗೆಂದನು. ॥ ೧೪೪ ॥ ಎಲೈ ಶೂರ್ಪನಖಿ, ನೀನು ಮಾತಿನಿಂದ ಹೃದಯದ ಆಳವನ್ನು ತೋರಿಸದೆ, ಆ ಸೀತೆಯ ಮನಸ್ಸನ್ನು ತಿಳಿಯದೆ, ಆಕೆಯ ಕಠಿಣೋಕ್ತಿಗಳಿಗೆ ಅಂಜಿ ಬಂದು, ಕಾರ್ಯವನ್ನೇ ಕೆಡಿಸಿದೆ—ಎಂದು ಹೇಳಿದನು. ॥ ೧೪೫ ॥ ಹೆಂಗುಸರ ಮನಸ್ಸು ಬುದ್ಧಿಗಳು ಚಂಚಲವಾದುವೆಂಬುದನ್ನು ತಿಳಿಯದೆ, ನೀನು ಅವಳ ರಾಗರಾಹಿತ್ಯದ ಮಾತಿನಲ್ಲಿ ವಿಶ್ವಾಸ ತಾಳಿ, ಕೇಳದೆ ಬುದ್ಧಿಕೆಟ್ಟವಳಾಗಿ ಬಂದಿರುತ್ತಿ ಎಂದನು ॥ ೧೪೬ ॥ ಆಗ ಶೂರ್ಪನಖಿ

---

[1] ಸಿಗುಡೆ (ಗ.ಚ.). [2] ವಿರಹಾವಸ್ಥೆ (ಕ). [3] ಪರಿಯದನೇನ (ಗ ಚ.). [4] ನರಕ ದುಃಖವನು ಪಡೆವರು (ಚ). [5] ಕಿನ್ನರ (ಚ). [6] ದೊಳಗಿರಬೇಕು (ಗ). [7] ಮೊದಲಾಗಿ (ಗ ಚ ) [8] ನುಡಿಗಿವಳೊಳಗಾಗುವ (ಗ. ಚ ). [9] ಯೊಳವ (ಚ). [10] ಚಂಚಲ (ಚ). [11] ನೀನಿವಳ (ಗ). [12] ವಿರಕ್ತಿಕೆಯ (ಚ).

ಅಳಿವೆದೆಗಾ[1] ಕಲ್ಲ ಬಿಲ್ಲು ಬಾಗುವುದೆ ಯೆ । ನ್ನಳಿಮಾತುಗಳಿಗಾ ಸೀತೆ ॥
ಒಳಗಾಗಳೆಂಬುದನಱಿದು ಬಂದೆನು ನಾನು[2] । ತಳುವದವಳ ಬಳಿಯಿಂದ ॥ ೧೩೭ ॥

ಭೋಗೋಪಭೋಗ ವಸ್ತುಗಳೊಳು ಸೀತೆಗೆ । ರಾಗವಿಲ್ಲದಱಿಂದವಳ ॥
ಸಾಗಿಸಿ ತಹುದೆನಗಾಗದೆಂಬುದಱಿಂದ । ಬೇಗ ಬಂದೆನು ವನದಿಂದ ॥ ೧೩೮ ॥

ವಸನಾಭರಣಗಳನು ಕೊಟ್ಟು ಸವಿಮಾತ । ನುಸುರುವೆನೆಂದೆಣಿಸಿದೆನು ॥
ವಶವಲ್ಲವೆಂಬುದನಱಿಯದೆ[3] ತಹುದು ಸಾ । ಹಸ ಸೀತೆಯನೆಂದಳವಳು ॥ ೧೩೯ ॥

ಪರಮವಿರಕ್ತೆ ಪಾವನ ಮೂರ್ತಿ ಪೆಣ್ಣಗ । ಳರಸಿ ಗುಣಾಂಬುಜಸರಸಿ ॥
ವರಶೀಲವತಿ ಸೀತೆ ಸರಸಮಾತಿಗೆ ಸೋ । ಲ್ತಿರದೆ ಬರ್ಪವಳಲ್ಲೆಂದವಳು[4] ॥ ೧೪೦ ॥

ರಾಮ ಲಕ್ಷ್ಮಣರವರಿರ್ವರು[5] ಕೇಳೀ । ಭೂಮಿಗೆಯತಿಬಳರವರು ॥
ಸಾಮಾನ್ಯರಲ್ಲವರೊಳು ಶಕ್ತಿಯಿಂ ಬಾಳ್ವ । ಭೂಮಿಪರಿಲ್ಲೆನಲೊಡನೆ[6] ॥ ೧೪೧ ॥

ಮರುಳ ಕಣ್ಣಿಗೆ ತೋಱುವುದು ಸಾಸುವೆ[7] ದೊಡ್ಡ । ಹರವಿಯಂತವ[8] ನಿನ್ನ ಕಣ್ಗೆ ॥
ಪಿರಿದು ದೊಡ್ಡವ ನಮ್ಮಂದಿಗರಿಗೆ ಹುಲು । ನರನೆಂದು ರಾವಣ ನುಡಿದ ॥ ೧೪೨ ॥

ತರಳಾಕ್ಷಿಯರ ಚಿತ್ತ[9]ವೆಂಬುದು ಕೇಳಾ । ಕರಿಣಿಯ ಕರ್ಣಾಗ್ರದಂತೆ ॥
ಸ್ಥಿರವಲ್ಲವೆಂಬುದ ನೆಲೆಮಾಡಿದೆಯೆಂ । ದರಸ ಕೋಪಿಸಿದನಂದವಳ ॥ ೧೪೩ ॥

---

ಹೀಗೆಂದಳು—"ಹಾಳುಹಗ್ಗದ ಹೆದೆಗೆ ಕಲ್ಲಿನ ಬಿಲ್ಲು ಬಗ್ಗೀತೆ? ಅದರಂತೆ ನನ್ನ ಹಾಳು ಮಾತುಗಳಿಗೆ ಆ ಸೀತೆಯು ವಶಳಾಗ-ಳೆಂಬುದನ್ನು ತಿಳಿದು, ನಾನು ತಡಮಾಡದೆ ಅವಳ ಬಳಿಯಿಂದ ಹಿಂದೆರಳಿ ಬಂದಿರುತ್ತೇನೆ ॥ ೧೩೭ ॥ ಆ ಸೀತೆಗೆ ಸುಖೋಪ ಭೋಗ ವಸ್ತುಗಳ ಮೇಲೆ ಏನೊಂದೂ ಆಸಕ್ತಿಯಿಲ್ಲ ಆದುದರಿಂದ ಆಕೆಯನ್ನು ಕರೆದು ತರುವುದು ನನ್ನಿಂದ ಆಗದೆಂದು ಆ ಉದ್ಯಾನದಿಂದ ಬೇಗ ಬಂದಿರುತ್ತೇನೆ ॥ ೧೩೮ ॥ ಆಕೆಗೆ ಉಡಿಗೆ ತೊಡಿಗೆಗಳನ್ನು ಕೊಟ್ಟು, ಮಧುರ ವಚನಗಳನ್ನು ನುಡಿಯುವೆನೆಂದು ಸಂಕಲ್ಪಿಸಿದೆ ಆಕೆ ವಶಳಾಗುವವಳಲ್ಲವೆಂಬುದನ್ನು ಮೊದಲು ನಾನು ತಿಳಿಯದೆ ಹೋದೆ ಸೀತೆಯನ್ನು ತರುವುದು ಮಹಾಸಾಹಸವೇ ಸರಿ—ಎಂದು ಶೂರ್ಪನಖಿ ಹೇಳಿದಳು ॥ ೧೩೯ ॥ ಅತಿಶ್ರೇಷ್ಠವಾದ ವೈರಾಗ್ಯಭಾವನೆ ಯುಳ್ಳವಳೂ, ಪಾವನವಾದ ಸ್ವರೂಪವುಳ್ಳವಳೂ, ಸ್ತ್ರೀಯರಿಗೆಲ್ಲ ಒಡತಿಯಂತಿರುವವಳೂ, ಸದ್ಗುಣಗಳೆಂಬ ತಾವರೆಗೆ ಸರೋವರದಂತಿರುವವಳೂ, ಶೀಲವುಳ್ಳವಳೂ ಆದ ಸೀತೆ ರಸಿಕತೆಯ ಮಾತಿಗೆ ಸೋತು, ಕೂಡಲೇ ಬರತಕ್ಕವಳಲ್ಲ ಎಂದು ಹೇಳಿದಳು ॥ ೧೪೦ ॥ ಅಣ್ಣನೇ ಕೇಳು ಆ ರಾಮಲಕ್ಷ್ಮಣರಿಬ್ಬರೂ ಈ ಲೋಕದಲ್ಲಿ ಅತ್ಯಂತ ಬಲಶಾಲಿಗಳು ಅವರು ಸಾಮಾನ್ಯರಲ್ಲ ಅವರೊಡನೆ ಶಕ್ತಿಯನ್ನು ಮೆರೆಸಿ ಬಾಳುವ ರಾಜರಿಲ್ಲ ಎಂದು ನುಡಿದಳು ॥ ೧೪೧ ॥ ಆಗ ರಾವಣನು ಹೀಗೆಂದನು—ಹುಚ್ಚನ ಕಣ್ಣಿಗೆ ಒಂದು ಸಾಸಿವೆ ದೊಡ್ಡ ಹರವಿಯಂತೆ ಕಾಣುವುದು. ಹಾಗೆಯೇ ನಿನಗೆ ಅವರು ದೊಡ್ಡವರು, ನಮ್ಮಂಥವರಿಗೆ ಅವರು ತೃಣಕ್ಕೆ ಸಮಾನರಾದ ಮನುಷ್ಯರು ॥ ೧೪೨ ॥ "ಸ್ತ್ರೀಯರ ಮನಸ್ಸೆಂಬುದು ಆನೆಯ ಕಿವಿಯ ತುದಿಭಾಗದಂತೆ ಯಾವಾಗಲೂ ಚಂಚಲವೆಂಬುದನ್ನು ನೀನು ನೆಲೆಗೊಳಿಸಿದೆ" ಎಂದು ರಾವಣನು ಆಕೆಗೆ ಸಿಟ್ಟಿನಿಂದ ನುಡಿದನು. ॥ ೧೪೩ ॥ ಆಗ ಶೂರ್ಪನಖಿಯು "ಆ ರಾಮನ ಹೆಂಡತಿಯನ್ನು ಪರಾಕ್ರಮದಿಂದ ಹಿಡಿದು ಎಳೆತರಲು ಸಾಧ್ಯವೋ

---

[1] ಅಳಿವೆಡೆಗಾ (ಕ) [2] × (ಗ) [3] ವೆಂಬುದನಱಿದೆ (ಕ). [4] ಸೋಲ್ತು ಬರುವಳೆಂತಲ್ಲೆಂದಳವಳು (ಚ) [5] ಲಕ್ಷ್ಮೀಧರರೀರ್ವರು (ಗ ಚ)
[6] ರಿಲ್ಲೆಂದನೊಡನೆ (ಗ) [7] ಸಾಸವೆ (ಗ ಚ) [8] ಹರವಿಯಂತಿವೆ (ಕ). [9] ಧೈರ್ಯ (ಗ.ಚ.)

ಕಡುಪಿಂದ ಪಿಡಿದೆಳತಂದೊಡಱಿಯೆ[1]ನೊಡ । ಬಡಿಕೆಯಿಂದಾ ರಾಘವನ ॥
ಮಡದಿಯ ತಹುದಾಗದೆಂದು ರಾವಣನೊಳು । ನುಡಿದಳವಳು ನಿಶ್ಚೈಸಿ ॥ ೧೪೪ ॥

ಎಂದು ನುಡಿದ ಶೂರ್ಪನಖಿಯ[2] ಮಾತಿಗೆಯುವ । ನಂದು ಮಾರೀಚನ ಕರಸಿ[3] ॥
ಅಂದವಳಾಡಿದ ಮಾತಿನೊಳಗೆಯುವ । ನೊಂದುಳಿಯದೆ ಪೇಳಲೊಡನೆ ॥ ೧೪೫ ॥

ಮಾರೀಚವೆರಸು ಪುಷ್ಪಕ ವಿಮಾನವನೇಱಿ । ಯಾ ರಾಯ ನಭಸ್ಥಳಕೊಗೆದು ॥
ಆರಯ್ಯೆ ಚಿತ್ರಕೂಟೋದ್ಯಾನವನಂದು । ಸಾರಿ ಮಾರೀಚನ ಕರೆದು ॥ ೧೪೬ ॥

ಇರದೆ ನೀನಪರಾರ್ಧ ಮಣಿಹರಿಣನ ಪೋತ[4] । ನಿರವಿನ ವೇಷವ ತಳೆದು ॥
ತರಹರದಿಂ ಸೀತೆಯ ಮುಂದೆ ಸುಳಿಯೆಂ । ದೊರೆಯಲಂದವನಂತಾಗಿ ॥ ೧೪೭ ॥

ಸುಳಿಯಲು ಕಂಡು ನಾನಾ ಚಿತ್ರದ[5] ಬಣ್ಣ । ವಳವಟ್ಟ ಮಿಗವಱಿ ನಮ್ಮ ॥
ನಿಳಯದೊಳಿರೆ ಯೋಗ್ಯವೆಂದು ರಾಮಗೆ ಸೀತೆ । ತಳುವದೆ ತೋಱಲಾ ಕ್ಷಣದಿ[6] ॥ ೧೪೮ ॥

ಕಾಮಿನಿ ಕೇಳು ಸೀತೆಯ ಮನಸ್ಸಿನದೊಂದು । ಪ್ರೇಮವ ಸಲಿಸಬೇಕೆಂದು ॥
ಆ ಮಣಿಮಿಗ ಪೋಗಲದರ[10] ಸಂಗಡ ಪೋದ । ರಾಮಚಂದ್ರಮನತ್ತಲಿತ್ತ ॥ ೧೪೯ ॥

ಪಿಡಿಗೊಳಗಾಗು[7]ವಂತಿರ್ಪುದು ಕೈನೀಡಿ[8] । ಪಿಡಿದೊಡೆ ಪಿಡಿಗೆ ನಿಲುಕದು ॥
ಕಡುದೂರವಲ್ಲ ಸಮೀಪವಲ್ಲದೆಯದು । ನಡೆವುದವನಿಗಾಸೆ ಪುಟ್ಟೆ[9] ॥ ೧೫೦ ॥

ತರುಣಿ ಕೇಳ್ ಕಾಮರೂಪಿಣಿ ವಿದ್ಯೆಯಿಂ ದಶ । ಶಿರ ಶ್ರೀರಾಮನಂತಾಗಿ ॥
ತುರಗವನಡರಿ ಮಾಯಾವಿತನದಿ[11] ಬಂ । ದರಸಿಗಿಂತೆಂದು ನುಡಿದನು[12] ॥ ೧೫೧ ॥

---

ನಾಸರಿಯೆನು ಆದರೆ ಒಡಂಬಡಿಸಿ ಆಕೆಯನ್ನು ತರುವುದು ಸಾಧ್ಯವಾಗಲಾರದು" ಎಂದು ನಿರ್ಣಯವಾಗಿ ರಾವಣನಿಗೆ ಹೇಳಿದಳು. ॥ ೧೪೪ ॥ ಹೀಗೆ ಶೂರ್ಪನಖಿ ಹೇಳಲು, ರಾವಣನು ಅಂದು ಮಾರೀಚನನ್ನು ಕರೆಸಿ, ಶೂರ್ಪನಖಿ ಹೇಳಿದ ಎಲ್ಲಾ ಮಾತುಗಳನ್ನೂ ತಿಳಿಸಿದನು. ॥ ೧೪೫ ॥ ಆ ಮೇಲೆ ರಾವಣ ಮಾರೀಚರಿಬ್ಬರೂ ಪುಷ್ಪಕವಿಮಾನವನ್ನೇರಿ, ಆಕಾಶ ದಲ್ಲಿ ಹಾರಿ, ಚಿತ್ರಕೂಟದ ಉದ್ಯಾನಕ್ಕೆ ಬಂದರು. ಅಲ್ಲಿ ರಾವಣನು ಮಾರೀಚನನ್ನು ಕರೆದು ಹೀಗೆಂದನು. ॥ ೧೪೬ ॥ ನೀನು ಅಪರಾರ್ಧಭಾಗದಲ್ಲಿ ರತ್ನಮಯವಾದ ಜಿಂಕೆಮರಿಯ ರೂಪವನ್ನು ತಾಳಿ, ತಡಮಾಡದೆ ಸೀತೆಯ ಎದುರಿನಲ್ಲಿ ಸುಳಿದಾಡು – ಎನ್ನಲು, ಮಾರೀಚನು ಹಾಗೆಯೇ ಆದನು. ॥ ೧೪೭ ॥ ಆ ಜಿಂಕೆಯು ಸೀತೆಯ ಮುಂದೆ ಸುಳಿದಾಡಲು, ನೋಡಿ ಆಕೆಯು 'ಹಲವಾರು ಚಿತ್ರಮಯವಾದ ಬಣ್ಣಗಳಿಂದ ಕೂಡಿದ ಹುಲ್ಲೆಮರಿಯು ನಮ್ಮ ಅರಮನೆಯಲ್ಲಿರಲು ಯೋಗ್ಯವಾದುದು" ಎಂದು ರಾಮನಿಗೆ ತೋರಿಸಿದಳು. ॥ ೧೪೮ ॥ ಎಲೈ ಚೇಳಿನಿಯೇ ಕೇಳು ಸೀತೆಯ ಮನಸ್ಸಿಗೆ ಪ್ರಿಯವಾದುದನ್ನು ನಲ್ಲಿಸುವ ಲವಲವಿಕೆಯುಳ್ಳವನಾಗಿ ಶ್ರೀರಾಮನು ಆ ರತ್ನಮೃಗವು ಹೋದಂತೆಯೇ ಅದನ್ನು ಹಿಡಿಯಲು ಬೆನ್ನಟ್ಟಿಕೊಂಡು ಆ ಕಡೆಗೆ ಅತ್ತ ಇತ್ತ ತೆರಳಿದನು. ॥ ೧೪೯ ॥ ಆ ಜಿಂಕೆಯು ಒಮ್ಮೊಮ್ಮೆ ಕೈಗೆ ಹಿಡಿಯಲು ಸಿಗುವಂತೆ ಇರುವುದು. ಕೈ ಚಾಚಿ ಹಿಡಿಯುವಾಗ ತಪ್ಪಿಸಿಕೊಳ್ಳುವುದು. ಹೆಚ್ಚು ದೂರವೂ ಹೋಗದೆ ಸಮೀಪವಾಗಿಯೂ ಬಾರದೆ, ರಾಮನಿಗೆ ಆಸೆ ಯನ್ನು ಹುಟ್ಟಿಸುತ್ತ ಹೋಗುತ್ತಿತ್ತು. ॥ ೧೫೦ ॥ ಎಲೈ ಚೇಳಿನಿಯೇ ಕೇಳು. ಆಗ ರಾವಣನು ಕಾಮರೂಪಿ ವಿದ್ಯೆಯಿಂದ

---

[1] ತಂದದಱಿಯೆ (ಚ). [2] ಸುದತಿಯ (ಗ.ಚ.). [3] ಬರಿಸಿ (ಗ). [4] ಪೊತ್ತ (ಗ). [5] ನಾನಾ ವಿಚಿತ್ರದ (ಗ.ಚ.). [6] ಕ್ಷಣದೆ (ಚ). [7] ಪಿಡಿಯೊಳಗಾಗು (ಗ). [8] ಕೈನೀಡೆ (ಗ). [9] ಪುಟ್ಟೆ (ಗ). [10] ಪೋತಕದ (ಗ. ಚ.). [11] ಮಾಯಾನ್ವಿತನಾಗಿ (ಗ ಚ.). [12] ಪೇಳಿದನು (ಗ.).

ಪೊಳಲಿಗೆ ಮಿಗಮಱಿಯನು ಕಳುಹಿದೆ ನಾನು । ನಳಿನಾಕ್ಷಿ ಪೋಪೆವೇಳೆಂದು[1] ॥
ಒಳ್ನುಡಿಯಿಂ ನುಡಿಯಲು ಸೀತೆ ನಿಜವೆಂದು । ತಿಳಿದಳಱಿಯಳು ಮಾಯೆಯನು[2] ॥ ೧೫೨ ॥

ಮಱೆಯಿಱಿಗಾಱರ ಮಾಯಾವಿಗಳನು । ನೆಱೆಯುಪಕರಿಸಿದಾಪ್ತರನು ॥
ಮಱೆವರ ವಿಶ್ವಾಸಘಾತಕರನು ಮೊದ । ಲಱಿಯಬಾರದು ಮೃಗನಯನೆ ॥ ೧೫೩ ॥

ಮಾನಿನಿ ಕೇಳು[3] ಮಾಯಾವಿದ್ಯೆಯಂದು[4]ವಿ । ಮಾನವ ತಂದು ಪಿಡಿಯಲು ॥
ಮಾನನಿಧಾನೆಗೆ ಶಿಬಿಕೆಯಾಗಿಯೆ ತೋರ । ಲಾನದೆ ಕುಳಿತಳಂದಲ್ಲಿ ॥ ೧೫೪ ॥

ಮಡದಿ ಮಂಡಿಸಿದ ವಿಮಾನವಾಗಸವಟ್ಟೆ । ಯೆಡೆಯೊಳು ಲಂಕಾಪುರಿಗೆ ॥
ನಡೆದು ಬಂದಪಱುಪವನದೊಳಿಳುಪಿದುದಾ[5] । ಮಡದಿಯನತಿ ವೇಗದಲಿ[6] ॥ ೧೫೫ ॥

ಸೀತೆ ಹುಟ್ಟಲು[7]ಲಂಕೆ ಹಾಳೆಂದು ನುಡಿವರ । ಮಾತ ನನ್ನಿಯ ಮಾಡುವಂತೆ ॥
ಆ ತರಳಾಕ್ಷಿಯ ಕೊಂಡೊಯ್ದ ರಾವಣ । ನಾತುರದಿಂ ಲಂಕೆಯೆಡೆಗೆ ॥ ೧೫೬ ॥

ಅಲ್ಲಿಯಾ ದಶಕಂಠ ಮಾಯಾವಿದ್ಯೆಯ । ನೆಲ್ಲವ ಕಳುಪಿ ಜಾನಕಿಗೆ[8] ॥
ನಿಲ್ಲದೆ ಪೇಳ್ದ ತಾ ತಂದ ವೃತ್ತಾಂತವ । ನೆಲ್ಲವನವಳಱಿವಂತೆ ॥ ೧೫೭ ॥

ಬಳಿಕವ ಹರಿನೀಲಚ್ಛಾಯೆ[9]ಯಿಂದ ಉ । ಜ್ವಳಿಸುವ ತನ್ನಂಗದಿರವ ।
ತಳುವದೆ ಸೀತೆಗೆ ತೋಱಲೊಡನೆ ಭಯಾ । ಕುಳೆಯಾಗಿ ಮೂರ್ಛೆವಡೆದಳು ॥ ೧೫೮ ॥

---

ಶ್ರೀರಾಮನ ಸ್ವರೂಪವನ್ನು ತಾಳಿ, ಕುದುರೆಯನ್ನೇರಿ, ಮಾಯಾವಿಯಾಗಿ ಸೀತೆಯ ಬಳಿಗ ಬಂದು ಹೀಗೆಂದನು. ॥ ೧೫೧ ॥ "ಎಲೈ ಕಮಲನೇತ್ರೆ ಸೀತೆಯೇ, ನಾನು ಆ ಜಿಂಕೆಮರಿಯನ್ನು ನಮ್ಮ ಪಟ್ಟಣಕ್ಕೆ ಕಳುಹಿಸಿರುತ್ತೇನೆ ನಾವು ಹೋಗೋಣ, ಏಳು' ಎಂದು ಒಳ್ಳೆಯ ಮಾತಿನಿಂದ ಹೇಳಲು, ಸೀತೆಯು ನಿಜವೆಂದೇ ಭಾವಿಸಿದಳು, ಕಪಟವನ್ನು ತಿಳಿಯದಾದಳು ॥ ೧೫೨ ॥ ಎಲೈ ಚೇಳಿನಿಯೇ, ಮರೆಯಲ್ಲಿದ್ದು ತಿವಿಯುವವರನ್ನೂ ಮಾಯಾವಿಗಳನ್ನೂ, ಚೆನ್ನಾಗಿ ಉಪಕಾರಮಾಡಿದ ಆಪ್ತರನ್ನು ಮರೆಯುವ ಸ್ವಭಾವದವರನ್ನೂ, ವಿಶ್ವಾಸಘಾತಕರನ್ನೂ ಮೊದಲು ತಿಳಿಯಲಿಕ್ಕೆ ಸಾಧ್ಯವಾಗುವುದಿಲ್ಲ. ॥ ೧೫೩ ॥ ಚೇಳಿನಿಯೇ ಕೇಳು ರಾವಣನ ಮಾಯಾವಿದ್ಯೆಯು ಆಗ ವಿಮಾನವನ್ನು ತಂದು ನಿಲ್ಲಿಸಿತು. ಆ ವಿಮಾನವು ಸೀತೆಗೆ ಒಂದು ಪಲ್ಲಕಿಯಾಗಿ ಕಾಣಿಸಲು, ಅವಳು ಒಡನೆ ಅದರಲ್ಲಿ ಕುಳಿತಳು ॥ ೧೫೪ ॥ ಸೀತೆಯು ಕುಳಿತ ಆ ವಿಮಾನವು ಆಕಾಶಮಾರ್ಗದಲ್ಲಿ ಲಂಕಾಪಟ್ಟಣಕ್ಕೆ ಬಂದು, ಅದರ ಉದ್ಯಾನದಲ್ಲಿ ಆಕೆಯನ್ನು ಕೆಳಗೆ ಇಳಿಸಿತು. ॥ ೧೫೫ ॥ ಸೀತಯು ಹುಟ್ಟಿದೊಡನೆ, ಇದು ಲಂಕೆಗೆ ಹಾಳೆಂದು ಹೇಳಿದವರ ಮಾತನ್ನು ಸತ್ಯವಾಗಿ ಮಾಡುವಂತೆ, ರಾವಣನು ಆ ಸೀತಾದೇವಿಯನ್ನು ಆತುರದಿಂದ ಲಂಕೆಗೆ ಕೊಂಡೊಯ್ದನು ॥ ೧೫೬ ॥ ದಶಕಂಠನು ಅಲ್ಲಿ ತನ್ನ ಮಾಯಾವಿದ್ಯೆಯನ್ನು ಕಳುಹಿಸಿ, ಸೀತೆಗೆ ತಾನು ಆಕೆಯನ್ನು (ಸೀತೆಯನ್ನು) ತಂದ ವೃತ್ತಾಂತವನ್ನೆಲ್ಲಾ ತಿಳಿಸಿದನು ॥ ೧೫೭ ॥ ಆ ಮೇಲೆ ರಾವಣನು ಹರಿನೀಲದ ಬಣ್ಣದಿಂದ ಹೊಳೆವ ತನ್ನ ದೇಹವನ್ನು ಕೂಡಲೇ ಸೀತೆಗೆ ಕಾಣಿಸಿದನು ಆಗ ಆಕೆ ಹೆದರಿಕೆಯಿಂದ ಮನ ಕದಡಿ, ಮೂರ್ಛೆ ಹೋದಳು ॥ ೧೫೮ ॥ ಆಕೆಯ ಪ್ರಾಣವು, "ಎಲೈ ಸೀತೆಯೇ ಕೇಳು ನಾನು ಈಗಲೇ ಹೋಗುತ್ತೇನೆ' ಎಂದು ಹೇಳಿ ಕೊರಲಿನ ವರೆಗೆ

---

[1] ಪೋಪವೆಂದವನು (ಗ ಚ) [2] ಮಾಯವನು (ಗ) [3] ಕೇಳಾ (ಗ) [4] ವಿದ್ಯೆಯೆಂಬ (ಕ) [5] ಳಿಳಿಪಿದುದಾ (ಗ ಚ); [6] ವೇಗದೊಳು (ಗ. ಚ.) [7] ಹುಟ್ಟಿ (ಕ ಚ) [8] ಜಾನಕಿಯ (ಗ). [9] ಹರಿನೀಲಚ್ಛವಿ (ಗ ಚ)

ತರಳಾಕ್ಷಿ ಕೇಳು ನಾ ಪೋಪೆನೆನುತ ಕೊರ । ಲ್ವರ ಬಂದು ನಾನೀಗ[1]ಪೋಗೆ ॥
ಹರಣವಳಿಯದು ದಶಾಸ್ಯಗೆನುತ ನಿಂದ । ಪರಿಯಾಗಬೇಕಸುವವಳ ॥ ೧೫೯ ॥

ಪಗೆಯ ಕೊಂದುಳಿವು[2]ದುತ್ತಮವಲ್ಲದಿರ್ದೊಡಾ । ಪಗೆಗೂಡಿಯಳಿವುದೊಂದಂಗ ॥
ಪಗೆಯಿರ್ದು ತಾನು ಸಾವುದು ಕಷ್ಟವೆಂದಸು । ಮಿಗೆ ಚಿಂತಿಸಿ ನಿಂದುದವಳ ॥ ೧೬೦ ॥

ಕಳವಳಿಸಿದಳು ಕಂಗೆಟ್ಟಳು ಬಳಲಿದ । ಳಳವಳಿದಳು[3] ಬೆಮರಿದಳು ॥
ತಳವೆಳಗಾದಳು ತಳ್ಳಂಕಗೊಂಡಳು । ತಳುವದೆ ಮೂರ್ಛೆವಡೆದಳು ॥ ೧೬೧ ॥

ಪರಸತಿಯರ ಮುಟ್ಟಿ ಗಗನಗಾಮಿನಿ ವಿದ್ಯೆ । ಯಿರದೆ ಪೋಗುವದೆಂದಱಿದು[4] ॥
ಅರಸನವಳ ಮುಟ್ಟದೆ ಖೇಚರಿಯರ । ಕರಸಿ ಪೇಳುತ ಪೋದನಿತ್ತ ॥ ೧೬೨ ॥

ಶೀತಳ ಕ್ರಿಯೆಯಿಂದಲೆಚ್ಚಱಿಸಲು[5] ಕಂಡು । ಸೀತೆ ಕೇಳಿದಳಾಳಿಯರ ॥
ಈ ತಾಣವಾವುದೆನಲು ಪೇಳಿದರು ಸಂ । ಜಾತ ಮಾನಿಯೆ ಕೇಳಿಂತು[6] ॥ ೧೬೩ ॥

ಪುರವಿದು ಲಂಕೆ ತಂದವ ರಾವಣನವ । ನರಸಿಯರೈನೂರ್ವರಿಗೆ ।
ಅರಸಿ ನೀನಾಗಿರು ಯೆನಲು[7]ಖೇಚರಿಯರಿ । ಗಿರದೆ ಪೇಳಿದಳಿಂತೆಂದು[8] ॥ ೧೬೪ ॥

ಶ್ರೀರಾಮನ ಕಾಂಬನ್ನಕ[9] ನೋಡೆ ನಾ । ನಾರುಮನವನ ವಾರ್ತೆಯನು ॥
ಆರಾಗಲಿ ಬಂದು ಹೇಳುವನಕಲಾ । ಹಾರವ ಕೊಳೆನೆಂದಳವಳು[10] ॥ ೧೬೫ ॥

ಅನಿತಱೊಳಗೆ ರಾಘವನಳಿದೊಡೆ ನನ್ನ । ತನುವ ಸನ್ಯಸನದೊಳಳಿವೆ ॥
ಬಿನುಗು ಬುದ್ಧಿಯ ಪೇಳದೆ ಮುಟ್ಟದೆ ಸು । ಮ್ಮನೆಯಿರಿ ನೀವೆಂದಳವಳು ॥ ೧೬೬ ॥

---

ಬಂದು, "ನಾನೀಗ ಹೋದರೆ ರಾವಣನಿಗೆ ಮರಣವುಂಟಾಗದು" ಎಂದು ಹೋಗದೆ ನಿಂತಸ್ಥಿತಿಯಾಯಿತು. ॥ ೧೫೯ ॥ ವೈರಿಯನ್ನು ಸಂಹರಿಸಿ, ತಾನು ಬದುಕಿರುವುದು ಉತ್ತಮ. ಅದಲ್ಲವಾದರೆ ಶತ್ರುಸಹಿತವಾಗಿ ತಾನು ನಾಶಪಡುವುದೂ ಆಗ ಬಹುದು. ಹಾಗಿಲ್ಲದೆ, ಶತ್ರು ಉಳಿದು, ತಾನು ಅಳಿಯುವುದು ಯೋಗ್ಯವಲ್ಲವೆಂದು, ಯೋಚಿಸಿ, ಆಕೆಯ ಪ್ರಾಣವು ನಿಂತು ಕೊಂಡಂತೆ ಇತ್ತು. ॥ ೧೬೦ ॥ ಸೀತೆಯು ದುಃಖಿಸಿದಳು, ದಿಕ್ಕುತೋರದಾದಳು, ಆಯಾಸಗೊಂಡಳು, ಶಕ್ತಿಕುಂದಿದಳು, ಬೆವರಿದಳು, ದಿಗ್ಭ್ರಮೆಗೊಂಡಳು, ಹೆದರಿದಳು, ತಡವಿಲ್ಲದೆ ಮೂರ್ಛೆಗೊಂಡಳು. ॥ ೧೬೧ ॥ ಪರಸ್ತ್ರೀಯರನ್ನು ಮುಟ್ಟಿ ದರೆ ತನ್ನ ಆಕಾಶಸಂಚಾರದ ವಿದ್ಯೆಯು ಒಡನೆ ಬಿಟ್ಟುಹೋಗುವುದೆಂದು ತಿಳಿದ ರಾವಣನು ಸೀತೆಯನ್ನು ಮುಟ್ಟದೆ, ಖೇಚರಿ ಯರನ್ನು ಕರೆದು ಆಕೆಯನ್ನು ಉಪಚರಿಸಲು ಹೇಳಿ, ಹೋದನು. ॥ ೧೬೨ ॥ ಆ ಸ್ತ್ರೀಯರು ಸೀತೆಗೆ ಶೈತ್ಯೋಪಚಾರವನ್ನು ಮಾಡಲು ಆಕೆ ಎಚ್ಚತ್ತು ಈ ಸ್ಥಳವು ಯಾವುದೆಂದು ಕೇಳಿದಳು. ಆಗ ದಾಸಿಯರು ಹೀಗೆಂದರು. ॥ ೧೬೩ ॥ "ಈ ಪಟ್ಟಣವು ಲಂಕೆ ನಿನ್ನನ್ನು ಇಲ್ಲಿಗೆ ತಂದವನು ರಾವಣನು ಅವನ ಐನೂರು ಮಂದಿ ರಾಣಿಯರಿಗೆ ನೀನು ರಾಣಿಯಾಗಿ ಇರು" ಎಂದು ಹೇಳಿದ ಖೇಚರಿಯರಿಗೆ ಸೀತೆ ಹೀಗೆಂದಳು. ॥ ೧೬೪ ॥ ನಾನು ಶ್ರೀರಾಮನನ್ನು ನೋಡುವ ವರೆಗೆ ಯಾರನ್ನೂ ನೋಡೆನು ಅವನ ವರ್ತಮಾನವನ್ನು ಯಾರೇ ಆಗಲಿ ಬಂದು ಹೇಳುವ ತನಕವೂ ಆಹಾರವನ್ನು ಸ್ವೀಕರಿಸೆನು—ಎಂದು

---

[1]ನೋಡಿನಾ (ಗ. ಚ.). [2]ಕೊಂದಳಿವು (ಗ). [3]ಕಂಬನಿ । ಗಳ ಸುರಿದಳು (ಕ). [4]ದೆಂದಗಿದು (ಚ). [5]ಕ್ರಿಯೆಗಳಿನ್ನೆಚ್ಚರಿಸಲು (ಗ. ಕ್ರಿಯೆಗಳಿನೆಚ್ಚರಿಸಲು (ಚ). [6]ಕೆಳದಿಯರು (ಕ). [7]ನೀನಾಗಿರುಯೆಂದು (ಗ) ನೀನಾಗಿರುಯೆಂದ (ಚ). [8]ನುಡಿದಳವಳಿಂತು (ಗ. ಚ.) [9]ಕಾಬನ್ನಕ (ಚ). [10]ಕೊಳೆನೆಂದವಳು (ಚ) ಕೊಳೆನೆಂದೆನಲು (ಗ).

ಆರನಗಲಿಸಿದೆನೋ ಮುನ್ನ ಬಿದಿಯೆ ನಾ । ನಾರ ಸುಖವ ಕೆಡಿಸಿದೆನೊ ॥
ಆರನಾರಾಮದೊಳಗೆ ಸೆಱೆಯಿಟ್ಟೆನೆಂ । ದಾ[1] ರಾಜಸುತೆ ಪಲುಬಿದಳು ॥ ೧೬೭ ॥

ಬಿಟ್ಟಳು ತೊಡವನು ವಿವಿಧ[2] ಭೂಷಣವನಂ । ದಿಟ್ಟಳಾಳಿಯರು ನೀವೆನ್ನ ॥
ಮುಟ್ಟಬೇಡೆಂದು ಪೇಳುತ ಮೌನದಿಂ ಮರ । ವಟ್ಟರ್ದಳತ್ತ ಲಂಕೆಯೊಳು ॥ ೧೬೮ ॥

ನಡುಮನೆ ನಡನಡುಗುವವು ಮುಂಜೂರೊಳು[3] । ಕಿಡಿಗಳೇಳುವವು[4] ಪೆರ್ಗಂಬ ॥
ಬಿಡದುರಿವವು ಸೀತೆಯ ತಂದು ವನದೊಳು । ಮಡಗಲು ಲಂಕೆಯೊಳಬಲೆ ॥ ೧೬೯ ॥

ಧರಣಿ ಕಂಪಿಸಿತು ಕಿಡಿಗಳೆದ್ದವು ಜಾತಿ । ತುರಗದ ತುದಿವಾಲದೊಳು ॥
ಕರಿಗಳ ಕಡೆಗಣ್ಣಿಂ ನೀರು ಸುರಿಯಲ । ಚ್ಚರಿವಟ್ಟರಾ ಪುರಜನರು ॥ ೧೭೦ ॥

ಕುಣಿದಾಡುವ ಕೈದುಗಳು ಧರಣಿಗೆ ಬೀಳ್ವ । ಮಣಿವಾಡ ಬಗುಳ್ವ ಬಳ್ಳುಗಳು ॥
ಬಣಗು ಭೂತಗಳ ಕೂಗಾಟಗಳಿರಲಂ । ದೆಣಿಕೆ[5]ಪುಟ್ಟಿತು ಪೌರರಿಗೆ ॥ ೧೭೧ ॥

ಎದ್ದವು ಧೂಮಕೇತುಗಳು ಭೂಮಿಗೆಯಂದು । ಬಿದ್ದವು ಶಿಖರ ದೇಗುಲದ ॥
ಹದ್ದಿನ ಬಳಗ ತತ್ಪುರದೊಳಾಡಲು ಭಯ । ಹೊದ್ದಿತಾ ಪುರದ ಜನರಿಗೆ ॥ ೧೭೨ ॥

ಅಲ್ಲದ ಕನಸ ಕಾಂಬರು ಗುಜ್ಜುಗುಱಿಪುಗ । ಳಲ್ಲಲ್ಲಿ ಗುಡ್ದಿಣಿಸುವರು ॥
ಪೊಲ್ಲಮೆ ಪೊರ್ದಿತು ಲಂಕೆಗೆನುತ ಜನ । ರೆಲ್ಲ ಸೈವೆಱಗಾಗುವರು[6] ॥ ೧೭೩ ॥

---

ಸೀತೆ ಹೇಳಿದಳು. ॥ ೧೬೫ ॥ ಶ್ರೀರಾಮನು ಅಷ್ಟರೊಳಗೆ ಮಡಿದರೆ, ನನ್ನ ದೇಹವನ್ನು ನಿರಾಹಾರ ಸನ್ಯಾಸದಿಂದ ನಾಶ ಪಡಿಸುವೆನು. ಆದುದರಿಂದ ನೀವು ಈ ಅಲ್ಪಬುದ್ಧಿಯ ಮಾತುಗಳನ್ನು ಆಡಬೇಡಿ, ನನ್ನನ್ನು ಮುಟ್ಟಬೇಡಿ, ನೀವು ಸುಮ್ಮನಿರಿ ಎಂದು ಅವಳು ಹೇಳಿದಳು. ॥ ೧೬೬ ॥ "ಎಲೈ ವಿಧಿಯೇ, ಹಿಂದೆ ನಾನು ಯಾರಿಗೆ ವಿಯೋಗವನ್ನು ಉಂಟುಮಾಡಿದ್ದೆನೋ ! ಯಾರ ಸುಖವನ್ನು ಕೆಡಿಸಿದ್ದೆನೋ ! ಯಾರನ್ನು ನಾನು ನನ್ನ ವಿನೋದಕ್ಕಾಗಿ ಸೆರೆಯಲ್ಲಿಟ್ಟಿದ್ದೆನೋ !" ಎಂದು ಆ ರಾಜಕುಮಾರಿ ಸೀತೆ ಪ್ರಲಾಪಿಸಿದಳು ॥ ೧೬೭ ॥ ಸೀತೆಯು ಆಭರಣಾದಿಗಳನ್ನು ಬಿಟ್ಟಳು ದಾಸಿಯರೊಡನೆ ನೀವು ನನ್ನನ್ನು ಮುಟ್ಟಬೇಡಿ ಎಂದು ಹೇಳಿದಳು ಮೌನವನ್ನು ತಾಳಿ ನಿಶ್ಚೇಷ್ಟಿತಳಂತೆ ಇದ್ದಳು ॥ ೧೬೮ ॥ ಎಲೈ ಚೇಳಿನಿಯೇ, ಆಗ ಅತ್ತ ಲಂಕಾಪಟ್ಟಣದಲ್ಲಿ ಹಲವು ಉತ್ಪಾತಗಳು ಕಾಣಿಸಿದವು. ಸೀತೆಯನ್ನು ತಂದು ಉದ್ಯಾನದಲ್ಲಿಟ್ಟುದರಿಂದ ಮನೆಯ ನಡುವಣ ಭಾಗಗಳು ನಡುಗತೊಡಗಿದವು ಮನೆಗಳ ಮಾಡಿನ ಎದುರುಗಡೆ ಕಿಡಿಗಳು ಕಾಣಿಸಿದವು ದೊಡ್ಡ ದೊಡ್ಡ ಕಂಬಗಳು ಉರಿಯತೊಡಗಿದವು ॥ ೧೬೯ ॥ ಭೂಮಿ ನಡುಗಿತು ಜಾತ್ಯಶ್ವಗಳ ಬಾಲಗಳ ತುದಿಯಲ್ಲಿ ಕಿಡಿಗಳು ಎದ್ದುವು ಆನೆಗಳ ಕಡೆಗಣ್ಣಿನಿಂದ ನೀರು ಸುರಿಯಿತು. ಆಗ ಪಟ್ಟಣದ ಜನರು ಆಶ್ಚರ್ಯಪಟ್ಟರು. ॥ ೧೭೦ ॥ ಲಂಕೆಯಲ್ಲಿ ಶಸ್ತ್ರಗಳು ಕುಣಿದವು ರತ್ನಭವನಗಳು ನೆಲಕ್ಕೆ ಉರುಳಿದವು. ನರಿಗಳು ಬಗುಳಿದವು ಕ್ಷುಲ್ಲಕವಾದ ಭೂತಗಳು ಕೂಗಾಡಿದವು ಇದರಿಂದ ಪಟ್ಟಣಿಗರಿಗೆಲ್ಲ ಚಿಂತೆ ಹುಟ್ಟಿತು ॥ ೧೭೧ ॥ ಧೂಮಕೇತುಗಳು ಎದ್ದುವು ದೇವಾಲಯದ ತುದಿ ನೆಲಕ್ಕೆ ಬೀಳುವುದು ಕಾಣಿಸಿತು ಹದ್ದುಗಳು ಪಟ್ಟಣದಲ್ಲಿ ಹಾರಾಡಿದವು ಇದರಿಂದ ಪಟ್ಟಣಿಗರಿಗೆ ಭಯವುಂಟಾಯಿತು ॥ ೧೭೨ ॥ ಲಂಕೆಯ ಪಟ್ಟಣಿಗರು ಕೆಟ್ಟ ಕನಸುಗಳನ್ನು ಕಾಣತೊಡಗಿದರು ಏನಾಗುವುದೋ ಎಂದು ಚಿಂತಿಸತೊಡಗಿದರು. ಲಂಕೆಗೆ ಕೇಡು ಅಡಸಿತೆಂದು ಆಶ್ಚರ್ಯ-

---

[1] ಯಿಟ್ಟೆನೋ ಆ (ಕ) [2] ತೊಡವನ್ನಾಧವ (ಕ) [3] ಮುಂಜಾರೊಳು (ಗ) [4] ಕಿಡಿಯೇಳುವವು (ಗ ಚ). [5] ಕೂಗಾಟದಿಂ ಲಂಕೆ । ಯೆಣಿಕೆ (ಚ) [6] ಸೈವೆಱಗಾಗಿಹರು (ಗ ಚ).

ನೆತ್ತರ ಮಳೆ ಸುರಿದುದು ಮತ್ತಲ್ಲಲ್ಲಿ । ಹೊತ್ತಿ ಹೊಗೆವ ಧೂಮಾಗ್ನಿ ॥
ಎತ್ತ ನೋಡಿದೊಡತ್ತ ಕವುತು ಕವಿರೆ ಭಯ । ಮುತ್ತಿದೊ ಪುರದ ಜನರಿಗೆ ॥ ೧೭೪ ॥

ಇಂತಾ[1] ಸಮಯದೊಳಗೆ ಶಸ್ತ್ರಶಾಲೆಯೊ । ಳಂತರಿಸದೆ ಚಕ್ರರತ್ನ ॥
ತಾಂತಡೆಯದೆ[2] ಪುಟ್ಟಿತು ರಾವಣನಿಗೆ[3] ಕೃ । ತಾಂತಕ ತಾನೆಂಬಂತೆ ॥ ೧೭೫ ॥

ನೆರೆದಾಳೋಚಿಸಿ ಮಂತ್ರಿ ಪುರೋಹಿತ । ರರಸುಮಕ್ಕಳು ವಿಭೀಷಣರು ॥
ಅರಸನ ಬಳಿಗೆ ಬಂದವರು ಪೇಳ್ದರು ತಮ್ಮ । ಕರಗಳ[4] ಮುಗಿದು ಭೀತಿಯೊಳು ॥ ೧೭೬ ॥

ಪಾಪ ಪರಾಭವವಪಕೀರ್ತಿ ಜಗದೊಳು । ವ್ಯಾಪಿಸುವುದು ಪೊಲ್ಲವದಱಿಂ ॥
ಆ ಪರಸತಿಯ ಬಿಡುವುದೆಂದವರು ನಾ । ನಾ ಪರಿಯೊಳು ಪೇಳಿದರು[5] ॥ ೧೭೭ ॥

ಕಲೆ ಪೊರ್ದುವುದು ಜಸವೆಣ್ಣ ಮೆಯ್ಯೊಳು ನಿಜ । ಕುಲವಳಿವುದು ಕಟ್ಟಿದಾಯು ॥
ನಿಲಲಱಿಯದು ಗರುವಿಕೆ ಕೆಡುವುದು[6] ಪರ । ಲಲನೆಗೊಲಿದ ಮಾನವಗೆ ॥ ೧೭೮ ॥

ಧರಣಿ ಪೊಱದೆ ಪೊಱಗಿಕ್ಕುವಳಲ್ಲದೆ । ಪರಲೋಕಕಲ್ಲಿಹ ನೆಲಕೆ ॥
ನೆರವಲ್ಲ[7] ಮರಣವಡೆಯೆ ನರಕದೊಳಾಳ್ವ । ಪರಸತಿಗೊಲಿದ ಮಾನವನು ॥ ೧೭೯ ॥

ಬಿಡು ಬೇಗ ಸೀತೆಯುನಳಿಜಸವದು ನಿನ್ನ । ಗಡಿಯ ದಾಂಟದ ಮುನ್ನ ನಮ್ಮ ॥
ನುಡಿಯ ಮನ್ನಿಸು ಕೀರ್ತಿಯ ಪಡೆಯೆಂದವ । ನಡಿಯ ಹಿಡಿದು ಪೇಳ್ದರವರು ॥ ೧೮೦ ॥

---

ವನ್ನು ತಾಳತೊಡಗಿದರು. ॥ ೧೭೩ ॥ ರಕ್ತದ ಮಳೆ ಸುರಿವುದು ಕಾಣಿಸಿತು. ಅಲ್ಲಲ್ಲಿ ಹೊತ್ತಿ ಹೊಗೆಯುವ ಹೊಗೆ ಬೆಂಕಿಗಳು ಕಾಣಿಸಿದವು. ಎಲ್ಲಿ ನೋಡಿದರೂ ತಲೆಕೆಳಗಾದಂತೆ ಕಾಣಿಸಲು, ಪಟ್ಟಣಿಗರು ಭಯಗೊಂಡರು. ॥ ೧೭೪ ॥ ಹೀಗಿರುವ ಸಮಯದಲ್ಲಿ, ಆ ರಾವಣನ ಆಯುಧಾಗಾರದಲ್ಲಿ ಒಡನೆಯೇ ಒಂದು ಚಕ್ರರತ್ನವು ಹುಟ್ಟಿಕೊಂಡಿತು. ಇದು ರಾವಣನಿಗೆ ಯಮಪ್ರಾಯವೋ ಎಂಬಂತಿತ್ತು. ॥ ೧೭೫ ॥ ಆಗ ರಾವಣನ ಮಂತ್ರಿಗಳು, ಪುರೋಹಿತರು, ರಾಜಕುಮಾರರು, ವಿಭೀಷಣ—ಮುಂತಾದವರೆಲ್ಲರೂ ಒಟ್ಟು ಸೇರಿ ಆಲೋಚಿಸಿ, ರಾವಣನ ಬಳಿಗೆ ಬಂದು, ಕೈಮುಗಿದು ಭಯದಿಂದ ಹೀಗೆ ಹೇಳಿದರು ॥ ೧೭೬ ॥ ಪರಸ್ತ್ರೀಯಾದ ಸೀತೆಯನ್ನು ತಂದುದರಿಂದ ನಿನ್ನ ಪಾಪವೂ, ಅಪಜಯವೂ, ದುಷ್ಕೀರ್ತಿಯೂ—ಬಂದು ಲೋಕದಲ್ಲಿ ವ್ಯಾಪಿಸುವುದು ಆದುದರಿಂದ ಇದು ಒಳ್ಳಿತಲ್ಲ. ಸೀತೆಯನ್ನು ಬಿಡಬೇಕು ಎಂದು ಅವರು ಹಲವು ವಿಧದಲ್ಲಿ ತಿಳಿಸಿದರು. ॥ ೧೭೭ ॥ ಪರಸ್ತ್ರೀಯನ್ನು ಮೋಹಿಸಿದ ಮನುಷ್ಯನಿಗೆ ಆತನ ಕೀರ್ತ್ಯಂಗನೆಯ ಮೈಯಲ್ಲಿ ಕಳಂಕಗಳು ಕಾಣಿಸುವವು, ಆತನ ವಂಶವು ನಾಶವಾಗುವುದು. ಅವನು ಪಡೆದಂತಹ ಆಯುಷ್ಯವು ನಶಿಸುವುದು. ಗೌರವವು ಕೆಡುವುದು. ॥ ೧೭೮ ॥ ಅಂತಹವನನ್ನು ಭೂದೇವಿಯು ಹೊರಲಾರದೆ ಬಿಸಾಡುವಳು. ಅವನಿಗೆ ಪರಲೋಕವು ದೊರೆಯದು. ಪರಸತಿಗೆ ಮೋಹಿಸಿದವನು ಸಾಯಲು. ನರಕದಲ್ಲಿ ಮುಳುಗುವನು. ॥ ೧೭೯ ॥ ಅಪಕೀರ್ತಿಯು ನಿನ್ನ ನಾಡಿನ ಗಡಿಯನ್ನು ದಾಟುವುದರೊಳಗಾಗಿ, ಬೇಗನೇ ಸೀತೆಯನ್ನು ಬಿಡು ನಮ್ಮ ಮಾತಿಗೆ ಮರ್ಯಾದೆ ಕೊಡು. ಒಳ್ಳೆಯ ಕೀರ್ತಿಯನ್ನು ಸಂಪಾದಿಸು—ಎಂದು ಅವರು ಅವನ ಪಾದಹಿಡಿದು ಹೇಳಿದರು. ॥ ೧೮೦ ॥ ಪರಸ್ತ್ರೀಯರಲ್ಲಿ ಮೋಹಗೊಂಡ ಮನುಷ್ಯನಿಗೆ ಜ್ಞಾನವೂ

---

೧೭೪ ಈ ಪದ್ಯ ಗ. ಚ.ಗಳಲ್ಲಿಲ್ಲ　[1] ಅಂತಾ (ಗ. ಚ.).　[2] ಅಂತರಿಸದೆ (ಕ).　[3] ಪುಟ್ಟಿತು ಪುಟ್ಟಲೊಡನೆ (ಕ).　[4] ಕರವ (ಚ). [5] ಪೇಳ್ದರವಗೆ (ಗ.ಚ.).　[6] ಗರುವಿಕೆಯಳಿವುದು (ಗ.ಚ.).　[7] ನೆರಪಲ್ಲ (ಚ).

ಶ್ರುತಿ ಕೆಡುವುದು ಮತಿ ಕೆಡುವುದು ಪಿಡಿದ ಸು । ವ್ರತ ಕೆಡುವುದು ಮೋಕ್ಷವಡೆವ ॥
ಗತಿ ಕೆಡುವುದು ಮಾನ ಹಾನಿಯುಪ್ಪುದು ಪರ । ಸತಿಯರಿಗೊಲಿದ ಮಾನವಗೆ ॥ ೧೮೧ ॥

ಬಿಟ್ಟು ಪೋಗುವುದು ನಾನಾವಿದ್ಯೆ ಪರಸ್ತ್ರೀಯ । ಮುಟ್ಟಲೊಡನೆ ಕೇಳವಳ ।
ಬಿಟ್ಟು ಕಳೆವುದುತ್ತಮವೆಂದವನ ಕಾಲ । ಕಟ್ಟಿಕೊಂಡವರು ಪೇಳಿದರು ॥ ೧೮೨ ॥

ಎಂದು ನುಡಿದ ತನ್ನಾಪ್ತಜನರ ಮಾತ । ಹಿಂದುಗಳೆದು ರಾವಣನು[1] ॥
ಅಂದು ನುಡಿದ ಮೇಲನಱಿಯದೆ ಕೋಪಾಗ್ನಿ । ಯಿಂದಲವರ ಮನಮುಱಿದು[2] ॥ ೧೮೩ ॥

ಪಟ್ಟಣ ಕೆಡಲಿ ನಾನಾಳುವ ರಾಜ್ಯ ತಾ । ಕೆಟ್ಟುಹೋಗಲಿಯಸುವೆನ್ನ ॥
ಬಿಟ್ಟು ಹೋಗಲಿ ಸೀತೆಯ ಬಿಡುವುದು ನೀವು । ಬಿಟ್ಟಾಡಿಯೆಂದನಾ ನೃಪತಿ ॥ ೧೮೪ ॥

ಅವಳು ಬರಲು ಚಕ್ರರತ್ನ ಪುಟ್ಟಿದುದೆನ್ನ । ಭವನದೊಳಗೆಯಿನ್ನು ಕೆಲವು ॥
ಅವನಿ ಕೈಸಾರ್ಗು ಕೈವಶವಾದವಳನಾವ । ವಿವರ ಬಿಡುವುದೆಂದನವಸು ॥ ೧೮೫ ॥

ಪರನೆಲನಲ್ಲದೆ ಪರಸತಿಯಲ್ಲದೆ । ಪರವಸ್ತುಗಳಲ್ಲದಿನ್ನು ॥
ಅರಸುಗಳಿಗೆ[3] ಬರ್ಪ ತೆಱನಾವುದೆಂದಾ[4] । ನರನಾಥ ನುಡಿದನವರಿಗೆ ॥ ೧೮೬ ॥

ಪೊಲ್ಲಮೆ ಪೊರ್ದಿ ಬಂದಿತು[5] ರಾವಣಗೆ ನಾ । ವೆಲ್ಲರು ಕೆಟ್ಟೆವೆಂದೆನುತ ॥
ತಲ್ಲಣಗೊಳುತ ಬಂದರು ಚಿಂತಿಸುತ ಭೂ । ವಲ್ಲಭನಿಗೆ ಕೈಯ ಮುಗಿದು ॥ ೧೮೭ ॥

---

ಬುದ್ಧಿಯೂ ಕೆಡುವವು, ಅನುಸರಿಸಿ ಬಂದ ವ್ರತವೂ ಹಾಳಾಗುವುದು ಅವನಿಗೆ ಮೋಕ್ಷಗತಿಯು ಇಲ್ಲದಾಗುವುದು ಮಾನವು ಕೆಡುವುದು. ॥ ೧೮೧ ॥ ರಾವಣನೇ ಕೇಳು. ಪರಸ್ತ್ರೀಯನ್ನು ಮುಟ್ಟಿದೊಡನೆ ವಿದ್ಯಗಳೆಲ್ಲವೂ ಬಿಟ್ಟುಹೋಗುವವು ಆದುದರಿಂದ ಆ ಸೀತೆಯನ್ನು ಬಿಟ್ಟುಬಿಡುವುದೇ ಲೇಸು—ಎಂದು ಅವರು ಅವನನ್ನು ಒತ್ತಾಯದಿಂದ ಹೇಳಿದರು. ॥ ೧೮೨ ॥ ಹೀಗೆ ಹೇಳಿದ ತನ್ನ ಆಪ್ತಜನರ ಮಾತನ್ನು ಅಲಕ್ಷಿಸಿ, ಮುಂದೆ ಆಗುವುದನ್ನು ತಿಳಿಯದೆ ಸಿಟ್ಟಿನಿಂದ ಕೂಡಿ, ಅವರ ಮನಸ್ಸಿಗೆ ನೋವಾಗುವಂತೆ ರಾವಣನು ಹೀಗೆ ಹೇಳಿದನು. ॥ ೧೮೩ ॥ ನನ್ನ ಪಟ್ಟಣವು ಕೆಟ್ಟರೆ ಕೆಡಲಿ ! ನಾನು ಆಳುವ ರಾಜ್ಯವೇ ಕೆಟ್ಟುಹೋಗಲಿ ! ಪ್ರಾಣವೇ ಹಾರಿಹೋಗಲಿ ! ನೀವು ಮಾತ್ರ ಸೀತೆಯನ್ನು ಬಿಡುವ ಮಾತನ್ನು ಬಿಟ್ಟು ಮಾತನಾಡಿ—ಎಂದು ರಾವಣನು ಹೇಳಿದನು. ॥ ೧೮೪ ॥ ಅವಳು ಬಂದುದರಿಂದ ನನ್ನ ಅರಮನೆಯಲ್ಲಿ ಒಂದು ಚಕ್ರರತ್ನ ಹುಟ್ಟಿದೆ ಇದ-ರಿಂದಾಗಿ ಕೆಲವು ಭೂಭಾಗಗಳು ನನ್ನ ವಶವಾಗುವವು. ಕೈವಶವಾಗಿರುವ ಸೀತೆಯನ್ನು ಹೇಗೆ ತಾನೇ ಬಿಡಲು ಸಾಧ್ಯ?—ಎಂದು ರಾವಣನು ಹೇಳಿದನು. ॥ ೧೮೫ ॥ ಅನ್ಯರ ಭೂಮಿ, ಅನ್ಯರ ಸ್ತ್ರೀ, ಅನ್ಯರ ವಸ್ತುಗಳು ಇವೆಲ್ಲ ನನ್ನಂತಹ ರಾಜರಿಗೆ ಬರತಕ್ಕ ಶುಲ್ಕಗಳೇ ಆಗಿವೆ ಇವಲ್ಲದೆ ಬೇರೆ ಬರತಕ್ಕವು ಯಾವುವು?—ಎಂದು ರಾವಣನು ಅವರಿಗೆ ಹೇಳಿದನು ॥ ೧೮೬ ॥ ಆಗ ಅವರೆಲ್ಲರೂ "ರಾವಣನಿಗೆ ಕೇಡು ಬಂತು, ನಾವೆಲ್ಲ ಕೆಟ್ಟೆವು" ಎನ್ನುತ್ತ ಗಾಬರಿಗೊಳ್ಳುತ್ತ ಕಳವಳಪಡುತ್ತ ರಾಜನಿಗೆ ಕೈ-ಮುಗಿದು ಹೊರಟು ಬಂದರು ॥ ೧೮೭ ॥ ಆ ಕಡೆಯಲ್ಲಿ ರಾವಣನ ವಿಜಯಾಂಗನೆಯು ತಾನು ಯಾರೊಡನೆ ಹೋಗಲಿ

---

[1] ದಶಕಂಠ (ಗ.ಚ.) [2] ಮುಖ ಮುಱಿಯೆ (ಗ) ಮುಖ ಮುಱಿದು (ಚ) [3] ಅರಲಂಬ (ಚ) [4] ತೆಱನುಮಾವುದೆಂದಾ (ಗ. ಚ)
[5] ಬಂದು ಪೊರ್ದಿತು (ಗ).

ಅತ್ತಲಾ ದಶಕಂಠನ ಜಯವೆಣ್ಣಾ । ರೊತ್ತಿಗೆ ಪೋಪೆನೆಂದೆನುತ[1] ॥
ಹೊತ್ತುಗಳೆವುತಿರಲಿತ್ತ ರಾಘವಗಾದ । ವೃತ್ತಾಂತವ ಪೇಳ್ವೆನಬಲೆ　　॥ ೧೮೮ ॥

ಅರಲಂಬ ರೂಪನಮೃತವಾಣಿಯಾ ಜಿನ । ಚರಣಕಮಲ ನವಭೃಂಗ ॥
ಸರಸ ಸನ್ಮಾನಿ[2] ಸದ್ಗುಣಿ[3]ಬುದ್ಧಿ ಶರಧಿ ಚಂ । ದಿರನೊಪ್ಪಿದ ಕೇಳಬಲೆ　　॥ ೧೮೯ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ　　॥ ೧೯೦ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮಣಿಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದುದು[4]ಪನ್ನೆರಡನೆಯ ಮಿಸುಪ ಸಂಧಿ　　॥ ೧೯೧ ॥

---

ಎಂದು ಯೋಚಿಸುತ್ತ ಸಮಯ ಕಳೆಯುತ್ತಿದ್ದಳು. ಆಗ ಈ ಕಡೆಯಲ್ಲಿ ರಾಮನಿಗೆ ಆದ ಸಂಗತಿಯನ್ನು ಏನೆಂದು ಹೇಳಲಿ ! ॥ ೧೮೮ ॥ ಎಲೈ ಚೇಳಿನಿಯೇ, ಶ್ರೀರಾಮನು ಮನ್ಮಥಸ್ವರೂಪನೂ, ಅಮೃತದಂತಹ ಮಾತುಳ್ಳವನೂ, ಜಿನಭಕ್ತನೂ, ರಸಿಕನೂ, ಒಳ್ಳೆಯ ಮಾನವಂತನೂ, ಗುಣಶಾಲಿಯೂ, ಒಳ್ಳೆಯ ಬುದ್ಧಿಯೆಂಬ ಸಮುದ್ರಕ್ಕೆ ಚಂದ್ರನೂ ಆಗಿ ಶೋಭಿಸಿದನು. ॥ ೧೮೯ ॥ ಎಲೈ ಹರಿಣಾಕ್ಷಿ ಚೇಳಿನಿಯೇ, ಈದಿನ ನಾನು ನಿನಗೆ ಮುಂದಿನ ಕಥೆಗಳನ್ನು ಹೇಳುವೆನೆಂದು ಮೆಲ್ಲನೆ ಮುಂದುವರಿಯುತ್ತ ಇಲ್ಲಿ ಸಂಧಿಯು ಪೂರ್ಣವಾಯಿತು. ಆ ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು. ॥ ೧೯೦ ॥ ಬ್ರಾಹ್ಮಣಕುಲದಲ್ಲಿ ಜನಿಸಿದವನೂ, ಹೊಸ ಮನ್ಮಥನಂತೆ ಇರುವವನೂ, ನಿರ್ಮಲ ಗುಣವುಳ್ಳವನೂ, ಜಿನಭಕ್ತನೂ, ಅತಿಶ್ರೇಷ್ಠ ಳಾದ ವಾಗ್ದೇವತೆಯ ಸ್ವಚ್ಛವಾದ ಮುಖಕ್ಕೆ ಕನ್ನಡಿಯಂತೆ ಇರುವವನೂ, ನಿರ್ಮಲವಾದ ನಡತೆಯುಳ್ಳವನೂ, ಸಚಿವನೂ ಆದ ದೇವಪ್ಪನು ಸಂತೋಷದಿಂದ ತಿಳಿಸಿರುವ ರಾಮವಿಜಯಕಾವ್ಯದಲ್ಲಿ ಹನ್ನೆರಡನೆಯ ಸಂಧಿಯಿದು ಪ್ರಸಿದ್ಧಿ ಪಡೆಯಿತು. ॥ ೧೯೧ ॥

---

[1] ಪೋಗುವೆನೆನುತ (ಚ).　[2] ಸನ್ಮಾನ (ಗ).　[3] ಸದ್ಗುಣ (ಗ ಚ.)　[4] ಪಡೆದತಿ ಜಸವೆತ್ತುದು (ಕ).

# ೧೩. ರಾಮಸೀತೆ ಪ್ರಳಾಪ

ಇಂಗೋಲ್ವಿಲ್ಲನ[1]ಗೆಲ್ದುಪಮಾತೀತ । ಮಂಗಳಮಯ ನಿರ್ಮಾಯ ॥
ಕಂಗಳ[2]ಪುಣ್ಯಪುಂಜವೆ ಮುನಿ ಸುವ್ರತ । ಪುಂಗವ ಜಿನ ಶರಣೆನಗೆ[2] ॥ ೧ ॥

ಅಂಗನೆಯಮೃತಾಧರೆ[3]ಯಂಬುಜನೇತ್ರೆ । ಕಂಗಳ ಸಿರಿಯೆ ಮನ್ಮಥನ ॥
ಹಿಂಗದ ಜಯಮನೆಚ್ಚೆ ಲಾಲಿಸೊಲಿದು ನೀ । ನಂಗಜ ವಿಜಯನ ಕಥೆಯ ॥ ೨ ॥

ತುಱುಗೆವೆಗಂಗಳ ತುಂಬಿಗುರುಳ ಬಲು । ಪೊಱವಾಱ ಪೊಂಬಳ್ಳಿಮೆಯ್ಯ[4] ॥
ಪೊಱಗೊಡಲ್ವಿಡಿದೆನ್ನಸುವೆ ಲಾಲಿಸು ಮನ । ದೆಱಕದಿಂದೀ ಜಿನಕಥೆಯ ॥ ೩ ॥

ಮಾಲತಿಯರಲುಂಡಳಿ[5]ಸೋಂಕೆ ಷಟ್ಪದ । ಜಾಲ ಸಂತಸವಡುವಂತು[6] ॥
ನೀಲಾಳಕಿ ನಿಮ್ಮ ಸೋಂಕಿ ಬಂದೆಲರಿಗೆ । ಸೋಲರೆ ಧರಣಿಯ[7] ಜನರು ॥ ೪ ॥

ಅಸುಗೆದಳಿರ ಪದತಳೆಯಾಯತ ನೇತ್ರೆ । ಬಿಸರುಹಾನನೆ ಸುಜ್ಞಾನಿ ॥
ಪೊಸಜವ್ವನೆ ಪೊಂಬಾಳೆದೊಡೆಯಳೆ ಲಾ । ಲಿಸು ರಾಘವನ ಕಥೆಯನು ॥ ೫ ॥

ಕಣ್ಣಲಿ[8]ಕಂಡರು ಕಿವಿಯಲಿ ಕೇಳ್ದರು । ಉಣ್ಣರು ನೀರ ಕುಡಿಯರು ॥
ಹೆಣ್ಣೆ ಕೇಳವನ ದುಃಖವ[9]ಪೇಳ್ವೊಡೆ ನನ್ನ । ಕಣ್ಣಿಗೆ ನೀರೊದವುತಿವೆ[10] ॥ ೬ ॥

ಲಲನೆ ಕೇಳವನ ವ್ಯಾಕುಲವ ಪೇಳ್ವೊಡೆ ಜಿಹ್ವೆ । ತಲೆಗೂಡ ಪೊಕ್ಕಿಕ್ಕಿ ಪಡಿಯ ॥
ತಲೆಯೆತ್ತಿ ನೋಡದುಲಿಯದೊಲೆಯದು ನೋವು[11] । ಬಲುಹೆನ್ನ ಮನಕೆ ನಿನ್ನಾಣೆ ॥ ೭ ॥

---

ಕಬ್ಬುಬಿಲ್ಲಿನವನಾದ ಮನ್ಮಥನನ್ನು ಸೋಲಿಸಿದವನೇ, ಹೋಲಿಕೆಗೆ ಮೀರಿದ ಮಂಗಳಗಳಿಂದ ಕೂಡಿದವನೇ, ಮಾಯೆಯಿಲ್ಲದವನೇ, ಕಣ್ಣುಗಳ ಪುಣ್ಯದರಾಶಿಯೇ, ಮುನಿಸುವ್ರತ ಜಿನೇಶ್ವರನೇ ನನಗೆ ನೀನೇ ಆಶ್ರಯವು ॥ ೧ ॥ ಶ್ರೇಣಿಕ ರಾಜನು ಮಡದಿಯಾದ ಚೇಳಿನಿಗೆ ಹೀಗೆಂದನು—ಎಲೈ ಮಡದಿಯೇ, ಅಮೃತದಂತಹ ಕೆಳದುಟಿಯವಳೇ, ತಾವರೆಯಂತಹ ಕಣ್ಣಿನವಳೇ, ಕಣ್ಣಿನ ಸಂಪತ್ತೇ, ಮನ್ಮಥನ ವಿಜಯಾಂಗನೆಯೇ ಮನ್ಮಥನನ್ನು ಜಯಿಸಿದ ಜಿನೇಶನ ಕಥೆಯನ್ನು ಕೇಳು ॥ ೨ ॥ ನಿಬಿಡವಾದ ಅಕ್ಷಿರೋಮಗಳಿರುವ, ತುಂಬಿಯಂತಹ ಕೂದಲಿನ, ದೊಡ್ಡದಾದ ನಿತಂಬದ, ಚಿನ್ನದ ಬಳ್ಳಿಯಂತಿರುವ ದೇಹದ, ಹೊರಗೆ ದೇಹಧಾರಣ ಮಾಡಿದಂತಿರುವ ನನ್ನ ಪ್ರಾಣವೇ, ಈ ಜಿನಕಥೆಯನ್ನು ಮನವೊಲಿದು ಕೇಳು ॥ ೩ ॥ ತುಂಬಿಗಳು ಜಾಜಿಹೂವಿನ ರಸವನ್ನುಂಡು ಒಂದ ಹಣ್ಣು ತುಂಬಿಗಳ ಸ್ಪರ್ಶದಿಂದ ಸಂತೋಷಪಡುವಂತೆ. ಕಪ್ಪಾದ ತಲೆಗೂದಲಿನ ಸ್ತ್ರೀಯರನ್ನು ಸೋಂಕಿ ಬರುವ ಗಾಳಿಗೆ ಲೋಕದ ಜನರು ಮರುಳಾಗರೆ? ॥ ೪ ॥ ಅಶೋಕದ ಚಿಗುರಿನಂತಹ ಪಾದತಳವುಳ್ಳ, ವಿಶಾಲವಾದ ಕಣ್ಣುಗಳುಳ್ಳ, ತಾವರೆಯಂತಹ ಮೊಗವುಳ್ಳ, ಒಳ್ಳೆಯ ತಿಳಿವಳಿಕೆಯುಳ್ಳ, ನವಯೌವನವುಳ್ಳ, ಹೊಂಬಾಳೆಯಂತಹ ತೊಡೆಗಳುಳ್ಳ ಚೇಳಿನಿಯೇ ಶ್ರೀರಾಮನ ಕಥೆಯನ್ನು ಕೇಳು ॥ ೫ ॥ ಆ ಶ್ರೀರಾಮನ ದುಃಖವನ್ನು ಕಣ್ಣಿನಲ್ಲಿ ಕಂಡವರೂ ಕಿವಿಯಲ್ಲಿ ಕೇಳಿದವರೂ ವ್ಯಥೆಗೆ ಈಡಾಗಿ ಅಶ್ರುನೀರುಗಳನ್ನೇ ಬಿಡುವರು ಅವನ ದುಃಖವನ್ನು ತಿಳಿಸುವಾಗ ನನ್ನ ಕಣ್ಣಿನಲ್ಲಿ ನೀರು ಹರಿಯುತ್ತಿದೆ ॥ ೬ ॥ ಎಲೈ ಮಡದಿಯೇ ಕೇಳು ಆ ಶ್ರೀರಾಮನಿಗಾದ ವ್ಯಥೆಯನು, ಹೇಳುವನೆಂದರೆ,

---

[1] ಐಗೋಲ್ವಿಲ್ಲನ (ಗ) [2] ಪುಣ್ಯನ ಮುನಿಸುವ್ರತಜಿನ । ಪಂಗಾನು ನಮಿಪೆನಲ್ಲಿಯೊಳು (ಚ) ನಮಿಸುವರ್ಥಿಯೊಳು (ಗ)
[3] ಮಂಗಳಾಂಗಿ ಬಿಂಬಾಧರೆ (ಕ) [4] ಪೊಂಬಾಳೆದೊಡೆಯ (ಗ) [5] ಯರಲುಂಡಳಿ (ಗ) [6] ಪಡುವಂತೆ (ಗ) [7] ಪಣಿಯರೆ (ಗ)
[8] ಕಣ್ಣಲಿ (ಕ) [9] ಕೇಳವನಾಕುಲವ (ಕ) [10] ನೀರೊದವುತಿಪೆ (ಗ) [11] ಮಲಿಯದೊಂದಿದು ನೀವು (ಕ).

ದೇವ ಚಿತ್ತೈಸು ಸಂಸಾರದೊಳೊಲಿದಿರ್ಪ । ಜೀವರುಗಳಿಗೆಯುನಂತ ॥
ತೀವಿದ ದುಃಖಕ್ಕಿದಾವುದು ಘನಮೆಂ । ದಾ ವಧು ಪೇಳ್ದಳವನಿಗೆ ॥ ೮ ॥

ಕಿಚ್ಚ ಮೆಟ್ಟಲು ಚುಱ್ರೆಂಬುದೆದೆಯೊಳದು । ಕೆಚ್ಚುಗೊಂಡಿರದು[1] ರಾಘವನ ॥
ಮಚ್ಚುಗಾತಿಯ ವಿಯೋಗದಿ[2]ಬಂದ ನೋವದು । ಹುಚ್ಚುಮಾಡುವುದಲ್ಲವವನ ॥ ೯ ॥

ಅರಸ ಕೇಳು ಸುದೃಷ್ಟಿಯ ಚಿತ್ತದೊಳಗೆ ನೋ । ವಿರದಾ ಪೊಸಕುಂಭವನು ॥
ಪರಕಲಿಸಿದರೇಣುಷ್ಪೆನೆ[4] ಪೋಪಂತೆ । [5]ಪರೆವುದು ನೋವಾ ನೃಪಗೆ[5] ॥ ೧೦ ॥

ಅದಱಿಂದ ಸಂಸಾರವತಿಕಷ್ಟವೆಂದೆಂ । ಬುದ[6]ನಱಿದಾ ಜಿನಪತಿಯ ॥
ಪದವನೆದೆಯೊಳಿಟ್ಟು ವಿಬುಧಜನರು ಮುಕ್ತಿ । ಸುದತಿಯನಾಲಿಂಗಿಸುವರು ॥ ೧೧ ॥

ಎಂದು ನುಡಿದ[7] ಚೇಳಿನಿದೇವಿಯ ಮಾತಿ । ನಂದಕೆ ಬೆಱಗಾಗಿ ಬಳಿಕ ॥
ಮುಂದಣ ಕಥೆಯ ಶ್ರೇಣಿಕ ಭೂಪವರನಿಂ । ತೆಂದು ಪೇಳಿದನವಳೊಡನೆ ॥ ೧೨ ॥

ಇಳಲೆ ಕೇಳಾ ಮಾಯದ ಮರಿಮಿಗದ[8]ಬೆಂ । ಬಳಿ ಸಂದು ಕೆಲವು ದೂರದೊಳು ॥
ತಳುವದದೃಶ್ಯವಾಗಲು ತಿರುಗಿದನಾ । ಯಿಳೆಯಾಣ್ಮ ತಪ್ಪನಕಾಗಿ ॥ ೧೩ ॥

ಬಂದು ಬನವ ಪೊಕ್ಕು ಸೀತಾದೇವಿಯ । ರಂದಿರ್ದೆಡೆಯೊಳಿಲ್ಲದಿರಲು ॥
ನಿಂದು ದೆಸೆಯ ನಿಟ್ಟಿಸಿ ಕಾಣದಿರೆ ಮನ[9] ನೊಂದಾ ನೃಪತಿ ವನದೊಳು[9] ॥ ೧೪ ॥

---

ನಾಲಗೆ ಬಾರದು. ನಾಲಗೆಯು ತಲೆಯೆಂಬ ಗೂಡಿನ ಒಳಗೆ ಹೋಗಿ ಬಾಗಿಲಿಕ್ಕಿ, ತಲೆಯೆತ್ತಿ ಕೂಡ ನೋಡದೆ, ಸದ್ದು ಮಾಡದೆ, ಅಲುಗಾಡದೆ ಇರುವುದು. ನಿನ್ನಾಣೆಯಾಗಿಯೂ ನನಗೆ ಬಹಳ ನೋವಾಗುತ್ತಿದೆ. ॥ ೭ ॥ ಆಗ ಚೇಳಿನಿಯು 'ಪತಿದೇವ, ಕೇಳು ಈ ಸಂಸಾರದಲ್ಲಿರುವ ಜೀವಿಗಳಿಗೆ ದುಃಖಕ್ಕೆ ಕೊನೆಯೇ ಇಲ್ಲ. ಹೀಗಿರುವಾಗ ಇದಕ್ಕಿಂತ ಹೆಚ್ಚಿನ ದುಃಖವು ರಾಮನಿಗೆಲ್ಲಿ?' ಎಂದು ಕೇಳಿದಳು. ॥ ೮ ॥ ಬೆಂಕಿಯನ್ನು ಕಾಲಿನಿಂದ ಮೆಟ್ಟಿದರೆ ಚುರ್ರೆನ್ನುವುದು. ಅದು ಹೃದಯವನ್ನೇನೂ ಸೇರಲಾರದು. ಶ್ರೀರಾಮನಿಗೆ ತನ್ನ ಪತ್ನಿಯ ವಿಯೋಗದಿಂದ ಬಂದ ನೋವು ಅವನನ್ನು ಹುಚ್ಚು ಗೊಳಿಸುವಂಥದಲ್ಲವೆ? ॥ ೯ ॥ ಎಲೈ ಪತಿಯೇ ಕೇಳು ಜ್ಞಾನಿಯಾದವನ ಮನಸ್ಸಿಗೆ ನೋವೆಂಬುದು ಇರಲಾರದು. ಒಂದು ಹೊಸತಾದ ಮಡಕೆಯ ಮೇಲೆ ಹರಡಿದ ದೂಳಿನ ಕಣಗಳು 'ಉಷ್ಟ್' ಎಂದು ಊದಿದಾಗ ಹಾರಿಹೋಗುವಂತೆ ಶ್ರೀರಾಮನಿಗಾದ ನೋವು ಹಾರಿಹೋಗುವುದು. ॥ ೧೦ ॥ ಆದುದರಿಂದಲೇ ವಿದ್ವಾಂಸರು ಈ ಸಂಸಾರವೆಂಬುದು ಬಹಳ ಕಠಿಣತರವೆಂದು ತಿಳಿದು, ಆ ಜಿನೇಶ್ವರನ ಪಾದವನ್ನು ಧ್ಯಾನಿಸುತ್ತ ಮೋಕ್ಷಾಂಗನೆಯನ್ನು ಆಲಿಂಗಿಸುವರು. ॥ ೧೧ ॥ ಹೀಗೆ ಚೇಳಿನೀದೇವಿ ಹೇಳಿದ ಮಾತಿನ ಸೊಬಗಿಗೆ ಆಶ್ಚರ್ಯವನ್ನು ತಾಳಿ, ಶ್ರೇಣಿಕನು ಆಕೆಗೆ ಮುಂದಿನ ಕಥೆಯನ್ನು ಹೀಗೆ ಹೇಳಿದನು. ॥ ೧೨ ॥ ಮಡದಿಯೇ ಕೇಳು ಶ್ರೀರಾಮನು ಆ ಮಾಯಾಮೃಗವನ್ನು ಬೆನ್ನಟ್ಟಿಕೊಂಡು ಕೆಲವು ದೂರ ಹೋಗಲು, ಅದು ಮಾಯವಾಯಿತು. ಆಗ ರಾಮನು ಹಿಂದೆರಳಿ ಉದ್ಯಾನದ ಕಡೆಗೆ ಬಂದನು ॥ ೧೩ ॥ ಶ್ರೀರಾಮನು ಬಂದು, ಉದ್ಯಾನವನ್ನು ಹೊಕ್ಕು ನೋಡಿದಾಗ ಅಲ್ಲಿ ಸೀತಾದೇವಿ ಇರಲಿಲ್ಲ. ಆಗ ನಿಂತು ದಿಕ್ಕುಗಳ ಕಡೆಗೆ ನೋಡಿದರೂ ಕಾಣದಿರಲು ಮನಸ್ಸಿ

---

[1] ಕೆಚ್ಚುಗೊಂಡೆರದು (ಗ) [2] ವಿರಹದಿ (ಚ) [3] ಕೇಳ್ಸಂದೃಷ್ಟಿಯ (ಚ). [4] ರೇಣುಪ್ಪೆನೆ (ಗ. ಚ). [5] ಸತ್ಕರಿಸುವಳಾ ನೃಪವರೆಗೆ (ಕ).
[6] ವೆಂದೆಂದದ (ಗ ಚ). [7] ಪೇಳಿದ (ಚ). [8] ಮಣಿಮಿಗದ (ಗ ಚ). [9] ನೊಂದು ವನದಿ ತೊಳಲುತ್ತ (ಗ) ತೊಳಲುತಲು (ಚ).

ಕಂಡಿರೆ ತಳಿರೆ ತಾವರೆಯೆ ಕನ್ನೈದಿಲೆ । ಕಂಡಿರೆ ಶುಕಪಿಕಗಳಿರ ॥
ಕಂಡಿರೆ ಪೆಣ್ದುಂಬಿಗಳಿರ ಸೀತೆಯ ನೀವು । ಕಂಡಿರೆ ನವಿಲಂಚೆಗಳಿರ ॥ ೨೨ ॥

ಎಂದಱಸುತ ಮುಂದೆ ಬರುತಿರೆ ಲಕ್ಷ್ಮಣ । ನಂದು ಕಾಣುತ ಕೇಳಲವಗೆ ॥
ಹಿಂದಣ ವೃತ್ತಾಂತವನೆಲ್ಲವ ಪೇಳೆ । ನೊಂದು ನುಡಿದನಿಂತೆಂದು ॥ ೨೩ ॥

ಬಿಸಿಗಣ್ಣನಾಗಲಿ ಸುರಪತಿಯಾಗಲಿ । ಅಸುರರಾಗಲಿ[1] ಜಾನಕಿಯ ॥
ದೆಸೆಯಾಣ್ಮರು ಕೊಂಡು ಪೋದೊಡೆ ತಹೆನು[1] ಸಾ । ಹಸವ ನೋಡೆಂದ ಲಕ್ಷ್ಮಣನು ॥ ೨೪ ॥

ಮಾರಿಯ ಬಾಯೊಳಗಿರಲಿ ಕಾಲಾಂತಕ । ನೂರೊಳಗಿರಲಿ ಕಿನ್ನರರ ॥
ಸೇರಿದೊಡೊಮ್ಮೆಗೆ ತಂದೊಪ್ಪಿಸುವೆ ನಿನ್ನ । ನಾರಿಯನೆಂದು ನುಡಿದನು ॥ ೨೫ ॥

ಪಾತಾಳಲೋಕಕೆ ಪೋಗಿರಲಾ ಕಂ । ಜಾತನ ಪುರದೊಳಗಿರಲು ॥
ಆ ತರಳಾಕ್ಷಿಯ ತಂದು ಕೊಡುವೆನಗ್ರ । ಜಾತ ನಿನ್ನಡಿಯ ಮೇಲಾಣೆ ॥ ೨೬ ॥

ಎಂದು ಲಕ್ಷ್ಮೀಧರ ದಿಕ್ಕುದಿಕ್ಕಿಗೆ ಮನ । ಸಂದು ಚರರುಗಳ ಕಳುಪೆ[2] ॥
ಅಂದು ಬುದ್ಧಿಯ ಪೇಳಿ ಕಳುಪಲಾ[3]ನೃಪನಿಂ । ತೆಂದು ಪಲುಬಿದನಬ್ಜಾಕ್ಷ ॥ ೨೭ ॥

ತಾರಗೆಗಳಿಗೆ ಕಾಲುಗುರ[4]ಕಾಂತಿಯ ನಿನ್ನ । ಚಾರು ಗುಲ್ಫದ ಚೆಲ್ವಿಕೆಯ ॥
ಮಾರನ ಕೈಯ ಹೇಮದ ಮಿಂಟಿಗಿತ್ತಿನ್ನ । ನಾರಿ ನೀ ಪೋಪುದುಚಿತವೆ ॥ ೨೮ ॥

ಪಜ್ಜಳಿಸುವ ಪಜ್ಜೆಯಿರವ ಚೆಂದಳಿರಿಗೆ । ಗುಜ್ಜುನಡೆಯನಂಚೆಗಳಿಗೆ ॥
ಲಜ್ಜೆಯ ತೊಱೆದು ನೀನೀಡಾಡಿ ಪೋಪುದು । ಕಜ್ಜವೆ ಕಮಲದಳಾಕ್ಷಿ ॥ ೨೯ ॥

---

ಯನ್ನು ಹುಡುಕಿದನು. ॥ ೨೧ ॥ ಎಲೈ ಚಿಗುರುಗಳೇ, ನೀವು ಸೀತೆಯನ್ನು ನೋಡಿದಿರಾ? ಎಲೈ ತಾವರೆಯೇ, ಕನ್ನೈದಿಲೆಯೇ, ಗಿಳಿಕೋಗಿಲೆಗಳೇ, ಹೆಣ್ಣುತುಂಬಿಗಳೇ, ನವಿಲುಗಳೇ, ಹಂಸೆಗಳೇ ಸೀತೆಯನ್ನು ಕಂಡಿರೇ? ॥ ೨೨ ॥ ಹೀಗೆ ರಾಮನು ಸೀತೆಯನ್ನು ಹುಡುಕುತ್ತ ಮುಂದೆ ಬರಲು ಲಕ್ಷ್ಮಣನು ಕಾಣಸಿಕ್ಕಿದನು. ಲಕ್ಷ್ಮಣನು ವೃತ್ತಾಂತವನ್ನೆಲ್ಲಾ ಕೇಳಿ ನೊಂದವನಾಗಿ ಹೀಗೆ ಹೇಳಿದನು. ॥ ೨೩ ॥ "ಸೀತಾದೇವಿಯನ್ನು ಕೊಂಡುಹೋದವನು ಶಿವನಾಗಿರಲಿ, ದೇವೇಂದ್ರನಿರಲಿ, ರಾಕ್ಷಸರಾಗಲಿ, ದಿಕ್ಪಾಲಕರೇ ಆಗಲಿ—ನಾನು ಬಿಡಿಸಿ ತರುವೆನು; ನನ್ನ ಸಾಹಸವನ್ನು ನೋಡು" ಎಂದು ಲಕ್ಷ್ಮಣನು ಹೇಳಿದನು. ॥ ೨೪ ॥ ಮಾರಿದೇವತೆಯ ಬಾಯೊಳಗಿದ್ದರೂ, ಪರಮೇಶ್ವರನ ಊರಿನಲ್ಲಿದ್ದರೂ, ಕಿನ್ನರರನ್ನು ಸೇರಿದ್ದರೂ ನಿನ್ನ ಮಡದಿಯನ್ನು ಒಮ್ಮೆಗೆ ನಾನು ತಂದು ಒಪ್ಪಿಸುವೆನು—ಎಂದನು. ॥ ೨೫ ॥ ಅಣ್ಣನೇ, ಸೀತಾದೇವಿಯು ಪಾತಾಳ ಲೋಕಕ್ಕೆ ಹೋಗಿದ್ದರೂ, ಬ್ರಹ್ಮಲೋಕದಲ್ಲಿದ್ದರೂ ನಿನ್ನ ಪಾದದ ಆಣೆಯಾಗಿಯೂ ನಾನು ತಂದು ಒಪ್ಪಿಸುವೆನು. ॥ ೨೬ ॥ ಲಕ್ಷ್ಮಣನು ಹೀಗೆ ಹೇಳಿ, ಚಾರಕರನ್ನು ಕರೆದು ಅವರಿಗೆ ಯೋಗ್ಯವಾದ ಸೂಚನೆಗಳನ್ನು ಕೊಟ್ಟು ಸೀತೆಯನ್ನು ಹುಡುಕಂಪುದಕ್ಕಾಗಿ ದಿಕ್ಕುದಿಕ್ಕುಗಳಿಗೆ ಕಳುಹಿಸಿದನು. ಶ್ರೀರಾಮನು ಸೀತೆಯನ್ನು ನೆನೆಸಿಕೊಂಡು ಹೀಗೆ ಪ್ರಲಾಪಿಸುತ್ತಿದ್ದನು. ॥ ೨೭ ॥ ಎಲೈ ಮಡದಿಯಾದ ಸೀತೆಯೇ, ನೀನು ನಕ್ಷತ್ರಗಳಿಗೆ ನಿನ್ನ ಕಾಲಿನ ಉಗುರುಗಳ ಕಾಂತಿಯನ್ನು ಕೊಟ್ಟು, ಮನ್ಮಥನ ಕೈಯಲ್ಲಿರುವ ಚಿನ್ನದ ಮಿಡಿತೆಗಳಿಗೆ ನಿನ್ನ ಮನೋಹರವಾದ ಕಾಲ ಮಂಡಿಯ ಚೆಲುವನ್ನು ಕೊಟ್ಟು, ನನ್ನನ್ನು ಬಿಟ್ಟು ಹೋಗಬಹುದೆ? ॥ ೨೮ ॥ ಎಲೈ ತಾವರೆಯೆಸಳಿನಂತಹ ಕಣ್ಣಿನ ಸೀತೆಯೇ, ಚೆನ್ನಾಗಿ ಹೊಳಪನ್ನು ಬೀರುವ ನಿನ್ನ ಪಾದದ ಚೆಲುವನ್ನು

---

[1] ಖೇಚರರ । ವಸುಪತಿಯಾಗಲಿಯಸುವ ಹೀರುವೆನು (ಕ) [2] ಕರಸಿ (ಕ) ಕಳುಹೆ (ಚ). [3] ಕಳುಪಿದ (ಕ) ಕಳುಪಲು (ಚ). [4] ನಿನ್ನುಗುರ (ಚ).

ಕೆಂಬಲ್ಲ ಕಡುಗಾಂತಿಯ ಕಾಂತೆ ರಸ ದಾ । ಳಿಂಬದ ಬಿತ್ತಿಗೊಲ್ದಿತ್ತು[1] ॥
ಕಂಬುಗೆ ನಿನ್ನ ಕೊರಲ ಸೊಬಗಿತ್ತೆನ್ನ । ಪಂಬಲ ಬಿಡುವುದುಚಿತವೆ ॥ ೩೭ ॥

ಮಡದಿ ಕೇಳರಲುಣಿಗಳಿಗೆ ಕುರುಳುಗಳ । ಕಡುಗಾಡಿಯ[2]ತೋಳ್ಗಳಿರವ ॥
ಕುಡುವಿಲ್ಲನ ಕೈಯ ಸಿರಿದ ಮಾಲೆಗೆ । ತಡೆಯದೆ ಕೊಡುವುದುಚಿತವೆ ॥ ೩೮ ॥

ನಾಸಿಕದಿರವ ಸಂಪಗೆಗೆಯಂಗದ ಸದ್ವಿ । ಲಾಸವ ಮದನನರಸಿಗೆ[3] ॥
ಸೂಸಿ ಸೂಱೆಯ ಕೊಟ್ಟು ಸೋಗೆಗಣ್ಣಳೆ ನೀರ । ಸೂಸಿ ನೀ ಪೋಪುದುಚಿತವೆ ॥ ೩೯ ॥

ಲಲನೆ ನೀ ನೆನ್ನ[4]ಕೇಳದೆ ನಿನ್ನ ಬೆನ್ನಿನ । ಚೆಲುವ ಚೆಕ್ಕನೆ ಕೋಪದಿಂದ ॥
ಅಲರಂಬ[5]ರತಿದೇವಿಯಾಡುವ ನೆತ್ತದ । ಹಲಗೆಗೆ[6]ಕೊಟ್ಟು ಪೋಗುವರೆ ॥ ೪೦ ॥

ಸರಿಯಲ್ಲವೆಂದುಸುರದೆ ಪೋದೆಯೊ ಮ । ಚ್ಚರದಿಂ ದಱುಪದೈದಿದೆಯೊ ॥
ಎರವಿಂದ ಪೇಳದೆ ಪೋದೆಯೊ ಪೇಳಿದ । ಱ[7]ರವ ಪೇಳೆನಗೇಣ ನೇತ್ರೆ ॥ ೪೧ ॥

ಒಂದರೆಗಳಿಗೆ ಕೂಡಿದ ಮಾನಸರು[8] ಪೋಪೆ । ವೆಂದಲ್ಲದಡಿಯ ಮುಂದಿಡರು ॥
ಇಂದುವರೆನ್ನೊಡ ವೆರಸಿರ್ದು[9] ನೀ ಪೋ । ದಂದವ ನಾರಿ ಪೇಳೆನಗೆ ॥ ೪೨ ॥

ಗೀರ್ವಾಣ ರಾಜನು ಶಚಿಯೆಂದಾ ಶಿವ । ಪಾರ್ವತಿಯೆಂದು ಪದ್ಮಜನು[10] ॥
ಗೀರ್ವಾಣಿಯೆಂದು ಕೊಂಡೊಯ್ದನೊ ಪೇಳೆಲೆ । ಶಾರ್ವರಿಕಚದ ಕಂಜಾಕ್ಷಿ ॥ ೪೩ ॥

---

ತೊರೆಯುವುದು ಯೋಗ್ಯವೇ? ॥ ೩೭ ॥ ಎಲೈ ಮಡದಿಯೇ, ಕೇಳು, ನಿನ್ನ ತಲೆಗೂದಲಿನ ಚೆಲುವನ್ನು ಸರ್ಪಗಳಿಗೂ ತೋಳುಗಳ ಚೆಲುವನ್ನು ಮನ್ಮಥನ ಕೈಯ ಬಾಗೆಹೂವಿನ ಮಾಲೆಗೂ ತಡವಿಲ್ಲದೆ ಕೊಡುವುದು ತಕ್ಕುದೇ? ॥ ೩೮ ॥ ಎಲೈ ನವಿಲುಗಣ್ಣಿನವಳೇ, ಮೂಗಿನ ಚೆಲುವನ್ನು ಸಂಪಗೆಗೂ, ಅಂಗಶೋಭೆಯನ್ನು ರತಿದೇವಿಗೂ ಚೆಲ್ಲಿ ಸೂರೆಗೊಟ್ಟು ಜಲಾಂಜಲಿಯಿತ್ತು ಹೋಗುವುದು ಸರ್ವಥಾ ಯೋಗ್ಯವಲ್ಲ ॥ ೩೯ ॥ ಎಲೈ ಲಲನೆಯೇ, ನೀನು ನಿನ್ನ ಬೆನ್ನಿನ ಸೊಬಗನ್ನು ಕಾಮಚಕ್ರೇಶ್ವರನೂ ರತಿ ದೇವಿಯೂ ಒಟ್ಟಿಗೆ ಆಡುವ ಪಗಡೆಯ ಮಣೆಗೆ ತಡವಿಲ್ಲದೆ ಕೊಟ್ಟು ಕೋಪದಿಂದ ಹೊರಟು ಹೋಗಬಹುದೆ? ॥ ೪೦ ॥ ಎಲೈ ಮೃಗಾಕ್ಷಿ, ನನ್ನಲ್ಲಿ ಹೇಳಿ ಹೋಗುವುದು ಸರಿಯಲ್ಲವೆಂದು ಭಾವಿಸಿ ನೀನು ಹೇಳದೆ ಹೋದೆಯೋ? ಮತ್ಸರದಿಂದ ಹೇಳದೆ ಹೋದೆಯೊ? ಮತ್ತೆ ಹೇಳೋಣವೆಂದು ಹೇಳದೆ ಹೋದೆಯೊ? ಇದರ ಸಂಗತಿಯನ್ನು ನನಗೆ ಹೇಳು. ॥ ೪೧ ॥ ಎಲೈ ಮಡದಿ, ಮನುಷ್ಯರು ಒಂದು ಅರೆಗಳಿಗೆ ಒಡನಾಡಿದರೆ ಸಾಕು; ಅವರು ಹೋಗುತ್ತೇನೆ ಎನ್ನದೆ ಮುಂದೆ ಪಾದವನ್ನು ಇಡುವುದಿಲ್ಲ ಹೀಗಿರುವಾಗ ಇಂದುತನಕವೂ ನನ್ನ ಒಟ್ಟಿಗಿದ್ದು, ನೀನು ಹೋಗಲು ಕಾರಣವೇನು? ಹೇಳು ॥ ೪೨ ॥ ಎಲೈ ಕತ್ತಲೆಯಂತೆ ಕರಿದಾದ ಕೂದಲಿನ ನಳಿನಾಕ್ಷಿಯೇ, ಆ ದೇವೇಂದ್ರನು ಶಚಿಯೆಂದು ಭಾವಿಸಿ ನಿನ್ನನ್ನು ಕೊಂಡುಹೋದನೋ! ಶಿವನು ಪಾರ್ವತಿಯೆಂದು ಊಹಿಸಿ ಒಯ್ದನೊ! ಬ್ರಹ್ಮನು ಸರಸ್ವತಿಯೆಂದು ಭ್ರಮಿಸಿ ಕೊಂಡುಹೋದನೋ! ಹೇಳು ॥ ೪೩ ॥ ಎಲೈ ಕಮಲಮುಖಿ, ಆ ವಿಷ್ಣುವು ನಿನ್ನನ್ನು ಲಕ್ಷ್ಮಿಯೆಂದು ಭಾವಿಸಿ ಕ್ಷೀರಸಾಗರ ಸದನಕ್ಕೆ ಒಯ್ದನೊ! ಚಂದ್ರನು ರೋಹಿಣಿಯೆಂದು ಭಾವಿಸಿ ಆಕಾಶಕ್ಕೆ

---

[1] ಬಿತ್ತಿಗೆ ಕೊಟ್ಟು (ಗ) ಬಿತ್ತುಗಳ್ಗಿತ್ತು (ಚ) [2] ಕಡುಗಾಂತಿಯ (ಗ ಚ). [3] ಕಾವನರಸಿಗೆ (ಗ.ಚ). [4] ನೀ ನನ್ನ (ಕ). [5] ಅಲರಂಬನ (ಗ). [6] ನೆತ್ತದಲೆಗೆಗೆ (ಗ). [7] ನೀನಿರವ (ಗ). [8] ಮಾನವರು (ಗ ಚ). [9] ವೆರಸಿದು (ಗ.ಚ). [10] ಯೆಂದಬ್ಜಜಾತ (ಗ.ಚ).

ಒಲುಮೆಯ ಲಲನೆಯಿರ್ದೊಡೆ[1] ತನ್ನ ವಿಭವದ । ನೆಲೆವಾಡ ಜೀವದ ಗೊತ್ತು ॥
ಹಲವು ಮಾತೇನವಳಿಲ್ಲದ ನೆಲ ಹಾಳು[2] । ನೆಲನೆಂದವನೆಣಿಸಿದನು[3] ॥ ೫೨ ॥

ಮೋಹವ ಮಾಡಿದ ನಾರಿಯಿರ್ದಡೆ ನಿಜ । ಗೇಹ ಸಂತಸದುರುದಾಣ ॥
ಊಹಿಸಲವಳಿಲ್ಲದ ನೆಲ ಪುಲಿಗಳ । ಗೂಹೆಯೆಂದವ ಪಲುಬಿದನು[4] ॥ ೫೩ ॥

ಮನವ ಮೆಚ್ಚಿಸಿಕೊಂಡ ಮಾನಿನಿಯಿರ್ದಡೆ । ಮನದ ಮಾಂಗಲ್ಯ ಮಮತೆಯ ॥
ಮನೆಯರಮನೆಯಲ್ಲದ ಮನೆಯದು ಬಿ । ಮ್ಮನೆಯೆಂದವನೆಣಿಸಿದನು ॥ ೫೪ ॥

ಸಿರಿಯಿಂದೆ ಸಿಂಗರದಿಂದೆ ಸೊಬಗಿನಿಂದೆ । ಹರೆಯದಿಂದತಿಜಾಣ್ಮೆಯಿಂದೆ ॥
ಪಿರಿದಪ್ಪ ರೂಪಿಂದೆ ಫಲವೇನು ಮೆಚ್ಚಿದ । ತರಳಾಂಬಕಿಯಿಲ್ಲದಿರಲು ॥ ೫೫ ॥

ದುಗುಲ ವಸನದಿಂದ ಪೊಂದೊಡಿಗೆಗಳಿಂದ । ಮಿಗೆಯೊಳ್ಳುಣಿಸುಗಳಿಂದ ॥
ಅಗರು ಧೂಪಗಳಿಂದ ಫಲವೇನು ಮೆಚ್ಚಿನ[5] । ನಗೆಗಣ್ಣ ನೀಱೆಯಿಲ್ಲದೊಡೆ ॥ ೫೬ ॥

ಸಿರಿಖಂಡದಿಂದ ಪನ್ನೀರಿಂದ ಪರಿಮಲ । ದರಲಿಂದ[6] ಕುಂಕುಮದಿಂದ ॥
ಸಿರಿಪಚ್ಚೆಗಳಿಂದ[7] ಫಲವೇನು ಮೆಚ್ಚಿದ । ತರಳಾಂಬಕಿಯಿಲ್ಲದಿರಲು[8] ॥ ೫೭ ॥

ರಾಜವಿಭವದಿಂದೆ[9] ರಾಜತೇಜಗಳಿಂದೆ[9] । ರಾಜ ಮನ್ನಣೆಯೊದವಿಂದೆ[9] ॥
ರಾಜ ಕಲೆಗಳಿಂದೆ[9] ಫಲವೇನು ಮೆಚ್ಚಿನ । ರಾಜವದನೆಯಿಲ್ಲದಿರಲು ॥ ೫೮ ॥

---

ವುದು – ಎಂದು ಅವನು ಭಾವಿಸಿದನು. ॥ ೫೧ ॥ ಪ್ರೀತಿಯ ಮಡದಿಯಿದ್ದರೆ ಮಾತ್ರ ತನ್ನ ವೈಭವಕ್ಕೆ ನೆಲೆಮನೆಯಿದ್ದ ರೀತಿಯೆಂದೂ ಪ್ರಾಣಕ್ಕೆ ಆಶ್ರಯವೆಂತಲೂ ಹೆಚ್ಚೇಕೆ, ಅವಳಿಲ್ಲದ ನೆಲವು ಹಾಳು ನೆಲವೆಂತಲೂ ಅವನು ಭಾವಿಸಿದನು. ॥ ೫೨ ॥ ತನ್ನನ್ನು ಪ್ರೀತಿಸುತ್ತಿರುವ ಮಡದಿ ಇದ್ದ ಸ್ಥಳವು ತನ್ನ ಮನೆಯೆನಿಸುವುದು. ಸಂತೋಷದ ಶ್ರೇಷ್ಠ ಸ್ಥಾನವೆನಿಸುವುದು. ಅವಳಿಲ್ಲದ ನೆಲವು ಹುಲಿಗಳ ಗುಹೆಯೆಂದು ಅವನು ಪ್ರಲಾಪಿಸಿದನು. ॥ ೫೩ ॥ ಮನಮೆಚ್ಚಿ ವರ್ತಿಸುವ ಮಾನಿನಿಯು ಇದ್ದ ಸ್ಥಳವು ಮನಸ್ಸಿಗೆ ಶುಭಕರವಾದುದು, ಪ್ರೀತಿಯ ಮನೆ ಅಥವಾ ಅರಮನೆಯೇ ಎನಿಸುವುದು. ಅವಳಿಲ್ಲದ ಮನೆ ವ್ಯರ್ಥವೆಂದು ರಾಮನು ಭಾವಿಸಿದನು. ॥ ೫೪ ॥ ಪ್ರೀತಿಸತಕ್ಕ ಮಡದಿಯಿಲ್ಲದಿರುವಾಗ ಸಂಪತ್ತು, ಶೃಂಗಾರ, ಸೌಂದರ್ಯ, ಪ್ರಾಯ, ಬುದ್ಧಿಚಾತುರ್ಯ, ಶ್ರೇಷ್ಠವಾದ ರೂಪ – ಇತ್ಯಾದಿಗಳಿಂದ ಏನೂ ಪ್ರಯೋಜನವಿಲ್ಲ. ॥ ೫೫ ॥ ಪ್ರೀತಿಯುಳ್ಳ ನಗೆಗಣ್ಣುಳ್ಳ ಚೆಲುವೆಯಿಲ್ಲವಾದರೆ, ಪಟ್ಟವಸ್ತ್ರಗಳಿಂದಾಗಲೀ ಹೊನ್ನಿನ ಆಭರಣಗಳಿಂದಾಗಲೀ ಉತ್ತಮ ಭೋಜನಗಳಿಂದಾಗಲೀ ಸುಗಂಧದ ಧೂಪಗಳಿಂದಾಗಲೀ ಫಲವಿಲ್ಲ. ॥ ೫೬ ॥ ಮೆಚ್ಚಿನ ಮಡದಿಯಿಲ್ಲದಿರುವಾಗ, ಶ್ರೀಗಂಧ, ಪನ್ನೀರು, ಪರಿಮಳ ಪುಷ್ಪ, ಕುಂಕುಮ, ಪಚ್ಚಕರ್ಪೂರ ಮುಂತಾದವುಗಳಿಂದ ಏನು ಪ್ರಯೋಜನ? ॥ ೫೭ ॥ ಮೆಚ್ಚಿನ ಮಡದಿಯಿಲ್ಲದೆ, ರಾಜವೈಭವವಿದ್ದು, ರಾಜತೇಜವಿದ್ದು, ರಾಜರ ಮನ್ನಣೆಯಿದ್ದು, ರಾಜಕಳೆಗಳಿದ್ದು ಏನು ತಾನೆ ಪ್ರಯೋಜನ? ॥ ೫೮ ॥ ಮೆಚ್ಚಿನ ಮಡದಿಯೋರ್ವಳು ಇಲ್ಲವಾದರೆ ಚಿಗುರಾಗಲೀ. ಸರೋವರವಾಗಲೀ, ಬೆಳುದಿಂಗಳಾ

---

[1] ಯಿರ್ದಡೆ (ಗ ಚ) [2] ಪಾಳು (ಗ.ಚ). [3] ದವ ಪಲುಬಿದನು (ಗ ಚ) [4] ಪುಲಿಯವ । ಗಾಹನೆಂ ದವ ಪಲುಬಿದನು (ಗ) ಮಱುಗಿದನು (ಚ). [5] ಮೆಚ್ಚಿದ (ಗ). [6] ಪರಿಮಲದೆಲರಿಂದ (ಚ) [7] ಪಚ್ಚೆವಳುಕಿಂದ (ಚ). [8] ನರಳಾಕ್ಷಿಯರಿಲ್ಲದಿರಲು (ಚ). [9] ವ (ಕ)

ಚರಮಾಂಗನನುಪಮ[1] ಚರಿತ ಸದ್ಗುಣಶೀಲ । ವರ ಮುಕ್ತಿವೆಣ್ಣಿರದೊಲಿವ[2] ॥
ಪುರುಷೋತ್ತಮನಾದುದಱಿಂದವನನಂ । ದರಲಂಬ ಕೊಂದುದಿಲ್ಲಬಲೆ ॥ ೬೭ ॥

ಹಿಂದಣ ಜನ್ಮಾಂತದ ನೇಹವವಳೊಳು । ಬಂದಿರಲಾ ನೃಪವರನ ॥
ಕಂದರ್ಪನಿನಿಸು ಕಾಡಿದನಲ್ಲದುಳಿದರ । ಕೊಂದು ಕೂಗದೆ ಬಿಟ್ಟಪನೆ ॥ ೬೮ ॥

ಧೀರೋದಾತ್ತನಾನತಜನ[3] ಧರ್ಮೋ । ದ್ಧಾರಕನಾ[4] ಮುಕ್ತಮೋಹಿ[5] ॥
ಘೋರ ಸಂಸೃತಿದೂರನಾಗಲಾ ನೃಪತಿಯು । ಮಾರ ಮಾರ[6] ಬಿಟ್ಟನಬಲೇ ॥ ೬೯ ॥

ತದ್ಭವದೊಳು ಕರ್ಮಕ್ಷಯವತಿ ಪು । ಣ್ಯೋದ್ಭವ ಜಿನಚರಣದೊಳು ॥
ಸದ್ಭಾವ ಶೀಲನಾದುದಱಿಂದವನನಂ । ಗೋದ್ಭವ ಕೊಂದುದಿಲ್ಲಬಲೆ ॥ ೭೦ ॥

ತೋಱುವುದತಿಮೋಹ ವಸ್ತುಗಳೊಳು ಬೇಗ । ಪಾಱುವುದದು[7] ಕೆಲದಿನಕೆ ॥
ಮೀಱಿನಡೆಯಲೀಯದು ಮೋಕ್ಷದಲಿ[8] ಕಾ । ಲೂಱುವ ಜೀವರಿಗಬಲೆ ॥ ೭೧ ॥

ಎಂದಿವು ಮೊದಲಾದ ನಿಜವಾದ ನೀತಿಗ । ಳಿಂದೊಡಂಬಡಿಸಿ ಚೇಳಿನಿಗೆ[9] ॥
ಮುಂದಣ ಕಥೆಯನಾ ರಾಯನವಳಿಗಿಂ । ತೆಂದು ಪೇಳಿದ ವಿನಯದಲಿ ॥ ೭೨ ॥

ಜನಪತಿ ಕೇಳಿಂತು ಮೋಹೋದ್ರೇಕವು । ಜನಿಸಲವನಿಗಸುವವನ ॥
ತನುವನುಳಿದು ಪೋದುದಿಲ್ಲೆನೆ ಚಿತ್ತದಿಂ । ದೆನೆ ಚೇಳಿನಿಗೆಂದನವನು ॥ ೭೩ ॥

---

ನಾದುದರಿಂದ ಅಂತಹ ಮಡದಿ ಅಗಲಿ ಹೋದಾಗ ಮನ್ಮಥನು ಮುನಿದು ಅವನ ಪ್ರಾಣವನ್ನು ಕೊಂಡುಹೋಗಲಿಲ್ಲ. ॥ ೬೬ ॥ ಚರಮದೇಹಿಯೂ, ಉಪಮಾತೀತವಾದ ನಡತೆಯುಳ್ಳವನೂ, ಒಳ್ಳೆಯ ಗುಣಗಳುಳ್ಳವನೂ, ಶ್ರೇಷ್ಠಳಾದ ಮೋಕ್ಷಾಂಗನೆಯು ಮೆಚ್ಚುವ ಮನುಷ್ಯ ಶ್ರೇಷ್ಠನೂ ಆದುದರಿಂದ ಶ್ರೀರಾಮನನ್ನು ಮನ್ಮಥನು ಕೊಲ್ಲಲಿಲ್ಲ. ॥ ೬೭ ॥ ಕಳೆದುಹೋದ ಜನ್ಮಾಂತರಗಳ ಪ್ರೀತಿಯು ಆಕೆಯಲ್ಲಿ ಬಂದಿದ್ದುದರಿಂದ ಮನ್ಮಥನು ರಾಮನನ್ನು ಇಷ್ಟೊಂದು ಪೀಡಿಸಿದ ನಲ್ಲದೆ, ಇತರರನ್ನಾಗುತ್ತಿದ್ದರೆ ಕೊಂದು ಕೂಗದೆ ಬಿಡುತ್ತಿರಲಿಲ್ಲ. ॥ ೬೮ ॥ ಧೀರೋದಾತ್ತ ಗುಣವುಳ್ಳವನೂ, ಪ್ರಣತ ಜನರ ಧರ್ಮವನ್ನು ಉದ್ಧರಿಸುವವನೂ, ಮುಕ್ತ ಜನರಲ್ಲಿ ಪ್ರೀತಿಯುಳ್ಳವನೂ, ಭಯಂಕರವಾದ ಸಂಸಾರದಿಂದ ದೂರವಿರು ವವನೂ ಆದುದರಿಂದಲೇ ಮನ್ಮಥನು ಅವನನ್ನು ಕೊಲ್ಲದೆ ಬಿಟ್ಟನು. ॥ ೬೯ ॥ ಆ ಜನ್ಮದಲ್ಲಿ ಕರ್ಮವನ್ನು ನಾಶಗೊಳಿಸಿ, ಪುಣ್ಯವನ್ನು ಸಂಪಾದಿಸಿದುದರಿಂದಲೂ, ಜಿನಪಾದದಲ್ಲಿ ಒಳ್ಳೆ ಭಕ್ತಿಯಿಂದಿದ್ದುದರಿಂದಲೂ ಮನ್ಮಥನು ರಾಮನನ್ನು ಕೊಲ್ಲಲಿಲ್ಲ. ॥ ೭೦ ॥ ಎಲೈ ಚೇಳಿನಿಯೇ. ಮೋಕ್ಷದ ಕಡೆಗೆ ತೆರಳುವ ಮಾನವರಿಗೆ ಐಹಿಕ ವಸ್ತುಗಳಲ್ಲಿ ಒಮ್ಮೆ ಬಹಳ ಮೋಹ ಹುಟ್ಟಿದರೂ ಬೇಗನೇ ಅದು ಹಾರಿಹೋಗುವುದು. ಮೋಹವು ಮೀರಿ ನಡೆಯಲಾರದು. ॥ ೭೧ ॥ ಇವೇ ಮೊದಲಾದ ವಾಸ್ತವಿಕವಾದ ನೀತಿಯ ಮಾತುಗಳಿಂದ ಒಡಂಬಡಿಸಿ, ಶ್ರೇಣಿಕನು ಚೇಳಿನಿಗೆ ಮುಂದಿನ ಕಥೆಯನ್ನು ಹೀಗೆ ಹೇಳಿದನು ॥ ೭೨ ॥ ಶ್ರೀರಾಮನಿಗೆ ಇಷ್ಟೊಂದು ಮೋಹವು ಉದ್ರೇಕಗೊಂಡರೂ ಪ್ರಾಣವು ದೇಹವನ್ನು ಬಿಟ್ಟು ಹೋಗಲಿಲ್ಲವೆ? – ಎಂದು ಕೇಳಿದಾಗ, ಚೇಳಿನಿಗೆ ಶ್ರೇಣಿಕನು ಹೀಗೆಂದನು. ॥ ೭೩ ॥ ಚೇಳಿನಿಯೇ ಕೇಳು, ರಾಮನು

---

[1] ಚರಮಾಂಗ ಪರಮ (ಗ) [2] ವೆಣ್ಣಿರದೊಲಿದ (ಗ) [3] ನಾನುತಜನ (ಗ ಚ) [4] ದಾರಕನಾ (ಚ) [5] ಮುಕ್ತಿ ಮೋಹಿ (ಗ). [6] ಮಾರ ಮಾರನು (ಕ) ಮಾರಮಾರಾ (ಗ) [7] ನಾರುವುದದು (ಕ) [8] ಮೋಕ್ಷದಲ್ಲಿ (ಗ ಚ.) ೭೨. ಈ ಪದ್ಯ ಗ ಚ. ದಲ್ಲಿಲ್ಲ. [9] ಚೇಳಿನಿಯ (ಗ ಚ).

ತಱಿಸಂದು ಪೋಗಿಯಱಿಸಿ ಕಾಣದಿರಲೋರ್ವ । ನಱಿಕೆ ಮಾಡಲು ರಾಹುವಿಂದ ॥
ಹಱಿತಂದಿರಿಸಲಂದುಱಿ ರಾಜಿಪ ತುಂಬು । ಪೆಱೆಯ ಕಂಡೆನು ಕಡೆಯೊಳಗೆ ॥ ೮೨ ॥

ಎಂದು ಪೇಳಲು ಅಷ್ಟಾಂಗ[1]ನೈಮಿತ್ಯದಿಂ । ದಂದು ವಿಚಾರಿಸಿ ಕೊಂಡು[2] ॥
ಸಂದೇಹವಿಲ್ಲದೆ ಪೇಳಿದನದಱದೊಂ । ದಂದವನತಿ ವಿಸ್ತರದೊಳು[3] ॥ ೮೩ ॥

ಲಕ್ಷಣಾಂಗ ಸ್ವರವ್ಯಂಜನ ಭೌಮಾಂತ । ರಿಕ್ಷ ಸ್ವಪ್ನ ಚ್ಛಿನ್ನಗಳ ॥
ಈಕ್ಷಿಸಲೀಯೆಂಟಂಗ ನೈಮಿತ್ಯದಿಂ । ಲಕ್ಷಿಸಿ ಪೇಳ್ದನಿಂತೆಂದು ॥ ೮೪ ॥

ರಾಹು ರಾವಣ ತೆಂಕಣದೆಸೆಯಾ ಲಂಕೆ । ಯಾ ಹರಿಣಾಂಕಮಂಡಲವೆ ॥
ಊಹೆಯೇಕಾ ಸೀತೆಯ ಕೊಂಡು ಪೋದನಾ । ಸಾಹಸಿ ತನ್ನಯ ಪುರಕೆ[4] ॥ ೮೫ ॥

ಉರ್ವೀಶ ಲಾಲಿಸು ಶ್ರೀರಾಮಲಕ್ಷ್ಮಣ । ರಿರ್ವರು ತೆರಳಲಾ ಕಾರ್ಯ ॥
ಒರ್ವನಿಂದಹುದು[5] ತಪ್ಪದು ನಂಬು ನಿನ್ನಾಣೆ । ಗೀರ್ವಾಣವಚನವೆಂದಿದನು ॥ ೮೬ ॥

ಕಲ್ಪಿತದಿಂ ಪೋದೊಡೇನದಕೇನವ । ಳಲ್ಪ[6]ದಿನಕೆ ಬಂದಪಳು ॥
ಅಲ್ಪರ ಮಾತಿನಂತಲ್ಲಿದು ಮನದ ಸಂ । ಕಲ್ಪವ ಬಿಡು[7]ನಂಬೆನ್ನ ॥ ೮೭ ॥

ಲಂಕೆಯೆಲ್ಲಿಯದು[8] ರಾವಣನೆಲ್ಲಿಯಿನ್ನಾ । ಪಂಕಜಾಕ್ಷಿಯ ಬಿಡನೆಂಬ[9] ॥
ಶಂಕೆಯೆ ಬೇಡ ಬಂದಪಳು ನಂಬಿದ ಮಕ । ರಾಂಕವಿಜಯನಡಿಯಾಣೆ ॥ ೮೮ ॥

---

ಮರಳಿ ಅದೇ ದಿಕ್ಕಿಗೆ ಹೋದುದನ್ನು ಕಂಡು, ಸಂಶಯಚಿತ್ತನಾದೆನು. ॥ ೮೧ ॥ ಚಂದ್ರಮಂಡಲವನ್ನು ನಿಶ್ಚಯ ಪೂರ್ವಕವಾಗಿ ಹೋಗಿ ಹುಡುಕಲು ಕಾಣದಿರಲು, ಒಬ್ಬನು ಬಂದು ಈ ಸಂಗತಿಯನ್ನು ವಿಜ್ಞಾಪಿಸಿದನು. ಒಡನೆ ರಾಹುವಿನಿಂದ ಚಂದ್ರಮಂಡಲವನ್ನು ಸೆಳೆದು ಮೊದಲು ಇದ್ದಲ್ಲೇ ಇರಿಸಲು, ಆ ಪೂರ್ಣಚಂದ್ರನನ್ನು ನಾನು ಕೊನೆಗೆ ನೋಡಿದೆನು – ಎಂದು ಹೇಳಿದನು. ॥ ೮೨ ॥ ದಶರಥನು ಹೀಗೆ ತಾನು ಕಂಡ ಕನಸನ್ನು ಹೇಳಲು, ಆ ಶಕುನಜ್ಞನು ಅಷ್ಟಾಂಗ ನೈಮಿತ್ಯಗಳಿಂದ ಯೋಚಿಸಿ, ಆ ಕನಸಿನ ಫಲವನ್ನು ನಿಸ್ಸಂದೇಹವಾಗಿ ಹೀಗೆ ವಿವರಿಸಿದನು. ॥ ೮೩ ॥ ಲಕ್ಷಣ, ಅಂಗ, ಸ್ವರ, ವ್ಯಂಜನ, ಭೌಮ, ಅಂತರಿಕ್ಷ, ಸ್ವಪ್ನ, ಛಿನ್ನ ಎಂಬ ಈ ಎಂಟು ಅಂಗಗಳುಳ್ಳ ಶಕುನ ಶಾಸ್ತ್ರವನ್ನು ಲಕ್ಷ್ಯ ದಲ್ಲಿಟ್ಟು, ಅವನು ಹೀಗೆ ಹೇಳಿದನು. ॥ ೮೪ ॥ ದಶರಥನು ಕನಸಿನಲ್ಲಿ ಕಂಡಿರುವ ರಾಹುವೇ ರಾವಣನು. ದಕ್ಷಿಣ ದಿಕ್ಕು ಲಂಕಾನಗರ; ಚಂದ್ರಮಂಡಲವೇ ಸೀತೆ. ಆಕೆಯನ್ನು ನಿಸ್ಸಂಶಯವಾಗಿಯೂ ಆ ರಾವಣನು ತನ್ನ ಪಟ್ಟಣಕ್ಕೆ ಕೊಂಡೊಯ್ದಿರುವನು. ॥ ೮೫ ॥ ಎಲೈ ದಶರಥ ರಾಜನೇ, ಕೇಳು. ಶ್ರೀರಾಮಲಕ್ಷ್ಮಣರಿಬ್ಬರೂ ಅಲ್ಲಿಗೆ ಹೋದರೆ, ಒಬ್ಬನಿಂದ ಈ ಕಾರ್ಯವು ನಿಶ್ಚಯವಾಗಿ ಈಡೇರುವುದು. ನಿನ್ನಾಣೆ ನಂಬಿಕೊ. ಇದು ದೇವವಾಣಿಯೆಂದು ತಿಳಿ. ॥ ೮೬ ॥ ಪೂರ್ವಕಲ್ಪಿತವಾಗಿ ಆಕೆಯು ಹೋದರೇನಾಯಿತು? ಕೆಲವೇ ದಿವಸಗಳಲ್ಲಿ ಸೀತೆಯು ಬರುವಳು. ಇದು ಅಲ್ಪರ ಮಾತೆಂದು ಭಾವಿಸಬೇಡ. ಮನದ ಸಂದೇಹವನ್ನು ಬಿಡು. ನನ್ನನ್ನು ನಂಬು. ॥ ೮೭ ॥ ಆ ಲಂಕೆಯೆಲ್ಲಿಯದು? ರಾವಣನು ಎಲ್ಲಿ? ಅವನು ಸೀತೆಯನ್ನು ಬಿಟ್ಟುಕೊಡನೆಂಬ ಸಂದೇಹವೇ ಬೇಡ. ಸೀತೆ ಬರುವಳು. ಜಿನೇಶ್ವರನ ಪಾದದ ಆಣೆಯಾಗಿ

---

೮೪ ಈ ಪದ್ಯ ಗ ಚ. ದಲ್ಲಿಲ್ಲ. [1] ಷಷ್ಟಾಂಗ (ಚ). [2] ಲಾಲಿಸಿಯವನವಗೆ (ಗ.ಚ ) [3] ನತಿ ವಿವರದೊಳು (ಚ). [4] ತನ್ನ ಪಟ್ಟಣಕೆ (ಗ. ಚ.). [5] ಪರ್ವಿನಿಂದಹುದು (ಕ). [6] ಕಲ್ಪಿತ ವಚನವ ಕೇಳುಮದಕೆ ನವಳಲ್ಪ (ಕ). [7] ಬಿಟ್ಟು (ಗ.ಚ.) [8] × × (ಗ.ಚ). [9] ಬಿಡೆನೆಂಬ (ಚ).

ಆದೇಶದಿಂ ಪೋದೊಡೇನದಕಾ[1] ಸತಿ । ಯಾ ದೇಶದೊಳಿರ್ದಡಿರದೆ[2] ॥
[3]ಆದರದಿಂದುಳಿಯದೆ ಬಂದಪಳೆಂ[3] । ದಾದುದಷ್ಟಾಂಗದೊಳರಸ ॥ ೮೯ ॥

ದೂರಣ ದೇಶವಲ್ಲಿಗೆ[4] ಸಾಗರವ ದಾಂಟಿ । ಯಾರು ಪೋಪವರೆಂದೆಂಬ ॥
ಆರೈಕೆ ಬೇಡ ಸೀತಾದೇವಿ ಬಪ್ಪಳು । ಮಾರವಿಜಯನಡಿಯಾಣೆ[5] ॥ ೯೦ ॥

ಆ ಜಗನ್ಮಾತೆಯಿಂದಾ ಲಂಕೆಗೆ ಕೇ । ಡಾ ಜನಪತಿ ಸಾವನೆಂಬ[6] ॥
ಆ ಜನ್ಮಾರ್ಜಿತವುಂಟದ ತಿಳಿಯೆನೆ । ಭೂಜಾಯೆಯರಸ ನಂಬಿದನು ॥ ೯೧ ॥

ಉಂಟು ಪದ್ಮೋದರನಿಂದಲಳಿವ ಬಲು । ಕಂಟಕವಾ ರಾವಣಗೆ[7] ॥
ತುಂಟನವನು ಪೋದ ಬಳಿಕ ನಿಮಗೆ[8]ನಿ । ಷ್ಕಂಟಕವೆಂದು ಪೇಳಿದನು ॥ ೯೨ ॥

ಎಂದು ಪೇಳಿದ ಶಕುನಜ್ಞನಿಗಾ ನೃಪ । ನಂದು ಸಪ್ತಾಂಗವನಿತ್ತು ॥
ಸಂದೇಹವ ಬಿಟ್ಟವನ ಕಳುಹಿ ಮಂತ್ರಿ । ಗೆಂದ ಮುಂದಣ ಕಾರ್ಯದಿರವ[9] ॥ ೯೩ ॥

ವನಿತೆ ಕೇಳನಿತಱೊಳಗೆ ವಾರಣಾಸಿಯಿಂ । ಮನುಜನೋರ್ವನು ಬಂದು ಕಂಡು ॥
ಜನಪತಿಗಿರದೆ ಪೇಳಿದನು ರಾಘವನಿಗಾ । ದನುವರವನು ವಿವರದೊಳು ॥ ೯೪ ॥

ಎಲ್ಲಿರ್ದ ರಾಮಚಂದ್ರಮ ಸೀತೆ ಲಕ್ಷ್ಮಣ । ರೆಲ್ಲಿರ್ದರಾ ವಿವರವನು ॥
ಸೊಲ್ಲಿಸೆಂದೆನಲದಱೊಳಗಿನಿಸುಳಿಯದೆ । ನಿಲ್ಲದೆ ಪೇಳ್ದನಾ ನೃಪಗೆ ॥ ೯೫ ॥

---

ನನ್ನ ಮಾತನ್ನು ನಂಬು. ॥ ೮೮ ॥ ರಾಜನೇ, ಸೀತೆಯು ಬಲಾತ್ಕಾರದಿಂದ ಹೋದರೇನಾಯಿತು? ಆದರಿಂದಲಾಗಿ ಆಕೆ ಲಂಕೆಯಲ್ಲಿ ನಿಲ್ಲದೆ, ಅಲ್ಲಿನ ಆದರವನ್ನೇನೂ ಲಕ್ಷಿಸದೆ, ಬರುವಳೆಂದು ಅಷ್ಟಾಂಗ ಜ್ಯೋತಿಷ್ಯದ ಫಲವಿದೆ ॥ ೮೯ ॥ ಲಂಕೆಯು ದೂರದ ದೇಶ, ಸಮುದ್ರವನ್ನು ದಾಟಿ ಅಲ್ಲಿಗೆ ಹೋಗುವವರು ಯಾರಿದ್ದಾರೆ? ಎಂಬ ವಿಚಾರವೇ ಅನಾವಶ್ಯಕ ಜಿನೇಶನ ಪಾದದ ಆಣೆಯಾಗಿಯೂ ಸೀತೆ ಬಂದೇ ಬರುವಳು ॥ ೯೦ ॥ ಲೋಕಮಾತೆಯಾದ ಸೀತೆಯಿಂದ ಆ ಲಂಕೆಗೆ ಕೇಡು ಉಂಟಾಗುವುದು; ಆ ರಾವಣನಿಗೆ ಮರಣ ಸಂಭವಿಸುವುದು – ಎಂಬ ಜನ್ಮಫಲವಿದೆ ಇದನ್ನು ತಿಳಿದುಕೋ – ಎಂದು ಹೇಳಲು, ದಶರಥನು ನಂಬಿದನು ॥ ೯೧ ॥ ಆ ರಾವಣನು ಲಕ್ಷ್ಮಣನಿಂದ ಸಾಯುವನು ಇಂಥದೊಂದು ಕಂಟಕವು ರಾವಣನಿಗಿದೆ ತುಂಟನಾದ ಅವನು ಮಡಿದನಂತರ ನಿಮಗೆಲ್ಲ ನಿಷ್ಕಂಟಕವಾಗುವುದು ॥ ೯೨ ॥ ಹೀಗೆ ಹೇಳಿದ ಶಕುನಜ್ಞನಿಗೆ ದಶರಥನು ಬಹುಮಾನವನ್ನಿತ್ತು, ಸಂಶಯವನ್ನು ಬಿಟ್ಟು, ಅವನನ್ನು ಕಳುಹಿದನು ಆ ಮೇಲೆ ಮುಂದಿನ ಕಾರ್ಯದ ವಿಷಯವನ್ನು ಮಂತ್ರಿಗೆ ತಿಳಿಸಿದನು ॥ ೯೩ ॥ ಎಲೈ ಚೇಳಿನಿಯೇ ಕೇಳು ಅಷ್ಟರಲ್ಲಿ ವಾರಣಾಸಿಯಿಂದ ಒಬ್ಬ ದೂತನು ಬಂದು ದಶರದನನ್ನು ಕಂಡು, ರಾಮನಿಗೆ ಉಂಟಾದ ಕಷ್ಟವನ್ನು ವಿವರಿಸಿ ಹೇಳಿದನು ॥ ೯೪ ॥ ರಾಮಚಂದ್ರನು ಎಲ್ಲಿದ್ದನು? ಸೀತೆ ಲಕ್ಷ್ಮಣರು ಎಲ್ಲಿದ್ದರು? ಈ ವಿವರವನ್ನೆಲ್ಲ ಹೇಳು – ಎನ್ನಲು ಅದರಲ್ಲಿ ಸ್ವಲ್ಪವೂ ಉಳಿಯದ ರೀತಿಯಲ್ಲಿ ಅವನು ರಾಜನಿಗೆ ಹೇಳಿದನು ॥ ೯೫ ॥ ಎಲೈ ದಶರಥ ರಾಜನೇ, ಆ ಶ್ರೀರಾಮನು ತಾನು

---

[1] ಪೋದೊಡದಕೇನಾ (ಚ) [2] ಇರ್ದಡವಳು (ಗ ಚ) [3] ಆದರದಿಂ ಬಂದಪಳೆಂದಿರದು (ಚ) [4] ದೇಶವಿಲ್ಲಿಗೆ (ಕ) [5] ವಿಜಯನ ಮೇಲಾಣೆ (ಗ) [6] ಸಾವನೆಂದು (ಚ) [7] ಕಂಟಕ ರಾವಣ ನೃಪಗೆ (ಗ ಚ) [8] ನಿಮಗೆ (ಗ ಚ) [9] ಮಂತ್ರಿಗೆಂದನು ಕಾರ್ಯವನುವನು (ಗ ಚ)

ಆ ಜಾನಕಿಗೂಡಿಯಲ್ಲದೆ ಪುರವನಾ । ನೀ ಜನ್ಮಕೆ ಪೋಗೆನೆಂದು ॥
ಆ ಜನಪತಿ ನುಡಿದನು ನಿನ್ನ ಪಾದ ಸ । ರೋಜದ ಮೇಲಾಣೆ[1] ನೃಪತಿ ॥ ೯೬ ॥

ಬಿಟ್ಟನೊಳ್ಳುಣಿಸನೊಳ್ಳರಲ ಮಾಲೆಯನವ । ಬಿಟ್ಟ ಸುಗಂಧ ವಸ್ತುಗಳ ॥
ಬಿಟ್ಟ ನೂತನ ವಸನವ ವನದೊಳು ಬೀಡ । ಬಿಟ್ಟಿರ್ದ ನಾನು ಬಪ್ಪಾಗ[2] ॥ ೯೭ ॥

ಬಿಟ್ಟ ವಿನೋದ ವಿದ್ಯಾಗೋಷ್ಠಿಗಳನು । ಬಿಟ್ಟನು ಸಕಲ ಭೂಷಣವ ॥
ಬಿಟ್ಟನು ಕೆಲವು ವಸ್ತುಗಳ ಕೇಳವ ಮರ । ವಟ್ಟಿರ್ದ ನಾನು ಬಪ್ಪಾಗ ॥ ೯೮ ॥

ಹೇಳು ಹೇಳಿನ್ನೊಮ್ಮೆ ಸುತನ ಸುಖದ ಬಲು । ಶಾಲೀವನವೊಣಗಿದುದೆ ॥
ತಾಳಲಾಪನೆ ದುಃಖವನೆಂದಾ ನೃಪ । ಡೋಳಾಯಮಾನಸನಾದ ॥ ೯೯ ॥

ಮೋಹಸಾಗರ ತಳ ಮಳಲೆದ್ದುದೆ ನಿಜ । ಮೋಹದಂಗನೆ ತೆರಳಿದಳೆ ॥
ದೇಹವನೆಂತು ಪಿಡಿವ ಸುತನೆಂದವ । ಹಾ ಹಾ ಎಂದಳಲಿದನು ॥ ೧೦೦ ॥

ಸಂತಸಗಡಲಱತುದೆ ಕುವರನ ನಿಜ । ಕಾಂತೆ ಪೋದಳೆ ಕಳವಿನಲಿ ॥
ಎಂತು ಜೀವಿಪ ನಂದನನೆಂದು ಹಾ ಹಾ । ಕ್ರಾಂತನಾದನು ದಶರಥನು ॥ ೧೦೧ ॥

ಜೀವವೊಂದೆನಿಸಿ[3] ಕೂಡೊಲಿದು ಜೀವಿಸುತಿ । ರ್ದಾ ವಧುವಗಲಲಾ ಕುವರ ॥
ಆವ ಬಗೆಯಲಿ ಜೀವಿಪನೆಂದು ಕಡುನೊಂ । ದಾ ವಿಭು ಪಲುಬಿದನಬಲೆ ॥ ೧೦೨ ॥

ತರಳಾಕ್ಷಿ ರಾಮಚಂದ್ರನ ದುಃಖಕೆ ಸಾ । ಸಿರ ಮಡಿ ದುಃಖವಾ ನೃಪಗೆ ।
ಇರದೆ ಜನಿಸಲು ಶೋಕಾಬ್ಧಿಯೊಳಾಳ್ದ । ಚ್ಚರಿಯದನೇನ ಪೇಳ್ದಪೆನು[4] ॥ ೧೦೩ ॥

---

ಸೀತೆಯನ್ನು ಕೂಡಿಕೊಂಡಲ್ಲದೆ, ಈ ಜನ್ಮದಲ್ಲೇ ಪಟ್ಟಣವನ್ನು ಪ್ರವೇಶ ಮಾಡೆನು – ಎಂದು ನಿನ್ನ ಪಾದದಾಣೆಯಾಗಿಯೂ ಪ್ರತಿಜ್ಞೆ ಮಾಡಿದ್ದಾನೆ. ॥ ೯೬ ॥ ನಾನು ಹೊರಟು ಬರುವ ವೇಳೆಗೆ ಶ್ರೀರಾಮನು ಉತ್ತಮ ಭೋಜನವನ್ನು ಬಿಟ್ಟು ಬಿಟ್ಟನು; ಒಳ್ಳೆ ಹೂವಿನ ಮಾಲೆಯನ್ನೂ, ಸುವಾಸನೆಯ ವಸ್ತುಗಳನ್ನೂ, ಹೊಸ ಬಟ್ಟೆಗಳನ್ನೂ ತ್ಯಾಗ ಮಾಡಿದನು. ಉದ್ಯಾನದಲ್ಲೇ ಬೀಡು ಮಾಡಿದನು. ॥ ೯೭ ॥ ವಿನೋದವನ್ನೂ, ವಿದ್ಯಾಗೋಷ್ಠಿಗಳನ್ನೂ ಬಿಟ್ಟಿರುವನು. ಎಲ್ಲಾ ತೊಡಿಗೆಗಳನ್ನೂ ಬಿಟ್ಟನು. ಕೆಲವು ವಸ್ತುಗಳನ್ನೆಲ್ಲಾ ಬಿಟ್ಟನು. ನಾನು ಬರುವ ಹೊತ್ತಿಗೆ ಅವನು ನಿಶ್ಚೇಷ್ಟಿತನಂತೆ ಇದ್ದನು. ॥ ೯೮ ॥ ಆಗ ದಶರಥನು "ಏನು? ಇನ್ನೊಮ್ಮೆ ಹೇಳು! ಮಗನ ಸೌಖ್ಯವೆಂಬ ಬತ್ತದ ಗದ್ದೆ ಒಣಗಿತೆ! ಅವನು ದುಃಖವನ್ನು ಸಹಿಸಬಲ್ಲನೆ?" ಎನ್ನುತ್ತ ಸಂಚಲಮನಸ್ಕನಾದನು. ॥ ೯೯ ॥ ಮೋಹವೆಂಬ ಸಮುದ್ರವು ಬತ್ತಿಹೋಯಿತೆ? ತನ್ನ ಒಲವಿನ ಮಡದಿ ತೆರಳಿದಳೆ? ನನ್ನ ಮಗನು ತನ್ನ ಶರೀರವನ್ನು ಹೇಗೆ ಸುರಕ್ಷಿತವಾಗಿ ಇಟ್ಟುಕೊಳ್ಳುವನೋ! ಹಾ! ಹಾ! ಎಂದು ದಶರಥನು ಅತ್ತನು. ॥ ೧೦೦ ॥ ಸಂತೋಷವೆಂಬ ಸಮುದ್ರವು ಆರಿತೆ! ಮಗನ ಮಡದಿ ಕಳವಾಗಿ ಹೋದಳೆ! ಮಗನು ಇನ್ನು ಹೇಗೆ ಜೀವಿಸುವನೊ! ಎಂದು ದಶರಥನು ಹಾಹಾಕಾರವನ್ನು ಮಾಡಿದನು. ॥ ೧೦೧ ॥ ಎಲೈ ಚೇಳಿನಿಯೇ, ಆ ದಶರಥ ರಾಜನು 'ನನ್ನ ಮಗನೂ ಸೊಸೆಯೂ ಪ್ರಾಣವು ಒಂದೇ ಎಂಬಂತೆ ಕೂಡಿ, ಪ್ರೀತಿಯಿಂದ ಜೀವಿಸುತ್ತಿರುವಾಗ, ಆ ಕನ್ಯೆಯು ಅಗಲಿದಾಗ, ಕುಮಾರನಾದ ರಾಮನು ಯಾವ ಬಗೆಯಲ್ಲಿ ಜೀವಿಸುವನೋ!" ಎಂದು ಪ್ರಲಾಪಿಸಿದನು. ॥ ೧೦೨ ॥ ಎಲೈ ಚೇಳಿನಿಯೇ, ಆ ಶ್ರೀರಾಮನ ದುಃಖಕ್ಕಿಂತ ಸಾವಿರ ಪಾಲು ದುಃಖವು ದಶರಥನಿಗೆ

---

[1] ಸರೋಜದಾಣೆಯೆಂದು (ಚ). [2] ಬಿಟ್ಟನಂದಿಂದ ಕೇಳರಸ (ಚ). [3] ಪೊಂದಿನಿಸು (ಗ.ಚ.) [4] ಬಣ್ಣಿಪೆನು (ಚ).

ಅದ ಕಂಡು ಮಂತ್ರೀಶ್ವರ ನುಡಿದನು ನೀ । ನೆದೆಗೆಡದಿರು ಚಿಂತಿಸದಿರು ॥
ಮದವ ಮುಱಿದು ರಾವಣನ ಲಂಕೆಯಿಂದಾ । ಸುದತಿಯ ತಹುದ ಪೇಳರಸ ॥ ೧೦೪ ॥

ಕಡು ದುಃಖವನುಳಿ ಚಿಂತೆಗಳನು ಬಿಡು । ಪೊಡವಿಪ ಕಾರ್ಯದ ತೆಱನ ॥
ಬಿಡದೆ ಸೀತೆಯ ತಹುದನೆ ಬುದ್ಧಿವೇಳೆಂದು । ನುಡಿದ ಮಂತ್ರೀಶ್ವರನಂದು ॥ ೧೦೫ ॥

ಈ ಕಾರ್ಯವನಿರದಱುಪಿಯೇಕಾಂತದೊ । ಳಾ ಕುಮಾರಕನ ಮನಸಿನ ॥
ವ್ಯಾಕುಲವನು ಬಿಡಿಸುವ ಶಕ್ತಿಯುಳ್ಳವಿ । ವೇಕಿಗಳಿಲ್ಲೆನುತಿರಲು ॥ ೧೦೬ ॥

ಗುಪ್ತದಿಂದವಳಿರ್ದೆಡೆಯನಱಿದು ಬ । ಪ್ಪಾಪ್ತರಿಲ್ಲೆಂದು ಮನದೊಳು ॥
ಸಪ್ತೋಪಾಯದಿಂದಱಿವೆನೆನುತ ನಿ । ಕ್ಷಿಪ್ತದಿಂದೆಣಿಸಿದನವನು ॥ ೧೦೭ ॥

ನಾ ಪೋಗಬೇಕದ ಪೇಳ್ವೊಡಲ್ಲದೆ ಮತ್ತೆ । ನೀ ಪೋಗಬೇಕಲ್ಲದೆಮಗೆ ॥
ಆಪತ್ತಿಗರಿಲ್ಲ ನೀ ಪೋಗೆಂದಾ । ಭೂಪತಿ ನುಡಿಯಲಾ ಮಂತ್ರಿ ॥ ೧೦೮ ॥

ನುಡಿಯುದ ಮುನ್ನ ಕರವ ಮುಗಿದವ ತನ್ನ । ಪಡೆವಾಳನ[1] ಕೂಡಿಕೊಂಡು ॥
ನಡೆದನಯೋಧ್ಯೆಯಿಂ ವಾರಣಾಸಿಗೆಯಾ । ಪೊಡವಿಪತಿಯ ನೇಮದಲಿ[2] ॥ ೧೦೯ ॥

ಆಳೆವಾಳರ ಕೂಡಿಕೊಂಡು ಮನದೊಳವ । ನಾಕುಪಾಯವ ಚಿಂತಿಸುತ ॥
ಆ ಕುಮಾರನ[3] ಕಾಣ್ಬೆನೆನುತ ತೆರಳಿದನ । ನೇಕ ಬಲವ ಕೂಡಿಕೊಂಡು ॥ ೧೧೦ ॥

ಪಗಲಿರುಳೆನ್ನದೆ[4] ಸಚಿವೋತ್ತಮ ತನ್ನ । ನಗರದಿಂ ಪೊಱಮಟ್ಟು ಬೇಗ ॥
ಅಗಣಿತ ಬಲಗೂಡಿ ಬಂದು ಪೊಕ್ಕನು ಸಿಸು । ಮಿಗಗಣ್ಣಳೆ ವಾರಾಣಸಿಯ ॥ ೧೧೧ ॥

---

ಉಂಟಾಯಿತು. ಇದರಿಂದ ಅವನು ದುಃಖವೆಂಬ ಸಮುದ್ರದಲ್ಲಿ ಮುಳುಗಿದ ಆಶ್ಚರ್ಯವನ್ನು ಏನು ಹೇಳಲಿ! ॥ ೧೦೩ ॥ ಅದನ್ನು ಕಂಡು ಮಂತ್ರೀಶನು ಹೀಗೆಂದನು – 'ಎಲೈ ರಾಜನೇ ನೀನು ಧೈರ್ಯ ಕೆಡಬೇಡ, ಚಿಂತಿಸಬೇಡ. ಆ ರಾವಣನ ಗರ್ವವನ್ನು ಭಂಗಿಸಿ, ಅವನ ಲಂಕಾಪುರದಿಂದ ಸೀತೆಯನ್ನು ತರುವ ವಿಚಾರವನ್ನು ಹೇಳು ॥ ೧೦೪ ॥ ರಾಜನೇ ಅತಿಶಯವಾದ ವ್ಯಸನವನ್ನು ಬಿಡು, ಚಿಂತೆ ಮಾಡದಿರು. ಮಾಡಬೇಕಾದ ಕಾರ್ಯಕ್ರಮವನ್ನು ಬಿಡದೆ, ಸೀತೆಯನ್ನು ತರುವ ವಿಚಾರವನ್ನೇ ತಿಳಿಸು – ಎಂದು ಮಂತ್ರೀಶನು ಹೇಳಿದನು ॥ ೧೦೫ ॥ ಆಗ ದಶರಥನು 'ಮಾಡಬೇಕಾಗಿರುವ ಈ ಕಾರ್ಯವನ್ನು ರಾಮನಿಗೆ ತಿಳಿಸಿ, ಅವನ ಮನೋವ್ಯಥೆಯನ್ನು ಪರಿಹಾರ ಮಾಡುವ ಸಾಮರ್ಥ್ಯವುಳ್ಳ ಬುದ್ಧಿವಂತರು ಇಲ್ಲಿ ಯಾರೂ ಇಲ್ಲವಲ್ಲ" – ಎಂದನು ॥ ೧೦೬ ॥ ಗುಪ್ತವಾಗಿ ತೆರಳಿ, ಸೀತೆಯು ಇರುವ ಸ್ಥಳವನ್ನು ತಿಳಿದು ಬರುವ ಆಪ್ತರು ಇಲ್ಲ. ಇದನ್ನು ಮಂತ್ರ, ಔಷಧಿ, ಇಂದ್ರಜಾಲ, ಸಾಮ, ದಾನ, ಭೇದ, ದಂಡ – ಎಂಬ ಏಳು ಉಪಾಯಗಳಿಂದ ತಿಳಿಯಬೇಕೆಂದು ನಿರ್ಧಾರವಾಗಿ ಭಾವಿಸಿಕೊಂಡನು ॥ ೧೦೭ ॥ ಎಲೈ ಮಂತ್ರಿಯೇ, ಈ ಕಾರ್ಯಕ್ಕಾಗಿ ನಾನೇ ಹೋಗಬೇಕು. ಅದಲ್ಲವಾದರೆ ನೀನೇ ಹೋಗಬೇಕು. ಈ ಕಷ್ಟಕ್ಕೆ ಒದಗತಕ್ಕವರು ಬೇರೆ ಯಾರೂ ಇಲ್ಲ. ಆದುದರಿಂದ ನೀನು ಹೋಗು – ಎಂದು ದಶರಥನು ಹೇಳಿದನು ॥ ೧೦೮ ॥ ದಶರಥನು ಈ ಮಾತನ್ನು ಹೇಳುವುದರೊಳಗಾಗಿ ಮಂತ್ರೀಶನು ಕೈಮುಗಿದು, ತನ್ನ ಸೇನಾಪತಿಯನ್ನು ಕೂಡಿಕೊಂಡು, ರಾಜಾಜ್ಞೆಯಂತೆ ಅಯೋಧ್ಯೆಯಿಂದ ವಾರಣಾಸಿಗೆ ತೆರಳಿದನು ॥ ೧೦೯ ॥ ಮಂತ್ರಿಯು ಪಟುಭಟರನ್ನು ಕೂಡಿಕೊಂಡು, ಮನಸ್ಸಿನಲ್ಲಿ ಸಾಮ, ದಾನ, ಭೇದ ದಂಡಗಳೆಂಬ ನಾಲ್ಕು ಉಪಾಯಗಳನ್ನು ಯೋಚಿಸುತ್ತ, ಅನೇಕ ಸೈನ್ಯವನ್ನೂ ಕೂಡಿಕೊಂಡು, ರಾಮನನ್ನು ಕಾಣಬೇಕೆಂದು ತೆರಳಿದನು ॥ ೧೧೦ ॥ ಎಲೈ

---

[1] ಪಡೆವಳ್ಳನ (ಗ ಚ) [2] ನೇಮದೊಳು (ಗ ಚ). [3] ಕುವರನ (ಚ) [4] ಪಗಲಿರುಳೆನ್ನದಾ (ಚ)

ತಂದೆಯ ಬಳಿಯಿಂದ ಬಂದ ಮಂತ್ರೀಶನ । ನಿಂದು ಕಾಣಿಸಿಕೊಂಡು ಬಳಿಕ ॥
ಅಂದಿರದರ್ಧಾಸನಗೊಟ್ಟು ನೀ ಕುಳ್ಳಿ । ರೆಂದು ಕುಳ್ಳಿರಿಸಿಯಂದವನು[1] ॥ ೧೧೨ ॥

ಬಂದಿರೆ[2] ಪರಿಣಾಮವೆ ಕ್ಷೇಮವೆ ನಮ್ಮ । ತಂದೆಗೆ ತಾಯ್ಗೆ[3] ಸಂತಸವೆ ॥
ಎಂದು ನುಡಿದ ಕುವರಗೆ ಮಂತ್ರೀಶನಿಂ । ತೆಂದು ನುಡಿದ ವಿನಯದಲಿ[4] ॥ ೧೧೩ ॥

ದಶರಥನೊರೆದ ಕಜ್ಜವ ತಾಯ ಮಾತಿನೊಂ । ದೆಸಕವನಾ ಶಕುನಜ್ಞ ॥
ಉಸುರಿದ ವಚನವ[5]ನೊಂದುಳಿಯದೆ ರಸ । ಮೊಸರುವಂತವನಾಡಿದನು ॥ ೧೧೪ ॥

ನಿಷ್ಕಪಟವಿದೆಂದು ನಂಬು ಸೀತಾದೇವಿ । ನಿಷ್ಕಂಟಕದೊಳು ಬಂದಪಳು ॥
ದುಃಖವ ಬಿಡುನೀನೆಂದನವನಿಗವ । ಪುಷ್ಕರದಳನಿಭನೇತ್ರೆ ॥ ೧೧೫ ॥

ಆ ಮಂತ್ರಿಯ ಮಾತನೆ ಸಿದ್ಧಾಂತವೆಂ । ದಾ ಮಹೀಪತಿ ನಂಬಿದನು ॥
ಕಾಮಿನಿ ಲಾಲಿಸು ಸಚಿವರ ಮೀಱದಿ । ರ್ಪಾ ಮಹೀಪತಿಗೆ ಕೇಡುಂಟೆ ॥ ೧೧೬ ॥

ಸಿರಿ ನಿಲುವುದು ಸಂಪದ ಬಲಿವುದು ಪ್ರಜೆ । ಪರಿವಾರ ಹಿತವ ಚಿಂತಿಪುದು ॥
ಎರವಾದಳು[6] ಜಯವೆಣ್ಣು ಸನ್ಮಂತ್ರೀ । ಶ್ವರನ ನುಡಿಯ ಕೇಳ್ದ ನೃಪಗೆ ॥ ೧೧೭ ॥

ಅಳಿಜಸಬಾರದನ್ವಯ ಕೆಡದಾ ಪುಣ್ಯ । ಬೆಳೆವುದು ಪಗೆರಾಯರಿವಗೆ[7] ॥
ಒಳಗಪ್ಪರಾಪ್ತಮಂತ್ರೀಶನ ನುಡಿಗಳಿ । ಗೊಳಗಾಗಿ ನಡೆದ[8] ನೃಪತಿಗೆ ॥ ೧೧೮ ॥

---

ಚೇಳಿನಿಯೇ, ಆ ಮಂತ್ರಿಶ್ರೇಷ್ಠನು ಅಯೋಧ್ಯಾ ನಗರದಿಂದ ಹೊರಟು, ಹಗಲು ಇರುಳು ಎನ್ನದೆ ನಡೆದು, ಸೈನ್ಯಸಮೇತನಾಗಿ ಬಂದು, ವಾರಣಾಸಿಯನ್ನು ಪ್ರವೇಶಿಸಿದನು. ॥ ೧೧೧ ॥ ತಂದೆಯಾದ ದಶರಥನ ಬಳಿಯಿಂದ ಬಂದ ಮಂತ್ರಿವರನನ್ನು ಶ್ರೀರಾಮನು ಕಂಡು, ಅರ್ಧಾಸನದಲ್ಲಿ ಕುಳ್ಳಿರಿಸಿ ಹೀಗೆ ಕೇಳಿದನು. ॥ ೧೧೨ ॥ ಬಂದಿರೆ! ಪರಿಣಾಮವೆ? ನಮ್ಮ ತಂದೆ ತಾಯಿಗಳಿಗೆ ಕ್ಷೇಮವೆ? ಅವರು ಸಂತೋಷದಿಂದ ಇರುವರೆ? ಎಂದು ರಾಮನು ಕೇಳಿದನು. ಆಗ ಮಂತ್ರಿಯು ವಿನಯದಿಂದ ಹೀಗೆ ಹೇಳಿದನು ॥ ೧೧೩ ॥ ದಶರಥನು ಹೇಳಿದ ಕಾರ್ಯವನ್ನೂ ಸುಬಲಾದೇವಿಯ ಮಾತಿನ ವಿಷಯವನ್ನೂ, ಶಕುನಜ್ಞನು ತಿಳಿಸಿದ ಮಾತುಗಳನ್ನೂ ಒಂದೂ ಉಳಿಯದಂತೆ ಆ ಮಂತ್ರಿಯು ರಸಗರ್ಭಿತವಾದ ಮಾತುಗಳಿಂದ ಹೇಳಿದನು. ॥ ೧೧೪ ॥ ಎಲೈ ಚೇಳಿನಿಯೇ, ಆ ಮಂತ್ರಿಯು–"ಎಲೈ ರಾಮನೇ ನಾನೆನ್ನುವುದು ಕಪಟದ ಮಾತಲ್ಲವೆಂದು ನಂಬು. ಸೀತಾದೇವಿಯು ಏನೂ ಕಂಟಕವಿಲ್ಲದೆ ಬರುವಳು. ನೀನು ಶೋಕವನ್ನು ಬಿಡು" ಎಂದನು ॥ ೧೧೫ ॥ ಶ್ರೀರಾಮನು ಆ ಮಂತ್ರಿಯ ಮಾತನ್ನು ನಿರ್ಧಾರ ವಾಕ್ಯವೆಂದು ನಂಬಿದನು. ಎಲೈ ಚೇಳಿನಿಯೇ ಮಂತ್ರಿಗಳ ಮಾತನ್ನು ಮೀರದೆ ವರ್ತಿಸುವ ರಾಜನಿಗೆ ಕೇಡು ಉಂಟಾಗದು. ॥ ೧೧೬ ॥ ಒಳ್ಳೆಯ ಶ್ರೇಷ್ಠಮಂತ್ರಿಯ ಮಾತನ್ನು ಕೇಳಿದ ರಾಜನಲ್ಲಿ ಲಕ್ಷ್ಮಿ ನೆಲಸುವಳು, ಸಂಪತ್ತು ಹೆಚ್ಚುವುದು, ಪ್ರಜೆಗಳೂ ಪರಿವಾರದವರೂ ಹಿತವನ್ನೇ ಬಯಸುವರು. ವಿಜಯವೆಂಬ ಸ್ತ್ರೀಯು ವಶಳಾಗುವಳು. ॥ ೧೧೭ ॥ ಆಪ್ತ ಮಂತ್ರಿಯ ಮಾತುಗಳನ್ನು ಅನುಸರಿಸುವ ರಾಜನಿಗೆ ಅಪಕೀರ್ತಿ ಬಾರದು; ವಂಶವು ಕೆಟ್ಟುಹೋಗದು, ಪುಣ್ಯವು ವೃದ್ಧಿಯಾಗುವುದು. ವೈರಿ ರಾಜರು ಅಧೀನರಾಗುವರು. ॥ ೧೧೮ ॥

---

[1] ಯಂದವನ (ಗ.ಚ) [2] ಬಂದೆಯ (ಗ ಚ) [3] ತಂದೆ ತಾಯೆಗೆ (ಚ). [4] ವಿನಯದೊಳು (ಗ ಚ). [5] ಚರನವ (ಗ). [6] ಎರವಾಗಳು (ಗ). [7] ರಾಯರವಗೆ (ಗ). [8] ನಡೆವ (ಚ).

ಮಾನ ಕೆಡದು ಸಂಪದವಳಿಯದು ಧನ । ಹಾನಿಯಾಗದು ಕೇಳವನ ॥
ಸೇನೆ ನಲಗದು ಮಂತ್ರಿಯ ಮಾತ ಕೇಳುತಿ । ರ್ಪಾ ನರನಾಥಗಬ್ಜಾಕ್ಷಿ ॥ ೧೧೯ ॥

ಕೊಂಡಾಡುವರು ಕೋವಿದರು ವೈರಿಭೂಭುಜ । ರಂಡಿಸುವರು ಮಿಕ್ಕವರು ॥
ಚಂಡಿಯ ಬಿಡುವರು ಮಂತ್ರಿಯ ಮಾತನು । ದ್ದಂಡಿಸಲಱಿಯದ ನೃಪಗೆ[1] ॥ ೧೨೦ ॥

ದಿನದಿನಕ್ಕೈಸಿರಿ ಘನವಪ್ಪುದು ತನ್ನ । ಜನಪದ ಪದವ ಪಡೆವುದು[2] ॥
ಮನುವಿವನೆಂಬರು ಮಂತ್ರಿಯ ಮಾತಿನ । ನೆನಹಿಲಿ ನಡೆದ ನೃಪತಿಗೆ[3] ॥ ೧೨೧ ॥

ತರುಣಿ ಕೇಳಾ ಮಂತ್ರಿಯೊಡನೆ ರಾಘವನಂ । ದಿರದೆ ಪೇಳಿದನಿಂತೆಂದು ॥
ಪರಿವಾರಕಿಕ್ಕು ಸಂಬಳ ದಂಡಿಗೆ ಸಂ । ವರಿಸು[4] ನೀನೆಂದು ಪೇಳುತವೆ ॥ ೧೨೨ ॥

ಕೊಡು ಜೀವಿತವ ಬಂಟರಿಗೆ ಭಂಗಾರವ । ಕೊಡು ಝುಲ್ಲಿ ದಟ್ಟಿ ದಾಬುಗಳ[5] ॥
ಕೊಡು ಮನದಣಿವಂತೆನ್ನ ಕೇಳದೆ ನೀ । ಕೊಡು ಬಿಟ್ಟು ಮನದ ಸಂದೆಗವ[6] ॥ ೧೨೩ ॥

ಕುಱುಹಿನ ನಂಟಬಂಟರಿಗಿಲ್ಲವೆನ್ನದೆ । ಹೊಱಗೆಯ ಬಲುಭಟರಱಿದು[7] ॥
ಕುಱುಹಿನ ಬಲು ಬಂಗಾರವೆಚ್ಚವ[8] ಕೊಡು । ಮಱೆಯದೆ ಮಂತ್ರಿಗಳರಸ ॥ ೧೨೪ ॥

ಎಂದಿವು ಮೊದಲಾದುಚಿತ[9] ವಚನಗಳ । ಮಂದರ ಧೈರ್ಯ ನುಡಿಯಲು ॥
ಅಂದಾ ಮಂತ್ರೀಶ ಸರ್ವಸಂವರಣೆಯೊ । ಳೊಂದುಳಿಯದೆ ಸಂವರಿಸಿದ ॥ ೧೨೫ ॥

---

ಮಂತ್ರಿಯ ಮಾತನ್ನು ಕೇಳುತ್ತಿರುವ ರಾಜನಿಗೆ ಮಾನವು ಕೆಟ್ಟು ಹೋಗದು, ಸಂಪತ್ತು ನಶಿಸದು; ಐಶ್ವರ್ಯಕ್ಕೆ ಹಾನಿಯೊದಗದು; ಸೈನ್ಯವು ಸೋಲದು ॥ ೧೧೯ ॥ ಮಂತ್ರಿಯ ಮಾತನ್ನು ಮೀರದಿರುವ ರಾಜನನ್ನು ವಿದ್ವಾಂಸರು ಹೊಗಳುವರು, ವೈರಿರಾಜರು ಸಂಕೋಚ ಪಡುವರು, ಇತರರು ತಮ್ಮ ಹಟವನ್ನು ಬಿಡುವರು. ॥ ೧೨೦ ॥ ಮಂತ್ರಿಯ ಮಾತನ್ನು ನೆನಪಿಟ್ಟು ವರ್ತಿಸುವ ರಾಜನಿಗೆ ದಿನದಿಂದ ದಿನಕ್ಕೆ ಐಶ್ವರ್ಯವು ಹೆಚ್ಚಾಗುವುದು ತನ್ನ ಜನತೆಯ ಸಮೂಹವು ಮೇಲ್ಮೆಯನ್ನು ಪಡೆಯುವುದು. ಜನರು ಈತನನ್ನು 'ಮನು'ವೆಂದು ಕೊಂಡಾಡುವರು. ॥ ೧೨೧ ॥ ಚೇಳಿನಿಯೇ ಕೇಳು, ರಾಮನು ಆ ಮಂತ್ರಿಯೊಡನೆ ಹೀಗೆ ಹೇಳಿದನು – ಪರಿವಾರದವರಿಗೆ ವೇತನವನ್ನು ಕೊಡು. ಪಲ್ಲಕಿಯನ್ನು ಸರಿಗೊಳಿಸು. ॥ ೧೨೨ ॥ ಎಲೈ ಮಂತ್ರಿಯೇ, ಸೇವಕರಿಗೆ ಜೀವನಾಂಶವನ್ನು ಕೊಡು. ಚಿನ್ನದ ಆಭರಣ, ಝುಲ್ಲಿ, ದಟ್ಟಿ, ಡಾಬು – ಮುಂತಾದುವನ್ನು ಅವರ ಮನಸ್ಸಿಗೆ ತೃಪ್ತಿಯಾಗುವಂತೆ ಕೊಡು. ಇದಕ್ಕಾಗಿ ನನ್ನಲ್ಲಿ ಕೇಳುವ ಆವಶ್ಯಕತೆಯಿಲ್ಲ ॥ ೧೨೩ ॥ ಎಲೈ ಮುಖ್ಯ ಮಂತ್ರಿಯೇ, ವಿಶೇಷ ಗುರುತುಗಳನ್ನುಳ್ಳ ನಂಟರಿಗೂ ಸೇವಕರಿಗೂ ಇಲ್ಲವೆಂದು ಹೇಳದೆ, ಶೂರರಾದ ಬಲಿಷ್ಠರಾದ ಸೈನಿಕರಿಗೂ ತಾರತಮ್ಯವರಿತು, ಮುದ್ರೆಯುಳ್ಳ ಚಿನ್ನವನ್ನೂ ವೆಚ್ಚದ ಹಣವನ್ನೂ ಮರೆಯದೆ ಕೊಡು. ॥ ೧೨೪ ॥ ಮಂದರ ಪರ್ವತದಂತೆ ಧೀರನಾದ ರಾಮನು ಇವೇ ಮೊದಲಾದ ಉಚಿತ ವಚನಗಳನ್ನು ಆಡಲು, ಆ ಮಂತ್ರೀಶನು ಒಂದೂ ಉಳಿಯದಂತೆ ಎಲ್ಲಾ ರೀತಿಯ ವ್ಯವಸ್ಥೆಗಳನ್ನೂ ಮಾಡಿದನು. ॥ ೧೨೫ ॥ ಆ ಮೇಲೆ ಮಂತ್ರಿಯು ರಾಜದೂತರನ್ನು ಕರೆಸಿ, ತಮ್ಮ ಪರಿವಾರಕ್ಕೂ ರಾಜಕುಮಾರರಿಗೂ ತಕ್ಕ ವಿಷಯಗಳನ್ನು ತಿಳಿಸಿ, ನೀವು ಹೋಗಿ ಎಂದು ಹೇಳಿ

---

[1] ಲಱಿಯದರಸಿಗೆ (ಗ ಚ). [2] ಪಡೆವರು (ಚ) [3] ನೃಪರಿಗೆ (ಗ) [4] ಪರಿವಾರಕಿಕ್ಕಿದ ಸಂಬಳ್ವ ದಂಡಿಗೆ । ಸ್ವರಿಸು (ಗ) ಪರಿವಾರಕಿಕ್ಕಿ ಸಂದಿಳವ ದಂಡಿಗೆ ಸ । ವ್ವರಿಸು (ಚ) [5] ದಾರಗಳ (ಚ). [6] ಮನದಣಿವಂತೆ (ಗ ಚ) [7] ಹೆಱಗೆಯ ಬಲು ಭಂಟರಱಿದು (ಗ) ಪೊಱಗೆಯ ಬಲು ಬಂಟರಱಿದು (ಚ) [8] ಬಂಡಾರವ ಕೊಡು (ಗ) ಬಂಗಾರವ ಕೊಡು (ಚ). [9] ಮೊದಲಾದುವುಚಿತ (ಕ).

ಕರಸಿ ರಾಯಸದರ ತಮ್ಮ ನೆರವಿಗು । ಭರಸು ಮಕ್ಕಳ ಬಳಿಗಿರದೆ ॥
ಚರರಿಗೆ ಬುದ್ಧಿಗಲಿಸಿ ನೀವು ಪೋಗೆಂದು[1] । ಬರಸಿದನೋಲೆಯನಿಂತು ॥ ೧೨೬ ॥

ಉಂಟು ಲಂಕಾಧಿಪತಿಯ ಮೇಲೆ ಕಾಳಗ । ವುಂಟು ಸಂದೆಗಬೇಡ ನಿಮಗೆ ॥
ಉಂಟಾದ ಬಲವನೆಲ್ಲವ ಕೂಡಿಕೊಂಡೇ । ಳೆಂಟು ದಿನಕೆ ಬಪ್ಪುದೆಂದು ॥ ೧೨೭ ॥

ಈಗಾಗಲೆಂದು ಜೋಲಿಯನಿಕ್ಕದೀ ವೇಳೆ । ಗಾಗಬೇಕೆಂಬುದನಱಿದು[2] ॥
ಸಾಗಿ ಬಪ್ಪುದು ಬಲದೊಡಗೂಡಿ ಪಗಲಿರು । ಳಾಗ[3]ಬೇಕಾದವರೆಮಗೆ ॥ ೧೨೮ ॥

ಎಂದು ಲೇಖನವ ಬರೆಸಿ[4]ದಿಕ್ಕುದಿಕ್ಕಿಗೆ । ಯಂದು[5] ಕಳುಪಿ ಚರರುಗಳ ॥
ಮಂದಿಯ ಸಂಬಳಕೆಂದು ಪೊಂಬಿಂದಿಗೆ । ಬಿಂದಿಗೆಗಳ ತರಿಸಿದನು ॥ ೧೨೯ ॥

ಮೀಸಲಳಿಯದ ಜಾಳಿಗೆಯ ತರಿಸಿ ಹೊನ್ನ । ರಾಸಿಯ ಮಾಡಿ ಜೀವಿತವ ॥
ಓಸರಿಸದೆ[6]ಕೊಟ್ಟು ರಾಣುವೆಗಂದವ । ಲೇಸಿನ ಮಾತನಾಡಿದನು ॥ ೧೩೦ ॥

ತೇಜಿಷ್ಠ ದೊರೆಗಳನಱಿದವರಿಗೆ ಬಲು । ವಾಜಿ ವಾರಣ ವಸ್ತುಗಳ[7] ॥
ಆ ಜನಪತಿಯ ನೇಮದೊಳಿತ್ತನಾ ಮಂತ್ರಿ । ಸೋಜಿಗವಲ್ಲ ಮೃಗಾಕ್ಷಿ ॥ ೧೩೧ ॥

ಗಿಂಡಿ ಕರಗ ಕಾಳಾಂಜಿಯ ಕನಕದ । ದಂಡಿಗೆ ಪಲ್ಲಕ್ಕಿಗಳ ॥
ಮಂಡಲಾಧಿಪರಿಗೆ ಕೊಟ್ಟು ನುಡಿದ ನೀವು[8] । ದಂಡಿಗೆ ತೆರಳಿ ಬೇಗದಲಿ[9] ॥ ೧೩೨ ॥

ಹಾರ ಪದಕ ಹತ್ತೆಗಟ್ಟು[10] ಕಡಗಗಳ । ತೋರ ಮುತ್ತಿನ ಕಡಕುಗಳ[11] ॥
ಆ ರಾಯನ ಮುಂದೆ ದೊರೆಗಳಿಗಿತ್ತನ । ದಾರು ಬಣ್ಣಿಪರು ಮೃಗಾಕ್ಷಿ ॥ ೧೩೩ ॥

---

ಹೀಗೆ ಪತ್ರ ಬರೆಸಿದನು – ॥ ೧೨೬ ॥ 'ಲಂಕೆಗೆ ಒಡೆಯನಾದ ರಾವಣನೊಡನೆ ಯುದ್ಧ ಮಾಡಲಿಕ್ಕಿದೆ; ಇದರಲ್ಲಿ ಸಂಶಯವಿಲ್ಲ. ಆದುದರಿಂದ ಇರುವ ಸೇನೆಯನ್ನೆಲ್ಲ ಕೂಡಿಕೊಂಡು ಏಳೆಂಟು ದಿವಸಗಳಲ್ಲಿ ಬರಬೇಕು" ॥ ೧೨೭ ॥ ಈಗ ಬರುತ್ತೇವೆ ಎಂದು, 'ಆಗಲಿ' ಎಂದು ಹೇಳುತ್ತ ತಡಮಾಡದೆ, ಸಕಾಲದಲ್ಲಿ ಬಂದು ಒದಗಬೇಕೆಂಬುದನ್ನು ತಿಳಿದು, ನಮಗೆ ಬೇಕಾದವರು ಸೈನ್ಯದೊಡನೆ ಹಗಲಿರುಳು ನಡೆದು ಬರಬೇಕು'. ॥ ೧೨೮ ॥ ಮಂತ್ರಿಯು ಹೀಗೆ ಪತ್ರಗಳನ್ನು ಬರೆದು ದಿಕ್ಕು ದಿಕ್ಕುಗಳಿಗೆ ಕಳುಹಿದನು. ಈ ದೂತರ ಸಂಬಳಕ್ಕಾಗಿ ಚಿನ್ನದ ತಂಬಿಗೆಗಳನ್ನು ತರಿಸಿದನು. ॥ ೧೨೯ ॥ ಮೀಸಲು ಅಳಿಯದಿರುವ (ಉದ್ದೇಶ ಭಂಗವಾಗದ) ಹೊನ್ನಿನ ಚೀಲಗಳನ್ನು ತರಿಸಿ, ಕೆಳಗೆ ಸುರಿದು ರಾಶಿ ಮಾಡಿ, ಸ್ವಲ್ಪವೂ ಹೆಚ್ಚು ಕಡಮೆಯಾಗದಂತೆ ಜೀವಿತವನ್ನು ಕೊಟ್ಟು, ಆ ಮೇಲೆ ಸೈನ್ಯದವರೊಡನೆ ಒಳ್ಳೆಯ ಮಾತುಗಳನ್ನಾಡಿದನು. ॥ ೧೩೦ ॥ ಎಲೈ ಚೆಳಿನಿಯೇ, ಆ ಮಂತ್ರಿಯು ಶ್ರೀರಾಮನ ಅನುಮತಿಯಂತೆ ತೇಜೋವಂತರಾದ ರಾಜರನ್ನು ತಿಳಿದು, ಅವರಿಗೆ ಆನೆ, ಕುದುರೆ, ಒಡವೆಗಳನ್ನು ಕೊಟ್ಟನು. ಇದೇನೂ ಆಶ್ಚರ್ಯವಲ್ಲ. ॥ ೧೩೧ ॥ ಆಶ್ರಿತ ರಾಜರಿಗೆಲ್ಲ ಗಿಂಡಿ, ಮಡಕೆ, ಪನ್ನೀರುಬುಡ್ಡಿ, ಚಿನ್ನದ ಅಂದಣ – ಮುಂತಾದವನ್ನೆಲ್ಲ ಕೊಟ್ಟು ನೀವು ಬೇಗನೇ ಸೈನ್ಯಕ್ಕೆ ಹೋಗಿ – ಎಂದನು. ॥ ೧೩೨ ॥ ಎಲೈ ಮೃಗನೇತ್ರೆಯಾದ ಚೆಳಿನಿಯೇ, ಆ ಮಂತ್ರಿಯು ಹಾರ ಪದಕ, ಹತ್ತೆಗಟ್ಟು, ಕಡಗ, ದೊಡ್ಡ ಮುತ್ತಿನ

---

[1] ಪೋಗಿ ನೀವೆಂದು (ಗ ಚ.). [2] ನೆನೆದು (ಚ). [3] ಪಗಲಿರುಳಾಗಿ (ಗ ಚ ) [4] ಬರೆದು (ಚ). [5] ಯೆಂದು (ಕ.ಗ.).
[6] ಓಸರಿಯದೆ (ಗ) [7] ವಸನಗಳ (ಗ). [8] ಬೇಗ (ಗ ಚ.). [9] ನೀವೆಂದು (ಗ ಚ.). [10] ಹತ್ತಕಟ್ಟು (ಗ.ಚ ). [11] ಕಡುಕುಗಳ (ಗ.ಚ).

ಕೊಟ್ಟನು ಲುಳಿಸರಗಳ ಕಂಠಮಾಲೆಯ । ಕೊಟ್ಟನು ಬಲು[1]ಬಂಗಾರಗಳ ॥
ಕೊಟ್ಟನು ದೊರೆದೊರೆಗಳಿಗಿಲ್ಲವೆನ್ನದೆ । ಕೊಟ್ಟು ಪಯಣವ[2]ಮಾಡಿದನು ॥ ೧೩೪ ॥

ಪಟ್ಟೆಯ ಹಚ್ಚಡ ಮೇಲುಗುಲಾವಿಯ[3] । ಕಟ್ಟುಗುಪ್ಪಸ ಪೈರಣೆಯ[4] ॥
ಕೊಟ್ಟನು ದೊರೆದೊರೆಗಳಿಗಿಲ್ಲವೆನ್ನದೆ । ಕೊಟ್ಟು ಪಯಣವ ಮಾಡಿದನು[5] ॥ ೧೩೫ ॥

ಇಲ್ಲವೆನ್ನದೆ ಕಾಲಾಳು ಮೇಲಾಳಿಗೆ[6] । ಯಿಲ್ಲವೆನ್ನದೆ ದೊರೆಗಳಿಗೆ ॥
ಇಲ್ಲವೆನ್ನದೆ ನಾಯಕಮಕ್ಕಳಿಗೆ ಕೊಟ್ಟ । ನಿಲ್ಲವೆನ್ನದೆ ತೊಡವುಗಳ ॥ ೧೩೬ ॥

ಚಿನ್ನ ಬೆಳ್ಳಿಯ ಕಾಸೆಯ ಬಿರುದಿನ ನವ[7] । ರನ್ನದಿಂ ಸಮೆದ ಹರಿಗೆಯ ॥
ತನ್ನ ಮೈಗಾವಲವರಿಗಿತ್ತನವನಂದು । ಮನ್ನಣೆಯಿಂ ಮನಮುಟ್ಟಿ ॥ ೧೩೭ ॥

ಕೊಟ್ಟನು ಝಲ್ಲಿಯ ಕೊಟ್ಟನು ಚಮರವ । ಕೊಟ್ಟ ನಾಣೆಯುದ ದಟ್ಟಿಗಳ ॥
ಕೊಟ್ಟ ಕಾಲವರಿಗೆ[8] ತಕ್ಕ ಬಂಗಾರವ । ಕೊಟ್ಟನವನು ಕೋಮಲಾಂಗಿ ॥ ೧೩೮ ॥

ಈ ಪರಿಯಲಿ[9] ಬಂಗಾರ ವಸ್ತ್ರಗಳ ನಾ । ನಾ ಪಟುಭಟರಿಗಂದಿತ್ತು[10] ॥
ಏ ಪೊಗಳುವೆ ಶುಭಲಗ್ನದಿಂ ತೆರಳ್ದನಾ[11] । ಭೂಪ ಲಕ್ಷ್ಮೀಧರವೆರಸು ॥ ೧೩೯ ॥

ಕಲೆ ಕಂದಾಚಾರ ಸಮಗ್ರ ರಾಯಸದರ । ಸಲೆ ಪಾಡುಮುಖಿ[12] ಜೋಯಿಸರ ॥
ಬಲು ರಾಯಭಾರಿಗಳ್ ಬಿಡು ಮಣಿಹದರಂದು । ಬಲದೊಡಗೂಡಿ ತೆರಳಿತು ॥ ೧೪೦ ॥

---

ಕಡಕಂ – ಮುಂತಾದುವನ್ನು ಶ್ರೀರಾಮನ ಎದುರಿನಲ್ಲಿ ರಾಜರುಗಳಿಗೆ ಕೊಟ್ಟನಂ. ಅದನ್ನು ಯಾರಿಗೂ ವರ್ಣಿಸಲು ಸಾಧ್ಯವಾಗದು ॥ ೧೩೩ ॥ ಮಂತ್ರಿಯು ಎಲ್ಲಾ ದೊರೆಗಳಿಗೂ ಲುಳಿಸರಗಳನ್ನೂ, ಕೊರಳ ಸರಗಳನ್ನೂ, ಚಿನ್ನಾಭರಣಗಳನ್ನೂ, ಯಾರಿಗೂ ಇಲ್ಲವೆಂದು ಹೇಳದೆ ಕೊಟ್ಟನಂ. ಕೊಟ್ಟನಂತರ ಪ್ರಯಾಣ ಮಾಡಿದನು. ॥ ೧೩೪ ॥ ಪಟ್ಟೆಯ ಹಚ್ಚಡ, ಮೇಲುಕುಲಾವಿ, ಕಟ್ಟು ಕುಪ್ಪಸ, ಕಾಲಿನ ಆಭರಣ – ಮುಂತಾದುವನ್ನು ದೊರೆದೊರೆಗಳಿಗೆಲ್ಲ ಕೊಟ್ಟು ಪ್ರಯಾಣ ಮಾಡಿದನಂ ॥ ೧೩೫ ॥ ಯಾರೊಬ್ಬರಿಗೂ ಇಲ್ಲವೆಂದು ಹೇಳದೆ ಕಾಲಾಳು ಮೇಲಾಳುಗಳಿಗೂ, ರಾಜರುಗಳಿಗೂ, ನಾಯಕರ ಮಕ್ಕಳಿಗೂ ಆಭರಣಗಳನ್ನು ಕೊಟ್ಟನು. ॥ ೧೩೬ ॥ ಚಿನ್ನಬೆಳ್ಳಿಗಳನ್ನೂ, ಸೊಂಟದ ವಸ್ತ್ರವನ್ನೂ, ಬಿರುದಿನಿಂದ ಕೂಡಿದ ಹೊಸ ಚಿನ್ನದ ಗುರಾಣಿಯನ್ನೂ ಮರ್ಯಾದೆಯಿಂದ ತನ್ನ ಅಂಗರಕ್ಷಕರಿಗೆ ಕೊಟ್ಟನು. ॥ ೧೩೭ ॥ ಆ ಮಂತ್ರಿಯು ಮುತ್ತಿನ ಗೊಂಚಲನ್ನೂ. ಚಾಮರವನ್ನೂ, ನಾಣ್ಯದ ದಟ್ಟಿಗಳನ್ನೂ, ಕಾಲ ಗುರಾಣಿಗಳನ್ನೂ, ತಕ್ಕ ಚಿನ್ನದ ಆಭರಣಗಳನ್ನೂ ಕೊಟ್ಟನಂ. ॥ ೧೩೮ ॥ ಈ ರೀತಿಯಾಗಿ ಮಂತ್ರೀಶ್ವರನಂ ತನ್ನ ಹಲವಾರು ಪಟುಭಟರಿಗೆ ಬಂಗಾರ, ವಸ್ತ್ರಾದಿಗಳನ್ನು ಕೊಟ್ಟು, ರಾಮಂ ಲಕ್ಷ್ಮಣರೊಡನೆ ಮಂಗಲ ಮುಹೂರ್ತದಲ್ಲಿ ತೆರಳಿದನಂ. ಅದನ್ನು ಏನೆಂದು ವರ್ಣಿಸಲಿ! ॥ ೧೩೯ ॥ ಯುದ್ಧಕಲೆಯನ್ನು ತಿಳಿದ ಸೈನ್ಯ, ಪತ್ರವಾಹಕರು, ಸ್ತುತಿ ಪಾಠಕರು, ಜೋಯಿಸರು, ರಾಯಭಾರಿಗಳು – ಮುಂತಾದವರ ಸಮೂಹವು ಒಟ್ಟಾಗಿ ತೆರಳಿತಂ. ॥ ೧೪೦ ॥ ಆ ಸೈನ್ಯದೊಡನೆ ಕಣಜದ ಅಧಿಕಾರಿಗಳು, ಜಿನಾಲಯದವರು, ಲಾಯ

---

[1] ×× (ಗ) [2] × (ಗ ಚ). [3] ಕುಲಾವಿಯ (ಚ) [4] ಕಟ್ಟುಗುಬ್ಬಸ ಪೈರಣಿಯ (ಗ) ಕಟ್ಟುಕುಪ್ಪಸ ಪೈರಣಿಯ (ಚ). [5] ದೊರೆದೊರೆಗಳ ತೆಜಿನಟಿದವ । ಮುಟ್ಟಿದ ಮೋಹದಿಂದ ಬಲೆ (ಗ ಚ). [6] ಕಾಲವರು ಮೇಲವರಿಗೆ (ಗ.ಚ) [7] ಚಿನ್ನದ ಬೆಳ್ಳಿಯ ಕಾಸೆಯ ಹರಿಗೆಯ (ಕ) [8] ಕೊಟ್ಟನವರಿಗೆ (ಗ) [9] ಈ ಪರಿ ಪಯಣ (ಗ) ಈ ಪರಿ ಹಣ (ಚ). [10] ಭಟರಿಗಂದವನು (ಗ). [11] ತೆರಳಿದ (ಗ) [12] ಪಾಂಡುಮುಖಿ (ಕ)

ಕಣಜದ ಜಿನಶಾಲೆಯು ಲಾಯದ ಬಲು । ಮಣಿಹಮಂದಿರ ಬೊಕ್ಕಸದ[1] ॥
ಗಣಕರು ಮೊದಲಾದವರು ತೆರಳಿದರಾ[2] । ಗಣನೆಯಿಲ್ಲದೆ [3]ಪಾಳಯದೊಳು ॥ ೧೪೧ ॥

ಮಲಗುಗದ್ದುಗೆ ರತ್ನಗಂಬಳಿ[4] ಪಾಮಂಚ । ಬಲು ಪಾಸು ಮೊದಲಾದವನು ॥
ಲಲನೆ ಕೇಳಾ ಮಂತ್ರೀಶ ಕಳುಪಿದನು । ಬಲದೊಳಗತಿ ವೇಗದಲಿ[5] ॥ ೧೪೨ ॥

ಹಡಪ ಗಿಂಡಿಯು ಕರಗದ ಡವಕೆಯು ಕ । ನ್ನಡಿ ಕುಂಚ ಚವರ ಪಾವುಗೆಯು ॥
ಪಡಿಗ ಬಾಸಣಿಗೆ ಬೀಸಣಿಗೆಯವರನವ । ಪೊಡವಿಪನೆಡೆಗೆ ಕಳುಪಿದ ॥ ೧೪೩ ॥

ಸಕಲ ವಿನೋದದವರ ಕರೆಯಿಸಿ[6] ನೀವು । ಸಕಲಸನ್ನಹವಿಹುದೆಂದು[7] ॥
ಪ್ರಕಟಿಸಿ ಬುದ್ಧಿವೇಳುತ ಕಳುಪಿದನಾ । ಸಕಲ ಕಲಾಪ್ರೌಢ ಮಂತ್ರಿ ॥ ೧೪೪ ॥

ಶಟ್ಟಿಗಳನು[8] ಚಿನ್ನವರದರ ಪೊಂಬಡಿ । ಗೊಟ್ಟು ಜೀವಿಪರ ಪೊಂಗಳನು ॥
ಕಟ್ಟಿ ಬಳಸುವರ ನೋಟದವರ ನವ । ನೆಟ್ಟನೆ ಕಳುಪಿದನಾಗ ॥ ೧೪೫ ॥

ನಾಕನಾಯಕನ ನರ್ತನದ ಪೆಣ್ಗಳನು ನಿ । ರಾಕರಿಸುತ ರೂಪಿನಿಂದೆ ॥
ಆ ಕಂದರ್ಪನ ಪಡೆಯಂತೆ ತೆರಳಿತ । ನೇಕ ಸೂಳೆಯರದಱೊಳಗೆ ॥ ೧೪೬ ॥

ಒಱೆಗಾಱರ[9] ಚಿಪ್ಪಿಗರ ಚಿತ್ರಕರ ಕ । ಮ್ಮಱರ ಕಲ್ಕುಟಿಗರಸಗರ[10] ॥
ಉಱುವಂಗಡಿಕಾಱರಕ್ಕಸಾಲೆಗಳನು । ತಱಿಸಂದು ಕಳುಪಿದನವನು ॥ ೧೪೭ ॥

ನರವೈದ್ಯರನಶ್ವವೈದ್ಯರುಗಳನವ । ನಿರದೆ ಗೋವೈದ್ಯರುಗಳನು ॥
ಭರದಿಂದ ಗಜವೈದ್ಯರ ಕಳುಪಿದನವ[11] । ತರಳಾಯತಾಕ್ಷಿ[12] ನಿನ್ನಾಣೆ ॥ ೧೪೮ ॥

---

ದವರು, ಪ್ರಾರ್ಥನಾ ಗೃಹದವರು, ಕೋಶಾಧಿಕಾರಿಗಳು, ಗಣಿತಜ್ಞರು – ಮೊದಲಾದವರು ಅಸಂಖ್ಯಾತರಾಗಿ ತೆರಳಿದರು. ॥ ೧೪೧ ॥ ಮಂತ್ರಿಯು ಆ ಸೈನ್ಯದೊಡನೆ ಮಲಗುಗದ್ದುಗೆ, ರತ್ನಗಂಬಳಿ, ಮಂಚ, ಹಾಸಿಗೆ – ಮೊದಲಾದವನ್ನೂ ಕಳುಹಿಸಿದನು. ॥ ೧೪೨ ॥ ಶ್ರೀರಾಮನ ಜೊತೆಯಲ್ಲಿ ಮಂತ್ರಿಯು ವೀಳ್ಯದ ಸಂಚಿ, ಗಿಂಡಿ, ನೀರ ಗಡಿಗೆ, ಉಗುಳು ಬುಡ್ಡಿ, ಕನ್ನಡಿ, ಕುಂಚ, ಚಾಮರ, ಪಾದುಕೆ, ಪಡಿಗೆ, ಮುಚ್ಚುವ ವಸ್ತ್ರ, ಬೀಸಣಿಗೆ – ಮುಂತಾದವುಗಳನ್ನು ಹಿಡಿದಿರುವ ಸೇವಕರನ್ನು ಕಳುಹಿಸಿದನು. ॥ ೧೪೩ ॥ ಎಲ್ಲಾ ಕಲೆಗಳಲ್ಲಿಯೂ ಪಾಂಡಿತ್ಯವುಳ್ಳ ಆ ಮಂತ್ರಿಯು ಎಲ್ಲಾ ರೀತಿಯ ವಿನೋದಶೀಲರನ್ನೂ ಕರೆಯಿಸಿ, ನೀವೆಲ್ಲರೂ ಎಲ್ಲಾ ಸನ್ನಾಹದಿಂದ ಇರಬೇಕೆಂದು ಸೂಚನೆ ಕೊಟ್ಟು ಕಳುಹಿದನು. ॥ ೧೪೪ ॥ ವ್ಯಾಪಾರಿಗಳನ್ನೂ, ಚಿನ್ನದ ಹರದರನ್ನೂ, ಚಿನ್ನವನ್ನು ಬಡ್ಡಿಗೆ ಕೊಟ್ಟು ಜೀವಿಸುವವರನ್ನೂ, ಚಿನ್ನವನ್ನು ಕಟ್ಟಿಟ್ಟು ಉಪಯೋಗಿಸುವವರನ್ನೂ, ನೋಟಗಾರರನ್ನೂ ಕಳುಹಿಸಿದನು. ॥ ೧೪೫ ॥ ದೇವೇಂದ್ರನ ನಾಟ್ಯದ ಸ್ತ್ರೀಯರ ಸೌಂದರ್ಯವನ್ನು ತುಚ್ಛೀಕರಿಸುವ ಸೊಬಗಿನಿಂದ ಕೂಡಿ, ಮನ್ಮಥನ ಸೇನೆಯಂತೆ ತೋರುವ ಅನೇಕ ಸೂಳೆಯರೂ ಅದರೊಡನೆ ತೆರಳಿದರು. ॥ ೧೪೬ ॥ ಒರೆಗಾರರನ್ನೂ, ಬಟ್ಟೆ ಹೊಲಿವವರನ್ನೂ, ಚಿತ್ರಕಾರರನ್ನೂ, ಕಮ್ಮಾರರನ್ನೂ, ಕಲ್ಲುಕುಟಿಗರನ್ನೂ, ಅಗಸರನ್ನೂ, ಅಂಗಡಿಕಾರರನ್ನೂ, ಅಕ್ಕಸಾಲೆಯರನ್ನೂ ಅವರೊಡನೆ ಕಳುಹಿದನು. ॥ ೧೪೭ ॥ ಎಲೈ ಚೆಲುವೆಯೇ, ಆ

---

[1] ಮಣಿಹಗಾಱರು ಬೊಕ್ಕಸದ (ಚ)　ಬೊಕ್ಕಸದರ (ಗ). [2] ತೆರಳಿದರೆಂದು (ಗ.ಚ.). [3] ಗಣನೆಯಿಲ್ಲದ (ಕ). [4] ರತ್ನಕಂಬಲ (ಚ). [5] ವೇಗದೊಳು (ಗ.ಚ.). [6] ದವರನು ಕರಸಿ (ಚ). [7] ಸನ್ನಹ ಮೀವುದೆಂದು (ಗ). [8] ಸಟ್ಟಿಗಳನು (ಗ. ಚ.). [9] ಇಱಿಗಾಱರ (ಕ. ಚ). [10] ಕಲ್ಕುಟಿಗರಗಸರ (ಗ). [11] ಕಳುಹಿದನೆಂದು (ಚ). [12] ತರಳಾಕ್ಷಿ ಕೇಳು (ಗ).

ತೂಕದಳತೆ[1]ಯೆಣಿಕೆಯ ದ್ರವ್ಯವನಂ । ದಾ[2] ಕಣಜಗಳಿಂದ ತೆಗೆಸಿ ॥
ಬೇಕೆಂಬನಿತ ತುಂಬಿಸಿ ಕಳುಪಿದನವ । ನೇಕ ಕೊಟ್ಟಗೆಗಳ ಮೇಲೆ ॥ ೧೪೯ ॥

ಇಱಿದ ಭಟರಿಗೀಯಬೇಕು ನೃಪರಿಗುಡು । ಗೊಱೆಗಳ ಕೊಡಬೇಕೆಂದು ॥
ಕುಱುಹಿನ ವಸನಾಭರಣ ಝುಲ್ಲಿಯ[3] ಬಲು । ಹೊಱೆಗಳ ಕಳುಪಿದನವನು ॥ ೧೫೦ ॥

ಬಲ್ಲಿದನೊಳಗಣ[4] ಹೋರಾಟವೊಂದ[5] ಕೊಂ । ದಿಲ್ಲವೆನ್ನದೆ ಸಂವರಣೆಯ[6] ॥
ನಿಲ್ಲದೆ ಸಾಗಿಸಿ ಕಳುಪಿದನವ ಭೂ । ವಲ್ಲಭಗತಿರಾಗ ಪುಟ್ಟೆ[7] ॥ ೧೫೧ ॥

ಇಲ್ಲವೆಂಬುದು ಸ್ವರದೊಳು ಮಂತಸ್ತೆಯೊ । ಳಲ್ಲದೆ[8]ಯವನ ಪಾಳಯದಿ ॥
ಇಲ್ಲೆಂಬ ವಸ್ತುಗಳಿಲ್ಲದ ಕೇಳಿ ನಾ । ಬಲ್ಲೆ ಬಗಸೆಗಣ್ಣಬಲೆ ॥ ೧೫೨ ॥

ಭರತ ಶತ್ರುಘ್ನ ಜನಕನೃಪವರ ಬಲು । ದೊರೆಗಳು ದುರ್ಗಾಧಿಪರು ॥
ಭರದಿ ಬಂದುದು ಬಲು ಬಲಗೂಡಿ ರಾಮನ । ನೆರವಿಗೆ ನೆಲ ಹೊಱದಂತೆ ॥ ೧೫೩ ॥

ಆ ವನದಿಂದ ಮಂತ್ರೀಶವೆರಸಿಯಂ । ದಾ[9] ವಿಭು ಲಕ್ಷ್ಮಣವೆರಸು ॥
ತೀವಿದ ಬಲು ಬಲಗೂಡಿ ತೆರಳಿದನು । ತಾವರೆ ಮೊಗ್ಗೆನೊಲೆಯುಳೆ ॥ ೧೫೪ ॥

ಆನೆ ಕುದುರೆ ರಥ ಕಾಲಾಳ್ಗಳಿಂತತಿ[10] । ಸೇನೆ ಬಳಸಿ ಬರಲಂದು ॥
ಆನಂದನದಿಂ ಪೊಱಮಟ್ಟು ತೆರಳಿದ । ನಾ ನರನಾಥಚಂದ್ರಮನು ॥ ೧೫೫ ॥

---

ಮಂತ್ರಿಯು ಮನುಷ್ಯ ವೈದ್ಯರನ್ನೂ, ಅಶ್ವವೈದ್ಯ–ಗೋವೈದ್ಯ–ಗಜವೈದ್ಯರನ್ನೂ ಬೇಗನೆ ಕಳುಹಿಸಿದನು ॥ ೧೪೮ ॥ ಬೇರ ಬೇರೆ ಕಣಜಗಳಿಂದ ತೂಕದ ವಸ್ತುಗಳನ್ನೂ, ಅಳತೆಯ ವಸ್ತುಗಳನ್ನೂ, ಎಣಿಕೆಯ ವಸ್ತುಗಳನ್ನೂ ತೆಗೆಸಿ, ಬೇಕಾದಷ್ಟನ್ನು ಮೂಟೆಗಳಲ್ಲಿ ತುಂಬಿಸಿ ಕಳುಹಿಸಿದನು. ॥ ೧೪೯ ॥ ಯುದ್ಧದಲ್ಲಿ ವೈರಿಗಳಿಗೆ ತಿವಿದ ಸೈನಿಕರಿಗೂ, ರಾಜರಿಗೂ, ತಕ್ಕ ಉಡುಗೊರೆಗಳನ್ನು ಕೊಡಬೇಕೆಂದು, ಮಂತ್ರಿಯು ಮುದ್ರೆಗಳುಳ್ಳ ವಸ್ತ್ರ–ಆಭರಣ–ಝುಲ್ಲಿಗಳನ್ನು ಹೊರೆಯಾಗಿ ಕಳುಹಿಸಿ ಕೊಟ್ಟನು ॥ ೧೫೦ ॥ ಚೆನ್ನಾಗಿ ತಿಳಿದವನಾದ ಮಂತ್ರಿಯು ಹೋರಾಟದ ಒಳಗುಟ್ಟನ್ನು ಬಲ್ಲವನಾದುದರಿಂದ, ಒಂದ ಕ್ಕೊಂದು ಇಲ್ಲವೆಂಬ ರೀತಿ ಆಗದಂತೆ, ಸಕಲ ಸುವ್ಯವಸ್ಥೆಯನ್ನೂ ಸಿದ್ಧಗೊಳಿಸಿ, ಶ್ರೀರಾಮನಿಗೆ ಪ್ರೀತಿಯಾಗುವಂತೆ ಕಳುಹಿಸಿದನು ॥ ೧೫೧ ॥ ಎಲೈ ಚೆಲುವೆಯೇ, ಇಲ್ಲವೆಂಬುದು ಸ್ವರದಲ್ಲಿಯೂ, ಕತ್ತಲೆಯಲ್ಲಿಯೂ (?) ಅಲ್ಲದೆ ಅವನ ಸೈನ್ಯದಲ್ಲಿ ಇಲ್ಲವೆಂಬ ವಸ್ತುವೇ ಇಲ್ಲ. ಅದು ನನಗೆ ಗೊತ್ತು–ಎಂದು ಶ್ರೇಣಿಕನು ಹೇಳಿದನು ॥ ೧೫೨ ॥ ಭರತಶತ್ರುಘ್ನರೂ, ಜನಕರಾಜನೂ, ಬಲಿಷ್ಠರಾದ ರಾಜರೂ, ದುರ್ಗಗಳ ಒಡೆಯರೂ ದೊಡ್ಡ ದೊಡ್ಡ ಸೈನ್ಯವನ್ನು ಕೂಡಿಕೊಂಡು ರಾಮನ ಸಹಾಯಕ್ಕೆ ಬಂದರು ಆ ಸೈನ್ಯದ ಭಾರವನ್ನು ನೆಲವೇ ಹೊರಲಾರದೆಂಬಂತೆ ಇತ್ತು ॥ ೧೫೩ ॥ ಎಲೈ ಚೆಲುವೆಯೇ, ಶ್ರೀರಾಮನು ಮಂತ್ರೀಶನನ್ನೂ ತಮ್ಮನಾದ ಲಕ್ಷ್ಮಣನನ್ನೂ ಕೂಡಿ, ಸಮೃದ್ಧವಾದ ಮಹಾಸೈನ್ಯದೊಡನೆ ಆ ಉದ್ಯಾನದಿಂದ ತೆರಳಿದನು. ॥ ೧೫೪ ॥ ರಾಜರಲ್ಲಿ ಚಂದ್ರನಂತೆ ಶೋಭಾಯಮಾನನಾದ ಶ್ರೀರಾಮನು ಆನೆ, ಕುದುರೆ, ತೇರು, ಕಾಲಾಳುಗಳಿಂದ ಕೂಡಿದ ದೊಡ್ಡ ಸೇನೆಯು ಒಡನೆ ಬರುತ್ತಿರಲು, ಆಂದು ಸಂತೋಷದಿಂದ ಹೊರಟು ಹೋದನು.

---

[1] ತೂಕವಳತೆ (ಗ ಚ) [2] ದ್ರವ್ಯಗಳ ಸಂದಾ (ಗ ಚ) [3] ಝುಲ್ಲಿಗಳ (ಚ). [4] ಬಲ್ಲಿದನೊಳಗಳ (ಕ) [5] ಹೋರಾಟದೊಂದ (ಗ). [6] ಸವ್ವರಣೆಯ (ಚ) [7] ರಾಗದೊಳು (ಗ) [8] ಮಂತ್ರಸ್ಥೆಯೊಳಲ್ಲದೆ (ಕ) ಮಂದಸ್ತೆಯೊಳಲ್ಲದೆ (ಗ) [9] ವೆರಸಿಯಿಂದಾ (ಕ) [10] ಕಾಲಾಳ್ಗಳೆಂಜೀ (ಗ ಚ)

ಭೇರಿನಿಸ್ಸಾಳ ಡವುಡೆ ಚಿನ್ನ ತಿತ್ತಿರಿ । ವೀರವಂದದ ಗಿಡುಬಿಡಿಯು ॥
ಘೋರನಿನಾದವೆಸೆಯೆ ತೆರಳಿದನಂ । ದಾರಾಮದಿಂ ರಾಮಚಂದ್ರ ॥ ೧೫೬ ॥

ಅಲ್ಲಿಗೊಂದೆರಡು ಗಾವುದ ದಾರಿಯ ಪೋಗಿ । ಯಲ್ಲಿ ಪಾಳೆಯವನು ಬಿಡಿಸಿ ॥
ಮೆಲ್ಲನೆ ರವಿ ಪಡುಗಡಲ ಸಾರಿದ ನವ । ಪಲ್ಲವಾಧರೆ ಪದ್ಮನೇತ್ರೆ[1] ॥ ೧೫೭ ॥

ಬುದ್ಧಿಸಾಗರ ಬುಧಜನಪಾಲ ಲೋಕ ಪ್ರ । ಸಿದ್ಧ ಸದ್ಗುಣಗಣನಿಳಯ ॥
ಸದ್ಧರ್ಮಶರಧಿ ಸಂಪೂರ್ಣಚಂದ್ರಮನತಿ । ಶುದ್ಧಚರಿತನೊಪ್ಪಿದನು ॥ ೧೫೮ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೫೯ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖ ಮುಕುರಂ ।
ಸದಮಲ ಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದುದು[2] ಪದಿಮೂಱನೆಯ ಮಿಸುಪ ಸಂಧಿ ॥ ೧೬೦ ॥

---

॥ ೧೫೫ ॥ ಭೇರಿ, ನಿಸ್ಸಾಳ, ದೌಡೆ, ಚಿನ್ನದ ತಂತೂರಿ, ವೀರವಂದ, ಗಿಡಂಬಿಡಿ — ಮುಂತಾದ ವಾದ್ಯಗಳ ಭಯಂಕರವಾದ ಧ್ವನಿಯೊಡನೆ ಶ್ರೀರಾಮನಂ ಆ ವಾರಣಾಸಿಯ ಪುರೋದ್ಯಾನದಿಂದ ತೆರಳಿದನು. ॥ ೧೫೬ ॥ ಎಲೈ ಚೇಳಿನಿಯೇ. ಅಲ್ಲಿಂದ ಒಂದೆರಡಂ ಗಾವುದ ದಾರಿಯನ್ನು ಕಳೆಯಂಲು, ಪಾಳೆಯವನ್ನು ನಿಲ್ಲಿಸಿದನಂ. ಆಗ ಸೂರ್ಯನು ಮೆಲ್ಲನೆ ಪಶ್ಚಿಮ ಸಮುದ್ರವನ್ನು ಸೇರಿದನು. ॥ ೧೫೭ ॥ ಬುದ್ಧಿಯಲ್ಲಿ ಸಾಗರದಂತೆ ಗಂಭೀರನೂ, ವಿದ್ವಾಂಸರನ್ನು ಪಾಲಿನುವವನೂ, ಲೋಕದಲ್ಲಿ ಪ್ರಖ್ಯಾತನಾದವನೂ, ಸದ್ಗುಣಗಳಿಗೆ ಆಶ್ರಯನೂ, ಒಳ್ಳೆಯ ಧರ್ಮಕ್ಕೆ ಸಮುದ್ರನೂ, ಅತ್ಯಂತ ಪರಿಶುದ್ಧವಾದ ನಡತೆಯುಳ್ಳವನೂ ಆದ ಶ್ರೀರಾಮನು ಹೀಗೆ ಶೋಭಿಸುತ್ತಿದ್ದನಂ. ॥ ೧೫೮ ॥ ಎಲೈ ಚೇಳಿನಿಯೇ, ಇಂದು ನಾನು ನಿನಗೆ ಮುಂದಿನ ಕಥೆಗಳನ್ನು ಹೇಳುತ್ತೇನೆಂದು ಹೇಳಿದಂತೆ, ಹೇಳುತ್ತ ಮುಂದುವರಿದು ಇಲ್ಲಿಗೆ ಸಂಧಿ ಕೊನೆಗೊಂಡಿತು. ಇನ್ನು ಮುಂದಿನ ಕಥೆಯನ್ನು ಹೇಳುವೆನು. ॥ ೧೫೯ ॥ ಬ್ರಾಹ್ಮಣ ಕುಲ ಪ್ರಸೂತನೂ, ಅಭಿನವ ಮನ್ಮಥನೂ, ನಿರ್ಮಲ ಗುಣವುಳ್ಳವನೂ, ಜಿನಭಕ್ತನೂ, ಶ್ರೇಷ್ಠ ವಾಗ್ದೇವತೆಯ ಸ್ವಚ್ಛವಾದ ಮುಖಕ್ಕೆ ಕನ್ನಡಿಯಂತೆ ಇರುವವನೂ, ಒಳ್ಳೆಯ ಪರಿಶುದ್ಧವಾದ ನಡತೆಯುಳ್ಳವನೂ, ಆದ ಮಂತ್ರಿ ದೇವಪ್ಪನು ಸಂತೋಷದಿಂದ ಹೇಳಿರುವ ರಾಮವಿಜಯ ಕಾವ್ಯದಲ್ಲಿ ನೇರಿದಂತೆ ರಚಿತವಾದ ಹದಿಮೂರನೆಯ ಸಂಧಿಯಿದು ಕೀರ್ತಿಶಾಲಿಯಾಯಿತಂ ॥ ೧೬೦ ॥

---

[1] ಪದ್ಮವದನೆ (ಗ.ಚ.). [2] ಪಡೆದತಿ ಜಸವೆತ್ತುದು (ಕ).

# ೧೪. ಸೀತೆಗೆ ಮುದ್ರಿಕೆಯಿತ್ತುದು

ಪುಷ್ಕರಾಂಬಕ ಪುಷ್ಕರೋದ್ಭವ ಪೂಜಿತ । ಪುಷ್ಕರಸಖ ಕೋಟಿ ತೇಜ ॥
ಪುಷ್ಕರಬಾಣನ ಗೆಲಿದ ಜಿನರ ಪಾದ । ಪುಷ್ಕರಗಳಿಗೆಱಗುವೆನು ॥ ೧ ॥

ಕಂಜವದನೆಯರ ಕಣ್ಣ ಪುಣ್ಯದ ಬಲು । ಪುಂಜವೆ ಪುರುಷ ನಿಧಾನ ॥
ಕುಂಜರಾರಾತಿ ವಿಕ್ರಮ ಪೇಳು ಕೇಳ್ವೆನಾ । ಮಂಜುಳವಾದ ಮೇಲ್ಗತೆಯ ॥ ೨ ॥

ಮಾನನಿಧಾನ ಮಂದರ ಧೈರ್ಯ ಕೇಳೆನ್ನ । ಮಾನಸಾಂಬುಜ ರಾಜಹಂಸ ॥
ಮಾನವ ಮನಸಿಜ ಪೇಳು ಕೇಳುವೆ ಸ । ನ್ಮಾನದಿಂದೀ ಜಿನಕಥೆಯ ॥ ೩ ॥

ಸುರಪತಿವಿಭವ ಸುಜ್ಞಾನ ಸುಲೋಚನ । ಸರಸಿಜಸಖಸಮ ತೇಜ ॥
ಹರಿಣಾಂಕ ಸಮ ಶಾಂತ ಸದ್ಗುಣಸಾಗರ । ಹರುಷದಿಂ ಪೇಳು ಕಥೆಯನು ॥ ೪ ॥

ನೀತಿ ನಿಧಾನ [1]ನಿಜಾನ್ವಯಾಂಬುಧಿ ಚಂದ್ರ । ಭೂತದಯಾಪರ ಮೂರ್ತಿ ॥
ಶಾತೋದರಿಯರ ಕಲ್ಪಭೂಜವೆ ಎನ್ನ । ಮಾತ ಮನ್ನಿಸೊ[2] ಮನೋರಮಣ ॥ ೫ ॥

ಅರಿರಾಯ ಗಿರಿ ವಜ್ರದಂಡ ಜಿನೇಶ್ವರ । ಚರಣ ಕಮಲ ಷಟ್ಚರಣ ॥
ಶರಣಾಗತ ವಜ್ರಪಂಜರ ಪುಣ್ಯದ । ಸಿರಿಯೆ ಕೇಳೆನ್ನ ಬಿನ್ನಪವ ॥ ೬ ॥

ತೆಂಗಾಯಿ[3] ಮೊಲೆಯುಳೆ ತೆಳುವಸುಱೆ[4] ಕೋಮ । ಲಾಂಗಿ ಲತೋಪಮ ಮಧ್ಯೆ[5] ॥
ಅಂಗನಾರೂಪಾಂತೆನ್ನ ಜೀವನವೆ[6] ಕೇ । ಳಂಗಜ ವಿಜಯನ ಕಥೆಯ ॥ ೭ ॥

---

ಕಮಲದಂತೆ ಕಣ್ಣುಳ್ಳ, ಬ್ರಹ್ಮನಿಂದ ಪೂಜಿಸಲ್ಪಡುವ, ಕೋಟಿಸೂರ್ಯರ ಕಾಂತಿಯಿಂದ ಕೂಡಿದ, ಮನ್ಮಥನನ್ನು ಗೆದ್ದ, ಜಿನೇಶ್ವರರ ಪಾದಕಮಲಗಳಿಗೆ ನಮಸ್ಕರಿಸುತ್ತೇನೆ ॥ ೧ ॥ ಚೇಳಿನಿಯು ಶ್ರೇಣಿಕನೊಡನೆ ಹೀಗೆಂದಳು.– ಎಲೈ ಸ್ತ್ರೀಯರ ಕಣ್ಣುಗಳ ಪುಣ್ಯರಾಶಿಯೇ, ಪುರುಷರ ಸಂಪದ್ರೂಪನೇ, ಸಿಂಹದಂತೆ ಪರಾಕ್ರಮವುಳ್ಳವನೇ ಆ ಮನೋಹರವಾದ ಮುಂದಿನ ಕಥೆಯನ್ನು ಹೇಳು, ಕೇಳುವನು ॥ ೨ ॥ ಮರ್ಯಾದೆಗೆ ಆಶ್ರಯನಾದವನೇ, ಮಂದರಾದ್ರಿಯಂತೆ ಧೈರ್ಯಶಾಲಿಯೇ, ನನ್ನ ಮನಸ್ಸೆಂಬ ತಾವರೆಯಲ್ಲಿ ರಾಜಹಂಸದಂತೆ ನೆಲಸಿರುವಾತನೇ, ಮಾನವ ರೂಪದ ಮನ್ಮಥನೇ ಈ ಜಿನಕಥೆಯನ್ನು ಸನ್ಮಾನದಿಂದ ತಿಳಿಸು ನಾನು ಕೇಳುವೆನು ॥ ೩ ॥ ದೇವೇಂದ್ರನಂತಹ ವೈಭವವುಳ್ಳವನೇ, ಒಳ್ಳೆಯ ಜ್ಞಾನದ ಕಣ್ಣುಳ್ಳವನೇ, ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನೇ, ಚಂದ್ರನಂತೆ ಶಾಂತಿಯಿಂದ ಕೂಡಿದವನೇ, ಒಳ್ಳೆಯ ಗುಣಗಳಿಗೆ ಸಮುದ್ರನೇ ಸಂತೋಷದಿಂದ ಕಥೆಯನ್ನು ಹೇಳು ॥ ೪ ॥ ಎಲೈ ನನ್ನ ಮನೋವಲ್ಲಭನೇ, ನೀತಿಗೆ ಆಶ್ರಯನೇ, ತನ್ನ ವಂಶವೆಂಬ ಸಮುದ್ರಕ್ಕೆ ಚಂದ್ರನಂತೆ ಇರುವವನೇ, ಪ್ರಾಣಿದಯೆಯಿಂದ ಕೂಡಿದ ಮೂರ್ತಿಯೇ, ಸ್ತ್ರೀಯರಿಗೆ ಕಲ್ಪವೃಕ್ಷವೇ, ನನ್ನ ಮಾತನ್ನು ಮನ್ನಿಸು ॥ ೫ ॥ ಶತ್ರುರಾಜನೆಂಬ ಪರ್ವತಕ್ಕೆ ವಜ್ರಾಯುಧನೆ, ಜಿನೇಂದ್ರನ ಪಾದ ಕಮಲಕ್ಕೆ ಭ್ರಮರ ಸ್ವರೂಪನೆ (ಜಿನಭಕ್ತನೆ), ಮರೆಹೊಕ್ಕವರಿಗೆ ವಜ್ರದ ಪಂಜರವಾಗಿರುವವನೆ, ಪುಣ್ಯದ ಸಿರಿಯೇ ನನ್ನ ವಿಜ್ಞಾಪನೆಯನ್ನು ಕೇಳು ॥ ೬ ॥ ಆಗ ಶ್ರೇಣಿಕನು ಹೀಗೆಂದನು·—ತೆಂಗಿನಕಾಯಿಯಂತಿರುವ ಮೊಲೆಯ, ತೆಳುವಾದ ಬಸಿರಿನ, ಕೋಮಲವಾದ ಅವಯವದ, ಬಳ್ಳಿಯಂತಹ ನಡುವಿನ, ಸ್ತ್ರೀರೂಪದ ನನ್ನ ಪ್ರಾಣವೇ. ಮನ್ಮಥವಿಜಯನ ಕಥೆಯನ್ನು ಕೇಳು. ॥ ೭ ॥

---

[1] ಜಾತಿನಿಧಾನ (ಕ) [2] ಮನ್ನಿಸು (ಗ ಚ). [3] ತೆಂಗಾಯ (ಗ) [4] ತೆಳುವಸಿಱಿನ (ಚ) [5] ಲತೋಪರ ಮಧ್ಯೆ (ಗ) [6] × (ಚ).

ಕಂಜದ ತನಿಗಂಪ ಕೊರಲ್ವರ[1]ಲೊಲಿದುಂಡು । ಮಂಜುಳವಾದ ಪೆಣ್ದುಂಬಿ ॥
ರಂಜಿಸಿ ಪಾಡುವ ಪಾಡಿನಂತಿದೆ ನಿನ್ನ । ಸಂಜೀವನನಮುಪ್ಪ ಮಾತು ॥ ೮ ॥

ರತಿರೂಪಿಗೆ ಮೃದುಮಧುರ ವಾಣಿಗೆ ಸರ । ಸತಿ ಶುಚಿತೆಗೆ ಶಚಿ ಶಶಿಯ ॥
ಸತಿ ಪತಿಭಕ್ತಿಗೆ ಪುರುಡಿಪಳೆನೆ ಮಿಕ್ಕ । ಸತಿಯರೆಣೆಯೆ ನಿನಗಬಲೆ ॥ ೯ ॥

ಕಡಲಾತ್ಮಜೆ ನಿನ್ನ ಸಿರಿಗೆ ಭೋಗಕೆಯಾ । ಪೆಡೆವಣಿಯುನ ಪಟ್ಟದರಸಿ ॥
ಕಡುಗಾಡಿಗೆ ಮಂಜುಘೋಷೆ[2]ನೋವಳು ಮಿಕ್ಕ । ಮಡದಿಯರೆಣೆಯಲ್ಲ ನಿನಗೆ ॥ ೧೦ ॥

ಎಂದು ನುಡಿದ ತನ್ನ ಪ್ರಾಣಕಾಂತನ ವದ । ನೇಂದುವ ನೋಡಿ ರಾಗದಲಿ[3] ॥
ಮುಂದಣ ಕಥೆಯ ನಿರೂಪಿಸೆನಲು ಪೇಳ್ದ । ನಂದವಳೊಡನಿಂತೆಂದು ॥ ೧೧ ॥

ಬೆಳಗಾಗಲೆದ್ದು ತನ್ನಯ ಸಿರಿಮೊಗವನು । ತೊಳೆದು ಜಿನೇಶ್ವರನಡಿಯ ॥
ತಳುವದೆ ಕೈಗಾಣಿಕೆಯಿಕ್ಕಿ ಕಂಡನಂ । ದಿಳೆಯಾಣ್ಮನತಿರಾಗದೊಳು ॥ ೧೨ ॥

ಪೊಡವಿಗೆ ತನುವನೀಡಾಡಿ ಪಣೆಯನವ । ನೊಡನೊಡನೊರಸಲೊಪ್ಪಿದುದು[4] ॥
ಕಡುಪಾಪದಿಂ ಬಂದ ನೊಸಲಕ್ಕರವ ಜಿನ । ರಡಿಸಾಕ್ಷಿಯಿಂ ತೊಡೆವಂತೆ ॥ ೧೩ ॥

ಎದ್ದು ಕರವ ಮುಗಿದಾ ರಾಮಚಂದ್ರಮ । ಹೊದ್ದಿ ಜಿನೇಶನಂಘ್ರಿಯನು ॥
ಮುದ್ದುನುಡಿಗಳಿಂದ ಸ್ತುತಿಸಿದನವನಿಂತು । ಮುದ್ದುವೆಣ್ಣಂಗೆ[5]ಭೂಷಣವೆ ॥ ೧೪ ॥

---

ಸಂಜೀವನವೆಂದೆನಿಸುವ ನಿನ್ನ ಮಾತು ಸಾಮಾನ್ಯವಲ್ಲ. ಅದು ಮನೋಹರವಾದ ಹೆಣ್ಣು ತುಂಬಿಯು ತಾವರೆಯ ಒಳ್ಳೆಯ ಪರಿಮಳವನ್ನು ಕೊರಲಿನ ವರೆಗೆ ಸೇವಿಸಿ ಮನೋಹರವಾಗಿ ಹಾಡುವ ಹಾಡಿನಂತಿದೆ. ॥ ೮ ॥ ಎಲೈ ಮಡದಿಯೇ, ನಿನ್ನ ರೂಪಕ್ಕೆ ರತಿಯೂ, ನಯವೂ ಇಂಪೂ ಆದ ಮಾತಿಗೆ ಸರಸ್ವತಿಯೂ, ಶುಚಿತ್ವಕ್ಕೆ ಶಚಿದೇವಿಯೂ, ಪಾತಿವ್ರತ್ಯಕ್ಕೆ ರೋಹಿಣಿಯೂ ಮತ್ಸರಪಡುವರು. ಹೀಗಿರುವಾಗ ನಿನಗೆ ಇತರ ಹೆಂಡಿರು ಹೋಲಿಕೆಯಾಗುವರೇ? ॥ ೯ ॥ ನಿನ್ನ ವೈಭವಕ್ಕೆ ಲಕ್ಷ್ಮೀದೇವಿಯೂ, ಸುಖಕ್ಕೆ ಸರ್ಪ, ರಾಜನ ಪಟ್ಟದರಸಿಯೂ, ಸೌಂದರ್ಯಕ್ಕೆ ಅಪ್ಸರ ಸ್ತ್ರೀಯಾದ ಮಂಜು ಘೋಷೆಯೂ ನೋಯುವಳು. ಇತರ ಹೆಂಗಸರು ಯಾರೂ ನಿನಗೆ ಎಣೆಯಲ್ಲ. ॥ ೧೦ ॥ ಹೀಗೆ ಹೇಳಿದ ತನ್ನ ಪ್ರಾಣವಲ್ಲಭನ ಚಂದ್ರನಂತಹ ಮುಖವನ್ನು ನೋಡಿ, ಪ್ರೀತಿಯಿಂದ ಮುಂದಿನ ಕಥೆಯನ್ನು ಹೇಳೆಂದು ಚೇಳಿನಿಯು ಹೇಳಲು, ಶ್ರೇಣಿಕನು ಅವಳೊಡನೆ ಹೀಗೆ ಹೇಳಿದನು. ॥ ೧೧ ॥ ಶ್ರೀರಾಮನು ಬೆಳಗಾದೊಡನೆ ಎದ್ದು, ತನ್ನ ಕಾಂತಿಯುಕ್ತವಾದ ಮುಖವನ್ನು ತೊಳೆದನು; ಕೈಕಾಣಿಕೆಯನ್ನಿಟ್ಟು ಬಹಳ ಭಕ್ತಿಯಿಂದ ಜಿನೇಶ್ವರನ ಪಾದದರ್ಶನ ಮಾಡಿದನು. ॥ ೧೨ ॥ ಸಾಷ್ಟಾಂಗ ವಂದನೆ ಮಾಡಿ, ರಾಮನು ಹಣೆಯನ್ನು ನೆಲಕ್ಕೆ ಒರಸಿದಾಗ, ಹೆಚ್ಚಾದ ಪಾಪದಿಂದ ಬಂದ ಹಣೆಬರಹವನ್ನು ಜಿನೇಶ್ವರನ ಪಾದ ಸಾಕ್ಷಿಕವಾಗಿ ಒರಸಿ ತೆಗೆಯುವಂತೆ ಕಾಣಿಸಿತು. ॥ ೧೩ ॥ ಎಲೈ ಚೇಳಿನಿಯೇ, ಆ ರಾಮಚಂದ್ರನು ಸಾಷ್ಟಾಂಗ ವಂದನೆಯಿಂದ ಎದ್ದು ಕೈಮುಗಿದು, ಜಿನೇಶನ ಪಾದಸಮೀಪವನ್ನು ಸೇರಿ ಮುದ್ದಾದ ಮಾತುಗಳಿಂದ ಹೀಗೆ ಸ್ತುತಿಮಾಡಿದನು. ॥ ೧೪ ॥

---

[1]ಕೊಡಲ್ವರ (ಗ)　[2]ಮಂಜುಗೋಷೆ (ಗ).　[3]ರಾಗದೊಳು (ಚ).　[4]ನೊಡನೊಡಲೊರಸಲೊಪ್ಪಿದುದು (ಚ)　[5]ಮುದ್ದು ವೆಂಗಳ (ಗ.ಚ.).

ಜಯಜಯ ಭವರೋಗವೈದ್ಯ ಚಿದಾನಂದ । ಜಯಜಯ ಮನ್ಮಥವಿಜಯ ॥
ಜಯ ಭವ್ಯರಘುಸಿಂಧುವಡಬಾನಲ ಜಯ । ಜಯ ಎಂದು ಸ್ತುತಿಸಿದನವನು ॥ ೧೫ ॥

ಸುರಗಿಯಿಂ ಸುರಹೊನ್ನೆಯಿಂ ಸೇವಂತಿಗೆ । ಯರಲಿಂದೆ ಬಂದುಗೆಯಿಂದ ॥
ಕುರವಕದಿಂ ಚಂಪಕದಿಂದರುಹನ । ಚರಣವನವನರ್ಚಿಸಿದನು ॥ ೧೬ ॥

ಮಲ್ಲಿಗೆಯಿಂ ನಾಗದಾವರೆಯಿಂ ಚೂತ । ಪಲ್ಲವದಿಂ ಪಚ್ಚೆಯಿಂದ ॥
ಮೊಲ್ಲೆವೂ ಮೊದಲಾದವಱಿಂದಾ ಭೂ । ವಲ್ಲಭ ಜಿನರನರ್ಚಿಸಿದ ॥ ೧೭ ॥

ಕಣಿಗಿಲೆಯಿಂ ನಂದ್ಯಾವರ್ತದಿಂ ಚೆಂ । ಗಣಿಗಿಲಿಂ[1] ಮುಡಿವಾಳದಿಂದ ॥
ದಣಿವಂತೆ ತನ್ನೆದೆ ರಾಮಚಂದ್ರಮ ಕಮ್ಮ । ಗಣಿಯ ವಿಜಯನನರ್ಚಿಸಿದ ॥ ೧೮ ॥

ಕಂಜದಿಂ ಕನ್ನೈದಿಲಿಂದ ಸುಗಂಧಿಯಿಂ[2] । ಕೆಂಜಾಜಿಯಿಂ ಕೇತಕಿಯಿಂ ॥
ಮಂಜುಳಮಾದರಲಿಂ ಪರಮನ ನೃಪ । ಕುಂಜರ ಪೂಜೆಮಾಡಿದನು ॥ ೧೯ ॥

ಫಲರಸದಿಂದಿಕ್ಷುರಸದಿಂದಾಜ್ಯದಿಂ[3] । ಸುಲಲಿತ ಪಾಲ್ಮೊಸರಿಂದ ॥
ಅಲರಂಬ ವಿಜಯನಿಗಭಿಷವಣವ ಮಾಡಿ । ನಲಿದನೆದೆಯೊಳಾ ನೃಪತಿ ॥ ೨೦ ॥

ಮಾದಲದಿಂ ಮಾವಿಂ ಪಲಸಿಂ ಪಕ್ವ । ವಾದ ದಾಡಿಮ ದ್ರಾಕ್ಷೆಯಿಂದ ॥
ಆದಿತ್ತ ತೆಂಗಾಯಿ ಬಾಳೆವಣ್ಣುಗಳಿಂದ । ಮಾದೇವನ ಪೂಜಿಸಿದನು ॥ ೨೧ ॥

ಜಲದಿಂದ ಗಂಧದಿಂದಕ್ಷತೆಯಿಂ ಕ । ಮ್ಮಲರಿಂದ ಚರು ದೀಪದಿಂದ ॥
ಕಲುಕುಮಂಜನದಿಂದ[4] ಫಲದಿಂದಲಾ[5] ಭೂ । ಲಲನೇಶ ಜಿನರನರ್ಚಿಸಿದ ॥ ೨೨ ॥

---

ಪುನರ್ಜನ್ಮವೆಂಬ ರೋಗಕ್ಕೆ ವೈದ್ಯನೇ, ಜ್ಞಾನ ಮತ್ತು ಆನಂದ ಸ್ವರೂಪನೇ, ಮನ್ಮಥನನ್ನು ಜೈಸಿದವನೇ, ಮೋಕ್ಷಾಪೇಕ್ಷಿಗಳ ಪಾಪ ಸಮುದ್ರಕ್ಕೆ ವಡಬಾಗ್ನಿಯೇ ಜಯ ಜಯ ! ಎಂದು ಅವನು ಸ್ತುತಿಸಿದನು ॥ ೧೫ ॥ ಶ್ರೀರಾಮನು ಅರುಹಂತನ ಪಾದವನ್ನು ಸುರಗಿ, ಸುರ ಹೊನ್ನೆ, ಸೇವಂತಿಗೆ, ಬಂದುಗೆ (ಕಿಸುಗಾರ), ಕುರವಕ, ಸಂಪಗೆ – ಮುಂತಾದ ಹೂಗಳಿಂದ ಪೂಜಿಸಿದನು ॥ ೧೬ ॥ ಮಲ್ಲಿಗೆಯಿಂದಲೂ, ಬೆಟ್ಟದಾವರೆಯಿಂದಲೂ, ಮಾವಿನ ಚಿಗುರಿಂದಲೂ, ಪಚ್ಚೆಕದಿರಿಂದಲೂ, ಮೊಲ್ಲೆ ಹೂ ಮೊದಲಾದವುಗಳಿಂದಲೂ ಜಿನೇಂದ್ರರನ್ನು ಅರ್ಚಿಸಿದನು ॥ ೧೭ ॥ ಶ್ರೀರಾಮನು ಕಣಗಿಲೆ, ನಂದ್ಯಾವರ್ತ, ಕೆಂಪು ಕಣಗಿಲೆ, ಮುಡಿವಾಳ ಮುಂತಾದವುಗಳಿಂದ ತನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಜಿನೇಶ್ವರನನ್ನು ಪೂಜಿಸಿದನು ॥ ೧೮ ॥ ತಾವರೆ, ಕನ್ನೈದಿಲೆ, ಸುಗಂಧಿಪುಷ್ಪ, ಕೆಂಪುಜಾಜಿ, ಕೇದಗೆ ಮುಂತಾದ ಮನೋಹರವಾದ ಹೂವುಗಳಿಂದ ಶ್ರೀರಾಮನು ಜಿನೇಶ್ವರನನ್ನು ಪೂಜಿಸಿದನು. ॥ ೧೯ ॥ ಆ ಮೇಲೆ ಶ್ರೀರಾಮನು ಮನ್ಮಥವಿಜಯನಾದ ಜಿನೇಶ್ವರನಿಗೆ ಹಣ್ಣಿನ ರಸದಿಂದಲೂ, ಕಬ್ಬಿನ ರಸದಿಂದಲೂ, ತುಪ್ಪದಿಂದಲೂ, ಚೆಲುವಾದ ಹಾಲು ಮೊಸರಿನಿಂದಲೂ ಅಬಿಷೇಕವನ್ನು ಮಾಡಿ, ಮನಸ್ಸಿನಲ್ಲಿ ಬಹಳ ಸಂತೋಷ ತಾಳಿದನು ॥ ೨೦ ॥ ಮಾದಳೆ, ಮಾವು, ಹಲಸು, ಹಣ್ಣಾದ ದಾಳಿಂಬ, ದ್ರಾಕ್ಷೆ, ಆಯ್ದು ಇಟ್ಟ ತೆಂಗಿನ ಕಾಯಿ, ಬಾಳೆಹಣ್ಣು ಮುಂತಾದ ಹಣ್ಣುಗಳಿಂದ ಮಹಾದೇವನಾದ ಜಿನೇಶನನ್ನು ಪೂಜಿಸಿದನು ॥ ೨೧ ॥ ರಾಜನಾದ

---

[1] ಚೆಂಗಣಿಗಿಲೆ (ಚ) [2] ಕನ್ನೈದಿಲಿಂ ಸೇವಂತಿಗೆಯಿಂ (ಚ) . ಸೇವಂತಿಯಿಂ (ಗ) [3] ರಸದಿಂ ರಾಜ್ಯದಿಂ (ಗ) [4] ಮಜ್ಜನದಿಂದ
[5] ಫಲದಿಂದಾ (ಚ)

ಬಡವರುಗಳಿಗೆ ನೀನೇ ಗತಿ ಸಂಸಾರ । ಗಡಲೊಳಗಾಳ್ದನನೆನ್ನ ॥
ತಡಿಗೆ ಚಾಚೆಂದು ಚಾಚಿದ ನೊಸಲನು ಜಿನ । ರಡಿಗಳ ಮೇಲಾ ನೃಪತಿ ॥ ೨೩ ॥

ಪಂಚಾನನನ ಕಾಣುತ ಕರಿಘಟಿ ಹಱಿ । ಹಂಚಾಗುವಂತೆ ಕೇಳ್ನಿನ್ನ ॥
ಪಂಚಪದವ ಧ್ಯಾನಿಸಿದ[1] ಭವ್ಯಜನರಘ[2] । ಸಂಚಯು ಕೆಡದೆ ನಿಂದಪುದೆ ॥ ೨೪ ॥

ಪನ್ನಗನಗಿದ ಗರಳ ಗಾರುಡ[3]ಮಂತ್ರ । ದಿನ್ನಾಶವಡೆದಪುದು ಗಡ[4] ॥
ನಿನ್ನಡಿಗಳ ಜಪಿಸಿದರಘತತಿಗಳ । ದೇನ್ನಿಂದಪುದೆ[5] ಜಿನರಾಜ ॥ ೨೫ ॥

ಕೊರಳ ನೇವಳವೆಂದು ಪಾವ ಪಿಡಿದು ತರ । ಹರಿಸದೆ ಮಿಡುಕುವರಂತೆ ॥
ಪರವು ನೀನಲ್ಲದುಳಿದ ದೇವರ[6] ನಂಬಿ । ಪರಿಭವವಡೆದೆನಿಂದುವರ ॥ ೨೬ ॥

ಇಱಿವ ಮಱಿವ[7] ಮುನಿದೊಸೆವ ಕೊಡುವ ಕೊಳ್ವ । ಕುಱುಪಿಲ್ಲದವನೀ ನಿನಗೆ ॥
ಆಱಿಯದರೇಕೆಱಗುವರೆನ್ನ ಪುಣ್ಯದಿಂ । ದಱಿದೆಱಗಿದೆ ಜಿನರಾಜ ॥ ೨೭ ॥

ನೆಳಲು [8]ನೀರಿಂದುಬಿಂಬವ ಪೊರ್ದುವರು ಬಿಸಿ । ಲೊಳು ಬೆಂದ ನರರೆಂತಂತೆ ॥
ಅಳಱಿಸು[9]ವಘಕಂಜಿ ಬಂದು ಪೊರ್ದಿದೆನೆನ್ನ[10] । ಬಳಲಿಕೆ[11] ಬಿಡಿಸೊ ಸುಜ್ಞಾನಿ ॥ ೨೮ ॥

ಮಿಸುನಿಯಾದುದು ಗಡ ಕಾರ್ಬೊನ್ನಾ ಸಿದ್ಧ । ರಸ ಸಂಯೋಗದಿಂ ನಿನ್ನ ॥
ಎಸೆವಂಗರುಚಿ ಸೋಂಕಿದ ಜೀವತತಿ ರವಿ । ಶಶಿಕೋಟಿ ಕಾಂತಿವಡೆಯದೆ ॥ ೨೯ ॥

---

ಶ್ರೀರಾಮನು ಜಿನರನ್ನು ನೀರಿನಿಂದಲೂ, ಗಂಧದಿಂದಲೂ, ಅಕ್ಷತೆಯಿಂದಲೂ, ಪರಿಮಳವುಳ್ಳ ಹೂವುಗಳಿಂದಲೂ, ಅನ್ನದಿಂದಲೂ, ದೀಪದಿಂದಲೂ, ಕಲುಕುಮಂಜನದಿಂದಲೂ, ಫಲದಿಂದಲೂ ಅರ್ಚಿಸಿದನು. ॥ ೨೨ ॥ ಎಲೈ ಜಿನೇಶನೇ, ಬಡವರಿಗೆ ನೀನೇ ಗತಿ. ಈ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ದಡಕ್ಕೆ ದಾಟಿಸು ಎಂದು ಜಿನೇಶ್ವರನ ಪಾದಗಳ ಮೇಲೆ ಹಣೆಯನ್ನು ಚಾಚಿದನು. ॥ ೨೩ ॥ ಸಿಂಹವನ್ನು ಕಂಡ ಕೂಡಲೇ ಆನೆಗಳ ಹಿಂಡು ದಿಕ್ಕು ಪಾಲಾಗಿ ಚೆದರಿ ಹೋಗುವವು. ಅದೇ ರೀತಿ ನಿನ್ನ ಪಂಚಪದಗಳನ್ನು ಧ್ಯಾನಿಸಿದ ಭವ್ಯರ ಪಾಪ ಸಮೂಹವು ನಾಶವಾಗದೆ ಇರುವುದೆ? ॥ ೨೪ ॥ ಎಲೈ ಜಿನೇಶನೇ, ಹಾವು ಕಚ್ಚಿದ ವಿಷವು ಗರುಡನ ಮಂತ್ರದಿಂದ ನಾಶವಾಗುವುದು. ಅದೇ ರೀತಿಯಲ್ಲಿ ನಿನ್ನ ಪಾದವನ್ನು ಧ್ಯಾನಮಾಡಿದವರ ಪಾಪ ಸಮೂಹವು ಉಳಿಯುವುದೆ? ॥ ೨೫ ॥ ಕೊರಳಿಗೆ ಹಾಕತಕ್ಕ ನೇವಳವೆಂಬ ಭ್ರಮೆಯಿಂದ ಹಾವನ್ನು ಹಿಡಿದು, ಸಹಿಸಲಾರದೆ ನಡುಗುವವರ ಹಾಗೆ, ಎಲೈ ಜಿನೇಶನೇ, ನಾನು ಈ ವರೆಗೂ ನಿನ್ನನ್ನು ಬಿಟ್ಟು ಇತರ ದೇವರನ್ನು ನಂಬಿ ಸೋತು ಹೋದೆನು. ॥ ೨೬ ॥ ಎಲೈ ಜಿನರಾಜನೇ, ನೀನು ತಿವಿಯುವ, ಮರೆಯುವ, ಸಿಟ್ಟಾಗುವ, ಪ್ರೀತಿಸುವ, ಕೊಡುವ, ತೆಗೆದುಕೊಳ್ಳುವ ಯಾವೊಂದೂ ಚಿಹ್ನೆಯಿಲ್ಲದವನು. ಆದುದರಿಂದ ಈ ಅಜ್ಞಾನಿಗಳಾದ ಜನರು ನಿನಗೆ ಏಕೆ ವಂದಿಸುವರು? ಆದರೆ ನಾನು ನನ್ನ ಪುಣ್ಯವಶದಿಂದ ನಿನ್ನನ್ನರಿತು ವಂದಿಸಿದ್ದೇನೆ. ॥ ೨೭ ॥ ಬಿಸಿಲಿನಲ್ಲಿ ಬೆಂದ ಜನರು ನೆರಳನ್ನೂ ನೀರನ್ನೂ ಚಂದ್ರನನ್ನೂ ಆಶ್ರಯಿಸುತ್ತಾರೆ. ಅದರಂತೆ ನಾನು ಭಯಂಕರವಾದ ಪಾಪಕ್ಕೆ ಹೆದರಿ ಬಂದು ನಿನ್ನನ್ನು ಸೇರಿದ್ದೇನೆ. ಎಲೈ ಸುಜ್ಞಾನಿಯೇ, ನನ್ನ ಕಷ್ಟವನ್ನು ಪರಿಹಾರ ಮಾಡು. ॥ ೨೮ ॥ ಸಿದ್ಧರಸವು ತಗಲಿದೊಡನೆ ಕಬ್ಬಿಣವು ಚಿನ್ನವಾಗುವುದಂತೆ. ಶೋಭಾಯಮಾನವಾದ ನಿನ್ನ ದೇಹಕಾಂತಿ ಸೋಂಕಿದೊಡನೆ

---

[1] ಭಾವಿಸಿದ (ಗ ಚ). [2] ಜನದಘ (ಚ). [3] ಬಲ್ಗರಳಗರುಡ (ಗ.ಚ). [4] ದಪ್ಪುದಗಡ (ಕ) [5] ದೆನ್ನ ನಿಂದಪುದೆ (ಗ). [6] ನೀನಲ್ಲಾದನ್ಯ ದೇವರ (ಕ). [7] ಮರೆವ (ಕ). [8] ನೆಳಲ (ಗ.ಚ) [9] ಅಳಿರಿಸು (ಗ.ಚ) [10] ಪೊರ್ದಿದರೆನ್ನ (ಗ). [11] ಬಳಲ್ಕೆಯು (ಕ ಚ).

ಸರಸು ಸುಖಿಸಿದು ಸರಸು ದುಃಖಿಸಿದೆಂಬ[1] । ಪರಿಯುಪಾಧಿ ಯೆರಡಜ್ಞಾನದೊಳು ॥
ಸರಿಸರಿಯಾವುದಿದು ಬಿಡಿಪ್ಪುದಿದೆಂದೆಂಬ । ಪರಿಯ ಪಾಲಿಪುದೆನಗಭವ ॥ ೩೦ ॥

ಮಾನಸಾಂತ್ರ್ಯಪದದಿಂದ ಜನರ ರೋಗ । ಗುಣವಹೆವೃದು ಗಡ ನಿನ್ನ ।
ಗುಣ ರೂಪ ವರ್ಣ ಸ್ತುತಿಗಳಿಂದಳಿಯುವೆ । ಗಣನೆಯಿಲ್ಲದ ಪಾಪ ಜನರ ॥ ೩೧ ॥

ಇಂದು ತನಕ ನಿನ್ನನರಿಯದೆ ತಿಜ್ರನೆ । ಬಂದೆ ನಾನಾ ಯೋನಿಯಾಗಿ ॥
ಕಂದರ್ಪವಿಜಯ ಸಂಸಾರನಾಟಕ ಸಾ । ಕೆಂದು ಬಿಡಿಸು ನೀನೆನ್ನ ॥ ೩೨ ॥

ಸೆರೆಯು ಬಲ್ಪಿಡಿದ ವಾಸನವನೀಸುವ ಗಡ । ಶರಧಿಯು ದೇವ ನಿನ್ನಡಿಯು ॥
ವರಮಾರ್ಗದಿಂದ ಪಿಡಿದ ಪಕ್ಷ[2] ಸಂಸಾರ । ಶರಧಿಯ ದಾಂಟುವದರಿದೆ ॥ ೩೩ ॥

ಫಲದಿಂದ ಕುಗುವ ಸುಜ್ಞಾನದಿಂದಾ ಕಾಯ । ಸಲೆ ನಾಶವಹೆವಂದದೊಳು[3] ॥
ಕಲಿಲವಿಜಯ ನಿನ್ನ ಸ್ತುತಿಸಿದ ಜನರಘ[4] । ಗಲಿಸದೆ[5] ನಿಂದು ಜಾರಿಪುದೆ ॥ ೩೪ ॥

ಬಾಡವಗ್ನಿ ಓಮವುಪ್ಪುದು ನದಿಯುಪ್ಪುದು । ಕರಿವೈರಿ ಲತೆಯುಪ್ಪುದುರಗ ॥
ದುರಿತಸಾಗರ ಚುಳುಕಪ್ಪುದು ಜಿನ ನಿನ್ನ[6] । ಚರಣವ ಭಜಿಪ ಭಕ್ತರಿಗೆ ॥ ೩೫ ॥

ವಾತ ಪಿತ್ತ ಶ್ಲೇಷ್ಮ ಚಳಿಜ್ವರಾದಿಯು ಸನ್ನಿ । ಪಾತ[7]ದಿಂದೆನ್ನ ಕೊರಲ್ಗೆ ॥
ಪೀಡಿಯುಸೀಯುದಿಪ್ಪುದು[8] ನಾ ನಿನ್ನ ನಿ । ಭೀತಿಯಿಂ ಸ್ತುತಿಪುದನಭವ[9] ॥ ೩೬ ॥

ಈ ಜನ್ಮದೊಳು ನಿನ್ನ ಪದವ ಸಾರುವೆನೆಂ । ದಾ ಜಿನಪತಿಗೇಕಾಂತದೊಳು ॥
ಯೋಜಿಸಿಯೋಜೆಯಿಂ ಬಿನ್ನವಿಪಂದದೊ । ಳಾ ಜನನಾಥ ಜಪಿಸಿದ ॥ ೩೭ ॥

ಎಂದಿವು ಮೊದಲಾದ ಹಲವು ಸ್ತುತಿಗಳನಾ[1] । ನಂದದಿಂ ಸ್ತುತಿಸುತ[2] ಜಿನರ ॥
ವಂದಿಸಿ[3] ಮುನಿಜನಕೆಱಗಿ ಶ್ರೀರಾಮನು । ಬಂದು ಕುಳಿತ ಚಾವಡಿಯಲಿ ॥ ೩೮ ॥

ಮುಂದಣ ಕಾರ್ಯವಾವುದು ಲಕ್ಷ್ಮಣ ಹೇ । ಳೆಂದೆನುತಾಪ್ತ[4] ಸಚಿವನ ॥
ಅಂದು ಕೇಳಲು[5] ರಾಮಚಂದ್ರನಿಗವನಿಂ । ತೆಂದ ಮುಂದಣ[6] ಕಾರ್ಯವನು ॥ ೩೯ ॥

ಉಂಟು ಸಹಾಯ ಸಂಪನ್ನರು ನಮಗಿ । ನ್ನುಂಟು ಲಂಕೆಗೆ ಪೋಗಿ ಬರ್ಪ ॥
ಬಂಟರಿನ್ನೊಂದು ಪಯಣದೊಳು ನಮಗಿ । ನ್ನುಂಟಾಗಿ ಬಲ ಕೂಡುವುದು[7] ॥ ೪೦ ॥

ಎಂದೆನಲಲ್ಲಿಂದಲೆದ್ದು ಭಟರ ಬಲು । ಸಂದಣಿಯಿಂದ ರಾಘವನು ॥
ಮುಂದಕ್ಕೆ ನಡೆವಾಗಲವನ ಪಡೆಯದೊಂ । ದಂದವನೇನ ಬಣ್ಣಿಪೆನು ॥ ೪೧ ॥

ಪಟಹ ಸುರುವ[8] ಬಾಲಕೊಳ್ಳಿ ಚಬುಕು ಜೇ । ಗಟೆ ಚೋಹ ಜಗಜಾಪು[9]ಚೆಂಡು ॥
ನಿಟಲದ ನೇತ್ರದ ಬಲುಬಿರುದಿನ ಬಲು । ಭಟರಲ್ಲದಿಲ್ಲವವನಿಗೆ[10] ॥ ೪೨ ॥

ಅರಿದಲೆ ಮುಂಗೈಯ ಮೀಸೆ ಹೊಕ್ಕುಳ ಘುಂಟಿ । ಸರಬೊಂಬೆ ಹಗಲಿನ ಪಂಜು[11] ॥
ಸಿರದ ಬಾಸಿಗ ರನ್ನಕನ್ನಡಿಗಳ ಬಲು । ಚರರಿಹರಬಲೆ ಕೇಳವಗೆ ॥ ೪೩ ॥

---

ಪದವನ್ನು ನಾನು ಸೇರುವೆನು' ಎಂದು ಶ್ರೀರಾಮನು ಮನಸ್ಸಿನಲ್ಲೇ ನಿರ್ಣಯಿಸಿ, ಕ್ರಮದಿಂದ ವಿಜ್ಞಾಪನೆ ಮಾಡುವಂತೆ ಜಪಿಸಿದನು. ॥ ೩೭ ॥ ಶ್ರೀರಾಮನು ಇವೇ ಮೊದಲಾದ ಸ್ತೋತ್ರಗಳಿಂದ ಜಿನರನ್ನು ಸಂತೋಷದಿಂದ ಸ್ತುತಿಸಿ, ನಮಸ್ಕರಿಸಿ, ಮುನಿಜನರಿಗೂ ವಂದಿಸಿ, ಬಂದು ಚಾವಡಿಯಲ್ಲಿ ಕುಳಿತನು. ॥ ೩೮ ॥ ಎಲೈ ಲಕ್ಷ್ಮಣನೇ, ಎಲೈ ಆಪ್ತಸಚಿವನೇ, ಇನ್ನು ಮುಂದಿನ ಕಾರ್ಯ ಯಾವುದು? ಎಂದು ಕೇಳಲು, ಅವನು ಶ್ರೀರಾಮನಿಗೆ ಮುಂದೆ ಮಾಡಬೇಕಾದುದನ್ನು ಹೀಗೆ ತಿಳಿಸಿದನು. ॥ ೩೯ ॥ ನಮಗೆ ಸಹಾಯ ಸಂಪತ್ತುಗಳು ಇವೆ. ಲಂಕೆಗೆ ಹೋಗಿ ಬರತಕ್ಕ ಸೇವಕರೂ ಇದ್ದಾರೆ. ಇನ್ನೊಂದು ಪ್ರಯಾಣ ಗತಿಯನ್ನು ಪೂರ್ಣಮಾಡುವಾಗ ನಮಗೆ ಬೇಕಾದ ಬಲವೆಲ್ಲವೂ ಬಂದು ಸೇರುವುದು–ಎಂದು ಮಂತ್ರಿಯು ಹೇಳಿದನು. ॥ ೪೦ ॥ ಹೀಗೆ ಹೇಳಲು ಶ್ರೀರಾಮನು ಅಲ್ಲಿಂದೆದ್ದು ಸೈನಿಕರ ದೊಡ್ಡ ಗುಂಪಿನೊಡನೆ ಮುಂದಕ್ಕೆ ನಡೆದನು. ಆಗ ಅವನ ಸೈನ್ಯದ ಒಂದು ಅಂದವನ್ನು ಏನೆಂದು ವರ್ಣಿಸಲಿ ! ॥ ೪೧ ॥ ಪಟಹ, ಶ್ರೇಷ್ಠವಾದ ಬಾಲಕೊಳ್ಳಿ, ಚಬುಕು, ಜೇಗಟೆ, ಚೋಹ (ವೇಷ), ಜಗಜಾಪು (ದೂರಕ್ಕೆಲಂಘಿಸುವವ), ಚೆಂಡು, ಹಣೆಗಣ್ಣ ಮುಂತಾದ ಬಿರುದುಗಳುಳ್ಳ ಮಹಾಭಟರು ಅನೇಕ ಮಂದಿ ಆ ಸೈನ್ಯದಲ್ಲಿದ್ದರು. ॥ ೪೨ ॥ ಅರ್ದಾಳ ಹಚ್ಚಿದ ಮುಂಗೈಯ, ಮೀಸೆ, ಹೊಕ್ಕುಳಗಂಟೆ, ಸರಬೊಂಬೆ, ಹಗಲಿನ ಪಂಜು, ತಲೆಯ ಬಾಸಿಗ, ರನ್ನಗನ್ನಡಿ ಮುಂತಾದವುಗಳಿಂದ ಕೂಡಿದ ಚಾರಕರು ಹಲವರು ಅವನಿಗಿದ್ದರು. ॥ ೪೩ ॥ ಗುಂಟ, ಗುಂದ್ದಲಿ, ಮೊರ, ವಕ್ರವಾಗಿ ಬೀಸುವ ಹಗ್ಗ, ಗಂಟಲಗಾಳ, ಬೀಸುಬಲೆ ಮುಂತಾದ ಬಿರುದುಗಳಿರುವ ಸುಭಟರು ಏಳೆಂಟು

---

[1] ಇಂದಭವನ ಪಾದ ಪೂಜೆಯ ಮಾಡಿ ತಾ (ಕ) ಎಂದಿವು ಮೊದಲಾದ ಹಲವು ಗುಣಗಳನಾ (ಗ) [2] ತುತಿಸುತ (ಗ.ಚ.). [3] ಬಂದಿಸಿ (ಚ). [4] ದೆನಲಾಪ್ತ (ಗ). [5] ಕೇಳಿದ (ಕ). [6] ಗವರಿಂತೆಂದು ಪೇಳಿದರು (ಗ ಚ) [7] ದೊರಕುವುದು (ಚ). [8] ಮಸವ (ಗ.ಚ) [9] ಜಗಜಂಪು (ಗ). [10] ಭಟರಿಹರಾ ರಾಘವಗೆ (ಚ). [11] ಪುಂಜು (ಗ).

ಗುಂಟ ಗುದ್ದಲಿ ಮೊಱ ಕೊಂಗ ಬೀಸುವ ಹಗ್ಗ । ಗಂಟಲ ಗಾಣ ಬೀಸುವಲೆ ॥
ಉಂಟಾದ ಬಿರಿದುಳ್ಳಳವುಳ್ಳ ಸುಭಟರೇ । ೞೆಂಟು ಲಕ್ಷಾಳಿಹುದವಗೆ[1] ॥ ೪೪ ॥

ಪಾಱುವ ಪಕ್ಕಿಗಳವನ ಪಡೆಯೊಳಿದ್ದು[2] । ತೋಱುವ ಕೇತನಗಳೊಳು ॥
ಆಱಿತಳುಗಿಯಲ್ಲದೆ ಪೋಗವೆನಲದ[3] । ಕೀಱಿ ಪೇಳುವ ಕವಿಯಾರು[4] ॥ ೪೫ ॥

ಮೊದಲ ನಡುವಣ ಕಡೆಯ ಪಡೆ ಬಲ್ದೊಱೆ[5] । ಯುದಕವ ಕೆಸಱ ದೂಳಿಯನು ॥
ಮುದದಿಂದ ದಾಂಟಿ ಪೋದಪುದೆನಲಾ ಪಡೆ । ಯೊದವ[6] ನಾನೇನ ಬಣ್ಣಿಪೆನು ॥ ೪೬ ॥

ಗಿರಿ ದರಿ ಕುಳಿ ಹಳ್ಳ ದಡ ಬಲ್ಮೊರಡಿ ಗುಡ್ಡ । ಸರಿಯಾದಪವನ ಬಲ್ವಡೆಯ ॥
ಚರಣಹತಿಯೊಳೆನೆ ಪಗೆರಾಯರ ವೀರ[7] । ಜರಿಯದಿಹುದೆ ಜಯಲಕ್ಷ್ಮಿ ॥ ೪೭ ॥

ಕೆಱೆ ಬಾವಿ ದೀರ್ಘಿಕೆ [8]ಹರಿವ ಹಳ್ಳಗಳತಿ । ತೊಱೆ ನೆಱೆಯದೆ ಪಡೆಗವನ ॥
ಬಱತವೆಂದೆನೆಯದ ಕೇಳ್ದರಿಗಳ ಬೀರ । ಬಱಿಯದಿಹುದೆ[9] ಮೃಗನಯನೆ ॥ ೪೮ ॥

ಆ ರಾಯನ ಭೇರಿಯ ರವ[10]ಗೇಳ್ದರಿ । ಭೂರಮಣರುಗಳು [11]ತಮ್ಮ ॥
ವಾರಣ ವಾಜಿ ವಸ್ತುಗಳನವನು ಬರ್ಪ್ಪ । ದಾರಿಯೊಳಗೆ ತಂದಿಹರು ॥ ೪೯ ॥

ಬಂದ ಮನ್ನೆಯರ ಕಾಣಿಸಿಕೊಂಡು ಬಾರದೆ । ನಿಂದು ಮಲೆತ ಮನ್ನೆಯರ ॥
ಬಂದಿವಿಡಿದು ಮುಂದಕಿರದೆ ನಡೆವನೇ । ನೆಂದೆಂಬೆನವನ ವಿಕ್ರಮವ ॥ ೫೦ ॥

---

ಲಕ್ಷ ಸಂಖ್ಯೆಯಲ್ಲಿ ಶ್ರೀರಾಮನಿಗೆ ಇದ್ದರು. ॥ ೪೪ ॥ ಆ ಶ್ರೀರಾಮನ ಸೈನ್ಯದಲ್ಲಿ ಎದ್ದು ಕಾಣುವ ಪತಾಕೆಗಳಲ್ಲಿ, ಹಾರಾಡುವ ಹಕ್ಕಿಗಳು ಸಿಕ್ಕಿಕೊಳ್ಳುತ್ತಿದ್ದುವು ಇದನ್ನು ನಿರ್ದೇಶಿಸಿ ಹೇಳಬಲ್ಲ ಕವಿ ಯಾವನು? ॥ ೪೫ ॥ ಮೊದಲಿನ, ನಡುವಣ ಮತ್ತು ಕೊನೆಯ ಸೈನ್ಯಗಳು ದೊಡ್ಡನದಿಯ ನೀರನ್ನೂ ಕೆಸರನ್ನೂ ಧೂಳಿಯನ್ನೂ ಸಂತೋಷದಿಂದ ದಾಟಿ ಹೋಗಬಲ್ಲವು ಹೀಗಿರಲು ಆ ಸೈನ್ಯದ ವಿವರವನ್ನು ಏನೆನ್ನಲಿ! ॥ ೪೬ ॥ ಅವನ ಬಲಿಷ್ಠವಾದ ಸೈನ್ಯದ ಪಾದದ ತುಳಿತಕ್ಕೆ ಸಿಕ್ಕಿ ಬೆಟ್ಟ, ದರೆ, ಗುಳಿ, ಹಳ್ಳ, ದಡ, ಮೊರಡಿ, ಗುಡ್ಡ ಮುಂತಾದ ಏರುತಗ್ಗುಗಳು ಸಮನಾಗಿ ಬಿಡುತ್ತಿದ್ದುವು. ಹೀಗಿರುವಾಗ ಶತ್ರುರಾಜರ ಪರಾಕ್ರಮವು ಜರಿದುಹೋಗಿ ಅವರಲ್ಲಿ ಜಯಲಕ್ಷ್ಮಿ ನೆಲೆತಪ್ಪದೆ ಇರುವುದುಂಟೆ? ॥ ೪೭ ॥ ಅವನ ಸೈನ್ಯದ ಪ್ರಭಾವಕ್ಕೆ ಕೆರೆ, ಬಾವಿ, ಹೆಬ್ಬಾವಿ, ಹರಿಯುವ ಹಳ್ಳ, ಹೊಳೆ ಮುಂತಾದವು ಆರಿಹೋದುವೆನ್ನುವಾಗ. ಈ ಸಂಗತಿಯನ್ನು ಕೇಳಿದ ವೈರಿಗಳ ಶೌರ್ಯವು ಆರಿಹೋಗದೆ ಇರುವುದೆ? ॥ ೪೮ ॥ ಆ ಶ್ರೀರಾಮನ ಭೇರಿಯ ಧ್ವನಿಯನ್ನು ಕೇಳಿದ ವೈರಿ ರಾಜರು ತಮ್ಮ ಆನೆ, ಕುದುರೆ, ವಸ್ತುಗಳನ್ನು ಅವನು ಬರುವ ದಾರಿಗೆ ತಂದಿರುವರು ॥ ೪೯ ॥ ಶ್ರೀರಾಮನು ತನ್ನ ಬಳಿಗೆ ಬಂದ ನಾಯಕರಿಗೆ ಕಾಣಿಸಿಕೊಂಡು, ಬಾರದೆ ನಿಂತು ವಿರೋಧಿಸಿದ ಜನನಾಯಕರನ್ನು ಸೆರೆಹಿಡಿದು, ನಿಲ್ಲದೆ ಮುಂದೆ ನಡೆಯುವನು ಅವನ ಪರಾಕ್ರಮವನ್ನು ಏನೆಂಬೆನು! ॥ ೫೦ ॥ ತನ್ನನ್ನು ಕಾಣಲು ಬಂದ ಅರಸುಗಳಿಗೆ ಶ್ರೀರಾಮನು ಲಕ್ಷ್ಮೀದೇವಿಯ ಮುಖವನ್ನು ಕಾಣಿಸುವನು ತನ್ನನ್ನು ಕಾಣಲು ಬಾರದೆ ಇರುವವರಿಗೆ ಯುದ್ಧದಲ್ಲಿ ದೇವತಾ ಸ್ತ್ರೀಯರ ಸ್ತನ

---

[1] ಬಿರಿದುಗಳುಳ್ಳ ಭಟರುಗಳೆಂಟುಲಕ್ಷಾಳಿಹರವಗೆ (ಗ) ಬಿರಿದುಳ್ಳ ಭಟರುಗಳಿಹರೇಳೆಂಟು ಲಕ್ಷಾಳಿಹುದವಗೆ (ಚ). [2] ಹಾರುವ ಪಕ್ಕಿಗಳವನ ಪಡೆಯೊಳೊಲ್ಪು (ಕ) [3] ತಳುಗಿ ಪೋಪವೆನಲಾ ಕಟಕವ (ಗ ಚ) [4] ಯಾರೊ (ಚ) [5] ಪಡೆಪತ್ತೊರು (ಗ) ಪಡೆಪಲ್ತೊಱೆ (ಚ). [6] ಪೋದಪ್ಪುದೆನೆ ಪಡೆಯದೊಂದೊದವ (ಗ). [7] ಬೀರ (ಚ) [8] ದಿಕ್ಕಿಗೆ (ಗ). [9] ಬೀರವಱಿಯದಿಹುದೆ (ಚ) [10] ಭೇರೀರವ (ಚ) [11] ಬೇರಿಯ ರವಗೇಳ್ದರಿ ಭೂಮೀರಮಣರುಗಳು (ಗ) ೪೭ನೆ ಪದ್ಯ ಕ ದಲ್ಲಿಲ್ಲ

ಕಂಡರಸುಗಳ ಕಾಣಿಪನಿಂದಿರೆಯ-ಮುಖ[1] । ಮಂಡಲವನು ಕಾಣದವರ ॥
ಬಂಡಣದೊಳಗವ ಸುರವೆಣ್ಗಳ ಕುಚ । ಮಂಡಲವನು ಕಾಣಿಸುವ[2] ॥ ೫೧ ॥

ಈ ಪರಿ ದಂಡೆತ್ತಿ ನಡೆವ ಕಾಲದೊಳಂ । ದೋಪಳೆ ರಾಮಚಂದ್ರಮನ ॥
ಆಪತ್ತಿಗೊದಗುವ ಪುಣ್ಯವೆ ಬಪ್ಪಂ । ತಾ ಪದದೊಳು ಭರದಿಂದ ॥ ೫೨ ॥

ಅಲ್ಲಿಗೆ ಬಂದರಿಬ್ಬರು ವಿದ್ಯಾಧರ । ರುಲ್ಲಾಸದಿಂ ನೃಪ ಕಂಡು ॥
ಎಲ್ಲಿಂದ ಬಂದಿರಿ ಪೆಸರೇನೆನೆ ತಳು । ವಿಲ್ಲದೆ ಪೇಳ್ದರಿಂತೆಂದು ॥ ೫೩ ॥

ಅತ್ತಲು ವಿಜಯಾರ್ಧದ ದಕ್ಷಿಣ ಶ್ರೇಣಿ । ಯೊತ್ತಿನ ಕಿಳಕಿಳವೆಂಬ[3] ॥
ಪತ್ತನದರಸು ಬಲೀಂದ್ರ ವಿದ್ಯಾಧರ । ಗುತ್ತಮೆ ಸೌಂದರಿಯರಸಿ ॥ ೫೪ ॥

ಅವರೀರ್ವರಿಗೆ ಪುಟ್ಟಿದ ಬಾಲಿಯವನಿಂ । ದವೆ ನಾನು[4] ಕಿಱಿಯ ಸುಗ್ರೀವ ॥
ಅವಿರಳವಾದ ಪದವಿಯೊಳಿರ್ದೆವು ನಾವು । ದಿವಿಜವಿಭವದೊಳಿಂದುವರ ॥ ೫೫ ॥

ರಾಜ ಚಿತ್ತೈಸೆಮ್ಮ[5] ತಂದೆ ಸಾಯಲ್ಕಧಿ । ರಾಜಪದವಿ ಬಾಲಿಗೆನಗೆ ॥
ಮೂಜಗವಱಿಯಲು ಯುವರಾಜಪದವಿಯಿಂ[6] । ತೇಜದೊಳಿರ್ದಪೆನೆನ್ನ ॥ ೫೬ ॥

ಪೊಱಮಡಿಸಿದ ತನ್ನ[7] ರಾಜ್ಯವ ಬಿಟ್ಟೆನ್ನ । ಕಱಿಗಟ್ಟಿದ[8] ಕೋಪದಿಂದ ॥
ನೆಱೆನೊಂದು[9] ಬಂದೆನಾನಿವನ ವೃತ್ತಾಂತವ । ನಱಿಪುವೆ ರಾಯ ಚಿತ್ತೈಸು ॥ ೫೭ ॥

ಅಗಣಿತ ದಕ್ಷಿಣ ಶ್ರೇಣಿಯುದ್ಯತ್ಕಾಂತ । ನಗರದರಸು ಪ್ರಭಂಜನನ ॥
ಮೃಗನೇತ್ರೆಯಂಜನಾದೇವಿಯಂತೀರ್ವರಿ । ಗೊಗೆದನಮಿತವೇಗನಿವನು ॥ ೫೮ ॥

---

ಮಂಡಲವನ್ನು ಕಾಣಿಸುವನು. ॥ ೫೧ ॥ ಎಲೈ ಚೇಳಿನಿಯೇ, ಈ ರೀತಿಯಾಗಿ ದಂಡೆತ್ತಿ ಹೋಗುತ್ತಿರಲು ಶ್ರೀರಾಮನಿಗೆ ಕಷ್ಟಕಾಲದಲ್ಲಿ ಸಹಾಯಕ್ಕೆ ಬರುವ ಪುಣ್ಯವೇ ಬರುವಂತೆ ಆ ಸಂದರ್ಭದಲ್ಲಿ ॥ ೫೨ ॥ ಇಬ್ಬರು ವಿದ್ಯಾಧರರು ಬೇಗನೆ ಅಲ್ಲಿಗೆ ಬಂದರು. ಶ್ರೀರಾಮನು ಅವರನ್ನು ಕಂಡು, ನೀವು ಎಲ್ಲಿಂದ ಬಂದಿರಿ, ನಿಮ್ಮ ಹೆಸರೇನು? ಎಂದು ಕೇಳಿದನು. ಆಗ ಅವರು ತಡವಿಲ್ಲದೆ ಹೀಗೆಂದರು. ॥ ೫೩ ॥ ಅತ್ತ ವಿಜಯಾರ್ಧ ಪರ್ವತದ ದಕ್ಷಿಣಶ್ರೇಣಿಯ ಸಮೀಪದಲ್ಲಿ ಕಿಳಕಿಳ-ವೆಂಬ ಪಟ್ಟಣವಿದೆ. ಆ ಪಟ್ಟಣದ ಅರಸನು ಬಲೀಂದ್ರನೆಂಬ ವಿದ್ಯಾಧರನು. ಅವನ ರಾಣಿ ಸೌಂದರಿ ಎಂಬವಳು. ॥ ೫೪ ॥ ಅವರಿಬ್ಬರಿಗೆ ಜನಿಸಿದ ಹಿರಿಯ ಮಗನು ವಾಲಿ. ಅವನ ತಮ್ಮನಾದ ಸುಗ್ರೀವನು ನಾನು. ಇಂದು ತನಕವೂ ನಾವು ಘನವಾದ ಪದವಿಯಲ್ಲಿ ದಿವ್ಯವೈಭವದಿಂದ ಇದ್ದೆವು. ॥ ೫೫ ॥ ಎಲೈ ರಾಜನೇ ಕೇಳು. ನಮ್ಮ ತಂದೆ ಮಡಿಯಲು ಅಧಿರಾಜ ಪದವಿಯು ವಾಲಿಗೂ ಯುವರಾಜ ಪದವಿ ನನಗೂ ಮೂರು ಲೋಕವು ತಿಳಿಯುವಂತೆ ಪ್ರಾಪ್ತವಾಯಿತು. ॥ ೫೬ ॥ ವಾಲಿಯು ಕೋಪದಿಂದ ನನ್ನನ್ನು ರಾಜ್ಯದಿಂದ ಓಡಿಸಿದನು. ಇದರಿಂದ ನಾನು ಚೆನ್ನಾಗಿ ನೊಂದು ಬಂದಿರುತ್ತೇನೆ. ಎಲೈ ರಾಜನೇ ಇನ್ನು ಇವನ ವೃತ್ತಾಂತವನ್ನು ತಿಳಿಸುವೆನು, ಕೇಳು. ॥ ೫೭ ॥ ಗಣಿಸಲು ಸಾಧ್ಯವಿಲ್ಲದ ದಕ್ಷಿಣ ಶ್ರೇಣಿಯಲ್ಲಿರುವ ಉದ್ಯತ್ಕಾಂತವೆಂಬ ನಗರದ ರಾಜನು ಪ್ರಭಂಜನನು. ಅವನ ಮಡದಿ ಅಂಜನಾದೇವಿ. ಈ ಇಬ್ಬರಿಗೆ ಅಮಿತವೇಗನಾದ ಇವನು ಮಗನು. ॥ ೫೮ ॥ ಇವನು ಕುಲ ಜಾತಿಗಳಿಂದ ಸಾಧಿಸಿದ ವಿದ್ಯೆಗಳಿಂದ ಬಹಳ ಬಲಿಷ್ಠನಾಗಿ,

---

[1] ಕಾಣಿಸುವನಿಂದಿರೆ ಮುಖ (ಗ). [2] ಕಾಣಿಸುವನು (ಚ). [3] ಕಿಳಕಿಳೆಯೆಂಬ (ಗ) ಕಿಳಕಿಳವೆಂಬ (ಚ). [4] ಬಾಲಿಯೆಂದೆಂಬವನಿಂದವೆ (ಗ). [5] ಚಿತ್ತೈಸೆನ್ನ (ಕ). [6] ಪದವಿಯೊಳ್ (ಚ). [7] ಪೊಱಮಡೆಯದ ತನ್ನ (ಕ). [8] ಗಱಿಗಟ್ಟಿದ (ಗ ಚ.). [9] ನೆಱೆನೋಡು (ಕ).

ಕುಲಜಾತಿ ಸಾಧಿತ ವಿದ್ಯೆಗಳಿಂದತಿ । ಬಲಯುತನಾಗಿ ಖೇಚರರ ॥
ತಲೆವಣಿಯಾಗಿರ್ಪನಿವನೆಂದವನಾ । ಬಲರಾಮಂಗೆ[1] ಬಿನ್ನವಿಸಿದ ॥ ೫೯ ॥

ಒಂದು ದಿವಸ ವಿದ್ಯಾಧರರ್ ತಂತಮ್ಮ । ನಂದನರುಗಳ ವಿದ್ಯೆಯನು ॥
ನಿಂದು ಪರೀಕ್ಷಿಸುತಿರಲೀತನತಿವೇಗ । ದಿಂದಲಾ ವಿಜಯಾರ್ಧಗಿರಿಯ ॥ ೬೦ ॥

ಬಲಗಾಲೊಳು ಮೆಟ್ಟಿ ನಿಂದೆಡಗಾಲೊಳು । ಸುಲಲಿತಾದಿತ್ಯಮಂಡಲವ ॥
ನಿಲುಕಿಯೊದೆದು ಮತ್ತಾ ದೇಹವನವ । ಸಲೆ ತ್ರಸರೇಣುವೆಸೆವನು[2] ॥ ೬೧ ॥

ತಳೆದುದ ಕಂಡು ವಿದ್ಯಾಧರರ್ ಸಂತಸ । ದೊಳಗಿರಲೀ ಖಚರನಿಗೆ ॥
ತಳುವದಣುವನೆಂಬ ಪೆಸರಿಟ್ಟು ಕರೆದರು । ನೆಲದೊಳಗದು[3] ಪಸರಿಸಿತು ॥ ೬೨ ॥

ಅವನಿಪ ಕೇಳೆನ್ನ ಸಖನೀತ ಸಹಿತೊಂದು । ದಿವಸ ಸಮ್ಮೇದ ಗಿರಿಯೊಳು ॥
ನವಸಿದ್ಧಕೂಟ ಚೈತ್ಯಾಲಯದೊಳು ದೇವ । ಸ್ತವನ ವೈಭವದೊಳಗಿರಲು[4] ॥ ೬೩ ॥

ಗಗನದಿಂ ಬಂದು ಜಿನೇಶನ ಪದಪದ್ಮ । ಯುಗಲವ ಬಲವಂದೆಱಗಿ ॥
ಮಿಗೆ ಸ್ತುತಿಗೈದ ನಾರಂದ ಮುನೀಶನ । ಮೊಗಗಂಡು ಕೇಳ್ದೆವಿಂತೆಂದು[5] ॥ ೬೪ ॥

ಮುನಿಪ ಚಿತ್ತೈಸೆಮ್ಮ ಪೂರ್ವದ ಸೀಮೆಗೆ । ಯೆನಿತು ಕಾಲಕೆ ಪೋಪೆವೆಂದು ॥
ಅನುವದಿಸಲು ಪೇಳ್ದನಿನಿತೆಂದು ನಮ್ಮಯ । ಮನದ ಸಂದೆಗ ಪೋಪಂತೆ ॥ ೬೫ ॥

ಬಲ ವಾಸುದೇವರ್ಕಳು ರಾಮ ಲಕ್ಷ್ಮಣ । ರಲಘು ವಿಕ್ರಮರೀ ಭರತದ ॥
ನೆಲದೊಳಗಿರ್ದ ಚಕ್ರಿಗಳಾ[6] ರಾಮನ । ಕುಲವಧು ಸೀತಾಂಬಿಕೆಯ ॥ ೬೬ ॥

---

ಖೇಚರರಿಗೆಲ್ಲ ಶಿರೋರತ್ನನಾಗಿ ಇರುವನು – ಹೀಗೆ ಸುಗ್ರೀವನು ರಾಮನಿಗೆ ವಿಜ್ಞಾಪಿಸಿದನು ॥ ೫೯ ॥ ಒಂದು ದಿವಸ ವಿದ್ಯಾಧರರೆಲ್ಲರೂ ತಮ್ಮ ತಮ್ಮ ಮಕ್ಕಳ ವಿದ್ಯೆಯನ್ನು ನಿಂತು ಪರೀಕ್ಷಿಸುತ್ತಿದ್ದರು ಆಗ ಈತನು ತನ್ನ ಹೆಚ್ಚಾದ ಸಾಮರ್ಥ್ಯದಿಂದ ವಿಜಯಾರ್ಧಗಿರಿಯನ್ನು ॥ ೬೦ ॥ ತನ್ನ ಬಲಗಾಲಲ್ಲಿ ಮೆಟ್ಟಿ ನಿಂದು, ಎಡಗಾಲಿನಲ್ಲಿ ಸುಂದರವಾದ ಸೂರ್ಯಮಂಡಲವನ್ನು ನಿಲುಕಿ ಒದೆದನು ಆ ಮೇಲೆ ತನ್ನ ದೇಹವನ್ನು ಅಣುರೂಪವಾಗಿ ಮಾಡಿದನು ॥ ೬೧ ॥ ಇದನ್ನು ನೋಡಿದ ವಿದ್ಯಾಧರರು ಸಂತೋಷದಿಂದ ಇದ್ದು, ಈ ಖೇಚರನಿಗೆ ಅಂದಿನಿಂದಲೇ ಅಣುವನೆಂಬ ಹೆಸರನ್ನಿಟ್ಟು ಕರೆಯತೊಡಗಿದರು. ಈ ಹೆಸರು ಲೋಕದಲ್ಲೆಲ್ಲ ಪ್ರಸಾರವಾಯಿತು. ॥ ೬೨ ॥ ಎಲೈ ರಾಜನೇ ಕೇಳು ನಾನೂ ನನ್ನ ಸ್ನೇಹಿತನಾದ ಈತನೂ ಒಂದು ದಿವಸ ಸಮ್ಮೇದಗಿರಿಯಲ್ಲಿರುವ ಹೊಸತಾದ ಸಿದ್ಧಕೂಟ ಜಿನಾಲಯದಲ್ಲಿ ದೇವರನ್ನು ಸ್ತುತಿಮಾಡುತ್ತ ಇದ್ದೆವು ॥ ೬೩ ॥ ಹೀಗಿರಲು ನಾರದ ಮುನಿಯು ಆಕಾಶದಿಂದ ಇಳಿದು ಬಂದು, ಜಿನೇಶ್ವರನ ಪಾದಕಮಲಗಳೆರಡನ್ನೂ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಸ್ತುತಿಮಾಡಿದನು ಆ ನಾರದನನ್ನು ಕಂಡು ನಾವು ಹೀಗೆ ಕೇಳಿದೆವು ॥ ೬೪ ॥ 'ಎಲೈ ನಾರದ ಮುನೀಂದ್ರನೇ, ನಾವು ನಮ್ಮ ಹಿಂದಿನ ಸೀಮೆಗೆ ಯಾವಾಗ ಹೋಗುವಂತೆ ಆದೀತು ಎಂಬುದನ್ನು ತಿಳಿಸು'–ಎಂದು ಕೇಳಲು ನಮ್ಮ ಮನಸ್ಸಿಗೆ ಸಂದೇಹವು ಹೋಗುವಂತೆ ಅವನು ಹೀಗೆಂದನು ॥ ೬೫ ॥ ಬಲ–ವಾಸುದೇವರುಗಳೇ ಈ ಕಾಲದಲ್ಲಿ ರಾಮಲಕ್ಷ್ಮಣರಾಗಿ ಅತಿಶಯ ಪರಾಕ್ರಮಿಗಳಾಗಿ ಈ ಭರತಭೂಮಿ

---

[1] ಬಲರಾಮನಿಗೆ (ಗ ಚ) [2] ರೇಣುವ್ರತವಸು (ಕ) ರೇಣುವೇಶವನು (ಚ) [3] ಪೆಸರಿತ್ತರಂದಿಳೆಯೊಳಗದು (ಗ). ರಂದಿದಿಳಗದು (ಚ)
[4] ಸ್ತವನವ ಗೈವುತ್ತಿರಿರಲು (ಗ) . ಲಿರಲು (ಚ) [5] ಕೇಳ್ದನಿಂತೆಂದು (ಗ) [6] ನೆಲದೊಳಗರ್ಧ ಚಕ್ರಿಗಳು (ಚ)

ವನದಿಂದ ಕದ್ದು ಕೊಂಡೊಯ್ದನು ಲಂಕೆಗೆ । ಜನನಾಥ ರಾವಣನೃಪತಿ ॥
ವಿನಯನಿಧಾನ ಶ್ರೀರಾಮ ಲಂಕೆಗೆ ಪೋಪ । ಮನುಜರನಱಸುತಲಹನೆ[1] ॥ ೧೭ ॥

ಅಲ್ಲಿಗೆ ನೀವು ಪೋದರೆ[2] ರಾಮಚಂದ್ರಗಿಂ । ದೆಲ್ಲ ಕಾರ್ಯಗಳಹುದೆಂದು[3] ॥
ಸೊಲ್ಲಿಸಲಾಗಿ ಬಂದೆವು ನಿಮ್ಮ[4] ಶ್ರೀಪಾದ । ಪಲ್ಲವಗಳ ಕಾಣಲೆಂದು[5] ॥ ೧೮ ॥

ನುಡಿದ ನುಡಿಯ ಕೇಳಿ ರಘುನಾಥ ಮನದೊಳು । ಗುಡಿಗಟ್ಟಿ ಸ್ನಾನಭೋಜನದಿಂ ॥
ಉಡುಗೊಱೆಗೊಟ್ಟು[6] ಮನ್ನಿಸಿಯಭಯವನಿತ್ತು । ನುಡಿದ ನೀವಂಜಬೇಡೆಂದು[7] ॥ ೧೯ ॥

ಹಲವು ಮಾತೇನು ನಾ ನಿಮ್ಮ ಪದವಿಯೊಳು । ತೊಲಗದ ಸಂಪದವಿತ್ತು ॥
ನಿಲಿಸುವೆ ನಿಮ್ಮ ಚಿಂತೆಯ ಮನದಿಂದವೆ । ತೊಲಗ ನೂಕುವುದೆಂದನವನು[8] ॥ ೨೦ ॥

ಜೀಯ ಹಸಾದವೆನುತ ತಮ್ಮ ನೊಸಲಿಗೆ । ಕೈಯ ತಂದಿಟ್ಟು ಧರಣಿಗೆ ॥
ಮೈಯನೀಡಾಡಲೇಳೇಳೆನುತವರನಂ[9] । ದೊಯ್ಯನೆ ನೆಗಪಿದ ನೃಪತಿ ॥ ೨೧ ॥

ಮುಂದೆ ನಿಮಗೆ[10] ನಾವು ಮಾಡುವ ಸೇವೆಯಿಂ । ತೆಂದು ನಮಗೆ[11] ಬುದ್ಧಿಗಲಿಸಿ ॥
ಎಂದು ನುಡಿಯಲಣುವಗೆ ರಾಮಚಂದ್ರನಿಂ । ತೆಂದು ಪೇಳಿದ ಮೃಗನಯನೆ ॥ ೨೨ ॥

ಮುದ್ರಿಕೆಯನು ಕೊಟ್ಟು ಬಿಡಿಸಿ ಸೀತೆಯ ಹೃ । ತ್ಪದ್ರವನಾ[12] ರಾವಣನ ॥
ಉದ್ರೇಕವ ನೀನಱಿದು ಬಾರೆನುತ ಬಲ । ಭದ್ರನಣುವಗೆ ಪೇಳಿದನು ॥ ೨೩ ॥

---

ಯಲ್ಲಿ ಚಕ್ರವರ್ತಿಗಳಾಗಿದ್ದಾರೆ. ಆ ರಾಮನ ಮಡದಿ ಸೀತಾಮಾತೆ ॥ ೧೬ ॥ ಆ ಸೀತೆಯನ್ನು ಲಂಕಾಧಿಪತಿಯಾದ ರಾವಣನು, ವನದಿಂದ ಕದ್ದುಕೊಂಡು ಹೋಗಿರುತ್ತಾನೆ. ವಿನಯಗುಣಕ್ಕೆ ಆಶ್ರಯನಾದ ಶ್ರೀರಾಮನು ಲಂಕೆಗೆ ಹೋಗತಕ್ಕ ಮನುಷ್ಯರನ್ನು ಈಗ ಹುಡುಕುತ್ತಿರುವನು. ॥ ೧೭ ॥ ನೀವು ಅಲ್ಲಿಗೆ ಹೋದರೆ ಆ ಶ್ರೀರಾಮನಿಗೆ ನಿಮ್ಮಿಂದ ಎಲ್ಲಾ ಕಾರ್ಯಗಳೂ ಈಡೇರುವವು' – ಎಂದು ನಾರದನು ನಮಗೆ ಹೇಳಿದನು. ಇದರಿಂದ ನಾವಿಬ್ಬರೂ ನಿಮ್ಮ ಪಾದದರ್ಶನಕ್ಕಾಗಿ ಬಂದಿದ್ದೇವೆ ಎಂದು ಸುಗ್ರೀವನು ಹೇಳಿದನು ॥ ೧೮ ॥ ಈ ಮಾತನ್ನು ಕೇಳಿ ಶ್ರೀರಾಮನು ತನ್ನ ಮನಸ್ಸಿನಲ್ಲಿ ಬಹಳ ಸಂತೋಷಪಟ್ಟನು. ಅವರಿಬ್ಬರನ್ನು ಸ್ನಾನ ಭೋಜನಗಳಿಂದಲೂ ಉಡುಗೊರೆಗಳಿಂದಲೂ ಸತ್ಕರಿಸಿ, ಅಭಯವನ್ನು ಕೊಟ್ಟು, ನೀವು ಹೆದರಬೇಡಿ – ಎಂದನು. ॥ ೧೯ ॥ ಹೆಚ್ಚು ಮಾತೇಕೆ? ನಾನು ನಿಮ್ಮನ್ನು ಪುನಃ ನಿಮ್ಮ ಪದವಿಯಲ್ಲಿ ಇರಿಸಿ ಸ್ಥಿರವಾದ ಸಂಪತ್ತನ್ನು ಕೊಟ್ಟು ನಿಲ್ಲಿಸುವೆನು. ಮನದ ಚಿಂತೆಯನ್ನು ಬಿಡಿ ಎಂದು ರಾಮನು ಹೇಳಿದನು. ॥ ೨೦ ॥ ಆಗ ಆ ಸುಗ್ರೀವ ಹನುಮಂತರಿಬ್ಬರೂ "ಜೀಯ ಹಸಾದ !" ಎಂದು ಕೈಮುಗಿದು, ಸಾಷ್ಟಾಂಗ ವಂದನೆಮಾಡಲು, ರಾಮನು ಏಳಿ, ಏಳಿ ಎನ್ನುತ್ತ ಅವರನ್ನು ಹಿಡಿದು ಎತ್ತಿದನು. ॥ ೨೧ ॥ ಆಗ ಅವರು "ನಿಮಗೆ ನಾವು ಮುಂದೆ ಮಾಡಬೇಕಾಗಿರುವ ಸೇವೆ ಯಾವುದೆಂದು ನಮಗೆ ತಿಳಿಸೋಣಾಗಲಿ" ಎಂದು ಹೇಳಿದರು. ಆಗ ಶ್ರೀರಾಮಚಂದ್ರನು ಅಣುವನಿಗೆ ಹೀಗೆಂದನು. ॥ ೨೨ ॥ "ನನ್ನ ಈ ಉಂಗುರವನ್ನು ಸೀತೆಗೆ ಕೊಟ್ಟು, ಅವಳ ಮನದ ಚಿಂತೆಯನ್ನು ಪರಿಹರಿಸಿ, ಆ ರಾವಣನ ಉದ್ಧಟತನವನ್ನು ನೀನು ತಿಳಿದು ಬಾ" ಎಂದು ಬಲರಾಮನು ಅಣುವನಿಗೆ ಹೇಳಿದನು. ॥ ೨೩ ॥ ಆಗ ಹನುಮಂತನು ಹೀಗೆಂದನು – "ಎಲೈ ರಾಜನೇ ದಕ್ಷಿಣ ದಿಕ್ಕಿನಲ್ಲಿರುವ ಜನನಾಯಕರನ್ನೂ ಮಾಂಡಲಿಕರನ್ನೂ ರಕ್ಷಿಸುವಂತಹ

---

[1] ನಱಸುತಲವನೆ (ಚ) [2] ಪೋದಡೆ (ಚ). [3] ಕಾರ್ಯ್ಯವಹುದೆಂದು (ಕ) [4] ನಿನ್ನ (ಕ) [5] ಪಲ್ಲವ ಕಾಣುವೆವೆಂದು (ಗ) [6] ಉಡುಗೊಱೆಯಿತ್ತು (ಗ ಚ). [7] ನೀನಂಜಬೇಡೆಂದು (ಗ) . ವೇಡೆಂದು (ಚ) [8] ನೂಕುವೆನೆಂದನವನು (ಕ) [9] ಳೆನುತವನಂ (ಕ). [10] ನಿಮಗೆ (ಚ). [11] ನಮಗೆ (ಚ). [12] ಹೃದದ್ರವನಾ (ಕ ಚ).

ದಕ್ಷಿಣದೆಸೆಯ ಮನ್ನೆಯರ ಮಂಡಳಿಕರ । ರಕ್ಷಿಪ ರಾವಣನೃಪನ ॥
ದಕ್ಷತೆಯನು ನಾ ನಿಲಿಸಿಯವಗೆ ತಕ್ಕ । ಶಿಕ್ಷೆಯ ಮಾಡುವೆ ನೃಪತಿ ॥ ೭೪ ॥

ಹೊತ್ತುಹೋಕಿನ ಮಾತಲ್ಲ ಲಂಕೇಶನ । ತತ್ತಱದಱಿದು ನಾನಿನ್ನ ॥
ಚಿತ್ತೇಶ್ವರಿಯನು ತಾರದಿರ್ದೊಡೆ ನಿ । ನ್ನೊತ್ತಿನಿಂ ಪೊಱಮಡಿಸೆಂದ ॥ ೭೫ ॥

ಪಿಡಿಯಾಳಾಗಿ[1] ತಂದೊಪ್ಪಿಸೆನುತ ನೀ । ನುಡಿ ನುಡಿಯದ ಮುನ್ನವವನ[2] ॥
ಪಿಡಿದು[3] ತಂದೊಪ್ಪಿಸದಿರೆ ನಿನ್ನವನೆಂದು । ಪಿಡಿಯ[4] ಬೇಡೆನ್ನ ನೀ ನೃಪತಿ ॥ ೭೬ ॥

ಸುಟ್ಟು ಸೂಱೆಯ ಹೊಯ್ದು ಲಂಕೆಯ ಹೆಡಗೈಯ । ಕಟ್ಟಿ ರಾವಣ ನೃಪವರನ ॥
ನೆಟ್ಟನೆ ತಂದೊಪ್ಪಿಸುವೆನೆಂದಂಘ್ರಿಯ । ಮುಟ್ಟಿದನಣುವ ರಾಘವನ ॥ ೭೭ ॥

ಅನಿತು ವಿಕ್ರಮ ನೀನಲ್ಲವೆ ನಿನಗೇ । ಕಿನಿತು ಕೋಪಾಟೋಪ ಬೇಡ ॥
ಜನವಱಿಕೆಯಲೀ[5] ಧರೆಯ ಮೆಚ್ಚಿಸಿ ನನ್ನ[6] । ವನಿತೆಯ ತಹುದದು ಕಾರ್ಯ ॥ ೭೮ ॥

ಕಳವೆಂಬುದು ರಾವಣನಿಗಲ್ಲದೆ ಮ । ತ್ತುಳಿದ ವೀರರಿಗೆ ಸಲುವುದೆ ॥
ಇಳೆ ಮೆಚ್ಚೆ ಜಾನಕಿಯನು ತಹುದೆಂದಾ । ಯಿಳೆಯಾಣ್ಮನಾಡಿದನಬಲೆ ॥ ೭೯ ॥

ಬಂಡಣವನು ಮಾಡಲಮ್ಮದೆ ತಾ ತನ್ನ । ಚಂಡಿಯ ಲಂಕೆಯಿಂ ಕಳ್ದು ॥
ಕೊಂಡು ಬಂದ[7] ಗಡೆಂಬ ಪರಿಹಾಸದ[8] ಬಲು । ಭಂಡಾಟಕೀಡಾಗಬಹುದೆ ॥ ೮೦ ॥

---

ರಾವಣನ ಸಾಮರ್ಥ್ಯವನ್ನು ಕೊನೆಗೊಳಿಸಿ, ನಾನು ಅವನಿಗೆ ತಕ್ಕ ಶಿಕ್ಷೆಯನ್ನು ಮಾಡುವೆನು ॥ ೭೪ ॥ ಇದು ಹೊತ್ತು ಕಳೆಯಲು ಆಡಿದ ಮಾತಲ್ಲ ಆ ರಾವಣನನ್ನು ನಾನು ಸಿಕ್ಕಿದಂತೆ ಕತ್ತರಿಸಿ, ನಿನ್ನ ಮಡದಿಯನ್ನು ತರುವೆನು. ತಾರದಿದ್ದರೆ ನನ್ನನ್ನು ನಿನ್ನ ಬಳಿಯಿಂದಲೇ ಓಡಿಸು ॥ ೭೫ ॥ ಆ ರಾವಣನನ್ನು ಸೆರೆಯಾಳಾಗಿ ತಂದೊಪ್ಪಿಸಲು ನನಗೆ ಆಜ್ಞೆಮಾಡು ನೀನು ಆಜ್ಞೆಮಾಡುವುದರೊಳಗಾಗಿಯೇ ನಾನು ಅವನನ್ನು ಹಿಡಿದು ತಂದು ಒಪ್ಪಿಸುವೆನು, ಹಾಗೆ ತಂದೊಪ್ಪಿಸದಿದ್ದರೆ ನಾನು ನಿನ್ನವನಲ್ಲವೆಂದು ತಿಳಿ. ॥ ೭೬ ॥ ಆ ಲಂಕೆಯನ್ನು ಸುಟ್ಟು ಸೂರೆಮಾಡಿ, ರಾವಣರಾಜನನ್ನು ಹೆಡಗೈಕಟ್ಟಿ ನೇರ-ವಾಗಿ ತಂದು, ನಿನಗೆ ಒಪ್ಪಿಸುವೆನು" ಎಂದು ಅಣುವನು ಶ್ರೀರಾಮನ ಪಾದವನ್ನು ಮುಟ್ಟಿ ಹೇಳಿದನು. ॥ ೭೭ ॥ ಆಗ ಶ್ರೀರಾಮನು – "ಎಲೈ ಅಣುವನೇ, ನೀನು ಅಷ್ಟೊಂದು ಶೌರ್ಯವುಳ್ಳವನೆಂದು ಬಲ್ಲೆನು. ಇಷ್ಟೊಂದು ಕೋಪದ ಮಾತು ಆವಶ್ಯಕವಿಲ್ಲ ಲೋಕದ ಜನರೆಲ್ಲರೂ ತಿಳಿಯುವಂತೆ ಈ ಲೋಕವೇ ಮೆಚ್ಚುವಂತೆ ನನ್ನ ಮಡದಿಯನ್ನು ತರುವುದೇ ಯೋಗ್ಯ ಕಾರ್ಯವು ॥ ೭೮ ॥ ಕಳ್ಳತನವೆಂಬುದು ಆ ರಾವಣನಿಗೆ ಮಾತ್ರ ಒಪ್ಪತಕ್ಕುದಲ್ಲದೆ, ಉಳಿದ ವೀರರಿಗೆ ಯೋಗ್ಯ ವಾದುದಲ್ಲ ಆದುದರಿಂದ ಲೋಕವು ಮೆಚ್ಚುವಂತೆ ವರ್ತಿಸಿ, ಸೀತೆಯನ್ನು ತರಬೇಕು" ಎಂದು ಶ್ರೀರಾಮನು ಹೇಳಿದನು ॥ ೭೯ ॥ "ಯುದ್ಧವನ್ನು ಮಾಡಲಾರದೆ, ಶ್ರೀರಾಮನು ಲಂಕೆಯಿಂದ ತನ್ನ ಮಡದಿಯನ್ನು ಕದ್ದುಕೊಂಡು ಬಂದನಂತೆ !" ಎಂಬ ಪರಿಹಾಸದ ಮಾತಿನ ತೊಂದರೆಗೆ ನಾವು ಈಡಾಗಬಾರದು ॥ ೮೦ ॥ "ದುಷ್ಟನಾದ ರಾವಣನು ಸೀತೆಯನ್ನು ಕದ್ದು ಕೊಂಡು ಹೋದನಂತೆ, ಆ ರಾಮನು ಇದಕ್ಕೆ ಪ್ರತಿಯಾಗಿ ಮೋಸದಿಂದಲೇ ಸೀತೆಯನ್ನು ಲಂಕೆಯಿಂದ ಕೊಂಡು ಹೋದನಂತೆ !" ಎಂದು ನನ್ನನ್ನು ಲೋಕದ ಜನರು ನಗರೆ? ॥ ೮೧ ॥ ಆದುದರಿಂದ ನಾನೊಬ್ಬನೇ ಅನೇಕ ಸೈನ್ಯವನ್ನು

---

[1] ಪಡಿಯಾಳಾಗಿ (ಕ.ಚ) [2] ಮುನ್ನಲವನ (ಗ ಚ) [3] × (ಗ ಚ) [4] ಕೈವಿಡಿಯ (ಗ ಚ) [5] ಜನವಱಿಕೆಯೊಳು (ಚ)
[6] ನಮ್ಮ (ಕ) [7] ಪೋದ (ಕ) [8] ಪರಿಹಾಸಕರ (ಚ)

ಕೊಂಡು ಪೋದನು ಗಡ ಕಳ್ದು ಸೀತೆಯನು । ದ್ದಂಡ ರಾವಣ ಮಗುಳ್ದ*ವಳ ॥
ಕೊಂಡು ಪೋದ ಗಡ ವಂಚಿಸಿ ರಾಮನೆಂದು ಭೂ । ಮಂಡಲ ನಗರೆ ಕೇಳಿನ್ನ[1] ॥ ೮೧ ॥

ಏಕೋದರನಾಗಿ[2] ನಡೆದು ಲಂಕೆಯ ಪೊಕ್ಕ । ನೇಕ ಬಲವ ಕೂಡಿಕೊಂಡು ॥
ನಾಕನಾಯಕ ಮೆಚ್ಚುವಂತೆ ತಂದಪೆ ನಿ । ನ್ನಾಕೆಯ[3]ನೆಂದನಾ ನೃಪತಿ ॥ ೮೨ ॥

ಅಹುದಹುದೆಲೆ ಜೀಯ ನಿಮ್ಮಡಿಗಳ ಮಾತು । ಸಹಜವೆಂದದಕೊಡಂಬಟ್ಟು[4] ॥
ಬಹು ಮಾತಿಂದೇನು ಫಲವೆಂದವನಾ । ಮಹಿಪತಿಯೊಡನಾಡಿದನು ॥ ೮೩ ॥

ಅಱಿತು ಜಾನಕಿಯಿರ್ದ ಸೆಱೆವನೆಯನದೋರ್ವ[5] । ರಱಿಯದಂದದೊಳಾನು ಪೊಕ್ಕು ॥
ಮಱೆಯೇನು[6] ನೋಡಿ ಬಂದಪೆನೆಂದವನೊಳು । ಹೊಱಗೆಯ[7] ಮಾತನಾಡಿದನು ॥ ೮೪ ॥

ಕೊಡು ಮುದ್ರಿಕೆಯ ಸೀತಾದೇವಿಯೊಳು ನಾ[8] । ನುಡಿವುದನೀ ಬುದ್ಧಿಗಲಿಸು[9] ॥
ಬಿಡು ಮನಸಿನ[10] ಖೇದವನೆಂದು ಖೇಚರ[11] । ನುಡಿದನು ರಾಮಚಂದ್ರಮಗೆ ॥ ೮೫ ॥

ಕಿಱುವೆರಲಿನ ಮುದ್ರಿಕೆಗೊಟ್ಟು[12] ಸೀತೆಯ । ಕುಱುಹುಗಳನು ವಿವರದೊಳು ॥
ಅಱುಪಿಯಣುವಗೆ ರಾಘವನೊಯ್ಯನೆ ಮನ । ದೆಱಕದಿಂ ಬೀಳ್ಕೊಟ್ಟನಬಲೆ ॥ ೮೬ ॥

ಕಳುಹಿಸಿಕೊಂಡು ಗಗನಗಾಮಿನಿಯಿಂ । ತಳುವದೆ ನೆಗೆದನಾಗಸಕೆ[13] ॥
ಅಳುಕದೆ ಲಂಕೆಯ ದೆಸೆಗಾಗಿ ಪೋದನು । ಜಲಧಿಯ ಕೆಲವಂತರದೊಳು[14] ॥ ೮೭ ॥

---

ಕೂಡಿ, ಆ ಮೇಲೆ ಲಂಕೆಗೆ ನಡೆದು, ದೇವೇಂದ್ರನು ಮೆಚ್ಚುವ ರೀತಿಯಲ್ಲಿ ಸೀತೆಯನ್ನು ತರುವೆನು" ಎಂದು ಶ್ರೀರಾಮನು ಹೇಳಿದನು. ॥ ೮೨ ॥ ಆಗ ಹನುಮಂತನು – "ಎಲೆ ಜೀಯ, ಹೌದು ಹೌದು; ನಿಮ್ಮ ಮಾತು ಸಹಜವಾದುದು" ಎಂದು ಆ ಮಾತಿಗೆ ಒಪ್ಪಿ, ಹೆಚ್ಚು ಮಾತಾಡಿ ಫಲವೇನು ಎಂದು ರಾಮನೊಡನೆ ಹೇಳಿದನು. ॥ ೮೩ ॥ ಜಾನಕೀ ದೇವಿಯಿರುವ ಸೆರೆಮನೆಯನ್ನು ತಿಳಿದು, ಯಾರಿಗೂ ತಿಳಿಯದಂತೆ ನಾನು ಅಲ್ಲಿಗೆ ಹೋಗಿ, ನೋಡಿ ಬರುವೆನು – ಎಂದು ಹನುಮಂತನು ರಾಮನೊಡನೆ ಶೌರ್ಯದ ಮಾತನ್ನಾಡಿದನು. ॥ ೮೪ ॥ ಉಂಗುರವನ್ನು ಕೊಡು, ಸೀತಾದೇವಿಯೊಡನೆ ನಾನು ಏನೆನ್ನಬೇಕೆಂಬುದನ್ನು ತಿಳಿಸು, ಮನಸ್ಸಿನ ವ್ಯಥೆಯನ್ನು ಬಿಡು – ಎಂದು ಆ ಖೇಚರರೊಡೆಯನಾದ ಅಣುವನು ಹೇಳಿದನು. ॥ ೮೫ ॥ ಎಲೈ ಚೇಳಿನಿಯೇ, ಆಗ ಶ್ರೀರಾಮನು ತನ್ನ ಕಿರುಬೆರಲಿನಲ್ಲಿ ಇದ್ದ ಉಂಗುರವನ್ನು ಕೊಟ್ಟು, ಸೀತೆಯ ಕುರುಹುಗಳನ್ನು ವಿವರವಾಗಿ ತಿಳಿಸಿ, ಮನಃಪೂರ್ವಕವಾಗಿ ಹನುಮಂತನನ್ನು ಬೀಳ್ಕೊಟ್ಟನು. ॥ ೮೬ ॥ ಹನುಮಂತನು ಅಲ್ಲಿಂದ ಹೊರಟು, ಒಡನೆಯೇ ತನ್ನ ಆಕಾಶಗಾಮಿನೀ ವಿದ್ಯೆಯಿಂದ ಆಕಾಶಕ್ಕೆ ನೆಗೆದು, ನಿರ್ಭಯನಾಗಿ ಲಂಕೆಯ ಕಡೆಗಾಗಿ ಸಮುದ್ರದ ಮೇಲುಗಡೆ ದೂರ ಹೋದನು. ॥ ೮೭ ॥ ಎಲೈ ಚೇಳಿನಿಯೇ, ಆ ಲಂಕೆಯು ಸಮುದ್ರದ ನಡುವೆ ಹದಿಮೂರು ಯೋಜನದಷ್ಟು ಉದ್ದವಾಗಿಯೂ ಒಂಬತ್ತು ಯೋಜನದ ಅಗಲವಾಗಿಯೂ ಇದ್ದು ಸೊಗಸಾಗಿರುವುದು.

---

[1] ಕೇಳಿಂದ (ಗ). ೮೧ನೆಯ ಪದ್ಯ ಕ ದಲ್ಲಿಲ್ಲ [2] ಏಕಾದ್ದುರನಾಗಿ (ಕ.ಚ). [3] ತಂದಪೆನೆಂದಾಕೆಯ (ಕ). [4] ದದಕೊಡಬಟ್ಟು (ಗ.ಚ.). [5] ಯನುಮ್ರೋರ್ವ (ಕ). [6] ಮಱಿಯೆನು (ಗ ಚ) [7] ಪೆಱಗೆಯ (ಗ). [8] ಯೊಳು ನಾನು (ಚ). [9] ಬುದ್ಧಿಗಲಿಸಿ (ಗ). [10] × × (ಗ). [11] ಖೇಚರಸುತ (ಗ). [12] ಮುದ್ರಿಕೆಯ ಕೊಟ್ಟು (ಗ ಚ). [13] ನೆಗೆದಾಗಸಕೆ (ಗ ಚ.). [14] ಕೆಲವಂತರದಲಿ (ಚ).

ವನಧಿಯು ನಡುವೆಯಾ ಪುರ ಪದಿಮೂಱು ಯೋ । ಜನದುನ್ನತಿಯುದಱಗಲ[1] ॥
ವನಿತೆ ಕೇಳೊಂಬತ್ತು ಯೋಜನದಿಂದದು । ವನು[2]ವಡೆದಿಹುದು ಚೆಲ್ವಿಂದ ॥ ೮೮ ॥

ಆ ಪಟ್ಟಣಕೆ ಮೂವತ್ತೆರಡು ಗೋಪುರವವ । ವ್ಯಾಪಿಸುವುದು[3] ವಜ್ರಪರಿಖೆ ॥
ಶ್ರೀಪತಿಯಿರ್ಪ ಪೊಳಲ ಬೈವುತ[4]ಲಿರ್ಪು । ದೇ ಪೊಗಳುವೆ ಪದ್ಮನೇತ್ರೆ ॥ ೮೯ ॥

ಆ ಪಟ್ಟಣವ ಪೊಗುವಾಗಲೊಯ್ಯನೆ ಕಾಮ । ರೂಪಿಣಿ ವಿದ್ಯೆಯಿಂದಣುವ ॥
ಚಾಪಲಲೋಚನೆ ಲಾಲಿಸು ಮಧುಕರ । ರೂಪ ತಳೆದು ನಡೆತಂದ ॥ ೯೦ ॥

ಸಿಂಗರಿಸಿದ ರಾಜಬೀದಿಗಳಿಂ[5] ಪೊಸ । ಕೆಂಗಲ್ಲ ನೆಲೆವಾಡಗಳಿಂ ॥
ಮಂಗಲವಾದ[6] ಪುರವ ನೋಡಿದ ತನ್ನ । ಕಂಗಳ ಬಱ ಬಱಿವಂತು ॥ ೯೧ ॥

ಜಿನಭವನವ ಜಿನಬಿಂಬವನಾ ಜಿನ । ಮುನಿಗಳ ಜಿನಭಕ್ತರುಗಳ ॥
ಜಿನಶಾಸ್ತ್ರಗಳನೋದುವರ ಪೇಳುವರ ತನ್ನ । ಮನದಣಿವಂತೆ ನೋಡಿದನು ॥ ೯೨ ॥

ಕಣ್ಣ್ಗೆ ಮನಕೆ ಸಂತಸವೀವುತಲದು । ವುಣ್ಣದರೂರಿಗೈವಡಿಯು ॥
ಬಣ್ಣದಿಂ ಮೆಱೆವ ಪುರದ ಸಿರಿ ಸೊಬಗನು[7] । ಬಣ್ಣಿಸುತ್ತೈದಿದನಬಲೆ ॥ ೯೩ ॥

ಶಶಿ ರವಿ ವೀಧಿಗಳನು ನೋಡಿ ಮನದಿ ಸಂ । ತಸವಡುತವಱ ಚೆಲ್ವಿಕೆಯು ॥
ಪೊಸಗಾಡಿಯು ನೋಡುತವನೈದಿದನಂ[8] । ದಸಮುಬಾಣನ ಮಸೆದಲಗೆ ॥ ೯೪ ॥

ದೊರೆಗಳ ದುರ್ಗಾಧಿಪತಿಗಳ ನಾಯಕ । ರರಮಕ್ಕಳಳಿಯಂದಿರುಗಳ ॥
ಸಿರಿವಂತರ ಕೇರಿಕೇರಿಯನವನಿ । ತ್ತರದೊಳು ನೋಡುತ್ತೈದಿದನು ॥ ೯೫ ॥

---

॥ ೮೮ ॥ ಎಲೈ ಚೇಳಿನಿಯೇ, ಆ ಪಟ್ಟಣಕ್ಕೆ ಮೂವತ್ತೆರಡು ಗೋಪುರಗಳಿರುವವು ಇವನ್ನು ಆವರಿಸಿಕೊಂಡು ವಜ್ರದ ಆವರಣವಿರುವುದು ಈ ಪಟ್ಟಣವು ತನ್ನ ಚೆಲುವಿನಿಂದ ವೈಕುಂಠವನ್ನು ಜರೆಯುವಂತೆ ಇರುವುದು. ॥ ೮೯ ॥ ಹನುಮಂತನು ಆ ಲಂಕಾಪಟ್ಟಣವನ್ನು ಪ್ರವೇಶ ಮಾಡುವಾಗ ತನ್ನ ಕಾಮರೂಪಿಣೀ ವಿದ್ಯೆಯಿಂದ ತುಂಬಿಯ ರೂಪವನ್ನು ತಾಳಿಕೊಂಡು ಬಂದನು ॥ ೯೦ ॥ ಅಲ್ಲಿ ಅಣುವನು ಶೃಂಗರಿಸಿರುವ ರಾಯಬೀದಿಗಳಿಂದಲೂ, ಹೊಸತಾದ ಕೆಂಪುಗಲ್ಲಿನ ನೆಲೆಮನೆಗಳಿಂದಲೂ, ಮಂಗಳಕರವಾಗಿ ತೋರುವ ಆ ಪಟ್ಟಣವನ್ನು ತನ್ನ ಕಣ್ಣಿಗೆ ತೃಪ್ತಿಯಾಗುವಂತೆ ನೋಡಿದನು ॥ ೯೧ ॥ ಜಿನಾಲಯವನ್ನೂ, ಜಿನಪ್ರತಿಮೆಗಳನ್ನೂ, ಜಿನಮುನಿಗಳನ್ನೂ, ಜಿನಭಕ್ತರನ್ನೂ, ಜಿನಶಾಸ್ತ್ರಗಳನ್ನು ಓದುವವರನ್ನೂ, ಹೇಳುವವರನ್ನೂ ತನ್ನ ಮನಸ್ಸಿಗೆ ತೃಪ್ತಿಯಾಗುವಂತೆ ನೋಡಿದನು. ॥ ೯೨ ॥ ಎಲೈ ಚೇಳಿನಿಯೇ, ಆ ಪಟ್ಟಣವು ಕಣ್ಮನಗಳಿಗೆ ಆನಂದವನ್ನು ಕೊಡುತ್ತ ದೇವಲೋಕಕ್ಕೆ ಐದು ಮಡಿಯ ಶೋಭೆಯಿಂದ ಮೆರೆಯುತ್ತಿತ್ತು. ಆ ಪಟ್ಟಣದ ಕಾಂತಿಯನ್ನೂ, ಚೆಲುವನ್ನೂ ವರ್ಣಿಸುತ್ತ ಹನುಮಂತನು ತೆರಳಿದನು ॥ ೯೩ ॥ ಸೂರ್ಯಕಾಂತಶಿಲೆಯ ಮತ್ತು ಚಂದ್ರಕಾಂತಶಿಲೆಯ ಬೀದಿಗಳನ್ನೂ ಹೊಸ ಸೊಬಗನ್ನೂ ನೋಡುತ್ತ, ಅವನು ಹೋದನು. ॥ ೯೪ ॥ ದೊರೆಗಳು, ದುರ್ಗಗಳ ಒಡೆಯರು, ನಾಯಕರು, ರಾಜಕುಮಾರರು, ಅಳಿಯಂದಿರು, ಶ್ರೀಮಂತರು, – ನೆಲಸಿರುವ ಬೀದಿಗಳನ್ನು ದಾಟುತ್ತ ನೋಡುತ್ತ ಹೋದನು ॥ ೯೫ ॥ ಬೀದಿ ಬೀದಿಗಳಲ್ಲಿ ಚೆಲ್ಲಿದ ರಂಗವಲಿಗಳನ್ನೂ, ಸುಗಂಧದ್ರವ್ಯಗಳ ಸಾರಣೆಗಳನ್ನೂ, ಆಯ್ದು ಮಾಡಿರುವ ಮುತ್ತಿನ

---

1 ತಿರೆಯದರಗಲ (ಚ) 2 ಯೋಜನದಿಂದಂದನು (ಗ ಚ) 3 ವ್ಯಾಪಿಸಿಹುದು (ಚ) 4 ಪಳಿವುತ (ಗ ಚ) 5 ರಾಯಬೀದಿಗಳಿಂ (ಗ) 6 ಮಂಗಲಮಯವಾದ (ಚ) 7 ಮೆಱೆವಾ ಪೊಳಲ ಸಿರಿಯನ್ನವ (ಚ) 8 ನೋಡುತ್ತೈದಿದನವನಂ (ಗ)

ಬೀದಿಬೀದಿಯೊಳು ಸೂಸಿದ ಪೂವಲಿಗಳ । ಸಾದಿನ ಸಾರಣೆಗಳನು ॥
ಆದಿತ್ತ ಮುತ್ತಿನ ಕಡೆಯ ನೋಡುತ ಬಂದ । ನಾದರದಿಂದವನಬಳಿ ॥ ೯೬ ॥

ನಡವಳಿಕಾಱರ ನಾಯಕ ಮಕ್ಕಳ । ಪೊಡವಿಪತಿಗಳ ಮಂತ್ರಿಗಳ ॥
ಗಡಿಯ ಮನ್ನೆಯರ ತೇಜಿಷ್ಠರ ಕೇರಿಯ । ಗಡಣವ ಕಂಡನಂದಣುವ[1] ॥ ೯೭ ॥

ಬಣ್ಣದಾವರೆ[2]ಮೆಯ್ಯ ಬಲುಮೊಲೆಗಳ ನಿಡು । ಗಣ್ಣ ಗಜೋಪಮಗತಿಯ ॥
ನುಣ್ಣಿದಮಪ್ಪ ನುಡಿಯ ನುಣ್[3] ನೊಸಲ ಮುದ್ದು । ಪೆಣ್ಣ ನೋಡುತ ನಡೆತಂದ ॥ ೯೮ ॥

ಮಿಱುಗುವ ಮಣಿಮಾಡದಗ್ರದಿಂ[4] ಕಟ್ಟಿ ಬಾಂ । ದೊಱೆಯನಲೆವ ಕೇತನದ ॥
ತೆಱನ ನೋಡುತ ನಡೆತಂದನವನು ಬಲು । ವೆಱೆವೊಗದಬಲಾ ಮಣಿಯೆ ॥ ೯೯ ॥

ಸಿರಿಗಂದವನರೆವವರನಿರದೆ ಕ । ಮ್ಮರಲ್ಗಳ ನಾನಾಬಗೆಯ ॥
ಪರಿಮಲಗಳ ಮಾಱುವವರ ನಿಟ್ಟಿಸುತಲಂ । ದಿರದಂ[5]ದೈದಿನಬಳಿ ॥ ೧೦೦ ॥

ರನ್ನದ ಗೋಪುರ[6] ನಿಚಯಗಳಿಂ ಪೊಸ । ಪೊನ್ನ ಬಾಗಿಲ್ವಾಡದಿಂದ ॥
ಮುನ್ನೀರಣುಗಿಯ[7] ತವುರೆನಿಪರಮನೆ[8] । ಯನ್ನೋಡುತವನೈದಿದನು[9] ॥ ೧೦೧ ॥

ಜನನಾಥನಟ್ಟಿದ ಕರಿತುರಗವ ಜಾತಿ । ವನಿತಾ ರತ್ನಂಗಳನು ॥
ಮನುಜರು ತಂದು ಕಾಯ್ದಿರ್ಪ ನೃಪತಿಯರ । ಮನೆಯ ಬಾಗಿಲ ಪೊಕ್ಕನವನು ॥ ೧೦೨ ॥

---

ರಂಗೋಲೆಗಳನ್ನೂ ನೋಡುತ್ತ ಬಂದನು. ॥ ೯೬ ॥ ಹನುಮಂತನು ಆ ಲಂಕೆಯಲ್ಲಿ ನಡೆವಳಿಕಾರರ, ನಾಯಕರ ಮಕ್ಕಳ, ರಾಜರುಗಳ, ಮಂತ್ರಿಗಳ, ಗಡಿಯ ಮುಖಂಡರ, ತೇಜೋವಂತರ ಬೀದಿಗಳನ್ನು ನೋಡಿದನು. ॥ ೯೭ ॥ ಬಣ್ಣದಾವರೆಯಂತಹ ಶರೀರದ, ದೊಡ್ಡದಾದ ಕುಚಗಳ, ನೀಳವಾದ ಕಣ್ಣಿನ, ಆನೆಯಂತಹ ನಡಿಗೆಯ, ನಯವಾದ ಮಾತಿನ, ನುಣ್ಣಗಾದ ಹಣೆಯ, ಮೋಹಕರವಾದ ಹೆಂಗುಸರನ್ನು ನೋಡುತ್ತ ಬಂದನು. ॥ ೯೮ ॥ ಎಲೈ ಚೇಳಿನಿಯೇ, ಹೊಳೆಯುವ ರತ್ನಗೃಹಗಳ ತುದಿಗೆ ಕಟ್ಟಿ ಆಕಾಶಗಂಗೆಯನ್ನು ಮುಟ್ಟುವ ಧ್ವಜಗಳನ್ನು ನೋಡುತ್ತ ಅವನು ಮುಂದೆ ನಡೆದನು. ॥ ೯೯ ॥ ಶ್ರೀಗಂಧವನ್ನು ತೇಯುವವರನ್ನೂ, ಸುವಾಸನೆಯುಳ್ಳ ಹೂಗಳನ್ನು ಮಾರುವವರನ್ನೂ, ಪರಿಮಳದ್ರವ್ಯಗಳನ್ನು ವಿಕ್ರಯ ಮಾಡುವವರನ್ನೂ ನೋಡುತ್ತ ಹೋದನು. ॥ ೧೦೦ ॥ ರತ್ನದ ಗೋಪುರಗಳಿಂದಲೂ, ಹೊಸ ಚಿನ್ನದ ಬಾಗಿಲ್ವಾಡಗಳಿಂದಲೂ ಲಕ್ಷ್ಮೀದೇವಿಯ ತವರುಮನೆಯೆನಿಸುವ ಅರಮನೆಯನ್ನು ನೋಡುತ್ತ ಹೋದನು. ॥ ೧೦೧ ॥ ಇತರ ರಾಜರು ಕಳುಹಿದ ಆನೆ ಕುದುರೆಗಳನ್ನೂ ಒಳ್ಳೆಯ ಜಾತಿಯ ಸ್ತ್ರೀಯರನ್ನೂ ಅವರ ದೂತರು ತಂದು ಸಮಯವನ್ನು ಕಾಯುತ್ತಿರುವ ಅರಮನೆಯ ಬಾಗಿಲನ್ನು ಅಣುವನು ಹೊಕ್ಕನು. ॥ ೧೦೨ ॥ ಎಡಕ್ಕೆ ಒತ್ತು, ಬಲಕ್ಕೆ ಹೋಗು, ಎದುರಿಗೆ ಸಾರು – ಎಂದು ಬೊಬ್ಬಿಡುವ ದ್ವಾರಪಾಲಕರು ಕಾಣಿಸುತ್ತಿರಲು, ಆ ರಾವಣನ ಓಲಗದ ಸೊಬಗನ್ನು ಅಣುವನು ನೋಡಿದನು. ॥ ೧೦೩ ॥ ಶತ್ರುರಾಜರು ರಾವಣನಿಗೆ ಹೆದರಿ, ಕಳುಹಿಸಿದ ಉಡುಗೊರೆಗಳನ್ನು ತಂದ ಜನರನ್ನು ಕಾಣಿಸಿ,

---

[1] ನಂದಣುವನು (ಗ ಚ). [2] ಬಣ್ಣವಾದರೆ (ಗ). [3] ನುಣ್ನುಡಿಯ (ಕ). [4] ಮಾಡದಗ್ರದಿಂ (ಗ). [5] ನಿಟ್ಟಿಸುತಲಾದರದಿಂ (ಗ ಚ.). [6] ಕರುಮಾಡ (ಗ) ಕರುವಾಡ (ಚ). [7] ರಣುಗೆಯ (ಚ) [8] ತವರೆನಿಪರಮನೆ (ಗ) ತವರೆನಿಪರಮನೆ (ಚ). [9] ನೋಡುತ್ತೈದಿದನವನು (ಗ)

ಎಡಬಲಕೊತ್ತು ಸಾ[1]ಸಮ್ಮುಖವೆಂದು । ಗ್ಗಡಿಸುವ ಪಡಿಯರುಗಳ ॥
ಗಡಣವೆಸೆಯೆ ದಶಕಂಠನೋಲಗದೊಂದು । ಬೆಡಗ ನೋಡಿದನವನಬಲೆ ॥ ೧೦೩ ॥

ಕಡೆಯ ಬಾಗಿಲೊಳರಿರಾಯರಟ್ಟಿದ ಪಾ । ವುಡಗಳ ತಂದಿರ್ಪ ಜನರ ॥
ಗಡಣವ ತಂದು ಕಾಣಿಸಿ ಕಳುಹುತಲಿರ್ಪ । ಪಡಿಯರನು ಕಂಡನವನು ॥ ೧೦೪ ॥

ಕೂರಾನೆಗಳ ಜಾತಿ ತುರಗವ ರೂಪುಳ್ಳ । ನಾರಿಯರನು ತಂದೊಪ್ಪಿಸುವ ॥
ಆ ರಾಯಭಾರಿಗಳನು ಕಂಡನವನಂ । ದಾ ರಾಯನೋಲಗದೊಳಗೆ ॥ ೧೦೫ ॥

ಕಾಲವರಿಂದ ಮೇಲವರಿಂದಾ ಜನ । ಪಾಲಕ ನಿಚಯಗಳಿಂದ ॥
ಲೋಲಲೋಚನೆಯರ ಸಮುದಾಯದಿಂದವ । ನೋಲಗವನು ಕಂಡನವನು ॥ ೧೦೬ ॥

ಗಾಣರಿಂ[2] ಗರುವರಿಂ ಗಡಿಯ ಮನ್ನೆಯರಿಂದೆ । ಕ್ಷೋಣೀಶ್ವರರುಗಳಿಂದ ॥
ಜಾಣರಿಂ ಜಗಜಟ್ಟಿಗಳಿಂದೋಲಗವನು[3] । ಮಾಣದೆ ಕಂಡನಂದವನು ॥ ೧೦೭ ॥

ಎಂಟು ದೆಸೆಯ ದಿಕ್ಪಾಲಕರವನಿಗೆ । ಬಂಟರಾದರು ನವಗ್ರಹರು[4] ॥
ತುಂಟತನವ ಬಿಟ್ಟರೆ ಕಂಡಿವಗೆಣೆ[5] । ಯುಂಟೆ ಯೆಂದಣುವ ಪೊಗಳಿದ ॥ ೧೦೮ ॥

ನೋಡಿದನವನೋಲಗದ ಕಟ್ಟುಮಟ್ಟನು । ನೋಡಿದನವನೈಸಿರಿಯ ॥
ನೋಡಿದ ಗುಣಕೆ ಮಚ್ಚರವೆಯೆಂದವ ಕೊಂ । ಡಾಡಿದನಣುವ ರಾವಣನ ॥ ೧೦೯ ॥

ಏನಾದೊಡೇನೊ ರಾವಣ ನೃಪವರ ಪರ । ಮಾನಿನಿಗಳುಪಿದನದಱಿಂ ॥
ಏನು ನಿಂದಪುದೀ[6] ಸಿರಿಯೆಂದವ ತನ್ನ । ಮಾನಸದೊಳು ನೊಂದನಬಲೆ ॥ ೧೧೦ ॥

---

ಹಿಂದಕ್ಕೆ ಕಳುಹುತ್ತಿದ್ದ ಪ್ರತೀಹಾರಿಗಳನ್ನು ಕಡೆಯ ಬಾಗಿಲಿನಲ್ಲಿ ಕಂಡನು. ॥ ೧೦೪ ॥ ರಾವಣನ ಸಭೆಯಲ್ಲಿ
ರಾಜರ ರಾಯಭಾರಿಗಳು ಕ್ರೂರಗಜಗಳನ್ನೂ, ಜಾತ್ಯಶ್ವಗಳನ್ನೂ, ಸುಂದರ ಸ್ತ್ರೀಯರನ್ನೂ ತಂದೊಪ್ಪಿಸುತ್ತಿದ್ದರು
ವನು ಇವನ್ನೆಲ್ಲ ಕಂಡನು. ॥ ೧೦೫ ॥ ಕಾಲಾಳುಗಳಿಂದ, ಮೇಲಾಳುಗಳಿಂದ, ರಾಜಸಮೂಹದಿಂದ. ಸ್ತ್ರೀಸಮೂಹ
ಕೂಡಿದ ರಾವಣನ ಓಲಗವನ್ನು ಅವನು ಕಂಡನು ॥ ೧೦೬ ॥ ಗಾಯಕರಿಂದಲೂ, ಗೌರವಶಾಲಿಗಳಿಂದಲೂ,
ರಾಜ್ಯದ ಮೇರೆಯಲ್ಲಿರುವ ಜನನಾಯಕರಿಂದಲೂ, ರಾಜರುಗಳಿಂದಲೂ, ಚತುರರಿಂದಲೂ, ಕುಸ್ತಿವಿದ್ಯೆಯವರಿಂದಲೂ ಕೂ
ರಾವಣನ ರಾಜಸಭೆಯನ್ನು ಅಣುವನು ಕಂಡನು ॥ ೧೦೭ ॥ ಅಷ್ಟದಿಕ್ಪಾಲರು ರಾವಣನ ಕಿಂಕರರಾಗಿದ್ದರು. ನವಗ್ರ
ಅವನಿಗೇನೂ ಬಾಧೆಯನ್ನು ಮಾಡದವರಾಗಿದ್ದರು ದುರುಳತ್ವವನ್ನು ಬಿಟ್ಟಿದ್ದರೆ, ಈ ರಾವಣನಿಗೆ ಸರಿಸಮಾನರು ಯ
ಇಲ್ಲವೆಂದು ಅಣುವನು ಅವನನ್ನು ಹೊಗಳಿಕೊಂಡನು. ॥ ೧೦೮ ॥ ಹನುಮಂತನು ರಾವಣನ ಓಲಗದ ರೀತಿಯ
ವೈಭವವನ್ನೂ ನೋಡಿ, ಗುಣಕ್ಕೆ ಮತ್ಸರವಿಲ್ಲವೆಂಬಂತೆ ಅವನನ್ನು ಹೊಗಳಿಕೊಂಡನು ॥ ೧೦೯ ॥ ಎಲ್ಲೈ ಚೆಲುವಿನ
ಏನಾದರೇನು? ರಾವಣನುಪರಸ್ತ್ರೀಯಲ್ಲಿ ಮೋಹವಿಟ್ಟನು ಆದುದರಿಂದ ಈ ಐಶ್ವರ್ಯವು ಇವನಲ್ಲಿ ನೆಲೆನಿಲ್ಲಲಾರದು – ಎ
ಅಣುವನು ಮನಸ್ಸಿನಲ್ಲೇ ನೊಂದುಕೊಂಡನು ॥ ೧೧೦ ॥ ರಾವಣನು ಶ್ರೀರಾಮನ ಮಡದಿಯಲ್ಲಿ ಆಸಕ್ತನಾಗಿ ತನ್ನ ಪ
ಯನ್ನೇ ಕೆಡಿಸಿಕೊಂಡನು ಇವನಿಗೆ ಕೇಡು ಅಡಸಿ ಬಂದಿದೆ – ಎಂದು ತನ್ನಲ್ಲೇ ನೊಂದು ನುಡಿದನು. ॥ ೧೧೧ ॥ ಈ ಐಶ್ವ

---

[1] ಎಡಬಲಕೊಗೆದು ನೋಡಿಯು (ಕ) [2] ಜಾಣರಿಂ (ಗ) [3] ಜಗಜಟ್ಟಿಗಳಿಂದಲೆಸೆವನ (ಕ). [4] ಗ್ರಹವು (ಕ ಚ) [5] ಕಂಡಿವನಿಗೆಣೆ

ಕೆಡಿಸಿಕೊಂಡನು ರಾವಣ ಶ್ರೀರಾಮನ । ಮಡದಿಗಳುಪಿಯೀ ಪದವ ॥
ಅಡಸಿ ಬಂದಿದೆ ಕೇಡಿನ್ನೆಂದು ನೊಂದಾಗ । ನುಡಿದನು ತನ್ನೊಳು ತಾನೆ ॥ ೧೧೧ ॥

ಕೆಟ್ಟಿತಿನ್ನೇಕೀ[1] ಸಿರಿಯೆಂದವ ಮನ । ಮುಟ್ಟಿ ನುಡಿವುತಾ ಯೆಡೆಯ ॥
ಬಿಟ್ಟರಮನೆಯುಪ್ಪರಿಗೆಯೇಱಿ ನೋಡಿದ । ಪಟ್ಟಣದೆಂಟು ದೆಸೆಯನು ॥ ೧೧೨ ॥

ಅಲ್ಲಲ್ಲಿ ನೋಡಿ ಕಾಣದೆ ಸೀತಾದೇವಿ । ಯೆಲ್ಲಿರ್ಪಳೆನುತ ಚಿಂತಿಸುತ ॥
ತಲ್ಲಣಗೊಂಡು ನಿಟ್ಟಿಸುತಿರೆ ವನತತಿ । ಯಲ್ಲಿ ಸರ್ವರ್ತುಕವೆಂಬ[2] ॥ ೧೧೩ ॥

ನಂದನದೊಳು ಖೇಚರಿಯರುಗಳ ಬಲು । ಸಂದಣಿಯಿಂದ ಸಖಿಯರ ॥
ಗೊಂದಣವನು ಕಂಡಲ್ಲಿಗವನು ತನ್ನ । ಸಂದೇಹದಿಂ ಬಂದನಬಲಿ ॥ ೧೧೪ ॥

ಆ ಸರ್ವರ್ತುಕವೆಂಬ[2] ವನದೊಳಿರ್ಪು । ದಾ ಸಿರುಷದ[3] ವೃಕ್ಷದಡಿಯ[4] ॥
ಆ ಸತಿಯರ[5] ಕಾಪಿನೊಳಗಾಗಿ ಸೆಱೆಯಿ । ರ್ದಾ ಸೀತೆಯ ಕಂಡನವನು[6] ॥ ೧೧೫ ॥

ಮಿಡುಕುವಿಂದ್ರಿಯವ ತಡೆದು ಪರಬೊಮ್ಮವ । ತುಡುಕಿ ಧ್ಯಾನಿಪ[7] ಯೋಗಿಯಂತೆ ॥
ಕಡುಕೂರ್ತ ರಾಮಚಂದ್ರನ ಧ್ಯಾನಿಸುತಿರ್ದ[8] । ಮಡದಿಯ ಕಂಡನಂದಣುವ ॥ ೧೧೬ ॥

ಮಾಸಿದ ಚಿತ್ರದಂದದಿ ಬೂದಿ ಮುಱಿಸಿ । ರ್ಪಾ ಸಪ್ತಾರ್ಚಿಯಂದದೊಳು ॥
ಆಸೆವಟ್ಟನಿಯನ ಮನದಿ ನೆನೆವುತಿ । ರ್ಪಾ ಸೀತೆಯ ಕಂಡನವನು ॥ ೧೧೭ ॥

ಪರಬೊಮ್ಮದ ನೆಲೆಯನು ಧ್ಯಾನಿಸುತಿರ್ದ[8] । ಪರಮಯೋಗಿಯ ಪೋಲು ತನ್ನ ॥
ಪುರುಷನ ನೆನಹಿನೊಳಿರ್ದ ಸೀತೆಯ ಕಂಡು । ಪಿರಿದು ಕೊಂಡಾಡಿದನಣುವ ॥ ೧೧೮ ॥

---

ಇನ್ನೇಕೆ? ಇದು ಕೆಟ್ಟುಹೋಯಿತು! ಎಂದು ಅಣುವನು ಹೃದಯ ಪೂರ್ವಕವಾಗಿ ಹೇಳಿಕೊಂಡು, ಆ ಸ್ಥಳವನ್ನೂ ಬಿಟ್ಟು ಅರಮನೆಯ ಉಪ್ಪರಿಗೆಯನ್ನು ಏರಿದನು. ಅಲ್ಲಿಂದ ಪಟ್ಟಣದ ಎಂಟು ದಿಕ್ಕುಗಳನ್ನೂ ನೋಡಿದನು. ॥ ೧೧೨ ॥ ಅಲ್ಲಲ್ಲಿ ಯಾವ ಕಡೆ ನೋಡಿದರೂ ಜಾನಕಿಯು ಕಾಣಿಸಲಿಲ್ಲ. ಸೀತೆಯೆಲ್ಲಿರುವಳೋ ಎಂದು ಚಿಂತಿಸುತ್ತ ಬೇಸರಗೊಂಡವನಾಗಿ ಅಣುವನು ನೋಡುತ್ತ ಇದ್ದನು. ಆಗ ಅವನು ವನಗಳ ಸಮೂಹದಿಂದ 'ಸರ್ವರ್ತುಕ' ಎಂಬ ಉದ್ಯಾನದಲ್ಲಿ ಖೇಚರಿಯರ ಸಮೂಹದಿಂದ ಕೂಡಿದ ಹೆಂಗೆಳೆಯರ ಗುಂಪನ್ನು ಕಂಡು, ಸಂಶಯಪಟ್ಟು ಅಣುವನು ಅಲ್ಲಿಗೆ ಬಂದನು. ॥ ೧೧೪ ॥ ಆ ಸರ್ವರ್ತುಕ ಎಂಬ ಉದ್ಯಾನದಲ್ಲಿ ಒಂದು ಶಿರೀಷ ವೃಕ್ಷದ ಕೆಳಗೆ, ಹೆಂಗುಸರ ಕಾವಲಿಗೆ (ರಕ್ಷಣೆಗೆ) ಒಳಗಾಗಿ ಸೆರೆಯಲ್ಲಿ ಇದ್ದ ಸೀತೆಯನ್ನು ಅವನು ಕಂಡನು. ॥ ೧೧೫ ॥ ಸಂಚಲವಾದ ಇಂದ್ರಿಯಗಳನ್ನು ತಡೆದು, ಪರಬ್ರಹ್ಮ ಧ್ಯಾನದಲ್ಲಿರುವ ಯೋಗಿಯೋ ಎಂಬಂತೆ, ಚೆನ್ನಾಗಿ ಪ್ರೀತಿಸುವ ರಾಮನನ್ನೆ ಧ್ಯಾನಿಸುತ್ತಿದ್ದ ಸೀತೆಯನ್ನು ಅಣುವನು ಕಂಡನು. ॥ ೧೧೬ ॥ ಮಸುಕಾದ ಚಿತ್ರದಂತೆಯೂ ಬೂದಿ ಮುಸುಕಿದ ಕೆಂಡದಂತೆಯೂ ಇದ್ದು, ಆಶಾದಾಯಕ ಭಾವನೆಯಿಂದ ತನ್ನ ಗಂಡನನ್ನು ಧ್ಯಾನಿಸುತ್ತಿರುವ ಸೀತೆಯನ್ನು ಅವನು ಕಂಡನು ॥ ೧೧೭ ॥ ಪರಬ್ರಹ್ಮದ ನೆಲೆಯನ್ನು ಧ್ಯಾನಿಸುತ್ತಿರುವ ಮಹಾಯೋಗಿಯಂತೆ ತನ್ನ ಗಂಡನ ಧ್ಯಾನದಲ್ಲಿದ್ದ ಸೀತೆಯನ್ನು ಕಂಡು ಅಣುವನು ಕೊಂಡಾಡಿದನು. ॥ ೧೧೮ ॥ ಅಣುವನು ಸೀತಾದೇವಿಯ ಹತ್ತಿರ ಬಂದು, ಶ್ರೀರಾಮನು ಹೇಳಿದ್ದ ಆಕೆಯ ಕುರುಹುಗಳನ್ನು ಸ್ಪಷ್ಟವಾಗಿ ಕಂಡು, ಸಂಶಯವನ್ನು ಬಿಟ್ಟು,

---

[1] ಕೆಟ್ಟುದಿನ್ನೇಕೀ (ಚ). [2] ಸರ್ವರ್ತಕವೆಂಬ (ಗ). [3] ಸಿರಿಸದ (ಗ ಚ.). [4] ವೃಕ್ಷವೆಂಬ (ಕ). [5] ಸಖಿಯರ (ಗ.ಚ.). [6] ಕಂಡನಣುವ (ಚ) [7] ತುಡಿಕಿ ಜಾನಿಪ (ಚ). [8] ಜಾನಿಸುತಿರ್ದ (ಚ) ಧ್ಯಾನಿಸುತಿರ್ಪ (ಗ). ೧೧೬, ೧೧೭ ಈ ಪದ್ಯಗಳು ಗ ದಲ್ಲಿಲ್ಲ

ಕಿಱಿದು ಸಮೀಪಕ್ಕೆ ಬಂದು ರಾಘವ ಪೇಳ್ದ । ಕುಱುಹುಗಳವಳಂಗದೊಳಗೆ ॥
ತೆಱೆದರಸಾಗಿರೆ[1] ಕಂಡು ಸಂದೆಗವನು । ತೊಱೆದು ತಾ ಬಂದ ಕಾರ್ಯವನು ॥ ೧೧೯ ॥

ಅಱಿಪುವೆನೆಂದುಜ್ಜುಗಿಪ ಕಾಲದಿ ತುಂಬು । ವೆಱೆ ಮೂಡಲಾಗ ರಾವಣನು ॥
ತುಱುಗಿದ ದೀಪಿಕಾ ಚಕ್ರವೆರಸಿಯು । ಕ್ಕಱು[2]ವಿಗೆ ಬಂದನಾ ಬನಕೆ ॥ ೧೨೦ ॥

ಆ ಅರಸನು ಬಂದುದ ಕಂಡೊಯ್ಯನೆ । ಆ ಅಸುಗೆಯ ತಳಿರೊಳಗೆ ॥
ಆ ಅಣುವಂತ[3]ನಡಗಿ ನೋಡುತಿರಲಲ್ಲಿ । ಆ ಅಂಬುಜಾಕ್ಷಿ ಜಾನಕಿಯ ॥ ೧೨೧ ॥

ಎಡೆಗೆ ಮಂಜರಿಕೆಯೆಂದೆಂಬ ದೂದವಿಯನಾ । ಪೊಡವಿಪ ಕರೆಸಿ ನೀ ಪೋಗಿ ॥
ಒಡಬಡಿಕೆಯ ಮಾಡಿ ಕರೆ ಬಾರದಿರೆ ನೀ । ಪಿಡಿತಹುದೆಂದು ಪೇಳಿದನು[4] ॥ ೧೨೨ ॥

ನಾಕೆಂಟು ಸವಿಮಾತ ಸಂಧಿಸಿ ನುಡಿಯದೆ । ಜೋಕೆಯಱಿಯದೆ ನೀನವಳ ॥
ನೂಕುತಾಕಿಂದ[5] ಕಾತರಿಸಿ ಪಿಡಿದೊಡವ । ಳೇಕೆ ಸೋಲ್ವಳು ಮೂಢರಂತೆ ॥ ೧೨೩ ॥

ಕೂರ್ತರ[6] ಕುಱುಪುವೆರಸಿ ಕಳುಪದೆ ನಿನ್ನ । ಮೂರ್ತಿಯನವಳ್ಗೆ ಕಾಣಿಸದೆ ॥
ಕೂರ್ತ ಕಾಣಿಕೆ ಬರಿಸದೆ ಮೇಲಿಕ್ಕಲು । ಸಾರ್ಥಕವಾಗಿ ಬಂದಪಳೆ ॥ ೧೨೪ ॥

ಸವಿನುಡಿಗಳ ಸಂಧಿಸಿ ನುಡಿಯದೆ ದೂ । ದವಿಯರಿಂ ಮಾತನಾಡಿಸದೆ ॥
ತವಕದಿಂ ಮೇಲಿಕ್ಕಿ ಪಿಡಿದೊಡೆಯವಳೇ । ನವಿವೇಕಿಯಂತೆ ಮೋಹಿಪಳೆ[7] ॥ ೧೨೫ ॥

---

ತಾನು ಬಂದ ಕಾರ್ಯವನ್ನು ತಿಳಿಸಲು ಇಚ್ಛಿಸಿದನು ॥ ೧೧೯ ॥ ತಾನು ಬಂದ ಕಾರ್ಯವನ್ನು ತಿಳಿಸಲು ಅಣುವನು ಉದ್ಯುಕ್ತ-ನಾಗುವ ಸಮಯದಲ್ಲಿ ಪೂರ್ಣಚಂದ್ರನು ಉದಯಿಸಿದನು ಆ ಸಮಯದಲ್ಲಿ ರಾವಣನು ಒತ್ತೊತ್ತಾಗಿರುವ ದೀವಿಗೆಗಳು ಸುತ್ತುವರಿದಿರಲು, ಆ ಉದ್ಯಾನಕ್ಕೆ ಬಂದನು ॥ ೧೨೦ ॥ ರಾವಣನು ಬಂದುದನ್ನು ಹನುಮಂತನು ಕಂಡು, ಅಲ್ಲಿದ್ದ ಅಶೋಕದ ಚಿಗುರುಗಳೆಡೆಯಲ್ಲಿ ಮೆಲ್ಲಗೆ ಅವಿತು ನೋಡುತ್ತಿದ್ದನು ॥ ೧೨೧ ॥ ಆಗ ರಾವಣನು ಮಂಜರಿಕೆ ಎಂಬ ದೂತಿಯನ್ನು ಕರೆದು, ನೀನು ಸೀತೆಯ ಬಳಿಗೆ ಹೋಗಿ ಆಕೆಯು ನನ್ನಲ್ಲಿ ಒಡಂಬಡುವಂತೆ ಮಾಡಿ ಕರೆದು ತಾ. ಬಾರದೆ ಇದ್ದಲ್ಲಿ ಹಿಡಿದು ಎಳೆದುಕೊಂಡು ಬಾ – ಎಂದು ಹೇಳಿದನು. ॥ ೧೨೨ ॥ ಆಗ ಮಂಜರಿಕೆ ಹೀಗೆಂದಳು — ಸೀತೆಯ ಬಳಿಗೆ ಹೋಗಿ ಏಳೆಂಟು ಸವಿಮಾತುಗಳನ್ನು ಆಡದೆ, ಜಾಗರೂಕತೆ ವಹಿಸದೆ, ಅವಳನ್ನು ದರ್ಪ – ಕಾತರಗಳಿಂದ ಹಿಡಿಯಲು ಹೋದರೆ, ಅವಳೇನು ಏನೂ ತಿಳಿಯದವರಂತೆ ಮರುಳಾಗುವಳೆ? ॥ ೧೨೩ ॥ ಪ್ರೀತಿಯ ಜನರನ್ನು ಕುರುಹು ಸಹಿತವಾಗಿ ಅವಳ ಬಳಿಗೆ ಕಳುಹಿಸದೆ, ನಿನ್ನ ಸ್ವರೂಪವನ್ನು ಆಕೆಗೆ ಕಾಣಿಸದೆ, ಪ್ರೀತಿಗೊಂಡ ಸ್ಥಳಕ್ಕೆ ಬರಲು ಹೇಳದೆ ಅವಳ ಮೇಲೆರಗಿದರೆ, ಅವಳು ನಿಜವಾಗಿ ಬರುವಳೇ? ॥ ೧೨೪ ॥ ಅವಳ ಬಳಿಗೆ ಹೋಗಿ ಸವಿಯಾದ ಮಾತುಗಳನ್ನು ಆಡದೆ, ದೂತಿಯರಿಂದ ಮಾತನಾಡಿಸದೆ, ಅವಸರದಿಂದ ಹೋಗಿ ಹಿಡಿದರೆ, ಆಕೆಯು ವಿವೇಕವಿಲ್ಲದವಳಂತೆ ಏನು ಮೋಹಗೊಳ್ಳುವಳೆ? ॥ ೧೨೫ ॥ ಉಡಿಗೆ ತೊಡಿಗೆಗಳನ್ನೂ, ಹೊಸ ಒಡವೆಗಳನ್ನೂ, ದಿಕ್ಕು ಪರಿಮಳಿಸುವಂತಹ ಸುವಾಸನೆಯ ಪುಷ್ಪಗಳನ್ನೂ, ಹೊಸ ವಸ್ತುಗಳನ್ನೂ ಕಳುಹಿಸದೆ, ಆವಸರದಿಂದ ಮೇಲೆ ಬಿದ್ದ ಮಾತ್ರಕ್ಕೆ ಅವಳು ದಾಸಿಯ

---

[1] ತೆಱೆದರಿಸಾಗಿರೆ (ಗ ಚ) [2] ವೆರಸು ಅಕ್ಕಱು (ಕ) [3] ಅಣುವ ತಾ (ಗ) [4] ನುಡಿದನು (ಚ) [5] ನೂಕುರಾಕಿಂದ (ಕ) ನೂಕುತಾಕಿಲ್ಲ (ಗ). [6] × (ಗ) [7] ಯವಳೇಕೆ ಅವಿವೇಕಿಯಂತೆ ಮೋಹಿಪಳು (ಕ) ಯವಳೇನವಿವೇಕಿಯಂತೆ ಮೋಹಿಸಳೆ (ಚ).

ವಸನಾಭರಣವಾದಿಯಪೂರ್ವವಸ್ತುವ । ದೆಸೆ ಕಂಪಿಸುವ ಕಮ್ಮಲರ ॥
ಪೊಸ ವಸ್ತುಗಳ ಕಳುಪದೆ ಮೇಲಿಕ್ಕಲು । ವಶವಾಗುವಳೆ ತೊಳ್ತಿರಂತೆ ॥ ೧೨೬ ॥

ಕುಱುಹಿನ ವಸ್ತುವನಟ್ಟಿ ಕೂರ್ಪವರಿಂದೆ । ಕುಱಿತೆಡೆಗವಳ ಕರಸದೆ ॥
ಅಱಿಯದವಳ ಚಿತ್ತದೊಲುಮೆಯ ಮೇಲಕ್ಕೆ[1] । ನೆಱೆಸೋಲುವಳೆ ಬಲ್ಲವಳು ॥ ೧೨೭ ॥

ಎಂದು ದಶಾಸ್ಯಗೆ ಪೇಳಿಯವನ ಬಳಿ । ಯಿಂದ ಸೀತಾದೇವಿಯೆಡೆಗೆ ॥
ಬಂದು ಮಂಜರಿಕೆ ನಾನಾ ತೆಱದೊಳಗಿಂ । ತೆಂದೊಡಬಡಿಸಿದಳವಳು[2] ॥ ೧೨೮ ॥

ರವಿಯ ಕಾಂತಿಯನಲ್ಲೆಂಬ ಸುತೇಜದ । ನವರತ್ನದಾಭರಣವನು ॥
ತವೆಯದ ಭಂಡಾರವನನುಭವಿಸೆಂ । ದವಳವಳೊಡನಾಡಿದಳು ॥ ೧೨೯ ॥

ಒಳರಾಣುವೆ ಹೊಱರಾಣುವೆಯನು ನಿ । ನ್ನೊಳಗಾಗಿ ನಡಸುವನಿವನು ॥
ಕಳವಿನ ಮಾತಲ್ಲ ತಿಳಿಯಿದವನಿಗೆ ನೀ । ನಿಳಲೆಯಾಗೆಂದು ಪೇಳಿದಳು ॥ ೧೩೦ ॥

ಪ್ರಾಣವ ಬೇಡಿದೊಡೀವ ತಾನಾಳುವ । ರಾಣುವೆಯನು ಕೇಳು ನಿನ್ನ ॥
ಆಣೆಯೊಳ್ನಡಸುವನವನಿಗೆ ಮೋಹದ । ರಾಣಿಯಾಗೆಂದು ಪೇಳಿದಳು ॥ ೧೩೧ ॥

ಅರ್ಧಚಕ್ರೇಶ್ವರ ರಾವಣನಿಗೆ ನೀ । ನರ್ಧಾಂಗಿಯಾಗಿ ಬಾಳ್ವುದನೆ ॥
ನಿರ್ಧರವನು ಮಾಡೆಂದವಳ್ನುಡಿದಳು[3] । ದುರ್ಧರ ವಚನಂಗಳನು ॥ ೧೩೨ ॥

ಈ ರಾವಣನ ಮೇಲೆ ದಂಡೆತ್ತಿ ಬಂದು ನಿ । ನ್ನಾ ರಾಮಚಂದ್ರನು ತನ್ನ ॥
ಊರಿಗೆ ಕೊಂಡೊಯ್ದನೆಂಬುದ ಮನದೆ ನೀ । ನಾರೈದು ಕೆಡಬೇಡವಬಲೆ ॥ ೧೩೩ ॥

---

ರಂತೆ ಒಲಿಯುವಳೆ? ॥ ೧೨೬ ॥ ಗುರುತಿನ ವಸ್ತುಗಳನ್ನು ಕಳುಹಿಸಿ, ಪ್ರೀತಿಮಾಡುವವರಿಂದ ಆಕೆಯನ್ನು ನಿಶ್ಚಿತ ಸ್ಥಾನಕ್ಕೆ ಕರೆಸದೆ, ಅವಳ ಮನಸ್ಸಿನ ಒಲುಮೆಯನ್ನು ತಿಳಿಯದೆ, ಮೇಲೆ ಬಿದ್ದ ಮಾತ್ರಕ್ಕೆ ತಿಳಿದವಳಾದ ಆಕೆ ಒಲಿವಳೆ? ॥ ೧೨೭ ॥ ಹೀಗೆ ಮಂಜರಿಕೆ ರಾವಣನಿಗೆ ಹೇಳಿ ಅವನ ಬಳಿಯಿಂದ ಸೀತಾದೇವಿಯ ಬಳಿಗೆ ಬಂದು, ಅವಳನ್ನು ಹಲವಾರು ವಿಧದಲ್ಲಿ ಒಡಂಬಡಿಸಲು ಹೀಗೆ ಯತ್ನಿಸಿದಳು. ॥ ೧೨೮ ॥ ಎಲೈ ಜಾನಕಿಯೇ, ಸೂರ್ಯನ ಪ್ರಕಾಶವನ್ನು ಅಲ್ಲಗಳೆವ ಕಾಂತಿಯುಳ್ಳ ನವರತ್ನಗಳ ಆಭರಣಗಳನ್ನೂ, ಕುಂದಿಲ್ಲದ ಭಂಡಾರವನ್ನೂ ನೀನು ಅನುಭವಿಸು – ಎಂದು ಅವಳೊಡನೆ ಹೇಳಿದಳು ॥ ೧೨೯ ॥ ರಾವಣೇಶ್ವರನು ತನ್ನ ಒಳಗಿನ ರಾಣಿಯರನ್ನೂ, ಹೊರಗಿನ ರಾಣಿಯರನ್ನೂ ನಿನ್ನ ಅಧೀನವಾಗಿ ಮಾಡಿಯೇ ನಡೆಸುವನು. ಇದು ಸುಳ್ಳುಮಾತಲ್ಲವೆಂದು ತಿಳಿ. ಅವನಿಗೆ ನೀನು ಮಡದಿಯಾಗು – ಎಂದು ಹೇಳಿದಳು. ॥ ೧೩೦ ॥ ನೀನು ಪ್ರಾಣವನ್ನೇ ಕೇಳಿದರೂ ಅವನು ಕೊಡುವನು ಅವನು ಆಳತಕ್ಕಂತಹ ಸೈನ್ಯವನ್ನು ಕೇಳಿ-ದರೂ ನಿನ್ನಾಣೆಯಾಗಿಯೂ ಅವನು ಕೊಡುವನು. ಅಂತಹ ರಾವಣನಿಗೆ ನೀನು ಮೋಹದ ಅರಸಿಯಾಗು – ಎಂದಳು. ॥ ೧೩೧ ॥ ಅರ್ಧಚಕ್ರೇಶ್ವರನೆನಿಸಿರುವ ರಾವಣನಿಗೆ ನೀನು ಅರ್ಧಾಂಗಿಯಾಗಿ ಬಾಳುವುದನ್ನೇ ನಿಶ್ಚಯಮಾಡಿಕೋ – ಎಂದು ಆ ಮಂಜರಿಕೆಯು ಅಸಹ್ಯವಾದ ಮಾತನ್ನಾಡಿದಳು. ॥ ೧೩೨ ॥ ಎಲೈ ಸೀತೆ, ನಿನ್ನ ಆ ರಾಮಚಂದ್ರನು ಈ ರಾವಣನ ಮೇಲೆ ದಂಡೆತ್ತಿ ಬಂದು, ನಿನ್ನನ್ನು ತನ್ನ ಊರಿಗೆ ಕೊಂಡುಹೋದಾನೆಂಬುದನ್ನು ನೀನು ಮನಸ್ಸಿನಲ್ಲಿ ಯೋಚಿಸಿ ಕೆಟ್ಟು ಹೋಗದಿರು. ॥ ೧೩೩ ॥ ಮಂಜರಿಕೆ ಹೀಗೆ ಸೀತೆಯೊಡನೆ ಹೇಳುತ್ತಿರುವಾಗ ರಾವಣರಾಜನು ಮಂಡೋದರಿ ಸಹಿತ

---

[1] ಮೇಲಿಕ್ಕಿ (ಚ)　[2] ಬದಿಸಿದಳವಳ (ಕ)　[3] ಮಾಡೆಂದಂದು ನುಡಿದಳು (ಗ.ಚ)

ಎಂದಿಂತವಳೊಳವಳು ನುಡಿವುತಲಿರ । ಲಂದಾ ರಾವಣನೃಪನು[1] ॥
ಬಂದು[2] ಮಂಡೋದರಿವೆರಸಿ ಕೋಪಾಟೋಪ । ದಿಂದತಿ ಕಾತರದಿಂದ ॥ ೧೩೪ ॥

ತಕ್ಕೆಗೆಳಸಿದ ತವಕಿಸಿದ ತನಗಿದು । ತಕ್ಕುದಲ್ಲೆಂದೆಣಿಸಿದನೆ ॥
ಸಿಕ್ಕಿದವಳ ಬಿಡೆನೆಂಬ ದುಷ್ಕರ್ಮಕ್ಕೆ । ಸಿಕ್ಕಿದರಿಗೆ ಬುದ್ಧಿಯುಂಟೆ ॥ ೧೩೫ ॥

ಪಿಡಿದಪೆನೆಂದಾಟಿಸಿದ ತಾನವಳನು । ಪಿಡಿದೊಡೆ ತನ್ನ ವಿದ್ಯೆಗಳು ॥
ಬಿಡುವವೆಂದಂಜಿದುದಿಲ್ಲ ದುಶ್ಚರಿತರು । ಪಿಡಿವರೆ ಸದ್ಗುಣಗಳನು ॥ ೧೩೬ ॥

ಕಾತರಿಸುವ ತನ್ನ ಕಾಂತನ ಬಗೆಯಂಗ । ಜಾತನುಬ್ಬೆಗವನು ತಿಳಿದು ॥
ಆ ತರಳಾಕ್ಷಿ ಮಂಡೋದರಿ ಪೇಳ್ದಳಂ । ದೀ ತೆಱದೊಳಗೆ ಬುದ್ಧಿಯನು ॥ ೧೩೭ ॥

ಕಾತರಿಸದಿರು ಕದುಬದಿರು ಕಂಗೆಟ್ಟು । ಸೋತು ಮೇಲಿಕ್ಕದಿರೊಲಿದು ॥
ನೀತಿಬಾಹಿರನಾಗದಿರಾಗದಿರೊಂದು[3] । ಮಾತ ಪೇಳುವೆ ಕೇಳು ನೃಪತಿ ॥ ೧೩೮ ॥

ಖೇಚರರಿಗೆ ವಿದ್ಯಾಬಲವಿದೆ ಸಚ । ರಾಚರವಳುಕಿ ಬಂದಪುದು ॥
ಈ ಚಟುಲಾಕ್ಷಿಯ ಪಿಡಿದೆಯಾದೊಡೆ ನೀ । ಭೂಚರರಿಂ ಕಡೆ ನೃಪತಿ ॥ ೧೩೯ ॥

ಸುಂಡಲು ಪೋದ ಮಾತಂಗನಂದದಿ ನೀನು । ಮಂಡಲದೊಳು ಭೂಚರರ್ಗೆ ॥
ಲಂಡಿಯಾಗುವೆ ರಾವಣನೃಪ ನಿನ್ನೊಂದು । ಚಂಡಿಯ ಬಿಡು ಸೀತೆಯೊಡನೆ ॥ ೧೪೦ ॥

ಗಂಡನಿಗೆರಡ ಬಗೆದ ಸತಿ ನರಕದ । ಕೊಂಡಕಿಳಿವಳ್[4]ದಱಿಂದ ॥
ಕಂಡ ಕಾರ್ಯವನೊರೆದಪೆನೆನ್ನ ಮಾತನು । ದ್ದಂಡಿಸಬೇಡ ಪ್ರಾಣೇಶ ॥ ೧೪೧ ॥

---

ಅಲ್ಲಿಗೆ ಬಂದು ಹೆಚ್ಚಾದ ಕೋಪದಿಂದಲೂ ಕಾತರದಿಂದಲೂ ಕೂಡಿದವನಾದನು. ॥ ೧೩೪ ॥ ರಾವಣನು ಸೀತೆಯನ್ನು ಆಲಿಂಗಿಸಲು ಹವಣಿಸಿದನು, ತವಕಗೊಂಡನು, ತನಗೆ ಇದು ತಕ್ಕುದಲ್ಲವೆಂಬುದನ್ನು ಅವನು ಯೋಚಿಸಲಿಲ್ಲ. ಸಿಕ್ಕಿದವಳನ್ನು ಬಿಡೆನೆನ್ನುವ ಕೆಟ್ಟಕೆಲಸಕ್ಕೆ ಮುಂದಾಗುವವರಿಗೆ ಬುದ್ಧಿ ಇದೆಯೆ? ॥ ೧೩೫ ॥ ರಾವಣನು ಸೀತೆಯನ್ನು ಹಿಡಿದುಬಿಡುವೆನೆಂದು ಬಯಸಿದನು ತಾನು ಅವಳನ್ನು ಮುಟ್ಟಿದೊಡನೆ ತನ್ನ ವಿದ್ಯೆಗಳು ತೊಲಗುವವೆಂದು ಅವನು ಭಯಗೊಳ್ಳಲಿಲ್ಲ ಕೆಟ್ಟ ನಡತೆಯುಳ್ಳವರು ಒಳ್ಳೆಯ ಗುಣದಲ್ಲಿ ನಡೆಯುವರೆ? ॥ ೧೩೬ ॥ ಆಗ ಮಂಡೋದರಿಯು ಹೀಗೆ ಕಾತರಗೊಳ್ಳುವ ತನ್ನ ಗಂಡನ ಮನಸ್ಸಿನ ಕಾಮೋದ್ವೇಗವನ್ನು ತಿಳಿದಳು ಅವಳು ರಾವಣನಿಗೆ ಹೀಗೆ ನೀತಿಯನ್ನು ಹೇಳಿದಳು ॥ ೧೩೭ ॥ ಎಲೈ ಒಡೆಯನೇ, ಹೀಗೆ ಕದಡುಮನವನ್ನು ತಾಳದಿರು, ಬಲಾತ್ಕರಿಸದಿರು, ಕಂಗೆಟ್ಟು ಸೀತೆಗೆ ಸೋತು ಮೇಲೆ ಬೀಳದಿರು ಪ್ರೇಮವಶನಾಗಿ ನೀತಿಗೆಡಬೇಡ ನನ್ನೊಂದು ಮಾತನ್ನು ಕೇಳು ॥ ೧೩೮ ॥ ಖೇಚರರಿಗೆ ಯುಕ್ತವಾದ ವಿದ್ಯೆಯ ಬಲವಿದೆ ಅವರಿಗೆ ಚರಾಚರಗಳೆಲ್ಲವೂ ಹೆದರಿ ಬಂದು, ಅಧೀನವಾಗುವವು. ಈ ಸೀತೆಯನ್ನು ನೀನು ಹಿಡಿದೆಯಾದರೆ ಪ್ರಾಣಿಗಳಿಗಿಂತಲೂ ಕೀಳೆನಿಸುವೆ. ॥ ೧೩೯ ॥ ಎಲೈ ರಾವಣನೇ, ಸೀತೆಯ ಮೇಲೆ ಹೀಗೆ ನೀನು ವ್ಯಾಮೋಹಗೊಂಡರೆ, ಸೊಂಡಿಲು ಹೋದ ಆನೆಯಂತೆ ಈ ಲೋಕದಲ್ಲಿ ಪ್ರಾಣಿಗಳಿಗಿಂತಲೂ ಕೀಳೆನಿಸುವೆ ಆದುದರಿಂದ ಸೀತೆಯ ಮೇಲೆ ಹಟವನ್ನು ಬಿಡು ॥ ೧೪೦ ॥ ಎಲೈ ಪ್ರಾಣದೊಡೆಯನೇ, ಗಂಡನಿಗೆ ವಿರೋಧವನ್ನು ಮಾಡುವ ಹೆಂಡತಿಯು ನರಕದ ಕುಂಡಕ್ಕೆ ಇಳಿಯುವಳು ಆದುದರಿಂದ ಹೆಚ್ಚು ಹೇಳದೆ, ನನಗೆ ಕಂಡುದನ್ನು ಹೇಳುತ್ತಿದ್ದೇನೆ ನನ್ನ ಮಾತನ್ನು ಅಲ್ಲಗಳೆಯ ಬೇಡ. ॥ ೧೪೧ ॥

---

[1]ಲಂದು ರಾವಣನೃಪವರನು (ಗ ಚ) [2]ಬಂದ (ಚ) [3]ರಾಗದಿರೆಂದು (ಗ) ೧೪೦ ಈ ಪದ್ಯ ಕ ಚ ದಲ್ಲಿಲ್ಲ [4]ಕುಂಡ (ಚ)

ಪರಸತಿಗಳುಪಲು ಗಗನಗಾಮಿನಿ ವಿದ್ಯೆ । ಚಿರ[1]ವಾಗದುಳಿದ ವಿದ್ಯೆಗಳು ॥
ಇರದಳಿದಪವ[2]ವು ಪೋದ ಬಳಿಕ ಭೂ । ಚರರಿಗೆ ಚರರಹರವರು ॥ ೧೪೨ ॥

ಮೇಲನಱಿಯದರಸಿನ ಬಾಳ್ಕೆ ಮಾಯಾ । ಜಾಲ ತೃಣದ ತುದಿನೀರು ॥
ಬಾಲೆಯರೊಲವು ಕಪಿಯ ಕೈಯ ಪೂವಿನ । ಮಾಲೆಯಂತೇನಾಗದಿಹುದೆ ॥ ೧೪೩ ॥

ಎರವಿನ ಸಿರಿ ಸಬದೊಡಿಗೆ[3] ಗಾಳಿಯ ದೀಪ । ಸುರಚಾಪ ಕಾರ್ಗಾಲಮಿಂಚು ॥
ತೊರೆಯ ತಡಿಯ ಮರನಾಗದಿರದು[4] ಮೂರ್ಖ । ನರನಾಥನ ಬಾಳ್ಕೆ ಕಡೆಗೆ ॥ ೧೪೪ ॥

ನೀರ ಬೊಬ್ಬುಳಿ ನೀರದ[5] ಜಾಲದೊಡ್ಡಣ । ಮಾರಿಯ ಕೈವಾಯ ತುತ್ತು ॥
ಆರೈಯಲಗ್ನಿಮುಖದ ರಸದಂತವಿ । ಚಾರಿಯ ಸಿರಿ ನಿಲ್ಲದರಸ ॥ ೧೪೫ ॥

ಮಳಲೇರಿ ಮಂಜಿನ ಪುಂಜ ಬಿಸಿಲ ಮುಂ । ದಳ ಮಂಜರಿ[6]ಯಾಲಿವರಲು ॥
ಜಳರೇಖೆ ಮೂರ್ಖನೃಪನ ಸಿರಿ ಮಸಗೆಯ । ಬೆಳೆಯಂತಾಗದೇನಿಹುದೆ ॥ ೧೪೬ ॥

ಕಳಿತ ಪಣ್ಣುಗಳಂದದೊಳು ಮರೀಚಿಕಾ । ಜಳದಂತಂತರ್ನಳಿನದ[7] ॥
ಬಳಗದಂತಾಗದಿರದು ಮುಂದಱಿಯದಿ । ರ್ಪಿಳೆಯಾಣ್ಮನ ಸಿರಿಯರಸ ॥ ೧೪೭ ॥

ಪತಿಗೈಹಿತವನು ಬಗೆದವಳಿಹಪರ[8] । ಗತಿಗಲ್ಲವದಱಿಂದ ನೃಪತಿ ॥
ಸತಿಯ ಮಾತೆಂದು ವಿಡಂಬಿಸಬೇಡತಿ[9] । ಹಿತವನಲ್ಲದೆ ಬಿನ್ನವಿಸೆನು ॥ ೧೪೮ ॥

ಪೊಲ್ಲಮೆ ನಿನಗೆ ಬಪ್ಪುದನೀ[10] ಕೆಡುವುದ । ಸೊಲ್ಲಿಸುವವಳಲ್ಲ ಕೇಳು ॥
ಅಲ್ಲದ ನಡೆಯ ನಡೆದು ಕೆಟ್ಟವರು ಲೆಕ್ಕ । ವಿಲ್ಲಿದೆ[11]ಯಾಣ್ಮ ನಿನ್ನಾಣೆ ॥ ೧೪೯ ॥

---

ಪರಸ್ತ್ರೀಗೆ ಆಸೆಪಟ್ಟರೆ ನಿನ್ನ ಆಕಾಶಗಮನದ ವಿದ್ಯೆಗಳೆಲ್ಲವೂ ತೊಲಗುವವು ನಿನ್ನ ಇತರ ವಿದ್ಯೆಗಳು ಕೂಡ ನಾಶವಾಗುವವು. ಅವೆಲ್ಲ ಹೋದ ಮೇಲೆ ಮಾನವರಿಗೆ ಕಿಂಕರರಾಗಬೇಕಾಗುವುದು. ॥ ೧೪೨ ॥ ದೂರಾಲೋಚನೆ ಇಲ್ಲದ ರಾಜನ ಬಾಳುವೆಯು ಮಾಯೆಯ ಬಲೆ, ಹುಲ್ಲಿನ ತುದಿಯ ನೀರು, ಹೆಂಗುಸರ ಪ್ರೀತಿ, ಕೋತಿಯ ಕೈಯ ಹೂ ಮಾಲೆಯಂತೆ ಕ್ಷಣಿಕವೆನಿಸದೆ ಇರುವುದೆ? ॥ ೧೪೩ ॥ ತಿಳಿಗೇಡಿಯಾದ ರಾಜನ ಬಾಳ್ವೆಯು ಕೊನೆಗೆ ಒತ್ತೆಯಿಟ್ಟ ಧನ, ಹೆಣಕ್ಕಿಟ್ಟ ಆಭರಣ, ಗಾಳಿಗೊಡ್ಡಿದ ದೀವ, ಮಳೆಬಿಲ್ಲು, ಮಳೆಗಾಲದ ಮಿಂಚು, ಹೊಳೆಯ ದಡದ ಮರ–ಆಗದಿರದು. ॥ ೧೪೪ ॥ ಅರಸನೇ, ನೀರುಗುಳ್ಳೆಯಂತೆ, ಮುಗಿಲಿನ ಹಿಂಡಿನಂತೆ, ಮಾರಿಯ ಕೈಬಾಯ ತುತ್ತಿನಂತೆ, ಅಗ್ನಿಗೊಡ್ಡಿದ ಪಾದರಸದಂತೆ, ವಿಚಾರ ಹೀನನ ಐಶ್ವರ್ಯವು ನಿಲ್ಲಲಾರದು. ॥ ೧೪೫ ॥ ಮೂರ್ಖನಾದ ರಾಜನ ಐಶ್ವರ್ಯವು ಮರಳ ದಿಣ್ಣೆಯಂತೆ, ಇಬ್ಬನಿಯ ಸಮೂಹದಂತೆ, ಬಿಸಿಲಿಗೊಡ್ಡಿದ ಹೂಗೊಂಚಲಿನಂತೆ, ಆಲಿಕಲ್ಲಿನಂತೆ, ನೀರಿನಲ್ಲೆಳೆದ ಗೆರೆಯಂತೆ, ಜೊಳ್ಳು ತೆನೆಗಳ ಬೆಳೆಯಂತೆ ಕೆಡದೆ ಇರುವುದೆ? ॥ ೧೪೬ ॥ ಮುಂದಾಲೋಚನೆಯಿಲ್ಲದ ರಾಜನ ಸಂಪತ್ತು ಪಕ್ವವಾದ ಹಣ್ಣುಗಳಂತೆ, ಬಿಸಿಲ್ಗುದುರೆಯಂತೆ, ಅಂತರ್ನಳಿನದ ಸಮೂಹದಂತೆ ಕೆಡದೆ ಇರದು. ॥ ೧೪೭ ॥ ಎಲೈ ರಾಜನೇ, ಗಂಡನಿಗೆ ಅಹಿತವಾದುದನ್ನು ಮಾಡುವವಳು ಇಹಪರಗಳೆರಡರ ಗತಿಗೂ ಹೊರಗಾಗುವಳು. ಆದುದರಿಂದ ಇದು ಹೆಂಡತಿಯ ಮಾತೆಂದು ಅಣಕಿಸಬೇಡ. ನಾನು ಹಿತಕರವಾದುದನ್ನು ಮಾತ್ರವೇ ಬಿನ್ನವಿಸುತ್ತಿದ್ದೇನೆ ॥ ೧೪೮ ॥ ನನ್ನ ಹೃದಯದ

---

[1] ಸ್ಥಿರ (ಕ). [2] × (ಗ). [3] ಶಬದೊಡಿಗೆ (ಕ). [4] ಕಿರೆಯ ತಡಿಯ ತರುವಾಗದಿರದು (ಚ). [5] ನೀರಜ (ಗ.ಚ). [6] ಮಂಜಳಿ (ಕ ಚ). [7] ತಂತನಳಿನದ (ಗ). [8] ಬಗೆದವರಿಹ ಪರ (ಚ) ಬಗೆದವಳಿಯ ಪರ (ಗ). [9] ಬೇಡೆಂದು (ಕ). [10] ಬಪ್ಪುದನಾ (ಕ) [11] ಲೆಕ್ಕವಿಲ್ಲಿಳೆ (ಗ)

ಪೆಂಡಿರ ಮಾತ್ಯೆಸಲೆಯೆಂದೀ ಮಾತ । ಖಂಡಿಸಬೇಡಂಗನೆಯರ ॥
ಮಂಡಳಿಯಿಂದ ಮರಣವಡೆದರ ಪೆಸ । ಗೊಂಡು ಪೇಳುವೆನು ಲಾಲಿಪುದು ॥ ೧೫೦ ॥

ಅಶನಿಘೋಷನೆಂಬ ನೃಪತಿ ಸುತಾರೆಯು[1] । ದೆಸೆಯಿಂದ ರಾಜ್ಯವ ಕೆಡಿಸಿ ॥
ಅಶನವಸನಗಾಣದೆ[2] ಕೆಟ್ಟ ಪೆಣ್ಗಳ[3] । ದೆಸೆಯಿಂದ ಕೆಡದವರಾರು[4] ॥ ೧೫೧ ॥

ಚಿತ್ತೈಸರಸ ಸುಲೋಚನೆಯೆಂದೆಂಬ । ವೃತ್ತಕುಚೆ[5]ಯರ್ಕ ಕೀರ್ತಿ ॥
ಗಿತ್ತವನಿರದಿರ್ಪಳಿವ ನಳಿಜನ । ಪತ್ತಿ ಬಿಡದು ಲೋಕದೊಳು ॥ ೧೫೨ ॥

ಅರಸ ಚಿತ್ತೈಸು ಸ್ವಯಂಪ್ರಭೆಯೆಂದೆಂಬ[6] । ತರುಣಿಯಿಂದವೆ[7] ಸುಗ್ರೀವ ॥
ಪರಿಭವವಡೆದು ಕೆಟ್ಟನು[8] ಪೆಣ್ಗಳಿಂದಾರ । ಹರಣ ಹಾಱದು ಕಾಮಿಜನರ ॥ ೧೫೩ ॥

ಉರಗನುಣ್ಣದ ವಿಷವುರಿ[9]ಪತ್ತದ ಬೇಗೆ । ತರಣಿಯಿಂ ಕೆಡದಂಧಕಾರ ॥
ಹರಣ ಹಾಱದ ಸಾವುಯಿಱಿವಿಲ್ಲದ[10] ನೋವು । ತರಳಾಕ್ಷಿಯರಿಗೆ ಸೋಲ್ತವಗೆ ॥ ೧೫೪ ॥

ಬಿಡುವುದೊಳ್ಳಿತು ಸೀತೆಯ ಬಿಟ್ಟು ಕೀರ್ತಿಯ । ಪಡೆವುದೊಳ್ಳಿತು ಕೇಳೆನ್ನ ॥
ನುಡಿಗೇಳ್ವುದೊಳ್ಳಿತೊಳ್ಳಿತು ಕೇಳದಿರೆ ನಿನ್ನ । ನಡೆಗೆ ಬಹುದು ಬಲು ಕೊಱತೆ[11] ॥ ೧೫೫ ॥

ಎಂದು ನುಡಿದ ತನ್ನ ನಿಜವಲ್ಲಭೆಯ[12] ಮಾತಿ । ಗಂದು ಬೆದಱಿ ಬೆಂಡಾಗಿ ॥
ನೊಂದೆರ್ದೆ*ಯೊಳು ದಶವದನನಾ ನಂದನ । ದಿಂದಾಗ ಮನೆ[13]ಗೈದಿದನು ॥ ೧೫೬ ॥

---

ಒಡೆಯನೇ, ಕೇಳು ನಿನಗೆ ಕೆಟ್ಟದು ಬರುವಂಥದನ್ನಾಗಲೀ ನೀನು ಕೆಡುವುದನ್ನಾಗಲೀ ನಾನು ಹೇಳುವವಳಲ್ಲ. ಲೋಕದಲ್ಲಿ ಅಯೋಗ್ಯವಾದ ರೀತಿಯಲ್ಲಿ ನಡೆದು ಕೆಟ್ಟುಹೋದವರು ಅಸಂಖ್ಯಾತರಾಗಿರುವರು ॥ ೧೪೯ ॥ ಹೆಂಡಿರ ಮಾತೆಂದು ನನ್ನ ಈ ಮಾತನ್ನು ಖಂಡಿಸದಿರು ಹೆಂಗುಸರನ್ನು ಕಾಮಿಸಿದುದರಿಂದಲೇ ಮೃತ್ಯುವಿಗೆ ಈಡಾದ ಹಲವು ಮಂದಿ ಪೂರ್ವಿಕರನ್ನು ಹೆಸರೆತ್ತಿ ಹೇಳುವೆನು ಕೇಳು ॥ ೧೫೦ ॥ ಹಿಂದೆ ಅಶನಿಘೋಷನೆಂಬ ರಾಜನಿದ್ದನು ಅವನು ಸುತಾರೆಯೆಂಬ-ವಳಿಂದಾಗಿ ರಾಜ್ಯವನ್ನು ಕಳೆದುಕೊಂಡು, ಅನ್ನವಸ್ತ್ರಗಳಿಗೆ ಗತಿಯಿಲ್ಲದೆ ಕೆಟ್ಟನು ಹೆಂಗುಸರ ದೆಸೆಯಿಂದ ಕೆಡದವರು ಯಾರು? ॥ ೧೫೧ ॥ ಅರಸನೇ ಕೇಳು ಸುಲೋಚನೆಯೆಂಬ ಹೆಂಗುಸಿನಿಂದ ಅರ್ಕಕೀರ್ತಿಯು ಕೆಟ್ಟುಹೋದನು ಕೇಳು ಜನರಿಂದ ಹೀಗೆ ನಿಂದೆ ಅಂಟದೆ ಇರದು ॥ ೧೫೨ ॥ ಅರಸನೇ ಕೇಳು ಸುಗ್ರೀವನು ಸ್ವಯಂಪ್ರಭೆಯೆಂಬ ಸ್ತ್ರೀಯಿಂದಾಗಿ ಅಪಮಾನಗೊಂಡು ಕೆಟ್ಟುಹೋದನು ಹೆಂಗುಸರಿಂದ ಯಾವ ಕಾಮುಕಜನರ ಪ್ರಾಣವು ಹಾರಿ ಹೋಗದು? ॥ ೧೫೩ ॥ ಹೆಂಗುಸಿಗೆ ಮನಸೋತವನಿಗೆ ಹಾವು ಕಡಿಯದೆ ಉಂಟಾಗಿರುವ ವಿಷವೂ ಬೆಂಕಿ ತಗಲದಿರುವ ಬೇಗೆಯೂ ಸೂರ್ಯನಿಂದ ಪರಿಹಾರವಾಗದ ಕತ್ತಲೆಯೂ (ಅಜ್ಞಾನವೂ), ಪ್ರಾಣ ಹೋಗದಿರುವ ಮರಣವೂ ತಿವಿತವಿಲ್ಲದ ನೋವೂ ಉಂಟಾಗುವುದು ॥ ೧೫೪ ॥ ಆದುದರಿಂದ ಸೀತೆಯನ್ನು ಬಿಟ್ಟುಬಿಡುವುದು ಒಳ್ಳೆಯದು ಕೀರ್ತಿಯನ್ನು ಪಡೆಯುವುದು ಒಳ್ಳೆಯದು ನನ್ನ ಮಾತನ್ನು ಕೇಳುವುದೊಳ್ಳೆಯದು ಕೇಳದಿದ್ದರೆ ನಿನ್ನ ನಡತೆಗೆ ದೊಡ್ಡ ಕೊರತೆ ಬರುವುದು ॥ ೧೫೫ ॥ ಈ ರೀತಿಯಾಗಿ ತನ್ನ ಮಡದಿ ಮಂಡೋದರಿ ಹೇಳಲು, ಆ ಮಾತಿಗೆ ರಾವಣನು ಬೆದರಿ, ಬೆಂಡಾದನು ಅವನು ಮನಸ್ಸಿನಲ್ಲಿ ನೊಂದು ಆ ಸರ್ವರ್ತುಕೋದ್ಯಾನದಿಂದ ಅರಮನೆಗೆ ತೆರಳಿದನು ॥ ೧೫೬ ॥ ಎಲೈ ಚೇಣಿಯೇ,

---

[1] ಪುತಾರೆಯ (ಕ) [2] ಕಾಣದೆ (ಕ). [3] ಕೆಟ್ಟ ವಿಷಯದ (ಗ ಚ) [4] ದೆಸೆಯಿಂದಲಳಿಯದರಾರು (ಗ ಚ) [5] ಕುಚೆಗೆ (ಚ) ೧೫೨ನೇ ಪದ್ಯ ಕ ದಲ್ಲಿಲ್ಲ [6] ಯೆಂಬೋರ್ವ (ಗ ಚ) [7] ತರುಣಿಯಿಂದಾ (ಗ) ತರುಣಿಯಿಂದ (ಚ) [8] ಕೆಟ್ಟರು (ಕ) [9] ವಿಷದುರಿ (ಚ) [10] ಯಿಱಿತವಿಲ್ಲದ (ಚ) [11] ಗೊಱತೆ (ಚ) [12] ಕಾಂತೆಯ (ಚ) [13] ದಿಂದರಮನೆ (ಚ)

ಕೂಡಿ ಸುಖವ ಪಡೆದವನಲ್ಲ ಪುಣ್ಯವ । ನೀಡಾಡಿಯೀ ಧರೆಯೊಳಗೆ[1] ॥
ಈಡಾದನವಳಿಂದಪಕೀರ್ತಿಗೆ ಯಾರ[2] । ಪಾಡುಗೆಡಿಸದು ದುಷ್ಕರ್ಮ ॥ ೧೫೭ ॥

ಛಲಗೆಟ್ಟು ಸುಖವಾದುದಿಲ್ಲವಾ ಸುಖ ತಪ್ಪಿ । ಛಲವಂತನಾದುದಿಲ್ಲವನು ॥
ಛಲ ಕುಲ ಸುಖ ಕೆಟ್ಟತೆನೆ ಬಿದಿಯಾರಾರ । ಹೊಲೆಗೆಡಿಸದು ಮೃಗನಯನೆ ॥ ೧೫೮ ॥

ಕರ್ಮಾಧೀನ ತಾನಲ್ಲದೆ ಭಾವಿಸೆ । ಕರ್ಮ ತನ್ನಾಧೀನವಲ್ಲ ॥
ಧರ್ಮಜ ಪದ್ಮಜಾಧೋಕ್ಷಜರಳಿದರು[3] । ಕರ್ಮದಿಂ ಬಲ್ಲಿದರಾರು ॥ ೧೫೯ ॥

ಅತ್ತಲು[4] ದಶಕಂಠನರಮನೆಯನು ಪೋಗ । ಲಿತ್ತ ಮಂಡೋದರಿ ಬಂದು ॥
ಒತ್ತ[5] ಸಾರಿದಳಂದೊಯ್ಯನಂದೇಕಾಗ್ರ । ಚಿತ್ತದೊಳಿರ್ದ ಜಾನಕಿಯ ॥ ೧೬೦ ॥

ಕುಲವ ಪಾಲಿಪ ಕುಲಜೆಯ ಮೇರೆದಪ್ಪದ । ಜಲಧಿಯನಾ ಶಿವನಿಂದ ॥
ಚಲಿಸದ ಮೇರುವಿನಂತಿರ್ಪ ಸೀತೆಯ । ಕೆಲನ ಸಾರಿದಳಾ ಸುದತಿ ॥ ೧೬೧ ॥

ಗಲಿಸದ ಬುದ್ಧಿಯ ಚಲಿಸದ ಚಿತ್ತದ । ಹೊಲಬುದಪ್ಪದ ನಿಜಮನದ ॥
ಲಲನೆಯ ಕಂಡು ಮಂಡೋದರಿ[6] ಸಂತಸ । ಜಲದೊಳಗಾಳ್ದಳಬ್ಜಾಕ್ಷಿ[7] ॥ ೧೬೨ ॥

ಕಲ್ಲ ಪುತ್ತಳಿಯಂತೆ ಕಾಷ್ಠದ ಸತಿಯಂತೆ । ಗೆಲ್ಲವಡೆದ ಯೋಗಿಯಂತೆ[8] ॥
ತಲ್ಲಣಿಸದ ಸೀತೆಯ ಕಂಡು ತನ್ನೆದೆ । ಯಲ್ಲಿ ಸಂತಸವಟ್ಟಳವಳು[9] ॥ ೧೬೩ ॥

ಪತಿಭಕ್ತಿಯೊಳು ನೀನಲ್ಲದೆ ಸತಿಯರೀ । ಕ್ಷಿತಿಯೊಳಗಿಲ್ಲವೆಂದೆನುತ ॥
ಅತಿಹಿತವಾದ ಮಾತಿಂದ ಮಂಡೋದರಿ[10] । ಸ್ತುತಿಸಿದಳಾ[11] ಜಾನಕಿಯ ॥ ೧೬೪ ॥

---

ಆ ರಾವಣನು ಕೂಡಿ ಸುಖವನ್ನು ಪಡೆಯಲಿಲ್ಲ ಪುಣ್ಯವನ್ನು ಬಿಟ್ಟು ಈ ಲೋಕದಲ್ಲಿ ಅಪಕೀರ್ತಿಗೆ ಗುರಿಯಾದನು. ಕೆಟ್ಟಕೆಲಸವು ಯಾರನ್ನು ತಾನೇ ಹಾಳು ಮಾಡದು? ॥ ೧೫೭ ॥ ರಾವಣನು ಛಲವನ್ನು ಬಿಟ್ಟು ಸುಖವನ್ನು ಅನುಭವಿಸ ಲಿಲ್ಲ, ಸುಖವನ್ನು ಬಿಟ್ಟು ಛಲವಂತನೆನಿಸಲೂ ಇಲ್ಲ. ಅವನು ಛಲವನ್ನೂ ಕುಲವನ್ನೂ ಸುಖವನ್ನೂ ಕೆಡಿಸಿಕೊಂಡನು. ವಿಧಿಯು ಯಾರನ್ನು ತಾನೇ ಹಾಳುಮಾಡದು? ॥ ೧೫೮ ॥ ಮನುಷ್ಯನು ಕರ್ಮಕ್ಕೆ ಅಧೀನನಾಗುವನಲ್ಲದೆ, ಕರ್ಮವು ಅವನ ವಶವಲ್ಲ. ಶಿವ-ಬ್ರಹ್ಮ-ವಿಷ್ಣು ಮುಂತಾದವರು ಕೂಡ ನಾಶವನ್ನು ಹೊಂದುವರು. ಹೀಗಿರುವಾಗ ಕರ್ಮಕ್ಕಿಂತ ಬಲಿಷ್ಠರು ಯಾರು? ॥ ೧೫೯ ॥ ರಾವಣನು ಅತ್ತ ತನ್ನ ಅರಮನೆಗೆ ತೆರಳಲು, ಇತ್ತ ಮಂಡೋದರಿ ಬಂದು, ಒಂದೇ ಮನಸ್ಸಿ ನಲ್ಲಿದ್ದ ಸೀತೆಯ ಸಮೀಪಕ್ಕೆ ಮೆಲ್ಲನೆ ಬಂದಳು. ॥ ೧೬೦ ॥ ಕುಲಧರ್ಮವನ್ನು ಪಾಲಿಸುವ ಸತ್ಕುಲಪ್ರಸೂತಿಯೂ, ಮೇರೆ ಯನ್ನು ಮೀರದ ಸಮುದ್ರದಂತೆ ಇರುವವಳೂ. ಶಿವನಿಂದಲೂ ಅಲುಗಿಸಲು ಸಾಧ್ಯವಿಲ್ಲದ ಮೇರು ಪರ್ವತದಂತೆ ಇರುವ ವಳೂ ಆದ ಸೀತೆಯ ಬಳಿಗೆ ಮಂಡೋದರಿ ಬಂದಳು ॥ ೧೬೧ ॥ ಎಲೈ ಚೆಲುವಿನಿಯೇ, ಆ ಮಂಡೋದರಿಯು ಜಾರಿ ಹೋಗದ ಬುದ್ಧಿಯಿಂದಲೂ, ಸಂಚಲವಾದ ಚಿತ್ತದಿಂದಲೂ, ದಾರಿತಪ್ಪದ ಮನಸ್ಸಿನಿಂದಲೂ ಕೂಡಿದ ಸೀತೆಯನ್ನು ಕಂಡು, ಸಂತೋಷದ ರಸದಲ್ಲಿ ಮುಳುಗಿದಳು. ॥ ೧೬೨ ॥ ಕಲ್ಲಿನ ಗೊಂಬೆಯಂತೆಯೂ, ಗೆಲವನ್ನು ಹೊಂದಿದ ತಪಸ್ವಿಯಂತೆಯೂ, ಸ್ಥಿರಚಿತ್ತೆಯಾಗಿರುವ ಸೀತೆಯನ್ನು ಕಂಡು, ಮನಸ್ಸಿನಲ್ಲಿ ಸಂತೋಷಪಟ್ಟಳು. ॥ ೧೬೩ ॥ ಮಂಡೋದರಿಯು ಸೀತೆ

---

[1] ಮಾಡಿಕೊಂಡವನಲ್ಲ ಬಿಟ್ಟು (ಗ ಚ). [2] ದಪಕೀರ್ತಿಯಾರಾರ (ಗ) [3] ರಳಿದರಾ (ಗ ಚ) [4] ಅತ್ತಲಾ (ಚ) [5] ಒತ್ತಿ (ಗ) ಪೊತ್ತ (ಚ) [6] ಮಂದೋದರಿ (ಗ) [7] ಗದ್ದಳಬ್ಜಾಕ್ಷಿ (ಗ) [8] ಪಡೆಯದೋಗಿಯಂತೆ (ಚ) [9] ಪುಟ್ಟಲವಳು (ಕ). [10] ಮಂದೋದರಿ (ಗ) [11] ತುತಿಸಿದಳಾ (ಚ)

ರಾವಣ ನಿನಗಳುಪಿದ ಕಾಲದೊಳು ನೀ । ಸಾವನೆಣಿಸು ನಿನ್ನೊಡನೆ[1] ॥
ಸಾವೆನಲ್ಲದೊಡೆ ನಾ ನಿನಗೆ ಸವತಿಯಾಗಿ । ಜೀವಿಸುವುದು ಗುಣವಲ್ಲ[2] ॥ ೧೬೫ ॥

ಪುರುಷನ ಕಾಣ್ಬುದಲ್ಲದೊಡೆ ದೀಕ್ಷೆಯ ಸೀತೆ । ಧರಿಪುದು ಘಟಿಸುವನ್ನಕರ ॥
ಶರೀರ ನಿಮಿತ್ತಾಹಾರಗೊಂಬುದು ಕೊಳ್ಳ । ದಿರಲೊಲ್ಲೆ ನಾನೂಟವನು ॥ ೧೬೬ ॥

ಎಂದು ನುಡಿದ ಮಂಡೋದರಿ[3] ನಿಜಮಾತೆ । ಯೆಂದು ಸೀತಾದೇವಿ ತಿಳಿದು ॥
ಅಂದವಳವಳಿಗೆ[4] ಮನದಕ್ಕಱಿಂದಿಂ । ತೆಂದು ನುಡಿದಳಂಬುಜಾಕ್ಷಿ[5] ॥ ೧೬೭ ॥

ಇಂದಗಿಯೆಂಬ ಸುತನ ಬಳಿಯೊಳಗೋರ್ವ । ನಂದನೆಯಾದಳಂದವಳ ॥
ಮಂದಸಿನೊಳು ಕಳುಪುತ ಕಂಡೆನವಳು ನೀ । ನೆಂದೆನ್ನೆರ್ದೆ* ಬಗೆವುತಿದೆ ॥ ೧೬೮ ॥

ಆ ಕುವರಿಯ ಕಣ್ಣು ನಿನ್ನ ಲೋಚನ ನನ । ಗೇಕರೂಪಾಗಿ[6] ತೋಱುತಿದೆ ॥
ಏಕೆಂದಱಿಯೆ ನಿನ್ನ ಕಂಡೊಡೆ ಮನದೊಳ । ನೇಕ ಮಱುಕ ಪುಟ್ಟುತಿದೆಕೋ[7] ॥ ೧೬೯ ॥

ಜನನಿ[8] ನೀ ನಿಜವಲ್ಲದಿರೆ ಮೋಹ ನಿನಗೇ । ಕಿನಿತು ಜನಿಪುದು ನಾ ನಿನ್ನ ॥
ತನುಜೆ ತಪ್ಪದು ತಪ್ಪದೆಂದಳವಳು ನಿಜ । ವಿನಯಕೆ ಸೋಲದರಾರು ॥ ೧೭೦ ॥

ಮಾತೇನು ನೀನೆನ್ನ ಮಾತೆ ನಿನ್ನಯ ನಿಜ । ಮಾತ ಮೀಱುವಳಲ್ಲವೆಂದು[9] ॥
ಮಾತ ನಂಬೆಂದು ಮಂಡೋದರಿಗಾ ಜಗ । ನ್ಮಾತೆ ನುಡಿದಳಂಬುಜಾಕ್ಷಿ ॥ ೧೭೧ ॥

---

ಯೊಡನೆ–"ಈ ಲೋಕದಲ್ಲಿ ಪತಿಭಕ್ತಿಯಲ್ಲಿ ನಿನ್ನನ್ನು ಮೀರಿಸುವ ಹೆಂಡಿರಿಲ್ಲ" ಎಂದು ಹಿತಕರವಾದ ಮಾತನ್ನಾಡಿ ಅವಳನ್ನು ಕೊಂಡಾಡಿದಳು ॥ ೧೬೪ ॥ ಎಲೈ ಸೀತೆಯೇ, ರಾವಣನು ನಿನಗೆ ಆಸಕ್ತನಾಗಿ ವರ್ತಿಸಿದ ಸಂದರ್ಭದಲ್ಲಿ ನೀನು ಸಾಯಲು ಮುಂದಾಗು. ನಾನೂ ನಿನ್ನೊಡನೆ ಸಾಯುವೆನಲ್ಲದೆ, ನಿನಗೆ ಸವತಿಯಾಗಿ ನಾನು ಬಾಳುವುದು ಲೇಸಲ್ಲ ॥ ೧೬೫ ॥ ನೀನು ನಿನ್ನ ಗಂಡನನ್ನು ಕಾಣುವ ವರೆಗೆ ಅಥವಾ ಜಿನದೀಕ್ಷೆಯನ್ನು ತಾಳುವ ವರೆಗೆ ಶರೀರ ರಕ್ಷಣೆಗಾಗಿ ಆಹಾರವನ್ನು ಸೇವಿಸಿಕೊಳ್ಳುತ್ತಿರು. ನೀನು ಆಹಾರವನ್ನು ಸ್ವೀಕರಿಸದಿದ್ದರೆ ನಾನು ಊಟವನ್ನು ಒಲ್ಲೆನು ॥ ೧೬೬ ॥ ಹೀಗೆ ಹೇಳಿದ ಮಂಡೋದರಿ ತನ್ನ ಮಾತೆಯಿರಬೇಕೆಂದು ಸೀತೆಯು ತಿಳಿದುಕೊಂಡು ಇರಲು, ಮಂಡೋದರಿಯು ತನ್ನ ಮನದಲ್ಲಾದ ಪ್ರೀತಿಯಿಂದ ಹೀಗೆಂದಳು–॥ ೧೬೭ ॥ ಹಿಂದೆ ನಾನು ಇಂದಗಿಯೆಂಬ ಮಗನನ್ನು ಪಡೆದನಂತರ ಒಂದು ಹೆಣ್ಣುಮಗುವನ್ನು ಹೆತ್ತಿದ್ದೆ. ಅವಳನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಕಳುಹಿಸಿದ್ದೆನು ಅವಳೇ ನೀನು ಎಂದು ನನ್ನ ಮನಸ್ಸಿಗೆ ಕಾಣುತ್ತಿದೆ ಆ ಹೆಣ್ಣುಮಗುವಿನ ಕಣ್ಣೂ ನಿನ್ನ ಕಣ್ಣೂ ನನಗೆ ಒಂದೇ ರೀತಿಯಾಗಿ ಕಾಣುತ್ತಿದೆ ನಿನ್ನನ್ನು ಕಂಡೊಡನೆ ಏಕೋ ನನಗೆ ಬಹಳವಾದ ಮರುಕವುಂಟಾಗುತ್ತಿದೆ ॥ ೧೬೯ ॥ ಆಗ ಸೀತೆಯು "ನೀನು ನನ್ನ ತಾಯಿಯಾಗಿರಬಹುದು ಇಲ್ಲವಾದರೆ ನಿನಗೆ ನನ್ನಲ್ಲಿ ಇಷ್ಟೊಂದು ವಾತ್ಸಲ್ಯ ಏಕೆ ಉಂಟಾಗುತ್ತಿತ್ತು? ನಾನು ನಿನ್ನ ಮಗಳು ನಿಶ್ಚಯ" ಎಂದಳು ವಿನಯಗುಣಕ್ಕೆ ಮನಸೋಲದವರು ಯಾರು? ॥ ೧೭೦ ॥ ಎಲೈ ಜೇಳಿನಿಯೇ, ಲೋಕಮಾತೆ ಸೀತೆಯು ಮಂಡೋದರಿಯೊಡನೆ–"ಬೇರೆ ಮಾತೇಕೆ? ನೀನು ನನ್ನ ತಾಯಿ ನಿಜ ನಾನು ನಿನ್ನ ಮಾತನ್ನು ಮೀರುವವಳಲ್ಲ ನನ್ನ ಮಾತನ್ನು

---

[1] ನೆಣಿಸುನಿನ್ನೊಡನೆ (ಗ) [2] ಜೀವಿಸುವವಳು ನಾನಲ್ಲ (ಕ) [3] ಮಂಡೋದರಿ (ಗ) [4] ಅವಳಿಗೆ (ಕ ಗ) [5] ಪೇಳಿದಳಂಬುಜಾಕ್ಷಿ (ಗ ಚ).
[6] ನನಗೇಕರೂಪಾಗಿ (ಚ) [7] × (ಗ ಚ) [8] ತನುಜೆ (ಕ) [9] ಳಲ್ಲವೆನ್ನ (ಗ ಚ)

ತೊರೆದವು ಮೊಲೆಯನಿತಱೊಳಾನಂದಾಶ್ರು । ಸುರಿದವು ಮೂರ್ಛೆಯವಳಿಗೆ ॥
ಪಿರಿದಾಗಲಾಳಿಯರ್ ಶಿಶಿರೋಪಚಾರದಿಂ । ದರಸಿಯನೆಚ್ಚಱಿಸಿದರು ॥ ೧೭೨ ॥

ಬಳಿಕೆದ್ದು ಮಂಡೋದರಿ ತನ್ನ ಸಖಿಯರ । ಬಳಗ ಬಳಸಿ ಬರೆ ಪೊಳಲ ॥
ತಳುವದೆ ಪೊಕ್ಕರಮನೆಗೈದಿದಳತ್ತ । ಯಿಳಲೆ ಕೇಳಿತ್ತ ಮತ್ತಣುವ[1] ॥ ೧೭೩ ॥

ತಳುವದೆ ಬಂದಲ್ಲಿಯ ಕಾಪಿನವರಿಗೆ । ತಿಳಿಯದ ನಿದ್ರೆಯ ಗೈಸಿ ॥
ತಳೆದು ಪ್ಲವಗವಿದ್ಯೆಯಿಂ[2] ಮರ್ಕಟನಾಗಿ । ಬಳಿಕ ಬಂದನು[3] ಸೀತೆಯೆಡೆಗೆ ॥ ೧೭೪ ॥

ಇಂದುವದನೆ ಕೇಳು ವನಚರ ರೂಪಾಗಿ । ಬಂದಣುವಂತ ಜಾನಕಿಯ ॥
ಮುಂದೆ ನಿಂದವ[4] ತಾನು ಬಂದ ಕಾರ್ಯವ ಪೇಳ್ವೆ । ನೆಂದೆನೆ ಕೇಳ್ದುದಿಲ್ಲವಳು ॥ ೧೭೫ ॥

ದಶಕಂಠನ ಮಾಯಾವಿತನವಿದೆಂ । ದುಸುರದವಳು ಸುಮ್ಮನಿರಲು ॥
ಹೊಸ ಹೊನ್ನ ಮುದ್ರಿಕೆಯನು ರಾಮಚಂದ್ರನ । ಹೆಸರ ಲೇಖನವನು ತೆಗೆದು ॥ ೧೭೬ ॥

ಇರಿಸಿ ಸೀತೆಯ ಮುಂದೆ ಕರಗಳ ಮುಗಿಯುತ । ಧರಣಿಗೆ ಬೀಳುತೇಳುತವೆ ॥
ಅರಸ ಪೇಳಿದ ಮಾತಿನೊಳಗೊಂದುಳಿಯದಾಗ । ವೊರೆದನಂತವ[5] ವಿವರದೊಳು ॥ ೧೭೭ ॥

ಗಂಡನ ಕೈಯ ಮುದ್ರಿಕೆಯ ಕಾಣುತ ತನ್ನ । ಮಂಡೆಯ ಮೇಲಿಟ್ಟುಕೊಂಡು ॥
ಮುಂಡಾಡಿದಳು ಮುದ್ದಿಸಿದಳೋಲೆಯ ನೋದಿ । ಕೊಂಡು[6] ಕಂಡಳು ಕಾರ್ಯದಿರವ ॥ ೧೭೮ ॥

---

ನಂಬು" ಎಂದು ಹೇಳಿದಳು. ॥ ೧೭೧ ॥ ಮಂಡೋದರಿಯು ಆಗ ಭಾವನಾವಶಳಾಗಿ, ಆಕೆಯ ಮೊಲೆಗಳಲ್ಲಿ ಹಾಲು ತುಂಬಿತು, ಸಂತೋಷದ ಕಣ್ಣೀರು ಸುರಿಯಿತು. ಎಚ್ಚರ ತಪ್ಪಿಹೋದ ಆಕೆಗೆ ಸೇವಕಿಯರು ಶೈತ್ಯೋಪಚಾರ ಮಾಡಿ ಎಚ್ಚರಿಸಿದರು. ॥ ೧೭೨ ॥ ಮಂಡೋದರಿ ಎಚ್ಚತ್ತವಳಾಗಿ, ತನ್ನ ಸಖಿಯರ ವೃಂದವು ಆವರಿಸಿರಲು, ಪಟ್ಟಣವನ್ನು ಪ್ರವೇಶಿಸಿ, ತಡವಿಲ್ಲದೆ ಅರಮನೆಗೆ ಅತ್ತ ತೆರಳಿದಳು. ಎಲೈ ಚೇಳಿನಿಯೇ, ಇತ್ತ ಅಣುವನ ಸಂಗತಿಯನ್ನು ಹೇಳುವೆನು; ಕೇಳು. ॥ ೧೭೩ ॥ ಅಣುವನು ಒಡನೆ ಅಲ್ಲಿಗೆ ಬಂದು ಅಲ್ಲಿಯ ಮೈಗಾವಲಿನವರಿಗೆ ಗಾಢನಿದ್ರೆಯನ್ನು ಬರಿಸಿ, ತನ್ನ ಪ್ಲವಗವಿದ್ಯೆಯಿಂದ ಕಪಿರೂಪವನ್ನು ತಾಳಿ, ಸೀತೆಯ ಬಳಿಗೆ ಬಂದನು. ॥ ೧೭೪ ॥ ಎಲೈ ಚೇಳಿನಿಯೇ ಕೇಳು. ಹನುಮಂತನು ಮರ್ಕಟರೂಪದಲ್ಲಿ ಸೀತೆಯ ಎದುರುಗಡೆ ನಿಂತು, ತಾನು ಬಂದ ಕಾರ್ಯವನ್ನು ತಿಳಿಸುವೆನೆನ್ನಲು, ಆ ಮಾತನ್ನು ಸೀತೆ ಕೇಳಲಿಲ್ಲ. ॥ ೧೭೫ ॥ ಇದು ರಾವಣನ ಕಪಟದ ವಿದ್ಯೆಯಿರಬಹುದೆಂದು ಭಾವಿಸಿ, ಸೀತೆಯು ಮೌನವಾಗಿರಲು, ಹನುಮಂತನು ಶ್ರೀರಾಮನ ಹೊಸ ಚಿನ್ನದ ಉಂಗುರವನ್ನೂ ಶ್ರೀರಾಮನ ಹೆಸರುಳ್ಳ ಲೇಖನವನ್ನೂ ತೆಗೆದನು. ॥ ೧೭೬ ॥ ಅವೆರಡನ್ನೂ ಸೀತೆಯ ಮುಂದಿಟ್ಟು, ಕೈಮುಗಿದು, ಸಾಷ್ಟಾಂಗ ವಂದಿಸಿ, ಶ್ರೀರಾಮನು ಹೇಳಿದ ಮಾತುಗಳಲ್ಲಿ ಒಂದೂ ಉಳಿಯದಂತೆ ವಿವರವಾಗಿ ಹೇಳಿದನು. ॥ ೧೭೭ ॥ ಸೀತೆಯು ತನ್ನ ಗಂಡನ ಕೈಯ ಉಂಗುರವನ್ನು ಕಂಡೊಡನೆ, ಅದನ್ನು ಎತ್ತಿ ತನ್ನ ತಲೆಯ ಮೇಲಿಟ್ಟುಕೊಂಡಳು, ಮುದ್ದಾಡಿದಳು. ಪತ್ರವನ್ನು ಓದಿ, ಕಾರ್ಯವಿವರವನ್ನು ತಿಳಿದುಕೊಂಡಳು. ॥ ೧೭೮ ॥ 'ನೀನು ಹೇಗೆ ಇಲ್ಲಿಗೆ ಬಂದೆ? ನಾನು ಇಲ್ಲಿರುವುದನ್ನು ಯಾರಿಂದ ತಿಳಿದುಕೊಂಡೆ? ನನ್ನ

---

[1] ಯಿಳಲೆ ಕೇಳಣುವ ಮತ್ತಿತ್ತ (ಗ. ಚ). [2] ತಳೆದ ಪ್ಲವನ ವಿದ್ಯೆಯಿಂ (ಗ) ತಳೆದು ಪವನ ವಿದ್ಯೆಯಿಂ (ಕ). [3] ಬಂದವ (ಗ ಚ). [4] ಬಂದವ (ಗ ಚ). [5] ಲೊರೆದನಂತವ (ಗ) . . ತದ (ಚ). [6] ನೋಡಿಕೊಂಡು (ಗ. ಚ.).

ಆವ ಬಗೆಯಲಿ ನೀ ಬಂದೆ ಸಾನಿರ್ದುದ । ನಾವವರಿಂ ಕೇಳ್ದೆ ನನ್ನ ॥
ಜೀವೇಶ್ವರ[1] ಕ್ಷೇಮದೊಳಿರ್ದಪನೆ ಯೆಂ । ದಾ ವಧು ಕೇಳ್ದಳಣುವನ ॥ ೧೭೯ ॥

ಬಂದ ವೃತ್ತಾಂತವ ರಾಮಚಂದ್ರಮ ತನ । ಗಂದು ಪೇಳಿದ ಬುದ್ಧಿಯನು[2] ॥
ಒಂದುಳಿಯದೆ[3] ಬಿನ್ನವಿಸಿದನವ[4]ನಾ । ನಂದ ಮನಕೆ ಪುಟ್ಟಲವಳ ॥ ೧೮೦ ॥

ನಿಮ್ಮ ಕೊಂಡೊಯ್ವ ಸಮರ್ಥತೆ ನನಗುಂಟು । ನಿಮ್ಮ ಕರುಣದೊಳಿಂದುವರ ॥
ನಿಮ್ಮಾಣ್ಮ ಕಳವಿಲಿ[5] ತರಬೇಡವೆಂದೆನ್ನ । ತಮ್ಮ ಮುಟ್ಟಿಸಿಕೊಂಡನಮ್ಮ[6] ॥ ೧೮೧ ॥

ನೆರಪಿದ ಬಲಗೂಡಿ ಬಂದು ಲಂಕೆಯ ಪೊಕ್ಕು । ಶಿರವ ಚೆಂಡಾಡಿ ರಾವಣನ ॥
ಸಿರಿವೆಣ್ಣ ಸಹಿತ ಸೀತೆಯ ತಹೆನೆಂದು ನಿ । ಮ್ಮರಸನಾಡಿದ ನೆನ್ನೆ ದಿವಸ[7] ॥ ೧೮೨ ॥

ಅದಱಿಂದ ನಾಳೆ ದಂಡೆತ್ತಿ ಬಂದಾ ದಶ । ವದನನ ಕೊಂದು ಶ್ರೀರಾಮ ॥
ಮುದದಿಂದ ಬಂದು ಕೊಂಡೊಯ್ದಪ ನೀವಿನ್ನು[8] । ಪದುಳದೊಳಿಹುದೆಂದುವರ[9] ॥ ೧೮೩ ॥

ಅಂಬಿಕೆ ದೇಹನಿಮಿತ್ತಾಹಾರವ । ಕೊಂಬುದೆಲ್ಲವ ನೀವು ಪಲವ[10] ॥
ಪಂಬಲಿಸದೆಯಿಹುದೆಂದು ಸೀತೆಯ ಪಾ । ದಾಂಬುಜ ಕೆಱಗಿದನಣುವ ॥ ೧೮೪ ॥

ಎಱಗಿದ ಹನುಮನಿಗವಳೆಂದಳು ನಿ । ಮ್ಮಱಸಿಗಿಲ್ಲಿಯ ಕಾರ್ಯವನು ॥
ತೆಱದರಸಾಗಿ ಬಿನ್ನವಿಪುದೆನುತ ಮನ । ದೆಱಕದಿಂ ಬೀಳ್ಕೊಟ್ಟಳವನ ॥ ೧೮೫ ॥

ಮತ್ತೆ ಕೆಲವು ಕಾರ್ಯಭಾಗಗಳನು ಪೇಳಿ । ಚಿತ್ತದಿಂ ನಿಮ್ಮ ಚಿಂತೆಯನು ॥
ಪತ್ತುವಿಡುವನೆಂ[11] ಬನಿತಱೊಳೊಯ್ಯನೆ । ಹೊತ್ತು ಮೂಡಲು ಹೊಱವಂಟ[12] ॥ ೧೮೬ ॥

---

ಪ್ರಾಣೇಶನು ಕ್ಷೇಮದಿಂದಿರುವನೆ?' ಎಂದು ಆಕೆ ಅಣುವನನ್ನು ಕೇಳಿದಳು ॥ ೧೭೯ ॥ ಆಗ ಅಣುವನು ತಾನು ಬಂದ ವೃತ್ತಾಂತವನ್ನೂ ಶ್ರೀರಾಮನು ತನಗೆ ಹೇಳಿದ ಸೂಚನೆಗಳನ್ನೂ ಒಂದೂ ಉಳಿಯದಂತೆ, ವಿಜ್ಞಾಪನ ಮಾಡಿದನು ಅದರಿಂದ ಸೀತೆಯ ಮನಸ್ಸಿಗೆ ಆನಂದವಾಯಿತು ॥ ೧೮೦ ॥ ಅಮ್ಮಾ ನಿಮ್ಮ ದಯೆಯಿಂದ ನಿಮ್ಮನ್ನು ಕೊಂಡು ಹೋಗುವ ಸಾಮರ್ಥ್ಯ ನನಗಿದೆ ಆದರೆ ನಿಮ್ಮ ಪತಿಯು ನಿಮ್ಮನ್ನು ಕಳವಿನ ಮೂಲಕ ತರಬಾರದೆಂದು ಹೇಳಿರುತ್ತಾರೆ ॥ ೧೮೧ ॥ ನಿಮ್ಮ ಅರಸನು ನಿನ್ನೆಯ ದಿನ "ಸಂಗ್ರಹ ಮಾಡಿರುವ ಸೈನ್ಯವನ್ನು ಕೂಡಿ ಬಂದು, ಲಂಕೆಗೆ ನುಗ್ಗಿ, ರಾವಣನ ತಲೆಯನ್ನು ಚೆಂಡಾಡಿ, ರಾವಣನ ಸಂಪತ್ತಿನ ದೇವತೆಯ ಸಹಿತ ಸೀತೆಯನ್ನು ತರುವೆನು' ಎಂದು ಹೇಳಿರುತ್ತಾನೆ. ॥೧೮೨॥ ಆದುದರಿಂದ ನಾಳೆ ಶ್ರೀರಾಮನು ದಂಡೆತ್ತಿಕೊಂಡು ಬಂದು, ಆ ರಾವಣನನ್ನು ಕೊಂದು, ನಿಮ್ಮನ್ನು ಕರೆದುಕೊಂಡು ಹೋಗುವನು ಅದು ವರೆಗೆ ನೀವು ಕ್ಷೇಮದಿಂದ ಇರಬಹುದು ॥ ೧೮೩ ॥ ತಾಯೇ. ನೀವು ಶರೀರ ಧಾರಣೆಗೆ ಬೇಕಾದ ಆಹಾರವನ್ನು ಸ್ವೀಕರಿಸುತ್ತಿರಬೇಕು ಹಲವು ಹಂಬಲಗಳನ್ನು ಬಿಟ್ಟುಬಿಡಬೇಕು—ಎಂದು ಹೇಳಿ ಅಣುವನು ಸೀತೆಯ ಪಾದಕಮಲಕ್ಕೆ ಎರಗಿದನು ॥ ೧೮೪ ॥ ಹೀಗೆ ನಮಸ್ಕರಿಸಿ ಹನುಮಂತನಿಗೆ ಸೀತೆಯು "ನಿಮ್ಮ ಒಡೆಯನಾದ ಶ್ರೀರಾಮನಿಗೆ ಇಲ್ಲಿನ ಸಂಗತಿಗಳನ್ನೆಲ್ಲ ಸುಸ್ಪಷ್ಟವಾಗಿ ವಿಜ್ಞಾಪಿಸಬೇಕು" ಎಂದು ಹೇಳಿ, ಮನಃಪೂರ್ವಕವಾಗಿ ಅವನನ್ನು ಕಳುಹಿಕೊಟ್ಟಳು ॥ ೧೮೫ ॥ ಆ ಮೇಲೆ ಕೆಲವು ಕಾರ್ಯಭಾಗಗಳನ್ನು ಹೇಳಿ, ಮನಸ್ಸಿನಿಂದ ನಿಮ್ಮ ಚಿಂತೆಯನ್ನು ಬಿಟ್ಟು

---

[1] ಜೀವಿತೇಶ್ವರ (ಗ) [2] ಬುದ್ಧಿಯೊಳು (ಗ ಚ) [3] ಒಂದಾನುಳಿಯದೆ (ಗ ಚ) [4] × × (ಗ ಚ) [5] ನಿಮ್ಮ ಕಳವಿನೊಳು (ಚ)
[6] ನನ್ನ (ಚ) [7] ನನ್ನೊಡನೆ (ಗ ಚ) [8] ನಿ ನಿನ್ನ (ಚ) [9] ಲಹುದೆಂದನವನು (ಚ) [10] ಕೊಂಬುದಲ್ಲದಿತ್ತ ಪಲವ (ಗ ಚ.)
[11] ಪತ್ತುವಿಡುವೆ (ಚ) [12] ಪೊಱಪೊಱಟ (ಗ)

ಆ ನಂದನವ ಪೊಱಮಟ್ಟಾಗಸದೊಳ । ಗಾನಂದದಿಂದಲಂದಣುವ ॥
ಆನದೆ ಬಂದು ಕಂಡೆಱಗಿದನತಿ ಸ । ನ್ಮಾನದಿಂ ರಾಮಚಂದ್ರಮನ[1] ॥ ೧೮೭ ॥

ಮೊಗವ ನೋಡುತ[2] ರಾಮಚಂದ್ರನವನ ಬಿಗಿ । ಬಿಗಿಯಪ್ಪಿಯುವಳ[3] ಕ್ಷೇಮವನು ॥
ಮಗುಳಿ ಮಗುಳಿ[4] ಕೇಳ್ದನನುಕೂಲರ ಮಾತು । ಸೊಗಸಲ್ಲವೆ ಸೋಮವದನೆ ॥ ೧೮೮ ॥

ಪೋದುದ ಲಂಕೆಗೆ ರಾವಣನಿಂದಲ್ಲಿ । ಯಾದುದ ಮಂಡೋದರಿಯ[5] ॥
ಆದರಣೆಯ ಸೀತೆಯಿರವ ನೊರೆದ[6]ನನು । ಮೋದ ಮನಕೆ ಪುಟ್ಟುವಂತೆ ॥ ೧೮೯ ॥

ಸಚಿವರ ಮುಂದೆ ಲಕ್ಷ್ಮಣನಿದಿರೊಳು ನೃಪ । ನಿಚಯದ ಸಮ್ಮುಖದಲ್ಲಿ ।
ಪ್ರಚುರತೆ ಮಾಡಿ ಪೇಳಿದನವ ಸೀತೆಯ । ಶುಚಿತೆಯನತಿ ವಿನಯದೊಳು[7] ॥ ೧೯೦ ॥

ಅರಸು ಪ್ರಧಾನ ಲಕ್ಷ್ಮಣರಲ್ಲಿ ನೆರೆದಿರ್ದ । ದೊರೆಗಳು ಪ್ರಜೆ ಪರಿವಾರ ॥
ಪರಿಣಮಿಸಿದರು ಕೊಂಡಾಡಿದರ್ ಸೀತೆಯ । ಇರವಿಗವನ[8] ಸಾಹಸಕೆ ॥ ೧೯೧ ॥

ಪರ[9]ಪುರುಷಾರ್ಥಿ ಪಾವನಮೂರ್ತಿ ಸತ್ಕೀರ್ತಿ । ವರ[10]ಸಂಯಮಿ ಸನ್ಮಾನಿ ।
ಸುರಪತಿ ವಿಭವ ಮಾನವಮನಸಿಜ ರೂಪ । ನಿರುಪಮಚರಿತನೊಪ್ಪಿದನು ॥ ೧೯೨ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೯೩ ॥

---

ಬಿಡಬೇಕೆಂದು ಅಣುವನು ಹೇಳಿದನು. ಅಷ್ಟರಲ್ಲಿ ಮೆಲ್ಲನೆ ಸೂರ್ಯೋದಯವಾಗಲು ಹೊರಟನು. ॥ ೧೮೬ ॥ ಆ ಉದ್ಯಾನದಿಂದ ಹನುಮಂತನು ಸಂತೋಷದಿಂದ ಆಕಾಶಮಾರ್ಗದಿಂದ, ತಡಮಾಡದೆ ಬಂದು, ಶ್ರೀರಾಮನನ್ನು ಕಂಡು ಮರ್ಯಾದೆಯಿಂದ ನಮಸ್ಕರಿಸಿದನು. ॥ ೧೮೭ ॥ ಶ್ರೀರಾಮನು ಅವನ ಮುಖವನ್ನು ನೋಡಿ, ಆಲಿಂಗನವನ್ನು ಮಾಡಿ, ಸೀತೆಯ ಕ್ಷೇಮ ಸಮಾಚಾರವನ್ನು ಮರಳಿ ಮರಳಿ ಕೇಳಿದನು. ಎಲೈ ಚೇಳಿನಿಯೇ, ತಮಗೆ ಅನುಕೂಲರಾಗಿರುವವರ ಮಾತು ಚೆಂದವಲ್ಲವೆ? ॥ ೧೮೮ ॥ ಆಗ ಅಣುವನು, ತಾನು ಲಂಕೆಗೆ ಹೋದುದನ್ನೂ, ಅಲ್ಲಿ ರಾವಣನಿಂದ ಆದ ಸಂಗತಿಯನ್ನೂ, ಮಂಡೋದರಿಯ ಆದರ ಕ್ರಮವನ್ನೂ, ಸೀತೆಯ ಸ್ಥಿತಿಯನ್ನೂ ಮನಸ್ಸಿಗೆ ಆನಂದವುಂಟಾಗುವಂತೆ ವಿವರಿಸಿದನು. ॥ ೧೮೯ ॥ ಮಂತ್ರಿಯ ಮುಂದೆಯೂ, ಲಕ್ಷ್ಮಣನ ಎದುರಿನಲ್ಲಿಯೂ, ರಾಜಸಮೂಹದ ಸಮ್ಮುಖದಲ್ಲಿಯೂ, ಅಣುವನು ಸೀತೆಯ ಪರಿಶುದ್ಧತೆಯನ್ನು ವಿಸ್ತರಿಸಿ, ತಿಳಿಸಿದನು. ॥ ೧೯೦ ॥ ಅಲ್ಲಿದ್ದ ರಾಜರು. ಮಂತ್ರಿಗಳು, ಲಕ್ಷ್ಮಣನು, ಸೇರಿದ್ದ ದೊರೆಗಳು, ಪ್ರಜೆ, ಪರಿವಾರದವರು ಎಲ್ಲರೂ ಸೀತೆಯ ಇರುವಿಕೆಯನ್ನೂ ಅಣುವನ ಸಾಹಸವನ್ನೂ ಮೆಚ್ಚಿ ಹೊಗಳಿದರು. ॥ ೧೯೧ ॥ ಪರೋಪಕಾರಿಯೂ, ನಿರ್ಮಲಸ್ವರೂಪನೂ, ಒಳ್ಳೆಯ ಕೀರ್ತಿಹೊಂದಿದವನೂ, ಶ್ರೇಷ್ಠ ತಪಸ್ವಿಯೂ, ಸನ್ಮಾನವುಳ್ಳವನೂ, ದೇವೇಂದ್ರನಂತಹ ವೈಭವವುಳ್ಳವನೂ, ಮನುಷ್ಯರಲ್ಲಿ ಮನ್ಮಥನಂತೆ ಸುಂದರನಾಗಿರುವವನೂ, ಹೋಲಿಸಲಿಕ್ಕಾಗದಿರುವ ನಡತೆಯುಳ್ಳವನೂ ಆದ ಶ್ರೀರಾಮನು ಹೀಗೆ ಶೋಭಿಸುತ್ತಿದ್ದನು. ॥ ೧೯೨ ॥ ಈ ದಿನ ನಾನು ಮುಂದಿನ ಕಥೆಗಳನ್ನು ತಿಳಿಸುವೆನೆಂದು ಹೇಳಿದಂತೆ ಮುಂದುವರಿಯುತ್ತ ಬಂದು ಸಂಧಿಯು ಇಲ್ಲಿಗೆ ಪೂರ್ಣ

---

[1] ಸನ್ಮಾನದಿಂದಾ ರಾಮನಿಗೆ (ಗ) ಸನ್ಮಾನದಿಂ ರಾಮಚಂದ್ರಮಗೆ (ಚ). [2] ಕಾಣುತ (ಗ ಚ). [3] ಯವನ (ಗ ಚ). [4] ಮಗುಳೆ ಮಗುಳೆ (ಗ ಚ). [5] ಮಂಡೋದರಿಯ (ಗ) [6] ಯಿರವನೆಲ್ಲವ (ಕ) [7] ಶುಚಿತೆಯನಾ ವಿವರದೊಳು (ಕ). [8] ಇರವಗಂಡವನ (ಗ) [9] ಪರಮ (ಗ). [10] ಸತ್ಕೀರ್ತಿಧರ (ಚ)

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದುದು[1] ಪದಿನಾಲ್ಕನೆಯ ಮಿಸುಪ ಸಂಧಿ ॥ ೧೯೪ ॥

---

ಹಾಯಿತು ಎಲೈ ಹರಿಣಾಕ್ಷಿ, ಚೇಳಿನಿಯೇ, ಆ ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು ಕೇಳು. ॥ ೧೯೩ ॥
ಬ್ರಾಹ್ಮಣಕುಲದಲ್ಲಿ ಜನಿಸಿದವನೂ, ಹೊಸ ಮನ್ಮಥನಂತೆ ಇರುವವನೂ, ನಿರ್ಮಲ ಗುಣವುಳ್ಳವನೂ, ಜಿನಭಕ್ತನೂ, ಅತಿಶ್ರೇಷ್ಠನಾದ ವಾಗ್ದೇವತೆಯ ಸ್ವಚ್ಛವಾದ ಮುಖಕ್ಕೆ ಕನ್ನಡಿಯಂತೆ ಇರುವವನೂ, ನಿರ್ಮಲವಾದ ನಡತೆಯುಳ್ಳವನೂ, ಸಚಿವನೂ ಆದ ದೇವಪ್ಪನು ಸಂತೋಷದಿಂದ ತಿಳಿಸಿರುವ ರಾಮವಿಜಯಕಾವ್ಯದಲ್ಲಿ ಹದಿನಾಲ್ಕನೆಯ ಸಂಧಿಯಿದು ಪ್ರಸಿದ್ಧಿಪಡೆಯಿತು. ॥ ೧೯೪ ॥

# ೧೫. ಸಂಧಾನದ ಸಂಧಿ

ಶ್ರೀರಮೆಯಾಣ್ಮ ಪೂಜಿತ ಚರಣನ ಶಶಿ । ಯಾ ರವಿಕೋಟಿ ಕಿರಣನ ॥
ಮಾರವಿಜಯ ಮುನಿಸುವ್ರತ ಜಿನರಂಘ್ರಿ । ವಾರಿಜಕಭಿವಂದಿಸುವೆನು ॥ ೧ ॥

ಇಂದ್ರವೈಭವ ಇಂಗೋಲ್ವಿಲ್ಲನ[1] ರೂಪ । ಚಂದ್ರವದನ ಚದುರಿಂದ ॥
ಸಾಂದ್ರ ಸಂತೋಷದಿಂ ಪೇಳುವೆನಾ ರಾಮ । ಚಂದ್ರನ ಕಥೆಯ ನಲ್ಮೆಯೊಳು ॥ ೨ ॥

ಲಾಲಿಸು ಲಲನಾಮಣಿಯೆ ಲಾವಣ್ಯದ । ಜಾಲವೆ ಮನ್ಮಥ ನೃಪತಿ ॥
ಪಾಲಿಸುವಧಿದೇವತೆ ರಾಮಚಂದ್ರ ಭೂ । ಪಾಲನ ಕಥೆಯ ಪ್ರೀತಿಯೊಳು ॥ ೩ ॥

ನಿಡುಮುಡಿಯುಳೆ ನೀರೇಜವದನೆ ಪೊಂ । ಗೊಡ ಮೊಲೆಯುಳೆ ಪೊಂಬಾಳೆ ॥
ದೊಡೆಯುಳೆ[2] ರಾಯಂಚೆಯ ನಡೆಯುಳೆ ತಳಿ । ರಡಿಯುಳೆ[2] ಕೇಳು ಕಥೆಯನು ॥ ೪ ॥

ಸವಿನುಡಿಯುಳೆ ಸಕ್ಕರೆದುಟಿಯುಳೆ ನವ । ಕುವಲಯದಳನಿಭ ನೇತ್ರೆ ॥
ಸವಿವಿಲ್ಲ ವಿಜಯನ ಕಥೆಯ ವಿಸ್ತರಿಸುವೆ । ವಿವರದೊಳೊಲಿದಾಲಿಪುದು ॥ ೫ ॥

ತೆಱಿದ ರಸಾಗಿ ನಿನ್ನಯ[3] ಪಲ್ಗಳ ಕಾಂತಿ । ಪೊಱಪೊಣ್ಮುವಂತಱಿಯದರು ॥
ಅಱಿವಂತಱಿವು ಕೇಳುವೆ ನಿನ್ನೀ ಮನ । ದೆಱಿಯನೆ ಮುಂದಣ ಕಥೆಯ ॥ ೬ ॥

ಮಱುದಿನದೋಲಗದೊಳಗಾ ನೃಪ ತನ । ಗುಱುವ ಮನ್ನೆಯರನು ಕರಸಿ ॥
ತೆಱನಾವುದು ಮುಂದಣ ರಾಜಕಾರ್ಯಕ್ಕೆ । ಹೊಱಿಗೆ ಯಾವುದು ಪೇಳಿಮೆನಲು ॥ ೭ ॥

---

ಶ್ರೀಲಕ್ಷ್ಮೀವಲ್ಲಭನಿಂದ ಪೂಜಿಸಲ್ಪಡುವ ಪಾದವುಳ್ಳ, ಕೋಟಿ ಸೂರ್ಯ ಚಂದ್ರರ ಪ್ರಕಾಶವುಳ್ಳ, ಮನ್ಮಥನನ್ನು ಜಯಿಸಿದ ಮುನಿಸುವ್ರತ ಜಿನೇಶ್ವರರ ಪಾದಕಮಲಕ್ಕೆ ನಮಸ್ಕರಿಸುತ್ತೇನೆ. ॥ ೧ ॥ ಶ್ರೇಣಿಕನು ಹೀಗೆಂದನು – "ದೇವೇಂದ್ರನ ವೈಭವವುಳ್ಳ, ಮನ್ಮಥನ ರೂಪವುಳ್ಳ, ಚಂದ್ರನಂತಹ ಮುಖವುಳ್ಳ, ಶ್ರೀರಾಮಚಂದ್ರನ ಕಥೆಯನ್ನು ಚಾತುರ್ಯದಿಂದಲೂ ಸಂತೋಷದಿಂದಲೂ ಹೇಳುವನು. ॥ ೨ ॥ ಎಲೈ ಸ್ತ್ರೀರತ್ನವೇ, ಸೌಂದರ್ಯದ ರಾಶಿಯೇ, ಕಾಮಚಕ್ರೇಶ್ವರನು ಪಾಲಿಸುತ್ತಿರುವ ಅಧಿದೇವತೆಯೇ, ಶ್ರೀರಾಮರಾಜನ ಕಥೆಯನ್ನು ಪ್ರೀತಿಯಿಂದ ಕೇಳು. ॥ ೩ ॥ ನೀಳವಾದ ಕೂದಲಿನ, ತಾವರೆಯಂತಹ ಮುಖದ, ಹೊನ್ನಿನ ಮಡಕೆಯಂತಹ ಮೊಲೆಯ, ಹೊಂಬಾಳೆಯಂತಹ ಪಾದದ, ಚೇಳಿನಿಯೇ, ಕಥೆಯನ್ನು ಕೇಳು. ॥ ೪ ॥ ಮಧುರವಾದ ವಚನವನ್ನಾಡುವವಳೆ, ಸಕ್ಕರೆಯಂತಹ ಸಿಹಿಯಾದ ತುಟಿಯುವಳೆ, ಹೊಸ ನೈದಿಲೆಯೆಸಳಿನಂತಹ ಕಣ್ಣಿನವಳೆ, ಮನ್ಮಥವಿಜಯನ ಕಥೆಯನ್ನು ವಿಸ್ತಾರವಾಗಿ ತಿಳಿಸುವೆನು ಪ್ರೀತಿಯಿಂದ ಕೇಳು. ॥ ೫ ॥ ಆಗ ಚೇಳಿನಿ ಹೀಗೆ ಹೇಳಿದಳು – "ಎಲೈ ಪ್ರಾಣವಲ್ಲಭನೆ, ನಿನ್ನ ಹಲ್ಲುಗಳ ಕಾಂತಿ ಸ್ಪಷ್ಟವಾಗಿ ಕಾಣುವಂತೆ, ತಿಳಿಯದವರು ತಿಳಿಯುವಂತೆ ಮುಂದಿನ ಕಥೆಯನ್ನು ಹೇಳು, ಕೇಳುವೆನು." ॥ ೬ ॥ ಶ್ರೀರಾಮನು ಮರುದಿವಸ ಸಭೆಯಲ್ಲಿ ಶ್ರೇಷ್ಠರಾದ ಜನನಾಯಕರನ್ನು ಕರೆಸಿ, "ನಮ್ಮ ಮುಂದಿನ ಕ್ರಮವಾವುದು? ಮುಂದಿನ ರಾಜಕಾರ್ಯದ ಹೊಣೆಗಾರಿಕೆ ಯಾವುದು? ಹೇಳಿ" ಎಂದನು. ॥ ೭ ॥ ಆಗ ಅಣುವನು ಹೀಗೆ ಹೇಳಿದನು – "ನಾವು ನಾಮ, ಭೇದಗಳಿಂದ ವರ್ತಿಸಿ ಕಾರ್ಯವನ್ನು

---

[1] ಇಂಗೋಲ್ವಿಲ್ಲ ಸಮ (ಗ ಚ.) [2] ಅರಗಿಳಿನುಡಿಯುಳೆ ರಾಯಂಚೆ । ನಡೆಯುಳೆ (ಗ ಚ) ೫ ಈ ಪದ್ಯ ಕ ದಲ್ಲಿಲ್ಲ. [3] ತೆಱಿದರಿಸನವಾಗಿ ನಿಮ್ಮ (ಗ. ಚ.).

ನುಡಿದನಣುವ ಸಾಮಭೇದದಾನಗಳಿಂದೆ । ನಡೆದು[1]ನೆಗಳಿ ಕಾರ್ಯವನು ।
ಪಡೆದವರೊಳ[2]ಗಾಗದಿರೆ ದಂಡೋಪಾಯ । ವಿಡಿದು ಲಂಕೆಯ ಸಾಧಿಸುವ ॥ ೮ ॥

ಎನಲದಕೊಡಬಟ್ಟು ಸೇನಾಧಿಪಟ್ಟವ । ಮನವುಟ್ಟಿ ಕಟ್ಟಿಯಣುವಗೆ ॥
ವಿನಯದಿ ಯುವರಾಜ ಪಟ್ಟವ ಸುಗ್ರೀ । ವನಿಗೆ ಕಟ್ಟಿದ ರಾಮಚಂದ್ರ ॥ ೯ ॥

ಆ ರಾಯ ನುಡಿದ ಮುಂದಣ ಕಾರ್ಯ ನಮಗಿಂ । ನಾರಿಂದಲಹುದೆಂದೆನಲು ॥
ಆರೈದು ನುಡಿದನಂಗಜ ಮೂವರು ಬಲು । ವೀರರುಂಟತಿ ವಿದ್ಯೆಯಲಿ ॥ ೧೦ ॥

ಬಲ್ಲವನರ್ಥವಿಜಯ[3] ಸುರವಿಜಯರೊ । ಳಲ್ಲಿರ್ಪ ಧರ್ಮವಿಜಯರು ॥
ಬಲ್ಲರುತ್ತಮ[4] ಮಧ್ಯಮ ನೀಚ ವಿದ್ಯೆಯೊ । ಳಿಲ್ಲೆಣೆಯಾದವ[5]ರವರ್ಗೆ ॥ ೧೧ ॥

ಎನಲೆಂದ ಲಂಕೆಯ ಪೊಕ್ಕು ದಶಾಸ್ಯನ । ಅನುವನಱಿದು ವಿಭೀಷಣನ ॥
ಮನವ ಕಾಣಿಸಿಕೊಂಡು ಬರ್ಪವರಾರೆಂ । ದನುವದಿಸಲು[6] ಪೇಳ್ದನವನು ॥ ೧೨ ॥

ಅಲ್ಲಿಗೆ ಪೋಪರೆ ಗಗನಗಾಮಿನಿ ವಿದ್ಯೆ । ಯಲ್ಲಿ ಸಮರ್ಥರಾದರಿಗೆ ॥
ಅಲ್ಲದುಳಿದ ಮನುಜರಿಗೆ ಗೋಚರಿಸುವು । ದಲ್ಲ ಕೇಳೆನ್ನ ಬಿನ್ನಪವ ॥ ೧೩ ॥

ಅಣುವಗಲ್ಲದೆ ದಶವದನನು ಕಾರ್ಯವ । ಮಣಿದು ಕೊಡನು ವಿಭೀಷಣನ ॥
ಗುಣವನಱಿದು ಬರ್ಪ ಮನದೊಳಗಿನ್ನೊಂದ । ಣಿಸದೆ ಕಳುಪುವುದವನ ॥ ೧೪ ॥

ಎಂದೆನಲೊಡಬಟ್ಟು ನೃಪ ಕಳುಹಿದೊಡವ[7] । ನೊಂದಾಗಿ ವಿಜಯ ಕುಮುದನ[8] ॥
ಅಂದು ಮನೋವೇಗ ರವಿಗತಿಯೆಂದೆಂಬ । ಸಂದ ಖೇಚರಸುತರುಗಳ ॥ ೧೫ ॥

---

ಮಾಡೋಣ ಇದರಿಂದ ಅವರು ನಮಗೆ ಒಳಗಾಗದಿದ್ದರೆ, ದಂಡೋಪಾಯದಿಂದ ಲಂಕೆಯನ್ನೇ ಗೆಲ್ಲುವ" ಎಂದನು ॥ ೮ ॥ ಅಣುವನು ಹೀಗೆನ್ನಲು, ಶ್ರೀರಾಮನು ಆ ಮಾತಿಗೆ ಒಪ್ಪಿ, ಮನಃಪೂರ್ವಕವಾಗಿ ಸೇನಾಪತಿಯ ಪಟ್ಟವನ್ನು ಅಣುವನಿಗೂ ಯುವರಾಜನ ಪಟ್ಟವನ್ನು ಸುಗ್ರೀವನಿಗೂ ಕಟ್ಟಿದನು ॥ ೯ ॥ ಆ ಮೇಲೆ ಶ್ರೀರಾಮನು ಮುಂದಿನ ಕಾರ್ಯವು ನಮಗ ಯಾರಿಂದ ಆದೀತೆಂದು ಕೇಳಿದನು ಆಗ ಅಂಗಜನು (ಅಂಗದ) ಚೆನ್ನಾಗಿ ಯೋಚಿಸಿ ಹೀಗೆಂದನು – "ನಮ್ಮಲ್ಲಿ ಮೂವರು ಮಹಾ ವೀರರಿದ್ದಾರೆ" ॥ ೧೦ ॥ ಮಹಾವಿದ್ಯೆಯಲ್ಲಿ ಚೆನ್ನಾಗಿ ಅರಿತವರು ಅರ್ಥವಿಜಯ, ಸುರವಿಜಯ, ಧರ್ಮವಿಜಯರು ಇವರಿಗೆ ಉತ್ತಮ, ಮಧ್ಯಮ, ನೀಚವಿದ್ಯೆಗಳಲ್ಲಿ ಸರಿಸಮಾನರೇ ಇಲ್ಲ". ಎಂದನು ॥ ೧೧ ॥ ಆಗ ಶ್ರೀರಾಮನು "ಲಂಕೆಗೆ ಹೋಗಿ ರಾವಣನ ಸ್ಥಿತಿಯನ್ನು ತಿಳಿದು, ವಿಭೀಷಣನ ಮನಸ್ಸನ್ನು ತಿಳಿದು, ಬರತಕ್ಕವರು ಯಾರು?" ಎಂದು ಕೇಳಿದನು ಅದಕ್ಕೆ ಅಂಗಜನು ಹೀಗೆ ಹೇಳಿದನು ॥ ೧೨ ॥ ಎಲೈ ರಾಮನೇ, ನನ್ನ ವಿಜ್ಞಾಪನೆಯನ್ನು ಕೇಳು ಅಲ್ಲಿಗೆ ಹೋಗಬೇಕಾದರೆ ಆಕಾಶಗಾಮಿನೀ ವಿದ್ಯೆಯಲ್ಲಿ ಸಮರ್ಥರಾದವರೇ ಆಗಬೇಕು ಇತರರಿಗೆ ಸಾಧ್ಯವಾಗದು ॥ ೧೩ ॥ 'ಆದುದರಿಂದ ಅಣುವನಿಗಲ್ಲದೆ ಆ ರಾವಣನು ಬಗ್ಗಲಾರನು ವಿಭೀಷಣನ ಗುಣವನ್ನು ಪರೀಕ್ಷಿಸಿ ಬರಬೇಕಾದರೆ, ನೀನು ಬೇರೆ ಯಾವುದನ್ನೂ ಯೋಚಿಸದೆ, ಅಣುವನನ್ನೇ ಕಳುಹಿಕೊಡಬೇಕು' ಎಂದನು ॥ ೧೪ ॥ ಅಂಗದನು ಹೀಗೆನ್ನಲು ಶ್ರೀರಾಮನು ಒಪ್ಪಿ ವಿಜಯ, ಕುಮುದ, ಮನೋವೇಗ, ರವಿಗತಿ – ಎಂಬ ನಾಲ್ವರು ಖೇಚರ

---

[1] ನಡೆಮ ನೀ (ಚ) [2] ಪಡೆಗವರೊಳ (ಕ). [3] ಬಲ್ಲಿದನತ್ತವಿಜಯ (ಗ) [4] ವಿದ್ಯನೀಚವಿದ್ಯಗಳಿಂದಿಲ್ಲೆಣೆ (ಕ) [5] × (ಗ)
[6] ದನುವಡಿಸಲು (ಗ) [7] ಕಳುಹಿದನವ (ಕ) ಕಳುಹಿದನಾತ (ಗ) [8] ವಿಜಯಕುಮರನ (ಕ)

ಪೋಗಿ ವಿಭೀಷಣನನು ಕಂಡವಗತಿ । ರಾಗ ಜನಿಸುವಂತೆ ನುಡಿದು ॥
ಆಗವನಿಂ ರಾವಣನ ಕಂಡು ಕಾರ್ಯಕ್ಕೆ । ಹೇಗೆ ಬಹುದು ಹಾಗೆ ನುಡಿದು ॥ ೧೬ ॥

ಅಲ್ಲಿ ಕೇಳಣುವ ನೀನತಿ ಬೆಟ್ಟೆಯ[1] ಮಾತ । ಸೊಲ್ಲದೆ ಸೊಗಸನೆ ನುಡಿದು ॥
ಇಲ್ಲಿಗೆ ಬಾ ಬಂದ ಬಳಿಕ ನಮ್ಮಲ್ಲಿ ತ । ಪ್ಪಿಲ್ಲ ಕಾರ್ಯವ ಕಂಡುಕೊಂಬ ॥ ೧೭ ॥

ಎನೆ ಕಳುಹಿಸಿಕೊಂಡಣುವ ಜನಪನ ಪಾದ । ವನಜಕೆಱಗಿ ಖೇಚರರ ॥
ತನುಜರು ನಾಲ್ವರು ವೆರಸಿ ಗಗನಗಾ । ಮಿನಿ ವಿದ್ಯೆಯಿಂದ ತೆರಳಿದ ॥ ೧೮ ॥

ಆಗಸವಟ್ಟೆಯೊಳತಿ ವೇಗದಿಂ ಬಂದು[2] । ಪೋಗಿ ಪೊಕ್ಕನು ಲಂಕೆಯನು ॥
ಆ ಗುಣಮಣಿ ವಿಭೀಷಣನರಮನೆಗೈದಿ । ಯಾಗ ಕಂಡರು ಕೇಳವನ ॥ ೧೯ ॥

ಕಳುಪಿದ ಶ್ರೀರಾಮಚಂದ್ರನೃಪತಿ ನಿಮ್ಮ । ಬಳಿಗೆ ರಾವಣನ ಮುಂದಿಟ್ಟು ॥
ತಳುವದೆ ಬಂದು ಕಾಣಿಸಿ ಕೊಡಿ[3] ಕಾರ್ಯಕೆ । ಬಳಲಬೇಕಲಸದೆ ನೀವು[4] ॥ ೨೦ ॥

ಎರಡು ಮನೆಗೆ ನೀನೇ ಕರ್ತನವನೊಳ । ಗೆರಡಿಗೆಲ್ಲ ನಮ್ಮೊಳಗವಗೆ ॥
ಎರವಿಲ್ಲವೆಂದು ನಮ್ಮನು ಕಳುಹಿದ ನಿಮ್ಮ । ಪಿರಿದು ಕೊಂಡಾಡಿ ನಮ್ಮರಸ ॥ ೨೧ ॥

ನುಡಿವನು ಗಡ ಲೇಸ ರಾಣುವೆಯವನ ಕೈ । ವಿಡಿದಿಹುದು ಗಡ ನಂಬಿದರ ॥
ಕೆಡಿಸುವನಲ್ಲ ಗಡೆಂದು ನುಡಿದು ನಿ । ಮ್ಮೆಡೆಗೆ ಕಳುಪಿದ ನಮ್ಮರಸ ॥ ೨೨ ॥

---

ಕುಮಾರಕರೊಡನೆ ಅಣುವನನ್ನು ಕಳುಹಿಸಿದನು. ॥ ೧೫ ॥ ರಾಮನು ಅಣುವನನ್ನು ಕಳುಹಿಕೊಡುತ್ತ, ತಕ್ಕ ಸೂಚನೆಗಳನ್ನು ಕೊಟ್ಟನು. ಲಂಕೆಗೆ ಹೋಗಿ, ವಿಭೀಷಣನನ್ನು ಕಂಡು ಅವನಿಗೆ ಪ್ರೀತಿಯುಂಟಾಗುವಂತೆ ಮಾತಾಡಿ, ಅವನನ್ನು ಕೂಡಿಕೊಂಡು ರಾವಣನನ್ನು ಕಂಡು, ಕಾರ್ಯಕ್ಕೆ ಅನುಕೂಲವಾಗುವಂತೆ ಮಾತಾಡಬೇಕೆಂದು ಸೂಚಿಸಿದನು. ॥ ೧೬ ॥ ಎಲೈ ಅಣುವನೇ, ನೀನು ಲಂಕೆಯಲ್ಲಿ ಬೆಲೆಯಿಲ್ಲದ ಮಾತನ್ನು ಆಡದೆ, ಸೊಗಸಾದುದನ್ನೇ ಮಾತಾಡಿ, ಬಾ. ಇಷ್ಟೊಂದನ್ನು ಮಾಡಿ ಬಂದರೆ, ಆ ಮೇಲೆ ನಮ್ಮಲ್ಲಿ ತಪ್ಪಿಲ್ಲ. ಆ ಮೇಲೆ ಮುಂದಿನ ಕಾರ್ಯವನ್ನು ನೋಡಿಕೊಳ್ಳೋಣ—ಎಂದು ಶ್ರೀರಾಮನು ಹೇಳಿದನು. ॥ ೧೭ ॥ ಹೀಗೆ ಶ್ರೀರಾಮನು ಸೂಚಿಸಲು ಅಣುವನು, ಅವನ ಪಾದಕಮಲಕ್ಕೆ ವಂದಿಸಿ, ನಾಲ್ವರು ಖೇಚರಕುಮಾರರನ್ನು ಕೂಡಿಕೊಂಡು, ಗಗನಗಾಮಿನೀ ವಿದ್ಯೆಯಿಂದ ಲಂಕೆಗೆ ತೆರಳಿದನು. ॥ ೧೮ ॥ ಅಣುವನು ಆಕಾಶ ಮಾರ್ಗದಲ್ಲಿ ಬಹಳ ವೇಗವಾಗಿ ಬಂದು ಲಂಕೆಯನ್ನು ಪ್ರವೇಶಿಸಿದನು. ಅಲ್ಲಿ ಸದ್ಗುಣಗಳಿಗೆ ರತ್ನಸಾದ ವಿಭೀಷಣನ ಅರಮನೆಗೆ ಹೋಗಿ ಅವನನ್ನು ಎಲ್ಲರು ಕಂಡರು ॥ ೧೯ ॥ ಅಣುವನು ವಿಭೀಷಣನೊಡನೆ ಹೀಗೆಂದನು—"ನಮ್ಮನ್ನು ಶ್ರೀರಾಮಚಂದ್ರನು ನಿಮ್ಮ ಬಳಿಗೆ ಕಳುಹಿಸಿರುತ್ತಾನೆ. ನಮ್ಮನ್ನು ರಾವಣನ ಮುಂದೆ ಕರೆದುಕೊಂಡುಹೋಗಿ ಕಾಣಿಸಿರಿ. ಈ ಕಾರ್ಯಕ್ಕಾಗಿ ನೀವು ಶ್ರೀರಾಮನಿಗಾಗಿ ಸ್ವಲ್ಪ ಬಳಲಬೇಕಾಗಿದೆ, ॥ ೨೦ ॥ ಶ್ರೀರಾಮನ ಮನೆ ಮತ್ತು ನಿನ್ನ ಮನೆ—ಈ ಎರಡೂ ಮನೆಗಳಿಗೆ ನೀನೇ ಯಜಮಾನನು —ಎಂಬ ಭಾವನೆಯಿಂದ, ನಮ್ಮೊಳಗೆ ಏನೂ ಹೆಚ್ಚುಕಡಮೆಯಿಲ್ಲವೆಂದು, ನಿಮ್ಮನ್ನು ಹೊಗಳಿ, ಆ ಶ್ರೀರಾಮನು ನಮ್ಮನ್ನು ಇಲ್ಲಿಗೆ ಕಳುಹಿಸಿರುತ್ತಾನೆ. ॥ ೨೧ ॥ "ವಿಭೀಷಣನು ಒಳ್ಳಿತನ್ನೇ ಮಾತಾಡುವನು. ಅವನಲ್ಲಿ ಸೈನ್ಯವೂ ವಶಗತವಾಗಿಯೇ ಇದೆಯಂತೆ, ನಂಬಿದವರನ್ನು ಅವನು ಮೋಸಗೊಳಿಸುವವನಲ್ಲವಂತೆ" ಎಂದು ನಮ್ಮೊಡೆಯ ಶ್ರೀರಾಮನು

---

[1] ಬೇಟೆಯ (ಕ) [2] ವೇಗದಿಂದಂದು (ಗ ಚ.) [3] ಕೊಂಬ (ಚ). [4] ಬೇಕರಸ ನೀವೆಂದು (ಚ). ೨೦ ನೆಯ ಪದ್ಯದ ಉತ್ತರಾರ್ಧದಿಂದ ೩೮ನೆ ಪದ್ಯದ ಕೊನೆತನಕ ಗ ಪ್ರತಿಯಲ್ಲಿ ಪಾತವಾಗಿದೆ

ಆವ ಜನ್ಮದ ನೇಹವೆಂದಱಿಯೆನು ನಾ । ನಾವನು ಕುಲಕೇಳ್ದು ನಿನ್ನ[1]
ರಾವಿಗೆ ಶ್ರೀರಾಮಚಂದ್ರ ನೃಪತಿಗೆಂ । ದಾ ವಿಭೀಷಣಗೆ ಪೇಳಿದನು ॥ ೨೩ ॥

ಪರಮಾರ್ಥಿ[2] ಗಡ ಪರಪುರುಷಾರ್ಥಿ ಗಡ ಜಿನ । ಚರಣದೊಳತಿಹಿತನು ಗಡ ॥
ಸರಸಸನ್ಮಾನಿ ಗಡೆಂದು ನುಡಿದು ನ । ಮ್ಮರಸನಟ್ಟಿದ ನಿನ್ನ ಬಳಿಗೆ ॥ ೨೪ ॥

ಭಾವಿಸಲೈವತ್ತು ಕೋಟಿ ಯೆಂಬತ್ನಾಲ್ಕು । ತೀವಿದ ಚತುರಂಗಬಲವು ॥
ಆ ವಿಭುವಿಗೆ ಮೂಱುವರೆ ಕೋಟಿ ಖೇಚರ । ರಾವಾಗಲಿಹರು ಕೇಳರಸ ॥ ೨೫ ॥

ಇನಿತು ನೆರೆದ ಬಲವೆರಸಿ ಲಂಕೇಶನೊ । ಳನುವರವನು ಮಾಡಿ ತನ್ನ ॥
ವನಿತೆಯ ಕೊಂಡೊಯ್ವ ಶಕ್ತಿಯುಂಟವ ನಿ । ಮ್ಮನುಬಂಧಿಕೆಯನು ಬಯಸಿ ॥ ೨೬ ॥

ಕೆಡದಂತೆ ಮಾಡಿ ಕಾಣಿಸಿ ರಾವಣನ ಮುಂದೆ । ನುಡಿದು ಬಿಡಿಸಿ ಸೀತೆಯನು ॥
ಕೊಡಿಸಿ ನೀ ಪೇಳಿ ಕೊಡದೊಡೆಮಗಿನ್ನಿದು । ಕಡೆಯೆಂದು ನುಡಿದನಂದಣುವ ॥ ೨೭ ॥

ನುಡಿದಣುವನ ಮಾತಿಗೆ ರಾಮಚಂದ್ರನ । ನುಡಿಗೆಯುವನ ತರಹರಕೆ ॥
ಪಡಿಗಾಣೆನೆಂದು ಪೊಗಳಿಯುವರೊಡವರೆ । ನಡೆದನಂದರಮನೆಗಾಗಿ ॥ ೨೮ ॥

ಬಂದು ನಾಲ್ಕೈದು ಬಾಗಿಲ ದಾಟ ರಾವಣ । ನಂದಿರ್ಪೋಳಚಾವಡಿಯಲಿ ॥
ನಿಂದು ಬಿನ್ನವಿಸಿದನಿವರಯೋಧ್ಯಾಪುರ । ದಿಂದಲಟ್ಟಿದ ರಾಮಚಂದ್ರ ॥ ೨೯ ॥

---

ಹೇಳಿ, ನಮ್ಮನ್ನು ಇಲ್ಲಿಗೆ ಕಳುಹಿರುತ್ತಾನೆ ॥ ೨೨ ॥ ಯಾವ ಪೂರ್ವಜನ್ಮದ ಸ್ನೇಹದಿಂದಲೋ ತಿಳಿಯೆನು ನಾನು ನಿನ್ನ ಕುಲವನ್ನು ತಿಳಿದು, ಶ್ರೀರಾಮಚಂದ್ರನಿಗೋಸ್ಕರ ಇಲ್ಲಿಗೆ ಬಂದಿರುತ್ತೇನೆ—ಎಂದು ಅಣುವನು ಹೇಳಿದನು. ॥ ೨೩ ॥ ಪರಮಾರ್ಥವುಳ್ಳವನು, ಪರೋಪಕಾರ ಮಾಡುವವನು, ಜಿನಭಕ್ತನು, ರಸಿಕನು, ಮರ್ಯಾದೆಯುಳ್ಳವನು—ಎಂದು ನಿಮ್ಮನ್ನು ತಿಳಿದು ಶ್ರೀರಾಮನು ನಮ್ಮನ್ನು ನಿಮ್ಮ ಬಳಿಗೆ ಕಳುಹಿಸಿದ್ದಾನೆ ॥ ೨೪ ॥ ಆ ಶ್ರೀರಾಮನಿಗೆ ಐವತ್ತುಕೋಟಿ ಎಂಬತ್ತ ನಾಲ್ಕು ಲಕ್ಷ ಚತುರಂಗಸೇನೆಯಿದೆಯಲ್ಲದೆ ಮೂರುವರೆ ಕೋಟಿ ಖೇಚರಸೈನ್ಯವೂ ಯಾವಾಗಲೂ ಸಿದ್ಧವಾಗಿದೆ ॥ ೨೫ ॥ ಇಷ್ಟೊಂದು ಪ್ರಬಲವಾದ ಸೈನ್ಯವನ್ನು ಕೂಡಿ ರಾವಣನೊಡನೆ ಯುದ್ಧಮಾಡಿ, ತನ್ನ ಮಡದಿಯನ್ನು ಕೊಂಡುಹೋಗುವ ಶಕ್ತಿ ಅವನಿಗಿದೆ ಆದರೂ ಅವನು ನಿಮ್ಮ ಸ್ನೇಹವನ್ನು ಒಯಸಿದ್ದಾನೆ ॥ ೨೬ ॥ ಕೇಡಾಗದಂತೆ ಯತ್ನಿಸಿ, ನಮ್ಮನ್ನು ರಾವಣನಿಗೆ ಕಾಣಿಸಿ, ಆ ರಾವಣನಿಗೆ ನೀತಿಯನ್ನು ಹೇಳಿ, ಸೀತಾದೇವಿಯನ್ನು ಬಿಡಿಸಿ, ಶ್ರೀರಾಮನಿಗೆ ನೀವು ಕೊಡಿಸಬೇಕು ನೀವು ಹೇಳಿಯೂ ಅವನು ಸೀತೆಯನ್ನು ಕೊಡದಿದ್ದರೆ, ಇದೇ ಕೊನೆ—ಎಂದು ಅಣುವನು ಹೇಳಿದನು ॥ ೨೭ ॥ ಹೀಗೆ ಹೇಳಿದ ಅಣುವನ ಮಾತಿಗೆ ಶ್ರೀರಾಮನ ಮಾತಿಗೂ ಸಹನೆಗೂ ಸರಿಕಾಣೆನು—ಎಂದು ವಿಭೀಷಣನು ಕೊಂಡಾಡಿ, ಅವರನ್ನು ಕೂಡಿಕೊಂಡು ರಾವಣನ ಅರಮನೆಯ ಕಡೆಗೆ ತೆರಳಿದನು ॥ ೨೮ ॥ ಬರುತ್ತ ನಾಲ್ಕೈದು ಬಾಗಿಲುಗಳನ್ನು ದಾಟಿ ರಾವಣನು ಇರುವ ಒಳಚಾವಡಿಗೆ ಬಂದು, ವಿಭೀಷಣನು ಹೀಗೆ ವಿಜ್ಞಾಪಿಸಿದನು—"ಇವರನ್ನು ಶ್ರೀರಾಮನು ಅಯೋಧ್ಯೆಯಿಂದ ಕಳುಹಿಸಿರುತ್ತಾನೆ" ॥ ೨೯ ॥ ಅವರು ತಂದ ಶ್ರೀವತ್ಸಚಿಹ್ನೆಯಿಂದ ಕೂಡಿದ ಶ್ರೀರಾಮನ ಪತ್ರವನ್ನು ರಾವಣನ ಮುಂದಿಕ್ಕಲು, 'ಅದನ್ನು ಹೊರಗೆ ಬೀಸಾಡು" ಎಂದು ರಾವಣನು ಸಿಟ್ಟಿನಿಂದ ಹೇಳಿದನು ಆಗ ವಿಭೀಷಣನು ಹೀಗೆ ಹೇಳಿದನು

---

[1] ಕೂಲ ಕೇಳು ನಿಮ್ಮ (ಚ) [2] ಪರಮೂರ್ತಿ (ಚ)

ತಂದ ಶ್ರೀವತ್ಸಲಾಂಛನಮುಪ್ಪೋಲೆಯ । ಮುಂದಿಕ್ಕೆ ಪೊಱಗಿಕ್ಕೆಂದು ॥
ಅಂದು ಕೋಪದೊಳು ನುಡಿದ ರಾವಣನಿಗಿಂ । ತೆಂದು ನುಡಿದ ವಿಭೀಷಣನು ॥ ೩೦ ॥

ಓಲೆಯನೋದಿಸಿಕೊಂಡು ಕಾರ್ಯವ ಕಂಡು । ಮೇಲವರಿಗೆ ಬುದ್ಧಿಗಲಿಸಿ ॥
ಪಾಲಿಪುದೆನ್ನ ಬಿನ್ನಪವೆನೆ ಲಿಖಿತನಿ । ಗಾಲಸ್ಯದಿಂದ ಪೇಳಿದನು ॥ ೩೧ ॥

ತಡಬಡಿಸದೆ ಹಿಂದು ಮೆಟ್ಟದೆ[1] ವಾಚಕ । ವಡಗದೆ ವಕ್ಕಣೆ ಕೆಡದೆ[2] ॥
ಎಡರಡಸದೆ ರಸವೊಱೆವಂತೆ[3] ರಾಯಸ । ವಿಡಿದವನೋದಿದನಿಂತು ॥ ೩೨ ॥

ಶ್ರೀಮತ್ಸಾಕೇತ ಪುರವರ ಭರತ ಶಿ । ಖಾಮಣಿ ಕೀರ್ತ್ಯಂಗನೆಯ ॥
ಪ್ರೇಮದ ಪತಿಯಾದ ಕಲೆನೆಲೆಯೆನಿಪ[4] ಶ್ರೀ । ರಾಮಚಂದ್ರನು ರಾವಣನಿಗೆ ॥ ೩೩ ॥

ಅಱಿಪುವ ಕಾರ್ಯ ಕಳವಿಲಿ ಸೀತೆಯ ನೀ । ನಱಿಯದೆ ಕೊಂಡೊಯ್ದಡೇನು ॥
ದುಱುದುಂಬಿತನ ಬೇಡ ವಿನಮಿಕುಲಕೆ ಬಲು । ಗೊಱತೆಯೆಂಬುದ ನೀನಱಿತು ॥ ೩೪ ॥

ಸೀತೆಯನೊಪ್ಪಿಸು ನಿನ್ನ ಮಹಾತ್ಮೆಗೆ । ನೀತಿಯಿದಲ್ಲವೆಂಬುದನು ॥
ನೀ ತಿಳಿಯೆಂದೋಲೆಯೊಕ್ಕಣೆ[5]ಯಿರೆ ಕೇಳಿ । ದಾತ ನುಡಿದನಿಂತೆಂದು ॥ ೩೫ ॥

ಅಱಿಯದೆ ತಂದವನಲ್ಲ ಜಾನಕಿಯ ನಾ । ನಱಿದು ತಂದೆನು ತಪ್ಪೇನು[6] ॥
ಮಱೆಯೇಕೆ ಬಿಡೆ ಕನಸಿನೊಳೆಂದು ರಾವಣ । ಹೊಱಗೆಯ ಮಾತ ನುಡಿದನು ॥ ೩೬ ॥

ಜನಕ ನಾನಱಿಯದಂದದೊಳು ಸ್ವಯಂವರ । ವನು ಮಾಡಿ ರಾಮಗೆ ತನ್ನ ॥
ತನುಜೆಯ ಕೊಟ್ಟ ನಾನಱಿದ ಬಳಿಕ ತಂ । ದೆನು ತಪ್ಪೇನಿದಕೆಂದ[7] ॥ ೩೭ ॥

---

॥ ೩೦ ॥ "ಎಲೈ ಅಣ್ಣನೇ, ತಂದ ಈ ಓಲೆಯನ್ನು ಓದಿಸಿ. ಆ ಮೇಲಿನ ಕಾರ್ಯವನ್ನು ನಿಶ್ಚಯಿಸಿ, ಅವರಿಗೆ ತಕ್ಕ ಸೂಚನೆಯನ್ನು ಕೊಟ್ಟು ಕಳುಹಿಸುವುದು ಒಳ್ಳೆಯದೆಂದು ನನ್ನ ವಿಜ್ಞಾಪನೆ" ಎಂದು ವಿಭೀಷಣನು ಹೇಳಿದನು. ಆಗ ರಾವಣನು ಪತ್ರವಾಚಕನಿಗೆ ಓದಲು ಹೇಳಿದನು. ॥ ೩೧ ॥ ಆಗ ಆ ರಾಯಸದವನು ಗಡಿಬಿಡಿಯಾಗದೆ, ಹಿಂಜರಿಯದೆ, ಉಚ್ಚಾರಣೆ ಕೆಡದೆ, ಒಕ್ಕಣೆ ತಪ್ಪಿಹೋಗದೆ, ತೊಂದರೆಯಾಗದಂತೆ, ರಸಪೊಸರುವಂತೆ ಆ ಓಲೆಯನ್ನು ಹೀಗೆ ಓದಿದನು. ॥ ೩೨ ॥ ಶ್ರೀಯುಕ್ತವಾದ ಸಾಕೇತಪುರಕ್ಕೆ ಒಡೆಯನೂ, ಭರತವಂಶದಲ್ಲಿ ಶ್ರೇಷ್ಠನೂ, ಕೀರ್ತಿಯೆಂಬ ಸ್ತ್ರೀಯ ಪ್ರೇಮದ ವಲ್ಲಭನೂ, ಕಲೆಗಳಿಗೆ ಆಶ್ರಯನೂ ಆದ ಶ್ರೀರಾಮಚಂದ್ರನು ರಾವಣನಿಗೆ ॥ ೩೩ ॥ ತಿಳಿಸತಕ್ಕ ಕಾರ್ಯ—'ನೀನು ನನ್ನ ಮಡದಿಯಾದ ಸೀತೆಯನ್ನು ತಿಳಿಯದೆ ಕಳವಿನಿಂದ ಕೊಂಡುಹೋಗಿರುತ್ತಿ. ಆದರೇನು? ಇನ್ನಾದರೂ ನಿನ್ನ ದುಷ್ಟವರ್ತನೆ ಬೇಡ ಇದರಿಂದ ವಿನಮಿವಂಶಕ್ಕೆ ದೊಡ್ಡ ಕೊರತೆಯೆಂಬುದನ್ನು ತಿಳಿದುಕೋ ॥ ೩೪ ॥ ಹೀಗೆ ತಿಳಿದು ಸೀತೆಯನ್ನು ನನಗೆ ಒಪ್ಪಿಸು. ನಿನ್ನ ಮಹತ್ವಕ್ಕೂ ಇದು ನೀತಿಯಲ್ಲವೆಂಬುದನ್ನು ತಿಳಿದುಕೋ"—ಹೀಗೆಂದು ಆ ಓಲೆಯ ಒಕ್ಕಣೆಯಿದ್ದಿತು ಇದನ್ನು ರಾವಣನು ಕೇಳಿ, ಹೀಗೆ ನುಡಿದನು ॥ ೩೫ ॥ "ಸೀತೆಯನ್ನು ನಾನು ತಿಳಿಯದೆ ತಂದಿಲ್ಲ, ತಿಳಿದೇ ತಂದಿದ್ದೇನೆ. ಇದರಲ್ಲಿ ತಪ್ಪೇನಿದೆ? ಮುಚ್ಚುಮರೆಯ ಮಾತು ನನ್ನಲ್ಲಿಲ್ಲ ಕನಸಿನಲ್ಲೂ ಸೀತೆಯನ್ನು ಬಿಡೆನು" ಎಂದು ರಾವಣನು ಶೌರ್ಯದ ಮಾತನ್ನು ನುಡಿದನು. ॥ ೩೬ ॥ ಜನಕರಾಜನು ನನಗೆ ತಿಳಿಯದಂತೆ ಸ್ವಯಂವರವನ್ನು ಏರ್ಪಡಿಸಿ, ತನ್ನ

---

[1] ಹಿಮ್ಮೆಟ್ಟದೆ (ಚ). [2] ವಕ್ಕಣೆಗೆಡದೆ (ಚ). [3] ಪೊಱೆವಂತು (ಚ) [4] ಕುಶಲನೆನಿಪ (ಚ) [5] ದೋಲೆವಕ್ಕಣೆ (ಚ) [6] ನಾನವಳ (ಚ). [7] ತಪ್ಪೆನಿದಕೆಂದನವನು (ಚ)

ಸತ್ವವುಳ್ಳಡೆ ಬಂದು [1]ಕಾದಿ ನನಗೆ ನಿ । ಸ್ಸತ್ವವ ಮಾಡಿ[1] ಸೀತೆಯನು ॥
ಸತ್ವದಿಂ ಪಿಡಿದು[2] ಪೋಗೆಂದು ಪೇಳೆಂದು ಮ । ಹತ್ವದ ಮಾತನಾಡಿದನು ॥ ೩೮ ॥

ನುಡಿದ ನುಡಿಯ ಕೇಳಿ ಪೆಱರಿಗಾಜ್ಞೆಯ ಮಾಡಿ । ನಡಸಿಕೊಳುವರಿಗಿಂತಪ್ಪ[3] ॥
[4]ನುಡಿ ಚೆನ್ನಾಯಿತು ಬಿಡು ಸೀತೆಯನೆಂದು । ನುಡಿದನಗ್ರಜಗನುಜಾತ[4] ॥ ೩೯ ॥

ಸ್ತ್ರೀರತ್ನ ಮೊದಲಾದನರ್ಘ್ಯ ರತ್ನಗಳು ವಿ । ಚಾರಿಸೆ ಚಕ್ರೇಶ್ವರಗೆ ॥
ಸೇರುವವೆಂಬುದಾ ಬಾಲ[5] ಗೋಪಾಲಕ । ರಾರ್ಯಿದು ನೋಡಿ ನೀವೆಂದು[6] ॥ ೪೦ ॥

ನನಗೆ ತಕ್ಕುದ ನಾ ತಂದೊಡೆ ಕೊಱತೆಯೆ । ಜನಕ ನನ್ನಱಿಯದೆ[7] ತನ್ನ ॥
ತನುಜೆಯ ರಾಮಂಗೆ ಕೊಟ್ಟಡೆಳೆದು[8]ತಂ । ದೆನು ಯೆನಲಣುವನಿಂತೆಂದ ॥ ೪೧ ॥

ಆವ ದೇಶವನಿಱಿದಾವ ರಾಯನ ಮುಱಿ[9] । ದಾವ ವೀರರ ನೆಱಿ ಮುರಿದು[10] ॥
ಆವ ಬಲ್ಲಾಳ್ತನದೊಳು ತಂದೆ ನಾಣ್ಚದೆ । ಯೀ ವಚನವನಾಡುವರೆ[11] ॥ ೪೨ ॥

ಭರತ ಸಗರ ಸನತ್ಕುವರ ಶತ್ರುಘ್ನರು[12] । ಧರೆಯನಾಳಿದರದರೊಳಗೆ[13] ॥
ಪುರುಷೋತ್ತಮ ಮಧುಸೂದನ ಕೇಶವ[14] । ರಿರದಾಳಿದರು ತ್ರಿಖಂಡವನು[15] ॥ ೪೩ ॥

ಅವರೊಳಿಂತಪ್ಪ ದುಶ್ಚಾರಿತ್ರರಿಲ್ಲ ನಿ । ನ್ನವಿವೇಕ[16]ತನದಿಂದ ನಿನ್ನ ॥
ಹವಣಱಿಯದೆ ತಂದೆ ಸೀತೆಯನೊಪ್ಪಿಸಿ । ತವೆ ಬಾಳುವುದು ಕೇಳು ನೀನು ॥ ೪೪ ॥

---

ಮಗಳನ್ನು ರಾಮನಿಗೆ ಕೊಟ್ಟನು ನನಗೆ ಇದು ತಿಳಿದ ಕೂಡಲೇ ನಾನು ಆ ಸೀತೆಯನ್ನು ತಂದೆನು. ಇದರಲ್ಲಿ ತಪ್ಪೇನು? ॥ ೩೭ ॥ ಆ ರಾಮನಿಗೆ ಸಾಮರ್ಥ್ಯವಿದ್ದರೆ, ನನ್ನನ್ನು ಸತ್ವಹೀನನನ್ನಾಗಿ ಮಾಡಿ, ಸೀತೆಯನ್ನು ಶಕ್ತಿಯಿಂದ ವಶಪಡಿಸಿ ಕೊಂಡು ಹೋಗಲಿ—ಹೀಗೆ ಹೇಳು" ಎಂದು ರಾವಣನು ಘನತೆಯ ಮಾತನ್ನು ಆಡಿದನು ॥ ೩೮ ॥ ಈ ಮಾತನ್ನು ಕೇಳಿ ವಿಭೀಷಣನು "ಇತರರಿಗೆ ಆಜ್ಞೆಯನ್ನು ಮಾಡಿ ಸರಿದಾರಿಯಲ್ಲಿ ನಡೆಸಿಕೊಳ್ಳುವ ನಿನ್ನಂಥವರು ಈ ರೀತಿ ಹೇಳುವುದೆ! ಚೆನ್ನಾಯಿತು! ನೀನು ಸೀತೆಯನ್ನು ಬಿಡು" ಎಂದು ಅಣ್ಣನಿಗೆ ಹೇಳಿದನು. ॥ ೩೯ ॥ ಆಗ ರಾವಣನು ಹೀಗೆಂದನು— "ಸ್ತ್ರೀರತ್ನವೇ ಮೊದಲಾದ ಅಮೂಲ್ಯವಾದ ರತ್ನಗಳು, ಯೋಚಿಸುವುದಾದರೆ ಮಹಾರಾಜನಿಗೇ ಸೇರತಕ್ಕವೆಂದು ಬಾಲಕರೂ ಬಲ್ಲರು, ಗೋವಳರು ಕೂಡ ತಿಳಿದಿರುತ್ತಾರೆ ನೀವೂ ಸ್ವಲ್ಪ ಯೋಚಿಸಿ ನೋಡಿ ॥ ೪೦ ॥ ನನಗೆ ಯೋಗ್ಯವಾದ ವಸ್ತುವನ್ನು ನಾನು ತಂದರೆ ಕೊರತೆಯೇನು? ಆ ಜನಕನು ನನ್ನನ್ನು ತಿಳಿಯದೆ, ತನ್ನ ಮಗಳನ್ನು ರಾಮನಿಗೆ ಕೊಟ್ಟರೆ, ನಾನು ಹೋಗಿ ಎಳೆದು ತಂದಿರುತ್ತೇನೆ" ಹೀಗೆಂದು ರಾವಣನು ಹೇಳಿದಾಗ ಅಣುವನು ಹೀಗೆಂದನು ॥ ೪೧ ॥ "ಆಹಾ! ಇಂತಹ ಮಾತನ್ನಾಡುವೆಯಲ್ಲ! ಹಾಗಿದ್ದರೆ ನೀನು ಯಾವ ದೇಶದವರೊಡನೆ ಕಾದಾಡಿ, ಯಾವ ರಾಜನನ್ನು ಸೋಲಿಸಿ, ಯಾವ ಪರಾಕ್ರಮಿಗಳನ್ನು ಭಂಗಿಸಿ, ಯಾವ ಶೌರ್ಯದಿಂದ ಸೀತೆಯನ್ನು ತಂದಿರುವೆ? ನಾಚಿಕೆಪಡದೆ ಹೇಳು ॥ ೪೨ ॥ ಈ ಭೂಮಂಡಲವನ್ನು ಭರತ, ಸಗರ, ಸನತ್ಕುಮಾರ, ಶತ್ರುಘ್ನ ಮುಂತಾದವರು ಆಳಿದರು ಇವರ ವಂಶದಲ್ಲಿ ಪುರುಷೋತ್ತಮ ಮಧುಸೂದನ ಕೇಶವರು ತ್ರಿಖಂಡವನ್ನು ಆಳಿದರು ॥ ೪೩ ॥ ಅವರಲ್ಲಿ ಯಾರೂ ನಿನ್ನಂತಹ ಕೆಟ್ಟ ನಡತೆಯವರಿಲ್ಲ.

---

[1] ನಮ್ಮನು ಸೋಲಿಸಿ ಸತ್ವದಿಂದಲಿ (ಕ) [2] ಕೊಂಡು (ಚ) [3] ಕೊಳ್ವರಿ ಚಕ್ರವರ್ತಿ (ಗ ಚ). [4] ನಡೆತಪ್ಪಿ ನಡೆವುದಯುಕ್ತವೆಂದಣುವಗೆ। ನುಡಿದ ತಾನಿಂತು ರಾವಣನು (ಚ) [5] ವೆಂಬುದಪಾಲ (ಕ) ವೆಂಬುದಾಪಾಲ (ಚ) [6] ದು ಬಲ್ಲದಱಿಯೆಯ (ಚ) [7] ನಾನಱಿಯದೆ (ಚ) [8] ಕೊಟ್ಟೊಡೆಳೆದು (ಚ) [9] ಬಗೆಯಲಿ ತಂದೆಯೊ ಸೀತೆಯರಗೆಲಿ (ಕ) ದೇಶಗಿರಿದಾವರಾಯನ ಮುಱಿ (ಗ). [10] ಗೆಲಿದು (ಚ) [11] ವಚನವನಾಡಬಹುದೆ (ಚ) [12] ಸತ್ರುಘ್ನರು (ಚ). [13] ರವರೊಳಗೆ (ಗ) [14] ಕೇಳವ (ಚ). [15] ಷಡ್ಖಂಡವನು (ಚ) [16] ನೀನವಿವೇಕ (ಚ)

ಅಲ್ಲದಿರ್ದೊಡೆ ನಿನ್ನ ಸಿರಿ ಜಸ ಜಯಮೆಣ್ಬು । ನಿಲ್ಲವು ಮರಣವ ಪಡೆವೆ ॥
ಪೊಲ್ಲಮೆ ಬಂದಡಸಿತು ನಿನಗೀ ನಡೆ । ಯಲ್ಲವೆಂದಣುವ ನುಡಿದನು ॥ ೪೫ ॥

ಗರಳಾಂಬಕಾಹಿಯ[1] ಮಣಿಯನು ಸಿಂಗದ । ಹರಣವ ನನ್ನ ಕೈಸಾರ್ದ ॥
ತರುಣಿಯ ತೆಗೆದುಕೊಂಬವನಾರೆನುತ ತ । ನ್ನರಮನೆಗವನೈದಿದನು[2] ॥ ೪೬ ॥

ಅತ್ತರಮನೆಗೆಯ್ದ ಪೋಗಲು[3] ರಾವಣ । ಮತ್ತಿತ್ತ[4] ಕುಂಭನಿಕುಂಭ ॥
ಮತ್ತಿಂದ್ರಜಿತುವಿಂದ್ರವರ್ಮಾದಿ[5] ಕುವರರಂ । ದೊತ್ತಿ ನುಡಿಯಲಣುವನನು[6] ॥ ೪೭ ॥

ಕೆಡೆನುಡಿದಣುವನಿಂತೆಂದ ಪೆಂಡಿರ ಮುಂ । ಗಡೆಯೊಳೀ ಮಾತು ಕಾಳೆಗದ ॥
ಎಡೆಯೊಳು ನಾಳೆಯಱಿಯಬಹುದೆಂದಂದು । ನುಡಿದನು ರಾಜಕುವರರ ॥ ೪೮ ॥

ಅಱಿಯಬಹುದು ನಾಳೆ ಕಾಳಗದೊಳಗೀ । ಹೊಱಗೆಯ ಬಲು ವೀರತೆಯ ॥
ತೆಱನನೆಂದಣುವನಾ ರಾಜಕುಮಾರರ । ಜಱೆದಲ್ಲಿಂದ[7] ತೆರಳಿದ[8] ॥ ೪೯ ॥

ಪೊಱಮಟ್ಟಣುವನಲ್ಲಿಂ ಬಂದು ವನದೊಳು । ಸೆಱೆಯಿರ್ದ ಸೀತೆಯಱಿಯದ ॥
ತೆಱದೊಳಗಿರಲತ್ತ ಮಂಡೋದರಿ ಮನ । ದೆಱಕದಿಂ ಬಂದಳಾಯೆಡೆಗೆ ॥ ೫೦ ॥

ಸೀತೆವೆರಸಿ ಮಂಡೋದರಿ ಪಾರಣೆಮಾಡಿ । ಪ್ರೀತಿಯ ನುಡಿದರಮನೆಗೆ ॥
ಆ ತರಳಾಕ್ಷಿ ಪೋದಳು ಪೋದ ಬಳಿಕಂಬು । ಜಾತವದನೆ ಕೇಳಣುವ ॥ ೫೧ ॥

---

ನೀನು ವಿವೇಕಶೂನ್ಯನಾಗಿ, ನಿನ್ನ ಹವಣನ್ನರಿಯದೆ ಸೀತೆಯನ್ನು ತಂದಿರುತ್ತೀ. ನೀನು ಆಕೆಯನ್ನು ರಾಮನಿಗೆ ಒಪ್ಪಿಸಿ ಬಾಳಬೇಕು ॥ ೪೪ ॥ ಅದಲ್ಲವಾದರೆ ನಿನ್ನ ಐಶ್ವರ್ಯ, ಕೀರ್ತಿ, ಜಯ ಎಂಬ ದೇವತೆಯರು ನಿನ್ನಲ್ಲಿ ನಿಲ್ಲಲಾರರು. ನೀನು ಸಾಯುವೆ. ನಿನಗೆ ಕೇಡು ಬಂದು ಸೇರುವುದು. ನಿನಗಿದು ಯೋಗ್ಯವಾದ ನಡತೆಯಲ್ಲ—ಎಂದು ಅಣುವನು ಹೇಳಿದನು. ॥ ೪೫ ॥ ಆಗ ರಾವಣನು "ವಿಷಸರ್ಪನ ಹೆಡೆಯಲ್ಲಿರುವ ರತ್ನವನ್ನೂ, ಸಿಂಹದ ಪ್ರಾಣವನ್ನೂ, ನನ್ನ ಕೈಸೇರಿರುವ ಸ್ತ್ರೀಯನ್ನೂ ತೆಗೆದುಕೊಳ್ಳಬಲ್ಲವನು ಯಾರು?" ಎನ್ನುತ್ತ ತನ್ನ ಅರಮನೆಯೊಳಕ್ಕೆ ನಡೆದನು. ॥ ೪೬ ॥ ರಾವಣನು ಅತ್ತ ಅರಮನೆಯ ಒಳಗೆ ನಡೆಯಲು ಇತ್ತ ಕುಂಭ, ನಿಕುಂಭ, ಇಂದ್ರಜಿತು, ಇಂದ್ರವರ್ಮ ಮುಂತಾದ ಕುಮಾರಕರು ಅಣುವನನ್ನು ಕೀಳುಮಾಡಿ ಮಾತಾಡಿದರು. ॥ ೪೭ ॥ ಆಗ ಅಣುವನು ಅವರನ್ನು ಕೆಡಹುವಂತೆ ಹೀಗೆ ನುಡಿದನು—"ಹೆಂಗುಸರ ಮುಂದೆ ನಿಮ್ಮ ಇಂತಹ ಮಾತು ನಡೆಯಬಹುದು. ನಾಳೆ ಯುದ್ಧರಂಗದಲ್ಲಿ ಏನಾಗುತ್ತದೆಂಬುದನ್ನು ತಿಳಿಯಬಹುದು" ಎಂದು ಆ ರಾಜಕುಮಾರರಿಗೆ ಹೇಳಿದನು. ॥ ೪೮ ॥ ನಿಮ್ಮ ಈ ದರ್ಪವನ್ನೂ ವೀರತ್ವವನ್ನೂ ನಾಳಿನ ಯುದ್ಧದಲ್ಲಿ ತಿಳಿಯಬಹುದು—ಎಂದು ಅಣುವನು ಅವರನ್ನೆಲ್ಲಾ ನಿಂದಿಸಿ, ಅಲ್ಲಿಂದ ತೆರಳಿದನು. ॥ ೪೯ ॥ ಅಣುವನು ಅಲ್ಲಿಂದ ಹೊರಟು ಸರ್ವರ್ತುಕ ಉದ್ಯಾನಕ್ಕೆ ಬಂದು ಅಲ್ಲಿ ಸೆರೆಯಾಗಿದ್ದ ಸೀತೆಗೆ ತಿಳಿಯದಂತೆ ಇದ್ದನು. ಹೀಗಿರಲು ಇತ್ತ ಮಂಡೋದರಿ ಮನದ ಇಚ್ಛೆಯಂತೆ ಅಲ್ಲಿಗೆ ಬಂದಳು. ॥ ೫೦ ॥ ಮಂಡೋದರಿಯು ಸೀತೆಯೊಡನೆ ಪಾರಣೆಯನ್ನು ಮಾಡಿ, ಪ್ರೀತಿಯ ಮಾತುಗಳನ್ನಾಡಿ, ತನ್ನ ಅರಮನೆಗೆ ಹೋದಳು. ಎಲೈ ಚೇಲಿನಿಯೇ, ಆ ಮೇಲೆ ಅಣುವನು ಅಲ್ಲಿಂದ

---

[1] ಗರಳಂಬ ಕಾಹಿಯ (ಕ). [2] ಮನೆಯನು ಪೊಕ್ಕನವನು (ಗ.ಚ). [3] ಪೋಗೆ (ಚ). [4] ಮತ್ತಿತ್ತಲಾ (ಚ). [5] ಕುಂಭಕರ್ಣಾದಿ (ಗ.ಚ.). [6] ನುಡಿದರಣುವನನು (ಗ). [7] × (ಗ). [8] ತೆರಳಿದನು (ಗ).

ಅಲ್ಲಿಂದ ಪೊಱಮಟ್ಟತಿವೇಗದಿಂ ತಳು । ವಿಲ್ಲದಾ ಯೆಡೆಯನಂದಣುವ[1] ॥
ನಿಲ್ಲದೆ ಬಂದು ಕಂಡನು ರಾಘವನ ಪಾದ । ಪಲ್ಲವಗಳ ಪದ್ಮನೇತ್ರೆ ॥ ೫೨ ॥

ದೇವ ಚಿತ್ತೈಸು ರಾವಣರಾಜನಿಗೆ[2] ನಾ । ನಾವ ಬಗೆಯೊಳು ಪೇಳಿದೊಡೆ ॥
ದೇವಿಯ ಬಿಟ್ಟು ಕಳುಪಿತಿಲ್ಲವನಿಗೆ[3] । ನೀವು ಹಱಿವನೆಣಿಸುವುದು[4] ॥ ೫೩ ॥

ಹಲವು ರೀತಿಗಳಿಂದೆ ಹಲವು ಬುದ್ಧಿಗಳಿಂದೆ । ಹಲವು ಬೆದಱಿಕೆಗಳಿಂದೆ ॥
ಹಲವು ನೀತಿಗಳಿಂದೆ ಪೇಳಿದೆನವ ನಿಮ್ಮ । ಲಲನೆಯ ಬಿಟ್ಟುದಿಲ್ಲರಸ ॥ ೫೪ ॥

ಮೂಱುಪಾಯಕೆ ವಶವಲ್ಲ ದಶಾಸ್ಯನು । ಮೀಱಿದ ಕಡೆಯುಪಾಯದಲಿ ॥
ಗಾಱುಮಾಡುವುದ ನೀನೆಣಿಸೆಂದು ನೃಪತಿಗೆ । ಕೀಱಿ ಪೇಳಿದನಂದಣುವ ॥ ೫೫ ॥

ಸರ್ವೋಪಾಯದಿಂದೊಡಬಡಿಸಿದೆನು ನಿ । ಗರ್ವತೆಯಿಂದ ರಾವಣನು ॥
ಸರ್ವಥಾ ಸೀತೆಯ ಬಿಡೆನೆಂದವನತಿ । ಗರ್ವದ ಮಾತನಾಡಿದನು ॥ ೫೬ ॥

ಆ ನುಡಿಗೇಳಿ ಕುಪಿತನಾಗಿ ಚತುರಂಗ । ಸೇನೆವೆರಸು ರಾಮಚಂದ್ರ ॥
ಆನದೆ ನಡೆದು ಬರುತ[5] ಬರುತಿರೆ ಬಲು ಕಾನನದೊಳು ಕಮಲಾಕ್ಷಿ ॥ ೫೭ ॥

ಅಣಿಲೆಯುಂಬಟೆಯರೆನೆಲ್ಲಿ ಬಿಲ್ವರ ಬಲು । ಗುಣಿಕೆ ತಡಸ ತಾಱಿ ನೆಲ್ಲಿ ॥
ಹುಣಿಸೆ ಬಸುರಿ ಬೇವು[6] ಮೊದಲಾದ ತರುಗಳು । ಎಣಿಕೆಗೆ ನಿಲುಕದಲ್ಲಿಹವು ॥ ೫೮ ॥

ಬೇಲ ಬೇವು ಬಿಲ್ಲವತ್ತ ಕಗ್ಗಲಿ ದಿಂಡ । ಜಾಲ ಸುಜ್ಜಲು[7]ಮತ್ತಿ ಕಡವ ॥
ಹಾಲೆ ಹಾದರಿ ಬನ್ನಿ ಮೊದಲಾದ ತರುಗಳ । ಜಾಲದಿಂದೆಸೆದುದಾ ವಿಪಿನ ॥ ೫೯ ॥

---

ಹೊರಟನು. ॥ ೫೧ ॥ ಅಲ್ಲಿಂದ ಹೊರಟು ಬೇಗನೆ ಬಂದು ಶ್ರೀರಾಮನ ತಳಿರಡಿಗಳನ್ನು ಕಂಡನು ॥ ೫೨ ॥ ಎಲೈ ದೇವನೇ, ಕೇಳು ನಾನು ಆ ರಾವಣೇಶ್ವರನಿಗೆ ಯಾವ ರೀತಿಯಲ್ಲಿ ಹೇಳಿದರೂ ಸೀತೆಯನ್ನು ಬಿಟ್ಟು ಕಳುಹಿಸಲು ಒಪ್ಪಲಿಲ್ಲ ಅವನಿಗೆ ತಕ್ಕುದಾದುದನ್ನು ನೀವೇ ಯೋಚಿಸಬೇಕು ॥ ೫೩ ॥ ನಾನು ಅವನಿಗೆ ಹಲವು ರೀತಿಗಳಿಂದಲೂ, ಹಲವು ಬೆದರಿಕೆಗಳಿಂದಲೂ, ಹಲವು ನೀತಿಗಳಿಂದಲೂ, ಹಲವು ಸೂಚನೆಗಳಿಂದಲೂ, ಹೇಳಿದನು ಆದರೆ ಅವನು ನಿಮ್ಮ ಮಡದಿಯನ್ನು ಬಿಡಲಿಲ್ಲ ॥ ೫೪ ॥ ಸಾಮ, ದಾನ, ಭೇದಗಳೆಂಬ ಮೂರು ಉಪಾಯಗಳಿಗೆ ರಾವಣನು ಅನುಕೂಲನಾಗುವವನಲ್ಲ ಇನ್ನು ಉಳಿದ ದಂಡವೆಂಬ ಕೊನೆಯ ಉಪಾಯದಿಂದ ಅವನನ್ನು ನಾಶಗೊಳಿಸುವುದನ್ನೇ ನೀನು ಯೋಚಿಸು. ಎಂದು ಅಣುವನು ನಿರ್ದಿಷ್ಟವಾಗಿ ತಿಳಿಸಿದನು ॥ ೫೫ ॥ ನಾನು ಎಲ್ಲಾ ಉಪಾಯಗಳಿಂದಲೂ ಅವನನ್ನು ಒಡಂಬಡಿಸಲು ಪ್ರಯತ್ನಿಸಿದೆನು, ಆದರೆ ಆ ರಾವಣನು ಮಹಾಗರ್ವಿಯಾಗಿ "ಸೀತೆಯನ್ನು ಎಂದಿಗೂ ಬಿಡೆನು" ಎಂದು ಗರ್ವದ ಮಾತನ್ನು ಆಡಿದನು ॥ ೫೬ ॥ ಎಲೈ ಚೆಲುವೆ, ರಾಮನು ಆ ಮಾತನ್ನು ಕೇಳಿ, ಕೋಪಗೊಂಡು ಚತುರಂಗ ಸೈನ್ಯವನ್ನು ಕೂಡಿಕೊಂಡು, ತಡಮಾಡದೆ ಕಾಡಿನಲ್ಲೇ ಬರುತ್ತಿದ್ದನು ॥ ೫೭ ॥ ಆ ಕಾಡಿನಲ್ಲಿ ಅಣಿಲೆ, ಅಂಬಟೆ, ಅರೆನೆಲ್ಲಿ, ಬಿಲ್ವ, ಬಲುಗುಣಿಕೆ, ತಡಸ, ತಾಳೆ, ನೆಲ್ಲಿ, ಹುಣಿಸೆ, ಬಸುರಿ, ಬೇವು, ಮೊದಲಾದ ಅಸಂಖ್ಯಾತ ವೃಕ್ಷಗಳಿದ್ದುವು. ॥ ೫೮ ॥ ಬೇಲ, ಬೇವು, ಬಿಲ್ವಪತ್ರೆ, ಕಗ್ಗಲಿ. ದಿಂಡಜಾಲ. ಸುಜ್ಜಲು, ಮತ್ತಿ,

---

[1] ತಳುವಿಲ್ಲವಣುವ ನಿಂದೆಡೆಯ (ಗ ಚ) [2] ದಶಾಸ್ಯನ ಕಂಡು (ಗ ಚ) [3] ಕಳುಪಿತಿಲ್ಲವವನಿಗೆ (ಗ ಚ) [4] ಹರುವನೆಣಿಸುವುದು (ಕ)
[5] ನಡೆದು ನಡೆದು (ಗ ಚ.). [6] ಹೂರಬೆವು (ಚ) [7] ಸುಜ್ಜಲು (ಚ)

ಅರಳಿಯಾಲ ಮತ್ತಿ ಗೋಣಿ ಬಸುರಿ ತುಂ । ಬುರ[1] ಕಕ್ಕೆ ಬಲು ಚೆಲ್ಲಂಗಿ[2] ॥
ಅರಿಟಳ[3]ವೌದುಂಬರ ಹೊನ್ನೆ ಬನ್ನಿಯು । ತರುಗಳಿಂದೆಸೆದುದಾ ಕಾಡು ॥ ೬೦ ॥

ಸೊಡಲಿ ಬೆಂಡುಗ[4]ಸೀಗೆ ಗದುಗು ಕೀಚಕದೊಟ್ಟೆ[5] । ಗೊಡಕಿಲು[6] ಕಾರೆ ಕೇಂಜಿಗೆಯು ॥
ಗಿಡು ಮುಳ್ಳುವೆಳೆಗಳ ಗಡಣದಿಂದಾ ಕಾಡು । ಕಡುಗುರ್ವುವಡೆದು ರಾಜಿಪುದು ॥ ೬೧ ॥

ಮರೆ ಮುಚ್ಚ ಮುಸುವ ಮೂಗುರಿ ಮೊಲ ಪುಲಿ ಪುಲ್ಲೆ । ಕರಡಿ ಕಡವ ಕಾಟ[7]ಪಂದಿ ॥
ತರುವಂದಿ ನರಿ ತೋಳ ಮೊದಲಾದ ಮೃಗಗಳ[8] । ನೆರವಿಯಿಂದೆಸೆದುದಾ ಕಾಡು ॥ ೬೨ ॥

ಹರಡೆ ಹಸುಬ ಹಂಗ ಹಾವುದಲೆಗ ಹದ್ದು । ಮರವಕ್ಕಿ ಕಕ್ಕರ[9]ಗವುಜ ॥
ಕರಿಯುವೆಸಡ ಸೋಗೆ ಸೊರೆ ಪಿಕಗಳ[10]ಪಿಣಿ । ದರುವಕ್ಕಿ[11]ಯಿಂದೊಪ್ಪಿತಡವಿ ॥ ೬೩ ॥

ಬಲೆ ಕಾಲ್ಕಣ್ಣಿ ಗುನ್ನಲು[12]ಗೂಡಿಡಿಸಲು । ಬಲು ದಸಿಯುರುಳುಳಿಯಿಂದ ॥
ನೆಲಗಪ್ಪುಗಳಿಂದ ಮೃಗಗಳ ಹರಣವ । ತೊಲಗಿಸುವರು ಬೇಡರಲ್ಲಿ ॥ ೬೪ ॥

ಹಾಸುವಲೆಗಳಿಂದ ಹರಿವಲೆಯಿಂದತಿ । ಬೀಸುವಲೆಯು ಕಣ್ಣಿವಲೆಯಿಂ[13] ॥
ಸೂಸುವಲೆಗಳಿಂದೆ ಬೇಂಟೆಯು ಜನರಲ್ಲಿ । ಘಾಸಿ[14]ಮಾಡುವರು ಮೃಗಗಳ ॥ ೬೫ ॥

ಅದೆ ಪುಲಿ ಪೋಗುತಲಿದೆ[15] ಕರಡಿಯು ಧ್ವನಿ । ಯಿದೆ[16] ಮಿಗವೆದ್ದೋಡುತಿದೆ[17] ॥
ಅದೆ ಮೊಲ ನೋಡುತಲಿದೆ[18] ಮಿಗಸಾಗುತ । ಲಿದೆಯೆಂದು[19] ಬೇಡರುಲಿವರು[20] ॥ ೬೬ ॥

---

ಕಡವ, ಹಾಲೆ, ಹಾದರಿ, ಬನ್ನಿ, ಮೊದಲಾದ ಮರಗಳ ಸಮೂಹದಿಂದ ಆ ಕಾಡು ಶೋಭಿಸಿತು. ॥ ೫೯ ॥ ಅರಳಿ, ಆಲ, ಮತ್ತಿ, ಗೋಳಿ. ಬಸುರಿ, ತುಂಬುರ, ಕಕ್ಕೆ, ಚೆಲ್ಲಂಗಿ, ಅರಿಟಳ. ಅತ್ತಿ, ಹೊನ್ನೆ, ಬನ್ನಿ—ಮುಂತಾದ ಮರಗಳಿಂದ ಆ ಕಾಡು ರಾಜಿಸಿತು. ॥ ೬೦ ॥ ಸೊಡಲಿ, ಬೆಂಡುಗ, ಸೀಗೆ, ಗದುಗು, ಟೊಳ್ಳುಬಿದಿರು, ತೊಟ್ಟಿ, ಗೊಡಕಿಲು, ಕಾರೆ, ಕೆಂಜಿಗೆ, ಗಿಡಮುಳ್ಳು, ಬಿದಿರ ಹಿಂಡಲು—ಮುಂತಾದವುಗಳಿಂದ ಆ ಕಾಡು ಭಯಂಕರವಾಗಿದ್ದಿತು. ॥ ೬೧ ॥ ಆ ಕಾಡಿನಲ್ಲಿ ಜಿಂಕೆ, ಮುಚ್ಚೆ, ಮುಸುವ, ಮೂಗುರಿ, ಮೊಲ, ಹುಲಿ, ಹೆಣ್ಣುಜಿಂಕೆ, ಕರಡಿ, ಕಡವ. ಕಾಟಿ, ಹಂದಿ, ತರುವಂದಿ, ನರಿ. ತೋಳ—ಮೊದಲಾದ ಮೃಗಗಳ ಹಿಂಡುಗಳಿದ್ದುವು. ॥ ೬೨ ॥ ಹರಡೆ, ಹಸುಬ. ಹಂಗ. ಹಾವುದಲೆಗ, ಹದ್ದು, ಮರಕುಟಿಗನ ಹಕ್ಕಿ, ಕಕ್ಕರ, ಗೌಜಿಗನ ಹಕ್ಕಿ, ಕರಿಯು, ಎಸಡ, ನವಿಲು ಸ್ವರದ ಹಕ್ಕಿ, ಕೋಗಿಲೆ, ಮರಹಕ್ಕಿ--ಮುಂತಾದವುಗಳಿಂದ ಆ ಕಾಡು ಶೋಭಿಸಿತು. ॥ ೬೩ ॥ ಆ ಕಾಡಿನಲ್ಲಿ ಬೇಡರು ಬಲೆ, ಕಾಲುಹಗ್ಗ. ಗುನ್ನಿಲು. ಗೂಡು. ಇಡಿಸಲು, ಬರ್ಚಿ. ಉರುಳು, ಉಳಿಗಳಿಂದಲೂ, ನೆಲದಲ್ಲಿ ಮಾಡಿರುವ ಕಪ್ಪುಗಳಿಂದಲೂ, ಮೃಗಗಳನ್ನು ಕೊಲ್ಲುವರು. ॥ ೬೪ ॥ ಹಾಸುಬಲೆ, ಹರಿಬಲೆ, ಬೀಸುಬಲೆ, ಕಣ್ಣಿವಲೆ, ಸೂಸುವಲೆಗಳಿಂದ ಬೇಟೆಗಾರರು ಆ ಕಾಡಿನಲ್ಲಿ ಮೃಗಗಳನ್ನು ಕೊಲ್ಲುವರು. ॥ ೬೫ ॥ ಅದೋ ಹುಲಿ ಹೋಗುತ್ತಿದೆ! ಇದೋ ಕರಡಿಯ ಕೂಗು! ಇಲ್ಲಿ ಜಿಂಕೆ ಎದ್ದು ಓಡುತ್ತಿದೆ! ಅಲ್ಲಿ ಮೊಲವು ನೋಡುತ್ತಿದೆ! ಮೃಗವು ಸಾಗುತ್ತಿದೆ—ಎಂದು ಬೇಡರು ಹೇಳುತ್ತಿರುವರು. ॥ ೬೬ ॥ ಕಾಟಿಯು

---

[1] ತುಂಬಿರ (ಗ). [2] ಚೆನ್ನಾಗಿ (ಗ) ಚೆಲ್ಲಂದಿ (ಚ). [3] ಅರಿರಾಳ (ಚ) [4] ಕಿಂಜುಗ (ಚ) [5] ತೊಟ್ಟಿ (ಗ ಚ). [6] ದೊಡಗಿಲು (ಚ). [7] ಕಾಡಿ (ಗ). [8] ಮಿಗಗಳ (ಗ ಚ.). [9] ಕಕ್ಕರಿ (ಗ) ಕಕ್ಕಿಬಿ (ಚ). [10] ಸೊರೆಪೀಕಳ (ಕ) [11] ನರಿವಕ್ಕಿ (ಗ ಚ) [12] ಗುನ್ನಿಲು (ಕ). [13] ಕಣ್ಣಿವರೆಯ (ಕ). [14] ಗಾಸಿ (ಗ). [15] ಪೋಗುತಲದೆ (ಚ). [16] ಮರೆಸಾಗುತಲದೆ (ಚ). [17] ಮಿಗವೆದ್ದೋಡುತದೆ (ಚ) ಮಿಗವೆದ್ದು ನೋಡುತಿದೆ (ಗ). [18] ನೋಡುತಲದೆ (ಚ) [19] ಕರಡಿಯ ದನಿ ಆದೆಯೆಂದು (ಗ ಚ) [20] ಬಿಯದರುಲಿವರು (ಚ).

ಇದೆ ಕಾಟ ತಾಡಿದ[1]ನೆಲ ಸಾರಗ ಹೋರಿ । ಯಿದೆಯೆಕ್ಕಲನುತ್ತ ತಾಣ ॥
ಇದನ್ಯೆವಂದಿಯ ಮುಳ್ಳು ಮೃಗದ ಹಕ್ಕೆ । ಯಿದೆಯೆಂದು ಬೇಡರುಲಿವರು ॥ ೬೭ ॥

ತೆಗೆ ಪಂದಿಯ ಮೇಲೆ ಕಾಡನ ಪುಲಿಯನು । ತಗೆವ[2]ಜೂಗನ ಬಿಡು ಹಾಸ ॥
ಉಗಿ ಕರಡಿಯ ಮೇಲೆ ಕೆಂಚನ ಬಿಡು ಬಿಡು । ಮೃಗಮಾರಿಯನೆಂದುಲಿವರು ॥ ೬೮ ॥

ಕುಡಿವಾಲನ ಕೋಳಿವಾಲನ[3]ಬೆಳ್ಳನ । ನಿಡುಗಾಲ ಬಲುಕುಕ್ಕುರನ ॥
ಮುಡಿಗಿವಿಯುಳಗನ ಬಿಡು ತಡೆ ಹಿಡಿಯೆಂದು । ನುಡಿವರು ಬಿಯದರಬ್ಬಾಕ್ಷಿ ॥ ೬೯ ॥

ಗಾಳಿನಾಯನು[4]ಕರೆ ಗುದ್ದಿನ ದೊಡ[5]ದೊಡ್ಡ । ಕಾಳನ ಕರೆ ಬೇಗ ಬರಿಸು ॥
ಸಾಳುವನಿಗೆ ತೋರಿ ಬಿಟ್ಟು ಮೃಂಗಗಳ[6] । ಗೋಳಿಡಿಸುವರು ಶಬರರು ॥ ೭೦ ॥

ಇಂತತಿ ಬೇಂಟೆಯಾಡುತಲಿರ್ಪ ಶಬರರ । ಕಾಂತೆಯರೊಂದೆಡೆಗಳೊಳು ॥
ಸಂತಸದಿಂ ಚೆಲ್ಲವಾಡುತಲಿರ್ಪರ । ತ್ಯಂತ ಸಂತಸದೊಡಗೂಡಿ ॥ ೭೧ ॥

ಬಿಗಿದ ಹುಬ್ಬಿನ ಬಿಂಕವೇಱಿದ ವ್ಮೊಲೆಗಳ । ಹೊಗರು ಸೂಸುವ ತನುಲತೆಯ ॥
ನಗೆಗಣ್ಣಿ ಬೇಡವೆಣ್ಣೆಸೆದುದು ನೋಳ್ಪರ । ಬಗೆಗೆ ಬಯಕೆ ಪುಟ್ಟಿಸುತ ॥ ೭೨ ॥

ಹರಿನೀಲದಿಂದ ಪುತ್ಥಳಿಗಳ ಪಡೆದಜ । ಹರಣಂಬೊಯ್ದು[7] ಮಿಂಚಿನೊಳು ॥
ಇರದೊಪ್ಪವಿಟ್ಟಂತೆ ಬೀಯದಿಯರ ಬಲು । ನೆರವಿಯೆಸೆದುದಾ[8]ಯೆಡೆಯ ॥ ೭೩ ॥

ವೃತ್ತ ನಿಬಿಡ ಘನ ಪೀನ ಪೀವರ ಕರಿ । ಣೋತ್ತಮ ಕುಚದ ಮೆಲ್ಲಡಿಯ ॥
ಚಿತ್ತವಲ್ಲಭನ ಚಿತ್ತವ ಸೋಲಿಸುತಲ್ಲಿ । ವೊತ್ತವಿಹುದು ಶಬರಿಯರ ॥ ೭೪ ॥

---

ಅಗೆದ ನೆಲವಿದು. ಸಾರಗವು ಹೋರಾಡಿದ ಸ್ಥಳವಿದು ಕಾಡುಹಂದಿಯು ಉತ್ತ ಸ್ಥಾನವಿದು ಇದು ಮುಳ್ಳುಹಂದಿಯ ಕಣೆ ಮೃಗದ ವಾಸಸ್ಥಾನವಿದು—ಎಂದು ಅಲ್ಲಿ ಬೇಡರು ಹೇಳುತ್ತಿರುವರು ॥ ೬೭ ॥ ಹಂದಿಯ ಮೇಲೆ ಕಾಡನನ್ನು ಬಿಡು ಹುಲಿಯ ಪ್ರಾಣವನ್ನೇ ತೆಗೆಯುತಕ್ಕ ಜೂಗನ ಹಗ್ಗವನ್ನು ಬಿಡು ಕರಡಿಯ ಮೇಲೆ ಕೆಂಚನನ್ನು ಬಿಡು ಮೃಗಮಾರಿಯನ್ನು ಬಿಡು ಬಿಡು—ಎಂದು ಬೇಟೆನಾಯಿಗಳನ್ನು ಪ್ರಯೋಗಿಸುವ ಬೇಡರ ಮಾತು ಅಲ್ಲಿ ಕೇಳಿಸುತ್ತಿರುವುದು ॥ ೬೮ ॥ ಕುಡಿಬಾಲನನ್ನು, ಕೋಳಿಬಾಲನನ್ನು, ಬೊಳ್ಳನನ್ನು, ನಿಡುಗಾಲಿನ ದೊಡ್ಡನಾಯಿಯನ್ನು, ಮಡಿಸಿದ ಕಿವಿಯುಳ್ಳ ಕೂದಲುನಾಯಿಯನ್ನು ಬಿಡು ತಡೆ, ಹಿಡಿ—ಎಂದು ಬೇಡರು ಹೇಳುತ್ತಿರುವರು ॥ ೬೯ ॥ ಗಾಳಿನಾಯಿಯನ್ನು ಕರೆ, ಗುದ್ದಿನ ದೊಡ್ಡಕಾಳನನ್ನು ಕರೆ, ಬೇಟೆಯ ಡೇಗೆಯನ್ನು ಬೇಗನೇ ಬರಿಸು—ಎನ್ನುತ್ತ ಅವುಗಳಿಗೆ ಮೃಗಗಳನ್ನು ತೋರಿಸಿ, ಬೇಡರು ಅಲ್ಲಿ ಗೋಳಿಡಿಸುವರು ॥ ೭೦ ॥ ಹೀಗೆ ಬೇಟೆಯಾಡುತ್ತಿರುವ ಬೇಡರ ಹೆಂಗುಸರು ಒಂದೊಂದು ಕಡೆಗಳಲ್ಲಿ ಬಹಳ ಸಂತೋಷದಿಂದ ವಿನೋದವಡುತ್ತ ಇರುವರು ॥ ೭೧ ॥ ಬಿಗಿದ ಹುಬ್ಬುಗಳಿಂದಲೂ, ಘನತೆ ಹೆಚ್ಚಾದ ಮೊಲೆಗಳಿಂದಲೂ, ಕಾಂತಿ ಹೊರಹೊಮ್ಮುವ ತೆಳುವಾದ ದೇಹದಿಂದಲೂ, ನಗೆಗಣ್ಣಿನಿಂದಲೂ ಅಲ್ಲಿರುವ ಬೇಡಿತಿಯರು ನೋಡುವವರ ಮನಸ್ಸಿಗೆ ಬಯಕೆಯನ್ನು ಹುಟ್ಟಿಸುತ್ತ ಶೋಭಿಸುವರು ॥ ೭೨ ॥ ಬ್ರಹ್ಮನು ನೀಲರತ್ನಗಳಿಂದ ಗೊಂಬೆಗಳನ್ನು ಮಾಡಿ, ಅವಕ್ಕೆ ಜೀವವನ್ನಿತ್ತು, ಒಡನೆ ಮಿಂಚಿನಿಂದ ಪುಟವಿಟ್ಟಂತೆ, ಅಲ್ಲಿದ್ದ ಬೇಡಿತಿಯರ ಸಮೂಹವು ತೋರುತ್ತಿತ್ತು ॥ ೭೩ ॥ ವೃತ್ತಾಕಾರ

---

[1] ಕಾದಿದ (ಗ ಚ) [2] ತಗವ (ಚ) [3] ಕೊಳ್ಳಿವಾಲನ (ಚ) [4] ಗಾಳಿಯ ನಾಯನು (ಗ ಚ) [5] ×× (ಗ ಚ) [6] ಬಿಟ್ಟಲ್ಲಿ ಮೃಗಗಳ (ಗ) [7] ಹರಣವ ಬೊಯಿದು (ಗ) [8] ಯೆಸೆಯಿತಾ (ಚ).

ವದನ ಬೆಮರೆ ಕುರುಳುಣ್ಮೆ ತಾವರೆ ಮೊಲೆ[1] । ಗದಗದಿಸಲು ತಂತಮ್ಮ ॥
ಎದೆಯಾಣ್ಮರ ಪಾಡುತ ವನಚರಿಯರು । ಬಿದಿರಕ್ಕಿಯ ತಳಿಸುವರು[2] ॥ ೭೫ ॥

ಇಂದುಕಾಂತದ ಒರಲೊಳು ಬಿದಿರಕ್ಕಿಯ । ಚಂದನದೊನಕೆಯ ಪಿಡಿದು ॥
ನಿಂದು ತಳಿಸುತ[3]ರಾಗದೊಳು ಪಾಡುವ ಪೆಣ್ಣು । ಗೊಂದಣವೆಸೆದುದಾಯೆಡೆಯ[4] ॥ ೭೬ ॥

ಸೆಱಗ ಪಿಡಿದು ಬಱಸೆಳೆದು ಮುಂಗಡೆ ನಿಂದು । ನಿಱಿವಿಡಿದಳುವ ಮಕ್ಕಳನು ॥
ಮಱುಕದಿಂದಮರ್ವಪ್ಪಿ ಮೊಲೆಯಿತ್ತು ಸಲಹುತ್ತ । ಮೆಱೆದುದೊಂದೆಡೆ[5] ಬೇಡಿತಿಯರು ॥ ೭೭ ॥

ಈ ಪರಿಯೊಪ್ಪುವ ವಿಪಿನವ ಪೊಱಮಟ್ಟು । ಶ್ರೀಪತಿಗೂಡಿ ರಾಘವನು ॥
ಏ ಪೊಗಳುವೆ ನಡೆತರುತಿರೆ ಕಂಡರಂ । ದಾ ಪದದೊಳು ಬೇಡನಿಚಯ ॥ ೭೮ ॥

ಕಾಡಾನೆಯ ಮಸ್ತಕದ ಬಲು ಪಂದಿಯ । ದಾಡೆಯನಾ ಬಿದಿರೊಳಗೆ ॥
ಮೂಡಿದ ಮುತ್ತುಗಳನು ತಂದು ಕಾಣ್ಬರು । ಬೇಡನಾಯಕರು ರಾಘವನ ॥ ೭೯ ॥

ಪುಲಿಯುಗುರನು ಜೀವದೆರಲೆಯ ಸಾರಗ[6] । ದಲೆಯ ಕೋಡನು ಸಿಂಗಮಱಿಯ ॥
ಬಲುವೀಲಿದಳೆ[7]ಯಿತ್ತು ಕಾಣ್ಬರು ಬಿಯದರ । ಬಲ ಬಲರಾಮನನಬಲೆ ॥ ೮೦ ॥

ನುಡಿದನಂದವರವರಿಗೆ ತಕ್ಕ ವಚನವ[8] । ನುಡುಗೊಱೆಯಿತ್ತು ಮತ್ತವರ[9] ।
ಪಡೆಯನೆಲ್ಲವ ಕೂಡಿಕೊಂಡು ರಾಘವನಂದು । ನಡೆದನು ನಲವಿಂದಲಬಲೆ ॥ ೮೧ ॥

---

ವಾಗಿ, ಒತ್ತೊತ್ತಾಗಿ, ಬಹಳ ದೊಡ್ಡವಾಗಿ, ಗಟ್ಟಿಯಾಗಿ, ಉತ್ತಮವೆನಿಸಿದ ಸ್ತನಗಳುಳ್ಳ ಮೃದುವಾದ ಪಾದಗಳುಳ್ಳ ಶಬರಿಯರ ಸಮೂಹವು ತಮ್ಮ ಮನೋವಲ್ಲಭರ ಮನಸೆಳೆಯುತ್ತ ಇರುವುದು ॥ ೭೪ ॥ ತಮ್ಮ ಮುಖದಲ್ಲಿ ಬೆವರು ಕಾಣಿಸುತ್ತಿರಲು, ತಾವರೆ ಮುಗುಳಿನಂತಹ ಮೊಲೆಗಳು ಅಲುಗಾಡುತ್ತಿರಲು, ಆ ಕಾಡಿನ ಬೇಡಿತಿಯರು ತಮ್ಮ ಗಂಡಂದಿರನ್ನು ಕುರಿತು ಹಾಡುತ್ತ ಬಿದಿರಕ್ಕಿಯನ್ನು ಕುಟ್ಟುವರು. ॥ ೭೫ ॥ ಚಂದ್ರಕಾಂತದ ಒರಳಿನಲ್ಲಿ ಚಂದನದ ಒನಕೆಯಿಂದ ಬಿದಿರಕ್ಕಿಯನ್ನು ಕುಟ್ಟುತ್ತ, ರಾಗದಿಂದ ಹಾಡುವ ಹೆಂಗುಸರು ಅಲ್ಲಿ ಶೋಭಿಸಿದರು. ॥ ೭೬ ॥ ಇನ್ನೊಂದು ಕಡೆಯಲ್ಲಿ ನೆರಗನ್ನು ಹಿಡಿದು, ಹತ್ತಿರಕ್ಕೆ ಬಂದು, ನೆರಿಯನ್ನು ಹಿಡಿದು ಅಳುತ್ತಿರುವ ಹಸುಳೆಗಳನ್ನು ಪ್ರೀತಿಯಿಂದ ಆಲಿಂಗಿಸಿ ಮೊಲೆಕೊಟ್ಟು ಸಲಹುವ ಬೇಡಿತಿಯರು ಇದ್ದರು. ॥ ೭೭ ॥ ಈ ರೀತಿಯಲ್ಲಿರುವ ಕಾಡನ್ನು ದಾಟುತ್ತ, ಶ್ರೀರಾಮನು ಲಕ್ಷ್ಮಣಸಹಿತನಾಗಿ ಬರುತ್ತಾ ಇದ್ದನು. ಆ ಸಂದರ್ಭದಲ್ಲಿ ಬೇಟೆಗಾರರು ಬಂದು ಶ್ರೀರಾಮನನ್ನು ಕಾಣುತ್ತಿದ್ದರು. ॥ ೭೮ ॥ ಆ ಬೇಡರ ಒಡೆಯರು ಕಾಡಾನೆಯ ತಲೆಯ ಮುತ್ತುಗಳನ್ನೂ, ದೊಡ್ಡ ಹಂದಿಯ ದಾಡೆಗಳನ್ನೂ, ಬಿದಿರಿನಲ್ಲಿ ಉಂಟಾದ ಮುತ್ತುಗಳನ್ನೂ ತಂದು, ಕಾಣಿಕೆ ಕೊಟ್ಟು ಶ್ರೀರಾಮನನ್ನು ಕಾಣುತ್ತಿದ್ದರು ॥ ೭೯ ॥ ಎಲೈ ಚೇಳಿನಿಯೇ, ಬೇಡರು ಆ ಕಾಡಿನಲ್ಲಿ, ಹುಲಿಯ ಉಗುರನ್ನೂ, ಜೀವಂತವಾದ ಜಿಂಕೆಯನ್ನೂ, ಸಾರಂಗದ ತಲೆಯ ಕೋಡುಗಳನ್ನೂ, ಸಿಂಹದ ಮರಿಯನ್ನೂ, ನವಿಲ ಗರಿಯ ಕೊಡೆಯನ್ನೂ ರಾಮನಿಗೆ ಕೊಟ್ಟು ಅವನನ್ನು ಕಾಣುತ್ತಿದ್ದರು. ॥ ೮೦ ॥ ಎಲೈ ಚೇಳಿನಿಯೇ, ಶ್ರೀರಾಮನು ಅಂದು ಅವರವರಿಗೆ ತಕ್ಕುದಾದ ಮಾತುಗಳನ್ನಾಡಿ, ಉಡುಗೊರೆಗಳನ್ನು ಕೊಟ್ಟನು. ಆ ಮೇಲೆ ಅವರ ಸೈನ್ಯವನ್ನೆಲ್ಲ ಕೂಡಿಕೊಂಡು

---

[1] ಕುರುಳ್ಕುಣಿಯಲು ಬಲುಮೊಲೆ (ಚ). [2] ಚಳಿಸುವರು (ಗ) [3] ಚಳಿಸುತ (ಗ). [4] ವೆಸೆಯಿತೊಂದೆಡೆಯ (ಚ). [5] ಮೆಱೆದರೊಂದೆಡೆ (ಚ). [6] ದೀಹದೆಲೆಯ ಸಾರಂಗದ (ಕ) ದೀವದೆರಲೆಯ ಸಾಗರ (ಚ) [7] ಸಿಲುವಿಳಿದಳೆ (ಗ). [8] ನುಡಿದವರವರಿಗೆ ತಕ್ಕ ವಚನಗಳ (ಚ). [9] ನುಡುಗೊಱೆಗಳನಿತ್ತವರ (ಗ. ಚ.).

ಬಂಟನಾಡಿದ ಬಾಲಿಯ ಗೆಲಿದವನತಿ । ತುಂಟತನವ ನೀ ಬಿಡಿಸಿ ॥
ಸುಂಟಗೆಯನು ಭೂತಕಿಕ್ಕಿ ಮರುಳ್ಗಳ । ನಂಟನಾಗೆಂದನಾ ನೃಪತಿ ॥ ೧೦೫ ॥

ಕೆಟ್ಟು ನುಡಿದ ಕೇಡಾಳಿಯ ತಲೆಯನು । ಕುಟ್ಟಿ ಬಿಸುಟು ಸುಗ್ರೀವನಿಗೆ ॥
ಕಟ್ಟಿ ಪಟ್ಟವ ನೀ ಬಾರೆಂದವ ಬೀಳು । ಕೊಟ್ಟನವನ ಕೋಮಲಾಂಗಿ ॥ ೧೦೬ ॥

ಕಳುಹಿಸಿಕೊಂಡು ಕೆಲವು ಪಯಣವನಲ್ಲಿ[1] । ಕಳಿದೊಂದು ಕದಿರವನವನು[2] ॥
ಒಳಪೊಕ್ಕು ಬೀಡ[3] ಬಿಡಲ್ಕಾ ವಾರ್ತೆಯ । ತಳುವದೆ ಕೇಳ್ದನಾ[4] ಬಾಲಿ ॥ ೧೦೭ ॥

ಬಿಟ್ಟ ಪಯಣದಿ[5] ಕಾದುವೆನೆಂದವ ಪೊಱ । ಮಟ್ಟು ಪಡೆಯ ಕೂಡಿಕೊಂಡು ॥
ದಿಟ್ಟಮಾನಸನಾಗಿ[6] ಪಾಳೆಯವನು ಬಂದು । ಬಿಟ್ಟ ಲಕ್ಷ್ಮಣಗಿದಿರಾಗಿ ॥ ೧೦೮ ॥

ಗೆಂಟಕ್ಕಲೆರಡು[7] ಬಲವು ಬಲು ಜೂಣಿಯ । ಬಂಟರು ಬಂದರು ಕೆಣಕೆ ॥
ಉಂಟಾಗಿ ಕಾದುತಿರಲು ಲಕ್ಷ್ಮಣ ಹೊಱ । ಮಂಟು[8] ಬಂದದ ನೋಡಿದನು ॥ ೧೦೯ ॥

ಸುಗ್ರೀವನೆಂದನಣುವನಿವನೇ ತತಿ । ಯುಗ್ರಗಣ್ಯನೆ ನೀ ನವನ[9] ॥
ಉಗ್ರತೆಯನು ಬಿಡಿಸುವಡೆ ನೀನಿವಗೆ ಸ । ಮಗ್ರನಲ್ಲನೆ[10] ಪೇಳೆನಲು ॥ ೧೧೦ ॥

ಅದ ಕೇಳಿ ಲಕ್ಷ್ಮಣನೆಂದ ನೀನೇತಕೆ । ಕದುಬದಿರವನ ವೀರತೆಯ ॥
ಕದನವ ನೋಡುವೆನೆಂದೆನಲ್ಲದೊಡವ । ನಿದಿರೆ[11] ಲಕ್ಷ್ಮಣಗೆ ಕಾದುವೊಡೆ ॥ ೧೧೧ ॥

ಕಿಱಿದು ಪೊತ್ತಿನ ಮೇಲೆ[12] ಲಕ್ಷ್ಮಣ ಕೋಪದಿ[13] । ಹೊಱಿಗೆಯ ಬಾಣ[14]ದೊಳೆಸಲು ॥
ಹಱಿದು ಬಾಲಿಯ ಶಿರ ನೆಲಕೆ ಬಿದ್ದುದ[15] ಕಂಡು । ಮುಱಿದೋಡಿತಾ ಪಡೆ ಬಳಿಕ ॥ ೧೧೨ ॥

---

ದೂತನು ತಿಳಿಸಿರುವ ವಾಲಿಯನ್ನು ಗೆದ್ದು, ಅವನ ತುಂಟತನವನ್ನು ನಿವಾರಿಸಿ, ಅವನ ಮಾಂಸವನ್ನು ಭೂತಗಣಗಳಿಗೆ ಇಕ್ಕಿ' ಅವುಗಳ ನಂಟನಾಗು—ಎಂದು ಶ್ರೀರಾಮನು ಹೇಳಿದನು ॥ ೧೦೫ ॥ ಎಲೈ ಚೇಳಿನಿಯೇ, ರಾಮನು ಲಕ್ಷ್ಮಣನೊಡನೆ—"ಕೆಟ್ಟ ಮಾತುಗಳನ್ನಾಡಿದ ಆ ಕೇಡಿಗ ವಾಲಿಯ ತಲೆಯನ್ನು ಕೆಡಹಿ, ಸುಗ್ರೀವನಿಗೆ ಪಟ್ಟ ಕಟ್ಟಿ ಬಾ" ಎಂದು ಹೇಳಿ ಕಳುಹಿಸಿ ಕೊಟ್ಟನು. ॥ ೧೦೬ ॥ ಲಕ್ಷ್ಮಣನು ರಾಮನಿಂದ ಕಳುಹಿಸಿಕೊಂಡು, ಕೆಲವು ಪ್ರಯಾಣಗಳನ್ನು ಕೈಕೊಂಡು ಒಂದು ಖದಿರಾರಣ್ಯವನ್ನು ಪ್ರವೇಶಿಸಿ. ಅಲ್ಲಿ ಬೀಡುಬಿಟ್ಟನು. ಈ ವಾರ್ತೆಯನ್ನು ಒಡನೆಯೇ ವಾಲಿ ಕೇಳಿದನು. ॥ ೧೦೭ ॥ ಲಕ್ಷ್ಮಣನು ಬೀಡುಬಿಟ್ಟಲ್ಲಿಗೇ ಹೋಗಿ ಕಾದಾಡುವೆನೆಂದು ವಾಲಿಯು ಹೊರಟು, ಸೈನ್ಯವನ್ನು ಕೂಡಿಕೊಂಡು, ದಿಟ್ಟತನದಿಂದ, ಲಕ್ಷ್ಮಣನಿಗೆ ಎದುರಾಗಿಯೇ ಪಾಳಯವನ್ನು ಬಿಟ್ಟನು ॥ ೧೦೮ ॥ ಎರಡೂಪಕ್ಷದ ಸೈನ್ಯಗಳು ಎದುರುಬದುರಾಗಿ ನಿಲ್ಲಲು, ಆ ಸೇನೆಗಳ ಮುಂದುಗಡೆಯಿದ್ದ ಭಟರು ಪರಸ್ಪರವಾಗಿ ಕೆಣಕಿ ಕಾದಾಡತೊಡಗಿದರು. ಆಗ ಲಕ್ಷ್ಮಣನು ಹೊರಟು ಬಂದು ಇದನ್ನು ನೋಡಿದನು. ॥ ೧೦೯ ॥ ಆಗ ಸುಗ್ರೀವನು "ಈ ಅಣುವನು ಸೈನ್ಯದ ಮುಖಂಡನಾಗಿರುತ್ತಾನೆ. ಹೀಗಿರುವಾಗ ವಾಲಿಯ ಉಗ್ರತೆಯನ್ನು ಬಿಡಿಸಲು ನೀನೇಕೆ ಹೊರಡಬೇಕು? ನೀನು ಇವನಿಗೆ ಸಮಗ್ರನೆ?"—ಎಂದು ಹೇಳಿದನು ॥ ೧೧೦ ॥ ಅದನ್ನು ಕೇಳಿ ಲಕ್ಷ್ಮಣನು ಹೀಗೆಂದನು—ನೀನು ಒತ್ತಾಯಿಸುವ ಆವಶ್ಯಕತೆಯಿಲ್ಲ. ಅವನ ವೀರತ್ವದ ಕಾದಾಟವನ್ನು ನೋಡುವೆನೆಂದು ಹೇಳಿದೆನಲ್ಲದೆ ನನಗೆ ಆ ವಾಲಿಯು ಲಕ್ಷ್ಯವೆ? ॥ ೧೧೧ ॥ ಸ್ವಲ್ಪಹೊತ್ತಿನಲ್ಲಿ ಲಕ್ಷ್ಮಣನು ಕೋಪೋದ್ರೇಕವನ್ನು ತಾಳಿ,

---

[1] ×× (ಗ). [2] ವನದೊಳು (ಖ). [3] ಬಿಡೆ (ಗ). [4] ಕೇಳ್ದಾ (ಗ). [5] ಪಯಣದೊಳು (ಗ) [6] ಮಾನವನಾಗಿ (ಚ). [7] ಗಂಟಿಕ್ಕಲೆರಡು (ಬ). [8] ಹೊಱಹೊಂಟು (ಗ). [9] ನೀನಿವನ (ಗ) [10] ಸಮಗ್ರವಲ್ಲನೆ (ಚ). [11] ದೊಡಾವನಿದಿರೆ [12] ಮೇಲಿದು (ಚ). [13] ಲಕ್ಷ್ಮಣನೊಂದು (ಚ) [14] × (ಗ). [15] ಬಿಳ್ದುದ (ಚ).

# ೧೬. ಲಂಕಾದಹನ

ದಂಡಧರನ ದಂಡಿಸಿಯಾ ಕುಸುಮ ಕೋ । ದಂಡನ ಕೊಂದು ದುರಿತವ ॥
ಖಂಡಿಸಿ ಜಸವೆತ್ತ ಮುನಿಸುವ್ರತನ ಪಾದ । ಪುಂಡರೀಕಕೆ ನಮಿಸುವೆನು ॥ ೧ ॥

ಮುಂದಣ ಕಥೆ ಯಾವುದದಱ ವೃತ್ತಾಂತವ । ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ದೆ । ನಿಂದೀವರಾಕ್ಷಿ ಲಾಲಿಪುದು ॥ ೨ ॥

ಬಾಳೆದೊಡೆಯಳೆ ಬಾವನ್ನಗಂಪಿನಳೆ ತ । ಮಾಳ ಮುಡಿಯಳೆ ಲತಾಂಗಿ ॥
ನೀಳಾಳಕೆ ನೀರೇಜವದನೆ ಕೇಳು । ಪೇಳುವೆ ಮುಂದಣ ಕಥೆಯ ॥ ೩ ॥

ಪವಳವಜ್ಜೆಯಳೆ ಪದ್ಮಾರಿವದನೆ ಮಂದ । ಪವನಗತಿಯಳೆ ಪದ್ಮಾಕ್ಷಿ ॥
ಭವದೂರನ ಕಥೆಯನು ಪೇಳುವೆನದ । ವಿವರದೊಳಗೆ ಲಾಲಿಪುದು ॥ ೪ ॥

ಹೆಣ್ಣಿಗೆ ಗಂಡು ಮೋಹಿಸುವುದು ಗಂಡಿಗೆ । ಹೆಣ್ಣು ಮೋಹಿಸುವುದುಂಟಬಲೆ ॥
ಹೆಣ್ಣಿಗೆ ಹೆಣ್ಣು ಮೋಹಿಸುವಂತಿದೆ ಗಾಡಿ । ಬಣ್ಣಿಸುವವರಾರು ನಿನ್ನ ॥ ೫ ॥

ಮೃದುನುಡಿಯಳೆ ಮೃದುಹೃದಯಳೆಯತ್ಯಂತ । ಮೃದುನಡೆಯಳೆ ಮದಿರಾಕ್ಷಿ[1] ॥
ಮೃದುಪದತಳೆ ಮೃದ್ವಂಗಿ ಲಾಲಿಸು ನಿನ್ನ । ಹೃದಯ ಶುದ್ಧಿಯೊಳೀ ಕಥೆಯ ॥ ೬ ॥

ಚೆಲುವರ ಗಂಡ ಚೆನ್ನಿಗ ವೀರವಿಕ್ರಮ । ಕುಲ ಜಾತಿ ಶೀಲ[2] ಸಂಪನ್ನ ॥
ಬಲಯುತ ಬಣ್ಣವಾತಿನ ನೀಱ ನಿರವಿಪು । ದಲರಂಬ ವಿಜಯನ ಕಥೆಯ ॥ ೭ ॥

---

ಯಮರಾಜನನ್ನು ಶಿಕ್ಷಿಸಿ, ಮನ್ಮಥನನ್ನು ಸಂಹಾರಮಾಡಿ, ಪಾಪವನ್ನು ತುಂಡುಮಾಡಿ, ಕೀರ್ತಿಪಡೆದ ಮುನಿಸುವ್ರತ ಜಿನೇಂದ್ರನ ಪಾದಕಮಲಕ್ಕೆ ನಮಸ್ಕರಿಸುತ್ತೇನೆ. ॥ ೧ ॥ ಚೇಳಿನಿಯು ಶ್ರೇಣಿಕನೊಡನೆ, "ಎಲೈ ಮನ್ಮಥಸ್ವರೂಪನೇ, ಮುಂದಿನ ಕಥೆಯಾವುದು? ಅದರ ಸಂಗತಿಯನ್ನು ಸಂಪೂರ್ಣವಾಗಿ ತಿಳಿಸಬೇಕು, ಎನ್ನಲು, ಶ್ರೇಣಿಕನು ಹೀಗೆ ಹೇಳಿದನು— "ಎಲೈ ಚೇಳಿನಿಯೇ ಕೇಳು. ॥ ೨ ॥ ಬಾಳೆಯಂತಿರುವ ತೊಡೆಯ, ಶ್ರೀಗಂಧದ ಪರಿಮಳದ, ತಮಾಲದಂತೆ ಕಪ್ಪಾದ ತಲೆಗೂದಲಿನ, ಬಳ್ಳಿಯಂತಹ ದೇಹದ, ನೀಳವಾದ ಕೂದಲಿನ, ತಾವರೆಯಂತಹ ಮುಖದ, ಚೇಳಿನಿಯೇ ಮುಂದಿನ ಕಥೆಯನ್ನು ಕೇಳು. ॥ ೩ ॥ ಹವಳದಂತೆ ಕೆಂಪಾದ ಪಾದವುಳ್ಳ, ಚಂದ್ರನಂತಹ ಮುಖವುಳ್ಳ, ನಿಧಾನವಾದ ಗಾಳಿಯಂತಹ ನಡಿಗೆಯುಳ್ಳ, ಕಮಲನೇತ್ರೆಯೇ, ಜನನರಹಿತನಾದ ಜಿನೇಶನ ಕಥೆಯನ್ನು ವಿವರವಾಗಿ ತಿಳಿಸುವೆನು; ಕೇಳು. ॥ ೪ ॥ ಎಲೈ ಮಡದಿಯೇ, ಲೋಕದಲ್ಲಿ ಹೆಣ್ಣಿಗೆ ಗಂಡು ಮೋಹಪಡುವುದು, ಹಾಗೆಯೇ ಗಂಡುಸಿಗೆ ಹೆಂಗುಸು ಮೋಹಪಡುವುದು ಏನೂ ವಿಶೇಷವಲ್ಲ. ಆದರೆ ನಿನ್ನ ಸೊಬಗು ಹೆಣ್ಣಿಗೆ ಹೆಣ್ಣು ಮೋಹಪಡುವಂತಿದೆ! ನಿನ್ನ ಸೊಬಗನ್ನು ವರ್ಣಿಸಲು ಬಲ್ಲವರಾರು? ॥ ೫ ॥ ಮೃದುವಾದ ಮಾತು, ಮೃದುವಾದ ಮನಸ್ಸು, ಅತಿ ಮೃದುವಾದ ನಡಿಗೆ, ಅಮಲೇರಿದಂತಹ ಕಣ್ಣು, ಮೃದುವಾದ ಪಾದತಲ, ಮೃದುವಾದ ದೇಹಗಳಿಂದ ಒಪ್ಪುವ ಮಡದಿಯೇ, ಪರಿಶುದ್ಧವಾದ ಮನಸ್ಸಿನಿಂದ ಈ ಕಥೆಯನ್ನು ಕೇಳು. ॥ ೬ ॥ ಆಗ ಚೇಳಿನಿ ಹೀಗೆಂದಳು—"ಎಲೈ ಸೊಬಗುಳ್ಳವರ ಒಡೆಯನೇ, ಚೆನ್ನಿಗನೆ, ವೀರಪರಾಕ್ರಮಿಯೇ, ಕುಲ-ಜಾತಿ-ಶೀಲ-

---

ಈ ಸಂಧಿಯ ಆದಿಯ ೫ ಪದ್ಯಗಳು 'ಕ' ಪ್ರತಿಯಲ್ಲಿ ಬೇರೆ ಇವೆ. (ಅನುಬಂಧ ೨ ನೋಡಿ) ಈ ಸಂಧಿಯ ೮೯ನೆಯ ಪದ್ಯಕ್ಕೆ 'ಗ' ಪ್ರತಿ ಕೊನೆಗೊಂಡಿದೆ. [1] ಮಧುರಾಕ್ಷಿ (ಕ). [2] ಚೆನ್ನಿಗರ ವಿಕ್ರಮ ಜಾತಿ ಕುಲಶೀಲನೆ (ಗ).

ಬಳಿಕ ಸುಗ್ರೀವ ಸಮ್ಮೇದಗಿರಿಯ ಸಿದ್ಧ । ಶಿಲೆಯ ತಳದೊಳುಪವಾಸ ॥
ತಳೆದಂದು[1] ಸರ್ವ ಮಹಾವಿದ್ಯೆಗಳನೊಲ್ದು । ತಳುವದೆ ಪೂಜೆಯ ಮಾಡಿ ॥ ೧೬ ॥

ರಾಮಲಕ್ಷ್ಮಣ ಸುಗ್ರೀವನಣುವಗೂಡಿ । ಯಾ ಮಂತ್ರಿವೆರಸಿ ಮಾತಾಡಿ ॥
ಆ ಮುದವೆತ್ತು ಲಂಕೆಗೆ ಪೊಱಮಡಲಿತ್ತ[2] । ತಾಮಸವನು ಮಾಡದಬಳಿ ॥ ೧೭ ॥

ಪರಿಜನ ಪುರಜನ ಬಂಧುಜನರು ಮಂತ್ರಿ । ವರಕುಂಭಕರ್ಣಾದಿಗಳು ॥
ನೆರೆದಾಳೋಚಿಸಿ ಬಂದು ದಶಾಸ್ಯನ । ಚರಣವ ಕಂಡು ಕೈಮುಗಿದು ॥ ೧೮ ॥

ಅರಸ ಚಿತ್ತೈಸೆಮ್ಮುತ್ತಮ[3]ಕುಲಕೆ ನ । ಮ್ಮುರವಿನ ಮಹದೇಳಿಗೆಗೆ ॥
ಪೆರವೆಣ್ಗಳುಪಲಯುಕ್ತ ಸೀತೆಯ ನೀ । ಪರಿಹರಿಸುವುದಿದು[4] ಕಾರ್ಯ ॥ ೧೯ ॥

ದೇವ ಚಿತ್ತೈಸುವುದೆಮಗೋಸುಗ[5]ನೀ । ವಾ ವಧುವನು ರಾಮನಿಗೆ ॥
ಓವದೊಪ್ಪಿಸುವುದೆಂದವರು ಪೇಳಿದೊಡಾ । ರಾವಣನಿಂತು ನುಡಿದನು[6] ॥ ೨೦ ॥

ಪುಲುಮಾನಸ ರಾಘವ ತನ್ನ ಪರಿಮಿತ । ಬಲವನೆಲ್ಲವ ಕೂಡಿಕೊಂಡು ।
ಕಲಹಕ್ಕೆ ಬಂದ ಗಡದ ಕೇಳಿ ಸುಗಿದಾ । ಲಲನೆಯ ಬಿಡು[7]ವುದಯುಕ್ತ ॥ ೨೧ ॥

ಕಾಳಗವನು ಮಾಡಲಗಿದವನುಬ್ಬೆಯ । ತಾಳಲಾಱದೆ ದಶಕಂಠ ॥
ಹೇಳಿದ ಮಾತಿಗವಳ ಬಿಟ್ಟನೆಂಬುದ[8] । ಕೇಳಬಹುದೆ ಬಿಡೆನೆನಲು ॥ ೨೨ ॥

---

ಸ್ಥಳದಲ್ಲಿ ಲಕ್ಷ್ಮಣನು ಭಕ್ತಿಪೂರ್ವಕವಾಗಿ ಏಳುದಿವಸ ಉಪವಾಸ ಮಾಡಿ, ತನ್ನ ತಪಶ್ಶಕ್ತಿಯಿಂದ ಪ್ರಜ್ಞಪ್ತಿವಿದ್ಯೆಯನ್ನು ಪಡೆದನು ॥ ೧೫ ॥ ಆ ಮೇಲೆ ಸುಗ್ರೀವನು ಸಮ್ಮೇದಗಿರಿಗೆ ಹೋಗಿ, ಅಲ್ಲಿ ಸಿದ್ಧಶಿಲಾತಳದಲ್ಲಿ ಉಪವಾಸವನ್ನು ಕೈಗೊಂ ಎಲ್ಲಾ ವಿಧದ ಮಹಾವಿದ್ಯೆಗಳನ್ನೂ ಗಳಿಸಿಕೊಂಡನು. ॥ ೧೬ ॥ ಎಲೈ ಚೇಳಿನಿಯೇ ಶ್ರೀರಾಮನು ಲಕ್ಷ್ಮಣ, ಸುಗ್ರೀ ಅಣುವರನ್ನು ಕೂಡಿಕೊಂಡು ಮಂತ್ರಿಸಹಿತ ಮಾತಾಡಿಕೊಂಡು, ಸಂತೋಷದಿಂದ, ತಡಮಾಡದೆ, ಲಂಕೆಗೆ ಹೊರಟ ॥ ೧೭ ॥ ಇತ್ತ ಲಂಕಾಪುರದಲ್ಲಿ ಪರಿಜನರು, ಪಟ್ಟಣಿಗರು, ಬಾಂಧವರು, ಮಂತ್ರಿಗಳು, ಕುಂಭಕರ್ಣ ಮೊದಲಾದವ ಒಟ್ಟುಸೇರಿ ಆಲೋಚನೆ ಮಾಡಿ, ರಾವಣನ ಬಳಿಗೆ ಬಂದು ನಮಸ್ಕರಿಸಿ, ಹೀಗೆ ಹೇಳಿದರು. ॥ ೧೮ ॥ ಎಲೈ ಅರಸ ಕೇಳು. ನಮ್ಮ ಶ್ರೇಷ್ಠವಾದ ವಂಶಕ್ಕೂ, ನಮ್ಮ ಮಹತ್ತರವಾದ ಉನ್ನತಿಗೂ ಕೊರತೆ ತರುವಂತಹ ಪರಸ್ತ್ರೀ ವ್ಯಾಮೋಹ ನಿನಗೆ ಯೋಗ್ಯವಲ್ಲ. ಆದುದರಿಂದ ಸೀತೆಯನ್ನು ನೀನು ಬಿಟ್ಟುಬಿಡುವುದು ಕರ್ತವ್ಯ. ॥ ೧೯ ॥ ಒಡೆಯನೇ, ಕೇಳು. ನೀ ಕಡೆಗೆ ನಮಗೋಸ್ಕರವಾಗಿಯಾದರೂ ಸೀತೆಯನ್ನು ಪ್ರೀತಿಸದೆ, ಆಕೆಯನ್ನು ಶ್ರೀರಾಮನಿಗೆ ಒಪ್ಪಿಸಬೇಕು—ಎಂದರು. ಆ ರಾವಣನು ಹೀಗೆ ಹೇಳಿದನು ॥ ೨೦ ॥ ತೃಣಕ್ಕೆ ಸಮಾನ ಮನುಷ್ಯನಾದ ಆ ರಾಮನು ತನ್ನ ಪರಿಮಿತವಾದ ಸೈನ್ಯವನ ಕೂಡಿಕೊಂಡು ನಮ್ಮೊಡನೆ ಯುದ್ಧಕ್ಕೆ ಬಂದಿರುವನಂತೆ ! ಈ ಸುದ್ದಿಯನ್ನು ಕೇಳಿ, ಹೆದರಿ, ಆ ಸೀತೆಯನ್ನು ಬಿಟ್ಟುಕೊಡುವು ಯೋಗ್ಯವಲ್ಲ ॥ ೨೧ ॥ ಈಗ ಸೀತೆಯನ್ನು ನಾನು ಬಿಟ್ಟುಕೊಟ್ಟರೆ, ಜನರು ಏನೆಂದಾರು? "ದಶಕಂಠನು ರಾಮನೊಡ ಯುದ್ಧಕ್ಕೆ ಹೆದರಿ, ರಾಮನ ಬಿಸಿಯನ್ನು ತಾಳಲಾರದೆ, ಅವನು ಹೇಳಿ ಕಳುಹಿದ ಮಾತಿಗೆ ಮಣಿದು, ಸೀತೆಯನ್ನು ಬಿಟ್ಟನ ಎಂಬೀ ಮಾತನ್ನು ನನಗೆ ಕೇಳಲು ಸಾಧ್ಯವೆ? ಸೀತೆಯನ್ನು ಬಿಡೆನು—ಎಂದು ರಾವಣನು ಹೇಳಿದನು. ॥ ೨೨ ॥ ರಾವಣ

---

[1] ತಳೆದರು (ಕ. ಗ.). [2] ಪೊಱಮಟ್ಟರು (ಕ). [3] ಚಿತ್ತೈಸು ನಮ್ಮುತ್ತಮ (ಗ). [4] ಪರಿಹರಿಸುವುದದು (ಗ). [5] ಚಿತ್ತೈಸುವುದೆ ಗೋಸುಗ (ಕ) ಚಿತ್ತೈಸು ನೀವೆಮಗೋಸುಗ (ಗ). [6] ರಾವಣ ನುಡಿದನಿಂತೆಂದು (ಗ. ಚ.). [7] ಕೊಡು (ಚ). [8] ಬಿಟ್ಟುದೆಂಬುದ (

ನುಡಿದ ನುಡಿಯ ಕೇಳಿ ನೊಂದು ವಿಭೀಷಣ । ನುಡಿದನು ನೀನು ಸೀತೆಯನು ॥
ಬಿಡಲಾಱೆದೆನ್ನಿಂದಗ್ಗಳಮುಂಟೆಂದು । ನುಡಿವರೆ ನಾಣ್ಚದೆ ನೀನು[1] ॥ ೨೩ ॥

ಜಡಧಾರೆಯಿಂದೆ ಕನ್ನಡಿ ಮಲೀಮಸತೆಯ[2] । ಪಡೆವಂತೆ ನೃಪ ಕೇಳು ಪರರ ॥
ಮಡದಿಯಿಂ ನಿನ್ನುರುತೇಜದೇಳ್ಗೆಗೆ ತುಪ್ಪ । ನೆಡದಿರದೆಂದು ಪೇಳಿದನು[3] ॥ ೨೪ ॥

ಮೇರೆದಪ್ಪುವರಿಗಾಜ್ಞೆಯ ಮಾಳ್ಪ ನೀನವಿ । ಚಾರದಿಂ ನಡೆಯಲಾರ್ ನಿನ್ನ ॥
ಬಾರಿಪರಾರಬ್ಧಿ ಕಾದೊಡೆ ಬೆರಸುವ । ನೀರಾವುದು ದಶಕಂಠ ॥ ೨೫ ॥

ಮೊಲೆವಾಲು ನಂಜಾದೊಡೆ ನಿಜ ಮೋಹದ । ಕುಲವಧು ಕೃತಕವೇಳಿಪ್ರೊಡೆ ॥
ನೆಲಮುನಿದೊಡೆ ಸಾಕಿ ಸಲಹಿದಾತರು[4] ಸಾಯ । ಕೊಲುವರೆ ಕಾಯುವರಾರು[5] ॥ ೨೬ ॥

ಅರಸಿರ್ದಾಱಿಡಿಗೊಂಬರೆ[6] ಮದವೆದ್ದ ಕರಿ । ತೊಂಡಾದೊಡೆ[7] ಪೊಳಲ ॥
ಪರಿರಕ್ಷಿಸುವ ಕಳ್ದೊಡೆ ಜನಪದ ನಿ । ಸ್ತರಿಸಬಹುದೆ ನೃಪತಿಲಕ ॥ ೨೭ ॥

ಕುಪಿತನಾಗದಿರೆನ್ನ ನುಡಿಗೆ ನೀನೀ ಬಲು । ವಿಪರೀತಚರಿತವನೆಸಗಿ ॥
ಅಪಜಯ[8] ವಧುವಿನ ವರನಾಗಬೇಡೆಂದು । ಕಪಟವ ಬಿಟ್ಟು ಪೇಳಿದನು[9] ॥ ೨೮ ॥

ಜಾತಿವೆಣ್ಗಳ ಬಿಟ್ಟು ಪರಸತಿಯರ ಕಂಡು । ಸೋತೊಡಗೂಡಬೇಕೆಂದು ॥
ಕಾತರಿಸುವ ಕಡು ಪಾಪಿಯ ಜಾರಾ । ಚಾತನೆಂದಿಳೆ ಬಣ್ಣಿಪುದು[10] ॥ ೨೯ ॥

ಕುಲವಧುವನು ಬಿಟ್ಟು ಕುಹಕದಿಂದಾ ಪರ । ಲಲನೆಗಳುಪಿ ನಿಜಕುಲವ ॥
ಜಲದೊಳು ನೆರಪುವವನ ಕಂಡು ಗೋಳಕ । ಕುಲವೆಂದು ನುಡಿವರು ಜನರು ॥ ೩೦ ॥

---

ಹೀಗೆಂದುದನ್ನು ಕೇಳಿ, ನೊಂದು, ವಿಭೀಷಣನು ಹೀಗೆಂದನು—'ಸೀತೆಯನ್ನು ಬಿಡಲಾರೆನು, ಇದರಲ್ಲೇ ಘನತೆಯಿದೆಯೆಂದು ನಾಚಿಕೆಯಿಲ್ಲದೆ ಹೇಳುವೆಯಲ್ಲವೆ? ॥ ೨೩ ॥ ನೀರಿನ ಧಾರೆಯಿಂದ ಕನ್ನಡಿಯು ಮಲಿನತೆಯನ್ನು ತಾಳುವಂತೆ, ಪರಸ್ತ್ರೀಯಿಂದ ನಿನ್ನ ಶ್ರೇಷ್ಠವಾದ ತೇಜಸ್ಸಿನ ಹೆಚ್ಚಳಕ್ಕೆ ಕಳಂಕವುಂಟಾಗದೆ ಇರದು" ಎಂದು ಹೇಳಿದನು. ॥ ೨೪ ॥ ಎಲೈ ರಾವಣನೇ, ಮೇರೆತಪ್ಪಿ ನಡೆಯುವವರಿಗೆ ಆಜ್ಞೆಯನ್ನು ಮಾಡಿ, ಅವರನ್ನು ಸರಿದಾರಿಗೆ ತರುವಂತಹ ನೀನು, ವಿಚಾರಶೂನ್ಯನಾಗಿ ವರ್ತಿಸಿದರೆ ತಡೆಯುವವರು ಯಾರು? ಸಮುದ್ರದ ನೀರು ಬಿಸಿಯೇರಿದರೆ, ಅದನ್ನು ತಣ್ಣಗಾಗಿ ಮಾಡಲು ಬೆರಸಲಿಕ್ಕೆ ಯಾವ ನೀರಿದೆ? ॥ ೨೫ ॥ ತಾಯ ಮೊಲೆಹಾಲು ವಿಷವಾದರೆ, ತನ್ನ ಪ್ರೀತಿಯವಳಾದ ಸತ್ಕುಲದವಳಾದ ಮಡದಿ ಕಪಟಶೀಲೆಯಾದರೆ, ಭೂಮಿದೇವಿಯೇ ಸಿಟ್ಟಾದರೆ, ಸಾಕಿ ಸಲಹಿದವರೇ ಕೊಲ್ಲುವುದಾದರೆ ಕಾಪಾಡತಕ್ಕವರು ಯಾರು? ॥ ೨೬ ॥ ಎಲೈ ರಾಜಶ್ರೇಷ್ಠನೇ, ರಕ್ಷಿಸುವ ರಾಜನಿದ್ದೂ ತೊಂದರೆಪಡುವುದಾದರೆ, ಮದ್ದಾನೆಯು ತುಂಟತನಕ್ಕಿಳಿದರೆ, ಪಟ್ಟಣದ ಕಾವಲುಗಾರನೇ ಕದ್ದರೆ, ದೇಶದ ಜನತೆಗೆ ಸಹಿಸಲು ಸಾಧ್ಯವೆ? ॥ ೨೭ ॥ ನನ್ನ ಮಾತಿಗೆ ಸಿಟ್ಟಾಗದಿರು ನೀನು ಈ ವಿಪರೀತದ ನಡತೆಯನ್ನು ಆಚರಿಸಿ ಸೋಲವೆಂಬ ಹೆಣ್ಣಿನ ಗಂಡನಾಗದಿರು"—ಎಂದು ವಿಭೀಷಣನು ಕಪಟವಿಲ್ಲದ ಮಾತುಗಳನ್ನಾಡಿದನು. ॥ ೨೮ ॥ ಸ್ವಜಾತಿಯ ಸ್ತ್ರೀಯರನ್ನು ಒಲ್ಲದೆ, ಪರಸ್ತ್ರೀಯರನ್ನು ಕಂಡು ಆಕರ್ಷಗೊಂಡು ಒಡಗೂಡಲು ಆತುರಪಡುವ ಮಹಾಪಾತಕನನ್ನು ಲೋಕದ ಜನರು 'ಸೂಳೆಯ ಮಗ'ನೆಂದು ವರ್ಣಿಸುವರು ॥ ೨೯ ॥ ಕುಲೀನೆಯಾದ

---

[1] ನುಡಿದರೆ ನಾಣ್ಚದವನನು (ಗ) ನುಡಿವರೆ ನಾಣ್ಚದವನನು (ಚ) [2] ಮಲಿಮಸತೆಯ (ಕ) [3] ಪೇಳಿದೆನು (ಚ) [4] ಸಲಹಿದವರು (ಗ. ಚ) [5] ಕೊಲುವುದನಾರು ಕಾಯ್ವವರು (ಗ) ಕೊಲಬಂದೊಡಾರು ಕಾಯುವರು (ಚ) [6] ಗೊಳ್ವರೆ (ಗ ಚ). [7] ತೊಂದಾದೊಡೆ (ಗ). [8] ಅಪೆಗತ(ಗ) ಅಪಗತಜಯ (ಚ). [9] ಪೇಳಿದೆನು (ಗ) [10] ಬಣ್ಣಿಸುವುದು (ಚ) ೩೦, ೩೧—ಈ ಪದ್ಯಗಳು ಗ ದಲ್ಲಿಲ್ಲ

ಪಾಣಿಗ್ರಹಣದ ಪೆಂಡಿರಿರಲು ಪಂಚ । ಬಾಣನಟ್ಟುಳಿಗಂಜಿ ಪರರ ॥
ರಾಣಿಗಳುಪಿದನ ಕುಂಡಾನ್ವಯನೆಂದು । ಕ್ಷೋಣಿ ಬಾಯುಳಿದು ಬಣ್ಣಿಪುದು ॥ ೩೧ ॥

ಹೋಮಸಾಕ್ಷಿಯಿಂದ[1] ಬಂದು ಬಾಳುವ ತನ್ನ । ಕೋಮಲಾಂಗಿಯ ಬಿಟ್ಟು ಪರರ ॥
ಕಾಮಿನಿಗಳುಪಿದವನ ಛೀ ಛೂಯೆಂದು । ಭೂಮಿ ಕೊಕ್ಕರಿಸುವುದರಸ ॥ ೩೨ ॥

ನೋಡಲು ನುಡಿಸಲು ನಗಲು ತಕ್ಕೆಯೊಳೊಡ । ಗೂಡಲವರು ಪರಸತಿಯ ॥
ಈಡಾಗುವರೇಳು ನರಕಕ್ಕೆಯದಱಿಂದ । ಪಾಡಲ್ಲ ಪೆಱವೆಣ್ಣೊಲಿವುದು ॥ ೩೩ ॥

ಕೆಟ್ಟ ಚತುರ್ಮುಖನಂಗಜನಾರಾತಿ । ಕೆಟ್ಟನಾ ಗೀರ್ವಾಣರಾಜ ॥
ಕೆಟ್ಟ ಪದ್ಮೋದರನದಱಿಂದ ಪೆಱವೆಣ್ಣ । ಮುಟ್ಟಲುಚಿತವಲ್ಲ ನೃಪತಿ ॥ ೩೪ ॥

ಪ್ರಜೆಗಲ್ಲ ಪರಿವಾರಕಲ್ಲ ನಂಟರಿಗಲ್ಲ । ಭಜಿಸುವ ನಿಜದೈವಕಲ್ಲ ॥
ಸುಜನರಿಗಲ್ಲ ಪರಾಂಗನೆಗೊಲಿದವ[2] । ವೃಜಿನ ಪಾತ್ರನಹ ನೃಪತಿ ॥ ೩೫ ॥

ಖೇಚರಪತಿ ಗಡ ಸೀತೆಗೋಸುಗ ಸಚ । ರಾಚರವಱಿಕೆಯಿಂ ಕಾದಿ[3] ॥
ಭೂಚರನಿಂದಳಿದ ಗಡೆಂಬ ಮಾತಿಹು । ದಾ ಚಂದ್ರ ತಾರೆಯುಳ್ಳನಕ ॥ ೩೬ ॥

ನಡೆಯೊಳಗೆಡರಿಲ್ಲ[4] ನುಡಿಯೊಳು ಬರಡಿಲ್ಲ । ಕಡುಬೀರದೊಳು ಭೀತಿಯಿಲ್ಲ ॥
ಪೊಡವಿಯೊಳೆಣೆಯಿಲ್ಲ ನಿನಗೆ ನೀನಲ್ಲದ । ನಡೆಯಿಂದ ಕೆಡಬೇಡ ನೃಪತಿ ॥ ೩೭ ॥

---

ಮಂಡದಿಯನ್ನು ಬಿಟ್ಟು, ಕಪಟವರ್ತನೆಯನ್ನು ಮಾಡಿ, ಪರಸ್ತ್ರೀಗೆ ಆಸೆಪಟ್ಟು, ತನ್ನ ಕುಲವನ್ನು ನೀರುಪಾಲು ಮಾಡುವವನನ್ನು ಕಂಡು ಜನರು ಅವನ ಕುಲವನ್ನೇ 'ಗೋಳಕ ಕುಲ'ವೆಂದು ಕರೆಯುವರು. (ಮೃತೇ ಭರ್ತರಿ ಜಾರಾಜ್ಜಾತೋ ಗೋಲಕಃ—ಅಮರಕೋಶ). ॥ ೩೦ ॥ ಮದುವೆಯಾದ ತನ್ನ ಹೆಂಡಿರು ಇರುವಾಗಲೇ, ಕಾಮುವಶನಾಗಿ ಬೇರೆಯವರ ಹೆಂಡಿರಲ್ಲಿ ಆಸಕ್ತನಾಗಿರುವವನ ಕುಲವನ್ನು "ಕುಂಡಾನ್ವಯ"ವೆಂದು ಲೋಕದ ಜನರು ವರ್ಣಿಸುವರು. (ಅಮೃತೇ ಭರ್ತರಿ ಜಾರಾಜ್ಜಾತಃ ಕುಂಡಃ—ಅಮರಕೋಶ.). ॥ ೩೧ ॥ ಹೋಮಸಾಕ್ಷಿಯಾಗಿ ಮದುವೆಯಾಗಿ ಮನೆಗೆ ಬಂದು ಬಾಳುವ ತನ್ನ ಮಡದಿಯನ್ನು ಬಿಟ್ಟು ಪರಸ್ತ್ರೀಗೆ ಆಸೆಪಟ್ಟವನನ್ನು ಲೋಕವೇ ಛೀ, ಛೂ, ಎಂದು ಹೇಸಿಕೆಪಡುವುದು. ॥ ೩೨ ॥ ಪರಸ್ತ್ರೀಯನ್ನು ನೋಡಿದರೆ, ಮಾತಾಡಿಸಿದರೆ, ನಗಾಡಿದರೆ, ಅಪ್ಪಿ ಒಡಗೂಡಿದರೆ, ಅಂಥವರು ಏಳನೆಯ ನರಕಕ್ಕೆ ಹೋಗುವರು. ಆದುದರಿಂದ ಇತರರ ಹೆಂಡಿರಲ್ಲಿ ಆಸಕ್ತನಾಗುವುದು ಯೋಗ್ಯವಲ್ಲ. ॥ ೩೩ ॥ ಪರಸ್ತ್ರೀವ್ಯಾಮೋಹದಿಂದ ಬ್ರಹ್ಮ, ಶಿವ, ದೇವೇಂದ್ರ, ವಿಷ್ಣು—ಮುಂತಾದ ದೇವತೆಗಳೇ ಕೆಟ್ಟಿದ್ದಾರೆ. ಆದುದರಿಂದ ಎಲೈ ರಾವಣರಾಜನೇ ಪರಸ್ತ್ರೀಯನ್ನು ಸ್ಪರ್ಶಿಸಬಾರದು. ॥ ೩೪ ॥ ಎಲೈ ರಾಜನೇ, ಪ್ರಜೆ, ಪರಿವಾರ, ನಂಟರು, ಇಷ್ಟದೇವತೆ, ಸತ್ಪುರುಷರು—ಮುಂತಾದವರನ್ನೆಲ್ಲ ಪ್ರೀತಿಸಬಹುದು. ಇದರಿಂದೆಲ್ಲಾ ಒಳ್ಳೆಯದೇ. ಆದರೆ ಪರಸ್ತ್ರೀಯನ್ನು ಪ್ರೀತಿಸಿದವನು ಪಾಪಾಶ್ರಯನಾಗುವನು. ॥ ೩೫ ॥ ನೀನು ಸೀತೆಯನ್ನು ಬಿಡದಿದ್ದರೆ ಅಪಕೀರ್ತಿ ಬರುವುದು. "ಖೇಚರರಿಗೆಲ್ಲ ಒಡೆಯನೆನಿಸಿದ ರಾವಣನಂತೆ! ಸೀತೆಗಾಗಿ ಲೋಕವೇ ತಿಳಿಯುವಂತೆ ಯುದ್ಧಮಾಡಿ ಮನುಷ್ಯರಿಂದ ಸತ್ತುಹೋದನಂತೆ!" ಎಂಬ ಮಾತು ಚಂದ್ರನಕ್ಷತ್ರಗಳು ಇರುವ ತನಕ ಉಳಿದೀತು. ಆದುದರಿಂದ ನಿನ್ನ ಉದ್ದೇಶ ಒಳ್ಳಿತಲ್ಲ. ॥ ೩೬ ॥ ಎಲೈ ರಾಜನೇ, ನಿನ್ನ ನಡತೆಯಲ್ಲಿ ಕೊರತೆಯಿಲ್ಲ; ಮಾತಿನಲ್ಲಿ ಸತ್ವಹೀನತೆಯಿಲ್ಲ; ಪರಾಕ್ರಮದಲ್ಲಿ ಹೆದರುವಂಥದಿಲ್ಲ; ಲೋಕದಲ್ಲಿ ನಿನಗೆ ಸಮಾನರಿಲ್ಲ. ಹೀಗಿರುವಾಗ ನೀನು ಅಯೋಗ್ಯ

---

[1] ಸಾಕ್ಷಿಗಳಿಂದ (ಗ). [2] ಗೊಲಿದನು (ಗ). [3] ಕಾಡಿ (ಗ). [4] ಗೆರಡಿಲ್ಲ (ಗ. ಚ.).

ಅನ್ವಯದೊಳಗುತ್ತಮರಾದರಿಗೆ ಶ್ರೀ । ತನ್ನಿ ಬೆಂಬಿಡಳೆಂದೆಂದು[1] ॥
ಅನ್ವರ್ಥವಾಗಿಪ್ಪಳು ನಂಬು ನಿಜವೆಂದು । ಮನ್ವಾದಿಗಳ ಮಾರ್ಗವಿದು ॥ ೩೮ ॥

ಸುರಗುರು ಬುದ್ಧಿಗೆ ಪರಮೇಷ್ಠಿ ವಿದ್ಯೆಗೆ । ಸಿರಿಗೆ ಶ್ರೀಧರನಮರೇಂದ್ರ ॥
ಉರುಭೋಗಕೆಣೆಯಲ್ಲವೆಂದೆನೆ ನಿನಗಿನ್ನು । ಸರಿದೊರೆಯಾರು ಲೋಕದೊಳು ॥ ೩೯ ॥

ಆಪತ್ತಡಸಿದ ಕಾಲಕ್ಕೆ ತನಗು । ಳ್ಳಾ ಪತ್ತಿಗರು ಬುದ್ಧಿಯನು ॥
ಏ ಪೊತ್ತು ಪೇಳದಿರ್ದೊಡೆಯುವರನು ಕಡು । ಪಾಪಿಯೆಂಬರು ಲೋಕದೊಳು ॥ ೪೦ ॥

ಸೂರ್ಯಂಗೆ ಸೊಡರನೆತ್ತುವರೆ ಕೇಳಮರಾ । ಚಾರ್ಯಂಗೆ ಬುದ್ಧಿವೇಳುವರೆ ॥
ಕಾರ್ಯವ ನಿನಗೆ ಪೇಳ್ವರೆ[2] ನಾನ್ಯೆಸಱ । ಕಾರ್ಯವಂತನೆ ದಶಕಂಠ[3] ॥ ೪೧ ॥

ಏಕೋದರನೆಂಬುದಱಿಂದ ನಿನಗಾನು । ಬೇಕಾದವನೆಂಬುದ[4]ದಱಿಂ ॥
ಈ [5]ಕಥನದಿ ಕೆಡಬೇಡವೆಂಬುದರಿಂ । ದೀ ಕಾರ್ಯವ[5] ಪೇಳಿದೆನು ॥ ೪೨ ॥

ಕೇಡು ಸಂಭವಿಸುವ ಕಾಲಕ್ಕೆ ನೆಱೆ ಬುದ್ಧಿ । ಕೂಡ[6]ಲಱಿಯದೆಂದೆಂಬ[7] ॥
ನಾಡವರಾಡುವ ಮಾತಿನ ಸಾಕ್ಷಿಗೆ । ಯೀಡಾಗಬೇಡೆಂದು ಪೇಳ್ದೆ ॥ ೪೩ ॥

ಬಿಡು ಸೀತೆಯ ನನ್ನ ನುಡಿಯ ಮನ್ನಿಸು ನೀ । ಪಡೆ ಲೋಕದೊಳು[8] ಕೀರ್ತಿಯನು ॥
ಪಡಿಮಾತುಗೊಡದಿರೆನುತ[9]ಲಂದವನವ । ನಡಿಗೆಱಗಿಯೆ ಪೇಳಿದನು ॥ ೪೪ ॥

ವರ್ತನೆಯನ್ನು ಕೈಕೊಂಡು ಕೆಟ್ಟುಹೋಗಬೇಡ ॥ ೩೭ ॥ ವಂಶದಲ್ಲಿ ಶ್ರೇಷ್ಠರಾದವರನ್ನು ಲಕ್ಷ್ಮೀದೇವಿಯು ಎಂದಿಗೂ ಅನುಸರಿಸುವಳು. ಆಕೆ ಸಾರ್ಥಕವಾಗಿಯೇ ಅಂಥವರಲ್ಲಿ ನೆಲಸುವಳು ಈ ಮಾತು ನಿಜ ಮನು ಮುಂತಾದ ಮಹಾರಾಜರ ಮಾರ್ಗವಿದು ॥ ೩೮ ॥ ಎಲೈ ರಾವಣನೇ, ನಿನ್ನ ಬುದ್ಧಿಗೆ ಬೃಹಸ್ಪತಿಯೂ, ವಿದ್ಯೆಗೆ ಬ್ರಹ್ಮನೂ, ಐಶ್ವರ್ಯಕ್ಕೆ ಮಹಾ ವಿಷ್ಣುವೂ, ಶ್ರೇಷ್ಠಸುಖಕ್ಕೆ ದೇವೇಂದ್ರನೂ ಎಣೆಯಲ್ಲವೆನ್ನುವಾಗ ನಿನಗೆ ಲೋಕದಲ್ಲಿ ಸರಿಯಾದ ಯೋಗ್ಯತೆಯುಳ್ಳವರು ಯಾರು? ॥ ೩೯ ॥ ವಿಪತ್ತುಗಳು ಬಂದಡಸಿದ ಸಮಯದಲ್ಲಿ ತನಗಿರುವ ನಂಟರು ಅಥವಾ ಬಂಧುಗಳು ನೀತಿಯನ್ನು ಹೇಳದಿದ್ದರೆ, ಅಂಥವರನ್ನು ಲೋಕದಲ್ಲಿ ಮಹಾಪಾಪಿಗಳೆಂದು ಹೇಳುವರು ॥ ೪೦ ॥ ಎಲೈ ರಾವಣನೇ ಸೂರ್ಯನಿಗೆ ದೀಪವನ್ನು ತೋರಿಸುತ್ತಾರೆಯೆ? ದೇವಗುರುವಾದ ಬೃಹಸ್ಪತಿಗೆ ಬುದ್ಧಿ ಹೇಳುವರೆ? ತಿಳಿದವನಾದ ನಿನಗೆ ಕರ್ತವ್ಯಬೋಧನೆಯನ್ನು ಮಾಡಲು ನಾನೆಂತಹ ಕಾರ್ಯ ಕುಶಲನು ! ॥ ೪೧ ॥ ಎಲೈ ಅಣ್ಣನೇ ನಾನು ಒಂದೇ ತಾಯಿಯ ಉದರದಿಂದ ಬಂದವನೆಂಬುದರಿಂದಲೂ, ನಿನಗೆ ಬೇಕಾಗಿರುವವನೆಂಬುದರಿಂದಲೂ, ಈಗಿನ ಕಾರ್ಯದಿಂದ ಕೆಟ್ಟುಹೋಗಬೇಡ ಎಂಬುದರಿಂದಲೂ ಈಗ ಇಷ್ಟೆಲ್ಲ ಹೇಳಿರುತ್ತೇನೆ ॥ ೪೨ ॥ ಕೆಟ್ಟುಹೋಗುವಕಾಲಕ್ಕೆ ವಿಶೇಷವಾಗಿ ಒಳ್ಳೆಯಬುದ್ಧಿ ಕೂಡಿಬರುವುದಿಲ್ಲವೆಂದು ನಾಡಿನ ಜನರು ಹೇಳುವ ಮಾತಿದೆ ಈ ಮಾತಿಗೆ ನೀನು ಸಾಕ್ಷಿಯಾಗಬಾರದೆಂದು ನಿನಗೆ ಇಷ್ಟೊಂದು ಹೇಳಿರುತ್ತೇನೆ. ॥ ೪೩ ॥ ಸೀತೆಯನ್ನು ಬಿಡು ನನ್ನ ಮಾತನ್ನು ಮಾನ್ಯಮಾಡು ನೀನು ಲೋಕದಲ್ಲಿ ಕೀರ್ತಿಯನ್ನು ಗಳಿಸು ಇದಕ್ಕೆ ವಿರೋಧದ ಉತ್ತರವನ್ನು ಕೊಡದಿರು—ಎಂದು ವಿಭೀಷಣನು ರಾವಣನ ಪಾದಕ್ಕೆರಗಿ ಹೇಳಿದನು ॥ ೪೪ ॥ ವಿಭೀಷಣನು ಇವೇ ಮೊದಲಾದ

[1] ಳೆಂದೆಂಬ (ಚ) [2] ಪೇಳ್ದೊಡೆ (ಗ) ಪೇಳ್ವೊಡೆ (ಚ) [3] ದಶವದನ (ಗ ಚ) [4] × (ಗ ಚ) [5] ಕಥನಕೆ ಕೆಡಬೇಡೆಂದು ಬುದ್ಧಿಯ । ನೀ ಕಾರ್ಯವಾಗಿ (ಚ) [6] ಬುದ್ಧಿಗೂಡಿ (ಚ) [7] ದೆಂತೆಂಬ (ಗ) ದೆಂಬುದನು (ಚ). [8] ಲೋಕದಿ (ಗ). [9] ಗೊಡದಿರುಯೆನುತ (ಕ) ಗೊಡದಿರೆಂದೆನುತ (ಚ)

ಎಂದಿವು ಮೊದಲಾದ ನೀತಿವಚನಗಳ । ನಂದು ವಿಭೀಷಣ ಪೇಳೆ ॥
ಅಂದಾ ರಾವಣನಜ್ಞಾನಾಗ್ನಿಗೆ । ಸಂದಾಜ್ಯವಾಗಿ ತೋಱಿದುದು ॥ ೪೫ ॥

ಹಿಂದೆ[1] ರಾಮನ ಚರರನು ತಂದು ಕಾಣಿಸಿ । ಮುಂದುಗೆಡಿಸಿ ನುಡಿಯಿಸಿದೆ[2] ॥
ಇಂದೆನ್ನ ನೋಯ ನುಡಿದೆ[3] ಸಭೆಯೊಳು ನೀ । ನೆಂದವ ನೊಂದು ನುಡಿದನು ॥ ೪೬ ॥

ಹೊಯ್ದು ಗದ್ದುಗೆಯ ವಿಭೀಷಣ ನೃಪತಿಯ । ಕಾಯ್ದು ಬಾಯಿಗೆ ಬಂದಂತೆ ॥
ಬಯ್ದು ನುಡಿದು ಮುಂದುಗೆಡಿಸಿದ ನಂದೀ[4] । ರಯ್ದು ಮೊಗದ ನೃಪವರನು ॥ ೪೭ ॥

ಮೀಸೆ ಕುಣಿಯೆ ಪುರ್ವು[5]ಗಂಟಿಕ್ಕೆ ಕಂಗಳು । ಸೂಸೆ ಕಿಡಿಯ ವಪುವಿರದೆ ॥
ಕಾಸಿದ ಕಾರ್ಬೊನ್ನಂತಾಗಲವನಿಗೆ । ರೋಷ ಪುಟ್ಟಿತು ಮನದೊಳಗೆ ॥ ೪೮ ॥

ಒಡಹುಟ್ಟಿದವ[6]ನೆಂಬ ಗಬ್ಬಿಯಿಂದೀ [7]ಮಾತ । ನುಡಿದೆಯಲ್ಲದೆ ನಾಲಗೆಯ ॥
ಪೆಡತಲೆಯಲಿ ತೆಗಸುವೆನೆಂದು ಕೋಪದಿಂ । ನುಡಿದನು ರಾವಣನೃಪತಿ ॥ ೪೯ ॥

ಒಡಲೊಳು ಪುಟ್ಟಿದ ರುಜೆಯ ಕಳೆಯದಿರ[8] । ಲೊಡಲು ಕೆಡುವುದೆಂತಂತೆ ॥
ಪೊಡವಿಯಿಂದಿವನನು ಪೊಱಮಡಿಸದೊಡಾನು । ಕೆಡುವೆನೆಂದವನಾಡಿದನು ॥ ೫೦ ॥

ಆ ಕಡುಪಾಪಿ ತಾ ಕೆಡುವುದನಱಿಯದ । ನೇಕ ಕೋಪಾಟೋಪದಿಂದ ॥
ಏಕೋದರನೆಂದು ಬಗೆಯದೆ ತಮ್ಮನ ನಿ । ರಾಕರಿಸಿಯೆ ಪೊರಡಿಸಿದ ॥ ೫೧ ॥

ಮಾಡುವೆನೇನ ನಿನಗೆಯಾಜ್ಞೆಯ ನನ್ನ । ನಾಡೊಳಿರದೆ ಪೋಗೆಂದು ॥
ಆಡದ[9] ಮಾತಾಡಿ ಪೊಱಮಡಿಸಿದ ತನ್ನ । ಕೇಡ ವಿಚಾರಿಸದವನು ॥ ೫೨ ॥

---

ನೀತಿಯ ಮಾತುಗಳನ್ನು ಹೇಳಲು, ಈ ಮಾತುಗಳು ಆ ರಾವಣನ ಅಜ್ಞಾನವೆಂಬ ಬೆಂಕಿಗೆ ತುಪ್ಪವಾಗಿಯೇ ತೋರಿದವು. ॥ ೪೫ ॥ ಆಗ ರಾವಣನು—"ಎಲೈ ವಿಭೀಷಣನೇ, ಹಿಂದೆ ನೀನು ಆ ರಾಮನ ದೂತನನ್ನು ಇಲ್ಲಿಗೆ ಕರೆತಂದು, ಕಾಣಿಸಿ, ಮುಂದಾಲೋಚನೆಯಿಲ್ಲದೆ ಮಾತುಗಳನ್ನು ಆಡಿಸಿದೆ. ಇಂದು ನೀನು ಈ ಸಭೆಯಲ್ಲಿ ನನಗೆ ನೋವಾಗುವಂತೆ ಮಾತಾಡಿದೆ !" ಎಂದು ಬೇಸರಗೊಂಡು ಹೇಳಿದನು. ॥ ೪೬ ॥ ಆ ದಶಕಂಠನು ಸಿಟ್ಟಾಗಿ, ಪೀಠವನ್ನು ಗುದ್ದಿ, ವಿಭೀಷಣನನ್ನು ಬಾಯಿಗೆ ಬಂದಂತೆ ಕಠಿಣೋಕ್ತಿಗಳಿಂದ ಬೈದು, ಮುಂದಿನ ಕಾರ್ಯವನ್ನೇ ಕೆಡಿಸಿದನು. ॥ ೪೭ ॥ ಆ ರಾವಣನಿಗೆ ಸಿಟ್ಟು ಉಂಟಾಗಿ, ಮೀಸೆ ಕುಣಿಯಿತು; ಹುಬ್ಬುಗಳು ಗಂಟಿಕ್ಕಿದುವು; ಕಣ್ಣುಗಳು ಕಿಡಿಕಾರಿದವು. ಶರೀರವು ಕಾದ ಕಬ್ಬಿಣದಂತಾಯಿತು. ॥ ೪೮ ॥ "ಸಹೋದರನೆಂಬ ಗರ್ವದಿಂದ ನೀನು ಇಂತಹ ಮಾತುಗಳನ್ನು ಆಡುತ್ತಿರುವೆಯಲ್ಲವೆ? ನೀನು ನನ್ನ ಒಡಹುಟ್ಟಿಲ್ಲದೆ ಇರುತ್ತಿದ್ದರೆ ನಿನ್ನ ನಾಲಗೆಯನ್ನು ಹಿಂದಲೆಯ ಮೂಲಕ ಹೊರಗೆ ಎಳೆದು ತೆಗೆಸುತ್ತಿದ್ದೆ"—ಎಂದು ರಾವಣನು ಹೇಳಿದನು ॥ ೪೯ ॥ ಶರೀರದಲ್ಲೆ ಹುಟ್ಟಿದುದಾದರೂ ರೋಗವು ಕಾಣಿಸಿದಾಗ ಅದನ್ನು ನಿವಾರಿಸದಿದ್ದರೆ, ಶರೀರವೇ ಕೆಟ್ಟುಹೋಗುವುದು ಅದರಂತೆ ಇವನನ್ನು ಈ ನೆಲದಿಂದ ಓಡಿಸದಿದ್ದರೆ, ನಾನೇ ಕೆಟ್ಟುಹೋಗುವೆನು—ಎಂದು ರಾವಣನು ಹೇಳಿದನು. ॥ ೫೦ ॥ ಆ ಮಹಾಪಾಪಿ ರಾವಣನು ತಾನು ಕೆಡುವುದನ್ನು ತಿಳಿಯದೆ, ಹೆಚ್ಚಾದ ಸಿಟ್ಟಿನ ಆಡಂಬರದಿಂದ, ತನ್ನ ಒಡಹುಟ್ಟೆಂಬುದನ್ನು ಕೂಡ ಭಾವಿಸದೆ, ಅವನನ್ನು ನಿರಾಕರಿಸಿ ಹೊರಡಿಸಿದನು. ॥ ೫೧ ॥ ನಿನಗೆ ಏನೆಂದು ಆಜ್ಞೆಯನ್ನು

---

[1] ಇಂದು (ಕ). [2] ನಡಿಯಿಸಿದೆ (ಗ). [3] ನುಡಿವೆ (ಚ). [4] ಗೆಡಿಸಿದನಾನೀ (ಚ). [5] ಪುರ್ಬು (ಗ). [6] × (ಚ). [7] ಗರ್ವದಿಂದೀ (ಕ).
[8] ಕಡೆಯದಿರ (ಗ). [9] ಆಡಿದ (ಕ) ೫೧, ೫೨—ಇವು ಗ.ದಲ್ಲಿಲ್ಲ.

ಕೆಡೆನುಡಿದಣ್ಣನ ನುಡಿಗೆ ವಿಭೀಷಣ । ಕಡುನೊಂದು ಮನದೊಳಗವನ ॥
ಪೊಡವಿಯ[1] ಬಿಟ್ಟು ಬಂದನು ರಾಮಚಂದ್ರಮ । ನೆಡೆಗವನನು[2] ಕಾಣಲೆಂದು ॥ ೫೩ ॥

ತರುಣಿ ಕೇಳೀ ದುಶ್ಚರಿತನ ಸೀಮೆಯೊ । ಳಿರುತಿಪ್ಪುದಾಗದೆಂದವನು ॥
ಭರದಿಂದ ಬಂದನು ರಾಮಚಂದ್ರನ ಶ್ರೀ[3] । ಚರಣವ ಕಾಣಬೇಕೆಂದು[4] ॥ ೫೪ ॥

ಅಟ್ಟಿದನಿಬ್ಬರು ಖಚರರನಾಗಸ । ವಟ್ಟೆಯಿಂದವನವನೆಡೆಗೆ ॥
ಕೊಟ್ಟು ಕೈಗಾಣಿಕೆಯನು ಮುಂಡೆಗೆ ಕೈಯ । ನಿಟ್ಟು ಬಿನ್ನವಿಸಿದರಿಂತು[5] ॥ ೫೫ ॥

ನೀತಿಯಿಂದೊಡಬಡಿಸಿದ ನಿನ್ನ ನಡೆಗಿದು । ರೀತಿಯಲ್ಲೆಂದು ಪೇಳಿದನು ॥
ಮಾತ ಕೇಳದಿರೆ ಬಂದನು ಬಿಟ್ಟು ತನ್ನಗ್ರ । ಜಾತನನವ ನಿಮ್ಮೆಡೆಗೆ ॥ ೫೬ ॥

ಹೇಳಿದ ಹಲವು ಬುದ್ಧಿಯನೊಡಬಡಿಕೆಯಿಂ । ಹೇಳಿದ ನಾನಾ ಬಗೆಯಿಂ[6] ॥
ಹೇಳಿದ ಕೇಳದಿರಲು ರಾವಣನಿಗವ । ಹೇಳದೆ ಬಂದ ನಿಮ್ಮೆಡೆಗೆ ॥ ೫೭ ॥

ಗುಣಪಕ್ಷಕೆ ಸೋಲ್ವ ಪುರುಷಪಕ್ಷಕೆ ಸೋಲ್ತು । ಮಣಿವವನಲ್ಲವ ನಿಮ್ಮ ॥
ಗುಣಕಥನವ ಕೇಳಿ ಬಿಸುಟವನನು[7] ಮನ । ದಣಿಕೆಯಿಂ ಬಂದ ನಿಮ್ಮೆಡೆಗೆ ॥ ೫೮ ॥

ಅದ ಕೇಳಿ ದರಹಸಿತಾನನದಿಂ ಮಂದಿ । ಕುದುರೆ ಖೇಚರ ಪಡೆವೆರಸಿ ॥
ಇದಿರಾಗಿ ಹನುಮನ[8] ಕಳುಹಿದನವನಿಗೆ । ಮುದವತಿ ಜನಿಸುವಂದದಲಿ ॥ ೫೯ ॥

---

ಮಾಡಲಿ ! ನನ್ನ ರಾಜ್ಯದಲ್ಲೇ ನಿಲ್ಲದಿರು, ನಡೆ ! ಎಂದು ರಾವಣನು ಆಡಬಾರದ ಮಾತುಗಳನ್ನಾಡಿ, ತನಗೆ ಬರುವ ಕೇಡನ್ನು ಯೋಚಿಸದೆ ವಿಭೀಷಣನನ್ನು ಹೊರಡಿಸಿದನು ॥ ೫೨ ॥ ಹೀಗೆ ಕೆಡೆಮಾತಾಡಿದ ರಾವಣನ ಮಾತಿನಿಂದ ವಿಭೀಷಣನು ಬಹಳ ನೊಂದು, ಅವನ ರಾಜ್ಯವನ್ನೇ ಬಿಟ್ಟು, ಶ್ರೀರಾಮನನ್ನು ಕಾಣುವುದಕ್ಕಾಗಿ ಅವನಿರುವಲ್ಲಿಗೆ ಬಂದನು ॥ ೫೩ ॥ ಚೆಲುವೆಯೇ ಕೇಳು ಈ ದುಷ್ಟನ ಸೀಮೆಯಲ್ಲೇ ಇರಬಾರದೆಂದು ನಿಶ್ಚಯಿಸಿ, ವಿಭೀಷಣನು ಶ್ರೀರಾಮನ ಪಾದವನ್ನು ಕಾಣ-ಬೇಕೆಂದು ಬಂದನು ॥ ೫೪ ॥ ವಿಭೀಷಣನು ಮುಂಚಿತವಾಗಿ ಇಬ್ಬರು ಖೇಚರರನ್ನು ಆಕಾಶಮಾರ್ಗವಾಗಿ, ಶ್ರೀರಾಮನ ಬಳಿಗೆ ಕಳುಹಿದನು ಅವರು ಬಂದು, ಕಾಣಿಕೆ ಕೊಟ್ಟು ಕೈಮುಗಿದು ಹೀಗೆ ವಿಜ್ಞಾಪಿಸಿದರು ॥ ೫೫ ॥ ತಮ್ಮನಾದ ವಿಭೀಷಣನು ಅಣ್ಣನಾದ ರಾವಣನನ್ನು ನೀತಿಯಿಂದ ಒಡಂಬಡಿಸಲು ಪ್ರಯತ್ನಿಸಿದನು ನಿನ್ನ ನಡತೆಗೆ ಸೀತೆಯನ್ನು ಇಟ್ಟು ಕೊಂಡಿರುವುದು ಯೋಗ್ಯವಲ್ಲವೆಂದು ಹೇಳಿದನು ಆದರೆ ತನ್ನ ಮಾತನ್ನೇನೂ ರಾವಣನು ಕೇಳದಿರಲು, ಅವನನ್ನು ಬಿಟ್ಟು ನಿಮ್ಮ ಬಳಿಗೆ ಬಂದಿದ್ದಾನೆ ॥ ೫೬ ॥ ವಿಭೀಷಣನು ಹೇಳಿದ ಹಲವು ರೀತಿಯ ಸೂಚನೆಗಳನ್ನೂ, ಹಲವು ರೀತಿಯ ಒಡಂಬಡಿಕೆಯ ವಿಷಯಗಳನ್ನೂ ರಾವಣನು ಕೇಳದಿದ್ದುದರಿಂದ, ಕೊನೆಗೆ ಅವನಿಗೆ ಹೇಳದೆ, ನೀವಿರುವಲ್ಲಿಗೆ ಬಂದನು ॥ ೫೭ ॥ ವಿಭೀಷಣನು ಗುಣದ ಪಕ್ಷಕ್ಕೆ ಸೋಲತಕ್ಕವನಲ್ಲದೆ, ಪೌರುಷವುಳ್ಳವನ ಪಕ್ಷಕ್ಕೆ ತಲೆಬಾಗುವವನಲ್ಲ ಅವನು ನಿಮ್ಮ ಸದ್ಗುಣಗಳ ವಿವರವನ್ನು ಕೇಳಿ, ರಾವಣನನ್ನು ಬಿಟ್ಟು ನಿಮ್ಮಲ್ಲಿಗೆ ಬಂದಿರುತ್ತಾನ ಎಂದರು ॥ ೫೮ ॥ ವಿಭೀಷಣನ ದೂತರು ಹೇಳಿದುದನ್ನು ಕೇಳಿ, ಶ್ರೀರಾಮನು ಮುಗುಳುನಕ್ಕು, ಮಂದಿ-ಕುದುರೆ-ಖೇಚರಸೈನ್ಯಸಹಿತವಾಗಿ ಅಣುವನನ್ನು ವಿಭೀಷಣ ನನ್ನು ಎದುರುಗೊಳ್ಳಲು ಕಳುಹಿಸಿದನು ॥ ೫೯ ॥ ಅಣುವನು ಸ್ವಲ್ಪದೂರಕ್ಕೆ ಹೋಗಿ, ವಿಭೀಷಣನನ್ನು ಕಂಡನು ಅವನಿಗೆ

---

[1] ಪೊಡವಿಯಿಂ (ಚ) [2] ಚಂದ್ರನ ಯೆಡೆಗವನನು (ಕ) [3] ಸಿರಿ (ಕ, ಗ) [4] ಕಾಣುವೆನೆಂದು (ಗ ಚ) [5] ಮನ್ನಿಸಿದರಿಂತೆಂದು (ಚ). [6] ಬಗೆಯ (ಗ) [7] ಕೇಳಿ ಕೇಳಿ ಬಿಸುಟು (ಗ ಚ) [8] ಯಣುವನ (ಗ ಚ) ೫೭ನೆಯ ಪದ್ಯ ಕ ದಲ್ಲಿಲ್ಲ

ಕೆಲವು ದೂರಕೆ ಪೋಗಿ ಕಂಡು ವಿಭೀಷಣ । ನಲಿವಂತೆ ನುಡಿದು ಮಾತುಗಳ ॥
ಬಲವೆರಡೊಡಗೂಡಿ ಬಂದನಣುವನತಿ । ನಲಿವುತ ರಾಘವನೆಡೆಗೆ ॥ ೬೦ ॥

ಅಡಿಗೆಱಗಿದ ವಿಭೀಷಣನ[1] ರಾಘವ ಕೈ । ವಿಡಿದಾಲಿಂಗನ ಗೈದು ॥
ಒಡನೆ ಕುಳ್ಳಿರಿಸಿಕೊಂಡರ್ಧಾಸನಗೊಟ್ಟು । ನುಡಿದನು ವಿನಯವನಿಂತು ॥ ೬೧ ॥

ಮಱೆಯದೆ ನಮ್ಮ ಮೇಲಣ ಪಕ್ಷಪಾತವ । ತೊಱೆದು ನೀ ನಿನ್ನಗ್ರಜನ ॥
ನೆಱೆ ನಂಬಿ ಬಂದೆ ನಮಗೆ[2] ನಿನ್ನಿಂದಿ । ನ್ನುಱುವವರಾರೆಂದನವನು ॥ ೬೨ ॥

ಕೆಟ್ಟು ನಡೆವ ಕೇಡಾಳಿಯ ಸೀಮೆಯ । ಬಿಟ್ಟು ಬಂದುದುವೊಳ್ಳಿತಾಯ್ತು ॥
ಕಟ್ಟುವೆ ಲಂಕೆಯ ಪಟ್ಟವ ನಿನಗೆಂದು । ತುಟ್ಟ ನುಡಿದ ಮನಮುಟ್ಟ ॥ ೬೩ ॥

ದೇವ ಚಿತ್ತೈಸು ನಿಮ್ಮಯ ಗುಣಕಥನವ । ನಾವಾವರಿಂ[3] ಕೇಳಿಕೇಳಿ ॥
ಭಾವ ನಿಮ್ಮಲ್ಲಿ ನಿಶ್ಚಯವಾಗಿಹುದೆಂ । ದಾ ವಿಭೀಷಣನಾಡಿದನು[4] ॥ ೬೪ ॥

ಬಂದಂದು ಕಂಡ ವಿಭೀಷಣನಿಗೆಯಾ । ನಂದ ಮನಕೆ ಪುಟ್ಟುವಂತೆ ॥
ಅಂದುಡುಗೊಱೆಯಿತ್ತು ಸನ್ಮಾನಾದಿಗ । ಳಿಂದುಪಚರಿಸಿ ಕೂಡಿರಲು ॥ ೬೫ ॥

ಜನನಾಥಗೆಂದ ಮಾರುತಿ ಲಂಕೆಗೆ ಪೋಗಿ[5] । ವನವ ಕಿತ್ತೀಡಾಡಿ ಪುರಕೆ ॥
ತನಿಗಿಚ್ಚನಿಕ್ಕಿ[6] ರಾವಣನೃಪತಿಯ ಮನ । ದನು[6]ವನಱಿದು ಬಪ್ಪೆನೆಂದು ॥ ೬೬ ॥

ನುಡಿದ ನುಡಿಯ ಕೇಳಿ ರಘುನಾಥ ಹನುಮನ । ನೊಡಬಟ್ಟು ಕಳುಪಲು[7] ಬಂದು ॥
ಬಿಡದೆ ಮರ್ಕಟವಿದ್ಯೆಗಳಿಂದೆ ವಾನರ । ಪಡೆಗೂಡಿ ನಡೆತಂದು ಬಳಿಕ ॥ ೬೭ ॥

---

ಸಂತೋಷವಾಗುವಂತೆ ಮಾತುಗಳನ್ನಾಡಿ, ಎರಡೂ ಸೇನೆಗಳನ್ನು ಕೂಡಿಕೊಂಡು, ಬಹಳ ಸಂತೋಷಪಡುತ್ತ, ಶ್ರೀರಾಮನ ಬಳಿಗೆ ಬಂದನು ॥ ೬೦ ॥ ವಿಭೀಷಣನು ಶ್ರೀರಾಮನ ಪಾದಕ್ಕೆ ನಮಸ್ಕರಿಸಿದನು. ಆಗ ಶ್ರೀರಾಮನು ಅವನ ಕೈಹಿಡಿದು ಅಪ್ಪಿ, ತನ್ನ ಅರ್ಧಾಸನವನ್ನಿತ್ತು ಕುಳಿತುಕೊಳ್ಳಿಸಿ, ವಿನಯೋಕ್ತಿಗಳನ್ನು ಹೀಗೆ ಆಡಿದನು. ॥ ೬೧ ॥ "ನಮ್ಮ ಮೇಲಿನ ವಾತ್ಸಲ್ಯವನ್ನು ಮರೆಯದೆ. ನಿನ್ನ ಅಣ್ಣನನ್ನು ತೊರೆದು. ವಿಶ್ವಾಸವಿಟ್ಟು ಬಂದಿರುತ್ತಿ ನಮಗೆ ನಿನ್ನಿಂದ ಶ್ರೇಷ್ಠರಾದವರು ಯಾರಿರುವರು? ॥ ೬೨ ॥ ಕೆಟ್ಟರೀತಿಯಲ್ಲಿ ವರ್ತಿಸುವ ಆ ಕೇಡಾಳಿ ರಾವಣನ ರಾಜ್ಯವನ್ನೇ ನೀನು ತೊರೆದು ಬಂದುದು ಒಳ್ಳೆಯದಾಯಿತು. ನಿನಗೆ ನಾನು ಲಂಕೆಯ ಪಟ್ಟವನ್ನು ಕಟ್ಟುವೆನು" ಎಂದು ಶ್ರೀರಾಮನು ನಿರ್ದಿಷ್ಟವಾಗಿ, ಮನಮುಟ್ಟು-ವಂತೆ ಹೇಳಿದನು. ॥ ೬೩ ॥ ಆಗ ವಿಭೀಷಣನು—"ದೇವನೇ, ಚಿತ್ತೈಸಿರಿ ನಾನು ಯಾರು ಯಾರಿಂದಲೆಲ್ಲ ನಿಮ್ಮ ಗುಣದ ಕಥೆಗಳನ್ನು ಕೇಳಿದ್ದೇನೆ ಇದರಿಂದ ನನ್ನ ಮನಸ್ಸು ನಿಮ್ಮಲ್ಲಿ ದೃಢವಾಗಿದೆ" ಎಂದು ಹೇಳಿದನು ॥ ೬೪ ॥ ಹೀಗೆ ತನ್ನನ್ನು ಬಂದು ಕಂಡ ವಿಭೀಷಣನಿಗೆ ಮನಸ್ಸಿಗೆ ಸಂತೋಷವಾಗುವ ರೀತಿಯಲ್ಲಿ. ಶ್ರೀರಾಮನು ಉಡುಗೊರೆಗಳನ್ನು ಕೊಟ್ಟು ಸಮ್ಮಾನಿಸಿ, ಉಪಚಾರಮಾಡಿ ಜತೆಗೂಡಿದ್ದನು. ॥ ೬೫ ॥ ಹೀಗಿರಲು ಹನುಮಂತನು ಶ್ರೀರಾಮನೊಡನೆ ಹೀಗೆಂದನು— "ನಾನು ಇನ್ನೊಮ್ಮೆ ಲಂಕೆಗೆ ಹೋಗಿ, ರಾವಣನ ಉದ್ಯಾನವನ್ನು ಮುರಿದು ಚೆಲ್ಲಿ, ಪಟ್ಟಣಕ್ಕೆ ಬೆಂಕಿಹಚ್ಚಿ, ಆ ರಾವಣನ ಮನಃಸ್ಥಿತಿಯನ್ನು ತಿಳಿದು ಬರುವೆನು". ॥ ೬೬ ॥ ಹೀಗೆ ಹೇಳಿದ ಮಾತುಗಳನ್ನು ಶ್ರೀರಾಮನು ಕೇಳಿ, ಅದಕ್ಕೆ ಒಪ್ಪಿ ಕಳುಹಿಸಿ

---

[1] ವಿಭೀಷಣಗಾ (ಗ) [2] ನಮಗೆ (ಕ). [3] ನಾವವರಿಂ (ಚ). [4] ವಿಭುವಾಡಿದನಿರದೆ (ಕೆ). [5] ಲಂಕೆಗೆ ಪೋಗಿಯಲ್ಲಿಯ (ಕ). [6] ಕಾಣಿಸಿ ಕೊಂಬ ರಾವಣನನು (ಗ ಚ.) [7] ಕಳುಹಲು (ಗ)

ಕಪಿಕಟಕವ ಕೂಡಿಕೊಂಡಾ ಪೊೞಲಿನ । ಉಪವನವನು ಪೊಕ್ಕು ಬಳಿಕ ॥
ಕುಪಿತಮಾನಸನಾಗಿ ಕಿೞ್ತನು ತರುಗಳ । ಕಪಿರಾಜ ಕಮಲದಳಾಕ್ಷಿ ॥ ೬೮ ॥

ಮುಱಿವ ನೇಱಿಲು ಮಾವು ಮಾದಲ ಪಲಸನು । ಮುಱಿವ ಬಾವನ್ನ ಬಕುಳವ ॥
ಮುಱಿವ ಸಂಪಗೆ ಪಾದರಿ ಪಾರಿಜಾತವ । ಮುಱಿದು ಕೆಡಿಸಿದನಾ ವನವ ॥ ೬೯ ॥

ಕಿತ್ತು ಬಿಡುವ ನೀಲಿಬಾಳೆ[1] ನಿಂಬೆಗಳನು । ಕಿತ್ತು ಬಿಡುವ ಪೂಗತರುವ ॥
ಕಿತ್ತು ಬಿಡುವ ತೆಂಗು ಮೊದಲಾದ ತರುಗಳ[2] । ಕಿತ್ತುತಳಲು[3] ಮಾಡಿದನು ॥ ೭೦ ॥

ಒಂದು ಮರನ ಕಿತ್ತೊಂದು ಮರನನಿ । ಟ್ಟೊಂದು ಮರಕೆ ಲಂಘಿಸುತ ॥
ನಂದನವನು ಕೆಡಿಪುದ ಕಂಡು ವನಪಾಲ । ರಂದು ಹೋರಿದರವನೊಡನೆ ॥ ೭೧ ॥

ಇಡುವನು ತರುವಿಂದ ವನಪಾಲಕರ ಕಟ್ಟಿ । ಬಡಿವನು ಸಾಯದೆ ಕೊಂದು ॥
ಬಿಡುವ ನಿನ್ನೊಡೆಯ[4] ಗಱುಪಿ ನೀ ಬಾರೆಂದು । ನುಡಿದ ಮಾರುತಿಯುಂದಬಲೆ ॥ ೭೨ ॥

ಮೊಱೆಯಿಟ್ಟು ಸುಯ್ಯಲಿಡುತಲಾ ಪೊೞಲಿನ । ತಳವಾಳಗಱುಪೆ ಕೇಳ್ದವನು ॥
ಅಱಿದು ರಾಕ್ಷಸವಿದ್ಯೆಗಳ ಕೈಕೊಂಡಂದು । ತೞುಬಿತು ಪಡೆ ಬಂದು ವನಕೆ[5] ॥ ೭೩ ॥

ಕಡಿದಾಡಿತು ಕಪಿಕಟಕದೊಳ್ ರಕ್ಕಸ । ಪಡೆ ಕೋಪದೊಳು ಮಾರುತಿಯು ॥
ಎಡೆಗೆ ಬಂದರು ಕಾಳಗವನಂದೊಯ್ಯನೆ । ಪಿಡಿದರು ಪಿಡಿನಡುವಿನಳೆ ॥ ೭೪ ॥

---

ಕೊಟ್ಟನು ಹನುಮಂತನು ಕಪಿ ವಿದ್ಯೆಗಳಿಂದ ಕೋತಿಗಳ ಪಡೆಯನ್ನು ಕೂಡಿಕೊಂಡು ಲಂಕೆಗೆ ಬಂದನು ॥ ೬೭ ॥ ಎಲೈ ಚೇಳಿನಿಯೇ, ಬಳಿಕ ಅಣುವನು ಕಪಿಸೈನ್ಯದೊಡನೆ ಲಂಕಾನಗರದ ಉದ್ಯಾನವನ್ನು ಹೊಕ್ಕು, ಸಿಟ್ಟಿನಿಂದ ಮರಗಳನ್ನೆಲ್ಲ ಕಿತ್ತನು. ॥ ೬೮ ॥ ಆ ಉದ್ಯಾನದಲ್ಲಿರುವ ನೇರಿಳೆ, ಮಾದಳೆ, ಮಾವು, ಹಲಸು, ಶ್ರೀಗಂಧ, ಬಕುಳ (ರೆಂಜೆ), ಸಂಪಗೆ, ಪಾದರಿ, ಪಾರಿಜಾತ—ಮುಂತಾದ ಮರಗಳನ್ನು ಮುರಿದು, ವನವನ್ನೇ ಕೆಡಿಸಿದನು ॥ ೬೯ ॥ ಅಣುವನು ನೀಲಿಬಾಳೆ (ಕರಿಬಾಳೆ), ನಿಂಬೆ ಅಡಕೆಮರ, ತೆಂಗಿನ ಮರ,—ಮುಂತಾದವುಗಳನ್ನೆಲ್ಲ ಮುರಿದು, ಕಳವಳವನ್ನು ಉಂಟುಮಾಡಿದನು ॥ ೭೦ ॥ ಹನುಮಂತನು ಒಂದು ಮರವನ್ನು ಕಿತ್ತು, ಇನ್ನೊಂದು ಮರವನ್ನು ಹೊಡೆದು, ಮತ್ತೊಂದು ಮರಕ್ಕೆ ಹಾರುತ್ತ, ಆ ಉದ್ಯಾನ ವನ್ನು ಕೆಡಹುತ್ತಿರುವುದನ್ನು ನೋಡಿ, ವನಪಾಲಕರು ಅವನೊಡನೆ ಕಾದಾಡಿದರು ॥ ೭೧ ॥ ಎಲೈ ಚೇಳಿನಿಯೇ, ಹನುಮಂತನು ಆ ವನಪಾಲಕರನ್ನು ಮರದಿಂದಲೇ ಬಡಿದನು ಕೆಲವರನ್ನು ಕಟ್ಟಿಹಾಕಿ ಹೊಡೆದನು ಸಾಯದಿದ್ದವರನ್ನು ಕೊಂದೇಬಿಟ್ಟನು ಕೆಲವರೊಡನೆ “ನಿನ್ನ ಒಡೆಯನಿಗೆ ತಿಳಿಸಿ ಬಾ ' ಎಂದು ಹೇಳಿದನು ॥ ೭೨ ॥ ವನಪಾಲಕರು ಮೊರೆ-ಯಿಡುತ್ತ. ಬಿಸುಸುಯ್ಯುತ್ತ, ಪಟ್ಟಣದ ಕಾವಲಿನ ಅಧಿಕಾರಿಗೆ ಈ ಸಂಗತಿಯನ್ನು ತಿಳಿಸಿದರು ಅವನು ಇದನ್ನು ಕೇಳಿದೊಡನೆ, ಅವನ ಆಜ್ಞೆಯಂತೆ ರಾಕ್ಷಸವಿದ್ಯೆಗಳುಳ್ಳ ಸೈನ್ಯವು ವನಕ್ಕೆ ಬಂದು ಕವಿಯಿತು ॥ ೭೩ ॥ ಎಲೈ ಚೇಳಿನಿಯೇ, ಆ ರಾಕ್ಷಸ ಸೇನೆಯು ಕಪಿಸೈನ್ಯದೊಡನೆ ಕಾದಾಡಿತು ಹಲವರು ಹನುಮಂತನಿಗೆ ಎದುರುನಿಂತು ಕೋಪದಿಂದ ಹೋರಾಡತೊಡಗಿದರು ॥ ೭೪ ॥ ಹನುಮಂತನು ತನ್ನ ಮೇಲೆ ಪ್ರಯೋಗಿಸುವ ಬಾಣಗಳನ್ನು ತುಂಡೆಸಗುತ್ತಿದ್ದನು ಕಡಿಯುವ ಖಡ್ಗವನ್ನೇ

---

[1] ನಿಳಿವಾಳೆ (ಗ) ನಿಳಿಬಾಳೆ (ಚ) [2] ವನವನು (ಗ. ಚ) [3] ಕಿತ್ತುಗಳೀನ (ಕ) ಕಿತ್ತುಗಳನ (ಚ). [4] ನಿಮ್ಮೊಡೆಯ (ಚ) [5] ಪಡೆ ಬಂದವನ (ಗ)

ಇಡುವ ನಾರಾಚವ ಮುಱಿವನೊತ್ತಿಗೆ ಸೇರಿ । ಕಡಿವ ಖಡ್ಗವ[1] ಖಂಡಿಸುವ ॥
ಬಡಿವ ಕೊಂತವ ಬಗ್ಗಿಸುತ[2] ಮಾರುತಿ ಮೆದೆ । ಗೆಡಹಿದ ರಕ್ಕಸವಡೆಯ ॥ ೭೫ ॥

ತಱಿದನರೆಬರ ತರುಗಳನಂದೊಯ್ಯನೆ[3] । ಮುಱಿದು ಬಡಿದನರೆಬರನು[4] ॥
ಮೊಱೆಯಿಡಿಸಿದನರೆಬರ ರಕ್ಕಸಪಡೆ[5] । ಮುಱಿದೋಡಿ ಪೊಕ್ಕಿತಾ ಪೊಳಲ ॥ ೭೬ ॥

ತಱಿಸಂದು ಮಾರುತಿಯಗ್ನಿ ಬಾಣಗಳಿಂದ । ಹೊಱಹೊಳಲಿಗೆ[6] ಕಿಚ್ಚನಿಕ್ಕಿ ॥
ನೆಱೆ ಸುಟ್ಟುರುಹಿದನವನ ಸಾಹಸಿಕೆಯ । ತೆಱನ ನಾನೇನ ಬಣ್ಣಿಪೆನು ॥ ೭೭ ॥

ಅದೆ ಕಿಚ್ಚೆದ್ದಿತು ಕೆಡಿಸಿಯೆಂಬರು ಮ । ತ್ತದೆ ಭುಗಿಲೆಂದುರಿವುತಿದೆ[7] ॥
ಅದೆ ಹೊಗೆಯೇಳುತಲಿದೆ[8] ಹೊತ್ತುತಿದೆ[9] ಬೇವು । ತಿದೆ[10]ಯೆಂದು ಜನರು ಕೂಗುವರು ॥ ೭೮ ॥

ಒಂದೆಡೆ ಭುಗಿಲೆಂಬುದು ಛಿಟಛಿಟಿ[11]ಲೆಂ । ದೊಂದೆಡೆ ಧ್ವನಿ[12]ಮಾಡುವುದು ॥
ಒಂದೆಡೆ ನಿಂದುರಿವುತ ಕಿಚ್ಚೊಯ್ಯನೆ । ಅಂದು ಕಂಗೆಡಿಸಿತು ಜನರ ॥ ೭೯ ॥

ಕೆಟ್ಟೆವಿನ್ನೇಕೆ ಮಾಯದ ಕೋಡಗವ ತಂದು । ಬಿಟ್ಟವರಾರೀ ಯೆಡೆಗೆ[13] ॥
ಪಟ್ಟಣವುಳಿಯದೆನುತ ಪೌರರು ಮರ । ವಟ್ಟರ್ದರೇನ ಬಣ್ಣಿಪೆನು ॥ ೮೦ ॥

ನೆಗೆವುದು ಮುಗಿಲುದ್ದಕೆ ನಿಂದು[14] ದೇಹವ । ತೆಗೆವುದು ಕಪಿ ಕಿಱಿದಾಗಿ ॥
ಯೆಗುವೆ ಯೆಗುವೆಯೆಂಬರು[15] ಕಂಡ ಪೆಣ್ಗಳು । ಬೆಗಡುಗೊಂಡಿಹರೆದೆಯೊಳಗೆ ॥ ೮೧ ॥

---

ಖಂಡಿಸುತ್ತಿದ್ದನು. ಬಡಿಯುವ ಈಟಿಯನ್ನು ಬಗ್ಗಿಸುತ್ತ, ರಾಕ್ಷಸರನ್ನು ರಾಶಿರಾಶಿಯಾಗಿ ಕೆಡೆಬೀಳಿಸಿದನು. ॥ ೭೫ ॥ ಅಣುವನು ಆ ರಕ್ಕಸರಲ್ಲಿ ಕೆಲವರನ್ನು ತುಂಡರಿಸಿದನು. ಕೆಲವರನ್ನು ಮುರಿದ ಮರಗಳಿಂದ ಬಡಿದನು. ಕೆಲವರನ್ನು ನೊಂದು ಮೊರೆಯಿಡುವಂತೆ ಮಾಡಿಸಿದನು. ಆಗ ರಾಕ್ಷಸಸೇನೆ ಹಿಂದಿರುಗಿ ಓಡಿ, ಪಟ್ಟಣವನ್ನು ಪ್ರವೇಶಿಸಿತು. ॥ ೭೬ ॥ ಆ ಮೇಲೆ ಹನುಮಂತನು ನಿರ್ಣಯಮಾಡಿಕೊಂಡು, ಅಗ್ನಿಬಾಣಗಳಿಂದ ಹೊರಪಟ್ಟಣಕ್ಕೆ ಬೆಂಕಿಗೊಟ್ಟು, ಸುಟ್ಟು ಬೂದಿಮಾಡಿದನು. ಆ ಅಣುವನ ಸಾಹಸವನ್ನು ನಾನು ಏನೆಂದು ವರ್ಣಿಸಲಿ! ॥ ೭೭ ॥ ಆಗ ಪಟ್ಟಣದ ಜನರು "ಅದೋ ಬೆಂಕಿಯೆದ್ದಿದೆ! ನೊಂದಿಸಿ. ಅದೋ ಭಗಭಗನೆ ಹೊತ್ತುತ್ತಿದೆ! ಅದೋ ಹೊಗೆಯೇಳುತ್ತಿದೆ, ಉರಿಯುತ್ತಿದೆ, ಬೇಯುತ್ತಿದೆ" ಎಂದು ಕೂಗುತ್ತಿದ್ದರು. ॥ ೭೮ ॥ ಆ ಬೆಂಕಿಯು ಒಂದೊಂದು ಕಡೆ ಭುಗಿಲೆಂದು ಉರಿಯುವುದು. ಒಂದುಕಡೆ ಛಿಟಿಛಿಟಿಲೆಂದು ಶಬ್ದ ಮಾಡುವುದು. ಒಂದುಕಡೆ ಒಂದೇಸಮನೆ ಉರಿಯುತ್ತ ಜನರನ್ನು ಕಂಗೆಡಿಸಿ ಬಿಟ್ಟಿತು. ॥ ೭೯ ॥ ಅಯ್ಯೋ ಕೆಟ್ಟೆವು! ಈ ಕಪಟದ ಕಪಿಯನ್ನು ಇಲ್ಲಿಗೆ ತಂದುಬಿಟ್ಟವರು ಯಾರು? ಈ ಪಟ್ಟಣ ಉಳಿಯುವಂತಿಲ್ಲ! ಎನ್ನುತ್ತ ಆ ಪಟ್ಟಣಿಗರು ನಿಶ್ಚೇಷ್ಟಿತರಂತಾದುದನ್ನು ಏನೆಂದು ವರ್ಣಿಸಲಿ! ॥ ೮೦ ॥ ಕಪಿಯು ಆಕಾಶದ ಎತ್ತರಕ್ಕೆ ಒಮ್ಮೆ ನೆಗೆಯುವುದು, ಇನ್ನೊಮ್ಮೆ ಚಿಕ್ಕದಾಗಿ ಕಾಣಿಸುವುದು. ಏನು ಮಾಡಲಿ! ಏನು ಮಾಡಲಿ! ಎಂದು ಜನರು ಆಡಿಕೊಳ್ಳುತ್ತಿದ್ದರು. ನೋಡಿದ ಹೆಂಗುಸರು ಬಹಳ ಭೀತರಾಗುತ್ತಿದ್ದರು. ॥ ೮೧ ॥ ಇದು ಮಾಯೆಯ ಕಪಿ! ಇದು ರಾಕ್ಷಸರನ್ನೆಲ್ಲ ನೋಯಿಸಿತು! ರಾಜನಿರು

---

[1] ಖಂಡೆಯುವ (ಗ) ಖಂಡವೆ (ಚ) [2] ಬಗ್ಗಿಸಿ (ಗ. ಚ.). [3] ತರುಗಳಿಂದೊಯ್ಯನೆ (ಗ). [4] ಬಡಿವನರೆಬರನು (ಚ). [5] ದೊರೆಗೆಡಿಸಿದನ-. ರೆಬರನಾ ಕ್ಷಣದೊಳು (ಕ) [6] ಪೊಳಲಿಗೆ (ಚ). [7] ದುರಿವುತದೆ (ಚ). [8] ಯೇಳುತಲದೆ (ಚ). [9] ಹೊತ್ತುತದೆ (ಚ) [10] ಬೇವುತದೆ (ಚ) [11] ಚಿಟಿ ಚಿಟಿ (ಗ. ಚ.) [12] ದನಿ (ಗ. ಚ) [13] ರಾರೀಯಡೆಯ (ಕ. ಚ.). [14] ನಿಜ (ಗ. ಚ). [15] ಯೆಗುವೆನೆಂಬರು (ಚ).

ಮಾಯದ ಕಪಿಯಲ್ಲದೆ ರಕ್ಕಸರನು । ನೋಯ ನೋಯಿಸಿತೀ[1] ಪೊಳಲ ॥
ರಾಯನಿರ್ದಂತೆ ಕಿಚ್ಚಿಕ್ಕಿ ನಂದನವನ । ನಾಯಕವನು ಮಾಡಿದುದು[2] ॥ ೮೨ ॥

ಏಡಿಸುವುದು ಪಲ್ಗಿರಿವುದು ನೋಳ್ಪರ । ಓಡಿಸುವುದು ಬೆದಱಿಪುದು ॥
ಱೋಡಾಡಿಪುದು ಕೋಡಗ ನೆರೆದವರಿಗೆ । ಮಾಡುವುದತಿ ಕೌತುಕವ ॥ ೮೩ ॥

ಕಿಚ್ಚನಿಕ್ಕು[3]ವದೊಂದೆಡೆ ಕೊಳ್ಳಿಯ ತಂದು । ಚುಚ್ಚಿ ಉಪ್ಪೆಂದುರುಹುವುದು[3] ॥
ಹೆಚ್ಚಿಯಾಡುತ ಹರಿದಾಡುತಲದು ಜನ । ಕಚ್ಚರಿಯನು ಪುಟ್ಟಿಪುದು ॥ ೮೪ ॥

ಕುಣಿಕುಣಿದಾಡುತ ಪಲ್ಗಿರಿವುತ ರಣಿ । ರಣಿಲನೆ ಹುಬ್ಬ ಹಾಱಿಸುತ ॥
ಮಿಣಿಮಿಣಿಲನೆ ನೋಡುತ[4] ತನ್ನ[5] ನಿಜಮನ । ದಣಿವಂತೆ ಜನರನಂಜಿಸಿತು ॥ ೮೫ ॥

ಚಯ್ಯವಾಡುವು[6] ದೇಡಿಪುದು ಕಿಱಿಕಿಱ್ರೆಂದು । ಮೆಯ್ಯ ನಿಗುರಿಯಾಗುಳಿಪುದು ॥
ಒಯ್ಯನೆ ತಲೆದೂಗುವುದು ಕಪಿಯ ಬಲು । ಗಯ್ಯತನವ ಪೇಳ್ವರಾರು ॥ ೮೬ ॥

ಬೆರಲ ಮೂಗಿನೊಳಿಟ್ಟು ಕೈಯ ಗಲ್ಲದೊಳಿಕ್ಕಿ[7] । ಸಿರವನೊಲೆದು ನಕ್ಕಿಱಿವುತ[8] ॥
ನೆರೆದು ನಿಟ್ಟಿಸಿತು ಪೆಣ್ಗಳ ತಂಡವಲ್ಲಲ್ಲಿ । ಪಿರಿದು ಗುಡ್ಡೆಣಿಯಿಸಿತಬಲೆ[9] ॥ ೮೭ ॥

ಕೆಟ್ಟೆವು ಕೆಟ್ಟೆವು ಕೆಟ್ಟೆವೆನುತ ಕೈಯ । ನೆಟ್ಟಯ[10] ನೆಗ್ಗಿ ಹಮ್ಮೈಸಿ ॥
ನಿಟ್ಟಿಸಲಗಿದೆರ್ದೆವೊಯ್ದುಕೊಳ್ಳುತ ಭಯ । ವಟ್ಟು ಪೆಣ್ಗಳು ಪಲುಬುವರು[11] ॥ ೮೮ ॥

ಹೆಣ್ಣೆ ನೀ ನೋಡು ತಾ ನೋಡು ಕಪಿಯ ಮೆಯ್ಯ । ಬಣ್ಣವನಿದಱಾಟವನು ॥
ಕಣ್ಣಲಿ ನೋಡತೀರದು[12] ಪೊಳಲನು ಮಸಿ । ವಣ್ಣವ ಮಾಡಿತೀ[13] ಪಾಪಿ ॥ ೮೯ ॥

---

ವಂತೆಯೇ ಈ ಪಟ್ಟಣವನ್ನು ಇದು ಸುಟ್ಟಿತು ! ಉದ್ಯಾನವನ್ನು ಅನಾಯಕವಾಗಿ ಮಾಡಿತು !—ಎಂದು ಹೇಳಿಕೊಂಡರು ॥ ೮೨ ॥ ಕಪಿಯು ಮುಖವಿಕಾರದಿಂದ ಹೀನ್ಯೈಸಿತು, ಹಲ್ಲು ಕಿರಿಯಿತು ನೋಡುವವರನ್ನು ಬೆನ್ನಟ್ಟಿತು ಹೆದರಿಸಿತು, ಅಪಹಾಸ್ಯಮಾಡಿತು ಅಲ್ಲಿ ನೋಡುವವರಿಗೆ ಆಶ್ಚರ್ಯವನ್ನುಂಟುಮಾಡಿತು ॥ ೮೩ ॥ ಆ ಕಪಿಯು ಒಂದುಕಡೆ ಬೆಂಕಿಯನ್ನು ಹಚ್ಚುವುದು, ಕೊಳ್ಳಿಯನ್ನು ಉಪ್ಪೆಂದು ಊದಿ ಉರಿಸುವುದು ಸ್ಫೂರ್ತಿಗೊಂಡು ಅತ್ತಿತ್ತ ಸಂಚರಿಸಿ ಜನರಿಗೆ ಆಶ್ಚರ್ಯವುಂಟು ಮಾಡುವಂತೆ ಇತ್ತು ॥ ೮೪ ॥ ಕುಣಿದಾಡುತ್ತಲೂ ಹಲ್ಲುಗಿರಿವುತ್ತಲೂ ರಣರಣನ ಹುಬ್ಬನ್ನು ಹಾರಿಸುತ್ತಲೂ, ಮಿಣ ಮಿಣನೆ ನೋಡುತ್ತಲೂ ತನ್ನ ಮನಸ್ಸಿಗೆ ತೃಪ್ತಿಯಾಗುವ ರೀತಿಯಲ್ಲಿ ಜನರನ್ನು ಭಯಗೊಳಿಸಿತು ॥ ೮೫ ॥ ಚೆಲ್ಲಾಟ ವಾಡುತ್ತ, ಮುಖವಿಕಾರಮಾಡುತ್ತ, ಕಿರ್ರೆಂದು ಕಿರಿಚುತ್ತ, ದೇಹವನ್ನು ನೆಟ್ಟಗೆ ಮಾಡಿ ಆಕಳಿಸುತ್ತ, ಮೆಲ್ಲನೆ ತಲೆಯನ್ನು ಅಲ್ಲಾಡಿಸುತ್ತ ಇದ್ದ ಆ ಕಪಿಯ ಶೌರ್ಯಾತಿಶಯವನ್ನು ಹೇಳಬಲ್ಲವರು ಯಾರು? ॥ ೮೬ ॥ ಎಲೈ ಚೇಳಿನಿಯೇ, ಅಲ್ಲಲ್ಲಿ ಇದ್ದ ಹೆಂಗುಸರ ಸಮೂಹವು ಬೆರಲನ್ನು ಮೂಗಿನಲ್ಲಿಟ್ಟು, ಕೈಯನ್ನು ಗಲ್ಲದಲ್ಲಿಟ್ಟು, ತಲೆಯನ್ನು ಅಲ್ಲಾಡಿಸಿ, ನಗಾಡುತ್ತ ನಿಂತು ನೋಡಿ, ಚಿಕ್ಕಮಕ್ಕಳಂತೆ ವರ್ತಿಸಿತು ॥ ೮೭ ॥ ಕೆಲವರು ಹೆಂಗುಸರು 'ಕೆಟ್ಟೆವು' ಎನ್ನುತ್ತ, ಕೈಯ ನೆಟ್ಟಿತೆಗೆಯುತ್ತ, ಎಚ್ಚರ ತಪ್ಪುತ್ತ, ನೋಡುವುದಕ್ಕೆ ಹೆದರಿ, ಎದೆಗೆ ಹೊಡೆದುಕೊಳ್ಳುತ್ತ, ಭಯಗೊಂಡು ಅಳುತ್ತಿದ್ದರು ॥ ೮೮ ॥ ಕೆಲವರು

---

[1] ನೋಯಿಸಿಯೀ (ಗ. ಚ.) [2] ಮಾಡುವುದೇ (ಗ ಚ) [3] ↓ (ಗ). [4] ರಣೆರೆಂದು ಹುಬ್ಬ ಮಿಡಿವುತ । ಮಿಣಿಮಿಣಿ ನೆಲನೋಡುತ (ಗ) [5] ನೋಡುತಲದು (ಚ) [6] ಬಯ್ಯವಾಡಿಪು (ಕ) [7] ಗಲ್ಲದೊಳಿಟ್ಟು (ಚ) [8] ನಕ್ಕಿಱಿದು (ಚ) [9] ಗುಡ್ಡೆಣಿಸುತಲಬಲೆ (ಗ ಚ) [10] ನೆಟ್ಟಗೆ (ಕ) ನೆಟ್ಟೆಯ (ಗ) [11] ಹಲುಬುವರು (ಗ) [12] ನೋಡುತಿರದು (ಗ) [13] ಮಣ್ಣಮಾಡಿದುದೀ (ಗ) ಮಣ್ಣನು ಮಾಡಿತೀ (ಗ)

ಎಲ್ಲಿ ಕಲ್ತುದೊಯೀ ವಿದ್ಯೆಯನೀ ಕಪಿ[1] । ಯೆಲ್ಲಿಯಭ್ಯಾಸ ಮಾಡಿದುದೋ ॥
ಎಲ್ಲಿಂದ ಬಂದುದೊ[2] ಯೆಗುವೆ ಯೆಗುವೆನೆನು । ತಲ್ಲಲ್ಲಿ ಪೆಣ್ಗಳಾಡುವರು ॥ ೯೦ ॥

ಪೊಱವೊಳಲನು ಸುಟ್ಟು ಸೂರೆವೊಯ್ದು [3]ಜನಗಳ । ಪೊಱಮಡಿಸಿದುದು ಬೆದಱಿಸಿ ॥
ಮೆಱೆದುದು ತನ್ನ ವಿದ್ಯೆಯನಾ ಪ್ಲವಗದ । ತೆಱನನದಾರು ಬಣ್ಣಿಪರು ॥ ೯೧ ॥

ಎಂದಲ್ಲಲ್ಲಿ ಗುಡ್ಡಣಿಸುತ್ತ ಸೀತೆಯ । ತಂದುದು ಮೊದಲಾಗಿ ಪುರಕೆ ॥
ಒಂದು ದಿವಸ ಸುಖವಿಲ್ಲೆಂದು[4] ಪೌರರು । ನೊಂದು ನುಡಿವುತಿಹರಬಲೆ ॥ ೯೨ ॥

ಏಕೆ ಸೀತೆಯ ತಂದು ಪಾಪಿ ನಮ್ಮೆಲ್ಲರ । ನೇಕೆ ಕೊಂದಪನಿನ್ನು ತನಗೆ ॥
ಈ ಕಥನದಿ ಸಾವು ತಪ್ಪದೆನುತ ಜನ । ಶೋಕಾಬ್ಧಿಯೊಳಿಹರಬಲೆ ॥ ೯೩ ॥

ಹೆಣ್ಣೀಳಿಸಿದ ಹೆದಱಿಸಿದನೀ[5] ಪೊಳಲನು । ಬಣ್ಣಗೆಡಿಸಿದ ನರರನು[6] ॥
ಕಣ್ಣಿಗೆ ನೀರ ತಂದಿರದಾ ಮಾರುತಿ । ತಣ್ಣನಲ್ಲಿಂದ ತೆರಳಿದ ॥ ೯೪ ॥

ಸುಟ್ಟನು ಲಂಕೆಯ ರಕ್ಕಸರನು ಕೊಂ । ದಟ್ಟಿಯಾಡಿದ[7] ತನ್ನೊಡನೆ ॥
ಕಟ್ಟಿ ಕಾದುವರಿಲ್ಲೆಂದವನಲ್ಲಿಂದ । ಬಿಟ್ಟು ಬಂದನು ನೃಪನಡೆಗೆ ॥ ೯೫ ॥

ಕಂಡನು ಶ್ರೀರಾಮಚಂದ್ರ ನೃಪನ ಪಾದ । ಪುಂಡರೀಕವನಂದಣುವ ॥
ಕಂಡ ಕಾರ್ಯವ ಲಂಕೆಯ ಪೊಕ್ಕು ಮಾಡಿದು । ದ್ದಂಡಿಕೆಯನು ಹೇಳ್ದನವನು ॥ ೯೬ ॥

---

ಹೆಂಗುಸರು ಹೀಗೆ ಹೇಳಿಕೊಂಡರು—"ಎಲೈ ಹೆಣ್ಣೆ ನೋಡು, ನೋಡು. ಈ ಕಪಿಯ ಮೈಯ ಬಣ್ಣವನ್ನೂ ಇದರ ಆಟವನ್ನೂ ಕಣ್ಣಿನಿಂದ ನೋಡಲು ಸಾಧ್ಯವಿಲ್ಲ. ಈ ಪಾಪಿ ನಮ್ಮ ಪಟ್ಟಣವನ್ನು ಸುಟ್ಟು ಮಸಿಬಣ್ಣವಾಗಿ ಮಾಡಿತು! ॥ ೮೯ ॥ ಈ ಕಪಿ ಈ ವಿದ್ಯೆಯನ್ನು ಎಲ್ಲಿ ಕಲಿತುಕೊಂಡಿತೋ! ಎಲ್ಲಿ ಅಭ್ಯಾಸಮಾಡಿತೋ! ಎಲ್ಲಿಂದ ಬಂತೋ! ಏನು ಮಾಡಲಿ ಎಂದು ಹೆಂಗುಸರು ಅಲ್ಲಲ್ಲಿ ಮಾತಾಡಿಕೊಂಡರು. ॥ ೯೦ ॥ ಆ ಕಪಿಯು ಪಟ್ಟಣದ ಹೊರಗಣ ಭಾಗವನ್ನೆಲ್ಲ ಸುಟ್ಟು, ಗೋಳಾಡಿಸಿ, ಹೆದರಿಸಿ, ಜನರನ್ನೆಲ್ಲ ಹೊರಡಿಸಿತು ತನ್ನ ವಿದ್ಯೆಯನ್ನು ಮೆರೆಯಿಸಿತು. ಆ ಕಪಿಯ ಸಂಗತಿಯನ್ನು ಯಾರು ಬಣ್ಣಿಸಬಲ್ಲರು? ॥ ೯೧ ॥ ಹೀಗೆ ಅಲ್ಲಲ್ಲಿ ಪಟ್ಟಣಿಗರು ಭಯಪಡುತ್ತ, ಸೀತೆಯನ್ನು ತಂದ ದಿನದಿಂದಲೂ ಈ ಪಟ್ಟಣಕ್ಕೆ ಒಂದು ದಿವಸವಾದರೂ ಸುಖವಿಲ್ಲವೆಂದು, ನೊಂದು ಹೇಳುತ್ತಿದ್ದರು ॥ ೯೨ ॥ ಎಲೈ ಚೆಲುವಿನಿಯೇ, ಆ ಪಟ್ಟಣಿಗರು—"ಈ ಪಾಪಿ ರಾವಣನು ಏಕೆ ಸೀತೆಯನ್ನು ತಂದು ನಮ್ಮನ್ನೆಲ್ಲ ಕೊಲ್ಲುತ್ತಿರುವನೋ! ಈ ಘಟನೆಯಿಂದ ನಾಶವು ತಪ್ಪದು" ಎಂದು ಹೇಳಿಕೊಳ್ಳುತ್ತ, ದುಃಖವೆಂಬ ಸಾಗರದಲ್ಲಿ ಇದ್ದರು. ॥ ೯೩ ॥ ಮಾರುತಿಯು ಹೀಗೆ ಲಂಕೆಯ ಜನರನ್ನು ಸತ್ವಹೀನರಾಗಿ ಮಾಡಿ, ಹೆದರಿಸಿ, ಪಟ್ಟಣವನ್ನು ಬಣ್ಣಗೆಡಿಸಿ, ಜನರ ಕಣ್ಣಲ್ಲಿ ನೀರುಬರುವಂತೆ ಮಾಡಿ, ಒಡನೆಯೇ ತೃಪ್ತಿಯಿಂದ ಅಲ್ಲಿಂದ ತೆರಳಿದನು. ॥ ೯೪ ॥ ಹನುಮಂತನು ಲಂಕೆಯನ್ನು ಸುಟ್ಟು, ರಾಕ್ಷಸರನ್ನು ಕೊಂದು, ಹಲವರನ್ನು ಅಟ್ಟಿ, ತನ್ನೊಡನೆ ಕಾದಾಡುವವರು ಯಾರೂ ಇಲ್ಲವೆಂದು ಹೇಳಿಕೊಂಡು, ಅಲ್ಲಿಂದ ಹೊರಟು, ಶ್ರೀರಾಮನ ಬಳಿಗೆ ಬಂದನು. ॥ ೯೫ ॥ ಅಣುವನು ಹೀಗೆ ಬಂದು, ಶ್ರೀರಾಮನ ಪಾದಕಮಲವನ್ನು ಕಂಡು, ತಾನು ಮುಂದಿನ ಕಾರ್ಯವನ್ನು ಕಂಡ ಬಗೆಯನ್ನೂ ಲಂಕೆಯಲ್ಲಿ ಮಾಡಿರುವ ಉದ್ವರ್ತನೆಯನ್ನೂ ತಿಳಿಸಿದನು. ॥ ೯೬ ॥ ಎಲೈ ಚೆಲುವಿನಿಯೇ ಮನ್ಮಥನಿಗೆ ಸರಿ

---

[1] ವಿದ್ಯೆಯೀಯಾಟವ (ಗ) [2] ಬಂದಿತೊ (ಗ) [3] ಸೂರೆವಾಯ್ದು (ಕ) [4] ಸುಖವಲ್ಲೆಂದು (ಕ) ೯೧ ಇಲ್ಲಿಂದ ಮುಂದೆ ಗ ಪ್ರತಿಯಲ್ಲಿಲ್ಲ [5] ತಱಿಸಿದನೀ (ಕ) [6] ಜನರನು (ಚ). [7] ಕೊಂದಟ್ಟಿ ಮಾಡಿದ (ಚ).

ಮದನಸಮಾನ ಮಂದರಧೈರ್ಯನತಿ ಮೃದು । ಹೃದಯ ಸದ್ಧರ್ಮಾಬ್ಧಿಚಂದ್ರ ॥
ಸದಮಲಚರಿತ ಸುಜ್ಞಾನಿಯೊಪ್ಪಿದ ಸ । ಮ್ಮದದಿಂದ ಮದದಾನೆಗಮನೆ ॥ ೯೭ ॥

ಕೋವಿದರುಗಳ ಹೃತ್ಕಮಲಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ॥
ಭಾವಕರುಗಳ ಸಂತಸಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೯೮ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೯೯ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಿಂ ಪಡೆದುದು[1] ಪದಿನಾಱನೆಯ ಮಿಸುಪ ಸಂಧಿ ॥ ೧೦೦ ॥

---

ಯಾದವನೂ, ಮಂದರಾದ್ರಿಯಂತೆ ಧೀರನೂ, ಅತ್ಯಂತ ಮೃದುವಾದ ಮನಸ್ಸುಳ್ಳವನೂ, ಒಳ್ಳೆಯ ಧರ್ಮವೆಂಬ ಸಮುದ್ರಕ್ಕೆ ಚಂದ್ರನೂ, ನಿರ್ಮಲವಾದ ಚಾರಿತ್ರನೂ, ಒಳ್ಳೆಯ ಜ್ಞಾನಿಯೂ ಆದ ಶ್ರೀರಾಮನು ಹೀಗೆ ಸಂತೋಷದಿಂದ ಇದ್ದನು ॥ ೯೭ ॥ ವಿದ್ವಾಂಸರ ಹೃದಯಕಮಲಕ್ಕೆ ಸೂರ್ಯನೂ, ಸರಸ್ವತೀದೇವಿಯ ಮುಖಕ್ಕೆ ರನ್ನಗನ್ನಡಿಯಂತೆ ಇರುವವನೂ, ರಸಿಕರ ಸಂತೋಷಕ್ಕೆ ಸಮುದ್ರನೂ, ಮಿತ್ರನೂ ಆದ ದೇವಪ್ಪನು ರಚಿಸಿದ ಸತ್ಕಾವ್ಯವಿದು ॥ ೯೮ ॥ —ಎಲೈ ಜಿಂಕೆಕಣ್ಣಿನವಳೇ, ಈದಿನ ನಾನು ಮುಂದಿನ ಕಥೆಗಳನ್ನು ಹೇಳುವೆನೆಂದಂತೆ ಮೆಲ್ಲನೆ ಮುಂದುವರಿದು, ಇಲ್ಲಿಗೆ ಸಂಧಿ ಪೂರ್ಣವಾಯಿತು ಆ ಮುಂದಿನ ಕಥೆಯನ್ನು ಸಂತೋಷದಿಂದ ನಿನಗೆ ಹೇಳುವನು—ಎಂದು ಶ್ರೇಣಿಕನು ಹೇಳಿದನು ॥ ೯೯ ॥ ಬ್ರಾಹ್ಮಣಕುಲದಲ್ಲಿ ಜನಿಸಿದ, ಹೊಸ ಮನ್ಮಥನೆನಿಸಿದ, ಸ್ವಚ್ಛಗುಣಗಳುಳ್ಳ, ಜಿನಭಕ್ತನಾದ, ಅತಿಶ್ರೇಷ್ಠ ವಾಗ್ದೇವಿಯ ನಿರ್ಮಲ ಮುಖಕ್ಕೆ ಕನ್ನಡಿಯೆನಿಸಿದ, ನಿರ್ಮಲವಾದ ನಡತೆಯುಳ್ಳ, ಮಂತ್ರಿಯಾದ ದೇವಪ್ಪನು ಸಂತೋಷದಿಂದ ಹೇಳಿರುವ ರಾಮವಿಜಯ ಕಾವ್ಯದಲ್ಲಿ ಹದಿನಾರನೆಯ ಸಂಧಿ ಪ್ರಖ್ಯಾತವಾಯಿತು ॥ ೧೦೦ ॥

---

[1] ಪಡೆದತಿ ಜಸವೆತ್ತುದು (ಕ)

# ೧೭. ಸಮರಸನ್ನಾಹ

ಒಗ್ಗೊಡೆಯದ[1] ಕರ್ಮಂಗಳನೆಲ್ಲವ । ನುಗ್ಗುನುಸಿಯ ಮಾಡಿ ಜನಕೆ ॥
ತಗ್ಗದ ಸುಖವೀವ ಮುನಿಸುವ್ರತನಿಗೆ । ಮುಗ್ಗುವೆ ಮಮತೆಯಿಂದಾನು ॥ ೧ ॥

ಒಪ್ಪಿಡಿ ನಡುವಿನೊಚ್ಚೆರೆಗಣ್ಣುಗಳ ಚೆಲ್ವೆ । ಮುಪ್ಪುರಿಗೊಂಡ ಜವ್ವನದ ॥
ಕರ್ಪೂರಗಂಧಿ ಲಾಲಿಸು ನೀ ಮೂಜಗ । ಕೊಪ್ಪುವಯ್ಯನ ಚರಿತವನು ॥ ೨ ॥

ಹೊನ್ನದಾವರೆ ಮೊಗ್ಗೆಮೊಲೆಯುಳೆ ಪೊಸದಳಿ । ರನ್ನದುಟಿಯುಳೆ ಲತಾಂಗಿ ॥
ಕನ್ನಡಿಗದಪಿನ ಕಾಮಿನಿಯರ ತಲೆ । ರನ್ನೆ ಲಾಲಿಪುದೀ ಕಥೆಯ ॥ ೩ ॥

ಉಡುಪತಿವದನದುಂಗುರವಿಡಿ ನಡುವಿನ । ನಿಡುಗಣ್ಣ ನೀಲಾಳಕದ ॥
ನುಡಿವೆಣ್ಣ ನುಡಿಯ ಸೋಲಿಪ ನುಡಿಯುಳೆ ನೀ । ಬಿಡದೆ ಲಾಲಿಪುದೀ ಕಥೆಯ ॥ ೪ ॥

ಎಂದು ನುಡಿದು ತನ್ನ ಜೀವಕಾಂತೆಯ ವದ । ನೇಂದುವ ನೋಡಿ ನಲಿವುತ[2] ॥
ಅಂದು ಸಂತಸಗಡಲೊಳಗಾಳುತೇಳುತಿಂ[3] । ತೆಂದು ನುಡಿದ ವಿನಯದೊಳು ॥ ೫ ॥

ನಿಡುಗಣ್ಣುಗಳ ಚೆಲ್ವ ಗಂಡಮಂಡಲದಿನಿ । ನುಡಿಯ ಕಂಠೀರವ ನಡೆಯ ॥
ಕುಡುವಿಲ್ಲಗೆಣೆಯ ಶ್ರೇಣಿಕನೃಪವರ ನಿನ್ನ । ನುಡಿಗೆ ಸೋಲದ ಪೆಣ್ಗಳುಂಟೆ[4] ॥ ೬ ॥

ನಿರ್ಮಲಚಿತ್ತ ಜಿನೇಶ್ವರಪದಭಕ್ತ[5] । ಧರ್ಮಪಾಲಕ ದಯಾಪರನೆ ॥
ಕರ್ಮವಿಮುಕ್ತ ನೀ ಪೇಳು ಕೇಳುವೆ ಜಿನ । ಧರ್ಮನಾಥನ ಚರಿತವನು ॥ ೭ ॥

---

ಗುಂಪು ಮುರಿಯದೆ ಗಟ್ಟಿಯಾಗಿ ಸೇರಿಕೊಂಡಿರುವ ಕರ್ಮಗಳನ್ನೆಲ್ಲ ಪುಡಿಗಟ್ಟಿ, ಜನರಿಗೆ ಕುಂದಿಲ್ಲದ ಸೌಖ್ಯವನ್ನು ಕೊಡತಕ್ಕ ಮುನಿಸುವ್ರತನಿಗೆ ನಾನು ಭಕ್ತಿಯಿಂದ ನಮಿಸುತ್ತೇನೆ. ॥ ೧ ॥ ಶ್ರೇಣಿಕನು ಚೇಳಿನಿಯೊಡನೆ ಹೀಗೆ ಹೇಳಿದನು—"ಒಂದು ಹಿಡಿಯೆನಿಸುವ ನಡುವುಳ್ಳ, ಬೊಗಸೆಗಣ್ಣುಗಳುಳ್ಳ, ಸೌಂದರ್ಯಯುಕ್ತ ಯೌವನವೆಂಬ ಮುಪ್ಪುರಿಗಳುಳ್ಳ ಕರ್ಪೂರ ಪರಿಮಳವುಳ್ಳವಳೇ, ತ್ರಿಲೋಕಶ್ರೇಷ್ಠನಾದ ಜಿನೇಶನ ಕಥೆಯನ್ನು ಕೇಳು. ॥ ೨ ॥ ಹೊಂದಾವರೆ ಮುಗುಳಿನಂತಹ ಮೊಲೆಯ, ಹೊಸ ಚಿಗುರಿನಂತಹ ತುಟಿಯ, ಬಳ್ಳಿಯಂತಹ ದೇಹದ, ಕನ್ನಡಿಯಂತಹ ಕೆನ್ನೆಯ, ಸ್ತ್ರೀಯರಿಗೆಲ್ಲ ಶಿರೋಮಣಿಯೇ ಈ ಕಥೆಯನ್ನು ಕೇಳು. ॥ ೩ ॥ ಚಂದ್ರನಂತಹ ಮುಖ, ಉಂಗುರದಂತೆ ಕಿರಿದಾಗಿರುವ ಹಿಡಿನಡು, ನಿಡಿದಾದ ಕಣ್ಣು, ಕಪ್ಪಾದ ಕೂದಲು, ವಾಗ್ದೇವಿಯ ಮಾತನ್ನು ಸೋಲಿಸುವ ಮಾತು—ಇವುಗಳಿಂದ ಕೂಡಿದ ಚೇಳಿನಿಯೇ ಈ ಕಥೆಯನ್ನು ಕೇಳು. ॥ ೪ ॥ ಈ ರೀತಿಯಾಗಿ ಶ್ರೇಣಿಕನು ತನ್ನ ಪ್ರಾಣಕಾಂತೆಯ ಮುಖವನ್ನು ನೋಡಿ, ನಲಿಯುತ್ತ, ಸಂತೋಷ ಸಾಗರದಲ್ಲಿ ಮುಳುಗುತ್ತ ಏಳುತ್ತ, ವಿನಯದಿಂದ ನುಡಿದನು. ॥ ೫ ॥ ಆಗ ಚೇಳಿನಿ ಹೀಗೆಂದಳು:—"ನೀಳವಾದ ಕಣ್ಣುಗಳುಳ್ಳ, ಸೊಗಸಾದ ಕೆನ್ನೆಗಳುಳ್ಳ, ಸವಿಯಾದ ನುಡಿಗಳುಳ್ಳ, ಸಿಂಹದಂತಹ ನಡಿಗೆಯುಳ್ಳ, ಮನ್ಮಥನಿಗೆ ಹೋಲುವಂತಹ ಶ್ರೇಣಿಕರಾಜನೇ, ನಿನ್ನ ಮಾತಿಗೆ ಸೋಲದಿರುವ ಹೆಂಗುಸರಿರುವರೆ? ॥ ೬ ॥ ಪರಿಶುದ್ಧ ಮನಸ್ಕನೇ, ಜಿನಪಾದ ಭಕ್ತನೆ. ಧರ್ಮರಕ್ಷಕನೇ, ದಯೆಯಿಂದ ಕೂಡಿದವನೇ, ಕರ್ಮದಿಂದ ಬಿಡುಗಡೆ ಹೊಂದಿದವನೇ, ಜಿನಧರ್ಮಕ್ಕೆ ಒಡೆಯನಾದ ಜಿನೇಶನ

---

[1] ಒಗ್ಗೊಡೆಯದೆ (ಚ). [2] ಲಾಲಿಸುತ (ಕ). [3] ತೇಳುತಂತೆಂದು (ಕ). [4] ಪೆಣ್ಣುಂಟೆ (ಚ). [5] ಪದಪದ್ಮ (ಚ).

ಎಂದು ನುಡಿದ ತನ್ನ ಜೀವಕಾಂತೆಯುದೊಂ । ದಂದವಡೆದ ಮಾತುಗಳಿಗೆ ॥
ಅಂದು ಸಂತಸವಡುತೆದೆಯೊಳಾ[1] ನೃಪನಿಂ । ತೆಂದು ಪೇಳಿದಳವಳೊಡನೆ ॥ ೮ ॥

ಮಡದಿ ಕೇಳ್ಮಱುದಿನದೋಲಗದೊಳಗಾ । ಪೊಡವಿಯೊಡೆಯ ರಾಮಚಂದ್ರ ॥
ಬಿಡದಣುವನ ಕೇಳ್ದ ಲಂಕೆಗೆ ಪೋದುದ । ನುಡಿಯೆನಲವನಿಂತೆಂದ ॥ ೯ ॥

ಸುಟ್ಟೆನು ಪೊಱವೊಳಲನು ನಂದನವನು । ಹುಟ್ಟುಗೆಡಿಸಿದೆ ರಕ್ಕಸರ ॥
ಅಟ್ಟಿ ಬಡಿದು ಭಂಗಿಸೆ[2] ಪೊಳಲನು ಪೊಱ । ಮಟ್ಟುದಿಲ್ಲಾ ರಾವಣನು ॥ ೧೦ ॥

ಏನೇನುಬ್ಬೆಯ ಮಾಡಿ ನೋಯಿಸಿದೆನಾ । ನಾ ನಗರದ ಜನರುಗಳ ॥
ಏನೆಂದಱಿಯೆ ರಾವಳ ಬಂದುದಿಲ್ಲೆಂ । ದಾ ನರಪತಿಗವ ನುಡಿದ ॥ ೧೧ ॥

ಏಕೆ ವಿಭೀಷಣವಿನಿತು[3]ಬ್ಬೆಗವಾದೊ । ಡೇಕವ ಪೊಱಮಟ್ಟುದಿಲ್ಲ ॥
ಏಕೆಂದು ಕೇಳಲು ರಾವಣ[4]ಬಾರದಿ । ರ್ಪಾ ಕಥನವ ಪೇಳ್ದನಿಂತು ॥ ೧೨ ॥

ಸುಗ್ರೀವ ಲಕ್ಷ್ಮಣರಣುವರಿಂ[5]ದಾ ಬಾಲಿ । ನಿಗ್ರಹಗಳಿಗೊಳಗಾಗಿ ॥
ಉಗ್ರ ಮರಣವಡೆದುದ ಕೇಳಿ ನೊಂದು ದ । ಶಗ್ರೀವ ಮನದೊಳಿಂತೆಂದ[6] ॥ ೧೩ ॥

ಅಣುವ ಸುಗ್ರೀವ ಲಕ್ಷ್ಮಣರುಗಳಿಂದೆನ್ನ[7] । ರಣಕಿದಿರಾದೊಡೆಯವರ ॥
ಕ್ಷಣದೊಳು ಜಯಿಸುವ ಬಲು ವಿದ್ಯೆಗಲಿಪೆನೆಂ । ದೆಣಿಸಿ ಪೌಲಸ್ತ್ಯನು ಪೋಗಿ ॥ ೧೪ ॥

ಇಂದಗಿಯೆಂಬ ಸುತನ ಕಾಪುವೇಳ್ದಾ । ನಂದದಿಂದೇಳುಪವಾಸ ॥
ಅಂದಿರದಾದಿತ್ಯಪಾದ ಗಿರಿಯೊಳವ । ನಂದಿರ್ಪ ವಿದ್ಯೆಗೋಸುಗರ ॥ ೧೫ ॥

---

ಚಾರಿತ್ರವನ್ನು ನೀನು ಹೇಳು, ನಾನು ಕೇಳುವೆನು ॥ ೭ ॥ ಈ ರೀತಿಯಾಗಿ ಹೇಳಿದ ತನ್ನ ಪ್ರಾಣವಲ್ಲಭೆಯ ಚೆಲುವಾದ ಮಾತುಗಳಿಗೆ ಮನದಲ್ಲಿ ಸಂತೋಷಪಡುತ್ತ, ಶ್ರೇಣಿಕರಾಜನು ಅವಳೊಡನೆ ಹೀಗೆಂದನು ॥ ೮ ॥ ಚೇಳಿನಿಯೇ ಕೇಳು ರಾಜನಾದ ಶ್ರೀರಾಮನು ಮರುದಿವಸ ಓಲಗದಲ್ಲಿ ಅಣುವನನ್ನು ಕರೆದು ಲಂಕೆಗೆ ಹೋದ ಸಂಗತಿಯನ್ನು ತಿಳಿಸಲು ಹೇಳಿದಾಗ, ಅವನು ಹೀಗೆಂದನು ॥ ೯ ॥ 'ನಾನು ಲಂಕೆಗೆ ಹೋಗಿ ಅದರ ಹೊರಗಣ ಭಾಗವನ್ನು ಸುಟ್ಟೆನು ಉದ್ಯಾನವನ್ನು ನಾಶಪಡಿಸಿದೆ ರಾಕ್ಷಸರನ್ನು ಅಟ್ಟಿ, ಹೊಡೆದು ಮುರಿದರೂ ಆ ರಾವಣನು ಪಟ್ಟಣದಿಂದ ಹೊರಡಲೇ ಇಲ್ಲ ॥ ೧೦ ॥ ನಾನು ಏನೇನು ಬೇಗೆಯನ್ನು ಉಂಟುಮಾಡಿ ಆ ನಗರದ ಜನರನ್ನು ನೋಯಿಸಿದರೂ ಆ ರಾವಣನು ಹೊರಗೆ ಬಂದಿಲ್ಲ—ಇದೇಕೋ ತಿಳಿಯೆನು' ಎಂದು ರಾಮನಿಗೆ ಅಣುವನು ಹೇಳಿದನು ॥ ೧೧ ॥ ಆಗ ರಾಮನು ವಿಭೀಷಣನೊಡನೆ, "ಎಲೈ ವಿಭೀಷಣನೇ, ಇಷ್ಟೊಂದು ತನಗೆ ತಾಪವುಂಟಾದರೂ ರಾವಣನು ಏಕೆ ಹೊರಡಲಿಲ್ಲ?' ಎಂದು ಕೇಳಿದನು ಆಗ ಅವನು ರಾವಣನು ಹೊರಗೆ ಬಾರದಿದ್ದ ಕಥನವನ್ನು ಹೀಗೆ ಹೇಳಿದನು ॥ ೧೨ ॥ ಸುಗ್ರೀವ, ಲಕ್ಷ್ಮಣ, ಅಣುವ—ಈ ಮೂವರಿಂದ ವಾಲಿಯು ಮಡಿದ ವಾರ್ತೆಯನ್ನು ಕೇಳಿ, ನೊಂದವನಾಗಿ, ರಾವಣನು ತನ್ನ ಮನಸ್ಸಿನಲ್ಲಿ ಹೀಗೆಂದುಕೊಂಡನು ॥ ೧೩ ॥ "ಅಣುವ, ಸುಗ್ರೀವ, ಲಕ್ಷ್ಮಣರು ಇಂದು ನನಗೆ ಯುದ್ಧದಲ್ಲಿ ಇದಿರಾದರೆ ಅವರನ್ನು ಕ್ಷಣದಲ್ಲೇ ಜಯಿಸುವ ಮಹಾವಿದ್ಯೆಗಳನ್ನು ಕಲಿಯಬೇಕು"—ಎಂದು ಎಣಿಸಿ ರಾವಣನು ಲಂಕೆಯಿಂದ ಹೊರಟು ಹೋಗಿದ್ದಾನೆ ॥ ೧೪ ॥ ರಾವಣನು ಇಂದಗಿ

---

[1] ಸಂತಸವಡೆದೆರ್ದೆಯೊಳಾ (ಚ) [2] ಭಂಗಿಸಿದೆ (ಚ) [3] ನಿನಿತು (ಕ) [4] ಕೇಳಿದ ನೃಪನವ (ಚ) [5] ರಣುವನಿಂ (ಕ) [6] ಮನದೊಳಗೆಣಿಸಿ (ಕ) [7] ಲಕ್ಷ್ಮಣರುಗಳಿರದೆನ್ನ (ಚ)

ದೇವ ಕೇಳಾ ವಿದ್ಯೆಗಳ ಸಾಧಿಸದ ಮುನ್ನ । ನಾವಲ್ಲಿಗೈದಿ ವಿಘ್ನವನು ॥
ಓವದೆ ಮಾಡಲಾ ಕಾರ್ಯ ಕೆಡುವುದೆಂ । ದಾ ವಿಭೀಷಣ ಪೇಳಲೊಡನೆ ॥ ೧೬ ॥

ಇದು ಕಾರ್ಯವಹುದೆಂದು ರಾಮಲಕ್ಷ್ಮಣರಂ । ದೊದವಿದ ಬಲುಬಲಗೂಡಿ ॥
ಉದಧಿಯ ವಿದ್ಯಾಬಲದಿಂದ ದಾಂಟಿದ । ರದನು ಪೇಳುವೆನಂಬುಜಾಕ್ಷಿ ॥ ೧೭ ॥

ಗರುಡವಾಹಿನಿ ಸಿಂಹವಾಹಿನಿ ಹನನಾ । ವರಣೀಯ[1] ಬಂಧಮೋಚಿನಿಯ ॥
ಇರದಿವು ಮೊದಲಾದೆಂಟು ವಿದ್ಯೆಯನಾ । ನರನಾಥಗಣುವ ಸುಗ್ರೀವ ॥ ೧೮ ॥

ಇತ್ತು ಲಕ್ಷ್ಮಣಗೆಂಟು ಖೇಚರ ವಿದ್ಯೆಯ[2] । ಮತ್ತೆ ಕೊಡಲು ಗಗನದೊಳು ॥
ಒತ್ತಿಯವರು ಬರುತಿರಲಿತ್ತ ಕೇಳು ಮ । ತ್ತತ್ತಲಾ[3] ದಶಕಂಠನೊಳು ॥ ೧೯ ॥

ನುಡಿದುದು ಪ್ರಜ್ಞಪ್ತಿವಿದ್ಯೆಯಿನಿತು ಕಾಲ । ಮೊಡನಿರ್ದು ನೀನು ನೆನೆದುದ ॥
ಬಿಡದೆ[4] ಸಾಧಿಸಿ ಕೊಟ್ಟೆವೆಮಗಿಲ್ಲಿಂದಿತ್ತ[4] । ನಡೆಯುದು ನಿನ್ನೊಳಗಿಹುದು ॥ ೨೦ ॥

ಏಕೆಂಬೆಯ ದಶವದನ ನಿನಗೆ ಪುಣ್ಯ । ಸಾಕೆಂದು ಬಂದು ನಿಂದಿದೆಕೋ ॥
ನೂಕದು ನಾವಸಮರ್ಥರಾದೆವು ಯಿನ್ನು । ಸಾಕು ನಿನ್ನೊಳಗಿಹುದೆಮಗೆ ॥ ೨೧ ॥

ನೀವಿಲ್ಲದಿರೆ ಕೆಟ್ಟಪೆನೆ ನನ್ನ ಭುಜಬಲ । ದೇವ ದಾನವ ಮಾನವರ ॥
ಜೀವಕೆ ಮುಪ್ಪ ತಾರದೆ ಬಿಟ್ಟಪೆನೆಯೆಂದು । ರಾವಣ[5] ನುಡಿದನಬ್ಜಾಕ್ಷಿ ॥ ೨೨ ॥

---

ಯೆಂಬ ಮಗನನ್ನು ರಕ್ಷಣೆಗೆ ನಿಲ್ಲಿಸಿ, ಆದಿತ್ಯಪಾದಗಿರಿಯಲ್ಲಿ ಏಳುದಿನಗಳ ಮಹೋಪವಾಸದಲ್ಲಿ ವಿದ್ಯೆಗೋಸ್ಕರವಾಗಿ ಇದ್ದಾನೆ ॥ ೧೫ ॥ ಎಲೈ ಪ್ರಭು ರಾಮಚಂದ್ರನೇ, ಕೇಳು. ರಾವಣನು ಆ ವಿದ್ಯೆಗಳನ್ನು ಪಡೆಯುವುದಕ್ಕೆ ಮೊದಲಾಗಿ ನಾವು ಅಲ್ಲಿಗೆ ಹೋಗಿ ಅವನಿಗೆ ಎಡರನ್ನು ಉಂಟುಮಾಡಬೇಕು ಇದರಿಂದ ಅವನ ಕಾರ್ಯವು ಕೆಡುವುದು—ಎಂದು ವಿಭೀಷಣನು ಹೇಳಿದನು. ॥ ೧೬ ॥ ಎಲೈ ಚೇಳಿನಿಯೇ, ವಿಭೀಷಣನೆಂದ ಮಾತನ್ನು ಕೇಳಿ, ಇದು ಮಾಡಬೇಕಾದ ಕಾರ್ಯವು ಹೌದೆಂದು ರಾಮಲಕ್ಷ್ಮಣರು ಸೈನ್ಯವನ್ನು ಕೂಡಿಕೊಂಡು, ತಮ್ಮ ವಿದ್ಯಾಬಲದಿಂದ ಸಮುದ್ರವನ್ನು ದಾಟಿದರು—ಆ ಸಂಗತಿಯನ್ನು ಹೇಳುವೆನು. ॥ ೧೭ ॥ ಈ ಸಂದರ್ಭದಲ್ಲಿ ಸುಗ್ರೀವ ಅಣುಪರಿಬ್ಬರು ಶ್ರೀರಾಮನಿಗೆ ಗರುಡವಾಹಿನಿ, ಸಿಂಹವಾಹಿನಿ, ಹನನಾವರಣೀಯ, ಬಂಧಮೋಚಿನೀ—ಎಂಬೀ ವಿದ್ಯೆಗಳನ್ನು ಹೇಳಿಕೊಟ್ಟರು. ॥ ೧೮ ॥ ಲಕ್ಷ್ಮಣನಿಗೆ ಇವನ್ನಲ್ಲದೆ, ಎಂಟು ಖೇಚರ ವಿದ್ಯೆಗಳನ್ನೂ ಕೊಟ್ಟರು. ಹೀಗೆ ಇವರೆಲ್ಲರೂ ಆಕಾಶಮಾರ್ಗದಲ್ಲಿ ಬರುತ್ತಿದ್ದರು ಆಗ ಅತ್ತ ರಾವಣನ ಸಂಗತಿಯನ್ನು ಕೇಳು. ॥ ೧೯ ॥ ಪ್ರಜ್ಞಪ್ತಿವಿದ್ಯೆಯು ರಾವಣನೊಡನೆ ಹೀಗೆಂದಿತು—"ಎಲೈ ರಾವಣನೇ, ಇಷ್ಟುಕಾಲವೂ ನಿನ್ನೊಡನೆ ಇದ್ದು. ನಿನಗೆ ಬೇಕೆನಿಸಿದುದನ್ನೆಲ್ಲಾ ಸಾಧಿಸಿಕೊಟ್ಟಿದ್ದೇವೆ. ಇನ್ನುಮುಂದೆ ನಮಗೆ ನಿನ್ನೊಡನೆ ಇರಲು ಸಾಧ್ಯವಿಲ್ಲ. ॥ ೨೦ ॥ ಎಲೈ ರಾವಣನೇ, ಪುಣ್ಯವು ನಿನ್ನನ್ನು ಸೇರುವುದು ಸಾಕೆಂದು ನಿಂತುಹೋಗಿದೆ ನಮಗಿನ್ನು ನಿನ್ನೊಡನೆ ಇರಲು ಸಾಧ್ಯವಿಲ್ಲ. ನಾವು ಅಸಮರ್ಥರಾಗಿದ್ದೇವೆ" ಎಂದು ಹೇಳಿದವು. ॥ ೨೧ ॥ ಚೇಳಿನಿಯೇ, ಆಗ ರಾವಣನು "ನೀವು ಇಲ್ಲದಿದ್ದರೆ ಏನಾಯಿತು? ನನ್ನ ಶೌರ್ಯದಿಂದ ದೇವ-ದಾನವ-ಮಾನವ ಜನಾಂಗದ ಪ್ರಾಣಕ್ಕೆ ಮುಪ್ಪನ್ನು ತಾರದೆ ಇರುವೆನೆ?" ಎಂದು ನುಡಿದನು ॥ ೨೨ ॥ ರಾಮ ಲಕ್ಷ್ಮಣರೆಂಬ ಹೆಸರನ್ನೇ ಇಲ್ಲದಂತೆ ಮಾಡದೆ. ನಿಮ್ಮನ್ನು ಪ್ರೀತಿಸಿದೆನಾದರೆ, ನನಗೆ ಚಕ್ರೇಶ್ವರನೆಂಬ ಹೆಸರೇ ನಿಷ್ಪ್ರ-

---

[1] ಪ್ರಹರಾವರಣಿಯ (ಕ) ಪ್ರಹಣವರಣಿಯ (ಚ). [2] ಸಾದಿತವಿದ್ಯೆಯ (ಚ). [3] ಮತ್ತಿತ್ತಲಾ (ಚ). [4] ನಿನಗೆ ಸಾಗಿಸಿಕೊಟ್ಟೆ ತಮಗಿನ್ನು (ಚ). [5] ಯೆಂದಾ ವಿಭು (ಚ).

ರಾಮಲಕ್ಷ್ಮಣರೆಂಬ ಹೆಸರನು ನಾನು ವಿ । ರಾಮವ ನೂಡದೆ ನಿಮಗೆ ॥
ಪ್ರೇಮವ ಪೇಳ್ದೊಡೆ ಚಕ್ರೇಶ್ವರನೆಂಬ । ನಾಮ ನಿರರ್ಥಕವಲ್ತೆ[1] ॥ ೨೩ ॥

ಕಡುನೊಂದು ಪ್ರಜ್ಞಪ್ತಿ ವಿದ್ಯೆಯೊಳಾ ನೃಪ । ನುಡಿವುತಿರಲು ಪುಣ್ಯಸತಿಯು ॥
ಕುಡಿನೋಟ ತೊಲಗಿದ ಪುರುಷರನಾರಾರು[2] । ಬಿಡದಿರ್ಪರೆ ಬಿಂಕಗಾತಿ ॥ ೨೪ ॥

ಮಡದಿ ಮಕ್ಕಳು ಬಂಧುಜನ ನಿಜಮಿತ್ರರು । ಪಡೆದ ಜನನಿ ಮೊದಲಾಗಿ ॥
ಬಿಡುವರು ಪುಣ್ಯವೆಂದೆಂಬ ಕಾಂತೆಯ ತಕ್ಕೆ । ನಡಿಲಿದ ಮನುಜರನಬಲೆ ॥ ೨೫ ॥

ನಂಟರು ಮೊಗದೆಗೆವರು ಮೈಗಾವಲ । ಬಂಟರು ಕೃತಕವೇಳಿಪರು ॥
ಕಂಟಕರಪ್ಪರುಳಿದ ಜನಪದ ಪುಣ್ಯ । ಗೆಂಟಾದ ಮಾನವಗಬಲೆ ॥ ೨೬ ॥

ಪರುಷ ಪಾಷಾಣಮಪ್ಪುದು ಸುರತರು ಕಾಡ । ಮರನಪ್ಪುದು ಕಾಮಧೇನು ॥
ಬರಡಪ್ಪುದು ಸುಧೆ ಗರಳಮಪ್ಪುದು ಪುಣ್ಯ । ಕೆರವಾದ ಮನುಜರಿಗಬಲೆ ॥ ೨೭ ॥

ಕುಲದಿಂದೆ ಭುಜಬಲದಿಂದೆ ಯೌವನದಿಂದೆ । ಚೆಲುವಿಂದತಿಜಾಣ್ಮೆಯಿಂದ ॥
ಬಲವಿದ್ಯೆಗಳಿಂದೆ ಫಲವೇನು ಪುಣ್ಯ ತಾ । ತೊಲಗಿದ ಮನುಜರಿಗಬಲೆ ॥ ೨೮ ॥

ಪುಣ್ಯವಿರಲು ಸದ್ಗುಣಿ ಸಜ್ಜನಶೀಲ । ಪುಣ್ಯವಿರಲು ವಿಕ್ರಮನು ॥
ಪುಣ್ಯವಿರಲು ಕೀರ್ತಿಪರಾರಾರಿಗೆ । ಪುಣ್ಯವೇ ಕೇಳು ಪ್ರಧಾನ ॥ ೨೯ ॥

ಇಂದುವದನೆ ಕೇಳಾ ವಿದ್ಯೆಯೊಳವ । ನೊಂದು[3] ನುಡಿವುತಲ್ಲಿರದೆ ॥
ಇಂದಗಿಯೆಂಬ ಕುವರಗೂಡಿ ಲಂಕೆಯ । ಬಂದು ಪೊಕ್ಕನು ದಶವದನ[4] ॥ ೩೦ ॥

---

ಯೋಜಕವೆಂದು ಭಾವಿಸಿರಿ ॥ ೨೩ ॥ ಎಲೈ ಚೇಳಿನಿಯೇ, ಹೀಗೆ ರಾವಣನು ಪ್ರಜ್ಞಪ್ತಿವಿದ್ಯೆಯೊಡನೆ ಹೇಳುತ್ತಿದ್ದನು ಆದರೆ ಪುಣ್ಯವು ತೊಲಗಿಹೋಯಿತೆಂದರೆ, ಅಂಥವನನ್ನು ಯಾರೇ ಆದರೂ ಬಿಡದೆ ಇರುವರೆ? ॥ ೨೪ ॥ ಪುಣ್ಯವೆಂಬ ಅಂಗನೆಯ ಆಲಿಂಗನದಿಂದ ನಡಿಲಿದ ಮನುಷ್ಯರನ್ನು ಹೆಂಡಿರುಮಕ್ಕಳೂ, ಬಂಧುಗಳೂ, ಸ್ನೇಹಿತರೂ ಬಿಟ್ಟು ಹೋಗುವರು ॥ ೨೫ ॥ ಚೇಳಿನಿಯೇ. ಪುಣ್ಯವು ದೂರವಾದ ಮನುಷ್ಯನಿಗೆ ನಂಟರು ಮುಖತಿರುಗಿಸುವರು, ಅಂಗರಕ್ಷಕಭಟರು ಕಪಟಿ-ಗಳಾಗುವರು, ಉಳಿದ ಜನಸಮೂಹವು ಕಂಟಕವಾಗಿ ಪರಿಣಮಿಸುವುದು ॥ ೨೬ ॥ ಪುಣ್ಯಹೀನರಿಗೆ ಲೋಹವನ್ನು ಚಿನ್ನ-ವಾಗಿ ಮಾಡತಕ್ಕ ಪರುಷಮಣಿಯು ಕಲ್ಲೆನಿಸುವುದು, ಕಲ್ಪವೃಕ್ಷವು ಕಾಡಿನ ಮರವೆನಿಸುವುದು, ಕಾಮಧೇನುವು ಬಂಜೆಯೆನಿಸು ವುದು, ಅಮೃತವು ವಿಷವಾಗಿ ಪರಿಣಮಿಸುವುದು ॥ ೨೭ ॥ ಪುಣ್ಯವು ತೊಲಗಿ ಹೋದ ಮೇಲೆ ಕುಲದಿಂದಾಗಲೀ, ಪರಾ ಕ್ರಮದಿಂದಾಗಲಿ, ತಾರುಣ್ಯದಿಂದಾಗಲಿ, ಸೌಂದರ್ಯದಿಂದಾಗಲಿ, ಬುದ್ಧಿಚಾತುರ್ಯದಿಂದಾಗಲಿ, ಬಹಳ ವಿದ್ಯೆಗಳಿಂದಾಗಲಿ ಏನೂ ಪ್ರಯೋಜನವಿಲ್ಲ ॥ ೨೮ ॥ ಪುಣ್ಯವುಳ್ಳವನು ಒಳ್ಳೆಯ ಗುಣವಂತನೂ ಸಜ್ಜನಶೀಲವುಳ್ಳವನೂ ಪರಾಕ್ರಮಿಯೂ ಎನಿಸು ವನು ಪುಣ್ಯವಂತನನ್ನು ಎಲ್ಲರೂ ಹೊಗಳುವರು ಆದುದರಿಂದ ಯಾರಿಗಾದರೂ ಪುಣ್ಯವೇ ಮುಖ್ಯ ॥ ೨೯ ॥ ಎಲೈ ಚೇಳಿನಿಯೇ ರಾವಣನು ಹೀಗೆ ಪ್ರಜ್ಞಪ್ತಿವಿದ್ಯೆಯೊಡನೆ ನೊಂದು ನುಡಿದು ಅಲ್ಲಿ ನಿಲ್ಲದೆ, ಇಂದಗಿ ಎಂಬ ತನ್ನ ಮಗನೊಡನೆ ಬಂದು ಲಂಕೆಯನ್ನು ಪ್ರವೇಶಿಸಿದನು ॥ ೩೦ ॥ ರಾವಣನು ಅರಮನೆಗೆ ಬಂದು. ಸ್ನಾನಭೋಜನಗಳನ್ನು ತೀರಿಸಿ, ಒಡನೆ

---

[1] ನಿರರ್ಥಕ ನನಗೆ (ಚ) [2] ಪುರುಷನನಾರಾರು (ಚ) [3] ಯೊಳಗಾನೊಂದು (ಚ) [4] ಪೊಕ್ಕನು ಭರದಿಂದ (ಕ).

ಅರಮನೆಯನು ಪೊಕ್ಕು ಸ್ನಾನ ಭೋಜನ ಗೈ । ದಿರದೆ ಚಾವಡಿಗವ ಬಂದು ॥
ನೆಱೆದರಸುಗಳಿಕ್ಕೆಲದೊಳು ನಿಂದಿರೆ ತಾನು[1] । ಕರಿವೈರಿ ಪೀಠದಿ ಕುಳಿತು[2] ॥ ೩೧ ॥

ಕರಗ ಕನ್ನಡಿ ಗಿಂಡಿ ಹಡಪ[3] ಚಾಮರ ಸೀ । ಗುರಿ ಕುಂಚ ಡವಕೆ ಪಾವುಗೆಯ[4] ॥
ಕರದೊಳಗಾಂತಿರ್ಪ ಸತಿಯರಿಂದೋಲಗ । ಕರಮೆಸೆದುದು ಕಮಲಾಕ್ಷಿ ॥ ೩೨ ॥

ಮಕುಟಬದ್ಧರುಗಳಿಂ ಮನ್ನೆಯರಿಂ ನೃಪ । ನಿಕರದಿಂ ರಾರಾಜಿಸುವ ।
ಸುಕುಮಾರರಿಂದವನೋಲಗ ತೇಜವ । ಪ್ರಕಟಸುತೆಸೆದುದಬ್ಜಾಕ್ಷಿ ॥ ೩೩ ॥

ಒಡಹುಟ್ಟಿದವರಿಂದೊಡನಾಡಿದವರಿಂ । ದೊಡನುಂಡವರುಗಳಿಂದೆ ॥
ಪಡೆದ ಮಕ್ಕಳುಗಳಿಂ ಪಂಥದಾಳ್ಗಳ ಬಲು । ಗಡಣದಿಂದೆಸೆದುದಬ್ಜಾಕ್ಷಿ[5] ॥ ೩೪ ॥

ತೇಜಿಷ್ಠರಿಂದುರೆ ದುರ್ಗಾಧಿಪರಿಂ । ದೋಜೆವೇಳುವ ಬುಧರಿಂದೆ ॥
ರಾಜಾಧಿರಾಜರಿಂ ವಿದ್ಯಾಧರರಿಂದೆ । ರಾಜಿಸಿದುದು ಸಭೆಯವನ ॥ ೩೫ ॥

ಮಂತ್ರಿ ಮನ್ನೆಯರಿಂದೆ[5] ಬಲುಕರಣಿಕರಿಂದೆ । ತಂತ್ರಜ್ಞನಿಚಯಗಳಿಂದೆ ॥
ಮಂತ್ರವಾದಿಗಳಿಂದೆ ವಿದ್ವಾಂಸರಿಂ ಸಭೆ । ಯಂತ್ರಜ್ಞರಿಂದೊಪ್ಪಿತಬಲೆ ॥ ೩೬ ॥

ಗಡಿಯ ಮನ್ನೆಯರಿಂ ಗಾಯಕರಿಂ ಬಲು । ಪಡೆವಳರಿಂ ರಾವುತರಿಂ ॥
ಕಡುಗಲಿಗಳ ಸಮುದಾಯದಿಂದಾ ಸಭೆ । ಪಡೆದುದು ಕಣ್ಗೆ ಚೆಲ್ವಿಕೆಯ ॥ ೩೭ ॥

ಪಂಥದಾಳುಗಳಿಂ ಪರಿಹಾಸಕರಿಂ । ದಂತಸ್ಥವರಿವವರಿಂದೆ ॥
ಮಂತ್ರಣದವರಿಂ ಮನೋಹರವಾದುದಾ । ಕಂತುಸನ್ನಿಭನಾಸ್ಥಾನ ॥ ೩೮ ॥

---

ಓಲಗಶಾಲೆಗೆ ಬಂದನು. ಅಲ್ಲಿ ನೆರೆದಿದ್ದ ರಾಜರುಗಳು ತನ್ನ ಎರಡೂ ಪಾರ್ಶ್ವಗಳಲ್ಲಿ ಇರುತ್ತಿರಲು, ಸಿಂಹಾಸನದಲ್ಲಿ ಕುಳಿತನು. ॥ ೩೧ ॥ ಎಲೈ ಚೇಳಿನಿಯೇ, ಆ ರಾವಣನ ಓಲಗವು ಗಡಿಗ, ಕನ್ನಡಿ, ಗಿಂಡಿ, ಎಲೆಸಂಚಿ, ಚಾಮರ, ಬೀಸಣಿಗೆ, ಕುಂಚ, ಉಗುಳುಬುಡ್ಡಿ, ಪಾದುಕೆ—ಮುಂತಾದವುಗಳನ್ನು ಹಿಡಿದುಕೊಂಡಿರುವ ಹೆಂಗುಸರಿಂದ ಚೆನ್ನಾಗಿ ಶೋಭಿಸುತ್ತಿತ್ತು. ॥ ೩೨ ॥ ಕಿರೀಟಧಾರಿಗಳಿಂದಲೂ, ಜನನಾಯಕರಿಂದಲೂ, ರಾಜಸಮೂಹದಿಂದಲೂ, ಮೆರೆಯುತ್ತಿರುವ ಕುಮಾರರಿಂದಲೂ ಆ ರಾವಣನ ಓಲಗವು ತೇಜೋಮಯವಾಗಿದ್ದಿತು. ॥ ೩೩ ॥ ಆ ರಾಜಸಭೆಯು ರಾವಣನ ಒಡಹುಟ್ಟಿದವರಿಂದಲೂ, ಒಡನಾಡಿದವರಿಂದಲೂ, ಒಡನುಂಡವರಿಂದಲೂ, ಪಡೆದ ಮಕ್ಕಳಿಂದಲೂ, ಪಂಥದ ವೀರರ ಸಮೂಹದಿಂದಲೂ ಶೋಭಿಸಿತು. ॥ ೩೪ ॥ ರಾವಣನ ಸಭೆಯು ಕುದುರೆಸವಾರರಿಂದಲೂ, ದುರ್ಗದ ಅಧಿಕಾರಿಗಳಿಂದಲೂ. ಮಾರ್ಗದರ್ಶನಮಾಡುವ ಬ್ರಾಹ್ಮಣರಿಂದಲೂ, ಮಹಾರಾಜರಿಂದಲೂ, ವಿದ್ಯಾವಂತರಿಂದಲೂ ಶೋಭಿಸಿತು. ॥ ೩೫ ॥ ಮಂತ್ರಿಗಳಲ್ಲಿ ಮಾನ್ಯರಾದವರಿಂದಲೂ ಬಹಳ ಮಂದಿ ಲೆಕ್ಕಪತ್ರ ಬರೆವವರಿಂದಲೂ. ತಂತ್ರವನ್ನರಿತವರ ಸಮೂಹದಿಂದಲೂ, ಮಂತ್ರವಾದಿಗಳಿಂದಲೂ, ಪಂಡಿತರಿಂದಲೂ, ಯಂತ್ರವನ್ನು ಬಲ್ಲವರಿಂದಲೂ ಕೂಡಿದ್ದಿತು ॥ ೩೬ ॥ ರಾಜ್ಯದ ಗಡಿಯಲ್ಲಿರುವ ಜನನಾಯಕರಿಂದಲೂ, ಸಂಗೀತಜ್ಞರಿಂದಲೂ, ಸೇನಾಪತಿಗಳಿಂದಲೂ. ಕುದುರೆಸವಾರರಿಂದಲೂ, ಮಹಾಪರಾಕ್ರಮಿಗಳ ಸಮೂಹದಿಂದಲೂ ಆ ಸಭೆಯು ಕಣ್ಣಿಗೆ ಸೊಗಸಾಗಿ ತೋರುತ್ತಿತ್ತು. ॥ ೩೭ ॥ ಪಂಥವನ್ನಾಡುವವರಿಂದಲೂ, ನಗೆಗಾರರಿಂದಲೂ. ಮನೋವಿಜ್ಞಾನಿಗಳಿಂದಲೂ,

---

[1] ದೊಳಿರೆ ಕುಳಿತನು (ಚ). [2] ಪೀಠಾಗ್ರದೊಳು (ಚ). [3] ಚವರ ಕರ್ಪೂರಗರಡಗೆ ಡವಕೆಯ (ಚ). [4] ದೆಸೆದುದಾಸ್ಥಾನ (ಚ).
[5] ಮಂತ್ರಿಮಂಡಳಿಯಿಂದೆ (ಚ).

ಸೂಳೆಯರಿಂದೆ ಸೂಳಾಯತದವರಿಂದೆ । ಮೇಳದ ಜನರುಗಳಿಂದೆ ॥
ಕಾಳೆಗದಾಳಿಂದೆ ಕಣ್ಗೆಸೆದುದನೇನ । ಪೇಳುವೆ ಪೆಣ್ಗಳ ರನ್ನೆ ॥ ೩೯ ॥

ಹಸ್ತಗಟ್ಟಿನ ಕಂಠಮಾಲೆಯ ಪದಕದ । ಮುತ್ತಿನ ತೋರ ಕಡುಕಿನ ॥
ಕೆತ್ತಿದ ವಜ್ರಮಾಣಿಕಗಡಗದ ಭೂ । ಪೋತ್ತಮರುಗಳಿಹರಲ್ಲಿ ॥ ೪೦ ॥

ಮೇಲು ರನ್ನದ ಬಾಹುಪೂರದ ಉಳಿಗಳಿಂ[1] । ಕೀಲಗೆಯುಂಗುರದಿಂದ[2] ॥
ಕಾಲ ಪೆಂಡೆಯದ[3] ಭೂಪಾಲರಿಂದೋಲಗ । ಲೀಲೆಯನೀವುದು ಕಣ್ಗೆ ॥ ೪೧ ॥

ಸಿರಪಚ್ಚೆವಳುಕಿನ ವೀಟಿಕೆಯಿಂ[4] ಕ । ಸ್ತೂರಿ ಪೊಟ್ಟಿನಿಂ ಕಮ್ಮಲರ[5] ॥
ಸಿರಿಗಂಪಿನ ಗರಗರಿಕೆಯ[6] ಗರುವರಿಂ । ಪಿರಿದು ರಂಜಿಸಿದುದೋಲಗವು ॥ ೪೨ ॥

[7]ಮುರಿದ ಚಿಮ್ಮುರಿ ಪೊಂಬೊಗರಿದುಜುಬು ಸಿಂ । ಗರಿಸಿದ ಜುಂಗಿನ ಕೊನೆಯ ॥
ಬರಹದ ಚಿಂದಿ ಕುಲಾವಿಯ ದೊರೆಗಳ । ನೆರವಿಯಿಂದೆಸೆದುದೋಲಗವು[7] ॥ ೪೩ ॥

ಅನುಲೇಪನದಿಂ ದುಗುಲವಚ್ಚಡದಿಂದ[8] । ಮಿನುಗುವ ರನ್ನದೊಡವಿನಿಂ ॥
ಅನುವಡೆದೆಸೆವ ಜನರುಗಳಿಂದಾ ಸಭೆ । ಮನಕೆ ಮಂಗಲವೀವುತಿಹುದು ॥ ೪೪ ॥

ಬಣ್ಣದುಟಿಯ ಬಡಬಾಸೆಯ ಮೊಗವೆಲ್ಲ । ಕಣ್ಣ ಕನಕದಾವರೆಯ ॥
ಬಣ್ಣವನೇಳಿಪ ಮೆಯ್ಯ ಪೂಗಂಪಿನ[9] । ಪೆಣ್ಗಳಹುದವನೋಲಗದೊಳು ॥ ೪೫ ॥

---

ಗುಪ್ತಾಲೋಚಕರಿಂದಲೂ ಮನ್ನಿಸಲ್ಪಡುತ್ತಿರುವ ರಾವಣನ ಆಸ್ಥಾನವು ರಮಣೀಯವಾಗಿತ್ತು. ॥ ೩೮ ॥ ಸೂಳೆಯರಿಂದಲೂ, ಹಂಗುರದ ಆಳುಗಳಿಂದಲೂ, ಮೇಳದ ಜನರಿಂದಲೂ, ಯುದ್ಧವೀರರಿಂದಲೂ ಶೋಭಿಸುತ್ತಿದ್ದುದನ್ನು ನಾನು ಏನು ಹೇಳಲಿ! ॥ ೩೯ ॥ ಮುಂಗೈಗೆ ಹಸ್ತಗಟ್ಟನ್ನು ಧರಿಸಿದ, ಕಂಠಮಾಲೆ-ಪದಕ-ಮುತ್ತಿನ ದೊಡ್ಡ ಕುಟುಕುಗಳನ್ನು ಹಾಕಿರುವ, ಕೆತ್ತಿದ ವಜ್ರಮಾಣಿಕ್ಯಗಳ ಕಡಗಗಳನ್ನು ತೊಟ್ಟಿರುವ ಶ್ರೇಷ್ಠ ರಾಜರು ಆ ಸಭೆಯಲ್ಲಿದ್ದರು. ॥ ೪೦ ॥ ಶ್ರೇಷ್ಠರತ್ನದ ಬಾಹುರಿಯಿಂದಲೂ, ಉಳಿಗಳಿಂದಲೂ, ಕೀಲಗೆಯ ಉಂಗುರದಿಂದಲೂ, ಕಾಲಿನ ಪೆಂಡೆಯದಿಂದಲೂ ಕೂಡಿದ ರಾಜರಿಂದ ಆ ಸಭೆಯು ಕಣ್ಣಿಗೆ ಸೊಗಸಾಗಿದ್ದಿತು ॥ ೪೧ ॥ ಕರ್ಪೂರದವೀಳ್ಯದಿಂದಲೂ, ಕಸ್ತೂರಿತಿಲಕದಿಂದಲೂ, ಪರಿಮಳಿಸುವ ಹೂಗಳ ಸಿರಿಗಂಪಿನಿಂದಲೂ, ಕೂಡಿದ ಸೊಬಗಿನ ಗೌರವಶಾಲಿಗಳಿಂದ ಆ ರಾಜಸಭೆಯು ಚೆನ್ನಾಗಿ ಶೋಭಿಸಿತು ॥ ೪೨ ॥ ಮುರಿದಂತೆ ತೋರುವ ಜುಟ್ಟು, ಚಿನ್ನದ ಬುಗರಿಯಂತಿರುವ ತುರುಬು, ಶೃಂಗರಿಸಿದ ಜುಂಗಿನ ಕೊನೆಯಿರತಕ್ಕ-ಬರಹವುಳ್ಳ ಶಿರಸ್ತ್ರಾಣ-ಗಳಿಂದ ಕೂಡಿದ ರಾಜಸಮೂಹದಿಂದ ಆವನ ಓಲಗವು ಶೋಭಿಸಿತು ॥ ೪೩ ॥ ಅನುಲೇಪ, ರೇಶಿಮೆವಸ್ತ್ರ, ಹೊಳೆವ ರತ್ನಾಭರಣ ಮುಂತಾದವುಗಳಿಂದ ಶೃಂಗರಿಸಿಕೊಂಡ ಜನರಿಂದ ಆ ಸಭೆಯು ಮನಸ್ಸಿಗೆ ಶುಭವನ್ನು ಉಂಟುಮಾಡುತ್ತಿತ್ತು. ॥ ೪೪ ॥ ಆ ರಾವಣನ ಓಲಗದಲ್ಲಿ ಬಣ್ಣಹಾಕಿದ ತುಟಿಯುಳ್ಳ, ತೆಳುವಾದ ಉದರರೋಮಪಂಕ್ತಿಯ, ವಿಶಾಲವಾದ ಕಣ್ಣುಳ್ಳ, ಹೊಂದಾವರೆಯ ಬಣ್ಣವನ್ನು ಓಸ್ನೈಸುವ ಶರೀರದ, ಹೂವಿನ ಸುವಾಸನೆಯುಳ್ಳ, ಹೆಂಗುಸರು ಇರುವರು ॥ ೪೫ ॥

---

[1] ಉಳಿಗಳ (ಚ) [2] ಯುಂಗುರಸರದ (ಚ) [3] ಕಾಲ ಉಳಿಯ (ಕ). [4] ವಿಟ್ಟಿಕೆಯಿಂ (ಕ). [5] ಕುಂಕುಮಲತಾ (ಚ). [6] ಗಂಧದ ಮಾ (ಕ)

[7] ಮುರಿದ ಚಿಮುರಿ ಪೊಂಬುಗುರಿದುಜುಬು ಸಿಂ । ಗರಿಸಿದ ಚಿಮುರಿಯ ಕೊನೆಯ ॥
ಬರಹದ ಚಿಂಡಿ ಕುಲಾವಿಯ ದೊರೆಗಳ । ನೆರವಿಯಿಂದೆಸೆದುದಾಸ್ಥಾನ (ಚ).

[8] ದುಗುಲವಸನದಿಂದ (ಚ). [9] ಸುಗಂಪಿನ (ಚ)

ಮದದಾನೆವೈರಿಮಧ್ಯದ ಮಂದಯಾನದ । ಗದಗದಿಸುವ ತೋರ ಮೊಲೆಯ ॥
ಚದುರುನುಡಿಯ ಚಾಟುನೋಟದ ಸುದತಿಯ । ರೊದವಿನಿಂ ಸಭೆ ರಾಜಿಸಿತು ॥ ೪೬ ॥

ಸುಲಿಪಲ್ಲ ಸುಕ್ಕುಗುರುಳುಗಳ ಕಕ್ಕಸ । ಮೊಲೆಯ ನುಣ್ದೊಡೆ[1] ಮುದ್ದುಮೊಗದ ॥
ಲಲಿತಾಂಗಿಯರಿಂದವನೋಲಗ ಕಣ್ಗೆ । ಚೆಲುವಾದುದು ಚೆಂದುಟಿಯಳೆ ॥ ೪೭ ॥

ತೆಱವಾಗು ಸಾಗೆಡಬಲಕೊತ್ತು ಹಿಂದಕೆ । ಹೆಱಸಾರು ಸದ್ದುನಿಲ್ಲೆಂದು ॥
ಒಱಲುವ ಕಟ್ಟಿಗೆಯವರಿಂದಾ ಸಭೆ । ಮೆಱೆದುದು ಕಡುಗಾಡಿವಡೆದು ॥ ೪೮ ॥

ಇಳೆಯಾಣ್ಮರಟ್ಟಿದ ಕಪ್ಪಕಾಣಿಕೆಗಳ । ತಳುವದೆ ಕಾಣಿಸಿ ನೃಪಗೆ[2] ॥
ಕಳುಹಿಸಿ ಕೊಡುವವಸರದವರಿಂ ಸಭೆ । ತಳೆದುದು ಗಾಡಿ ಗಮಕವ ॥ ೪೯ ॥

ಅರಸನೋಲಗಕ್ಕೈದಿ ಪೋಪರೋರೋರ್ವರಂ । ದೊರಸಲು ಮಕುಟತಾಟಣದಿಂ[3] ॥
ಸುರಿದ ಕುಂದಣಮೆಸೆದುದು ಹೊಮ್ಮಿಗ ಹೋದ[4] । ಧರಣಿಯ ಚೆಲ್ವನೇಳಿಸುತ ॥ ೫೦ ॥

ಸವಿಗಡಲಂತೆ ಸಜ್ಜನಚಿತ್ತದಂತಂಗ । ಭವನ ಬಲ್ಪಡೆಯಂದದೊಳು ॥
ದಿವದಂತೆ ದಿವಸೇಂದ್ರನಂತಂಬರದಂ । ತವನೋಲಗವಿಹುದಬಲೆ ॥ ೫೧ ॥

ಇಂತೊಡ್ಡೋಲಗದೊಳಗಿರಲಂದಾ । ಕಂತುಸನ್ನಿಭ ದಶಶಿರಗೆ ॥
ಅಂತರಿಸದೆ ಬಂದೋರ್ವ ಭೀತಿಯೊಳೇ । ಕಾಂತದೊಳೊರೆಯಲಾ ನೃಪತಿ ॥ ೫೨ ॥

ನಸುನಗುತೆಡಬಲದೊಳಗಿರ್ದ ದೊರೆಗಳ । ಮುಸುಡನೀಕ್ಷಿಸುತೆನ್ನ[5] ಮೇಲೆ ॥
ವಶವಲ್ಲದ ಬಲಗೂಡಿ ಬಂದ ಗಡ ಸಾ । ಹಸಿಗ ಶ್ರೀರಾಮ[6]ಚಂದ್ರ ಗಡ ॥ ೫೩ ॥

---

ಸಿಂಹಕಟಿಯ, ಮೆಲುನಡೆಯ, ಅಲುಗುತ್ತಿರುವ ದೊಡ್ಡ ಮೊಲೆಯ, ಚಾತುರ್ಯಯುಕ್ತವಾದ ಮಾತಿನ. ಓರೆನೋಟದ, ಸ್ತ್ರೀ-ಸಮೂಹದಿಂದ ಆ ಸಭೆಯು ಶೋಭಿಸಿತು. ॥ ೪೬ ॥ ಎಲೈ ಕೆಂಪು ತುಟಿಯ ಚೇಳಿನಿಯೇ, ಸ್ವಚ್ಛವಾದ ಹಲ್ಲಿನ, ಗುಂಗುರು ಕೂದಲಿನ, ಕಠಿಣವಾದ ಕುಚದ, ನುಣ್ಣಗಾದ ತೊಡೆಯ, ಮುದ್ದಾದ ಮುಖದ, ಸುಂದರಿಯರಿಂದ ಆ ರಾವಣನ ಸಭೆಯು ಕಣ್ಣಿಗೆ ಸೊಗಯಿಸುತ್ತಿತ್ತು. ॥ ೪೭ ॥ ದಾರಿಬಿಡು, ಹೋಗು, ಎಡಕ್ಕೆ ಹೋಗು, ಬಲಕ್ಕೆ ಒತ್ತು, ಹಿಂದಕ್ಕೆ ಹೋಗು, ಹೆರಸಾರು, ಸದ್ದು ನಿಲ್ಲಿಸು—ಎಂದು ಬೊಬ್ಬಿಡುವ ನಿಯಮಕಾರರಿಂದ ಆ ಸಭೆಯು ಚೆಲುವಾಗಿ ಶೋಭಿಸುತ್ತಿತ್ತು ॥ ೪೮ ॥ ಇತರ ರಾಜರು ಕಳುಹಿಸಿಕೊಟ್ಟ ಕಪ್ಪಕಾಣಿಕೆಗಳನ್ನು ಒಡನೆಯೇ ರಾಜನಿಗೆ ಕಾಣಿಸಿ, ಹಿಂದಕ್ಕೆ ಕಳುಹಿಸಿಕೊಡುವ ಸಮಯ-ನಿಷ್ಠೆಯ ಅಧಿಕಾರಿಗಳಿಂದ ಆ ಸಭೆಯು ಸೌಂದರ್ಯವನ್ನೂ ರೀವಿಯನ್ನೂ ತಾಳಿದ್ದಿತು ॥ ೪೯ ॥ ರಾಜನ ಓಲಗಕ್ಕೆ ಹೋಗಿ ಹಿಂದೆರಳುವ ಒಬ್ಬೊಬ್ಬರು ಪರಸ್ಪರವಾಗಿ ಒರಸಿದಾಗ, ಅವರ ಕಿರೀಟಗಳ ತಾಕಲಾಟದಿಂದ ಚಿನ್ನಗಳು ಕೆಳಗೆ ಬೀಳುತ್ತಿದ್ದವು. ಆ ಬಿದ್ದ ಚಿನ್ನವುಳ್ಳ ನೆಲವು ಚಿನ್ನದ ಜಿಂಕೆ ಹೋದ ನೆಲದ ಚೆಲುವನ್ನು ಮೀರಿಸುವಂತೆ ತೋರುತ್ತಿತ್ತು. ॥ ೫೦ ॥ ಎಲೈ ಚೇಳಿನಿಯೇ, ಆ ರಾವಣನ ಓಲಗವು ಕ್ಷೀರಸಾಗರದಂತೆಯೂ, ಸತ್ಪುರುಷನ ಮನಸ್ಸಿನಂತೆಯೂ, ಮನ್ಮಥನ ಮಹಾಸೇನೆ-ಯಂತೆಯೂ, ಸ್ವರ್ಗದಂತೆಯೂ, ಸೂರ್ಯನಂತೆಯೂ, ಆಕಾಶದಂತೆಯೂ ಕಾಣಿಸುವುದು. ॥ ೫೧ ॥ ಮನ್ಮಥಸದೃಶನಾದ ರಾವಣನು ಹೀಗೆ ಒಡ್ಡೋಲಗದಲ್ಲಿರುವಾಗ ಒಬ್ಬ ದೂತನು ಬಂದು, ಭಯದಿಂದ ಕೂಡಿದವನಾಗಿ, ಗುಟ್ಟಾಗಿ ಏನನ್ನೋ ತಿಳಿಸಿದನು ಆಗ ರಾವಣನು ॥ ೫೨ ॥ ತನ್ನ ಎಡಬಲಗಳಲ್ಲಿದ್ದ ರಾಜರ ಮುಖವನ್ನು ನೋಡುತ್ತ ಕ್ರೋಧ

---

[1] ನುಣ್ಣಡಿ (ಕ)　[2] ಚರರಿಂ (ಕ).　[3] ತಾಡನದಿಂ (ಚ).　[4] ಪೋದ (ಚ).　[5] ನೀಕ್ಷಿಸಿ ನನ್ನ (ಚ).　[6] ಸಾಹಸಿ ಗಡ ರಾಮ (ಚ).

ದಾಟದ ಗಡ ಶರಧಿಯ ನಮ್ಮ[1] ಸೀಮೆಯ । ಲೂಟವಮಾಡಿದ[2] ಗಡ ನಮ್ಮ[3] ॥
ತೋಟ ಬೇಕೆಂದ ಗಡೆಂದವ ತನ್ನ ಲ । ಲಾಟವ ಮುಟ್ಟಿ ನುಡಿದನು[4] ॥ ೫೪ ॥

ರಾಮಲಕ್ಷ್ಮಣರೆಂಬ ಹೆಸರನು ನಾನು ವಿ । ರಾಮವ ಮಾಡುವೆನೆನಗೆ[5] ॥
ಭೂಮಿಗೋಚರರೆಣೆಯಲ್ಲೆಂದು ನುಡಿದನಂ । ದಾ ಮಹೀಪತಿ ಕೋಪದೊಳು ॥ ೫೫ ॥

ಹೆಬ್ಬುಲಿಯರಮನೆ ಹರಿಣನ ಮದುವೆಗೆ । ದಿಬ್ಬಣವೇನಾದಪುದೋ[6] ॥
ಉಬ್ಬಿ ಬಂದೊಡೆಯೆನ್ನ ಮೇಲವ ತನ್ನಯ । ಕೊಬ್ಬ ನಿಲಿಸಿ ತೋರುವೆನು[7] ॥ ೫೬ ॥

ವರವೈನತೇಯನ ಮೇಲೆಳೆವಾವಿನ । ನೆರವಿ ಬಂದೇನ ಮಾಡುವುದು ॥
ಪರಿಮಿತ ಬಲಗೂಡಿ ರಾಮ ಬಂದೆನ್ನಯ । ಧುರಧರಣಿಯೊಳು ನಿಂದಪನೆ ॥ ॥ ೫೭ ॥

ಸಿಂಗದ ಗುಹೆವೊಕ್ಕು ಬಾಳಬಲ್ಲುದೆ ಮಾ । ತಂಗ ಶ್ರೀರಾಮನು ತನ್ನ ॥
ಸಂಗರಕಿದಿರಾದೊಡೆ ಸುರಸತಿಯರ । ಸಂಗಡ ನಲಿದಾಡಿಸುವೆನು ॥ ೫೮ ॥

ಬಲು ವಿದ್ಯೆಯ ಬಲ್ಲ ವಿದ್ಯಾಧರರನು । ತಲೆಯ ಚೆಂಡಾಡುವೆನೆನ್ನ ॥
ಹುಲು ಮಾನಸನಪ್ಪ ರಾಮನಿಂದೆನ್ನಯ । ಕಲಹಕೆ ನಿಂದು ಜೀವಿಪನೆ ॥ ೫೯ ॥

ಅರಗಿನ ಪುತ್ಥಳಿಗಳ ನೆರವಿಗೆ ದ । ಳ್ಳುರಿಯರಮನೆ ಬೀಡಹುದೆ ॥
ಅರವರಿಸದೆ ಬಂದ ರಾಮನನಾ ಯಮ । ಪುರಕೆ ಕಳುಪದೆ ಬಿಟ್ಟಪೆನೆ ॥ ೬೦ ॥

ರಾಹುಮಂಡಲಕಿದಿರಾಗಬಲ್ಲುದೆ ಕೇ । ಳಾ ಹರಿಣಾಂಕನು ತನ್ನ ॥
ಬಾಹುದಂಡದ ಬೇಟೆ[8]ಗಗಿಯದೆ ನಿಂದವ । ನಾಹವವನು ಜಯಿಸುವನೆ ॥ ೬೧ ॥

---

ದಿಂದ ಹೀಗೆ ಹೇಳಿದನು—"ಆ ಸಾಹಸಿಯಾದ ರಾಮನು ಅಜೇಯವಾದ ಸೈನ್ಯವನ್ನು ಕೂಡಿ ನನ್ನ ಮೇಲೆ ಯುದ್ಧಮಾಡಲು ಬಂದಿದ್ದಾನಂತ ! ॥ ೫೩ ॥ ಸಮುದ್ರವನ್ನು ದಾಟಿದನಂತೆ ! ನಮ್ಮ ರಾಜ್ಯವನ್ನು ಹೊಕ್ಕು ಸೂರೆಮಾಡಿದನಂತೆ ! ನಮ್ಮನ್ನು ಯುದ್ಧಕ್ಕೆ ಕರೆಯುತ್ತಿರುವನಂತೆ !" ಎಂದು ರಾವಣನು ತನ್ನ ಹಣೆಯನ್ನು ಮುಟ್ಟಿ ನುಡಿದನು ॥ ೫೪ ॥ 'ರಾಮಲಕ್ಷ್ಮಣ-ರೆಂಬ ಹೆಸರನ್ನೇ ನಾನು ಅಳಿಸಿಬಿಡುವೆನು ! ಭೂಮಿಚರರಾದ ಅವರು ನನಗೆ ಲಕ್ಷ್ಯವೇ ಅಲ್ಲ !' ಎಂದು ರಾವಣನು ಕೋಪ-ದಿಂದ ಹೇಳಿದನು ॥ ೫೫ ॥ ಜಿಂಕೆಯ ಮದುವೆಯ ದಿಬ್ಬಣವು ಹೆಬ್ಬುಲಿಯ ಅರಮನೆಗೆ ಬಂದರೆ ಏನಾದೀತೋ ತಿಳಿಯು ವುದು ಆ ರಾಮನು ಹಿಗ್ಗಿನಿಂದ ನನ್ನ ಮೇಲೆ ಬಂದರೆ, ಅವನ ಕೊಬ್ಬನ್ನು ನಿಲ್ಲಿಸಿಬಿಡುವೆನು ॥ ೫೬ ॥ ಹಾವಿನ ಮರಿಗಳು ಗುಂಪಾಗಿ ಬಂದು ಆ ಗರುಡನನ್ನು ಏನುಮಾಡಬಲ್ಲವು? ರಾಮನು ಅಲ್ಪಸೈನ್ಯವನ್ನು ಕೂಡಿ ಬಂದು, ಯುದ್ಧಭೂಮಿಯಲ್ಲಿ ನನ್ನನ್ನು ಪ್ರತಿಭಟಿಸಬಲ್ಲನೆ? ॥ ೫೭ ॥ ಆನೆಯು ಸಿಂಹದ ಗವಿಯೊಳಗೆ ಹೋಗಿ ಬದುಕಬಲ್ಲುದ? ಅದರಂತೆ ಆ ರಾಮನು ನನ್ನೊಡನೆ ಯುದ್ಧಕ್ಕೆ ಬಂದರೆ, ಅವನನ್ನು ದೇವತಾಸ್ತ್ರೀಯರೊಡನೆ ಕುಣಿದಾಡಿಸುವೆನು (ಅಂದರೆ, ಸಂಹರಿಸುವೆನು) ॥ ೫೮ ॥ ಹಲವಾರು ವಿದ್ಯೆಗಳನ್ನು ತಿಳಿದಿರುವ ವಿದ್ಯಾಧರರ ತಲೆಗಳನ್ನು ಚೆಂಡಾಡುವೆನು ತೃಣಕ್ಕೆ ಸಮಾನನಾದ ರಾಮನು ಬಂದು ನನ್ನೊಡನೆ ಕಾದಾಡಲು ನಿಂತರೆ ಬದುಕುವನೆ? ॥ ೫೯ ॥ ಅರಗಿನ ಗೊಂಬೆಗಳ ಸಮೂಹಕ್ಕೆ ದಟ್ಟವಾದ ಬೆಂಕಿಯ ಅರಮನೆಯು ವಾಸಸ್ಥಾನವಾದೀತೆ? ತಿಳುವಳಿಕೆಯಿಲ್ಲದೆ ಬಂದ ರಾಮನನ್ನು ನಾನು ಯಮನ ಮನೆಗೆ ಕಳುಹಿಸದೆ ಬಿಡುವೆನೆ? ॥ ೬೦ ॥ ಚಂದ್ರನು ರಾಹುಮಂಡಲಕ್ಕೆ ಇದಿರಾಗಬಲ್ಲನೆ? ಆ ರಾಮನು ನನ್ನ ಭುಜದಂಡಕ್ಕೆ ಹೆದರದೆ ನಿಂತು, ಯುದ್ಧ

---

[1] ನನ್ನ (ಚ) [2] ಲೂಟಿಯಾಡಿದ (ಕ) [3] ನನ್ನ (ಚ). [4] ನೋಡಿದನು (ಚ). [5] ಮಾಡದೇನೆನಗೆ (ಕ) [6] ವೇನಾದಪುದೇ (ಚ). [7] ಕೊಬ್ಬನಿರದೆ ನಿಲಿಸುವೆನು (ಚ). [8] ಬೆಟ್ಟೆ (ಚ).

ಎಂದಿಂತು ನುಡಿದ ಪೌಲಸ್ತ್ಯನ ಕೋಪಾಗ್ನಿ । ಯಂದವ ಕಂಡು ಕೈಮುಗಿದು ॥
ಅಂದು ನುಡಿದರು ಕೋಟಾಕೋಟಿ ನೃಪರು ಭೋ । ಯೆಂದಿಂತು[1] ಪಂಥದ ಮಾತ ॥ ೬೨ ॥

ಏಕೆ ನಿನಗೆ ಕೋಪಾಟೋಪ ಬಿಡು ನಾ । ವೀ ಕಾಳಗವ ಮಾಡಿಯವನ ॥
ಆಕಾರಗೆಡಿಸದೆ ಬಂದೊಡೆ ನೀನಮ್ಮ । ಸ್ವೀಕಾರವ ಮಾಡದಿರು ॥ ೬೩ ॥

ವನಧಿಯ ದಾಂಟಬಲ್ಲವ ಲಂಘಿಸನೆ ದೊಡ್ಡ । ವನಜಾಕರವನು ನೃಪತಿ ॥
ಅನಿಮಿಷರನು ಕಾದಿ ಗೆಲುವವರಿಗೆ ಹುಲು । ಮನುಜನ ಗೆಲುವುದಚ್ಚರಿಯೆ ॥ ೬೪ ॥

ಬಲುಗಿರಿಗಳ ನುಂಗುವನ ಬಾಯ್ಗೆ ನೋಡೆ ಪ । ಣ್ಪಲಗಳ ಹಿಡಿವುದೇನರಿದೇ[2] ॥
ಜಲಜಸಂಭವನೇನೆಂದಱಿಯದರಿಗೆ[3] । ಬಲುಹೆ ರಾಮನಗೆಲ್ವುದೆಮಗೆ ॥ ೬೫ ॥

ಎಂದು ನುಡಿದ ನೃಪವೃಂದದ ಮಧ್ಯದಿಂ । ಬಂದಿಂದಗಿಯೆಂಬ ಕುವರ ॥
ಇಂದಿನ ಕಾಳಗವನು ಕೊಡು ನನಗೆ ನೀ । ನೆಂದಂಘ್ರಿಗೆಱಗಿದನವನು[4] ॥ ೬೬ ॥

ನೀನೇಕೆ ಕುವರ ನಿಮ್ಮಯ್ಯ ತಾನೇತಕೆ । ಯಾ ನರನೊಳು ಸೆಣಸುವರೆ ॥
ನಾನೊಬ್ಬನೆ ಸಾಕು ಕಳುಪೆಂದು ನುಡಿದನು । ಸೇನಾಧಿಪತಿ ರಾವಣನಿಗೆ[5] ॥ ೬೭ ॥

ಗಡಿಯನು ದಾಂಟ ನಮ್ಮಯ ಸೀಮೆಯ ಬಲು । ಗಡಿಯ ಹೊಕ್ಕಿರುವವನಿನಿಸು[6] ॥
ಪಡೆಗೂಡಿ ಬಂದನೆಂಬುದನು ವಿಚಾರಿಸಿ । ನುಡಿಯಬೇಕೆಂದವ[7] ನುಡಿದ ॥ ೬೮ ॥

---

ಮಾಡಿ ಜಯಿಸಬಲ್ಲನೆ? ॥ ೬೧ ॥ ಹೀಗೆ ಹೇಳಿದ ರಾವಣನ ಕೋಪಾಗ್ನಿಯ ಸ್ಥಿತಿಯನ್ನು ಅವನ ಸಭೆಯಲ್ಲಿದ್ದ ಅಸಂಖ್ಯ ರಾಜರು ನೋಡಿ, ನಮಸ್ಕರಿಸಿ ಈ ರೀತಿ ಪಂಥದ ಮಾತುಗಳನ್ನಾಡಿದರು. ॥ ೬೨ ॥ "ಎಲೈ ರಾವಣೇಂದ್ರನೇ. ನೀನೇಕೆ ಇಷ್ಟೊಂದು ಸಿಟ್ಟಿನ ಆಡಂಬರವನ್ನು ತಾಳುವೆ? ಬಿಟ್ಟುಬಿಡು. ನಾವು ಹೋಗಿ ಯುದ್ಧಮಾಡಿ ಶ್ರೀರಾಮನನ್ನು ರೂಪಭ್ರಷ್ಟ-ನಾಗಿ ಮಾಡಿಬರುವೆವು. ಹೀಗೆ ಮಾಡಿ ಬಾರದಿದ್ದರೆ, ನೀನು ನಮ್ಮನ್ನು ಹೊರಡಿಸು ॥ ೬೩ ॥ ಎಲೈ ರಾಜನೇ, ಸಮುದ್ರವನ್ನು ದಾಟಬಲ್ಲವನಿಗೆ, ಒಂದು ದೊಡ್ಡ ಸರೋವರವನ್ನು ಲಂಘಿಸುವುದು ಅಸಾಧ್ಯವೆ? ದೇವತೆಗಳನ್ನು ಯುದ್ಧದಲ್ಲಿ ಸೋಲಿಸಬಲ್ಲ ನಮ್ಮಂಥವರು ಹುಲ್ಲಿಗೆಣೆಯಾದ ಮನುಷ್ಯನನ್ನು ಗೆಲ್ಲುವುದು ಆಶ್ಚರ್ಯವೆ? ॥ ೬೪ ॥ ದೊಡ್ಡದಾದ ಬೆಟ್ಟಗಳನ್ನೇ ನುಂಗಬಲ್ಲವನಿಗೆ ಹಣ್ಣುಹಂಪಲುಗಳನ್ನು ನುಂಗುವುದು ಅಸಾಧ್ಯವಾಗುವುದೆ? ಆ ಬ್ರಹ್ಮದೇವನನ್ನೇ ಲೆಕ್ಕಕ್ಕೆ ತಾರದ ಪರಾಕ್ರಮಿಗಳಿಗೆ ರಾಮನನ್ನು ಗೆಲ್ಲುವುದು ಕಷ್ಟವೆ? ॥ ೬೫ ॥ ಈ ರೀತಿಯಾಗಿ ಹೇಳಿದ ರಾಜಸಮೂಹದ ನಡುವಿನಿಂದ ಎದ್ದು. ರಾವಣನ ಮಗನಾದ ಇಂದಗಿಯು ಬಂದನು. 'ಇಂದಿನ ಯುದ್ಧವನ್ನು ಮಾಡಲು ನನಗೆ ಅಪ್ಪಣೆಯನ್ನು ಕೊಡು' ಎಂದು ಅವನು ರಾವಣನ ಪಾದಕ್ಕೆ ನಮಸ್ಕರಿಸಿದನು ॥ ೬೬ ॥ ಆಗ ಸೇನಾಧಿಪತಿಯು—"ಎಲೈ ಕುಮಾರನೇ. ಆ ಮಾನವನೊಡನೆ ಯುದ್ಧಮಾಡಲು ನೀನು ಯಾಕೆ? ನಿನ್ನ ತಂದೆಯಾದರೂ ತಾನೇಕೆ? ನಾನೊಬ್ಬನೇ ಸಾಕು. ಎಲೈ ರಾಜನೇ, ನನ್ನನ್ನು ಕಳುಹಿಸು" ಎಂದು ರಾವಣನಿಗೆ ಹೇಳಿದನು ॥ ೬೭ ॥ ಆಗ ಇನ್ನೊಬ್ಬನು ಹೀಗೆ ಹೇಳಿದನು 'ನಾವು ಏನು ಮಾತಾಡಬೇಕಾದರೂ. ಆ ರಾಮನು ನಮ್ಮ ಸೀಮೆಯ ಗಡಿಯನ್ನು ದಾಟಿ ಒಳಹೊಕ್ಕಿರುವನೆಂಬುದನ್ನೂ ಇಷ್ಟೊಂದು ಮಹಾ ಸೈನ್ಯದೊಡನೆ ಬಂದಿರುವನೆಂಬುದನ್ನೂ ವಿಚಾರಿಸಿಕೊಳ್ಳಬೇಕು" ॥ ೬೮ ॥ ಆಗ ಒಬ್ಬನು—"ನಾನು ಎಲ್ಲಾ ಸಿದ್ಧತೆಯೊಡನೆ

---

[1] ಯೆಂದೆದ್ದು (ಚ)  [2] ಹಿಡಿಯದೇನಿಹುದು (ಚ)  [3] ದಱಿಯದನಿಗೆ (ಚ)  [4] ಗೆಱಗಿದನವನ (ಚ)  [5] ರಾವಣನೊಳು (ಚ). [6] ಛವನಿನಿತು (ಚ)  [7] ಬೇಕೆಂದೋರ್ವ (ಕ).

ಸರ್ವಸನ್ನಹದಿಂದ[1] ಪೋಗಿಯವನ ಬಲು । ಗರ್ವವ ಮುಱಿದು ನಾನವನ ॥
ಉರ್ವಿಯೊಳಿನಿಸಿಲ್ಲದಂತು ಮಾಡುವೆನೆಂದು । ಸರ್ವರೊಳಾಡಿದನೋರ್ವ ॥ ೬೯ ॥

ಒಬ್ಬರಿಬ್ಬರು ಪೋಗಿ ಕೆಣಕಿ ಗಂಡೇಳಿಸಿ । ಉಬ್ಬಕೊಡದೆ ನಾವು ನಮ್ಮ ॥
ಹೆಬ್ಬಲವೆರಸಿ ನಡೆದು ಕಾದಿ ರಾಮನ । ಕೊಬ್ಬ ನಿಲಿಸುವುದು ಕಾರ್ಯ ॥ ೭೦ ॥

ಗರಗಸವೇಕೆ ಬಾಳೆಯ ಪಣ್ಗೆ ಗುಬ್ಬಿಯ । ನೆರವಿಗೆ ಡೆಂಕಣಿಯೇಕೆ ॥
ಪರಿಮಿತ ಬಲಕಪರಿಮಿತ ಬಲವಿದೇಕೆ । ನರನಾಥ ಕೇಳೆಂದನೊರ್ವ ॥ ೭೧ ॥

ಬೆಳುದಿಂಗಳೊಳು ಬೆಮರುವರಿಗೆ ಬೆಂಕಿಯ । ಬಳಗವೇತಕೆ ನಿನ್ನ ಪೆಸರ್ಗೆ ॥
ಅಳುಕುವಗೇಕೆಸಗುವೆ ಕೊಳುಗುಳವನೆಂ । ದಿಳೆಯಾಣ್ಮಗೋರ್ವ ನುಡಿದನು ॥ ೭೨ ॥

ಹಿಮುಕಂಜುವುದೆಯಗ್ನಿಜ್ವಾಲೆ ಹುಲುಮೀನ್ಗೆ । ತಿಮಿ ತಿಮಿಂಗಿಳ ಬೆದಱುವದೆ ॥
ಬೆಮರ ಬಲ್ಲುದೆ ಗಾಳಿ ಬಿಸಿಲಿಗೆ ರಾಮನ । ಸಮರಕೆಣಿಕೆಯೇಕೆ ನಿನಗೆ[2] ॥ ೭೩ ॥

ಬರಹದ ಪಾವ ಪಿಡಿವೊಡೆ ಗರುಡಮಂತ್ರೋ । ಚ್ಚರಣೆಯೇತಕೆ ಬಯಲ್ಗೊಱೆಯ ॥
ನೆರವಿಗೆ ಹಱಿಗೋಲದೇಕೆ ರಾಮನಿಗೇಕೆ[3] । ಪಿರಿದಪ್ಪ ಬಲ ನಮಗೆಂದ ॥ ೭೪ ॥

ಎಡಬಲದೊಳಗಿರ್ದ ನೃಪರುಗಳಿಂತೆಂದು । ನುಡಿವುತಿರಲು ತಮತಮಗೆ ॥
ಕೆಡಬಾರದು ಕಾರ್ಯವೆಂದೇಕಾಂತದೊಳ್ । ನುಡಿದನು ಮಂತ್ರಿಯಿಂತೆಂದು[4] ॥ ೭೫ ॥

ದೊಡ್ಡವ ವಿದ್ಯಾಧರರೊಳೀ ಬಾಲಿಯ । ಧಡ್ಡೆ[5]ಮಾಡದೆ ಕೊಂದರವರು[6] ॥
ಅಡ್ಡಾಕಿಲ್ಲದೆ ದಾಂಟಿ ಸಮುದ್ರವ । ವೊಡ್ಡಿದೋಱಿದರು ಬಂದೆಮಗೆ ॥ ೭೬ ॥

---

ಹೋಗಿ ಅವನ ಗರ್ವವನ್ನು ಮುರಿದು, ಅವನು ಈ ಭೂಮಿಯಲ್ಲೇ ಇಲ್ಲವೆಂಬಂತೆ ಮಾಡುವೆನು" ಎಂದು ಎಲ್ಲರೂ ತಿಳಿಯುವಂತೆ ಹೇಳಿದನು ॥ ೬೯ ॥ ಆಗ ಬೇರೊಬ್ಬನು ಹೀಗೆ ಹೇಳಿದನು —ಒಬ್ಬರಿಬ್ಬರು ಹೋಗಿ ಕೆಣಕಿ, ಅವರಲ್ಲಿ ಪರಾಕ್ರಮವನ್ನು ಕೆರಳಿಸಿ ಹಿಗ್ಗಲು ಬಿಡದೆ. ನಾವು ನಮ್ಮ ಮಹಾಸೇನೆಯೊಡನೆ ಹೋಗಿ ಕಾದಾಡಿ, ರಾಮನ ಗರ್ವವನ್ನು ನಿಲ್ಲಿಸುವುದೇ ಈಗ ತಕ್ಕುದಾದ ಕೆಲಸವು ॥ ೭೦ ॥ ಎಲೈ ರಾಜನೇ, ಬಾಳೆಯ ಹಣ್ಣಿಗೆ ಗರಗಸವೇಕೆ? ಗುಬ್ಬಿಹಕ್ಕಿಗಳ ಸಮೂಹಕ್ಕೆ ಬತ್ತೇರಿಯೇಕೆ? ಅಲ್ಪ ಸೇನೆಯನ್ನು ಎದುರಿಸಲು ನಮ್ಮ ಮಹಾಸೈನ್ಯವೇಕೆ?" ಎಂದು ಒಬ್ಬನು ಹೇಳಿದನು ॥ ೭೧ ॥ ಬೆಳುದಿಂಗಳಲ್ಲಿ ಬೆವರತಕ್ಕವರಿಗೆ ಬೆಂಕಿಯ ರಾಶಿಯೇಕೆ? ನಿನ್ನ ಹೆಸರನ್ನು ಕೇಳಿದಾಗಲೇ ಅಂಜುವವರೊಡನೆ ಯುದ್ಧವನ್ನು ಮಾಡುವ ಆವಶ್ಯಕತೆಯೇನಿದೆ? ಎಂದು ರಾವಣನಿಗೆ ಒಬ್ಬನು ಹೇಳಿದನು ॥ ೭೨ ॥ ಬೆಂಕಿಯ ಜ್ವಾಲೆಯು ಹಿಮಕ್ಕೆ ಹೆದರುವುದ? ಅಲ್ಪವಾದ ಮೀನಿಗೆ ತಿಮಿ-ತಿಮಿಂಗಿಲಗಳು ಹೆದರುವವೆ? ಬಿಸಿಲಿಗೆ ಗಾಳಿ ಬೆವರುವುದೆ? ಆದುದರಿಂದ ರಾಮನೊಡನೆ ಯುದ್ಧಮಾಡುವ ವಿಷಯದಲ್ಲಿ ನಿನಗೆ ಯೋಚನೆಯೇಕೆ? ॥ ೭೩ ॥ ಚಿತ್ರದ ಹಾವನ್ನು ಹಿಡಿಯಬೇಕಾದರೆ ಗಾರುಡಮಂತ್ರವನ್ನು ಉಚ್ಚರಿಸಬೇಕೆ? ಬಯಲ ಹೊಳೆಗೆ ಇಳಿಯಬೇಕಾದರೆ ತೆಪ್ಪ ಬೇಕೆ? ಆ ರಾಮನೊಡನೆ ಯುದ್ಧ ಮಾಡಲು ನಮಗೆ ದೊಡ್ಡ ಸೈನ್ಯವೇಕೆ? ॥ ೭೪ ॥ ರಾವಣನ ಎಡಬಲ ಕಡೆಗಳಲ್ಲಿ ಇದ್ದ ರಾಜರು ಹೀಗೆ ತಾವು ತಾವಾಗಿ ಹೇಳುತ್ತಿರಲು. ಕಾರ್ಯವು ಕೆಟ್ಟುಹೋಗಬಾರದೆಂಬ ಉದ್ದೇಶದಿಂದ ಮಂತ್ರಿಯು ಏಕಾಂತದಲ್ಲಿ ಹೀಗೆ ಹೇಳಿದನು ॥ ೭೫ ॥ ರಾಮ ಲಕ್ಷ್ಮಣರು ಸಾಮಾನ್ಯರಲ್ಲ ವಿದ್ಯಾಧರರಲ್ಲಿ ದೊಡ್ಡವನೆನಿಸಿದ ವಾಲಿಯನ್ನು ಲೀಲಾಜಾಲವಾಗಿ ಕೊಂದಿದ್ದಾರೆ ತಡೆ

---

[1] ಸನ್ನಹವಾಗಿ (ಚ). [2] ನಿಮಗೆ (ಚ) [3] ರಾಘವಗೇಕೆ (ಚ) [4] ಮಂತ್ರಿ ರಾವಣಗೆ (ಚ) [5] ಧಡ್ಡೆ (ಚ) [6] ಕೊಂದವನು (ಕ).

ರಾಮಲಕ್ಷ್ಮಣರೆಂಬವರೀ ಭರತದ । ಭೂಮಿಗೆ ಪಿರಿದು ದೊಡ್ಡವರು ॥
ಸಾಮಾನ್ಯರೆನಬೇಡ ನೀನೊಬ್ಬ ಪೊಱಗಾಗಿ । ಭೂಮಿಪರಿಲ್ಲವರ್ಗೆಣೆಯ ॥ ೭೭ ॥

ಕಾರಣಪುರುಷರವರು ವೈಮನಸ್ಸಿನಿಂ[1] । ಹೋರಾಟಗೊಂಡಿದಿರಿಕ್ಕಿ ॥
ವೀರವೆಣ್ಗವಿವೇಕತೆಯ ಪುಟ್ಟಪುದು ನಿನ್ನ । ಸೇರುವೆಯಲ್ಲ ನೃಪಾಲ ॥ ೭೮ ॥

ಒಂದಾದಡೊಂದಹುದವರ್ಗಿದಿರಿಕ್ಕಿ ನೀ । ನಿಂದು ಬಂಡಣವನೆಸಗಲು ॥
ಮುಂದ ವಿಚಾರಿಸುವುದು ರಾಜಕಾರ್ಯಕ್ಕೆ । ಸಂದಿಹು[2]ದೆರವಲ್ಲ ನೃಪತಿ ॥ ೭೯ ॥

ಉಡುಗೊಱೆಗೊಟ್ಟು ಸೀತೆಯ ಬಿಟ್ಟು ಸಂಧಿಯ । ನೊಡನಾಗಿಸಿ ನೀವೆಮ್ಮ ॥
ಗಡಿಯವರೆಂದು ಗುಣವ ಕೊಟ್ಟು ಕಳುಹೆಂದು । ನುಡಿದನು ಮಂತ್ರಿಗಳರಸ ॥ ೮೦ ॥

ಸಮವಲ್ಲದವರೊಳು ಸಮರವನೆಸಗಲು । ಕ್ರಮವಲ್ಲ ರಾಮಚಂದ್ರಮನ ॥
ರಮಣಿರನ್ನಳ ಬಿಟ್ಟು ಸಂಧಿಯ ಮಾಳ್ಪುದು । ಕ್ರಮವೆಂದು ಪೇಳ್ದನವನಿಗೆ[3] ॥ ೮೧ ॥

ನರಿಯಿಂದ ಕರಿವೈರಿ ಪಡೆದುದಿಲ್ಲವೆ ದು । ರ್ಮರಣವ ಮಂತ್ರವಱಿಯದೆ ॥
ಪಿರಿದಾದ ಬಲ ಭುಜ[ಬಲ] ನಿಷ್ಫಲ ನೃಪ । ವರರಿಗೆ ಮಂತ್ರವಿಲ್ಲದೊಡೆ ॥ ೮೨ ॥

ಮಂತ್ರವುಳ್ಳವನೆ ನೃಪತಿ ಮಂತ್ರಿವರ ಬುಧ । ಮಂತ್ರವುಳ್ಳವನೆ ನಿಯೋಗಿ ॥
ಮಂತ್ರವಿಲ್ಲದೊಡಾರಾಗಲಿ ಬಲು ತಳ । ತಂತ್ರದಿಂ ಫಲವಿಲ್ಲ ನೃಪತಿ ॥ ೮೩ ॥

ಅರಸೆ ಚಿತ್ತೈಸು ಸಪ್ತೋಪಾಯಂಗಳ । ಧರಿಸಿ ನಡೆಯದ ನೃಪರಿಗೆ ॥
ಎರವಾಗುವರು ಜನ ಜಯ ಸಿರಿವೆಣ್ಗಳು । ಪರಮಾರ್ಥವೆಂದದ ಪೇಳ್ದ ॥ ೮೪ ॥

---

ಯಿಲ್ಲದೆ ಸಮುದ್ರವನ್ನು ದಾಟಿ, ಸೈನ್ಯವನ್ನು ತಂದಿದ್ದಾರೆ ॥ ೭೬ ॥ ಈ ಭರತಭೂಮಿಯಲ್ಲಿ ರಾಮಲಕ್ಷ್ಮಣರು ಬಹಳ ಶ್ರೇಷ್ಠರು ಅವರನ್ನು ಸಾಮಾನ್ಯರೆಂದು ತಿಳಿಯದಿರು. ನಿನ್ನನ್ನು ಬಿಟ್ಟರೆ, ಅವರಿಗೆ ಸಮಾನರಾದ ರಾಜರು ಯಾರೂ ಇಲ್ಲ. ॥ ೭೭ ॥ ಎಲೈ ರಾಜನೇ, ಅವರು ಕಾರಣ ಪುರುಷರು. ಅವರೊಡನೆ ದ್ವೇಷವನ್ನು ಮಾಡಿ ಹೋರಾಡಿ, ವೀರಾಂಗನೆಗೆ ವಿವೇಕ ಹೀನತೆಯನ್ನು ಉಂಟುಮಾಡುವುದು ನಿನಗೆ ತಕ್ಕುದಲ್ಲ ॥ ೭೮ ॥ ಎಲೈ ರಾಜನೇ, ಅವರೊಡನೆ ಇದಿರಾಗಿ ಯುದ್ಧ ಮಾಡಿದರೆ ಒಂದಕ್ಕೊಂದಾಗಿ ಪರಿಣಮಿಸುವುದು ಆದುದರಿಂದ ಮುಂದಾಲೋಚನೆ ಮಾಡಿಯೇ. ರಾಜಕಾರ್ಯಕ್ಕೆ ಕೈಯಿಕ್ಕ ಬೇಕು. ॥ ೭೯ ॥ ಆದುದರಿಂದ. ಉಡುಗೊರೆ ಕೊಟ್ಟು, ಸೀತೆಯನ್ನು ಬಿಟ್ಟು, ಶ್ರೀರಾಮನೊಡನೆ ಸಂಧಿಮಾಡಿ, ನೀವು ನಮ್ಮ ನೆರೆಯವರೆಂದು ಮನ್ನಿಸಿ ಕಳುಹಿಸು—ಎಂದು ಪ್ರಧಾನಮಂತ್ರಿಯು ಹೇಳಿದನು. ॥ ೮೦ ॥ ಸಮಾನವಲ್ಲದಿರುವ ರಾಜರೊಡನೆ ಯುದ್ಧಮಾಡುವುದು ತಕ್ಕುದಲ್ಲ ಆದುದರಿಂದ ಶ್ರೀರಾಮನ ಮಡದಿಯಾದ ಸೀತೆಯನ್ನು ಬಿಟ್ಟು, ಸಂಧಿಯನ್ನು ಮಾಡುವುದೇ ಯೋಗ್ಯ—ಎಂದು ಮಂತ್ರಿಯು ರಾವಣನಿಗೆ ಹೇಳಿದನು ॥ ೮೧ ॥ ನರಿಯಾದ ಮಂತ್ರಿಗಳ ಮಂತ್ರಾಲೋಚನೆಯನ್ನು ಪಡೆಯದುದರಿಂದ ಸಿಂಹವು ಒಂದು ನರಿಯಿಂದ ದುರ್ಮರಣವನ್ನು ಪಡೆಯಲಿಲ್ಲವೆ? ಮಂತ್ರಾಲೋಚನೆ ಇಲ್ಲವಾದರೆ, ಮಹಾಸೈನ್ಯವೂ, ಪರಾಕ್ರಮವೂ ರಾಜರಿಗೆ ಪ್ರಯೋಜನಕ್ಕೆ ಬರದು ॥ ೮೨ ॥ ಗುಪ್ತಾಲೋಚನೆಯುಳ್ಳವನೇ ರಾಜನು. ಮಂತ್ರಿಯು, ವಿದ್ವಾಂಸನು, ರಾಜದೂತನು ಮಂತ್ರಾಲೋಚನೆಯಿಲ್ಲದವನು ಯಾರೇ ಆಗಲಿ, ಅವನ ಕಪಟತಂತ್ರದಿಂದ ಏನೂ ಪ್ರಯೋಜನವಿಲ್ಲ. ॥ ೮೩ ॥ ಎಲೈ ರಾಜನೇ ಕೇಳು ಸಾಮ-ದಾನ-ಭೇದ-ದಂಡ-ಮಂತ್ರ-ಔಷಧಿ, ಇಂದ್ರಜಾಲ—ಎಂಬ ಏಳು ಬಗೆಯ ಉಪಾಯಗಳನ್ನು ಅನುಸರಿಸದೆ ಇರುವ ರಾಜರಿಗೆ ಐಶ್ವರ್ಯ, ಕೀರ್ತಿ, ಜಯಗಳು

---

[1] ಠವರೊಳೊಯಿ ಮನಸ್ಸಿನಿಂ (ಕ) [2] ರಾಜಕಾರ್ಯರಿಗಿಂದಿಹು (ಕ). [3] ೮೧ನೇ ಪದ್ಯ ಚದಲ್ಲಿಲ್ಲ

ಕುಣಿವ ಮೀಸೆಯ ಕಾಱಿಡುವ ರೋಮಂಗಳಿಂ । ದಣಿವ ಹುಬ್ಬುಗಳ ಚಿಮ್ಮಿಸುತ[1] ॥
ರಣದಾವೇಶ ಪುಟ್ಟುವ[2] ರಾವಣನ ಕಂ । ಡೆಣಿಕೆ ಪುಟ್ಟಿತು ಸಚಿವನಿಗೆ ॥ ೮೫ ॥

ಕೆಟ್ಟಿತಿನ್ನೇಕೀ ಕಾರ್ಯವೆನುತ ಮೂಗು । ವಟ್ಟವನೇಕಾಂತವನು ॥
ಬಿಟ್ಟು ಕೆಲಕೆ ಬಂದ ಕೆಡುವ ಕಾಲಕೆ ಬುದ್ಧಿ । ಪುಟ್ಟದು ಮನುಜರಿಗಬಲೆ ॥ ೮೬ ॥

ಬಲು ಪಿತ್ತಜ್ವರಿತನಾದವನಿಗೆ ಸಕ್ಕರೆ । ಚಿಲಿವಾಲು ಕೈಪೆಯಾದಂತೆ ॥
ಸಲೆ ಬುದ್ಧಿವೇಳ್ದ ಮಂತ್ರೀಶನ ಮಾತಂದು । ನೆಲಸಿತಿಲ್ಲವನೆದೆಯೊಳಗೆ ॥ ೮೭ ॥

ಕಡುಕಾಮಿಗಳು ಮೂರ್ಖರು ದಯಾಹೀನರು । ಜಡರು ಕಲಿಗಳರಸುಗಳು ॥
ಪಿಡಿದುದ ಬಿಡರು ಬಾಹಿರರಾಗಲಾಗದು । ನುಡಿದು ಹಿತವನವರೊಡನೆ ॥ ೮೮ ॥

ಬುದ್ಧಿವೇಳಿದ ಮಂತ್ರಿಯ ಮಾತ ಮೀಱಿಯಾ । ಪದ್ಧತಿಕೆಯಲಿ ನಡೆಯದೆ ॥
ಉದ್ಧತಿಕೆಯಲಿ ನಡೆದ ನೃಪತಿಗೆ ಕೇಡು । ಸಿದ್ಧಾಂತವೆಂದು ಪೇಳಿದನು ॥ ೮೯ ॥

ಹಾಱುವಳಿಂದಿರೆ ಜಸ ಜಯವಧು ಕಾ । ಲೂಱುವಳಳಿಜಸವೆಂಬ ॥
ನೀಱಿ ನಿಶ್ಚಯ ಮಂತ್ರೀಶನ ಮಾತನು । ಮೀಱಿ ನಡೆವ ನೃಪವರಗೆ ॥ ೯೦ ॥

ಮೊಗದೆಗೆವರು ತನಗುಳ್ಳ ಪೆಂಡಿರು ತನ್ನ । ನಗರ ಮುನಿವುದು ತನುಜರು ॥
ಪಗೆಯಪ್ಪರಾಪ್ತ ಮಂತ್ರೀಶನ ವಚನವ । ಬಗೆಯದೆ ನಡೆದ ಭೂಭುಜಗೆ ॥ ೯೧ ॥

ದುರ್ಜನ ದುಷ್ಟರು ಪಿರಿದಪ್ಪರು ಕೇಳು । ಪಾರ್ಜಿಸಿ ದೊಡವೆ ಕೆಡುವುದು ॥
ಊರ್ಜಿತವಡೆಯನಮಾತ್ಯನ ಮೀಱುವ । ನಿರ್ಜರಪತಿಯಾದೊಡಬಲೆ ॥ ೯೨ ॥

---

ಲಭಿಸಲಾರವು, ಇದು ನಿಶ್ಚಯ ಎಂದು ಹೇಳಿದನು ॥ ೮೪ ॥ ಮಂತ್ರಿಯು ಹೀಗೆ ಹೇಳಲು, ರಾವಣನ ಮೀಸೆ ಕುಣಿಯಿತು ರೋಮಗಳು ನೆಟ್ಟಗಾದುವು ಹುಬ್ಬುಗಳು ಮೇಲೆದ್ದವು ಹೀಗೆ ಯುದ್ಧದ ಆವೇಶವುಂಟಾದುದನ್ನು ಕಂಡು, ಮಂತ್ರಿಗೆ ಯೋಚನೆಯುಂಟಾಯಿತು ॥ ೮೫ ॥ ಎಲೈ ಚೇಳಿನಿಯೇ, ಮಂತ್ರಿಯು "ಅಯ್ಯೋ ಕಾರ್ಯ ಕೆಟ್ಟುಹೋಯಿತು" ಎನ್ನುತ್ತ ಮೌನವನ್ನು ತಾಳಿ, ರಾವಣನ ಏಕಾಂತವನ್ನೇ ಬಿಟ್ಟು, ಪಕ್ಕಕ್ಕೆ ಬಂದನು ಮನುಷ್ಯರಿಗೆ ಕೆಡುವ ಕಾಲಕ್ಕೆ ಬುದ್ಧಿ ಬಾರದು ॥ ೮೬ ॥ ಹೆಚ್ಚಾದ ಪಿತ್ತಜ್ವರದಿಂದ ಕೂಡಿದವನಿಗೆ ಸಕ್ಕರೆ, ಶುದ್ಧವಾದ ಹಾಲು—ಮುಂತಾದುವು ಕಹಿಯಾಗಿಯೇ ತೋರುವುವು ಅದೇ ರೀತಿ, ಒಳ್ಳೆಯ ಬುದ್ಧಿ ನೀತಿಯಿಂದ ಕೂಡಿದ ಮಂತ್ರೀಶ್ವರನ ಮಾತು ರಾವಣನ ಮನಸ್ಸಿನಲ್ಲಿ ನಿಲ್ಲಲಿಲ್ಲ ॥ ೮೭ ॥ ಅತ್ಯಂತ ಕಾಮುಕರು ಮೂರ್ಖರು, ನಿರ್ದಯರು, ಬುದ್ಧಿ ಹೀನರು, ಶೂರರು, ರಾಜರು—ತಾವು ಹಿಡಿದಿರುವುದನ್ನು ಎಂದಿಗೂ ಬಿಡರು ಅವರಿಗೆ ಹಿತೋಪದೇಶವನ್ನು ಮಾಡಿ ಹೊರದೂಡಿಸಿಕೊಳ್ಳುವುದು ಯೋಗ್ಯವಲ್ಲ ॥ ೮೮ ॥ ನೀತಿಯನ್ನು ಹೇಳಿದ ಮಂತ್ರಿಯ ಮಾತನ್ನು ಉಲ್ಲಂಘಿಸಿ, ಅವನು ಸೂಚಿಸಿದ ಅಡಿಹೆಜ್ಜೆಯಲ್ಲಿ ನಡೆಯದೆ, ಗರ್ವೋದ್ರೇಕದಿಂದ ನಡೆಯುವ ರಾಜನಿಗೆ ಕೇಡು ನಿಶ್ಚಯ—ಎಂದು ಶ್ರೇಣಿಕನು ಹೇಳಿದನು ॥ ೮೯ ॥ ರಾಜನು ಮಂತ್ರೀಶನ ಮಾತನ್ನು ಮೀರಿದರೆ, ಲಕ್ಷ್ಮೀದೇವಿ ಹಾರಿಹೋಗುವಳು, ಕೀರ್ತಿಶ್ರೀ ವಿಜಯಶ್ರೀಯರು ನಿಲ್ಲಲಾರರು ಅಪಕೀರ್ತಿಯೆಂಬ ಹೆಣ್ಣು ಬರುವಳು—ಇದು ನಿಶ್ಚಯ, ॥ ೯೦ ॥ ಆಪ್ತಮಂತ್ರಿಯ ಮಾತನ್ನು ಮೀರುವ ರಾಜನಿಗೆ ತನ್ನ ಹೆಂಡಿರು ಮುಖತಿರುಗಿಸುವರು, ತನ್ನ ಪಟ್ಟಣವೇ ಸಿಟ್ಟಾಗುವುದು ಮಕ್ಕಳೇ ವೈರಿಗಳಾಗುವರು ॥ ೯೧ ॥ ಅಮಾತ್ಯನು ಹೇಳಿದುದನ್ನು ಉಲ್ಲಂಘಿಸುವವನು ದೇವೇಂದ್ರನೇ ಆದರೂ

---

[1] ಚಿತ್ತದೊಳು (ಕ) [2] ಪೆತ್ತುವ (ಚ)

ದಿಕ್ಕರಿಪುದು ಜನಪದ ಛೀ ಛೂಯೆಂದು[1] ಕೊಕ್ಕರಿಪುದು ಪರಿವಾರ ॥
ತಕ್ಕರು ಕೇಡ ಚಿಂತಿಪರಾ ಸಚಿವನ । ಲೆಕ್ಕಿಸ[2]ಲಱಿಯದ ನೃಪಗೆ ॥ ೯೩ ॥

ಬಹುಜನ ಮುನಿವುದು ಬಹುದುಃಖವಪ್ಪುದು । ಮಹಿ ಪೊಱಗಿಕ್ಕಿ ಕಳೆವುದು ॥
ಇಹಪರಕಲ್ಲಾಪ್ತರನುಲ್ಲಂಘಿಪ । ಮಹಿಪತಿಗಂಬುಜ[3]ನೇತ್ರೆ ॥ ೯೪ ॥

ಆರಾಗಲಿ ಮಂತ್ರಿಯ ಮೀಱಿ ಖಳರವಿ । ಚಾರದಿಂ ನಡೆವರವರಿಗೆ ॥
ಸಾರುವಳಪಜಯವಧು ಸಿರಿಯೊಡನಾಟ । ದೂರವಾಗುವುದಂಬುಜಾಕ್ಷಿ ॥ ೯೫ ॥

ಅಂದು ರಾವಣನಾರ ಮಾತುಗೇಳದೆ ತನ್ನ । ಮಂದಿ ಕುದುರೆಯನು ನೆರಪಿ ॥
ಹಿಂದು ಮುಂದೆಣಿಸದೆ ಕಾಳಗಕನುವಾಗಿ । ಬಂದ ಬಗಸೆಗಣ್ಣಳಬಲೆ ॥ ೯೬ ॥

ಹರಿಣಧ್ವಜ ರವಿಕೀರ್ತಿಯೆಂದೆನಿಸುವ । ವರ ಸೇನಾಧಿಪತಿಗಳು ॥
ಖರದೂಷಣರಾದಿಯ ನರಪತಿಗಳು । ವೆರಸಿ ನಡೆದ ನೃಪವರನು[4] ॥ ೯೭ ॥

ಮಡದಿ ಕೇಳ್ ಕುಂಭ ನಿಕುಂಭ ಕರ್ಣಾದಿಯ । ರೊಡಹುಟ್ಟಿದರು[5] ಯಿಂದ್ರ ಕೀರ್ತಿ ॥
ಬಿಡದಿಂದ್ರಜಿತು ಯಿಂದ್ರ ವರ್ಮಾದಿಗಳಪ್ಪ । ಪಡೆದ ಮಕ್ಕಳು ಬಂದರಾಗ[6] ॥ ೯೮ ॥

ವರ ರಥ ಕರಿವಾಜಿ ಸುಭಟರು ವಿದ್ಯಾ । ಧರರುಗಳ್ಮೊದಲಾಗಿಯವಗೆ ॥
ನೆರನ್ನೈದು ಬಲ ಬಲುಹಾಗಿ ಬರಲು ಧುರ । ಧರಣಿಗೆ ನಡೆದನಾ ನೃಪತಿ ॥ ೯೯ ॥

---

ಅವನಿಗೆ ದುರ್ಜನರೂ ದುಷ್ಟರೂ ಅಧಿಕರಾಗುವರು. ಸಂಪಾದಿಸಿದ ವಸ್ತುಗಳು ಕೆಟ್ಟುಹೋಗುವವು. ಅವನು ಉನ್ನತಿಯನ್ನು ಹೊಂದಲಾರನು. ॥ ೯೨ ॥ ಮಂತ್ರಿಯನ್ನು ಲಕ್ಷ್ಯಮಾಡದಿರುವ ರಾಜನನ್ನು ಜನತೆಯೇ ಧಿಕ್ಕರಿಸುವುದು; ಪರಿವಾರವು ಛೀಛೂಯೆಂದು ಜುಗುಪ್ಸೆಪಡುವುದು. ಯೋಗ್ಯವ್ಯಕ್ತಿಗಳೇ ಕೇಡನ್ನು ಎಣಿಸುವರು. ॥ ೯೩ ॥ ಎಲೈ ಚೇಳಿನಿಯೇ, ಆಪ್ತ ಮಂತ್ರಿಯ ಮಾತನ್ನು ಕೇಳದ ರಾಜನಿಗೆ ಬಹಳ ಮಂದಿ ಜನರು ಸಿಟ್ಟಾಗುವರು ಬಹಳ ದುಃಖವುಂಟಾಗುವುದು. ಅವನನ್ನು ಭೂಮಿಯೇ ಹೊರಗೆ ನೂಕುವುದು ಅವನು ಇಹಪರಗಳೆರಡಕ್ಕೂ ಅಯೋಗ್ಯನಾಗುವನು. ॥ ೯೪ ॥ ಎಲೈ ಚೇಳಿನಿಯೇ, ಯಾರೇ ಆಗಲಿ ಮಂತ್ರಿಯ ಮಾತನ್ನು ಮೀರಿ ದುಷ್ಟರ ವಿಚಾರದಿಂದ ನಡೆಯತಕ್ಕ ರಾಜರಿಗೆ ಸೋಲವೆಂಬ ಹೆಣ್ಣು ವಶಳಾಗುವಳು. ಸಂಪತ್ತಿನ ದೇವತೆಯ ಒಡನಾಟವು ತಪ್ಪಿಹೋಗುವುದು. ॥ ೯೫ ॥ ಎಲೈ ಚೇಳಿನಿಯೇ, ಅಂದು ರಾವಣನು ಹೀಗೆ ಯಾರ ಮಾತನ್ನೂ ಕೇಳದೆ, ತನ್ನ ಮಂದಿ ಕುದುರೆ ದಳವನ್ನು ಕೂಡಿಸಿ, ಹಿಂದುಮುಂದೆ ಯೋಚಿಸದೆ, ಯುದ್ಧಕ್ಕೆ ಸಿದ್ಧನಾಗಿ ಬಂದನು. ॥ ೯೬ ॥ ರಾವಣನು ಹರಿಣಧ್ವಜ, ರವಿಕೀರ್ತಿಯೆಂಬ ಶ್ರೇಷ್ಠ ದಳಪತಿಗಳನ್ನೂ ಖರದೂಷಣರೇ ಮೊದಲಾದ ರಾಜರನ್ನೂ ಕೂಡಿ ಯುದ್ಧಕ್ಕೆ ನಡೆದನು. ॥ ೯೭ ॥ ಚೇಳಿನೆಯೇ ಕೇಳು. ಆಗ ಕುಂಭ ನಿಕುಂಭ ಕುಂಭಕರ್ಣ ಮುಂತಾದ ಸಹೋದರರೂ ಇಂದ್ರ ಕೀರ್ತಿ, ಇಂದ್ರಜಿತು, ಇಂದ್ರವರ್ಮ ಮುಂತಾದ ತನ್ನ ಮಕ್ಕಳೂ ರಾವಣನ ಬಳಿಗೆ ಬಂದರು. ॥ ೯೮ ॥ ಶ್ರೇಷ್ಠವಾದ ತೇರು, ಆನೆ, ಕುದುರೆ, ಕಾಲಾಳುಗಳು, ವಿದ್ಯಾಧರರು ಮೊದಲಾಗಿ ಬಂದುನೇರಿ ಐದು ಮಹಾಸೈನ್ಯವಾಗಲು ಅವರನ್ನು ಕೂಡಿಕೊಂಡು ರಾವಣನು ಯುದ್ಧಭೂಮಿಗೆ ನಡೆದನು. ॥ ೯೯ ॥ ರಾವಣನು ಕರಡೆ, ಡಿಂಡಿಮ, ಚಿನ್ನದ

---

[1] ಛೀ ಧೂಯೆಂದು (ಚ) [2] ದಿಕ್ಕಿಸ (ಕ). [3] ಮಹಿಪತಿಯಂಬುಜ (ಚ) [4] ನಡೆದನಾ ನೃಪತಿ (ಚ). [5] ವೊಡಹುಟ್ಟಿದವರು (ಕ).
[6] ೯೮ನೇ ಪದ್ಯದ ಉತ್ತರಾರ್ಧವೂ ೯೯ನೆಯ ಪದ್ಯವೂ ಚದಲ್ಲಿಲ್ಲ

ಕರಡೆ ಡವುಡೆ ಚಿನ್ನತಿತ್ತಿರಿ ಹೆಗ್ಗಾಳೆ । ಮುರು ತಾವು ಡೋಳು ನಿಸ್ಸಾಳ ॥
ಉರು ತಂಬಟೆ ಕೊಂಬು ಕೊಳಲ ರವಗಳಿಂ । ದರಸನೈದಿದನಾ ಹವವ ॥ ೧೦೦ ॥

ತಾರಗೆಯುದುರಿತು ತಳಮಳಲೆದ್ದಿತು । ವಾರಿಧಿ ಧರೆ ಕಂಪಿಸಿತು ॥
ಆ ರಾಯನ ವಾದ್ಯಕಿಂತಾಯಿತೆನಲಿ । ನ್ನಾರು ಜೀವಿಪರು ಮೀನಾಕ್ಷಿ ॥ ೧೦೧ ॥

ಧರೆಯನುಗ್ಗಡಿಸುವರಿಂದನ್ವಯವ ಬಿ । ತ್ತರಿಸುವರಿಂ[1] ಪಾರಕರಿಂ ॥
ಧುರಧರಣಿಯ ಯಾಚಕರೊಡವರಲಾ । ನರನಾಥ ನಡೆದನಾಹವಕೆ ॥ ೧೦೨ ॥

ದಿಕ್ಕರಿ ಘೀಳಿಟ್ಟವು ಪಲಸಿರಗಳ । ಕೊಕ್ಕಿಸಿದುದು[2] ಫಣಿ ಕಮಠ ॥
ಮುಕ್ಕಿಱಿದುದು ರಾವಣನ[3] ಪಡೆಯದೊಂ । ದುಕ್ಕ ನಾನೇನ ಬಣ್ಣಿಪೆನು[4] ॥ ೧೦೩ ॥

ಹರನಾದುದು ದೇವಗಂಗೆಗೆ ಪೀತಾಂ । ಬರನಾದುದು[5] ಶ್ರೀಧರಗೆ ॥
ತರಣಿಗೆ ತಮವಾದುದವನ ವರೂಥಿನಿ । ತೆರಳಲು ಪದಹತಿಧೂಳಿ[6] ॥ ೧೦೪ ॥

ಕಱೆವ ನೆತ್ತರ ಮಳೆ ಮುಱಿವ ಕೇತನತತಿ । ವೊಱೆಯಿಂದುಗಿದು ಬೀಳ್ವ ಖಡ್ಗ ॥
ಬಱಸಿಡಿಲ್ ಬಿಱುಗಾಳಿಯ ಕಂಡವನ ಸೇನೆ । ಬೆಱಗಾದುದು ಮೀನನೇತ್ರೆ ॥ ೧೦೫ ॥

ಆದವಶಕುನಗಳನು ವಿಚಾರಿಸದಾ । ಮೇದಿನೀಪತಿ ರಾಘವನ ॥
ಕಾದಿ ಕೊಲ್ಲುವೆನೆಂಬ ಕೋಪಾಟೋಪದಿಂ । ದೈದಿದ ರಣಭೂಮಿಯನು[7] ॥ ೧೦೬ ॥

ಪಡುವಣ ಕಡಲು ಮೂಡಣ ವಾರಿಧಿಯಂ । ದೊಡನೆಯಿಟ್ಟಣಿಸುವಂದದೊಳು[8] ॥
ಪಡೆಯೆರಡಳವಿಗಳಿದು ತಾಗಿದುದದ[9] । ನುಡಿವೊಡೆ ನಾಲಗೆಗರಿದು ॥ ೧೦೭ ॥

---

ತುತೂರಿ, ದೊಡ್ಡಕಹಳೆ. ಮುರು, ಕಾವು ದೋಳು ನಿಸ್ಸಾಳ, ತಂಬಟೆ, ಕೊಂಬು, ಕೊಳಲು ಮುಂತಾದ ವಾದ್ಯಗಳ ನಿನಾದ ದೊಡನೆ ಯುದ್ಧಕ್ಕೆ ತೆರಳಿದನು ॥ ೧೦೦ ॥ ಆ ರಾವಣನ ಸೈನ್ಯದ ವಾದ್ಯದ ಧ್ವನಿಗೆ ನಕ್ಷತ್ರಗಳು ಉದುರಿದವು, ಸಮುದ್ರ ತಳದ ಮಳಲು ಮೇಲೆದ್ದಿತು, ಭೂಮಿ ನಡುಗಿತು ಹೀಗೆ ಆದಾಗ ಯಾರು ತಾನೇ ಜೀವಿಸಬಲ್ಲರು? ॥ ೧೦೧ ॥ ಭೂಮಿಯನ್ನು ಬೊಬ್ಬಿಟ್ಟು ಸೂಚಿಸುವವರಿಂದಲೂ ವಂಶವನ್ನು ವರ್ಣಿಸುವವರಿಂದಲೂ, ಸ್ತುತಿಪಾಠಕರಿಂದಲೂ ಯುದ್ಧ ಭೂಮಿಯ ಭಿಕ್ಷುಕರು ಒಟ್ಟಿಗೆ ಬರುತ್ತಿರಲು—ಆ ರಾಜನು ಯುದ್ಧಕ್ಕೆ ತೆರಳಿದನು ॥ ೧೦೨ ॥ ಆಗ ದಿಗ್ಗಜಗಳು ಘೀಳಿಟ್ಟವು ಆದಿಶೇಷನು ಭಾರವನ್ನು ಸಹಿಸದೆ ತನ್ನ ಹಲವು ತಲೆಗಳನ್ನು ಬಗ್ಗಿಸಿದನು ನೆಲವನ್ನು ಹೊತ್ತ ಆಮೆಯು ದಣಿಯಿತು ಆ ರಾವಣನ ಸೈನ್ಯದ ಹೆಚ್ಚಳವನ್ನು ನಾನು ಏನೆನ್ನಲಿ! ॥ ೧೦೩ ॥ ರಾವಣನ ಸೈನ್ಯವು ತೆರಳುತ್ತಿರಲು ಮೇಲಕ್ಕೆದ್ದ ಪಾದ ಧೂಳಿ, ದೇವಗಂಗೆಗೆ ಶಿವನಾಗಿಯೂ, ವಿಷ್ಣುವಿಗೆ ಉಡಿಗೆಯ ಪೀತಾಂಬರವಾಗಿಯೂ ಸೂರ್ಯನಿಗೆ ಕತ್ತಲೆಯಾಗಿಯೂ ಪರಿಣಮಿಸಿತು ॥ ೧೦೪ ॥ ಎಲೈ ಚೆಲುವೆಯೇ, ರಾವಣನ ಸೈನ್ಯವು ಸುರಿಯುವ ರಕ್ತದ ಮಳೆಯನ್ನೂ, ಮುರಿಯುವ ಪತಾಕೆಗಳನ್ನೂ, ಒರೆಯಿಂದ ಹೊರಕ್ಕೆ ಬೀಳುವ ಖಡ್ಗಗಳನ್ನೂ, ಬರಸಿಡಿಲು ಬಿರುಗಾಳಿಗಳನ್ನೂ ಕಂಡು ಈ ಉತ್ಪಾತಗಳಿಗಾಗಿ ಆಶ್ಚರ್ಯಪಟ್ಟಿತು ॥ ೧೦೫ ॥ ಹೀಗೆ ಕಾಣಸಿದ ಅಪಶಕುನಗಳನ್ನು ಒಂದನ್ನೂ ಗ್ರಹಿಸದೆ. ಆ ರಾವಣನು ರಾಮನನ್ನು ಕೊಲ್ಲುವೆನೆಂಬ ಕೋಪದ ಆಡಂಬರದಿಂದ ಯುದ್ಧರಂಗಕ್ಕೆ ಹೋದನು ॥ ೧೦೬ ॥ ಪಶ್ಚಿಮ ಸಮುದ್ರವೂ ಪೂರ್ವಸಮುದ್ರವೂ ಒಟ್ಟಾಗಿ ಕವಿಯುವ

---

[1] ರಿಂದವಯುವ ಬಿರಿದಿರಿಸುವರಿಂ (ಕ) [2] ಕೊಕ್ಕರಿಸಿದ (ಕ) [3] ಮುಕ್ಕಿಱಿದುದು ಯೆಸಲವನ (ಚ) [4] ಪೇಳುವೆನು (ಚ) [5] ಪೀತಾಂಬರವಾದುದು (ಚ) [6] ಪದಹತಧೂಳಿ (ಚ) [7] ಭೂಮಿಗಾಗಿ (ಚ) [8] ವಾರಿಧಿಯಾ । ಕೆಡುಪಿಂ ಹೊಯ್ದಾಡುವಂತೆ (ಚ). [9] ಗಳಿದು ಜಾಗವನಾ (ಕ)

ಮಲ್ಲಾಮಲ್ಲಿ ಖಡ್ಗಾಖಡ್ಗಿ ನಖನಖಿ । ಯಲ್ಲಿ ಮುಂತಾದ ಕಾಳಗವ ॥
ನಿಲ್ಲದುಭಯ ಬಲ ಕೈದೋಱಿದುದನು । ಸೊಲ್ಲಿಸಲರಿದು ಶೇಷನಿಗೆ ॥ ೧೦೮ ॥

ಕರಿ ಕರಿಗಳೊಳು ತುರಗ ತುರಗದಿ ಚರ । ಚರರೊಳು ರಥರಥಿಕರೊಳು ॥
ಬೆರಸಿ ಪೊಯ್ದಾಡುವಾಹವವ ಕಂಡಮರರ । ಚ್ಚರಿವಟ್ಟರೇನ ಬಣ್ಣಿಪೆನು ॥ ೧೦೯ ॥

ಬಿಲ್ಲವರುರವಣಿಸಿದರು ಕೈದೋಱಿದ । ರಲ್ಲಿ ಹರಿಗೆಯಾಳುಗಳು ॥
ನಿಲ್ಲದೆ ಸಬಳಿಗರ್ಕೈದಿತುಭಯ ಬಲ । ದಲ್ಲಿ ಜೀವಿತದುತ್ತರಕೆ ॥ ೧೧೦ ॥

ಕಡಿದಾಡಿದರು ಕೈಮೆಱೆದರು ಸುಭಟರು । ಮಡಿದರು ಮಸೆದೋಱಿದರು ॥
ಪಡೆದರಮರಿಯರ ಸಂಗಸುಖಕೆ ಯುಗ್ಮ । ಪಡೆಯ ವೀರರು ಪದ್ಮನೇತ್ರೆ ॥ ೧೧೧ ॥

ಉಭಯ ಬಲದ ವೀರರು[1] ಕಾದಿ ತಂತಮ್ಮ । ವಿಭವವಡೆದು ಧರಣಿಯಲಿ ॥
ಸುಭಟರೊಱಗೆ ಕಂಡು ಕಡುನೊಂದಾ ದಿವ । ವಿಭುವೈದಿದ ಪಡುಗಡಲ ॥ ೧೧೨ ॥

ಇಂತುಭಯದ ಸೈನಿಕ ಕಾದಿ ತಮ್ಮ ನಿ । ಶಾಂತಕ್ಕೈದಿದರತ್ತಲಿತ್ತ ॥
ಮುಂತಣ ಕಥೆಯ ಪೇಳುವೆ[2] ಲಾಲಿಪುದು ಸೀ । ಮಂತಿನಿಯರ ತಲೆವಣಿಯೆ ॥ ೧೧೩ ॥

ವಿತರಣಶೀಲ ವಿವಿಧ ವಿದ್ಯಾನಂದ[3] ಸ । ನ್ಮತಿಯುತ ಮಂದರಧೈರ್ಯ ॥
ಶತಕ್ರತು ವಿಭವ ಸಮ್ಯಕ್ತ್ವ ಚಿಂತಾಮಣಿ । ಸಿತಭಾನು ಶಾಂತನೊಪ್ಪಿದನು ॥ ೧೧೪ ॥

---

ರೀತಿಯಲ್ಲಿ ಆ ಎರಡು ಸೈನ್ಯಗಳೂ ಶಕ್ತಿಮೀರಿ ಒಂದಕ್ಕೊಂದು ತಾಗಿದುವು. ಅದನ್ನು ವರ್ಣಿಸಿ ಹೇಳಲು ನಾಲಗೆಗೆ ಸಾಧ್ಯವಾಗದು ॥ ೧೦೭ ॥ ಆ ಎರಡೂ ಸೈನ್ಯಗಳು ಪರಸ್ಪರವಾಗಿ ಮಲ್ಲಾಮಲ್ಲಿ, ಖಡ್ಗಾಖಡ್ಗಿ, ನಖಾನಖಿ-ಯುದ್ಧಗಳಲ್ಲಿ ತಮ್ಮ ಶೌರ್ಯಗಳನ್ನು ಮೆರೆಯಿಸಿದ ಸಂಗತಿಯನ್ನು ಆದಿಶೇಷನೂ ತಿಳಿಸಲಾರ. ॥ ೧೦೮ ॥ ಆನೆಗಳು ಆನೆಗಳೊಡನೆಯೂ ಕುದುರೆಗಳು ಕುದುರೆಗಳೊಡನೆಯೂ ಕಾಲಾಳುಗಳು ಕಾಲಾಳುಗಳೊಡನೆಯೂ ರಥಿಕರು ರಥಿಕರೊಡನೆಯೂ ಬೆರಸಿಕೊಂಡು ಯುದ್ಧಮಾಡಿದರು. ಇದನ್ನು ದೇವತೆಗಳು ನೋಡಿ ಆಶ್ಚರ್ಯಪಟ್ಟರು—ಏನೆಂದು ವರ್ಣಿಸಲಿ ! ॥ ೧೦೯ ॥ ಆ ಎರಡೂ ಸೈನ್ಯಗಳಲ್ಲಿರುವ ಬಿಲ್ಲುಗಾರರು ತ್ವರಿತವಾಗಿ ಮುಂದುವರಿದರು. ಅಡ್ಡಣವನ್ನು ಹಿಡಿದಿರುವ ವೀರರು ತಮ್ಮ ಕೈಚಳಕವನ್ನು ತೋರಿಸಿದರು. ಈಟಿಯುವರು ನಿಲ್ಲದೆ ಮುಂದೆ ನುಗ್ಗಿದರು. ಅವರು ತಮ್ಮ ಜೀವಿತದ ಋಣವನ್ನು ತೀರಿಸಲು ಮುಂದಾದರು. ॥ ೧೧೦ ॥ ಎರಡೂ ಸೈನ್ಯದ ಪಟುಭಟರು ಕಡಿದಾಡಿದರು, ಶಕ್ತಿಯನ್ನು ಮೆರೆಸಿದರು, ಹಲವರು ಸತ್ತರು, ಹಲವರು ತಮ್ಮ ಹರಿತವನ್ನು ಪ್ರದರ್ಶಿಸಿದರು, ದೇವತಾಸ್ತ್ರೀಯರ ಸಂಗಸೌಖ್ಯವನ್ನು ಪಡೆದರು. ॥ ೧೧೧ ॥ ಎರಡೂ ದಳದ ವೀರಭಟರು, ಕಾದಾಡಿ ತಮ್ಮ ಶೌರ್ಯ ವೈಭವವನ್ನು ಮೆರೆಸಿ ನೆಲಕ್ಕೆ ಒರಗಿದರು ಇದನ್ನು ನೋಡಿ. ನೊಂದು, ಹಗಲರಸನಾದ ಸೂರ್ಯನು ಪಶ್ಚಿಮ ಸಮುದ್ರವನ್ನು ಸೇರಿದನು ॥ ೧೧೨ ॥ ಈ ರೀತಿಯಾಗಿ ಎರಡೂ ಕಡೆಯ ಸೈನಿಕರು ಕಾದಾಡಿ, ತಮ್ಮ ತಮ್ಮ ಶಿಬಿರಗಳಿಗೆ ಅತ್ತ ತೆರಳಿದರು. ಎಲೈ ಮುತ್ತೈದೆಯರ ಶಿರೋಮಣಿಯೆನಿಸಿರುವ ಚೇಳಿನಿಯೇ, ಇತ್ತ ನಾನು ಮುಂದಿನ ಕಥೆಯನ್ನು ಹೇಳುವೆನು, ಕೇಳು ॥ ೧೧೩ ॥ ದಾನಶೀಲನೂ, ಹಲವಾರು ವಿದ್ಯೆಗಳನ್ನು ತಿಳಿದಿದ್ದು ಅವುಗಳಲ್ಲಿ ಆನಂದಪಡುವವನೂ, ಒಳ್ಳೆಯ ಬುದ್ಧಿಶಾಲಿಯೂ, ಮಂದರಪರ್ವತದಂತೆ ಧೈರ್ಯವುಳ್ಳವನೂ, ಇಂದ್ರನಂತೆ ವೈಭವವುಳ್ಳವನೂ, ಕೇವಲ ಜ್ಞಾನಕ್ಕೆ ಚಿಂತಾರತ್ನದಂತೆ ಇರುವವನೂ, ಚಂದ್ರನಂತೆ ಶಾಂತಸ್ವಭಾವದವನೂ ಆದ ಶ್ರೀರಾಮನು ಚೆನ್ನಾಗಿ ಶೋಭಿಸುತ್ತಿದ್ದನು. ॥ ೧೧೪ ॥ ಎಲೈ ಮೃಗನೇತ್ರೆ ಚೇಳಿನಿಯೇ, ಇಂದು ನಾನು ನಿನಗೆ ಮುಂದಿನ ಕಥೆಗಳನ್ನು ಹೇಳುವೆನೆಂದು,

---

[1] ಕರಿಗಳು (ಚ). [2] ಕಥೆಯನೊರವೆ (ಚ). [3] ವಿತರಣ ಗುಣಶೀಲ ವಿನಯವಿಧಾನ (ಚ).

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೧೫ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದುದು[1]ಪದಿನೆಂಟನೆಯ ವಿಸುಪ ಸಂಧಿ ॥ ೧೧೬ ॥

---

ಮಲ್ಲನೆ ಮುಂದುವರಿಯುತ್ತ ಇಲ್ಲಿಗೆ ಸಂಧಿ ಕೊನೆಗೊಂಡಿದೆ ಮುಂದಿನ ಕಥೆಯನ್ನು ಸಂತೋಷದಿಂದ ತಿಳಿಸುವೆನು— ಎಂದು ಶ್ರೇಣಿಕನು ಹೇಳಿದನು ॥ ೧೧೫ ॥ ಬ್ರಾಹ್ಮಣಕುಲದಲ್ಲಿ ಜನಿಸಿದ, ಹೊಸ ಮನ್ಮಥನೆನಿಸಿದ, ನಿರ್ಮಲ ಗುಣಗಳುಳ್ಳ ಜಿನೇಶನ ಪಾದಕಮಲಕ್ಕೆ ಸೊಕ್ಕುದುಂಬಿಯೆನಿಸಿದ, ಅತಿ ಶ್ರೇಷ್ಠ ವಾಗ್ದೇವತೆಯ ಸ್ವಚ್ಛವಾದ ಮುಖಕ್ಕೆ ಕನ್ನಡಿಯೆನಿಸಿದ, ಒಳ್ಳೆಯ ಶುದ್ಧಚಾರಿತ್ರವುಳ್ಳ ಮಂತ್ರಿಯಾದ ದೇವಪ್ಪನು ಸಂತೋಷದಿಂದ ಭವ್ಯರಿಗೆ ಹೇಳಿರುವ ರಾಮವಿಜಯ ಕಾವ್ಯದಲ್ಲಿ ರಚಿತವಾಗಿ ಹದಿನೇಳನೆಯ ಸಂಧಿಯು ಪ್ರಖ್ಯಾತವಾಯಿತು ॥ ೧೧೬ ॥

# ೧೮. ರಾವಣನ ಗೆಲಿದ ಸಂಧಿ

ಕಾಲನ ಕರ್ಮವ ಕಾಮನ ಮಾಯಾ । ಜಾಲವ ಮದಗಳ ಗೆಲಿದು ॥
ಮೂಲೋಕಪತಿಯಾದ ಮುನಿಸುವ್ರತಗೆ ಮೂಱು । ಕಾಲದೊಳಭಿವಂದಿಸುವೆನು ॥ ೧ ॥

ಕವಿಗಳೊಲಿವರು ವಾದಿಗಳು ಸೋಲ್ವರು ವಾಗ್ಮಿ । ನಿವಹ ಮಚ್ಚುವನಾ ಗಮಕಿ ॥
ತವೆ ಮೋಹಿಪನೆನೆ ನಿನ್ನ ವಾಕ್ಪ್ರೌಢಿಗೆ । ಭುವನಿಯೊಳೆಣೆಯಿಲ್ಲ ನೃಪತಿ ॥ ೨ ॥

ಪೊಱಗೆ ಸಕ್ಕರೆಯಂ[1]ತೊಳಗೆ ತೆಂಗಾಯಂ । ತಱಿದೊಡೆ[1] ನಲ್ವೆಣ್ಣ ಸುಖದ ॥
ತೆಱನಂತೆ ನಿನ್ನ ಮಾತುಗಳು ಕೇಳ್ದರಿಗ । ಕ್ಕಱ ಪುಟ್ಟಿಸುತ್ತಿವೆ ನೃಪತಿ ॥ ೩ ॥

ಶರಧಿಗಂಭೀರ ಸಂಪೂರ್ಣ ಚಂದ್ರಾನನ । ಅರಲಂಬ ರೂಪ ಸಚ್ಚರಿತ ॥
ಕರಿವೈರಿ ವಿಕ್ರಮ ಪೇಳು ಕೇಳುವೆನತಿ[2] । ಹರುಷದಿಂ ಮುಂದಣ[3] ಕಥೆಯ ॥ ೪ ॥

ತುಂಬಿಗುರುಳ ತುಂಬಿದ ಜವ್ವನೆಯರ[4] ಕ । ಣ್ಗಿಂಬಪ್ಪ ಸುಭಗ ಸುಜ್ಞಾನಿ ॥
ಶಂಬರವೈರಿಯ ರೂಪ ಪೆಟ್ಟುವ ಪ್ರತಿ । ಬಿಂಬವೆ ಪೇಳು ಮೇಲ್ಗಥೆಯ ॥ ೫ ॥

ಪರಮಾಣು ಮಧ್ಯದ ಪರಮ ಪತಿವ್ರತೆ । ಗುರುಕುಚಗಳ ಗುಣಮಣಿಯೆ ॥
ಸರಸಿಜವದನದಂಗನೆ ಲಾಲಿಸು ನೀ । ಪರಮನ ಕಥೆಯುದೊಂದಿಱವ[5] ॥ ೬ ॥

---

ಯಮನು ಮಾಡುವ ಸಂಹಾರಕೃತ್ಯವನ್ನೂ ಮನ್ಮಥನು ಬೀರುವ ಮಾಯೆಯ ಜಾಲವನ್ನೂ ಜ್ಞಾನ. ಪೂಜೆ, ಜಾತಿ. ಕುಲ. ಬಲ, ಐಶ್ವರ್ಯ, ತಪಸ್ಸು, ಶರೀರ—ಎಂಬ ಎಂಟು ಮದಗಳನ್ನೂ ಗೆದ್ದು, ಅಧಃ–ತಿರ್ಯಕ್–ಊರ್ಧ್ವಲೋಕಗಳಿಗೆ ಒಡೆಯನಾಗಿರುವ ಮುನಿಸುವ್ರತ ಜಿನೇಂದ್ರನಿಗೆ ನಾನು ಮೂರುಕಾಲಗಳಲ್ಲಿಯೂ ವಂದಿಸುತ್ತೇನೆ ॥ ೧ ॥ ಚೇಳಿನಿಯು ಶ್ರೇಣಿಕನಿಗೆ ಹೀಗೆ ಹೇಳಿದಳು— ಎಲೈ ಅರಸನೇ. ನಿನ್ನ ಮಾತಿನ ಪಾಂಡಿತ್ಯಕ್ಕೆ ಕವಿಗಳು ಮೆಚ್ಚುವರು, ವಾದಿಗಳು ಸೋತುಹೋಗುವರು, ವಾಗ್ಮಿಗಳ ಸಮೂಹವು ಪ್ರೀತಿಪಡುವುದು, ಗಮಕಿಯು ಸೆಳೆಯಲ್ಪಡುವನು ಹೀಗಿರುವಾಗ ನಿನ್ನ ಮಾತಿನ ಪ್ರೌಢಿಮೆಗೆ ಲೋಕದಲ್ಲಿ ಹೋಲಿಕೆಯಿಲ್ಲ ॥ ೨ ॥ ನಿನ್ನ ಮಾತುಗಳು ಹೊರಗಿಂದ ಸಕ್ಕರೆಯ ಹಾಗೆಯೂ ಒಳಗೆ ತೆಂಗಿನಕಾಯಿಯಂತೆಯೂ ಇವೆ. ಅವನ್ನು ಅರ್ಥಮಾಡಿ ತಿಳಿದುಕೊಂಡರೆ ಒಳ್ಳೆಯ ಸ್ತ್ರೀಸುಖದಂತೆ ಇವೆ ಕೇಳಿದವರಿಗೆ ಪ್ರೀತಿಜನಕವಾಗಿವೆ. ॥ ೩ ॥ ಎಲೈ ಸಮುದ್ರದಂತೆ ಗಂಭೀರನಾಗಿರುವ, ಪೂರ್ಣಚಂದ್ರನಂತಹ ಮುಖವುಳ್ಳ. ಮನ್ಮಥನಂತಹ ರೂಪವುಳ್ಳ, ಒಳ್ಳೆಯ ನಡತೆಯಿರುವ, ಸಿಂಹದಂತೆ ಪರಾಕ್ರಮಿಯಾದ ಅರಸನೇ, ಮುಂದಿನ ಕಥೆಯನ್ನು ಹೇಳು ನಾನು ಸಂತೋಷದಿಂದ ಕೇಳುವೆನು. ॥ ೪ ॥ ತುಂಬಿಗುರುಳಿನ ಮತ್ತು ತುಂಬುಜವ್ವನದ ಸ್ತ್ರೀಯರ ಕಣ್ಣಿಗೆ ಚೆಲುವೆನಿಸುವ ಸೊಬಗುಳ್ಳವನೇ, ಒಳ್ಳೆಯ ಜ್ಞಾನಿಯೇ, ಮನ್ಮಥನ ರೂಪವನ್ನು ಮೀರುವ ಪ್ರತಿಬಿಂಬದಂತಿರುವವನೇ ಮುಂದಿನ ಕಥೆಯನ್ನು ಹೇಳು—ಎಂದು ಚೇಳಿನಿ ಹೇಳಿದಳು ॥ ೫ ॥ ಆಗ ಶ್ರೇಣಿಕನು ಹೀಗೆಂದನು—"ಪರಮಾಣುವಿನಂತಹ ನಡುವುಳ್ಳ. ಅತಿಶ್ರೇಷ್ಠ ಪಾತಿವ್ರತ್ಯವುಳ್ಳ, ದೊಡ್ಡದಾದ ಸ್ತನಗಳುಳ್ಳ, ಗುಣಗಳಿಗೆ ರತ್ನದಂತಿರುವ, ತಾವರೆಯಂತಹ ಮುಖವುಳ್ಳ ಮಡದಿಯೇ, ಜಿನೇಶನ ಕಥೆಯ ವಿವರವನ್ನು ನೀನು ಕೇಳು. ॥ ೬ ॥ ಕೋಕಿಲ ಧ್ವನಿಯ ಬಾಲೆಯೇ. ಮೃದುವಾದಗಳ ಮುಗ್ಧೆಯೆ. ಗಿಳಿನುಡಿಯ

---

[1] ತೊಳಗೆ ತೆಂಗಾಯಂತೆ ಯಱಿದೊಡೆ (ಚ) [2] ಮನ (ಚ) [3] ಹರುಷದಿಂದೀ ಜಿನ (ಚ) [4] ತುಂಬಿತುಳುಕುವ ಜವ್ವನದ ಜಾಣೆಯರ (ಚ). [5] ಕಥೆಯದೊಂದಱಿವ (ಚ).

ಪಿಕನಿನದದ ಬಾಲೆ ಮೆಲ್ಲಡಿಗಳ ಮುಗ್ಧೆ । ಶುಕವಚನದ ಸುಕುಮಾರಿ ॥
ಚಕಿತ ಚಕೋರೇಕ್ಷಣೆ ನೀನು[1] ಲಾಲಿಪು । ದಲಂಕಚರಿತನ[2] ಕಥೆಯ ॥ ೭ ॥

ಬಣ್ಣದುಟಿಯ ಜಾಣೆ ಬಲು ಮೊಲೆಗಳ ಚೆನ್ನೆ । ಹುಣ್ಣಿಮೆವೆಱೆಮೊಗದಬಲೆ ॥
ಚಿಣ್ಣಂಚೆ ಗತಿಯ ಗರುವೆ ನುಣ್ಣುಡಿಯ ಮುದ್ದು । ವೆಣ್ಣೆ ಲಾಲಿಪುದೀ ಕಥೆಯ ॥ ೮ ॥

ಚಂದಿರವದನೆ ಚಂದನಗಂಧಿ ಚಟುಲಾಕ್ಷಿ । ಮಂದಗಮನೆ ಮಾನನಿಧಿಯೆ ॥
ಬಂದುಗೆವಾಯಳೆ ಬಲು ಮೊಲೆಯಳೆ ಕೇಳು । ಕಂದರ್ಪ ವಿಜಯನ ಕಥೆಯ ॥ ೯ ॥

ಸುಲಿಪಲ್ಲ ಸುದತಿ ಸುಲೋಚನಂಗಳ ಕಾಂತೆ । ಸುಲಲಿತ ವಚನದ ನೀಱೆ[3] ॥
ಜಲರುಹವದನದಂಗನೆಯರ ತಲೆರನ್ನೆ । ಲಲನೆ ಲಾಲಿಪುದೀ ಕಥೆಯ ॥ ೧೦ ॥

ನೆಗೆದವು ದೊರೆದೊರೆಗಳಿಗೆ ನಾನಾ ಬಣ್ಣ । ಬಗೆಯ ಪಟ್ಟೆಯ ಗುಡಿ ಕಣ್ಗೆ ॥
ಸೊಗಸುವಂತೆರಡೊಡ್ಡಿನಲಿ ನಾಗೇಂದ್ರನ । ಬಗೆಗೆ ನಿಲುಕದೊಂದೆಣಿಕೆಗೆ ॥ ೧೧ ॥

ಮಡದಿ ಕೇಳ್ಮಱುದಿನ ದಿನಮಣಿಯಾ ಮೂಡ । ಗಡೆಯ ಮೂಡುವ ಕಾಲದೊಳು ॥
ಕಡುಗಲಿಗಳು ಸಿಂಗರಿಸಿತು ಕಾಳಗ ಕಾ । ಪಡೆಯೆರಡಱೊಳು ನಲಿವುತ ॥ ೧೨ ॥

ದಶಕಂಧರ ಕಾಳಮೇಘ ಗಜವನೇಱಿ । ಯಸುರ ಲಕ್ಷಿತ ಧ್ವಜವೆರಸು ॥
ಪೊಸಗಾಡಿವೆತ್ತು ಸಿಂಗರಿಸಿ ಸಮ್ಮದದಿ[4] ಸಾ । ಹಸಮಲ್ಲ ಹೊರಟನಾಹವಕೆ ॥ ೧೩ ॥

ತರುಣಿ ಕೇಳ್ ರಾಮಚಂದ್ರಮ ಪಂಚವಿಧ ಬಲ । ವೆರಸಿಯಂಜನಗಿರಿಯೆಂಬ ॥
ಕರಿಯನಡರಿ ತಾಳಧ್ವಜ ಲಕ್ಷಿತನಾಗಿ[5] । ಯರುಹಗೆಱಗಿ ಪೊರಮಟ್ಟ[6] ॥ ೧೪ ॥

---

ಸುಕುಮಾರಿಯೇ ಬೆದರಿದ ಚಕೋರಪಕ್ಷಿಯ ಕಣ್ಣುಗಳ ನೋಟವುಳ್ಳವಳೇ. ಪರಿಶುದ್ಧ ಚಾರಿತ್ರವುಳ್ಳ ಜಿನೇಶನ ಕಥೆಯನ್ನು ನೀನು ಕೇಳಬೇಕು ॥ ೭ ॥ ಬಣ್ಣದ ತುಟಿಗಳಿಂದ ಕೂಡಿದ ಜಾಣೆಯೆ, ತೋರಮೊಲೆಗಳ ಸೊಬಗುಗಾರ್ತಿಯೆ, ಹುಣ್ಣಿಮೆಯ ಚಂದ್ರನಂತಹ ಮುಖವುಳ್ಳ ಸ್ತ್ರೀಯೆ ಹಂಸದ ಮರಿಯಂತಹ ಮೆಲುನಡೆಯ ಗೌರವಶಾಲಿನಿಯೆ ನಯವಾದ ಮಾತಿನ ಮುದ್ದುಹೆಣ್ಣೇ, ಈ ಕಥಯನ್ನು ಕೇಳು ॥ ೮ ॥ ಚಂದ್ರನಂತಹ ಮುಖ ಶ್ರೀಗಂಧದ ಪರಿಮಳ ಚಂಚಲವಾದ ಕಣ್ಣು, ನಿಧಾನವಾದ ನಡಿಗೆಗಳಿಂದ ಕೂಡಿರುವ ಮರ್ಯಾದೆಯ ನಿಧಿಯೇ, ಬಂದುಗೆ ಹೂವಿನಂತೆ ಕೆಂಪಾದ ಬಾಯಿಯವಳೇ, ಗುರು ಕುಚೆಯೇ, ಮನ್ಮಥವಿಜಯನಾದ ಜಿನನ ಕಥೆಯನ್ನು ಕೇಳು ॥ ೯ ॥ ಸ್ವಚ್ಛವಾದ ಹಲ್ಲಿನ ಸ್ತ್ರೀಯೆ, ಸುಂದರವಾದ ಕಣ್ಣುಗಳಿರುವ ಕಾಂತೆಯೆ ಸುಂದರವಾದ ಮಾತಿನ ಸೊಬಗುಗಾರ್ತಿಯೆ, ತಾವರೆಯಂತಹ ಮುಖವುಳ್ಳ ಸ್ತ್ರೀಯರಿಗೆ ಶಿರೋರತ್ನವೇ ಈ ಕಥೆಯನ್ನು ಕೇಳು ॥ ೧೦ ॥ ಆ ಎರಡೂ ಕಡೆಗಳಲ್ಲಿ ಇದ್ದ ಬೇರೆಬೇರೆ ರಾಜರುಗಳಿಗೆ ಹಲವಾರು ವಿಧದ ಬಣ್ಣಗಳಿಂದ ಕೂಡಿದ ಪಟ್ಟೆವಸ್ತ್ರದ ಧ್ವಜಗಳು ಆದಿಶೇಷನಿಗೆ ಕೂಡ ಭಾವನೆಗೆ ನಿಲುಕದೆಂದು ಹೇಳುವ ರೀತಿಯಲ್ಲಿ ಕಣ್ಣಿಗೆ ಸೊಗಸಾಗಿದ್ದುವು ॥ ೧೧ ॥ ಎಲೈ ಮಡದಿಯೇ ಕೇಳು ಮರುದಿನ ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸುವ ಹೊತ್ತಿಗೆ ಸರಿಯಾಗಿ ಆ ಎರಡೂ ಸೈನ್ಯಗಳಲ್ಲಿದ್ದ ಪಟುಭಟರು ಯುದ್ಧಸನ್ನದ್ಧತೆಗೆ ತಕ್ಕ ಶೃಂಗಾರವನ್ನು ಮಾಡಿಕೊಂಡರು ॥ ೧೨ ॥ ಸಾಹಸಮಲ್ಲನಾದ ರಾವಣನು ಕಾಳಮೇಘವೆಂಬ ಆನೆಯನ್ನೇರಿ, ರಾಕ್ಷಸ ಧ್ವಜದಿಂದ ಕೂಡಿದವನಾಗಿ, ಹೊಸಸೊಬಗಿನಿಂದ ಶೃಂಗಾರ ಮಾಡಿಕೊಂಡು, ಯುದ್ಧಕ್ಕೆ ಹೊರಟನು ॥ ೧೩ ॥ ಚೆಲುವಿನಿಯೇ ಕೇಳು. ಶ್ರೀರಾಮಚಂದ್ರನು ಮಹಾವಿದ್ಯೆಯಿಂದ ಪಡೆದ

---

[1] ಚಕೋರೇಕ್ಷಣೆ ರಮೆ (ಚ) [2] ವಿಜಯನ (ಚ) [3] ಕಾಂತೆ (ಚ) [4] ಸಮ್ಮದದ (ಚ) [5] ಲಕ್ಷಿತನಾಗ (ಕ) [6] ಬರದಿಂದ (ಚ)

ಭರದಿಂದ ವಿಜಯ ಪರ್ವತಗಜವಡರಿ[1]ಯಂ । ದಿರದೆ ಗರುಡಧ್ವಜ ವೆರಸು ॥
ಧುರಧರಣಿಗೆ ಪೊಱಮಟ್ಟ ಲಕ್ಷ್ಮಣ ಸಿಂ । ಗರಿಸಿ ಕೊಂಡತಿವೇಗದಲಿ ॥ ೧೫ ॥

ಪಱೆ ಬಾರಿಸಿತು ಕೋಟಾಕೋಟಿ ಕಾಳೆಗ । ಳೊಱಲಿತು[2] ಲಕ್ಷೋಪಲಕ್ಷ ॥
ಅಱವರಾರುಳಿದ ವಾದ್ಯದ ನಿನದಕೆ ನೆಲ । ಕೊಱಗಿ ದಿಕ್ಕರಿ ಬೆದಱಿದವು ॥ ೧೬ ॥

ಒಡೆದವು ದಿಗ್ಭಿತ್ತಿ ತಳಮುಳಲೆದ್ದಿತು[3] । ಕಡಲು ಧರೆಯ ಪೊತ್ತ ಶೇಷ ॥
ನಡುಗಿತೆಂತೆನೆ ಪಡೆಯೆರಡಱ ವಾದ್ಯದ । ಕಡುಪ ನಾನೇನ ಬಣ್ಣಿಪೆನು ॥ ೧೭ ॥

ಲಗ್ಗೆಮಾಡಿತು ಪಡೆಯೆರಡಱೊಳಗೆ[4] ಕೇಳು । ತಗ್ಗದ ಕೋಪಾಗ್ನಿಯಿಂದ ॥
ಸಗ್ಗದವರು ತಲೆದೂಗಲವಂದಿರು । ಮುಗ್ಗಿ ಮೂದಲಿಸಿ ಹಳಚಿತು ॥ ೧೮ ॥

ಚಟುಲಾಕ್ಷಿ ಕೇಳು ವಾಜಿಗಳ ಹೇಷಾರವ । ಭಟರ ಕೂಗಾಟ ಬಲ್ಸಿನದ[5] ॥
ಕಟಕಣಿಲೆಂಬ ಕೈದುಗಳಬ್ಬರವಲ್ಲಿ[6] । ಕಟಕವೆರಡಱೊಳೊಪ್ಪಿದುದು ॥ ೧೯ ॥

ಹರಿಗೆಯಿಂ ಸಬಳದಿಂ ಬಿಲ್ಲಿನಿಂ ಖಡ್ಗದಿಂ । ಸುರಗಿಯಿಂ ತೋಮರದಿಂದ ॥
ಪರಿಘದಿಂ ಪಟ್ಟಿಯದಿಂ[7] ಕಾದಿದರಿ । ತ್ತರವಲದೊಳು ವೀರರಬಲೆ ॥ ೨೦ ॥

ತಾಕಿದ ಗಾಯವ ಪುಸಿಯೆಂದು ಮುಂದಕೆ । ನೂಕಿ ನಡೆದು ಕಾದುತಿರ್ಪ ॥
ಆ ಕಡುಗಲಿಗಳಿಂದೆಸೆದುದುಭಯ ಬಲ । ನಾಕದವರು ಮೆಚ್ಚುವಂತೆ ॥ ೨೧ ॥

---

ಐದು ವಿಧವಾದ ಬಲವುಳ್ಳವನಾಗಿ ಅಂಜನಗಿರಿಯೆಂಬ ಆನೆಯನ್ನೇರಿ. ತಾಳಧ್ವಜವುಳ್ಳವನಾಗಿ ಜಿನೇಶ್ವರನಿಗೆ ನಮಸ್ಕರಿಸಿ ಯುದ್ಧಕ್ಕೆ ಹೊರಟನು. ॥ ೧೪ ॥ ಆಗ ಲಕ್ಷ್ಮಣನು ಶೃಂಗರಿಸಿಕೊಂಡು ಬೇಗನೆ ವಿಜಯಪರ್ವತವೆಂಬ ಆನೆಯನ್ನೇರಿ. ಗರುಡಧ್ವಜದಿಂದ ಕೂಡಿ, ಯುದ್ಧಭೂಮಿಗೆ ಬಹಳ ವೇಗವಾಗಿ ಹೊರಟನು. ॥ ೧೫ ॥ ಆಗ ಕೋಟಿಸಂಖ್ಯೆಯಲ್ಲಿ ಪರೆಗಳು ಶಬ್ದಮಾಡಿದವು; ಕಹಳೆಗಳು ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಚೀರಿದವು ಇನ್ನಿತರ ವಾದ್ಯಗಳ ಶಬ್ದಕ್ಕೆ ದಿಗ್ಗಜಗಳು ನೆಲಕ್ಕೆ ಒರಗಿದವು, ಬೆದರಿದವು ॥ ೧೬ ॥ ದಿಕ್ಕುಗಳ ಗೋಡೆಗಳು ಬಿರಿದವು. ಸಮುದ್ರತಳದ ಮಳಲು ಮೇಲೆದ್ದಿತು. ಭೂಮಿಯನ್ನು ಹೊತ್ತಿರುವ ಮಹಾಶೇಷನು ನಡುಗಿದನು. ಹೀಗೆನ್ನುವಾಗ ಆ ಎರಡೂ ಕಡೆಯ ಸೈನ್ಯಗಳ ವಾದ್ಯದ ತೀವ್ರತೆಯನ್ನು ನಾನು ಏನೆಂದು ವರ್ಣಿಸಲಿ! ॥ ೧೭ ॥ ಎರಡೂ ಕಡೆಯ ಸೈನ್ಯಗಳು ಹೆಚ್ಚಾದ ಸಿಟ್ಟಿನಿಂದ ಒಂದಕ್ಕೊಂದು ಮುತ್ತಿಗೆ ಹಾಕಿದವು. ಆಗ ದೇವತೆಗಳು ತಲೆದೂಗುತ್ತಿರಲು ಒಬ್ಬರಿಗೊಬ್ಬರು ಮೂದಲೆಯ ಮಾತುಗಳನ್ನಾಡುತ್ತ ಕಾದಾಡಿದರು. ॥ ೧೮ ॥ ಎಲೈ ಚೇಳಿನಿಯೇ, ಆ ಎರಡೂ ಸೈನ್ಯಗಳಲ್ಲಿ ಕುದುರೆಗಳು ಕೆನೆವ ಸ್ವರವೂ ಸೈನಿಕರ ಆರ್ಭಟೆಯ ಮಹಾಶಬ್ದವೂ 'ಕಟಕಣಿಲ್' ಎಂಬ ಶಸ್ತ್ರಗಳ ತಾಕಲಾಟದ ಗಲಭೆಯೂ ಕೇಳಿಸುತ್ತಿತ್ತು ॥ ೧೯ ॥ ಎರಡು ಕಡೆಯ ವೀರರು ಪರಸ್ಪರವಾಗಿ ಗುರಾಣಿ. ಬರ್ಚಿ. ಬಿಲ್ಲು. ಖಡ್ಗ. ಬಿಚ್ಚುಗತ್ತಿ, ಗದೆ, ಶೂಲ, ಮಹಾಖಡ್ಗ—ಮುಂತಾದ ಆಯುಧಗಳನ್ನು ಹಿಡಿದುಕೊಂಡು ಕಾದಾಡಿದರು. ॥ ೨೦ ॥ ಕಾದಾಡುವಾಗ ತಮಗೆ ಆದ ಗಾಯವನ್ನು ಲಕ್ಷಿಸದೆ, ಮುಂದುವರಿದು ಯುದ್ಧಮಾಡುವ ಮಹಾಶೂರರಿಂದ ಎರಡೂ ದಳಗಳು ದೇವತೆಗಳು ಮೆಚ್ಚುವಂತೆ ಶೋಭಿಸಿದುವು ॥ ೨೧ ॥ ತಮ್ಮ ದೇಹದ ಮೇಲಿನ ವ್ಯಾಮೋಹ

---

[1] ಇರದಾ ಪರ್ವತ ಗಜವನಡರಿ (ಚ)  [2] ಕಾಳೆಗಳೊದಱಿತು (ಚ)  [3] ತಳಮುಳಲೆದ್ದುದು (ಚ)  [4] ಬಲಪೆರಡಱೊಳಗೆ (ಚ)
[5] ಚಿತ್ರಿನದ (ಕ)  [6] ಳಬ್ಬರವಾ (ಚ).  [7] ಪಟ್ಟೆಹದಿಂ (ಚ).

ಒಡಲ ಮೋಗಣ ಮೋಹವೆಳ್ಳನಿತನು ತಾವು । ಪಿಡಿಯದೆರಡು ಪಡೆಯೊಳಗೆ ॥
ಕಡುಗಲಿಗಳು ಕಡುಪಿಂದ ಭಯವ ಬಿಟ್ಟು । ಕಡಿದಾಡಿದರು ಕಂಗೆಡದೆ ॥ ೨೨ ॥

ಸುರಿವ ರಕುತದಿಂದ ಸೂಸುವ ಕರುಳಿಂದ । ಬಿಱಿವ ದೇಹಗಳಿಂದ ಸಿಡಿದ ॥
ಸಿರಗಳಿಂ ಹಱಿದ ನರಗಳಿಂದಾ ಘುರ । ಧರಣಿ ರಂಜಿಸಿದುದಬ್ಜಾಕ್ಷಿ ॥ ೨೩ ॥

ಹೊಯ್ವವರಿಂ ಕೈದುಗಳಿಂ ಕಡುನೊಂದು । ಬಯ್ವವರಿಂ ಸಾಯಲಂಜಿ ॥
ದೈವವ ನೆನೆವರಿಂ ಕೊಳುಗುಳವಂದದು । ಸಾಯ್ವವರಿಂದೊಪ್ಪಿತಬಲೆ ॥ ೨೪ ॥

ಹಱಿದ ಜೋಡುಗಳಿಂದ ಮುಱಿದ ಕೈದುಗಳಿಂದ । ಕಱಿವ ನೆತ್ತರ ಧಾರೆಯಿಂದ ॥
ತಱಿಸಂದು ನಱಿಗಲಿಗಳು ಕಾದಿ ನೆಲದೊಳ । ಗೊಱಗಿತು ಜೀವವ ಬಿಟ್ಟು ॥ ೨೫ ॥

ಆಹವದೊಳ್ ಕಾದಿ ಮಡಿದ ವೀರರ ಸಗ್ಗ । ದಾ ಹರಿಣಾಯತಾಕ್ಷಿಯರು ॥
ಮೋಹಿಸಿ ಪೂಮಾಲೆಯನಿಕ್ಕಿ ತಂತಮ್ಮ । ಗೇಹಕ್ಕೆ ಕೊಂಡೊಯ್ದರಬಲೆ ॥ ೨೬ ॥

ತಟ್ಟುಗಿವಂಬುಗಳಿಂದೆ ತಿವಿವ[1] ಪಂದಿ । ಪುಟ್ಟುಗಳಿಂದೆ ಖಡ್ಗಗಳಿಂ ॥
ಮೆಟ್ಟಿ ಕೊರಲು ಕೊಯ್ವವರಿಂದಸುಗಳು । ಬಿಟ್ಟು ಪೋದಪುದರೆಬರನು ॥ ೨೭ ॥

ಖಂಡದ ರಾಸಿ ಕರುಳ ಗುಡ್ಡೆ ನೆತ್ತರ । ಕೊಂಡ ನೆಣದ ಪೊದೆ ಬಣಬೆ ॥
ಮುಂಡದಸ್ಥಿಯ ಪೊಟ್ಟಲಿಂದೆಸೆಪುದು ರಣ । ಮಂಡಲ ಕಡುಗುರ್ವುವಡೆದು ॥ ೨೮ ॥

ಈ ಪರಿಯೊಳು ಪಟುಭಟರು ಕಾದುತಲಿರ । ಲಾ ಪದದೊಳಗೀರ್ವಲದ[2] ॥
ಭೂಪಾಲಕರು[3] ಮೂದಲಿಸಿ ತಮ್ಮೊಳಗಂ[3] । ದೋಪಳೆ ಕಾದಿದರಿಂತು ॥ ೨೯ ॥

---

ವನ್ನು ಎಳ್ಳಿನಷ್ಟೂ ಇಟ್ಟುಕೊಳ್ಳದೆ, ಎರಡೂ ಕಡೆಯ ಸೈನಿಕರು ನಿರ್ಭಯರಾಗಿ, ಸ್ವಲ್ಪವೂ ಕಂಗೆಡದೆ ಶೌರ್ಯದಿಂದ ಹೋರಾಡಿದರು ॥ ೨೨ ॥ ಎಲೈ ಚೆಲುವೆಯೇ ಆ ಯುದ್ಧರಂಗವು ಸುರಿವ ರಕ್ತದಿಂದಲೂ, ಚೆಲ್ಲುವ ಕರುಳಿಂದಲೂ ಸೀಳಿಹೋಗುವ ದೇಹದಿಂದಲೂ, ಹಾರುವ ತಲೆಗಳಿಂದಲೂ, ಹರಿದುಹೋಗುವ ನಾಡಿಗಳಿಂದಲೂ ಶೋಭಿಸಿತು ॥ ೨೩ ॥ ಆಯುಧಗಳಿಂದ ಹೊಡೆಯುವವರಿಂದಲೂ, ಬಹಳ ನೋವಾಗಿ ಬೈವವರಿಂದಲೂ, ಸಾಯುವುದಕ್ಕೆ ಹೆದರಿ ತಮ್ಮ ದೈವವನ್ನು ಧ್ಯಾನಿಸುವವರಿಂದಲೂ, ಮಡಿವವರಿಂದಲೂ ಆ ಯುದ್ಧವು ಕಾಣಿಸಿತು ॥ ೨೪ ॥ ಮಹಾಶೂರರು ಹರಿದುಹೋದ ಕವಚಗಳಿಂದ, ಮುರಿದ ಆಯುಧಗಳಿಂದ, ಸುರಿಯುವ ರಕ್ತದ ಧಾರೆಯಿಂದ ಕೂಡಿದರೂ ಕದಲದೆ ನಿರ್ಧಾರಮಾಡಿಕೊಂಡು ಯುದ್ಧಮಾಡಿ ಸತ್ತು ನೆಲಕ್ಕೊರಗಿದರು ॥ ೨೫ ॥ ಎಲೈ ಚೆಲುವೆಯೇ. ಆ ಯುದ್ಧದಲ್ಲಿ ಕಾದಾಡಿ ಸತ್ತ ವೀರರನ್ನು ಅಪ್ಸರಸ್ತ್ರೀಯರು ನೋಡಿ ಮೋಹಗೊಂಡು, ಹೂಮಾಲೆಯನ್ನು ಹಾಕಿ, ತಮ್ಮ ಮನೆಗಳಿಗೆ ಕೊಂಡುಹೋದರು ॥ ೨೬ ॥ ಎದುರಾಳಿಯು ತೀವ್ರವಾಗಿ ಪ್ರಯೋಗಿಸುವ ಬಾಣಗಳಿಂದಲೂ. ತಿವಿಯುವ ಬರ್ಜಿ-ಖಡ್ಗಗಳಿಂದಲೂ, ಒದೆದು ನಿಂತು ಕೊರಲನ್ನು ಕತ್ತರಿಸುವವರಿಂದಲೂ—ಹಲವರ ಪ್ರಾಣಗಳು ತೊಲಗಿದವು ॥ ೨೭ ॥ ಆ ಸಮರಭೂಮಿಯು ಮಾಂಸಖಂಡದ ರಾಶಿಯಿಂದಲೂ, ಕರುಳಿನ ಗುಡ್ಡೆಯಿಂದಲೂ, ರಕ್ತದ ಮಡುವಿನಿಂದಲೂ, ಕೊಬ್ಬಿನ ಮೆದೆಯಿಂದಲೂ, ಮುಂಡಗಳ ಬಣಬೆಯಿಂದಲೂ, ಎಲುಬುಗಳ ರಾಶಿಯಿಂದಲೂ ಭಯಂಕರವಾಗಿ ಕಾಣಿಸಿತು ॥ ೨೮ ॥ ಎಲೈ ಮಡದಿಯೇ, ಶೂರರಾದ ಸೈನಿಕರು ಹೀಗೆ ಆ ಸಂದರ್ಭದಲ್ಲಿ ಕಾದಾಡುತ್ತಿದ್ದಾಗ, ಎರಡೂ ಕಡೆಯ ರಾಜರು ಒಬ್ಬರನ್ನೊಬ್ಬರು ಮೂದಲಿಸುತ್ತ ಹೀಗೆ ಕಾದಾಡಿದರು ॥ ೨೯ ॥

---

[1] ತಟ್ಟುಗಿವಂಬುಗಳಿಂದೆ ತಿವಿದ (ಚ) [2] ಗೀರ್ವಲದೆ (ಚ) [3] ತಮ್ಮೊಳು ಮೂದಲಿಸಿಯುಂ (ಚ).

ಅಣುವನೊಳಾ ರವಿಕೀರ್ತಿ ಕುಮುದಗೆ ಗೊಂ । ದಣಿಯಿಂದ್ರವರ್ಮನಂಗಜಗೆ ॥
ಎಣೆಯಿಂದ್ರಕೀರ್ತಿ ನಳಿನಕೇತು ಖರನೊಳು । ರಣವನೆಸಗಿದರಾಕ್ಷಣದಿ ॥ ೩೦ ॥

ಸುಗ್ರೀವ ಕುಂಭಕರ್ಣನೊಳಾ ನೀಲನ । ವಿಗ್ರಹ ದೂಷಣನೊಡನೆ[1] ॥
ಉಗ್ರದ[2] ಲಕ್ಷ್ಮಣನಿಂದಗಿಯೊಳಗ । ಭ್ಯಗ್ರದಿಂ ಕಾದಿದರಾಗ ॥ ೩೧ ॥

ಇವರವರೊಳಗವರಿವರೊಳು ತಂತಮ್ಮ । ಹವಣನರಿದು ಕಾದಿ ಕಾದಿ ॥
ಜವಗೆಡುತಿರೆ[3] ಲಕ್ಷ್ಮಣನಿಂದಗಿಯೊಳಾ । ಹವವನೆಸಗಿಯುವರಿಂತು[4] ॥ ೩೨ ॥

ಗಿರಿ ಕುಲಿಶಕೆಯಲ್ಲದೆ ಸೀಸದುಳಿಗೇಕೆ[5] । ಬಿರಿವುದೇಯೆಂದು ಲಕ್ಷ್ಮಣನ ॥
ಉರಗಗಣೆಗಳಿಂದೆಸಲೆಚ್ಚು ಕೆಡಿಸಿದ । ಗರುಡಬಾಣದೊಳದನವನು ॥ ೩೩ ॥

ಉರಗನ ಹರಣವ ತೆಗೆವವನಿಗೆ ಹುತ್ತ । ದರಗಿನ ಹುಲ್ಲ ಸರವೆಯ[6] ॥
ಪರಿಹರಿಸುವುದರಿದಲ್ಲೆಂದವನೆಚ್ಚ । ಸರಲ ಖಂಡಿಸಿದ ಲಕ್ಷ್ಮಣನು ॥ ೩೪ ॥

ಖಗರಾಜನರಮನೆಯುವರು ಹಾವಿಗೆ ನೊಗ । ದೆಗೆವರೆ ರಾವಣನೃಪನ ॥
ಮಗನೆಂಬುದನಱಿಯಾ ಯೆಂದಿಂದಗಿ । ನಗುತೆಚ್ಚನು ಲಕ್ಷ್ಮಣನ ॥ ೩೫ ॥

ಖಗರಾಜನಹುದಹುದೆಲೊ[7] ಕೇಳು ನಿನ್ನಯ । ಹೆಗಲನಡರಿ ನಡೆಯಿಸುವ ॥
ಮೃಗರಾಜನಾದ ಶ್ರೀ ಹರಿಯೆಂದೆನುತಾಗ[8] । ತೆಗೆದೆಚ್ಚ ಹೊಸಕಣೆಗಳಲಿ ॥ ೩೬ ॥

ಹರಿನೀನಹುದು ನಿನ್ನ ಕೈಯ[9] ಪೂಜಿಸಿ ಕೊಂಬ । ಹರ ನಾನು ನನ್ನೊಳು ನೀನು ॥
ಧುರವನೆಸಗಿದೊಡೆ ನಿನ್ನ ಕೊಲ್ಲುವೆನೆಂದು । ಭರದಿಂದೆಚ್ಚ ಲಕ್ಷ್ಮಣನ ॥ ೩೭ ॥

---

ಅಣುವನೊಡನೆ ರವಿಕೀರ್ತಿಯೂ, ಕುಮುದನಿಗೆ ಎದುರಾಗಿ ಇಂದ್ರವರ್ಮನೂ, ಅಂಗದನಿಗೆ ಪ್ರತಿದ್ವಂದ್ವಿಯಾಗಿ ಇಂದ್ರ ಕೀರ್ತಿಯೂ, ನಳಿನಕೇತುವಿಗೆ ಸಾಟಿಯಾಗಿ ಖರನೂ ಯುದ್ಧಮಾಡಿದರು. ॥ ೩೦ ॥ ಸುಗ್ರೀವನು ಕುಂಭಕರ್ಣನೊಡನೆ, ನೀಲನು ದೂಷಣನೊಡನೆ. ಲಕ್ಷ್ಮಣನು ಇಂದಗಿಯೊಡನೆ ಎದುರಾಗಿ ಕಾದಿದರು ॥ ೩೧ ॥ ಹೀಗೆ ಇವರು ಅವರೊಡನೆಯೂ ಅವರು ಇವರೊಡನೆಯೂ ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಯುದ್ಧಮಾಡಿ ಶಕ್ತಿಗುಂದುತ್ತಿರಲು, ಲಕ್ಷ್ಮಣನು ಇಂದಗಿಯೊಡನೆ ಕಾದಾಡಿದನು ॥ ೩೨ ॥ ಇಂದಗಿಯು ಲಕ್ಷ್ಮಣನೊಡನೆ. ಪರ್ವತವು ವಜ್ರಾಯುಧಕ್ಕಲ್ಲದೆ ಸೀಸದ ಉಳಿಗೆ ಒಡೆಯುವುದೇ?—ಎಂದು ಲಕ್ಷ್ಮಣನಿಗೆ ಸರ್ಪಬಾಣಗಳನ್ನು ಪ್ರಯೋಗಿಸಲು, ಲಕ್ಷ್ಮಣನು ಅವನ್ನು ಗರುಡಾಸ್ತ್ರದಿಂದ ಖಂಡಿಸಿದನು ॥ ೩೩ ॥ ಹಾವನ್ನು ಕೊಲ್ಲುವವನಿಗೆ. ಹುತ್ತದ ತರಗೆಲೆಯನ್ನು–ಹುಲ್ಲಿನ ಜೊರನ್ನು ಪರಿಹಾರಮಾಡು ವುದು ಅಸಾಧ್ಯವಲ್ಲ' ಎಂದು ಇಂದಗಿಯು ಬಿಟ್ಟ ಬಾಣವನ್ನು ಲಕ್ಷ್ಮಣನು ತುಂಡರಿಸಿದನು. ॥ ೩೪ ॥ "ಎಲೈ ಲಕ್ಷ್ಮಣನೇ. ಪಕ್ಷಿರಾಜನಾದ ಗರುಡನ ಮನೆಯವರು ಹಾವಿಗೆ ಹೆದರುವರೆ? ನಾನು ರಾವಣನ ಮಗನೆಂಬುದನ್ನು ತಿಳಿದುಕೋ" ಎಂದು ಇಂದಗಿಯು ಲಕ್ಷ್ಮಣನಿಗೆ ಬಾಣಪ್ರಯೋಗ ಮಾಡಿದನು. ॥ ೩೫ ॥ 'ಎಲೈ, ನೀನು ಪಕ್ಷಿರಾಜನಾದ ಗರುಡನೆಂತಲೇ ಭಾವಿ ಸೋಣ. ಆದರೆ ನಾನು ಅಂತಹ ಗರುಡನ ಹೆಗಲೇರಿ ನಡೆಯಿಸುವಂತಹ ಸಿಂಹಸದೃಶನಾದ ಶ್ರೀಹರಿಯಾಗಿರುವೆನು' ಎನ್ನುತ್ತ ಹೊಸ ಬಾಣಗಳನ್ನು ಲಕ್ಷ್ಮಣನು ಪ್ರಯೋಗಿಸಿದನು ॥ ೩೬ ॥ ಆಗ ಇಂದಗಿಯು—'ನೀನು ಹರಿ ಹೌದು ಆದರೆ ನಾನು ನಿನ್ನಿಂದ ಪೂಜೆಯನ್ನು ಸ್ವೀಕರಿಸುವ ಹರನಾಗಿರುವೆನು. ನನ್ನಲ್ಲಿ ಕಾದಾಡಿದರೆ ನಿನ್ನನ್ನು ಕೊಲ್ಲುವೆನು" ಎಂದು ಭರದಿಂದ

---

[1] ದೂಷಣನೊಳಗೆ (ಕ) [2] ಉಗ್ರದೆ (ಚ) [3] ಭವಗೆಡುತಿರೆ (ಚ) [4] ನೆಸಗಿದವರಿಂತು (ಚ) [5] ಸೀಸದುರುಳಿಗೆ (ಚ) [6] ಶರವೆಯ (ಕ)
[7] ಹಹುದೈ (ಚ) [8] ಶ್ರೀವಿಷ್ಣುತಾನೆನುತಾಗ (ಚ) [9] ಕೈಲಿ (ಚ)

ಪರಸು ನೀನಹುದು ನೀನಿರದೆ ದ್ಯಾನಿಸುತಿರ್ಪ[1] ಪರ ಬೊಮ್ಮ ನಾನು ನೀನೆನ್ನ ॥
ಚರಣಕೆಜಗದೊಡೆ ನಿನ್ನನು ರೌರವ । ನರಕಕ್ಕೆ ಕಳುಹದೆ ಬಿಡೆನು ॥ ೩೮ ॥

ಜಲಧೀಶ್ವರನ[2] ಮುತ್ತಿಗೆಯನಿಕ್ಕುವರೆ ಕ । ಳ್ತಲೆಯ ಕೋಂಟೆಯನೆನ್ನೊಡನೆ ॥
ಕಲಹವನೆಸ್ಗೊಳು ತೆಗೆದೆಯಾದೊಡೆ ನಿನ್ನ । ಬಲುಹ [3]ಬೀಸರವೋಗಿಸೆನೆ[3] ॥ ೩೯ ॥

ಸಿಡಿದುರಿವಗ್ನಿಯ ಮಳೆಗೆ ಪಿಡಿವರೆ ಕೇ । ಡರಗಿನ ಕೊಡೆಯ ನೀನೆನ್ನ ॥
ಶರಜಾಲಕಿದಿರಾದೊಡೆಯಿಂದಗಿ ನಿನ್ನ । ಬಿರಿದ ಬೀಸರವೋಗಿಸೆನೆ ॥ ೪೦ ॥

ಕಡಲ ಸುಜ್ಜಿಂದು ಸುಜೀವ ವಡಬಾನಲ । ಕೆಡುವುದೆ ತುಂತುಱುವನಿಗೆ ॥
ಕಿದೆಮುಟ್ಟುವೆ ನಿನ್ನ ಹುಲುಕಣೆ[4]ಗಳನೆಂ । ದೊಡನೆಚ್ಚನು ಲಕ್ಷ್ಮಣನು ॥ ೪೧ ॥

ಒಳ್ಳಿತೆಳ್ಳಿತು ನೀನಾಡಿದ ನುಡಿಗೇ । ಳೊಳ್ಳೆ[5]ವಾವಿಗೆಯಾ ಶೇಷ ॥
ಕೊಳ್ಳಿಗೊಂಬುದೆಯೆಂದವನೆಚ್ಚ ಸರಳ್ಗಳ । ಹೊಳ್ಳುಗಳೆವುತ ತಱುಬದ ॥ ೪೨ ॥

ಬಲು ಪೊನಲಿನ ಬಾಧೆಗೆ ನಿಲುವುದೆ ನವ್ಯ । ಪುಲಿನದ ಕಟ್ಟೆ ನೀನೆನ್ನ ॥
ಬಲು ಶರಗಳ ಕಡುಪಿಗೆ ನಿಲುವೆಯ ಎಂ । ದುಲಿವುತೆಚ್ಚನು ಲಕ್ಷ್ಮಣನ ॥ ೪೩ ॥

ತಱಿಗೆಂಡಕೆ ಬಂದು ಮುಗ್ಗಿ ಮುತ್ತುವ ಬಲು । ವೊಱಲೆಯ ಬಳಗದಂದದೊಳು ॥
ನೆಱಿಗಲಿರಾಯ ರಾವುತರು ಮೂದಲಿಸುತ । ತಱುಬದರಾ ಲಕ್ಷ್ಮಣನ ॥ ೪೪ ॥

ಹತ್ತು ಸಾವಿರ ಹಯ ಕರಿಯೈನೂಱಿಂ । ಬತ್ತು ಸಾವಿರ ಪದಚರರು ॥
ಮುತ್ತಿಕೊಂಡಿತು[6] ಲಕ್ಷ್ಮಣನನು ಘೋಯೆಂ । ದತ್ತಿತ್ತ ಮಿಡುಕದಂದದೊಳು ॥ ೪೫ ॥

ಆಱುನೂಱು ರಥವೆಂಟುನೂಱು ಖೇಚರರಂ । ದಿಱಿವ ಭಟರು ಮೂಱು ಲಕ್ಷ[1] ॥
ತಱುಬಿತು ಲಕ್ಷ್ಮಣನನು ಕೋಪಾಗ್ನಿಯಿಂ । ಮುಱಿದು ಮೋದುವೆವೆಂದೆನುತ[2] ॥ ೪೬ ॥

ನಾಕನಾಯಕಿಯರ ಸರಸಸನ್ಮಾನದಾ । ನೀಕವನವರ ತಕ್ಕೆಯನು ॥
ಬೇಕೆಂದು ಬಯಸುವ ಸುಭಟರು ಬಂದು ನಿ । ರಾಕರಿಸಿಯೆ ಮುತ್ತಿದರು ॥ ೪೭ ॥

ಎಡಬಲದೊಳು ಕವಿವರ ಕೆದಱಿಸಿ ಬಲ । ಗಡೆಯ ವೀರರ ಮೆದೆಗೆಡಹಿ ॥
ಮಡುಹಿದ ಹಿಂದುಮುಂದಣ ದೊರೆಗಳ ಕಂ । ಗೆಡಿಸಿದನುಳಿದರನವನು ॥ ೪೮ ॥

ಒಗ್ಗೊಡೆಯಿಸಿದ ಧೀರರ ಬಂದು ಮುಂದಕೆ । ಮುಗ್ಗುವ ಬಲು ರಾವುತರ ॥
ಮುಗ್ಗಿಸಿದನು ಕೆಲಬರನವ ಕಳುಪಿದ । ಸಗ್ಗದ ಸತಿಯರ ರತಿಗೆ[3] ॥ ೪೯ ॥

ನೂಱು ಕರಿಯನಿನ್ನೂಱು ಹಯವನೆಂಟು । ನೂಱು ರಥರ ದೇಹವನು ॥
ದೋಱಿಗಳೆದುದೊಂದು ಬಾಣ ಲಕ್ಷ್ಮಣನ ಬಿ । ಲ್ಲಾಱತನವ ಪೇಳ್ವರಾರು ॥ ೫೦ ॥

ಹತ್ತು ಶರದಿ ಕರಿಗಳ ಹಯಗಳನೆಂ । ಬತ್ತು ಬಾಣದಿ ಪದಚರರ ॥
ಕೆತ್ತಿದ ನೂಱು ಬಾಣದಿ ಲಕ್ಷ್ಮಣ ತನ್ನ । ಮುತ್ತಿಗೆಯನು ಕೆದಱಿಸಿದ ॥ ೫೧ ॥

ಬಿಟ್ಟು ಗಜವ ಜೋದರು ಹಯಗಳ ನೂಕಿ । ಬಿಟ್ಟರು ರಾಯರಾವುತರು ॥
ಬಿಟ್ಟರು ರಥಿಕರು ರಥವ ಲಕ್ಷ್ಮಣನಿಗೆ । ಕೆಟ್ಟೋಡಿತರಿಬಲವಬಲೆ ॥ ೫೨ ॥

ಮಱಿಸಿ ಮೊಗವ ಮುಸುಕಿಟ್ಟು ದೊರೆಗಳು ಕ । ಣ್ದೆಱೆದು ನೋಡದೆ ಸಿರಗಳನು ॥
ಎಱಗಿಕೊಳುತ[4] ಪರಿದರು ಜೀವದಾಸೆಯಿಂ । ಹಱಿಹಂಚಾಯ್ತರಿಸೇನೆ[5] ॥ ೫೩ ॥

---

ಕವಲದಂತೆ ಬಂದು ಮುತ್ತಿದರು ॥ ೪೫ ॥ ಆರು ನೂರು ರಥಗಳೂ ಎಂಟುನೂರು ಖೇಚರರೂ ಮೂರು ಲಕ್ಷ ತಿವಿವ ಸೈನಿಕರೂ ಲಕ್ಷ್ಮಣನನ್ನು ಮುರಿದು ತಿನ್ನುವೆವು ಎಂಬಂತಹ ಕೋಪಾಗ್ನಿಯಿಂದ ಕೂಡಿ, ಪ್ರತಿಭಟಿಸಿದರು. ॥ ೪೬ ॥ ಸ್ವರ್ಗ ಲೋಕದ ನಾಯಕಿಯರು ಮಾಡುವ ಸರಸ ಸಮ್ಮಾನಗಳನ್ನೂ ಅವರ ಆಲಿಂಗನವನ್ನೂ ಅಪೇಕ್ಷಿಸುವ ಭಟರು ಬಂದು, ಲಕ್ಷ್ಮಣ ನನ್ನು ತುಚ್ಛೀಕರಿಸುತ್ತ ಬಂದು ಮುತ್ತಿದರು ॥ ೪೭ ॥ ಆಗ ಲಕ್ಷ್ಮಣನು, ತನ್ನ ಎಡಬಲಗಳಲ್ಲಿ ಬಂದು ಮುತ್ತುವವರನ್ನು ಚದರಿಸಿದನು ಬಲಗಡೆ ಬಂದ ವೀರರನ್ನು ಕೊಂದು ರಾಶಿ ಬೀಳಿಸಿದನು. ಹಿಂದೆ ಮುಂದೆ ಬಂದ ರಾಜರನ್ನು ಸಂಹಾರಮಾಡಿ. ಉಳಿದವರನ್ನು ಕಂಗೆಡಿಸಿದನು ॥ ೪೮ ॥ ಧೀರರ ಸಂದಣಿಯನ್ನು ಚದರಿಸಿದನು. ಮುಂದೆಮುಂದೆ ಬಂದ ಅಶ್ವವಾಹಕರನ್ನು ನಾಶಗೊಳಿಸಿದನು. ಕೆಲವರನ್ನು ಸ್ವರ್ಗದ ಹೆಂಗುಸರ ಪ್ರೀತಿಗಾಗಿ ಕಳುಹಿದನು ॥ ೪೯ ॥ ಲಕ್ಷ್ಮಣನ ಬಾಣವು ನೂರು ಆನ ಗಳನ್ನೂ, ಇನ್ನೂರು ಕುದುರೆಗಳನ್ನೂ ಎಂಟುನೂರು ರಥಿಕರ ದೇಹಗಳನ್ನೂ ಪುಡಿಗುಟ್ಟಿತು ಅವನ ಧನುರ್ವಿದ್ಯಾನೈಪುಣ್ಯ ವನ್ನು ಹೇಳುವವರು ಯಾರು? ॥ ೫೦ ॥ ಪತ್ತು ಬಾಣಗಳಿಂದ ಆನೆಗಳನ್ನೂ, ಎಂಬತ್ತು ಬಾಣಗಳಿಂದ ಕುದುರೆಗಳನ್ನೂ, ನೂರು ಬಾಣಗಳಿಂದ ಪದಾತಿಗಳನ್ನೂ ತುಂಡರಿಸಿ ಲಕ್ಷ್ಮಣನು ತನ್ನ ಮೇಲೆ ಮಾಡಿರುವ ವೈರಿಗಳ ಮುತ್ತಿಗೆಯನ್ನು ಚದರಿಸಿ ಬಿಟ್ಟನು ॥ ೫೧ ॥ ಎಲೈ ಚೇಳಿನಿಯೇ. ಲಕ್ಷ್ಮಣನಿಗೆ ಹೆದರಿ. ಯೋಧರು ಆನೆಗಳನ್ನು ಬಿಟ್ಟು ಓಡಿದರು ಅಶ್ವಾರೋಹಿ ರಾಜರು ಕುದುರೆಗಳನ್ನು ನೂಕಿಬಿಟ್ಟು ಓಡಿದರು ರಥಿಕರು ತಮ್ಮ ರಥಗಳನ್ನು ಬಿಟ್ಟು ದಿಕ್ಕಾಪಾಲಾಗಿ ಓಡಿದರು ॥ ೫೨ ॥ ಸೋತ ವೈರಿರಾಜರು ಮುಸುಕುಹಾಕಿ ಮುಖವನ್ನು ಮರೆಮಾಡಿ ಕಣ್ಣುತೆರೆದು ಕೂಡ ಅತ್ತಿತ್ತ ನೋಡದೆ, ತಲೆತಗ್ಗಿಸಿಕೊಂಡು.

---

[1] ಲಕ್ಕ (ಜ) [2] ಮೋದುವೆನೆಂದೆನುತ (ಜ) [3] ಸತಿಯರಿಂಗಬಲೆ (ಜ) [4] ಆಱಸಿಕೊಳುತ (ಜ) [5] ಹಱಿಹಂಚಾಯಿತಾ ಸೇನೆ (ಜ)

ಸವರಿದ ಕಾಲವರನು ಮೇಲವರನು । ತಿವಿದು ಕೆಡಹಿದ ದೊರೆಗಳ ॥
ಜವಪುರವನು[1] ಕೂಡಿದ ಮಿಕ್ಕ ಪಡೆಯನು । ಜವಗೆಡಿಸಿದ ಲಕ್ಷ್ಮಣನು ॥ ॥ ೫೪ ॥

ಬಲ ಬಱತುದ ಕಂಡಿಂದಗಿ ಹಿಂದಣ । ಬಲವನೆಲ್ಲವ ಕೂಡಿಕೊಂಡು ॥
ಕಲಹಕೆ ನಿಂದನು ಯಿಂದಗಿ[2]ಯಂತಪ್ಪ । ಕಲಿಗಳಾರುಂಟು ಲೋಕದಲಿ ॥ ೫೫ ॥

ಪಡೆಯ ಬೆದಱಿಸಿ ಕೆಡಿಸಿದ ಬಲುಹ ನೀ । ಬಿಡು ಬಿಡು ಬಂದು ನೀನೆನ್ನ ॥
ಒಡನೆ ಯುದ್ಧವ ಮಾಡಿದೊಡೆ ಯಮರಾಜನ । ಪಡೆವಳನಾಗಿ ಬರ್ದುಕುವೆ ॥ ೫೬ ॥

ಸರಿಯದೆ ಸರಿಸಕೆ ನಿಂದು ನೀನೆನ್ನೊಳು । ಧುರವನೆಸಗಿದೊಡೆ ನಿನ್ನ ॥
ಹರಣವ ತೆಗೆದು ಕಾಲನ ಕರಣಿಕರೊಳು[3] । ಬರೆಸುವೆನೆಂದ ಲಕ್ಷ್ಮಣನು ॥ ೫೭ ॥

ಕುಲಿಶದ ಗಾಯಕಳುಕದ ವಾರಣ ವೆಳೆ । ಸೆಳೆಯ[4] ಹುಯ್ಲಿಗೆ ಸುಗಿದಪುದೆ ॥
ಅಳುಕಬಲ್ಲೆನೆ ನಿನ್ನ ಶರಜಾಲಕೆಂದವ । ತಳುವದೆಚ್ಚನು ಯಿಂದಗಿಯ ॥ ೫೮ ॥

ಇಂದಗಿಯಗ್ನಿಬಾಣವ ಬಿಡೆಯದಕಾ । ನಂದದಿಂ ಸಲಿಲ ಮಾರ್ಗಣದ ॥
ವೃಂದದಿಂದದ ಕೆಡಿಸಿದ ಬಿಲ್ಗಾಱಿಕೆ । ಯಂದವನಾರು ಬಣ್ಣಿಪರು ॥ ೫೯ ॥

ಸಾವಿರ ಕರಿ ಹತ್ತು ಸಾವಿರ ಹಯ ನೂಱು । ಸಾವಿರ ಚರರಿಂದಗಿಯ ॥
ಮೂವಳಸಾಗಿ ಮುತ್ತಿದುದಾ[5] ಲಕ್ಷ್ಮಣ । ದೇವನ ಬೆರಲ ಸನ್ನೆಯಲಿ ॥ ೬೦ ॥

ವರ ರಥಿಕರು ಸಾವಿರದೈನೂಱು ಖೇ । ಚರರು ಸಾವಿರದೆಂಟುನೂಱು ॥
ಇರದೆ ಮುತ್ತಿದರೆಂಟು ಲಕ್ಷ ಚರರು ಧುರ । ಧರಣಿಯೊಳಗೆಯಿಂದಗಿಯ ॥ ೬೧ ॥

---

ಪ್ರಾಣದ ಆಸೆಯಿಂದ ಓಡಿಹೋದರು. ವೈರಿಸೈನ್ಯವೆಲ್ಲವೂ ಚೂರುಚೂರಾಯಿತು ॥ ೫೩ ॥ ಲಕ್ಷ್ಮಣನು ಕಾಲಾಳುಗಳನ್ನು ತುಂಡರಿಸಿದನು. ಮೇಲಾಳುಗಳನ್ನು ತಿವಿದು ನೆಲಕ್ಕೆ ಬೀಳಿಸಿದನು. ದೊರೆಗಳನ್ನು ಯಮನ ಪಟ್ಟಣಕ್ಕೆ ಸೇರಿಸಿದನು. ಉಳಿದ ಸೇನೆಯನ್ನೆಲ್ಲ ಶಕ್ತಿಕುಂದಿಸಿದನು ॥ ೫೪ ॥ ಇಂದಗಿಯು ತನ್ನ ಸೈನ್ಯವು ಹೀಗೆ ನಷ್ಟವಾದುದನ್ನು ಕಂಡು ಹಿಂದೆ ನಿಂತಿದ್ದ ಸೈನ್ಯವನ್ನು ಕೂಡಿ ಪುನಃ ಯುದ್ಧಕ್ಕೆ ಅನುವಾದನು. ಲೋಕದಲ್ಲಿ ಇಂದಗಿಯಂತಹ ಶೂರರು ಯಾರಿರುವರು! ॥ ೫೫ ॥ ನನ್ನ ಸೈನ್ಯವನ್ನೆಲ್ಲ ಹೆದರಿಸಿ ನಾಶಗೊಳಿಸಿದ ಸಾಮರ್ಥ್ಯವನ್ನು ಬಿಡು. ನೀನು ಬಂದು ನನ್ನೊಡನೆ ಯುದ್ಧಮಾಡಿದರೆ ಯಮರಾಜನ ಸೇನಾಧಿಕಾರಿಯಾಗಿ ಬದುಕುವೆ—ಎಂದು ಇಂದಗಿ ಹೇಳಿದನು ॥ ೫೬ ॥ ಆಗ ಲಕ್ಷ್ಮಣನು ಹೀಗೆಂದನು— ನೀನು ಹಿಂಜರಿಯದೆ ನನಗೆ ಎದುರುನಿಂತು ಕಾದಾಡಿದರೆ ನಿನ್ನ ಪ್ರಾಣವನ್ನು ತೆಗೆದು ಯಮನ ಕರಣಿಕರ ಲೆಕ್ಕಕ್ಕೆ ನಿನ್ನನ್ನು ಸೇರಿಸುವೆನು ॥ ೫೭ ॥ ವಜ್ರದ ಗಾಯಕ್ಕೆ ಅಂಜದ ಆನೆಯು ಎಳತಾದ ಬೆತ್ತದ ಪೆಟ್ಟು ಬೀಳುವಾಗ ಹೆದರುವುದೆ? ಅದರಂತೆ ನಿನ್ನ ಬಾಣಗಳ ಸಮೂಹಕ್ಕೆ ನಾನು ಭಯಪಡುವೆನೆ?—ಎಂದು ಇಂದಗಿಗೆ ಬಾಣ ಪ್ರಯೋಗಮಾಡಿದನು ॥ ೫೮ ॥ ಆಗ ಇಂದಗಿಯು ಅಗ್ನಿಶರವನ್ನು ಬಿಟ್ಟನು. ಅದನ್ನು ಲಕ್ಷ್ಮಣನು ಜಲಬಾಣದಿಂದ ಹಿಂಡಿಸಿದನು. ಅವನ ಧನುರ್ವಿದ್ಯೆಯ ಕೌಶಲವನ್ನು ಬಣ್ಣಿಸುವವರು ಯಾರು? ॥ ೫೯ ॥ ಆಗ ಲಕ್ಷ್ಮಣನ ಬೆರಲ ಸನ್ನೆಯಂತೆ ಇಂದಗಿಯನ್ನು ಸಾವಿರ ಆನೆಗಳು ಹತ್ತು ಸಾವಿರ ಕುದುರೆಗಳು ನೂರು ಸಾವಿರ ಕಾಲಾಳುಗಳು ಮೂರು ಬಳಸಿನಿಂದ ಮುತ್ತಿಗೆ ಹಾಕಿದರು ॥ ೬೦ ॥ ಶ್ರೇಷ್ಠ ರಥಿಕರು ಸಾವಿರದ ಐನೂರು ಖೇಚರರು ಸಾವಿರದ ಎಂಟುನೂರು, ಪದಾತಿಗಳು ಎಂಟುಲಕ್ಷ—ಇವು ಆ ಯುದ್ಧರಂಗದಲ್ಲಿ ಇಂದಗಿ

---

[1] ಜವನೂರನು (ಚ) [2] ಕಲಹವನೆಸಗಿದನಿಂದಗಿ (ಚ) [3] ಕರಣಿಕನೊಳು (ಚ) [4] ವಾರಣಕೇಸೆಳೆಯ (ಚ) [5] ಮುತ್ತಿದರಾ (ಚ)

ಹೊಕ್ಕು ತಿವಿದ ದೊರೆ ದೊರೆಗಳ ಖಡ್ಗವ । ಸೆಕ್ಕಿ ಬಿಡುವ ರಾವುತರ ॥
ಮುಕ್ಕಿಱಿವುತ ಕೋಪದಿಂದಿಂದಗಿ ಕೊಂದ । ಲೆಕ್ಕವಿಲ್ಲದೆ ಪರಬಲವ ॥ ೬೨ ॥

ಎಂಟು ಗಜವ ಹದಿನೆಂಟು[1] ಹಯವ ನೂ । ಱೆಂಟು ಚರರ ತಟ್ಟುಗಿದು ॥
ನಾಂಟಿತವನ ಬಾಣವೆನಲಾರೆಣೆಯಿ । ನ್ನುಂಟೆ ಬಿಲ್ಗಾಱಿಕೆಗವನ ॥ ೬೩ ॥

ಏಳು ಬಾಣದಿ ಕರಿಗಳ ಹಯಗಳ ಹದಿ । ನೇಳು ಬಾಣದಿ ನೂಱು ಶರದಿ ॥
ಆಳನೆಚ್ಚಿರದೆ ನಿಲಿಸಿದ ತನ್ನುಱುಬೆಯ । ಗೋಳಿಡಿಸಿದ ಪರಬಲವ ॥ ೬೪ ॥

ಎಸುವ ಕೈಚಳಕ ಪಗೆಯರೆಚ್ಚ[2]ಸರಲ ಖಂ । ಡಿಸುವ ವಹಿಲ ತನ್ನ ಮೇಲೆ ॥
ಮುಸುಕುವ ದೊರೆಗಳ ಮುಂದುಗೆಡಿಸುವ[3] ಸಾ । ಹಸವನೇನೆಂಬೆನಿಂದಗಿಯ ॥ ೬೫ ॥

ಹಸಿದ ಹೆಬ್ಬುಲಿ ರೋಷಮಸಗಿ ಪಾಯಲು ಕೆಟ್ಟು । ಪಶುಸಂಕುಲ ಪೋಪಂತೆ ॥
ಸಸಿದು ಪೋಪುದು ಪರಬಲವೆನಲವ ಕೊಂದು । ಹಸಗೆಡಿಸಿದ ಹರಿಣಾಕ್ಷಿ ॥ ೬೬ ॥

ಪಗಲಾಣ್ಮನಿರುಳಾಣ್ಮನಿಗೆ ಬೆದರಿ ಪೊಗ । ದೆಗೆವುದೆ ನಿನ್ನ[4] ಕೋಲ್ಗಳಿಗೆ ॥
ಆಗಿವನಲ್ಲೆಂದು ಲಕ್ಷ್ಮಣನೆಚ್ಚವನನು । ಮೊಗಗೆಡಿಸಿದ ಕಳದೊಳಗೆ ॥ ೬೭ ॥

ಎಲುವಿಲ್ಲದ ನಾಲಗೆಯೊಳು ಲಕ್ಷ್ಮಣ ನೀ । ಹಲವ ನುಡಿದೊಡೇನು ನನ್ನ ॥
ಕಲಹಕೆ ನಿಂದೊಡೆ ನಿನ್ನನು ಸಗ್ಗದ । ಲಲನೆಯರುಗಳ್[5] ಕಾಣಿಸುವೆ ॥ ೬೮ ॥

ಆಳುವಾಸೆಯ ಮಾತು ಬೇಡ ನೀನಿದಿರಾಗಿ । ಕಾಳಗವನು ಮಾಡಿದೊಡೆ ॥
ಆಳಿಸುವೆನು ಯಮಲೋಕವನೆಂದವ । ತೂಳಿದನಂಬಿನ ಮಳೆಯ[6] ॥ ೬೯ ॥

---

ಯನ್ನು ಮುತ್ತಿದವು ॥ ೬೧ ॥ ಆಗ ಇಂದಗಿಯು ಒಳನುಗ್ಗಿ ತಿವಿಯುವ ರಾಜರ ಖಡ್ಗಗಳನ್ನು ಮುರಿದನು. ಕುದುರೆ ಸವಾರರನ್ನು ತಿವಿದು, ಅಸಂಖ್ಯವಾಗಿ ವೈರಿ ಸೈನಿಕರನ್ನು ಕೊಂದನು ॥ ೬೨ ॥ ಆತನ ಬಾಣವು ಎಂಟು ಆನೆಗಳನ್ನೂ ಹದಿನೆಂಟು ಕುದುರೆಗಳನ್ನೂ, ನೂರೆಂಟು ಕಾಲಾಳುಗಳನ್ನೂ ಭೇದಿಸಿ, ನಾಟಿಕೊಂಡಿತೆನ್ನುವಾಗ, ಅವನ ಬಿಲ್ಲುಗಾರಿಕೆಗೆ ಎಣೆಯಿದೆಯೆ? ॥ ೬೩ ॥ ಏಳು ಬಾಣಗಳಿಂದ ಆನೆಗಳನ್ನೂ. ಹದಿನೇಳು ಬಾಣಗಳಿಂದ ಕುದುರೆಗಳನ್ನೂ. ನೂರು ಬಾಣಗಳಿಂದ ಕಾಲಾಳುಗಳನ್ನೂ ಹೊಡೆದು ತನ್ನ ಶೌರ್ಯವನ್ನು ಸ್ಥಿರಗೊಳಿಸಿದನು. ವೈರಿ ಸೈನ್ಯವನ್ನು ಗೋಳಾಡಿಸಿದನು ॥ ೬೪ ॥ ಇಂದಗಿಯ ಬಾಣಪ್ರಯೋಗದ ಚಳಕವನ್ನೂ, ವೈರಿಗಳ ಬಾಣವನ್ನು ತುಂಡರಿಸುವ ತೀವ್ರತೆಯನ್ನೂ ತನ್ನ ಮೇಲೆ ಕವಿದ ರಾಜರನ್ನು ಸತ್ವಹೀನರನ್ನಾಗಿ ಮಾಡುವ ಸಾಹಸವನ್ನೂ ಏನೆನ್ನಲಿ! ॥ ೬೫ ॥ ಎಲೈ ಚೆಳಿನಿಯೇ. ಹಸಿದ ಹೆಬ್ಬುಲಿ ಸಿಟ್ಟಾಗಿ ಹಾರುತ್ತಿರಲು. ಹಸುಗಳ ಹಿಂಡು ದಿಕ್ಕುಗೆಟ್ಟು ಓಡಿಹೋಗುವ ರೀತಿಯಲ್ಲಿ ಶತ್ರು ಸೈನ್ಯವು ಕುಗ್ಗಿ ಓಡಿಹೋಗುತ್ತಿರುವುದೆಂಬಂತೆ ಇಂದಗಿ ಕೊಂದು ಹನಗೆಡಿಸಿದನು ॥ ೬೬ ॥ ಸೂರ್ಯನು ಚಂದ್ರನಿಗೆ ಹೆದರಿ ಹಿಂಜರಿಯುವನೆ? ಹಾಗೆಯೇ ನಿನ್ನ ಬಾಣಗಳಿಗೆ ನಾನು ಹೆದರುವವನಲ್ಲ—ಎಂದು ಲಕ್ಷ್ಮಣನು ಇಂದಗಿಗೆ ಬಾಣಗಳನ್ನೆಚ್ಚು ಮುಖಭಂಗವನ್ನು ಉಂಟುಮಾಡಿದನು ॥ ೬೭ ॥ ಆಗ ಇಂದಗಿ ಹೀಗೆಂದನು— ಎಲೈ ಲಕ್ಷ್ಮಣಾ. ಎಲುಬಿಲ್ಲದಿರುವ ನಾಲಗೆಯಲ್ಲಿ ನೀನು ಅದೆಷ್ಟು ಮಾತಾಡಿದರೆ ಏನಾಯಿತು? ನನ್ನೊಡನೆ ಯುದ್ಧಮಾಡಿದರೆ ನಿನಗೆ ದೇವಲೋಕದ ಸ್ತ್ರೀಯರನ್ನು ಕಾಣಿಸುವನು ॥ ೬೮ ॥ ಈ ಲೋಕವನ್ನು ಆಳುವ ಆಸೆಯನ್ನು ಬಿಟ್ಟುಬಿಡು ನೀನು ನನಗಿದಿರಾಗಿ ಕಾದಾಡಿದರೆ ಯಮಲೋಕವನ್ನು ಆಳುವಂತೆ ಮಾಡುವನು—ಎಂದು

---

[1] ಗಜವನೇಳೆಂಟು (ಚ) [2] ಪಗೆವರೆಚ್ಚ (ಚ) [3] ಮೊಗಗೆಡಿಸುವ (ಚ) [4] ದೆಗೆಸಮೆತನ್ನ (ಕ) [5] ಲಲನೆಯರನು (ಚ). [6] ಮಣಿಯ (ಚ).

ಮೊಲನಲೆಯಲಿ ಸಿಕ್ಕಬಲ್ಲುದೆ ದಂತಾ । ವಲ ನಿನ್ನ ಕೋಲ್ವಲೆಯೊಳಗೆ ॥
ಸಿಲುಕಬಲ್ಲೆನೆ ನಾನೆನುತ ಶರಂಗಳ । ಜಲಧಿಯ ಕಱೆದನಾಕ್ಷಣದಿ ॥ ॥ ೨೦ ॥

ಮುಗಿಲ ಮಱೆಯ ಹೊಕ್ಕರೆ ಬಿಡುವುದೆ ರಾಹು । ಮೃಗಧರನನು ನೀನೆನ್ನ[1] ॥
ಅಗಣಿತಬಲವ ಸಾರಿದೊಡೆ ನಿನ್ನಸುವನು । ತೆಗೆಯದೆ ಬಿಡೆಯೆಂದನವನು ॥ ೨೧ ॥

ತಿಮಿರವೊಬ್ಬುಳಿ ನಿಲುವುದೆ ಭಾನುರಶ್ಮಿಗೆ । ಯಮಮ ಕೇಳಿಂದಗಿ ನನ್ನ ॥
ಸಮರದೊಳಗೆ ನಿಂದೆಯಾದೊಡೆ ಕೊಡುವೆನಾ । ಯಮಲೋಕದರಸುತನವನು ॥ ೨೨ ॥

ಬಱುಗಾಳಿಗೆ ಮುಱಿವುದೆ[2] ಹೇಮಶೈಲ ನಿ । ನ್ನುಱುಬೆಯ ಬಿಱುಬಗೆ ಬೆದಱಿ ॥
ಹೆಱಸಾರುವನಲ್ಲೆಂದು ಲಕ್ಷ್ಮಣನನು । ತಱುಬಿದ ಹತ್ತು ಶರದಲಿ ॥ ೨೩ ॥

ಬೊಬ್ಬೆಯಬ್ಬರ[3] ಬಿಲ್ದನಿವೆಗ್ಗಳ ಕೈದಿ । ನಬ್ಬರ ಬಲದಿ ಲಕ್ಷ್ಮಣನು[4] ॥
ಒಬ್ಬನೆ ಕಾದುವನೆಂದು ರಾಘವ ತನ್ನ । ಹೆಬ್ಬಲವನು ಕಳುಹಿದನು ॥ ೨೪ ॥

ಮತ್ತೆಗಂಟಕ್ಕಿತೆರಡು ಬಲ ಕೋಪದಿಂ । ತತ್ತಱದಱಿದಾಡಿ ರಣದಿ[5] ॥
ಸತ್ತುದರೆಬರರೆಬರು ಬಲುಗಾಯವ । ಹೊತ್ತುದು ನಿಲುಕದೆಣಿಕೆಗೆ ॥ ೨೫ ॥

ಹೆಱ ಸಾರದೆರಡುತಟ್ಟಿನ ಬಲುವೀರರು । ತಱಿದಾಡಿ ಹರಣವನುಳಿದು[6] ॥
ತಱುಬಿತು[7] ತೆಱಪಿಲ್ಲದೆ ಜವಪುರದೊಳು । ಹೊಱ ಕೇರಿಗಟ್ಟಿದುದಬಲೆ ॥ ೨೬ ॥

---

ಬಾಣದ ಮಳೆಯನ್ನೇ ಮುಂದುವರಿಸಿದನು ॥ ೧೯ ॥ ಆನೆಯು ಮೊಲದ ಬಲೆಯಲ್ಲಿ ಸಿಲುಕಬಲ್ಲುದೆ? ನಿನ್ನ ಬಾಣದ ಬಲೆಯಲ್ಲಿ ನಾನು ಸಿಕ್ಕುವೆನೆ? ಎನ್ನುತ್ತ ಆಗಲೆ ಬಾಣಗಳ ಸಮುದ್ರವನ್ನೇ ಸುರಿಸಿದನು ॥ ೨೦ ॥ ಚಂದ್ರನು ಮೋಡದಲ್ಲಿ ಮರೆಯಾದ ಮಾತ್ರಕ್ಕೆ ರಾಹುವು ಅವನನ್ನು ಬಿಡುವುದೆ? ನೀನು ನಿನ್ನ ಅಸಂಖ್ಯವಾದ ಸೈನ್ಯದ ನಡುವೆ ಇದ್ದರೆ, ನಿನ್ನ ಪ್ರಾಣವನ್ನು ತಗೆಯದೆ ಬಿಡೆನು—ಎಂದು ಅವನು ಹೇಳಿದನು ॥ ೨೧ ॥ ಎಲೋ ಇಂದ್ರಜಿ ಕೇಳು ಸೂರ್ಯನ ಪ್ರಕಾಶಕ್ಕೆ ಎದುರಾಗಿ ಕತ್ತಲೆ ನಿಲ್ಲಬಲ್ಲುದೆ? ಅಮಮಾ! ಯುದ್ಧದಲ್ಲಿ ನೀನು ನನಗೆ ಎದುರಾದರೆ ನಿನಗೆ ನಾನು ಯಮಲೋಕದ ಒಡೆತನವನ್ನು ಕೊಡುವೆನು ॥ ೨೨ ॥ ಆಗ ಇಂದ್ರಜಿ—'ಆ ಮೇರುಪರ್ವತವು ಬಿರುಗಾಳಿಯ ಹೊಡೆತಕ್ಕೆ ಮುರಿವುದುಂಟೆ? ನಿನ್ನ ಸಾಮರ್ಥ್ಯಕ್ಕೆ ಹೆದರಿ ನಾನು ಹಿಂದೆ ಸರಿವವನಲ್ಲ ಎಂದು ಹತ್ತು ಬಾಣಗಳಿಂದ ಲಕ್ಷ್ಮಣನನ್ನು ಪ್ರತಿಭಟಿಸಿದನು ॥ ೨೩ ॥ ಆ ಸಂದರ್ಭದಲ್ಲಿ ಶ್ರೀರಾಮನು ತನ್ನ ತಮ್ಮ ಲಕ್ಷ್ಮಣನ ಬೊಬ್ಬೆಯ ಅಬ್ಬರಗಳನ್ನೂ ಬಿಲ್ಲಿನ ಟಂಕಾರದ ಹೆಚ್ಚಳವನ್ನೂ ಆಯುಧಗಳ ಅಬ್ಬರವನ್ನೂ ತಿಳಿದು ಲಕ್ಷ್ಮಣನು ಒಬ್ಬನೇ ಯುದ್ಧಮಾಡುತ್ತಿರುವನೆಂದು ತಿಳಿದು. ತನ್ನ ಮಹಾಸೈನ್ಯವನ್ನು ಕಳುಹಿದನು ॥ ೨೪ ॥ ಆ ಮೇಲೆ ಪುನಃ ಎರಡೂ ಕಡೆಯ ಸೈನ್ಯಗಳು ಕಾದಾಟಕ್ಕೆ ತೊಡಗಿದವು ಹಲವರು ಒಬ್ಬರನ್ನೊಬ್ಬರು ಕತ್ತರಿಸಿ ಸತ್ತರು ಗಾಯಗೊಂಡವರು ಅಸಂಖ್ಯರಾದರು ॥ ೨೫ ॥ ಎರಡೂ ದಳಗಳ ಮಹಾಶೂರರು ಹೋರಾಡಿ ಸತ್ತು ಯಮಪುರಕ್ಕೆ ತರಳಿದರು ಅಲ್ಲಿ ಇವರಿಗೆಲ್ಲ ಸ್ಥಳ ಸಾಲದೆ ಹೊರಗೆ ಬೇರೆ ಬೀದಿಯನ್ನೇ ನಿರ್ಮಾಣಮಾಡಬೇಕಾಯಿತು ॥ ೨೬ ॥ ಆ ಯುದ್ಧದಲ್ಲಿ ಯುದ್ಧಕವಚಗಳು ಹರಿದು ಶಿರಸ್ತ್ರಾಣಗಳು ಪುಡಿಯಾಗಿ ಇತರ ಕವಚಗಳು ತುಂಡಾಗಿ ಜಲವು ಕಟ್ಟು ರಕ್ತ, ಸೈನ್ಯವಂಬುದು ಭಯದ ಬೀಡಾಯಿತು ॥ ೨೭ ॥ ಯುದ್ಧದಲ್ಲಿ ಬಾಣಗಳು ಅವುಗಳ

---

[1] ನಾನು ನಿನ್ನ (ಜ) [2] ನಿಲುವುದೆ (ಕ) [3] ಹುಬ್ಬಿನಬ್ಬರ (ತ) [4] ಬಲುಹು ಲಕ್ಷ್ಮಣನ (ಚ) [5] ದಱಿದೀ ರಣದಿ (ಕ)
[6] ಕಳುಪಿ (ಜ) [7] ತುಱುಗಿತು (ಜ)

ಜೋಡು ಹಱಿದು ಸೀಸಕ ನುಗ್ಗುನುಱಿಯಾಗಿ[1] । ಕೂಡೆ ಕವಚ ಖಂಡಿಸಲು ॥
ಪಾಡುಗೆಟ್ಟರಿಬಲವೆಸೆದುದು ಭೀತಿಯು । ಬೀಡಿನಂತಾಹವದೊಳಗೆ ॥ ೭೭ ॥

ಗಱಿಗಳು ಸಹಿತ ತಟ್ಟುಗಿದಂಬು ಬೀಳಲು । ತೊಱೆದು ಸುಭಟರು ದೇಹವನು ॥
ನೆಱೆಗಲಿಗಳು ಪೋಗಿ ಪಿಡಿದರು ನಾಕದ । ಸಱಿವಿಂಡಿಯರ ತೋರ ಮೊಲೆಯ ॥ ೭೮ ॥

ಬಿಟ್ಟ ಮಂಡೆಯೊಳು ಬಿಸುಟು ಬಿಲ್ಲ ಕೈಲಿಡೆ । ಗೊಟ್ಟು ಧರಣಿಗೆ ಕೈದುಗಳ ॥
ಕೆಟ್ಟೆವೆನುತಲಳ್ಳೆ ವೊಯ್ಯುತ ಚರರಂದು । ಕೆಟ್ಟೋಡಿತೆರಡು ಬಲದಲಿ ॥ ೭೯ ॥

ಸುರಿದ[2] ಕರುಳಿನ ಸಿಡಿದ ಪಲ್ಗಳ ಜಜ್ಜು[3] । ಜರಿದ ದೇಹಗಳಿಂದ ಹಱಿದ ॥
ನರಗಳಿಂ ಮುಱಿದೆಲುವಿಂದೊಱಗಿದ ಬಲು । ಚರರಿಂದೆಸೆದುದಾ ಭೂಮಿ ॥ ೮೦ ॥

ಬಿಗಿದ ಹುಬ್ಬಿನ ಬಿಟ್ಟ ಕಂಗಳ ಕಾಂತಿಯು । ಮೊಗದ[4] ಮುಱಿದ ಗೋಣುಗಳ ॥
ಅಗಿಯದೆ ಬಿಟ್ಟಸುವಿನ[5] ವೀರರಟ್ಟೆಯಿಂ । ಸೊಗಯಿಸಿತಾ ರಣಭೂಮಿ ॥ ೮೧ ॥

ಕಳೆಗುಂದದೆ ಕಾಂತಿ ಮಸುಳದೆ ಮನದೊಳು । ಮ್ಮಳ ಪುಟ್ಟದೆ ಬೀರದೇಳ್ಗೆ ॥
ಅಳಿಯದಳಿದ ವೀರರುಗಳ ನೆರವಿಯಿಂ । ಕೊಳುಗುಳ ರಾರಾಜಿಸಿತು ॥ ೮೨ ॥

ಕೊಳುಗುಳದೊಳಗೋಡಿದವರನು[6] ಪಾತಕ । ಬಳಸಿಕೊಂಬುದು ಮನದೊಳಗೆ ॥
ಅಳುಕದಳಿದ ವೀರರುಗಳ ಮೋಹಿಸಿ । ಕೆಳೆಯರಪ್ಪರು ಸುರರಬಲೆ ॥ ೮೩ ॥

ಪರಲೋಕಕಲ್ಲಿಹ ಲೋಕದವರು ತಮ್ಮ । ಸರಕು ಮಾಡರು ಉಳಿದವರು ॥
ಪರಿಹಾಸ ಗೈವರು ಧುರಧರಣಿಯೊಳೋಡಿ । ಹರಣವನುಳುಹಿಕೊಂಡವರ ॥ ೮೪ ॥

---

ಗರಿಗಳು ಕೂಡ ಬಂದು ಭೇದಿಸಿದಾಗ ಸೈನಿಕರು ದೇಹತ್ಯಾಗಮಾಡಿದರು. ಅವರಲ್ಲಿ ಅತಿಶೂರರು ದೇವಲೋಕಕ್ಕೆ ಹೋಗಿ ಅಲ್ಲಿನ ಕನ್ಯೆಯರ ತೋರ ಮೊಲೆಯನ್ನು ಹಿಡಿದುಕೊಂಡರು ॥ ೭೮ ॥ ಎರಡೂ ಕಡೆಗಳ ಕಾಲಾಳುಗಳು ಬಿಲ್ಲುಗಳನ್ನು ಬಿಟ್ಟು. ಆಯುಧಗಳನ್ನು ಭೂಮಿಗೆ ಕಾಣಿಕೆಗೊಟ್ಟು. ಅಳ್ಳೆಹೊಯ್ಯುತ್ತಿರಲು. ಕೆದರಿದ ತಲೆಗೂದಲನ್ನು ಕಟ್ಟದೆ ಹಾಗೆಯೇ ದಿಕ್ಕುಗೆಟ್ಟು ಓಡಿದರು ॥ ೭೯ ॥ ಆ ಯುದ್ಧಭೂಮಿಯು ಸುರಿದ ಕರುಳಿನಿಂದಲೂ ಹಾರಿಹೋದ ಹಲ್ಲುಗಳಿಂದಲೂ. ಜಜ್ಜಿಹೋಗಿ ಜರಿದು ಬಿದ್ದ ಶರೀರಗಳಿಂದಲೂ. ಹರಿದ ನರಗಳಿಂದಲೂ. ಮುರಿದ ಮೂಳೆಗಳಿಂದಲೂ. ನಲಕ್ಕೊರಗಿದ ಕಾಲಾಳುಗಳಿಂದಲೂ ಕಾಣಿಸಿತು ॥ ೮೦ ॥ ಹುಬ್ಬುಗಂಟಿಕ್ಕಿದ. ತೆರೆದ ಕಣ್ಣಿನ ಕಾಂತಿಯುಳ್ಳ ಮುಖದ. ಮುರಿದ ಕೊರಲಿನ. ಹೆದರದೆ ಪ್ರಾಣಬಿಟ್ಟ ವೀರರ ಕಳೇಬರಗಳಿಂದ ಆ ಸಮರಾಂಗಣವು ಸೊಗಸಾಗಿದ್ದಿತು ॥ ೮೧ ॥ ಕಳಾಹೀನತೆಯುಂಟಾಗದೆ. ತೇಜವು ಮಾಯವಾಗದೆ. ಮನಸ್ಸಿನಲ್ಲಿ ಉದ್ವೇಗವುಂಟಾಗದೆ ಪರಾಕ್ರಮಾತಿಶಯವು ನಾಶವಾಗದ ಸತ್ತ ವೀರರ ಸಮೂಹದಿಂದ ರಣಮಂಡಲವು ಶೋಭಿಸಿತು ॥ ೮೨ ॥ ಎಲೈ ಚೇಳಿನಿಯೇ ಯುದ್ಧದಲ್ಲಿ ಹೆದರಿ ಓಡಿದವರಿಗೆ ಪಾಪವು ಆವರಿಸುವುದು. ಮನಸ್ಸಿನಲ್ಲಿ ಏನೂ ಹೆದರದೆ ಕಾದಿ ಮಡಿದ ವೀರರನ್ನು ದೇವತಗಳು ಪ್ರೀತಿಸಿ ಸ್ನೇಹಮಾಡಿಕೊಳ್ಳುವರು. ॥ ೮೩ ॥ ಯುದ್ಧರಂಗದಲ್ಲಿ ಕಾದಲು ಹೆದರಿ ಓಡಿ ಪ್ರಾಣವುಳಿಸಿಕೊಂಡವರನ್ನು ಪರಲೋಕದಲ್ಲಿ ಏನೂ ಮಾನ್ಯಮಾಡರು ಉಳಿದವರು ಅಣಕಿಸುವರು ॥ ೮೪ ॥ ಯುದ್ಧದಲ್ಲಿ ಕಾದಾಡಿ ಸತ್ತರ ಪರಲೋಕದವರೂ ಸಾಯದ ಗೆದ್ದು ಉಳಿದರೆ ಮನುಷ್ಯಲೋಕ

---

[1] ನುಗ್ಗುನುಸಿಯಾಗಿ (ಕ). [2] ಸರಿದ (ಜ). [3] ಜೆಲ್ಲ (ಕ) [4] ತೆಗದ (ಕ) [5] ಬಿಟ್ಟ ಸುಯ್ಲಿನ (ಕ). [6] ದೂಱಗೊಡೆದವರನು (ಜ)

ಅಳಿದಡೆ ಪರಲೋಕವಧು[1] ಸಾಯದೆ ಮ । ತ್ತುಳಿದಡೆ ನರಲೋಕದವರು ॥
ತಳುವದೆ ಮೋಹಿಪರದರಿಂದ ಧೈರ್ಯದಿಂ । ದಳಿವುದುಳಿವುದು ಲೇಸಬಲೆ ॥ ೮೫ ॥

ಒಡನುಂಬರೊಡನಾಡುವರು ತಾಂಬೂಲವ । ನಿಡುವರು ಬಾಯ್ಗೆ ಕರ್ಪುರವ ॥
ಇಡುವರು ತೊಡೆವರು ಲೇಪನಗಳ ಸುರ । ಮಡದಿಯರಾ ವೀರರಿಗೆ ॥ ೮೬ ॥

ಒತ್ತೊತ್ತಿಕೊಂಬರು ಕುಚಕುಂಭದೊಳು ಸೋಲ್ತು । ಮುತ್ತ ಕೊಡುವರು ಕಾದಿಪರು[3] ॥
ಒತ್ತಿನಿಂದಗಲದಿರ್ಪರು ಕಾದಿ ಮಡಿದ ಧೀ । ರೋತ್ತಮರಿಗೆ ಸುರವೆಣ್ಣು ॥ ೮೭ ॥

ಕಾಲ್ವಿಡಿವರು ಕನಲುವರು ಮೋಹಿಸುವರು । ಮೇಲ್ವಾಯ್ವರು ಮಮತೆಯೊಳು ॥
ಸೋಲ್ವರು ಸೊಗಸುಗಾಣಿಪರು[4] ನಾಕದ । ನಲ್ವೆಣ್ಣು ರಣಧೀರರಿಗೆ ॥ ೮೮ ॥

ಮುನಿವರೊಸೆವರು ಕೊಡುವರು ಕೊಳ್ವರು ಬಾಯ್ಗೆ । ತನಿಗಪ್ಪುರದಂಬುಲವನು ॥
ಮನಸಿಜ ಕೇಳಿಗೆ ಮೈಗೊಡುವರು[5] ಸುರ । ವನಿತೆಯರಾ ವೀರರಿಗೆ ॥ ೮೯ ॥

ಧುರಧರಣಿಯೊಳು ವೀರತ್ವದಿಂ ತಂತಮ್ಮ । ಹರಣವನುಳಿದು ಸುಭಟರು ॥
ತರಣಿಮಂಡಲವನೊಡೆದು ಪೋಗಿ ಪೊಗುವರು । ಸುರಲೋಕವ ಸಲುಗೆಯೊಳು ॥ ೯೦ ॥

ಆರು ಮೋಹಿಸರಾರು ಬೇಡಿದ ವಸ್ತುವ । ನಾರು ಕೊಡರು ಮನ್ನಿಸರು ॥
ಆರು ಕೊಂಡಾಡದರಾರು ಪೊಗಳದಿರ್ಪ । ರಾರಾ[6] ರಣಧೀರರಿಗೆ ॥ ೯೧ ॥

ತರುಣಿ ಲಾಲಿಸು ಕವಿತಾ ಮಾರ್ಗಕೆ ನಾ । ನೊರೆವೆನಲ್ಲದೆ ದುರ್ಭಾವದಲಿ ॥
ಮರಣವ ಪಡೆದವರಿಗೆ ಸ್ವರ್ಗವುಂಟೆಂಬ । ಪರಿಯ ಜೈನರು ಮೆಚ್ಚುವರೆ ॥ ೯೨ ॥

---

ದವರೂ ಒಡನೆಯೇ ಪ್ರೀತಿಸತೊಡಗುವರು ಆದುದರಿಂದ ಧೈರ್ಯದಿಂದಲೇ ಸಾಯುವುದು ಅಥವಾ ಬದುಕುವುದು ಲೇಸು ॥ ೮೫ ॥ ಕಾದಾಡಿ ಮಡಿದ ವೀರರಿಗೆ ನಿರ್ಜರ ಸ್ತ್ರೀಯರು ಸಹ ಭೋಜನದಲ್ಲಿ. ಸಹ ಕ್ರೀಡೆಯಲ್ಲಿ, ಸಹತಾಂಬೂಲಾದಿಗಳಲ್ಲಿ ಸತ್ಕರಿಸುವರು ಕರ್ಪೂರವನ್ನು ಇಡುವರು ಅನುಲೇಪನಗಳನ್ನು ಹಚ್ಚುವರು ॥ ೮೬ ॥ ಯುದ್ಧದಲ್ಲಿ ಹೋರಾಡಿ ಮಡಿದ ಅತಿಧೀರರಿಗೆ ಸುರಸ್ತ್ರೀಯರು ಕುಚಕುಂಭದಿಂದ ಮೈಯೊತ್ತುವರು. ಮುದ್ದಿಸುವರು. ಕಾಯುತ್ತಿರುವರು. ಯಾವಾಗಲೂ ಸಮೀಪದಲ್ಲೇ ಇರುವರು ॥ ೮೭ ॥ ಯುದ್ಧವೀರರಿಗೆ ದೇವತಾಸ್ತ್ರೀಯರು ಪ್ರೀತಿಯಿಂದ ವಂದಿಸುವರು, ಸಿಟ್ಟಾಗುವರು, ಮೇಲೆ ಬೀಳುವರು ವಶರಾಗುವರು ತಮ್ಮ ಚೆಲುವನ್ನು ಪ್ರಕಟಿಸುವರು ॥ ೮೮ ॥ ಅಂತಹ ವೀರರಿಗೆ ದೇವತಾಂಗನೆಯರು ಸಿಟ್ಟನ್ನೂ ಪ್ರೀತಿಯನ್ನೂ ತೋರಿಸುವರು ಬಾಯಿಗೆ ಒಳ್ಳೆಯ ಕರ್ಪೂರ ತಾಂಬೂಲವನ್ನು ಕೊಡುವರು ಮತ್ತು ತೆಗೆದುಕೊಳ್ಳುವರು ಅಲ್ಲದೆ ತಮ್ಮ ಶರೀರವನ್ನು ರತಿಕ್ರೀಡೆಗೆ ಸಮರ್ಪಿಸುವರು ॥ ೮೯ ॥ ಯುದ್ಧರಂಗದಲ್ಲಿ ಶೌರ್ಯದಿಂದ ಕಾದಿ ಪ್ರಾಣತ್ಯಾಗಮಾಡಿದ ವೀರರು ಸೂರ್ಯಮಂಡಲವನ್ನು ಭೇದಿಸಿ ಅತಿಸುಲಭವಾಗಿ ದೇವಲೋಕಕ್ಕೆ ತೆರಳುವರು ॥ ೯೦ ॥ ಅಂತಹ ಸಮರಶೂರರಿಗೆ ಯಾರು ತಾನೇ ಮೋಹಪಡರು? ಯಾರು ತಾನೇ ಬೇಡಿದ ವಸ್ತುವನ್ನು ಕೊಡರು! ಯಾರು ಮನ್ನಿಸರು? ಯಾರು ಶ್ಲಾಘಿಸರು? ॥ ೯೧ ॥ ಎಲೈ ಚೇಳಿಯೇ ಕೇಳು ನಾನು ಹೀಗೆಲ್ಲ ಕಾವ್ಯಪದ್ಧತಿಗೆ ಅನುಗುಣವಾಗಿ ಹೇಳಿದೆನಲ್ಲದೆ ಕೆಟ್ಟಭಾವನೆಯಿಂದ ಸತ್ತವರಿಗೆ ಸ್ವರ್ಗವು ದೊರಯುವುದೆಂಬುದನ್ನು ಜೈನರು ಮೆಚ್ಚುವುದುಂಟೆ? ॥ ೯೨ ॥

---

[1] ಆಳಿದೊಡೆ ಸುರಲೋಕದವರು (ಚ) [2] ಪಡಿವಲಿಗರ ಕೊಡುವರು (ಚ) [3] ಮುದ್ದಿಪರು (ಚ) [4] ಗಾಣಿಸುವರು (ಚ) [5] ಮೈ ಮೆರೆವರು (ಕ) [6] ಕೂಡರು ವಿನುತದ ಮಾಡದ ರಾರಾ (ಚ).

ನಡುಗುವ ಮೆಯ್ಯ ಕಂಪಿಸುವಸುವಿನ ತಡ । ಬಡಿಸುವ ಮಾತಿನ ನಡೆವ ॥
ನುಡಿಗೆಟ್ಟ[1] ಹಂದೆಗಲಿಗಳು ಕಾಯುವ ಬಿಟ್ಟು । ಮಡಿದರು ರಣಭೂಮಿಯಲಿ[2] ॥ ೯೩ ॥

ನೋಡಲಮ್ಮರು ಕಣ್ಣಬಿಟ್ಟು ವೀರರೊಳು ಮಾ । ತಾಡಲಮ್ಮರು ಭಯದಿಂದೆ ॥
ಹೇಡಿಗಲಿಗಳಸುವನು ಬಿಟ್ಟವರ ಪಟ್ಟ । ಪಾಡ ನಾನೇನೆಂಬೆನಬಲೆ ॥ ೯೪ ॥

ಅಬ್ಬರಿಸಿಯೆ ಖೋಯೆಂಬ ವೀರರ ಬಲು । ಬೊಬ್ಬೆಯ ದನಿಗೆ ಹಮ್ಮೈಸಿ ॥
ತಿಬ್ಬಳಿಗೆಟ್ಟು ಬಿಟ್ಟರು ಹರಣವನಂದು । ಕೊಬ್ಬಿದ ಹೆಣ್ಣುಗಲಿಗಳು ॥ ೯೫ ॥

ಮರನೇಱುವರು ಪುಲ್ಲಿಡಿವರು ಪುತ್ತವ । ನಿರದಡರುವರು ಜಲವನು[3] ॥
ಬೆರಲ ಕಚ್ಚುವರು ಬೆತ್ತಲೆ ನಿಲ್ವರು ಹೇಡಿ । ಚರರೊಂದೆಡೆಯೊಳಗಬಲೆ ॥ ೯೬ ॥

ನವಳ್ವವರಿಂದೆ ಧರಣಿಗೆ ಬಿಳ್ದೊಯ್ಯನೆ । ಪೊರಳ್ವವರಿಂ ಗಾಯವಡೆದು ॥
ನರಳ್ವವರಿಂ[4] ರಣಮಂಡಲ ಸಗ್ಗಕೆ । ತೆರಳ್ವವರಿಂದೊಪ್ಪಿತಬಲೆ ॥ ೯೭ ॥

ಖಂಡವ ತಿಂದು ರಕುತವನು ಕೊರಲ್ವರ । ಉಂಡು ದಱಿಂದುಱಿ ತೇಂಕಿ[5] ॥
ಕೊಂಡಾಡಿದುದು ಕೈಯೆತ್ತಿ ಶಾಕಿನಿಯರ । ತಂಡ ಲಕ್ಷ್ಮಣನಾಹವದಿ ॥ ೯೮ ॥

ಲಲನೆ ಕೇಳರಿಬಲ ಲಕ್ಷ್ಮಣನೃಪತಿಯ । ಕೊಲೆಯಿಂ[6] ಕಡುನೊಂದು ಮನದಿ ॥
ಮಲು ಮಲ ಮಱುಗಿ ಮಿಡುಕಿದುದು ಬತ್ತಿದ । ಜಲಧಿಯ ಮೀನುಗಳಂತೆ ॥ ೯೯ ॥

ಆನೆ ನೀರಾನೆ ನೆತ್ತರು ಜಲ ಕಾಲಾಳು । ಮೀನು ಬೆಳ್ಗೊಡೆ ನೊರೆ ಮಡಿದ ॥
ಆ ನರನಾಥರ ಮಣಿದೊಡವಿಂದದು । ಯೇನೆಂಬೆ ಕಡಲಂತೆಸೆದುದು ॥ ೧೦೦ ॥

---

ಆ ಯುದ್ಧರಂಗದಲ್ಲಿ ನಡುಗುತ್ತಿರುವ, ಪ್ರಾಣವು ಸ್ಪಂದಿಸುತ್ತಿರುವ. ಮಾತು ಒಂದಕ್ಕೊಂದಾಗುವ. ನಡೆನುಡಿಗಳು ಸರಿಯಿಲ್ಲದ. ಹೇಡಿಗಳಾದ ಸೈನಿಕರು ಶರೀರವನ್ನುಳಿದು ಸತ್ತರು ॥ ೯೩ ॥ ಹೇಡಿಗಳಾದ ಕಲಿಗಳು ಅಲ್ಲಿ ಇತರ ಶೂರರನ್ನು ಕಣ್ಣುಬಿಟ್ಟು ನೋಡಲಾರರು, ಹೆದರಿದವರಾಗಿ ಮಾತಾಡಲೂ ಸಮರ್ಥರಾಗರು ಅವರು ಪ್ರಾಣಬಿಟ್ಟ ಅವಸ್ಥೆಯನ್ನು ಏನೆನ್ನಲಿ! ॥ ೯೪ ॥ ಕೊಬ್ಬಿದ ದೇಹವುಳ್ಳ ಹೆಂಗುಸರಂತಹ ವೀರರು ಯುದ್ಧದಲ್ಲಿ ಅಬ್ಬರಿಸುತ್ತ ಖೋಯೆಂದು ಹೇಳುವ ವೀರರ ಮಹಾಗರ್ಜನೆಯ ಧ್ವನಿಯನ್ನು ಕೇಳಿದಾಕ್ಷಣವೇ ಮೂರ್ಛೆಹೋಗಿ, ಪ್ರಜ್ಞಾಶೂನ್ಯರಾಗಿ ಪ್ರಾಣಬಿಟ್ಟರು ॥ ೯೫ ॥ ಎಲೈ ಚೇಳಿನಿಯೇ. ಹೇಡಿಗಳಾದ ಪದಾತಿಗಳು ಒಂದೊಂದು ಕಡೆಗಳಲ್ಲಿ ಯುದ್ಧದಲ್ಲಿ ಹೆದರಿ. ಮರವನ್ನೇರುವರು: ಹುಲ್ಲನ್ನು ಹಿಡಿಯುವರು, ಹುತ್ತವನ್ನೇರುವರು, ನೀರನ್ನು ನೇರುವರು. ಬೆರಲನ್ನು ಕಚ್ಚುವರು; ಬತ್ತಲೆಯಾಗಿ ನಿಲ್ಲುವರು. ॥ ೯೬ ॥ ಯುದ್ಧರಂಗವು ಅಲ್ಲಿ ನರಳುವವರಿಂದಲೂ, ನೆಲಕ್ಕೆ ಬಿದ್ದು ಹೊರಳುವವರಿಂದಲೂ. ಗಾಯಗೊಂಡು ಯಾತನೆಪಡುವವರಿಂದಲೂ, ಸ್ವರ್ಗಸ್ಥರಾಗುವವರಿಂದಲೂ ಒಪ್ಪಿದ್ದಿತು ॥ ೯೭ ॥ ಶಾಕಿನಿಯರೆಂಬ ಪಿಶಾಚಸ್ತ್ರೀಯರು ಅಲ್ಲಿ ಮಾಂಸಖಂಡಗಳನ್ನು ತಿಂದು, ಕಂಠಪೂರ್ಣವಾಗುವಂತೆ ರಕ್ತವನ್ನು ಕುಡಿದು, ಢರ್ರೆಂದು ತೇಗುತ್ತ, ಲಕ್ಷ್ಮಣನನ್ನು ಕೈಯೆತ್ತಿ ಹೊಗಳಿದರು. ॥ ೯೮ ॥ ಮಡದಿಯೇ ಕೇಳು ಲಕ್ಷ್ಮಣರಾಜನು ಮಾಡಿದ ಸಂಹಾರದಿಂದ ವೈರಿಸೇನೆಯು ನೊಂದು. ಮನಸ್ಸಿನಲ್ಲಿ ಕಳವಳಪಟ್ಟು, ನೀರಾರಿದ ಕೆರೆಯ ಮೀನುಗಳಂತೆ ಮಿಡುಕಿತು ॥ ೯೯ ॥ ಆನೆಯೇ ನೀರಾನೆ. ರಕ್ತವೇ ನೀರು, ಕಾಲಾಳುಗಳೇ ಮೀನುಗಳು, ಶ್ವೇತಚ್ಛತ್ರಗಳೇ ನೊರೆ, ಮಡಿದ ರಾಜರ ರತ್ನಾಭರಣಗಳೇ ರತ್ನವೆನಿಸಲು ಆ ಯುದ್ಧರಂಗವು ಸಮುದ್ರದಂತೆ

---

[1] ನಡೆಗೆಟ್ಟ (ಚ). [2] ಮಡಿದರು ಬೆಚ್ಚಿ ಮನದೊಳು (ಚ). [3] ಭರದಿಂದ ಜಲವ ಪೊಗುವರು (ಚ) [4] ಕೆರಳ್ವವರಿಂ (ಚ). [5] ತೇಕಿ (ಚ). [6] ಕಲಹದಿ (ಚ).

ಮಡುಹಿದ ಮಕುಟಬದ್ಧರ ದೊರೆ ದೊರೆಗಳ । ಕೆಡಹಿದನಿರದತಿರಥರ ॥
ಕಡಿದೊಟ್ಟದ[1]ನುಳಿದರ ನೃಪ ಸಗ್ಗದ । ಮಡದಿಯರೆಡೆಗೆ ಕಳುಪಿದ ॥ ೧೦೧ ॥

ಉಱುಬಿದ ದೊರೆಗಳ ಮುಂದುಗೆಡಿಸಿದನು । ತಱುಬಿದವರನವ ತಱಿದು ॥
ಹಱಿಹಂಚ ಮಾಡಿದನಾ ಕುವರನದೋಂ । ದುಱುಬೆಗೆ ನಿಲುವವರಾರು ॥ ೧೦೨ ॥

ಕಂಗೆಡಿಸಿದನೆಡಬಲದ ರಾವುತರನು । ಮುಂಗೆಡಿಸಿದ ಮುಂದಣವರ[2] ॥
ಸಂಗರದೊಳು ಮಡುಹಿದನಾ ಕುವರನ । ತುಂಗವಿಕ್ರಮಕೆಣೆ ಯಾರು ॥ ೧೦೩ ॥

ಬಲವನೆಲ್ಲವ ಬಱಿಕೈದು[3] ಲಕ್ಷ್ಮಣ ನೀ । ತೊಲಗು ತೊಲಗು ತೊಲಗದೊಡೆ ॥
ತೊಲಗಿಸುವೆನು[4] ಹರಣವನಾ[4] ನಾಕದ । ಲಲನೆಯರೆಡೆಗೆಂದನವನು ॥ ೧೦೪ ॥

ಮೇಲನಱಿಯದೆ ನೀ ನುಡಿದೊಡೆ ಯೆನಗದು[5] । ಸೋಲವೆ ನಾ ನಿನ್ನನೆಚ್ಚ ॥
ಕೋಲ ಜಯಿಸಿದೊಡೆ ಜಯಿಸಿದೆ ಯೆನ್ನನೆಂ । ದಾ[6] ಲಕ್ಷ್ಮಣ ಕೋಪದಲಿ ॥ ೧೦೫ ॥

ಪಗಲನೊಂದೇ ತುತ್ತು ಮಾಡುವ ತಿಮಿರದ । ಸೊಗಯಿಪ ಬಾಣದಿಂದೆಸಲು ॥
ಪಗೆಯು ಮೇಲದ ಕಂಡು ರವಿಬಾಣದಿಂದೆಚ್ಚು । ತೆಗಸಿದನದಱ ಬಲ್ಮೆಯನು ॥ ೧೦೬ ॥

ಹೆಱಸಾರದೆ ಹೆದಱದೆ ಲಕ್ಷ್ಮಣನನು । ತಱುಬಿ ಕಾದುವ ಯಿಂದಗಿಯು ॥
ತೆಱನ ಕಂಡಿದು ಹಸನಲ್ಲೆಂದು ಶ್ರೀರಾಮ । ನುಱುಬಿದ ಬಂದಾ[7]ಯೆಡೆಗೆ ॥ ೧೦೭ ॥

---

ಶೋಭಿಸಿತು ॥ ೧೦೦ ॥ ಇಂದಗಿಯು ಕಿರೀಟಧಾರಿಗಳನ್ನು ಕೊಂದನು, ರಾಜರನ್ನೆಲ್ಲ ಕೆಡಹಿದನು ಅತಿರಥರನ್ನು ತುಂಡರಿಸಿದನು ಉಳಿದವರನ್ನು ದೇವತಾಸ್ತ್ರೀಯರಲ್ಲಿಗೆ ಕಳುಹಿದನು ॥ ೧೦೧ ॥ ಯುದ್ಧಕ್ಕೆ ಮುಂಬರಿದು ಬಂದ ರಾಜರನ್ನು ಸತ್ವಹೀನರನ್ನಾಗಿ ಮಾಡಿ ಎದುರಾದವರನ್ನು ಕತ್ತರಿಸಿ, ಚೂರುಚೂರು ಮಾಡಿದನು ಆ ಕುಮಾರನ ಶೌರ್‍ಯಕ್ಕೆ ಎದುರುನಿಲ್ಲುವವರು ಯಾರು? ॥ ೧೦೨ ॥ ಎಡಬಲಗಳಲ್ಲಿದ್ದ ಅಶ್ವಾರೋಹಕರನ್ನು ದಿಕ್ಕುಗಾಣದಂತೆ ಮಾಡಿದನು. ಮುಂದಿರುವವರನ್ನು ಚದರಿಸಿದನು ಯುದ್ಧದಲ್ಲಿ ವೈರಿಗಳನ್ನು ಸಂಹರಿಸಿದನು ಆ ಇಂದ್ರಜಿತುಕುಮಾರನ ಶೌರ್‍ಯಕ್ಕೆ ಹೋಲುವವರು ಯಾರು? ॥ ೧೦೩ ॥ ಇಂದಗಿಯು ಹೀಗೆ ಸೈನ್ಯವನ್ನೆಲ್ಲ ನಾಶಗೊಳಿಸಿ 'ಎಲೈ ಲಕ್ಷ್ಮಣನೇ ತೊಲಗು ತೊಲಗು ಇಲ್ಲವಾದರೆ ನಿನ್ನ ಪ್ರಾಣವನ್ನು ಸುರವನಿತೆಯರ ಕಡೆಗೆ ತೊಲಗಿಸುವೆನು' ಎಂದು ಹೇಳಿದನು ॥ ೧೦೪ ॥ ಆಗ ಲಕ್ಷ್ಮಣನು—'ನೀನು ಮುಂದೇನಾಗುವುದೆಂಬುದನ್ನು ಯೋಚಿಸದೆ ಏನೋ ಹೇಳಿದೆಯಾದರೆ, ನನಗೆ ಅಪಜಯವುಂಟಾಗುವುದ? ಇಗೋ ಈಗ ನಾನು ನಿನಗೆ ಹೊಡೆಯುವ ಬಾಣವನ್ನು ನೀ ಗೆಲಿದರೆ, ನನ್ನನ್ನು ಗೆಲಿದಂತೆಯೇ—ಎಂದು ತಿಳಿದುಕೋ' ಎಂದು ಕೋಪಗೊಂಡವನಾದನು ॥ ೧೦೫ ॥ ಹಗಲನ್ನು ಒಂದೇ ತುತ್ತಾಗಿ ನುಂಗುವ ತಿಮಿರ (ಅಂಧಕಾರ) ಬಾಣವನ್ನು ಲಕ್ಷ್ಮಣನು ಶತ್ರುವಿನ ಮೇಲೆ ಪ್ರಯೋಗಿಸಿದನು ಆಗ ಅವನು ಸೂರ್‍ಯಾಸ್ತ್ರದಿಂದ ಅದರ ಶಕ್ತಿಯನ್ನು ನಿವಾರಿಸಿದನು ॥ ೧೦೬ ॥ ಇಂದಗಿಯು ಹಿಂಜರಿಯದೆ ಹೆದರದೆ ಲಕ್ಷ್ಮಣನನ್ನು ಪ್ರತಿಭಟಿಸಿ ಕಾದುವುದನ್ನು ಶ್ರೀರಾಮನು ನೋಡಿ, ತಾನು ಹೀಗೆ ಇರುವುದು ಸರಿಯಲ್ಲವೆಂದು ಅಲ್ಲಿಗೆ ಮುಂಬರಿದು ಬಂದನು ॥ ೧೦೭ ॥ ಎಲೈ ಲಕ್ಷ್ಮಣನೆ ಇಷ್ಟು ಹೊತ್ತೂ ಇವನೊಡನೆ

---

[1] ಕಡಿದಾಡಿದ (ಚ) [2] ಮುಂಗೆಡಿಸಿದನುಳಿದರನು (ಚ) [3] ಬಱಿಗೈದು (ಚ) [4] ನಿನ್ನ ಹರಣವ (ಚ) [5] ನನಗದು (ಚ)
[6] ಜಯಿಸಿಯೆನೆನ್ನನೆಂದಾ (ಚ) [7] ನುಱುಬಿ ಬಂದನು ಆ (ಚ).

ಇನಿತು ಪೊತ್ತೇಕೆ ಲಕ್ಷ್ಮಣ ಕಾದುವೊಡವ । ನೆನಿಸಱವನು ಇವನೊಳಗೆ ॥
ಅನುವರವನು ಮಾಡಿ ಮಡುಹದವನ ನಿನ್ನ । ತನುವನೇತಕೆ ನೋಯಿಸುವೆ ॥ ೧೦೮ ॥

ಗುಣಕೆ ಮಚ್ಚರವೆ ಭಾಪುರೆ ಭಾಪುರೆ ನಿನ್ನ । ಕಣೆಗಳಿಗಳುಕದೆ ನಿಂದು ॥
ರಣವನೆಸಗಿದುದು ಲೇಸುಲೇಸೆಂದವ । ನಣೆ ಚಾಚಿ ನಿಂದನಿಂದಗಿಗೆ ॥ ೧೦೯ ॥

ಎಡೆಗಟ್ಟಿ ನಿಂದನಿಂದಗಿ ಶ್ರೀರಾಮನು । ಪಿಡಿದಿರ್ದ ಬಿಲ್ಕೋಲು ಕಡಿದು ॥
ಪೊಡವಿಗೆಯುವ ಬೀಳಲದ ಕಂಡವನ ಪಡೆ । ನಡುಗಿ ಕಂಗೆಟ್ಟು ಚಿಂತಿಸಿತು ॥ ೧೧೦ ॥

ಗಿರಿಯ ತುದಿಯ ಮೇಲಣ ಹೂತ ಕಕ್ಕೆಯ । ಮರ ಬಿರ್ದಂತಾನೆಯಿಂದ ॥
ವರ ರತ್ನಮಯ ತೊಡವಿನ[1] ಕಾಯಕಾಂತಿಯ । ಗರುವ ಧರೆಗೆ ಬಿದ್ದನಬಲಿ ॥ ೧೧೧ ॥

ಸಿಕ್ಕಿದ ಕುವರನೆನುತ ದೊರೆದೊರೆಗಳು । ತೆಕ್ಕೆ ತೆಕ್ಕೆಯೊಳೈತಂದು ॥
ಮುಕ್ಕಿಱಿಸಿಯೆ ಕಾದಿ ಮಡಿದುದು ರಣದೊಳು । ಲೆಕ್ಕಕ್ಕೆ ನಿಲುಕದಬ್ಬಾಕ್ಷಿ ॥ ೧೧೨ ॥

ಆವ ಬಗೆಯೊಳಾವು ಪೋಗಿ ಕಂಡಪೆವಿನ್ನು । ರಾವಣ ನೃಪನನಿನ್ನೆಮಗೆ ॥
ಜೀವದಾಸೆಯೆ ಚೀಃ ಸುಡು ಎಂದು ನುಡಿಯುತ । ಮೂವಳಸಿಲಿ ಮುತ್ತಿತವನ ॥ ೧೧೩ ॥

ಇನ್ನು ತಿರುಗಿ ಪೋದೊಡೆ[2]ಯಳಿಜಸವೆಮ್ಮ । ಬೆನ್ನ ಬಿಡದೆ ಪೋಗದೆಂದು ॥
ಮನ್ನೆಯರೆಲ್ಲರೊಗ್ಗಾಗಿ ಮುತ್ತಿದರಂದು । ಸನ್ನಾಹವಾಗಿ ಲಕ್ಷ್ಮಣನ ॥ ೧೧೪ ॥

ಪಡೆಯೆಲ್ಲ ಪಂಥದ ಮೇಲೆಯಾ ನೃಪತಿಯ । ತುಡುಕಿ ಬಿಡದೆ ರಣದೊಳಗೆ ॥
ಕಡಿದಾಡಿದರು ಕಂಗೆಟ್ಟರವಂದಿರ[3] ಕಡುಪ ನಾನೇನ[4] ಬಣ್ಣಿಪೆನು ॥ ೧೧೫ ॥

---

ಏಕೆ ಕಾದಾಡುತ್ತಿರುವೆ? ನಿನಗೆ ಇವನು ಎಷ್ಟರವನು! ಇವನೊಡನೆ ಕಾದಿ ಇವನನ್ನು ಸಂಹರಿಸದೆ, ನಿನ್ನ ಶರೀರವನ್ನೇಕೆ ನೋಯಿಸುವೆ? ॥ ೧೦೮ ॥ ಎಲೈ ಇಂದ್ರಜಿತು. ಶಭಾಸ್. ಗುಣಕ್ಕೇನೂ ಮತ್ಸರವಿಲ್ಲ. ನಿನ್ನ ಬಾಣಗಳಿಗೆ ಹೆದರದೆ ಲಕ್ಷ್ಮಣನು ಯುದ್ಧಮಾಡಿದುದು ಒಳ್ಳೆಯದು ಹೀಗೆ ಹೇಳಿ ಶ್ರೀರಾಮನು ಇಂದಗಿಗೆ ಎದುರಾದನು. ॥ ೧೦೯ ॥ ತನಗೆ ಅಡ್ಡಗಟ್ಟಿ ನಿಂತಿದ್ದ ಇಂದ್ರಜಿತುವನ್ನು ಶ್ರೀರಾಮನು ಅವನು ಹಿಡಿದಿದ್ದ ಬಿಲ್ಲುಬಾಣಗಳನ್ನೂ ಕಡಿದು. ನಲಕ್ಕೆ ಉರುಳಿಸಿದನು ಆಗ ಅವನ ಸೈನ್ಯವು ಕಂಡು, ನಡುಗಿ, ಚಿಂತಿಸಿತು. ॥ ೧೧೦ ॥ ಬೆಟ್ಟದ ತುದಿಯಲ್ಲಿ ಹೂವುಗಳಿಂದ ಕೂಡಿದ ಕಕ್ಕೆಮರವು (ಕೃತಮಾಲವೃಕ್ಷ) ಬಿದ್ದಂತೆ. ಶ್ರೇಷ್ಠ ರತ್ನಾಭರಣಗಳಿಂದ ಕೂಡಿದ ದೇಹಕಾಂತಿಯುಳ್ಳ ಗೌರವಶಾಲಿ ಇಂದ್ರಜಿತು ಆನೆಯಿಂದ ನೆಲಕ್ಕೆ ಬಿದ್ದನು. ॥ ೧೧೧ ॥ ಆಗ ಅವನ ಕಡೆಯ ರಾಜರು 'ಇಂದಗಿ ಸಿಕ್ಕಿದನು!' ಎನ್ನುತ್ತ ಗುಂಪುಗುಂಪಾಗಿ ಬಂದು. ಕಾದಾಡಿ, ಯುದ್ಧದಲ್ಲಿ ಅಸಂಖ್ಯಾತರಾಗಿ ಮಡಿದರು. ॥ ೧೧೨ ॥ 'ನಾವಿನ್ನು ಹೋಗಿ ಯಾವ ರೀತಿಯಲ್ಲಿ ರಾವಣನನ್ನು ಕಾಣುವೆವು? ನಮಗಿನ್ನು ಪ್ರಾಣದ ಆಸೆಯೇಕೆ? ಚಿ: ಸುಡಲಿ!' ಎನ್ನುತ್ತ ಅವರು ಮೂರು ಬಳಸಿನಿಂದ ಲಕ್ಷ್ಮಣನನ್ನು ಮುತ್ತಿದರು. ॥ ೧೧೩ ॥ ಇನ್ನು ಹಿಂದಿರುಗಿ ಹೋದರೆ, ನಮ್ಮನ್ನು ಅಪಕೀರ್ತಿ ಅನುಸರಿಸುವುದು—ಎಂದು ಮುಖಂಡರೆಲ್ಲ ಸಿದ್ಧತೆಗಳಿಂದ ಕೂಡಿ ಲಕ್ಷ್ಮಣನನ್ನು ಮುತ್ತಿದರು. ॥ ೧೧೪ ॥ ಹೀಗೆ ಸೈನಿಕರೆಲ್ಲರೂ ಪಂಥದ ಮಾತುಗಳನ್ನಾಡುತ್ತ. ಲಕ್ಷ್ಮಣನನ್ನು ಮುತ್ತಿ ಕಡಿದಾಡಿ. ಕಂಗೆಟ್ಟುಹೋದರು. ಅವರ ಶೌರ್ಯೋದ್ರೇಕವನ್ನು ನಾನು ಏನೆಂದು ವರ್ಣಿಸಲಿ! ॥ ೧೧೫ ॥

---

[1] ತೀವಿದ (ಕ). [2] ಬಿಡದೊಡೆ (ಚ) [3] ಕಂಗಡದೆಯವಂದಿರ (ಚ). [4] ಕಡುಪನದೇನ (ಚ).

ಸಿಂಗದ ಮೇಲೆ ಮುಸಗಿ ಮುಗ್ಗುವ ಮಾ । ತಂಗದ ಹಿಂಡಿನಂದದೊಳು ॥
ಹಿಂಗದೆ ಬಂದರಿಬಲ ಲಕ್ಷ್ಮಣನೊಳು । ಸಂಗರವನು ಮಾಡಿದುದು ॥ ೧೧೬ ॥

ವಡಬನೊಡಲ ಹೊಕ್ಕ ಶರಧಿ ಚೊಯ್ ಚೊಯ್ಯೆಂ । ದಡಗಿ ಕೆಡುವ ಮಾಳ್ಕೆಯಲಿ ॥
ಕಡುಗಲಿಗಳು ಲಕ್ಷ್ಮಣನ ತುಡುಕಿಯೆಂದು । ಮಡಿದರು ರಣಭೂಮಿಯಲಿ[1] ॥ ೧೧೭ ॥

ತಳಲುಗೆಂಡದ ರಾಸಿಯ ಮೇಲೆ ಯಿರುಪೆಯ । ಬಳಗ ಮುಸುಕಿ ಸಾವಂತೆ ॥
ಕೊಳುಗುಳದೊಳು[2] ರಾಮ ಲಕ್ಷ್ಮಣರಿರ್ವರಿಂ[2] । ದಳಿದ ವೀರರು ಲೆಕ್ಕವಿಲ್ಲ ॥ ೧೧೮ ॥

ಹುಡಿಮಾಡಿದರು ರಥಗಳನಾ ರಥಿಕರ । ಕೆಡಹಿದರೊತ್ತಿ ಕಾದುವರ ॥
ಕಡಿದೊಟ್ಟಿದರರಿಬಲ ಮಡಿದುದಕಿನ್ನು । ಕಡೆಯಿಲ್ಲ ಕಮಲದಳಾಕ್ಷಿ ॥ ೧೧೯ ॥

ಮಡಿದ ಕರಿಗಳಿಂದೆ ಕೆಡೆದ ವಾಜಿಗಳಿಂದೆ । ಉಡಿದ[3] ನಾನಾ ಕೈದುಗಳ ॥
ಗಡಣದಿಂದೊಱಗಿದ ವೀರರಿಂದಾ ನೆಲ । ಕಡು ಗುರ್ವುವಡೆದುದಬ್ಜಾಕ್ಷಿ ॥ ೧೨೦ ॥

ಕರುಳ ಮಾಲೆಯ ಕೊರಲೊಳು ಹಾಕಿ ಮಾಂಸದ । ತಿರುಳ ತಿನ್ನುತ ಚಪ್ಪಱಿದು ॥
ಇರದೆ ನೆತ್ತರನುಂಬ ಮರುಳ ಬಳಗಗಳ । ನೆರವಿಯಿಂದೆಸೆದುದಾ ಧರಣಿ ॥ ೧೨೧ ॥

ನೆಣದೊಟ್ಟಲು ನೆತ್ತರ ಪೊಳೆ ಮಾಂಸದ । ಬಣಬೆ ಕರುಳ ಬಲು ರಾಸಿ ॥
ಅಣಲ ಗುಡ್ಡೆಗಳಸ್ಥಿಗಳ ಪರ್ವತದಿಂದ । ರಣಮಂಡಲವೊಪ್ಪಿತಬಲೆ ॥ ೧೨೨ ॥

ಅರಲ ಸರಿಯ[4] ಕರೆದರು ದೇವದುಂದುಭಿ । ಯಿರದೆ ಮೊಳಗಿದವು ಸುರರು ॥
ಹರುಷದಿಂ[5] ಕೈಯೆತ್ತಿ ಪೊಗಳಿದುದಾ ಧುರ । ಧರಣಿಯೊಳಳಿದ ವೀರರನು[6] ॥ ೧೨೩ ॥

---

ಸಿಂಹದ ಮೇಲೆ ಸಿಟ್ಟಾಗಿ ಪ್ರತಿಭಟಿಸುವ ಆನೆಯ ಹಿಂಡಿನಂತೆ ಶತ್ರುಸೈನ್ಯವು ಹಿಂಜರಿಯದೆ ಬಂದು ಲಕ್ಷ್ಮಣನೊಡನೆ ಕಾದಾಡಿತು ॥ ೧೧೬ ॥ ಸಮುದ್ರವು ವಡಬಾನಲನ ದೇಹಕ್ಕೆರಗಿ ಚೊಯ್ ಚೊಯ್ ಎಂದು ಆರಿಹೋಗುವಂತೆ, ಮಹಾ ಶೂರಭಟರು ಲಕ್ಷ್ಮಣನೊಡನೆ ಕಾದಿ ಯುದ್ಧರಂಗದಲ್ಲಿ ಸತ್ತುಹೋದರು ॥ ೧೧೭ ॥ ಕೆದರಿದ ಕೆಂಡದ ರಾಶಿಯ ಮೇಲೆ ಇರುವೆಗಳ ಸಮೂಹವು ಬಂದು ಕವಿದು ಸಾಯುವಂತೆ, ಆ ಯುದ್ಧದಲ್ಲಿ ಶ್ರೀ ರಾಮಲಕ್ಷ್ಮಣರಿಂದ ಮಡಿದ ವೀರರು ಅಗಣಿತ ವೆನಿಸಿದರು. ॥ ೧೧೮ ॥ ರಾಮಲಕ್ಷ್ಮಣರು ಶತ್ರುಗಳ ರಥಗಳನ್ನು ಪುಡಿಮಾಡಿದರು ರಥಿಕರನ್ನು ಕೆಡಹಿದರು ಸಮೀಪಕ್ಕೆ ಬಂದು ಯುದ್ಧಮಾಡುವವರನ್ನು ತುಂಡರಿಸಿ ರಾಶಿಹಾಕಿದರು ಎಲೈ ಚೆಲುವೆಯೇ ಶತ್ರುಸೈನ್ಯವು ಸತ್ತುಹೋದುದಕ್ಕೆ ಒಂದು ಕೊನೆಯೇ ಇಲ್ಲವೆನಿಸಿತು ॥ ೧೧೯ ॥ ಸತ್ತುಹೋದ ಆನೆಗಳಿಂದಲೂ, ಬಿದ್ದ ಕುದುರೆಗಳಿಂದಲೂ ಕೆಡೆದುಹೋದ ಹಲವಾರು ವಿಧದ ಆಯುಧಸಮೂಹದಿಂದಲೂ, ನೆಲದಲ್ಲಿ ಒರಗಿದ ವೀರರಿಂದಲೂ ಆ ನೆಲವು ಬಹಳ ಭಯಾವಹವಾಗಿದ್ದಿತು ॥ ೧೨೦ ॥ ಆ ಯುದ್ಧಭೂಮಿಯು ಕರುಳಿನ ಮಾಲೆಯನ್ನು ಕೊರಳಲ್ಲಿ ಹಾಕಿ ಮಾಂಸದ ತಿರುಳನ್ನು ತಿನ್ನುತ್ತ ಚಪ್ಪರಿಸಿಕೊಂಡು, ರಕ್ತವನ್ನು ಸೇವಿಸುವ ಪಿಶಾಚಗಳ ಸಮೂಹದಿಂದಶೆ ಶೋಭಿಸಿತು ॥ ೧೨೧ ॥ ಕೊಬ್ಬಿನ ರಾಶಿಯಿಂದಲೂ, ರಕ್ತದ ಹೊಳೆಯಿಂದಲೂ, ಮಾಂಸದ ರಾಶಿಯಿಂದಲೂ ಕರುಳಿನ ಕುಪ್ಪೆಯಿಂದಲೂ, ಗಂಟಲಿನ ಗುಡ್ಡೆಗಳಿಂದಲೂ ಎಲುಬುಗಳ ಬೆಟ್ಟದಿಂದಲೂ ಯುದ್ಧ ರಂಗವು ತೋರುತ್ತಿತ್ತು ॥ ೧೨೨ ॥ ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು ದೇವದುಂದುಭಿಗಳು ಶಬ್ದಾಯಮಾನ

---

[1] ರಣಭೂಮಿಯೊಳು (ಚ) [2] ಶ್ರೀರಾಮರಾವಳರಿಂ (ಕ) [3] ಕೆಡೆದ (ಚ) [4] ಅರಲ ತಂದಲ (ಚ) [5] ಹರಿಸದಿಂ (ಚ).
[6] ವೀರರಿಗೆ (ಚ)

ರಣದಾವೇಶದಿಂ ಮಡಿದ ವೀರರ ತಮ್ಮ । ಮಣಿಮಾಡಕೆ ಕೊಂಡೊಯ್ದು[1] ॥
ದಣಿಯಿಸುವರು ಉಣತೊಡವಿತ್ತು[2] ಸಗ್ಗದ । ಗಣಿಕೆಯರಂಬುಜನೇತ್ರೆ ॥ ೧೨೪ ॥

ಆಲಿವಟ್ಟಲನಿಕ್ಕುವರಿಕ್ಕುವರು ಪೂ[3] । ಮಾಲೆಯ ಚವರ ಸೀಗುರಿಯ ॥
ಸೋಲುವರುಪಚರಿಸುವರಾ ಸಗ್ಗದ । ಲೋಲಾಕ್ಷಿಯರು ವೀರರಿಗೆ ॥ ೧೨೫ ॥

ಮುದ್ದಿಸುವರು ಮೋಹಿಸುವರು ಮಮತೆಯಿಂ । ಹೊದ್ದಿ[4] ಸರಸವಾಡುವರು ॥
ಬಿದ್ದಿರ್ಪರಾವ ಕಾಲದೊಳಾ ನಾಕದ । ಮುದ್ದುವೆಣ್ಗಳು ವೀರರಿಗೆ ॥ ೧೨೬ ॥

ಕೆಡದ ನೇಹಕೆ ಕಾಂತಿ ಮಸುಳದ ದೇಹಕೆ । ಯೆಡರಡಸದ ಸಂಪದಕೆ ॥
ಒಡಗೂಡಿ ದಣಿಯರು ಸುರಸುದತಿಯರಿಗೆ । ಒಡೆಯರಾದರು ವೀರರಬಲೆ ॥ ೧೨೭ ॥

ಹದ್ದು ಮುಟ್ಟವು ಕಾಗೆ ನರಿನಾಯಿಗಳು ಬಂದು । ಹೊದ್ದಲಮ್ಮವು ರಣದೊಳಗೆ ॥
ಬಿದ್ದಿರ್ಪ ವೀರರ ನಿಜಹಂದೆಗರು[5] ಕೇಳು । ಮುದ್ದುವೆಣ್ಣರಸಿ ಚಿತ್ರವಿದು ॥ ೧೨೮ ॥

ದಶಶಿರನೃಪತಿಯ ಮೋಹದ ಕಂದನು । ಅಸಮ ವೀರರೊಳಂದು ಕಾದಿ ॥
ವಸುಧೆಗೆ ಬಿದ್ದುದ ಕಂಡಿರದಾ ಪಡೆ । ಹಸಗೆಟ್ಟು ಮೌನವಿಡಿದುದು[6] ॥ ೧೨೯ ॥

ಮುಸುಕಿನ ಬೆರಳ ಮೂಗಿನ ಕೈದೂಕದ[7] । ವಸುಧೆಯ ನಿಟ್ಟಿಪ ಕಣ್ಣ ॥
ಮುಸುಕಿದ ಮೊಗದ ಕಳೆತ ಕೈದಿನ ಕೈಯ । ವಸುಧೀಶರಿರ್ದರಂದಲ್ಲಿ[8] ॥ ೧೩೦ ॥

ಚಿಂತೆಯ ಬಿಡು ಸಂತಸವಳಿತಿದೆ ಕಾ । ಲಾಂತಕ ಪಿಡಿದಾತ್ಮನಂತೆ ॥
ಕಾಂತನಿಲ್ಲದ ಕಾಂತೆಯಂತೆಸೆದುದು ಭೂ । ಕಾಂತನ ಸೇನಾಶರಧಿ ॥ ೧೩೧ ॥

---

ವಾದವು. ದೇವತೆಗಳು ಯುದ್ಧದಲ್ಲಿ ಮಡಿದ ವೀರರನ್ನು ಕೈಯೆತ್ತಿ ಹೊಗಳಿದರು. ॥ ೧೨೩ ॥ ಎಲೈ ಚೇಳಿನಿಯೇ, ದೇವಲೋಕದ ಸೂಳೆಯರು ಆ ಯುದ್ಧದಲ್ಲಿ ವೀರಾವೇಶದಿಂದ ಮಡಿದ ವೀರರನ್ನು ತಮ್ಮ ರತ್ನಭವನಕ್ಕೆ ಕೊಂಡುಹೋಗಿ, ಊಟ-ಉಡಿಗೆ-ತೊಡಿಗೆಗಳನ್ನು ಕೊಟ್ಟು ತೃಪ್ತಿಪಡಿಸುವರು ॥ ೧೨೪ ॥ ಸುರಸುಂದರಿಯರು ಯುದ್ಧದಲ್ಲಿ ಮಡಿದ ವೀರರಿಗೆ ಬೀಸಣಿಗೆಯಿಂದ ಬೀಸಿ, ಹೂಮಾಲೆಯನ್ನು ತೊಡಿಸಿ, ಚಾಮರ ಸೀಗುರಿಗಳಿಂದ ಗಾಳಿಹಾಕಿ, ಮನಸೋತು, ಉಪಚಾರ ಮಾಡುವರು ॥ ೧೨೫ ॥ ಮಡಿದ ವೀರರ ಬಳಿಯಲ್ಲೇ ಬಿದ್ದುಕೊಂಡು, ಆ ಸ್ವರ್ಗದ ರಮಣಿಯರು ಮುದ್ದಿಸುತ್ತ, ಮೋಹಿಸುತ್ತ, ಪ್ರೀತಿಯಿಂದ ರಸಿಕತೆಯ ಮಾತನ್ನು ಆಡುತ್ತ ಇರುವರು ॥ ೧೨೬ ॥ ಸುರಕಾಂತೆಯರಿಗೆ ಒಡೆಯರಾದ ವೀರರು ದೇವಲೋಕದಲ್ಲಿ ಶಾಶ್ವತವಾದ ಪ್ರೀತಿಗೂ, ಕಳಾಹೀನವಾಗದಿರುವ ಶರೀರಕ್ಕೂ, ಕುಂದಾಗದ ಸಂಪತ್ತಿಗೂ ಒಡನಾಡಿಗಳಾಗಿ ಎಂದಿಗೂ ದಣಿಯದೆ ಇರುವರು ॥ ೧೨೭ ॥ ಎಲೈ ಚೇಳಿನಿಯೇ, ಯುದ್ಧದಲ್ಲಿ ನಪುಂಸಕರೆನಿಸಿ, ಪೆಟ್ಟುತಿಂದು ಮಡಿದವರನ್ನು ಹದ್ದುಗಳು ಮುಟ್ಟವು, ಕಾಗೆ ನರಿನಾಯಿಗಳು ಹತ್ತಿರಕ್ಕೇ ಬಾರವು. ಇದು ಆಶ್ಚರ್ಯವೇ ಸರಿ. ॥ ೧೨೮ ॥ ರಾವಣೇಶ್ವರನ ಪ್ರೀತಿಯ ಮಗನಾದ ಇಂದ್ರಜಿತು ಪ್ರಬಲ ಪರಾಕ್ರಮಿಗಳೊಡನೆ ಯುದ್ಧಮಾಡಿ, ನೆಲಕ್ಕೆ ಬಿದ್ದುದನ್ನು ನೋಡಿ, ಅವನ ಸೈನ್ಯವು ಬೇಸರಹೊಂದಿ ಮೌನವನ್ನು ತಾಳಿತು. ॥ ೧೨೯ ॥ ರಾಜರುಗಳು ಅಲ್ಲಿ ಮುಸುಕುಹಾಕಿ, ಮೂಗಿನಲ್ಲಿ ಬೆರಳಿಟ್ಟು, ಕೈಯನ್ನು ತೂಗುತ್ತ, ನೆಲವನ್ನು ನೋಡುತ್ತ, ಮುಖವನ್ನು ತೋರದಂತೆ ಮುಚ್ಚಿ, ಆಯುಧವನ್ನು ಬಿಟ್ಟು, ಅಂದು ಅಲ್ಲಿದ್ದರು ॥ ೧೩೦ ॥ ಎಲೈ ಚೇಳಿನಿಯೇ, ನಿನ್ನ ಸಂತೋಷವು ಅಳಿಹೋಗುತ್ತಿದೆ ನೀನು ಚಿಂತೆಯನ್ನು ಬಿಡು ಕಾಲಾಂತಕನು ಹಿಡಿದ ಆತ್ಮದಂತೆಯೂ

---

[1] ಕೊಂಡುಪೋಗಿ (ಜ) [2] ತೊಡಲಿತ್ತು (ಜ) [3] ಆಲಿವಟ್ಟಲ ನಿಕ್ಕುವರಿಕ್ಕಿಬಮೊಳು (ಜ) [4] ಪೊದ್ದಿ (ಜ) [5] ಹಂದೆಗಳು (ಜ)
[6] ಮೋನವಿಡಿದುದು (ಜ). [7] ತಲೆದೂಕದ (ಜ) [8] ಇರ್ದರಂತಲ್ಲಿ (ಜ)

ಒದಱಿದುದೀ ಬಲ ಕೆದಱಿದುದಾ ಬಲ । ಮುದವ ತಳೆದುದೀ ಸೇನೆ ॥
ಎದೆಗೆಟ್ಟುದಾ ಬಲ ರಾಮಲಕ್ಷ್ಮಣರಿಂದ[1] । ಕದನಭೂಮಿಯಲಿ[2] ಕಂಜಾಕ್ಷಿ ॥ ೧೩೨ ॥

ಸತ್ತಾನೆ ಕುದುರೆಗೆ ಲಾಯವಾನೆಯ ಸಾಲೆ । ಯೆತ್ತಿತು ಯಮನನಗರಿಯಲಿ[3] ॥
ಹೊತ್ತಡಕಿತು ಹರಣವ ಕೊಟ್ಟಗೆಯೊಳು । ಪತ್ತನ ಕಟ್ಟಿದುದಬಲೆ[4] ॥ ೧೩೩ ॥

ಎತ್ತಲೊಲೆವಳು ಜಯಾಂಗನೆ ಜಸವೆ । ಣ್ಣೆತ್ತ ಪೋಪಳು ವೀರಲಕ್ಷ್ಮಿ[5] ॥
ಎತ್ತ ಜಾರುವಳೆಂದೆರಡು ಪಡೆಯೊಳು ಕ । ಣ್ಣಿತ್ತು ನೋಡಿದರಬುಜಾಕ್ಷಿ[6] ॥ ೧೩೪ ॥

ಧಾರಿಣಿಯೊಳು ಪರದಾರಕೆಳಸಿದರ್ಗೆ । ವೀರಗುರುವುಯೆಂದೆನಿಪ ॥
ರಾವಣನ ಪಡೆ ಜಯಿಸದೆನುತಲಲ್ಲಿ । ಕೋರಿ ನುಡಿದರು ಕೋವಿದರು ॥ ೧೩೫ ॥

ವೀರತ್ವದಿಂದೇನು ಫಲ ಕೇಳು ದೈವದ । ಕೂರಮೆಯಿಲ್ಲದವರೆಗೆ ।
ಈ ರಾವಣನ ಬಲ ಜಯಿಸದೆನುತಲಲ್ಲಿ । ಕೋರಿ ನುಡಿದರು ಕಾದಿದರು ॥ ೧೩೬ ॥

ನೀರು ನಿಂದಲ್ಲಿ ಕೆಸಱುವನ್ಯಾಯವು[7] । ಸಾರಿದೆಡೆಗೆಯಪಜಯವು ॥
ಬಾರದೆ ಮಾಣದೆಂದುಲಿವುತಲಲ್ಲಲ್ಲಿ । ಯಾರ್ಕೈದು ನುಡಿದರೊಳ್ಳಿದರು ॥ ೧೩೭ ॥

ಬಲದೊಳು ದೈವಬಲವೆ ಬಲವಲ್ಲದೆ । ಬಲದಿಂದೆ ಭುಜಬಲದಿಂದೆ ॥
ಫಲವಿಲ್ಲ ವೈಭವವಲ್ಲದೆ ದೈವದ । ಬಲವುಳ್ಳರಿಗೆ ಸರಿಯಾರು ॥ ೧೩೮ ॥

---

ಗಂಡನಿಲ್ಲದ ಹೆಂಡತಿಯಂತೆಯೂ ರಾವಣನ ಸೇನಾಸಮುದ್ರವಿತ್ತು ॥ ೧೩೧ ॥ ಒಂದು ಸೈನ್ಯವು ಒದರುತ್ತಿತ್ತು ಇನ್ನೊಂದು ಕೆದರುತ್ತಿತ್ತು ಒಂದು ಸೈನ್ಯವು ಸಂತೋಷಪಡುತ್ತಿತ್ತು, ಇನ್ನೊಂದು ಧೈರ್ಯಹೀನವಾಗಿತ್ತು ಆ ಯುದ್ಧಭೂಮಿಯಲ್ಲಿ ರಾಮಲಕ್ಷ್ಮಣರಿಂದ ಹೀಗಾಯಿತು ॥ ೧೩೨ ॥ ಯುದ್ಧದಲ್ಲಿ ಮಡಿದ ಆನೆ ಕುದುರೆಗಳಿಗೆ ಯಮನ ಪಟ್ಟಣದಲ್ಲಿ ಲಾಯಗಳೂ ಗಜಶಾಲೆಗಳೂ ಹೊಸತಾಗಿ ಕಟ್ಟಲ್ಪಟ್ಟವು ಜೀವಗಳನ್ನು ಕೊಟ್ಟಿಗೆಗಳಲ್ಲಿ ರಾಶಿಹಾಕಿದರು. ಪಟ್ಟಣವನ್ನೇ ವಿಸ್ತರಿಸಿ ಕಟ್ಟಿದರು ॥ ೧೩೩ ॥ ಇನ್ನು ಮುಂದ ವಿಜಯಶ್ರೀಯು ಯಾವ ಪಕ್ಷಕ್ಕೆ ಸೇರುವಳೋ ! ಕೀರ್ತಿಮಾನಿನಿ ಯಾವೆಡೆಗೆ ಹೋಗುವಳೋ ! ವೀರಲಕ್ಷ್ಮಿಯು ಯಾವೆಡೆಗೆ ಜಾರುವಳೋ ! ಎಂದು ಎರಡೂ ಸೈನ್ಯದಲ್ಲಿ ಕುತೂಹಲದೃಷ್ಟಿಯಿಂದ ನೋಡುತ್ತಿದ್ದರು ॥ ೧೩೪ ॥ ಲೋಕದಲ್ಲಿ ಪರಸ್ತ್ರೀಲಂಪಟರಿಗೆ ವೀರಗುರು ಎಂದೆನಿಸಿದ ರಾವಣನ ಸೈನ್ಯವು ಜಯಶಾಲಿಯಾಗದೆಂದು ಅಲ್ಲಿರುವ ವಿದ್ವಾಂಸರು ತಮ್ಮ ಕೋರಿಕೆಯಿಂದ ಹೇಳಿದರು ॥ ೧೩೫ ॥ ದೇವರ ಒಲ್ಮೆಯಿಲ್ಲದವರಿಗೆ ಶೌರ್ಯವಿದ್ದರೂ ಫಲವಿಲ್ಲ, ಈ ರಾವಣನ ಸೈನ್ಯವು ಜಯಶಾಲಿಯಾಗದು—ಎಂದು ಅಲ್ಲಿ ಕಾದಾಡಿದವರು ಕೋರಿಕೆಯಿಂದ ನುಡಿದರು ॥ ೧೩೬ ॥ ನೀರು ನಿಂತಲ್ಲಿ ಕೆಸರೂ, ಅನ್ಯಾಯವಿರುವಲ್ಲಿ ಸೋಲವೂ ಬಾರದಿರದು—ಎಂದು ಅಲ್ಲಿದ್ದ ಸತ್ಪುರುಷರು ವಿಚಾರಯುಕ್ತವಾಗಿ ಹೇಳಿದರು ॥ ೧೩೭ ॥ ಬಲಗಳಲ್ಲಿ ದೈವಬಲವೇ ಬಲ ಅಲ್ಲದೆ ಸೈನ್ಯಬಲ ಭುಜಬಲಗಳಿಂದ ಪ್ರಯೋಜನವಿಲ್ಲ ದೈವಬಲವಿರುವವರಿಗೆ ವೈಭವವುಂಟಾಗುವುದಲ್ಲದೆ ಅವರಿಗೆ ಎಣೆಯೇ ಇಲ್ಲವಾಗುವುದು ॥ ೧೩೮ ॥ ದಶಕಂಠನು ತನ್ನ ಮಗನ ಮೇಲಿನ ಮೋಹವು ಹೆಚ್ಚಾಗಲು ಕೋಪೋದ್ರಿಕ್ತನಾಗಿ 'ಓಡಿಹೋಗಬೇಡ' ಎನ್ನುತ್ತ ಲಕ್ಷ್ಮಣನನ್ನು

---

[1] × (ಚ) [2] ಭೂಮಿಲಿ (ಚ) [3] ಯೆತ್ತಿಸಿ ರಥಪದಾತಿಯನು (ಕ) [4] ಕಟ್ಟಿದುದವರ್ಗೆ (ಚ) [5] ಮಹಾಲಕ್ಷ್ಮಿ (ಚ).
[6] ನೋಡುವರಂಬುಜಾಕ್ಷಿ (ಚ) ೧೩೫ನೆ ಪದ್ಯ ಚ ದಲ್ಲಿಲ್ಲ [7] ನಿಲ್ವನಾಯವು (ಚ)

ಮಗನ ಮೇಗಣ ಮೋಹೋದ್ರೇಕ ಮನದೊಳ । ಗೊಗೆಯೆ ಕೋಪಾನಲನಿಂದ ॥
ತೆಗೆದೋಡದಿರೆಂದು ಲಕ್ಷ್ಮಣನನು ಹತ್ತು । ಮೊಗದವ ಬಂದು ತಱುಬಿದ ॥ ೧೩೯ ॥

ಹಸುಳೆಯ ಕೊಂದ ಕೊಬ್ಬಿನೊಳಿದಿರಾದೊಡೆ । ಹಸಗೆಡಿಸಿಯೆ ನಾ ನಿನ್ನ ॥
ಅಸುವ ತೆಗೆವೆನೆಂದು ಲಕ್ಷ್ಮಣ ನೃಪತಿಯ । ದಶಶಿರ ಬಂದು ತಱುಬಿದ ॥ ೧೪೦ ॥

ಏಕೆ ನಿನಗೆ ಲಕ್ಷ್ಮಣ ನಿನ್ನ ಕಂದನ । ನಾಕನಾಯಕನೋಲಗಕೆ ॥
ನೂಕಿದವನು ನಾನೆಂದು ದಶಾಸ್ಯಗೆ । ಯಾಕೆಯಾದನು ರಾಮಚಂದ್ರ ॥ ೧೪೧ ॥

ಕದುಬಿ ತಂಬಟೆ ಕಡುಹಿಕ್ಕಿತು ಕಾಳೆಗ । ಳೊದಱಿತು ಭೇರಿ ನಿಸ್ಸಾಳ ॥
ಕೆದಱಿತು ನಿಲುಕದೆಣಿಕೆಗೆಯವಂದಿರ[1] । ಕದನದೊಳಗೆ ಕಮಲಾಕ್ಷಿ ॥ ೧೪೨ ॥

ಗಿರಿ ಗಿರಿ ಶರಧಿ ಶರಧಿಯ ನಂಬರವಂ । ಬರವನಿರದೆ ತಾಗುವಂತೆ ॥
ಧುರಧರಣಿಯೊಳು ಶ್ರೀರಾಮ ರಾವಣನೃಪ । ವರರು ಕಾದಿದರಂಬುಜಾಕ್ಷಿ ॥ ೧೪೩ ॥

ಶ್ರೀರಾಮನಿಗೆ ರಾವಣ ರಾವಣನಿಗೆ । ಶ್ರೀರಾಮನಲ್ಲದಿನ್ನವರ್ಗೆ[2] ॥
ಆರೆಣೆ ದೊರೆ ಪಡಿ ಸರಿಸಾಟಿ ಸಮವೆಂ । ದಾರ ಪೋಲಿಸಿ ನುಡಿದಪೆನು ॥ ೧೪೪ ॥

ಅವರಿರ್ವರ ಕದನವ ಪೇಳ್ವೊಡೆಯಾ । ದಿವಿಜೇಶ ಧರಣೀಶ್ವರರ ॥
ಹವಣಿಗೆ ನಿಲುಕದೆಂದೆನೆಯುದ ಪೇಳುವ । ಕವಿಯಾರು ಕಮಲದಳಾಕ್ಷಿ ॥ ೧೪೫ ॥

ಮಗನ ನೋಯಿಸಿದ ಮಂದೆಗತನದೊಳು ನೀ । ಜಗಳವ ನನ್ನೊಳೆಸಗಲು ॥
ಅಗಣಿತ ಬಲವನೆಲ್ಲವ ಕೊಂದು ನಾ ನಿನ್ನ । ದಿಗುಬಲಿಗೊಡದೆ ಬಿಟ್ಟಪನೆ ॥ ೧೪೬ ॥

---

ಅಡ್ಡಗಟ್ಟಿದನು. ॥ ೧೩೯ ॥ ಮಗನನ್ನು ಕೊಂದ ಗರ್ವದಿಂದ ನನಗೆ ಇದಿರಾದರೆ, ನಿನ್ನನ್ನು ನಾನು ಭಂಗಿಸಿ, ಸಂಹರಿಸುವೆನು —ಎಂದು ಲಕ್ಷ್ಮಣರಾಜನನ್ನು ರಾವಣನು ಪ್ರತಿಭಟಿಸಿದನು. ॥ ೧೪೦ ॥ ಆಗ ರಾಮನು— ಎಲೈ ರಾವಣನೇ, ನಿನ್ನೊಡನೆ ಕಾದಲು ಲಕ್ಷ್ಮಣನು ಯಾಕೆ? ನಿನ್ನ ಮಗನನ್ನು ದೇವೇಂದ್ರನ ಸಭೆಗೆ ಕಳುಹಿಸಿಕೊಟ್ಟವನು ನಾನು' ಎಂದು ರಾವಣನಿಗೆ ಪ್ರತಿಭಟನಾದನು. ॥ ೧೪೧ ॥ ಎಲೈ ಚೆಲುವೆಯೇ, ಅವರ ಯುದ್ಧದಲ್ಲಿ ತಂಬಟೆ. ಕಹಳೆ. ಭೇರಿ. ನಿಸ್ಸಾಳಗಳು ಅಸಂಖ್ಯವಾಗಿ ಧ್ವನಿಗೈದವು ॥ ೧೪೨ ॥ ಎಲೈ ಚೆಲುವೆಯೇ. ಬೆಟ್ಟವು ಬೆಟ್ಟದೊಡನೆ. ಸಮುದ್ರವು ಸಮುದ್ರದೊಡನೆ. ಆಕಾಶವು ಆಕಾಶದೊಡನೆ ತಾಗುವಂತೆ. ಯುದ್ಧರಂಗದಲ್ಲಿ ರಾಮ-ರಾವಣರು ಕಾದಾಡಿದರು. ॥ ೧೪೩ ॥ ಶ್ರೀರಾಮನಿಗೆ ರಾವಣನೂ, ರಾವಣನಿಗೆ ಶ್ರೀರಾಮನೂ ಎಣೆಯಲ್ಲದೆ. ಅವರಿಗೆ ಬೇರೆ ಯಾರನ್ನು ಎಣೆ. ಯೋಗ್ಯ, ಪಡಿ, ಸರಿ, ಸಾಟಿ, ಸಮವೆಂದು ಹೋಲಿಸಿ ಹೇಳಲಿ ! ॥ ೧೪೪ ॥ ಎಲೈ ಚೆಲುವೆಯೇ. ಆ ರಾಮರಾವಣರ ಯುದ್ಧವನ್ನು ವಿವರಿಸಿ ಹೇಳಲು ದೇವೇಂದ್ರ ಮನುಜೇಂದ್ರರಾರಿಂದಲೂ ಸಾಧ್ಯವಿಲ್ಲವೆನ್ನುವಾಗ ಅದನ್ನು ಹೇಳುವ ಕವಿ ಯಾವನಿರುವನು? ॥ ೧೪೫ ॥ ರಾವಣನು ರಾಮನೊಡನೆ ಹೀಗೆಂದನು—"ನನ್ನ ಮಗನನ್ನು ನೋಯಿಸಿದ ಮಂದಬುದ್ಧಿಯಿಂದ ನೀನು ನನ್ನಲ್ಲಿ ಜಗಳವನ್ನು ಮಾಡಿದರೆ. ನಿನ್ನ ಅಸಂಖ್ಯ ಸೈನ್ಯವನ್ನೆಲ್ಲ ವಧಿಸಿ. ನಿನ್ನನ್ನು ದಿಕ್ಕುಗಳಿಗೆ ಬಲಿಕೊಡದೆ ಬಿಡುವೆನೆ?" ॥ ೧೪೬ ॥ ಆಗ ರಾಮನು—"ಎಲೋ ಖೇಚರನಾದ ರಾವಣನೆ, ನೀನು ಗರ್ವದ ಮಾತನ್ನಾಡಿದೆ. ಅದು ನಿನಗೆ ಯೋಗ್ಯವಲ್ಲ ಆ ಮಾತನ್ನು ನೆರವೇರಲು ನಾನು ಬಿಡೆನು"

---

[1] ಯುವಂದಿರು (ಚ) [2] ದಿಲ್ಲವರ್ಗೆ (ಚ).

ಸೊಕ್ಕಿನ ಮಾತ ನುಡಿದೆಯದು ಖೇಚರ । ತಕ್ಕುದೆ ನಿನಗೆಯಾ ನುಡಿಯು ॥
ದಕ್ಕಲಿಸುವನಲ್ಲೆಂದವನಿಗೆ ಮೈ । ಯಿಕ್ಕಿ ನುಡಿದ[1] ರಾಮಚಂದ್ರ ॥ ೧೪೭ ॥

ಸೇವಲದೊಳು[2] ಸಿಕ್ಕಿ ನಿಲುವುದೆ ಮದದಂ । ತಾವಲ ನೀ ನನ್ನ[3] ಮೇಲೆ ॥
ತೀವಿದ ಬಾಣಕಗಿವನಲ್ಲೆನುತಲಂದು । ರಾವಣನೆಚ್ಚ ರಾಘವನ ॥ ೧೪೮ ॥

ತೂಱಲು ಪೋಪುದು ತನಿಹೊಟ್ಟು ಬಲುಗಿರಿ । ಹಾಱಬಲ್ಲುದೆ ನಾ ನಿನ್ನ ॥
ತೂಱಂಬುಗಳಿಗೆ ಸೆಡೆವನಲ್ಲೆಂದವ । ಹೇಱಿದ ಬಲು ಶರಗಳನು ॥ ೧೪೯ ॥

ಕಂಗೆಡುವುದೆ ಶರಧಿಗೆಯಾ ತಿಮಿ ತಿ । ಮಿಂಗಿಳ ಹುಲುಮೀನಿನಂತೆ ॥
ಸಂಗರವನು ಮಾಡಿದೊಡೆನ್ನೊಳು ನಿನ್ನ । ಭಂಗಬಡಿಸದೆ ಬಿಟ್ಟಪೆನೆ ॥ ೧೫೦ ॥

ಸಸಿನಕೆ ನಿಲು ನೀ ನಿಂದೊಡೆ ನಾ ನಿ । ನ್ನಸುವ ತೆಗೆದು ದೇಹವನು ॥
ದೆಸೆಬಲಿಗೊಡುವೆ ತೊಡದೊಡೆ ತೊಡೆವೆನೆನ್ನ । ದಶಶಿರನೆಂಬ ನಾಮವನು ॥ ೧೫೧ ॥

ಹೆಸರು ತೊಡೆಯದೆ ಹೋಗದು ಹೋಗದಾ ಮಾತು । ಹುಸಿಯಲ್ಲವೆಂದು ಕೋಪದಲಿ ॥
ಅಸಹಾಯಶೂರ ಶ್ರೀರಾಮ ನುಡಿಯಲಾ । ದಶಶಿರನಿಂತು ನುಡಿದನು ॥ ೧೫೨ ॥

ನೆಳಲು ಚರಾಚರ ಜೀವಂಗಳಿಗುಂಟು । ನೆಳಲುಂಟೆ ದಿನನಾಯಕಗೆ ॥
[4]ಕೊಳುಗುಳದೊಳು ನಿನ್ನ ಕೊಂದುನಾ ಬೇಗದಿ । ಕಳುಪುವೆ ಯಮರಾಜಪುರಕೆ[4] ॥ ೧೫೩ ॥

ಜ್ಞಾನವಮುಖದ ಪಾಪವಗ್ನಿಮುಖದ ರಸ । ಭಾನುಮುಖದ ತಮದಂತೆ ॥
ನೀನು ನಿಲುವೆ ನನ್ನೊಳು ಕಾಳಗಕೆಂದು । ಹೀನದಿಂ ನುಡಿದನಂದವನ ॥ ೧೫೪ ॥

---

ಎಂದು ಅವನಿಗೆ ಎದುರಾಗಿ ನುಡಿದನು ॥ ೧೪೭ ॥ "ಮದಗಜವು ಸರೋವರದಲ್ಲಿರುವ ಪಾವಸೆಗೆ ಸಿಕ್ಕಿ ನಿಲ್ಲುವುದೆ? ನೀನು ನನ್ನ ಮೇಲೆ ಪ್ರಯೋಗಿಸಿದ ಬಾಣಗಳಿಗೆ ನಾನು ಹೆದರೆನು" ಎನ್ನುತ್ತ ರಾವಣನು ರಾಮನ ಮೇಲೆ ಅಸ್ತ್ರವನ್ನು ಪ್ರಯೋಗಿಸಿದನು. ॥ ೧೪೮ ॥ ಧಾನ್ಯದ ಹೊಟ್ಟು, ಹಾರಿಸುವಿಕೆಯಿಂದ ಹಾರಿಹೋಗುವಂತೆ ದೊಡ್ಡ ಬೆಟ್ಟವು ಹಾರುವುದೆ? ಅದರಂತೆ ನೀನು ಪ್ರಯೋಗಿಸಿದ ಬಾಣಗಳಿಗೆ ನಾನು ಹೆದರೆನು—ಎಂದು ರಾಮನು ಪ್ರಬಲವಾದ ಬಾಣಗಳನ್ನು ಬಿಟ್ಟನು ॥ ೧೪೯ ॥ ಆಗ ರಾವಣನು ಹೀಗೆಂದನು—"ತಿಮಿ-ತಿಮಿಂಗಿಲಗಳು ಅಲ್ಪವಾದ ಮೀನಿನಂತೆ ಸಮುದ್ರಕ್ಕೆ ಹೆದರುವುವೆ? ನನ್ನಲ್ಲಿ ನೀನು ಯುದ್ಧ ಮಾಡಿದರೆ, ಕಷ್ಟಕ್ಕೆ ಈಡಾಗುವೆ ॥ ೧೫೦ ॥ ನನಗೆ ಎದುರುನಿಲ್ಲು. ನಿಂತರೆ ನಾನು ನಿನ್ನ ಪ್ರಾಣವನ್ನು ತೆಗೆದು ದೇಹವನ್ನು ದಿಗ್ಬಲಿ ಕೊಡುವೆನು ಕೊಡದೆ ಇದ್ದರೆ ನನ್ನ ದಶಶಿರನೆಂಬ ಹೆಸರನ್ನೇ ಅಳಿಸಿಬಿಡುವೆದು." ॥ ೧೫೧ ॥ "ನಿನ್ನ ಹೆಸರು ಅಳಿಯದೆ ಹೋಗದು. ಆ ಮಾತು ಏನೂ ಸುಳ್ಳಲ್ಲ" ಎಂದು ಏಕಾಂಗ ವೀರನಾದ ಶ್ರೀರಾಮನು ಹೇಳಲು, ಆ ರಾವಣನು ಹೀಗೆಂದನು ॥ ೧೫೨ ॥ ಲೋಕದಲ್ಲಿ ಚಲಿಸುವ ಮತ್ತು ಚಲಿಸದಿರುವ ಜೀವಿಗಳಿಗೆಲ್ಲ ನೆಳಲಿರುತ್ತದೆ, ಆದರೆ ಸೂರ್ಯನಿಗೆ ನೆಳಲಿದೆಯೆ? ಯುದ್ಧದಲ್ಲಿ ನಿನ್ನನ್ನು ನಾನು ಕೊಂದು ಬೇಗನೆ ಯಮಪುರಕ್ಕೆ ಕಳುಹಿಸುವೆನು.' ॥ ೧೫೩ ॥ ಆಗ ರಾಮನೆಂದನು—'ಜ್ಞಾನದ ಎದುರಿನ ಪಾಪದಂತೆಯೂ, ಅಗ್ನಿಯ ಎದುರಿನ ಪಾದರಸದಂತೆಯೂ ಸೂರ್ಯನೆದುರಿನ ಕತ್ತಲೆಯಂತೆಯೂ ನೀನು ನನ್ನಲ್ಲಿ ಯುದ್ಧಕ್ಕೆ ನಿಂತಿರುವೆ" ॥ ೧೫೪ ॥

---

[1] ಮೈಯಿಕ್ಕಿ ನಿಂದನು (ಚ) [2] ಸೇವಾಲದೊಳು (ಚ) [3] ಸೇನನ್ನ (ಕ) ೧೫೧, ೧೫೨ ಇವು ಚ ದಲ್ಲಿಲ್ಲ [4] ಕೊಳುಗುಳ ನಿನ್ನನ್ನರೊಳಲ್ಲದೆನ್ನೊಳ । ಗಳುಕದೆ ನಿಂದು ಜೀವಿಪೆಯ (ಕ)

ಅಚ್ಚಿನ ಪಾವ ಪಿಡಿವೊಡೆ ಖಗೇಶನ । ಉಚ್ಚರಣೆಯದೇಕೆ ನಿನ್ನ[1] ॥
ಅಚ್ಚುಗವಿಲ್ಲ ರಣವನೆಸಗುವದೆಂದು[2] । ಹೆಚ್ಚಿನ ಮಾತನಾಡಿದನು ॥ ೧೫೫ ॥

ಬೆಟ್ಟವ ಹಿಟ್ಟುಗುಟ್ಟುವೆ ಹೆಮ್ಮಾರಿಯ । ನಟ್ಟಿದಪೆನು[3] ಸಿಂಗವನು ॥
ಕಟ್ಟಿತಂದಪೆನೆಂ [4]ಬಾ ಬಾಲರು ರಣ । ದಿಟ್ಟರಾಗುವರೆ[4] ದಶಾಸ್ಯ ॥ ೧೫೬ ॥

ಸಿಡಿಲ ಪಿಡಿವೆ ವಡಬಾನಲನನು ಮೆಟ್ಟಿ । ನಡೆವೆ ಕಡಲ ಸುಱಿಕ್ರೆಂದು ॥
ಕುಡಿವೆನು ನಾನೆಂಬ ಮಾತಾಳಿಗಳು[5] ನಿಂದು । ಕಡುಗಲಿಯನು ಜಯಿಸುವರೆ ॥ ೧೫೭ ॥

ನೆಲನೆದ್ದರುಂಗುಟದಲಿಯಾಗಸ ಬೀಳ । ಲಲಗಿನ ಮೊನೆಯೊಳಗಾಂತು ॥
ನಿಲಿಸಿ ತೋಱುವೆನೆಂಬ [6]ವಚನಶೂರರು ರಣ । ಗಲಿಗಳಾಗುವರೆ[6] ದಶಾಸ್ಯ ॥ ೧೫೮ ॥

ಬಾಯ ಹವಣಿನ ಮಾತನು ನುಡಿಯದೆಯ । ನ್ಯಾಯದ ನಡೆಗಳ ನಡೆದು[7] ॥
ಕಾಯದ ಸತ್ವವ[8]ನಱಿಯದೆ ನೀನು ವ್ಯ । ಥಾಯಕ್ಕೆ[9] ಸಾವುದುಚಿತವೆ ॥ ೧೫೯ ॥

ಕೊಲ್ವವರಾರು ಗೆಲ್ವವರಾರು ಜಯಲಕ್ಷ್ಮಿ । ನಿಲ್ವಳು ವೀರರಂಗದೊಳು ॥
ಸೋಲ್ವ ಮಾತೇಕೆ ನಿಲ್ವುದು ಕೊಳುಗುಳದೊಳು । ಬಾಳ್ವೆಯೆಂದುಲಿದ ರಾಘವನ ॥ ೧೬೦ ॥

ಖಂಡಿಸುವನು ಪಗೆಯೆಚ್ಚ[10] ಸರಲ ತುಂಡು । ತುಂಡಿಗೆ ಪೊಯ್ವ ರಾವುತರ ॥
ಮಂಡಳಿಕರ ಮಗ್ಗಿಸಿದ ರಾವಣ ರಣ । ಮಂಡಲದೊಳು ಪೇಳ್ವೆನೇನ ॥ ೧೬೧ ॥

---

"ಅಚ್ಚಿನಿಂದ ಮಾಡಿದ ಹಾವನ್ನು ಹಿಡಿಯಬೇಕಾದರೆ ಗರುಡನ ಮಂತ್ರೋಚ್ಚಾರಣೆ ಬೇಕೆ? ನಿನ್ನಲ್ಲೇನೂ ಪ್ರೀತಿಯಿಲ್ಲದೆ ಯುದ್ಧ ಮಾಡುವುದೇ ಸರಿ" ಎಂದು ಘನತೆಯ ಮಾತನ್ನಾಡಿದನು. ॥ ೧೫೫ ॥ "ಎಲೈ ರಾವಣನೇ. ಬೆಟ್ಟವನ್ನು ಹಿಟ್ಟಿನಂತೆ ಪುಡಿಮಾಡುವೆನು, ದೊಡ್ಡ ಮಾರಿದೇವತೆಯನ್ನು ಓಡಿಸುವೆನು. ಸಿಂಹವನ್ನು ಬಂಧಿಸಿ ತರುವೆನು" ಎಂದು ಬಾಯಲ್ಲಿ ಮಾತ್ರ ಹೇಳುವ ಬಾಲಕರು ರಣಶೂರರಾಗುವರೆ? ॥ ೧೫೬ ॥ ಸಿಡಿಲನ್ನು ಹಿಡಿಯುವೆನು, ಬಡಬಾಗ್ನಿಯನ್ನು ಕಾಲಿನಿಂದ ಮೆಟ್ಟಿಕೊಂಡು ನಡೆಯುವೆನು, ಸಮುದ್ರವನ್ನೇ ಸುರ್ರೆಂದು ಕುಡಿಯುವೆನು—ಎನ್ನುವ ವಚನಶೂರರು, ರಣಶೂರರನ್ನು ಸೋಲಿಸಬಲ್ಲರೆ? ॥ ೧೫೭ ॥ ರಾವಣನೇ, ಭೂಮಿ ಮೇಲಕ್ಕೆದ್ದರೆ ಕಾಲ ಹೆಬ್ಬೆರಲಿನಲ್ಲಿ ಒತ್ತಿ ನಿಲ್ಲಿಸುವೆನು—ಆಕಾಶವು ಬೀಳುವುದಾದರೆ ಖಡ್ಗದ ತುದಿಯಿಂದ ತಡೆದು ನಿಲ್ಲಿಸುವೆನು—ಎನ್ನುವ ಮಾತಿನ ಮಲ್ಲರು ಸಮರಶೂರರಾಗುವರೆ? ॥ ೧೫೮ ॥ ಬಾಯಿಯಲ್ಲಿ ಪರಿಮಿತಿಯೆನಿಸುವಷ್ಟೇ ಮಾತುಗಳನ್ನಾಡದೆ, ಅನ್ಯಾಯದಲ್ಲಿ ಪ್ರವರ್ತಿಸಿ, ಶರೀರಸಾಮರ್ಥ್ಯವನ್ನು ತಿಳಿದುಕೊಳ್ಳದೆ ನೀನು ಸುಮ್ಮನೆ ನನ್ನಲ್ಲಿ ಕಾದಾಡಿ ಯಾಕೆ ಸಾಯುತ್ತಿ? ॥ ೧೫೯ ॥ ಆಗ ರಾವಣನು—"ಕೊಲ್ಲುವವರು ಯಾರು? ಗೆಲ್ಲುವವರು ಯಾರು? ವಿಜಯಶ್ರೀಯು ವೀರರ ದೇಹದಲ್ಲೇ ನೆಲಸುವಳು. ಆದುದರಿಂದ ನಾನು ಸೋಲುವ ಮಾತೇಕೆ? ನೀನು ಯುದ್ಧಕ್ಕೆ ನಿಲ್ಲು—ಆಗ ನೀನು ಬದುಕುವ ಸಂಗತಿ ಗೊತ್ತಾಗುವುದು" ಎಂದು ರಾಘವನಿಗೆ ಹೇಳಿದನು ॥ ೧೬೦ ॥ ರಾವಣನು ಆ ಸಮರಾಂಗಣದಲ್ಲಿ ಶತ್ರುವಿನಿಂದ ಬಂದ ಬಾಣಗಳನ್ನು ತುಂಡುಮಾಡಿದನು. ಅಶ್ವಾರೋಹಿಗಳನ್ನು ಕತ್ತರಿಸಿ

---

[1] ಉಚ್ಚರಣೆಯು ನಿನ್ನೊಳಗೆ (ಕೆ). [2] ನೆಸಗುವಮೆಂದು (ಚ) [3] ಹೆಮ್ಮಾರಿಯ ಮುಟ್ಟಿ ಬಂದೆನು (ಚ). [4] ↓ (ಕ). [5] ಮಾತನುಳಿದು (ಕ)
[6] ಬಹುವಚನದ ಮಾತು ಗಲಿಗನಾಗುವರೆ (ಕ). [7] ಮಾತುಗಳನು ನುಡಿವರೆ । ಕೈಯಾರವೆ ಕೊಳುಗುಳವು (ಕ) [8] ತತ್ವ (ಚ). [9] ವೃಥಾಯಾಕೆ (ಕ)
೧೬೦—ಇದಕ್ಕೆ ಸ್ಥಾನಿಯಾಗಿ ಚ ದಲ್ಲಿ ಕೆಳಗಿನ ಪದ್ಯವಿದೆ.—ಕೊಲ್ವವರಾರುಂಟೆನುತ ನಸ್ನನು ಬಂದು । ಕಾಲ್ನಿಡಿದಿಹನನವರತ ॥
ನಿಲ್ವವರಾರು ಸಮರಕೆಂದು ರಾವಣ । ಮೇಲ್ವಾಯ್ದು ನುಡಿದ ರಾಘವನ ॥
[10] ಸರಲಂಗಳ ದಂಡಿಗೆ ಪೊಯ್ದು (ಚ).

ಒತ್ತಿಗೆ ಸೇರಿದಾನೆಯ ತಿವಿವನು ಸು । ಗ್ಗೊತ್ತುವ ರಥವ ರಥಿಕರ[1] ॥
ತತ್ತರಿದರಿವ ರಾಘವನ ರಾವಣನೃಪ । ಮುತ್ತರಿಸುವ ರಣದೊಳಗೆ ॥ ೧೬೨ ॥

ವಿಕ್ರಮನಹುನಹುದಹುದೆಲೆ[2] ನೀನರ್ಧ । ಚಕ್ರಿಯೆಂಬುದನರಿದಿಹೆನು ॥
ಶಕ್ರ ಮೆಚ್ಚಲು ನನ್ನ ಗೆಲದಿರ್ಪುದು[3] ನಿನ್ನ । ದಕ್ರಮವೆಂದು ನುಡಿದನು ॥ ೧೬೩ ॥

ಹೀ ಹೇಳಿಕೆಯ ಮಾತ ನುಡಿದು ಭಂಗಿಸುವರೆ । ಯಾಹವದೊಳು ನಾ ನಿನ್ನ ॥
ರೂಹನಳಿಯದೆ ಬಿಟ್ಟಪೆನೆ ಬಿಡೆನು ನನ್ನ । ಸಾಹಸವನು ನೋಡು ನೀನು ॥ ೧೬೪ ॥

ಎಂದು ನುಡಿದ ದಶವದನಗೆ ರಾಘವ । ನೆಂದನು ನೀನೀ ರಣದಿ ॥
ಇಂದು ಬದುಕಿ ಪೋದೊಡೆ[4] ಬದುಕಿದೆ ನಿನ । ಗೆಂದೆಂದಿಗೆ ಸಾವಿಲ್ಲ[4] ॥ ೧೬೫ ॥

ಆಲೆವಟ್ಟಲ ಗಾಳಿಗೆ ಮುರಿವುದೆ ಮೇಘ । ಜಾಲ ರಾಘವ ನೀನೆಚ್ಚ ॥
ಕೋಲು ನಿಲುವವೆಯೆಂದೆನುತೆಚ್ಚ ಶರಗಳ[5] । ತೇಲ ನೂಕಿದನವನಬಲಿ ॥ ೧೬೬ ॥

ಆನೆಯಿಂದಾನೆಯ ಕುದುರೆಯಿಂ ಕುದುರೆಯ । ನಾನದೆ ರಥದಿ[6] ರಥಗಳ ॥
ಆ ನರಪತಿಯಿಟ್ಟು ಕೆಡಹಿದ ಚತುರಂಗ । ಸೇನೆಯನೊಂದು ನಿಮಿಷದಿ ॥ ೧೬೭ ॥

ಆದ ಕಂಡು ರಾವಣ ಕೋಪಾಟೋಪದಿಂ । ದಿದಕಾವುದು ಕಾರ್ಯವೆಂದು ॥
ಎದೆಯೊಳಗೆಣಿಸಿದ ಮಾಯಾವಿದ್ಯೆಗೆ । ಸದನವೆಂದೆಣಿಸಿದ ಕಪಟ ॥ ೧೬೮ ॥

---

ದನು ತುಂಡರಸರನ್ನು ನಾಶಮಾಡಿದನು ಆ ರಾವಣನ ಶೌರ್ಯವನ್ನು ಏನೆನ್ನಲಿ[1] ॥ ೧೬೧ ॥ ರಾವಣನು ಸಮರದಲ್ಲಿ ಸಮೀಪಕ್ಕೆ ಬಂದ ಆನೆಗಳನ್ನು ತಿವಿದನು ಸುಗ್ಗೊತ್ತಿ ಬರುವ ರಥಗಳನ್ನೂ ರಥಿಕರನ್ನೂ ತುಂಡರಿಸಿ, ಶ್ರೀರಾಮನನ್ನು ಹುಡುಕತೊಡಗಿದನು ॥ ೧೬೨ ॥ ಎಲೋ, ನೀನು ಪರಾಕ್ರಮಿಯೆಂಬುದನ್ನೂ ಅರ್ಧಚಕ್ರೇಶ್ವರನೆಂಬುದನ್ನೂ ತಿಳಿದಿರುವನು ನಿನ್ನಲ್ಲಿ ಪರಾಕ್ರಮವಿದ್ದರೆ ನನ್ನನ್ನು ನೀನು ಗೆಲ್ಲದಿರುವುದು ತಪ್ಪು—ಎಂದು ರಾವಣನೆಂದನು ॥ ೧೬೩ ॥ ನೀನು ನನ್ನನ್ನು ಹೀಯಾಳಿಸುವ ಮಾತುಗಳನ್ನಾಡಿ, ಭಂಗಪಡಿಸುವೆಯಾ? ಯುದ್ಧದಲ್ಲಿ ನಾನು ನಿನ್ನನ್ನು ನಾಶಪಡಿಸದೆ ಬಿಡೆನು ನನ್ನ ಸಾಹಸವನ್ನು ನೀನು ನೋಡು—ಎಂದನು. ॥ ೧೬೪ ॥ ಹೀಗೆ ರಾವಣನು ಹೇಳಲು ಶ್ರೀರಾಮನು ಹೀಗೆಂದನು—"ನೀನು ಇಂದಿನ ಈ ಯುದ್ಧದಲ್ಲಿ ಬದುಕಿ ಹೋದರೆ ಬದುಕಿದಂತೆಯೇ ಸರಿ ಆ ಮೇಲೆ ನಿನಗೆ ಎಂದಿಗೂ ಮರಣವಿಲ್ಲ" ॥ ೧೬೫ ॥ ಎಲೈ ರಾಮನೇ, ಮೋಡಗಳ ಸಮೂಹವು ಬೀಸಣಿಗೆಯ ಗಾಳಿಗೆ ಹಿಂದಿರುಗುವುದೆ? ನೀನು ನನ್ನ ಮೇಲೆ ಪ್ರಯೋಗಿಸಿರುವ ಬಾಣಗಳು ನಿಲ್ಲಬಲ್ಲುವೆ? ಎನ್ನುತ್ತ, ರಾವಣನು ಬಾಣಗಳಿಂದ ತೇಲಿ ಹೋಗುವಂತೆ ಪ್ರಯೋಗಿಸಿದನು ॥ ೧೬೬ ॥ ಆಗ ಶ್ರೀರಾಮನು ಆನೆಯಿಂದ ಆನೆಯನ್ನು, ಕುದುರೆಯಿಂದ ಕುದುರೆಯನ್ನು, ರಥದಿಂದ ರಥಗಳನ್ನು ಹೊಡೆದು, ನಿಮಿಷ ಮಾತ್ರದಲ್ಲೇ ರಾವಣನ ಚತುರಂಗ ಸೈನ್ಯವನ್ನು ಕೆಡಹಿದನು ॥ ೧೬೭ ॥ ಅದನ್ನು ಕಂಡು ರಾವಣನು ಸಿಟ್ಟಿನ ಆಡಂಬರವನ್ನು ತಾಳಿ, ಇನ್ನು ಮಾಡುವುದೇನೆಂದು ಯೋಚಿಸಿ, ಇನ್ನು ಮಾಯಾವಿದ್ಯೆಯನ್ನು ಆಶ್ರಯಿಸಬೇಕೆಂದು ನಿರ್ಣಯಿಸಿದನು ॥ ೧೬೮ ॥ ಶ್ರೀರಾಮನ ಗೆಲವನ್ನು ಭಂಗಿಸಬೇಕೆಂದು ರಾವಣನು ಮಾಯಾ

---

[1] ರಥದ ನಾಯಕರ (ಚ) [2] ವಿಕ್ರಮನಹುದದನಾ ಬಲ್ಲೆ (ಚ) [3] ಗೆಲಿದಿರ್ಪುದಮು (ಚ) [4] ಬದುಕಿದವಾ । ನೆಂದೆಂದಿಗೆ ಸಾವುದಿಲ್ಲ (ಚ) [5] ಸರಲ್ಗಳ (ಕ) [6] ರಥದೆ (ಚ)

ಗೆಲಹ[1] ಮುಱಿಯಬೇಕೆಂದವ ವಿದ್ಯಾ । ಬಲದಿಂದಲಾ ಜಾನಕಿಯ ॥
ತಲೆಯ ಕೊಯ್ದಿಡಲದ ಕಂಡು ಶ್ರೀರಾಮನು । ಸಲೆ ಮೂರ್ಛಿತನಾದನಬಲೆ ॥ ೧೬೯ ॥

ಅಡಗಿತು ಮಿಡುಕುಡಾಣದೊಳಸು ಕಂಗಳು । ಪಡಿಗೆತ್ತವು ತನುವಿನೊಳು ॥
ನಡುಗು ಪುಟ್ಟಿತು ಸ್ವೇದ ಜನಿಸಿತು ರಘುನಾಥ । ನುಡಿಗೆಟ್ಟು ಮೌನವಿಡಿದನು[2] ॥ ೧೭೦ ॥

ತನು ಮನ ಕೂಡಿದ ಕೋಮಲೆಯರುಗಳಿ । ಗನುವರ[3] ಬರಲದ ಕಂಡು ॥
ತನು ಮನ ವಚನಕೆ ಮಱವೆ ಬಾರದೆ ಬಾಳ್ದ । ಮನುಜರಾರಂಬುಜನೇತ್ರೆ ॥ ೧೭೧ ॥

ತೋಱಿದುದವಳ ಪೂರ್ವದ ನೇಹ ಮನದಿ ಕಾ । ಲೂಱಲವನಿಗಾ[4] ತೆಱನ ॥
ಮೀಱಿ ನಡೆಯಲೀಯದು ಪೂರ್ವಸುಕೃತವ । ಮೀಱುವರಾರು ಮೀನಾಕ್ಷಿ ॥ ೧೭೨ ॥

ಮೋಹನೀಯ ಕರ್ಮ ಬಂದಡ್ಡಲಾಗಲು[5] । ದೇಹ[6]ಗಳನು ಹುಚ್ಚುಮಾಡಿ ॥
ಸಾಹಸಗೆಡಿಸದೆ[7] ಬಿಡದು ಬಿಡದುವದು[8] । ಬಾಹುಲ್ಯ ಕರ್ಮ ಕರ್ಮದೊಳು ॥ ೧೭೩ ॥

ಸಕಲ ಶೀತಳ ಕ್ರಿಯೆಯನು ಮಾಡಿ ಮನಸಿನ । ವಿಕಲ ಪರೆಯಲೆಚ್ಚತ್ತು ॥
ಅಕಲಂಕಚರಿತನು[9] ನೆನೆದನಂದೊಯ್ಯನೆ । ಮಕರಾಂಕವಿಜಯನಂಘ್ರಿಯನು ॥ ೧೭೪ ॥

ಬಳಿಕ ವಿಭೀಷಣ ಬಂದು ನಮ್ಮಣ್ಣನ । ತಳವಿದು ಜಗದಂಬಿಕೆಗೆ ॥
ಮುಳಿವವರಿಲ್ಲಿದು[10] ನಿಜವೆಂದು ಪೇಳಲು । ತಿಳಿದುದು ಮೂರ್ಛೆಯವನಿಗೆ ॥ ೧೭೫ ॥

ಜಿನ ಜನಯಿನಿಸಜ್ಞಾನತೆ[11]ಯೆನ್ನೊಳು । ಜನಸಿತಲಾಯೆಂದು ತನ್ನ ॥
ಮನಸಿನೊಳಗೆ ನೊಂದನೊಯ್ಯನೆ ಲೋಕದ[12] । ಜನನಾಥನಂತಲ್ಲದವನು ॥ ೧೭೬ ॥

---

ವಿದ್ಯೆಯ ಸಾಮರ್ಥ್ಯದಿಂದ, ಸೀತೆಯ ಕೃತಕ ಶಿರಸ್ಸನ್ನು ತುಂಡುಮಾಡಿ ಶ್ರೀರಾಮನ ಮುಂದೆ ಬೀಳಿಸಿದನು. ಎಲೈ ಚೆಲುವೆಯೇ, ಶ್ರೀರಾಮನು ಇದನ್ನು ಕಂಡು ಪ್ರಜ್ಞೆತಪ್ಪಿದನು. ॥ ೧೬೯ ॥ ಆಗ ಶ್ರೀರಾಮನಿಗೆ ನಾಡಿಬಡಿತ ನಿಂತಂತೆ ಕಂಡಿತು. ಕಣ್ಣುಗಳು ಮುಚ್ಚಿದವು ದೇಹದಲ್ಲಿ ನಡುಕವುಂಟಾಗಿ, ಬೆವತು, ಮಾತಿಲ್ಲವಾಗಿ, ಮೌನವನ್ನು ತಾಳಿದನು. ॥ ೧೭೦ ॥ ದೇಹ ಮನಸ್ಸುಗಳಲ್ಲಿ ಒಂದಾಗಿರುವ ಪತ್ನಿಯರಿಗೆ ಆಪತ್ತು ಉಂಟಾದಾಗ ದೇಹ-ಮನಸ್ಸು-ವಚನಗಳೆಂಬ ತ್ರಿಕರಣಗಳಿಗೆ ವಿಸ್ಮರಣೆ ಬಾರದಿರುವ ಮಾನವರು ಯಾರಿರುವರು? ॥ ೧೭೧ ॥ ಎಲೈ ಚೆಲುವೆಯೇ, ಶ್ರೀರಾಮನ ಮನದಲ್ಲಿ ಆಕೆಯ ಹಿಂದಿನ ಪ್ರೀತಿ ಭಾವನೆಯು ನೆಲಸಿತು. ಅದನ್ನು ಮೀರಿ ನಡೆಯಲು ರಾಮನಿಂದಾಗಲಿಲ್ಲ ಪೂರ್ವಾರ್ಜಿತವನ್ನು ಮೀರಲು ಯಾರಿಗೆ ತಾನೇ ಸಾಧ್ಯ? ॥ ೧೭೨ ॥ ಘಾತಿಕರ್ಮಗಳಲ್ಲಿ ಒಂದಾಗಿರುವ ಮೋಹನೀಯ ಕರ್ಮವು ಬಂದು ಅಡ್ಡವಾದಾಗ ಅದು ಮನುಷ್ಯರನ್ನು ಹೀಗೆ ಹುಚ್ಚುಗೊಳಿಸಿ, ಸಾಹಸಹೀನರನ್ನಾಗಿ ಮಾಡುವುದು. ಕರ್ಮಗಳನ್ನು ಹೆಚ್ಚಿಸುವುದು ॥ ೧೭೩ ॥ ಆಗ ಮಾಡಿದ ಶೈತ್ಯೋಪಚಾರದಿಂದ ಎಚ್ಚರವನ್ನು ತಾಳಿ. ತನ್ನ ಮನಸ್ಸಿನ ವಿಕಳತೆಯನ್ನು ಕಳೆದು, ನಿರ್ಮಲ ಚಾರಿತ್ರವುಳ್ಳ ಶ್ರೀರಾಮನು ಮೆಲ್ಲನೆ ಜಿನೇಶ್ವರನ ಪಾದವನ್ನು ಧ್ಯಾನಿಸಿದನು. ॥ ೧೭೪ ॥ ಅಷ್ಟರಲ್ಲಿ ಅಲ್ಲಿಗೆ ವಿಭೀಷಣನು ಬಂದು— "ಇದೆಲ್ಲವೂ ನಮ್ಮಣ್ಣನಾದ ರಾವಣನ ಕಪಟವಾಗಿದೆ. ಲೋಕಮಾತೆಯಾದ ಸೀತೆಗೆ ಕೇಡೆಣಿಸುವವರಿಲ್ಲ. ಇದು ನಿಜ" ಎಂದು ಹೇಳಿದನು. ಶ್ರೀರಾಮನು ಆಗ ಮೂರ್ಛೆಯಿಂದ ಎದ್ದನು. ॥ ೧೭೫ ॥ ಲೋಕದ ಇತರ ರಾಜನಂತೆ ಅಲ್ಲವಾಗಿರುವ

---

[1] ಬಲುಪ (ಟ). [2] ಮೌನವಡೆದನು (ಟ). [3] ಯರುಗಾತನುವರೆ (ಕ) [4] ಕಾಬೂರ ಒಲ್ಲವನಿಗಾ (ಟ). [5] ಬಂದಪ್ಪಲಾಗವ್ರ (ಕ) [6] ದೇಹಿ (ಟ). [7] ಸಾಹಸವಡಿಸದೆ (ಟ) [8] ವಧು (ಕ). [9] ಚರಿತನ (ಟ). [10] ಮುಳಿವರಿಲ್ಲೆಂದು (ಟ). [10] ಯನಿತಜ್ಞಾನತ (ಟ) [11] ನೊಯ್ಯನೇನೆಂದದ (ಕ).

ಬಿಟ್ಟಿತು ಮಱವೆ ಬಳಿಕ ಸೇಸರಿಸಿಕೊಂಡು । ಪುಟ್ಟಿತು ಮೋಸದಿಂದೆನಗೆ ॥
ಕೆಟ್ಟಿತು ಕಾರ್ಯವೆನುತ ರಾಮಚಂದ್ರನು । ದಿಟ್ಟ ಮಾನಸನಾದನಬಲೆ ॥ ೧೭೭ ॥

ಎಲ್ಲಿ ಕಲಿತೆಯೊ ಮಾಯಾವಿದ್ಯೆಯ ನೀ । ನೆಲ್ಲಿಯಭ್ಯಾಸಮಾಡಿದೆಯೊ[1] ॥
ಎಲ್ಲಿ ಕಲಿತೆಯೊ ಕೌಳಿಕವ ದಶಾಸ್ಯ ನೀ । ನೆಲ್ಲಿ ಕಲಿತೆಯೊ ಚಿತ್ರವಿದು ॥ ೧೭೮ ॥

ಗೋವಿಂದಗತಿಯನಭ್ಯಾಸಿಸಿದಾಚಾರ್ಯ । ನಾವನ ಗುರು ನಿನಗೆನುತ[2] ॥
ಈ ವಿದ್ಯೆಯಿಂ ಜೀವಿಪುದು ನಿನಗಲ್ಲದೆ । ಯಾವ ವೀರರಿಗುಂಟು ಖಚರ ॥ ೧೭೯ ॥

ಕಳವೆಂಬುದು[3] ಕಾಳಗದಲ್ಲಿ ವೀರರಿ । ಗಳುಕಿದವರಿಗೆ ಸಲುವುದು ॥
ಉಳಿದರಿಗಿದು ಸಲ್ಲದು ಸಲ್ಲದು ರಾ । ವಳ ನಿನ್ನ ಕುಲವಿದ್ಯೆ ಕಳವು ॥ ೧೮೦ ॥

ಎಂದು ಪಚಾರಿಸಿ ಕೋಪಾಟೋಪದಿಂ । ದಂದೆಚ್ಚ ಶರತಾಗಲೊಡನೆ ॥
ನೊಂದು ತಿಱ್ರನೆ[4] ಬಂದು ರಥವಲಗೆಯ ನೆಮ್ಮಿ । ನಿಂದನು ರಾವಣ ನೃಪತಿ ॥ ೧೮೧ ॥

ಹೋ ಹೋ ಸಿಕ್ಕಿದ ಸಿಕ್ಕಿದ ದಶಕಂಠ । ಸಾಹವದೊಳು ರಾಘವಗೆ ।
ಸಾಹಸಿಗರು ಬನ್ನಿ ಬನ್ನಿಯೆನುತ ಬಂದು । ಮೋಹರಿಸಿತು ಪಡೆಯವನ[5] ॥ ೧೮೨ ॥

ಮಱವೆ ತಿಳಿದು ಮನದೊಳಗತಿ ಕೋಪಾಗ್ನಿ । ಗಱಿಗಟ್ಟಿ ರಾವಣ ನೃಪತಿ[6] ॥
[7]ಹೆಱಸಾರದೆ ಹೆದಱದೆಯೆಸಲಾ ಕಣೆ । ತಱುಬಿ ನೋಯಿಸಿತು ರಾಘವನ[7] ॥ ೧೮೩ ॥

---

ಶ್ರೀರಾಮನು ಆಗ—'ಹೇ ಜಿನೇಶನೇ, ನನ್ನಲ್ಲಿ ಇಷ್ಟೊಂದು ಅಜ್ಞಾನವು ಉಂಟಾಯಿತೇ? ಎನ್ನುತ್ತ ಮನಸ್ಸಿನಲ್ಲೇ ನೊಂದು ಕೊಂಡನು ॥ ೧೭೬ ॥ ಎಲೈ ಚೇಳಿನಿಯೇ, ಶ್ರೀರಾಮನಿಗೆ ಮರವೆಯು ತೊಲಗಿತು ಚೇತರಿಸಿಕೊಂಡವನಾಗಿ, ಅವನು "ಏನೋ ಮಾಯೆಯಿಂದ ನನಗೆ ಈ ರೀತಿಯ ಅವಸ್ಥೆಯಾಯಿತು ಕಾರ್ಯವು ಕೆಟ್ಟಿತು" ಎಂದು ಹೇಳಿಕೊಂಡು, ಆ ಮೇಲೆ ದೃಢಚಿತ್ತನಾದನು ॥ ೧೭೭ ॥ 'ಎಲೈ ದಶಮುಖನೆ, ಈ ಮಾಯಾವಿದ್ಯೆಯನ್ನು ನೀನು ಎಲ್ಲಿ ಕಲಿತೆ? ಎಲ್ಲಿ ಅಭ್ಯಾಸ ಮಾಡಿದೆ? ಆಶ್ಚರ್ಯಕರವಾದ ಈ ಮೋಸಗಾರಿಕೆಯನ್ನು ಎಲ್ಲಿ ಕಲಿತಿರುವೆ? ಹೇಳು ॥ ೧೭೮ ॥ ಈ ಇಂದ್ರಜಾಲದ ವಿದ್ಯೆ ಯನ್ನು ನೀನು ಯಾವ ಆಚಾರ್ಯನಿಂದ ಅಭ್ಯಾಸಮಾಡಿದೆ? ನಿನ್ನ ಈ ವಿದ್ಯೆಗೆ ಗುರು ಯಾರು? ಈ ಕಪಟ ವಿದ್ಯೆಯಿಂದ ಜೀವಿಸುವ ಯೋಗ್ಯತೆ ನಿನಗಲ್ಲದೆ ಬೇರೆ ಯಾರಿಗೂ ಇಲ್ಲ ॥ ೧೭೯ ॥ ಎಲೋ ರಾವಣ, ಯುದ್ಧದಲ್ಲಿ ವೀರರಿಗೆ ಹೆದರಿ ದವರಿಗೆ ಮಾತ್ರ ಕಳ್ಳತನವೆಂಬುದು ಸಲ್ಲಬಹುದು ಉಳಿದವರಿಗೆ ಸಲ್ಲಲಾರದು ಕಳವೆಂಬುದು ನಿನಗೆ ಕುಲವಿದ್ಯೆಯೇ ಆಗಿದೆ!" ॥ ೧೮೦ ॥ ಶ್ರೀರಾಮನು ಹೀಗೆ ರಾವಣನನ್ನು ಚೆನ್ನಾಗಿ ಪಚಾರಿಸಿ (ನಿಂದಿಸಿ) ಕ್ರೋಧದ ಸಂಭ್ರಮದಿಂದ ಬಾಣವನ್ನು ಬಿಟ್ಟನು ಅದು ತಗಲಿದೊಡನೆ ರಾವಣನು ನೊಂದು ಬಂದು, ತನ್ನ ರಥದ ಹಲಗೆಯನ್ನು ಆಶ್ರಯಿಸಿ ಸ್ವಲ್ಪ ಹೊತ್ತು ನಿಂತನು ॥ ೧೮೧ ॥ 'ಹೋ ಹೋ! ಯುದ್ಧದಲ್ಲಿ ರಾವಣನು ರಾಮನಿಗೆ ಸಿಕ್ಕಿದನು! ಪರಾಕ್ರಮಿಗಳು ಬಿಡಿಸಲು ಬನ್ನಿ!' ಎನ್ನುತ್ತ ಅವನ ಸೈನ್ಯವು ಬಂದು ಮುತ್ತಿತು ॥ ೧೮೨ ॥ ರಾವಣನು ಅಷ್ಟರಲ್ಲಿ ಎಚ್ಚತ್ತು, ಸಿಟ್ಟೆಂಬ ಬೆಂಕಿ ಪ್ರಜ್ವಲಿಸಲು, ಹಿಂಜರಿಯದೆ ಹೆದರದೆ, ರಾಮನ ಮೇಲೆ ಬಾಣ ಪ್ರಯೋಗ ಮಾಡಲು ಆ ಬಾಣವು ರಾಮನನ್ನು ನೋಯಿಸಿತು ॥ ೧೮೩ ॥ ಎಲೈ ಚೇಳಿನಿಯೇ, ಹೀಗೆ ರಾಮ-ರಾವಣರು ಸಿಟ್ಟಿನಿಂದ ಕಾದಾಡುತ್ತಿರುವ ಹೊತ್ತಿಗೆ,

---

[1] ನೀನೆಲ್ಲಿ ಕಲಿತೆಯೊ ವಂಚನೆಯ (ಚ). [2] ಗುರುನೀ ನಿನಗೆ (ಕ) [3] ಕಳವೈದಿದುದು (ಕ) [4] ನಿಂದು ತೆಱ್ರನೆ (ಕ) [5] ಮೋಹರಿಸಲು ಮತ್ತವನ (ಕ) [6] ರಾವಣನಾಗ (ಚ) [7] ಇರದೆ ದಿವ್ಯಾಸ್ತ್ರದೊಳೆಸೆಯಲಾ ಬಾಣವು । ಯೆಱಗಿತು ರಾಮನ ಪದಕೆ (ಕ)

ಕೋಪದೊಳಗೆ ಯುವರೀರ್ವರು[1] ಕಾದುತಿ । ರ್ಪಾ ಪದದೊಳು ಲಕ್ಷ್ಮಣನು ॥
ಏ ಪೊಗಳುವೆ ರಾವಣನು ಜಯಿಸದಂ । ತಾಪತ್ತನೆಸಗಿದನಬಲೆ[2] ॥ ೧೮೪ ॥

ಕಡುಗಲಿ ಲಕ್ಷ್ಮಣ ನುಡಿದು ರಾವಣನೊಳು । ತಡೆಯಿಕೋಯೆಂದು[3] ಬಾಣವನು ॥
ಕಡುಪಿಂದ ಬಿಡಲದು ಶಿರವನೊಯ್ಯನೆ ಯಿ । ಕ್ಕಡಿ ಮಾಡಿತಾ ಕ್ಷಣದೊಳಗೆ ॥ ೧೮೫ ॥

ಒಂದು ಶಿರವ ಬಾಣ ಕೊಳಲೊಡ್ಡುವ ನು । ತ್ತೊಂದು ತಲೆಯನದು ಪಱಿಯೆ ॥
ಅಂದದಕೊಡ್ಡುವ ಪ್ರತಿಯ ಮಾಯಾವಿದ್ಯೆ । ಯಿಂದ ರಾವಣನಂಬುಜಾಕ್ಷಿ ॥ ೧೮೬ ॥

ತೊಟ್ಟೆಚ್ಚ ಬಾಣ[4] ತೀರಿದವು ಕೈಯಿಂದಲಿ । ಯಿಟ್ಟ[4] ಕೈದುಗಳು ಮುಗಿದವು ॥
ತುಟ್ಟ ನೋಡಲು ಕೈದು ಕಣ್ಗೆ [5]ಕಾಣಿಸದಿರೆ । ಕೆಟ್ಟಿತು ಕಾರ್ಯವೆಂದೆನುತ[6] ॥ ೧೮೭ ॥

ಎಡಬಲವನು ನೋಡಿ ಕೈದು ಸಂದಿಸದಿರೆ । ಕಡುನೊಂದು ದಶಶಿರ ತಾನು ॥
ಪಿಡಿದಿರ್ದ ಚಕ್ರದಿಂದಿಟ್ಟನು ನವಗಿದು । ಕಡೆಯೆಂದು [7]ನುಡಿದು ಲಕ್ಷ್ಮಣನ[7] ॥ ೧೮೮ ॥

ಇವನ ರಶ್ಮಿಯುನಾ ಚಕ್ರ ಬಾಯ್ಧಾರೆಯು । ಮೊನೆಯೊಳುಗುಳುತ ಭೀತಿಯನು ।
ಜನಿಯಿಸುತವೆ ನಿಟ್ಟಪರಿಗೆ ಲಕ್ಷ್ಮಣ । ಗನುಕೂಲವಾದಾ ಕ್ಷಣದಿ ॥ ೧೮೯ ॥

ದಶಕಂಠನ ಜಯುವೆಣ್ಣು ಲಕ್ಷ್ಮಣಗೆ ಮೋ । ಹಿಸಿ ತನ್ನ ಕೈಯೊಳಗೆಸೆವ ॥
ಪೊಸ ರನ್ನದ ಕಂಕಣವನಟ್ಟಿದಳೆನ । ಲೆಸೆದುದು ಚಕ್ರ ಕೈಯೊಳಗೆ ॥ ೧೯೦ ॥

ದಶಶಿರ ನೃಪನಿಟ್ಟ ಚಕ್ರ ಲಕ್ಷ್ಮಣನನು । ಮುಸುಕಲಮ್ಮದೆ ಬಲವಂದು ॥
ಬೆಸನ ಕೊಡೆನಲೆಂದನು ಲಂಕೇಶನ । ದಶಶಿರವನು ತಹುದೆನಲು ॥ ೧೯೧ ॥

---

ಲಕ್ಷ್ಮಣನು ಬಂದು, ರಾವಣನು ಜಯಿಸದಂತೆ ಅವನಿಗೆ ತೊಂದರೆಯನ್ನೊಡ್ಡಿದನು ॥ ೧೮೪ ॥ ಮಹಾಪರಾಕ್ರಮಿ ಲಕ್ಷ್ಮಣನು 'ಎಲೈ ರಾವಣನೇ ಇಕೋ ತಡೆದುಕೋ' ಎಂದು ತೀವ್ರವಾಗಿ ಒಂದು ಬಾಣವನ್ನು ಬಿಟ್ಟನು. ಆ ಬಾಣವು ರಾವಣನ ಶಿರಸ್ಸನ್ನು ಆ ಕ್ಷಣದಲ್ಲೇ ಛೇದಿಸಿತು. ॥ ೧೮೫ ॥ ಎಲೈ ಚೇಳಿನಿಯೇ. ಲಕ್ಷ್ಮಣನ ಒಂದು ಬಾಣವು ರಾವಣನ ಒಂದು ತಲೆಯನ್ನು ತುಂಡರಿಸಲು, ರಾವಣನು ಇನ್ನೊಂದು ತಲೆಯನ್ನೊಡ್ಡಿದನು ಅದು ತುಂಡಾಗಲು ಮತ್ತೊಂದು ತಲೆಯನ್ನು. ಹೀಗೆ ಮಾಯಾವಿದ್ಯೆಯಿಂದ ತಲೆಗಳನ್ನೊಡುತ್ತಿದ್ದನು ॥ ೧೮೬ ॥ ರಾವಣನು ಪ್ರಯೋಗಿಸಿದ ಬಾಣಗಳೆಲ್ಲ ತೀರಿದವು, ಆಯುಧಗಳೆಲ್ಲ ಮುಗಿದವು, ಆ ಮೇಲೆ ಆಯುಧವೊಂದೂ ಅವನ ಕಣ್ಣಿಗೆ ಕಾಣಿಸದಿರಲು, "ಅಯ್ಯೋ ಕಾರ್ಯ ಕೆಟ್ಟಿತು" ಎಂದುಕೊಂಡನು. ॥ ೧೮೭ ॥ ರಾವಣನು ಆಚೀಚೆ ನೋಡಿದಾಗ ಯಾವುದೊಂದು ಆಯುಧವೂ ಕೈಗೆ ಸಿಕ್ಕದಿರಲು. ಬಹಳವಾಗಿ ನೊಂದು "ನಮಗಿದು ಕೊನೆಯ ಆಯುಧ"ವೆಂದುಕೊಂಡು ತನ್ನ ಚಕ್ರವನ್ನೇ ಲಕ್ಷ್ಮಣನ ಮೇಲೆ ಪ್ರಯೋಗಿಸಿದನು. ॥ ೧೮೮ ॥ ರಾವಣನು ಬಿಟ್ಟ ಚಕ್ರವು ತನ್ನ ಬಾಯಿಯ ಧಾರೆಯಲ್ಲಿ ಸೂರ್ಯಕಿರಣಗಳನ್ನು ಕಾರುತ್ತ, ಯುದ್ಧದಲ್ಲಿ ನೋಡುವವರಿಗೆ ಭೀತಿಯನ್ನು ಹುಟ್ಟಿಸುತ್ತ. ಲಕ್ಷ್ಮಣನಿಗೆ ಅನುಕೂಲವಾಗಿಯೇ ಬಂದಿತು ॥ ೧೮೯ ॥ ರಾವಣನ ಜಯಾಂಗನೆಯು ಲಕ್ಷ್ಮಣನ ಮೇಲೆ ಮೋಹತಾಳಿ. ತನ್ನ ಕೈಯ ಹೊಸತಾದ ರತ್ನದ ಕಂಕಣವನ್ನು ಕಳುಹಿಸಿದಳೋ ಎಂಬಂತೆ. ಆ ಚಕ್ರವು ಲಕ್ಷ್ಮಣನ ಕೈಯಲ್ಲಿ ಶೋಭಿಸಿತು. ॥ ೧೯೦ ॥ ರಾವಣನು ಪ್ರಯೋಗಿಸಿದ ಆ ಚಕ್ರವು ಲಕ್ಷ್ಮಣನನ್ನು

---

[1] ಈ ಪರಿಯೊಳಗವರೀರ್ವರು (ಚ) [2] ರಾವಣನ ತಾಗಿ ಶ್ರೀರಾಮು । ನಾ ಪದದೊಳು ನಿಲ್ಲಿಸಿದನು (ಕ). [3] ಕಡುಗೋಪದೊಳು ಲಕ್ಷ್ಮಣನೊಂದು ರಾವಣ । ಕೆಡೆಯುಚೀಕೆಂದು (ಚ). [4] ತಿರಿಗಿದವು ಕೈಯಿಂದಲಿಟ್ಟ (ಚ) [5] ಕಣೆ (ಕ) [6] ಕಾರ್ಯವಿನ್ನೆನುತ (ಚ). [7] ಲಕ್ಷ್ಮಣ ನೃಪನ (ಚ)

ತಿರುಗಿ ಪೋದುದು ಚಕ್ರ ಮಾಯಾವಿದ್ಯೆಯು । ಶಿರವನುಳಿದು ರಾವಣನ ॥
ಸಿರ ಪತ್ತನರಿದು ಕೊಂಡೊಯ್ಯಲಂದಾ ಚಕ್ರ । ತಿರುಗಿತು ಲಕ್ಷ್ಮಣನೆಡೆಗೆ ॥ ೧೯೨ ॥

ನೋಡಿದನಾ ಚಕ್ರದ ವಿಕ್ರಮವ ಕೊಂ । ಡಾಡಿಯದರ ತೆಱನಱಿದು ॥
ಮಾಡಿದ ಪೂಜೆಯನತಿಭಕ್ತಿಯಿಂದ ನಾ[1] । ನಾಡುವೆನೇನ ಮೃಗಾಕ್ಷಿ ॥ ೧೯೩ ॥

ಪುಣ್ಯವಿರಲು ಪುರಮಪ್ಪುದು ಘೋರಾ । ರಣ್ಯವಾವನಿಗಾವ[2] ಕಾರ್ಯ ॥
ಗಣ್ಯವಲ್ಲವ ಪಿಡಿದೊಡೆ ಪಾಷಾಣ ಹಿ । ರಣ್ಯಮಪ್ಪುದು ಮೃಗನಯನೆ ॥ ೧೯೪ ॥

ಪೊಡವಿಗೆ ದಶಕಂಧರ ಕೆಡೆಯಲು ಕೆಟ್ಟು । ಪಡೆಯೋಡುತಿರಲರಿಸೇನೆ ॥
ಕಡಿದುದು[3] ಕೆಲಬರ ಕೆಲಬರನೊಯ್ಯನೆ । ಪಿಡಿಯಾಳಾಗಿ ಪಿಡಿದರು ॥ ೧೯೫ ॥

ಪಿಡಿಸಿದ ಧರ್ಮಗಾಳೆಯ ಪಿಡಿಯಾಳನು । ಬಿಡಿಸಿದ ದೊರೆದೊರೆಗಳಿಗೆ ॥
ಕೊಡಿಸಿದನುಡುಗೊಱೆಗಳ ರಾಮಚಂದ್ರನು[4] । ನಡಸಿದ ಲಂಕೆಗೆ ಪಡೆಯ ॥ ೧೯೬ ॥

ಒಱಲಲಲ್ಲಲ್ಲಿಯ ಧರ್ಮಗಾಳೆಯ ಕೇಳ್ದು । ಮುಱಿದೋಡುವ ಪಡೆ ನಿಂದು ॥
ಉಱುವ ದೊರೆಗಳು ಬಂದಾ ಶ್ರೀರಾಮನಿ[5] । ಗೆಱಗಿದರತಿ ಭೀತಿಯಲಿ ॥ ೧೯೭ ॥

ಕಂಡರು ಮಕುಟಬದ್ಧರು ಮಂಡಳಿಕರು । ಕಂಡರು ವಿದ್ಯಾಧರರು ॥
ಕಂಡರು ಸಚಿವರು ಸೇನಾಧಿಪತಿಗಳು । ಕಂಡರು ರಾಘವನಡಿಯ ॥ ೧೯೮ ॥

ಗಜಬಜವಲ್ಲಲ್ಲಿ ನಿಂದುದು ಕಾಣುತ । ಪ್ರಜೆ ಪರಿವಾರ ನಾಯಕರು ॥
ಸುಜನರು ತೇಜಿಷ್ಠರು ಬಂದು ಕಂಡರು । ನಿಜದಿಂದ ರಾಘವನಡಿಯ ॥ ೧೯೯ ॥

---

ಪ್ರತಿಭಟಿಸದೆ, ಅವನಿಗೆ ಪ್ರದಕ್ಷಿಣ ಬಂದು "ನನಗೆ ಅಪ್ಪಣೆಯೇನು?' ಎಂದು ಕೇಳಿತು ಆಗ ಲಕ್ಷ್ಮಣನು "ರಾವಣನ ಹತ್ತು ತಲೆಗಳನ್ನು ತಾ' ಎಂದು ಆಜ್ಞಾಪಿಸಿದನು ॥ ೧೯೧ ॥ ಆ ಚಕ್ರವು ತಿರುಗಿ ಹೋಗಿ, ರಾವಣನ ಮಾಯಕದ ತಲೆಗಳನ್ನು ಬಿಟ್ಟು, ಆತನ ಹತ್ತು ತಲೆಗಳನ್ನು ತುಂಡುಮಾಡಿ, ಲಕ್ಷ್ಮಣನ ಕಡೆಗೆ ತಿರುಗಿತು ॥ ೧೯೨ ॥ ಎಲೈ ಚೇಳಿನಿಯೇ, ಲಕ್ಷ್ಮಣನು ಆ ಚಕ್ರದ ಪರಾಕ್ರಮವನ್ನು ಕಂಡು ಅದನ್ನು ಕ್ರಮವರಿತು ಹೊಗಳಿ ಅದನ್ನು ಭಕ್ತಿಯಿಂದ ಪೂಜಿಸಿದನು ಅದನ್ನು ನಾನೇನು ಹೇಳಲಿ! ॥ ೧೯೩ ॥ ಎಲೈ ಚೇಳಿನಿಯೇ, ಯಾವ ಮನುಷ್ಯನಿಗೇ ಆಗಲಿ, ಪುಣ್ಯವಿದ್ದರೆ ಭಯಂಕರವಾದ ಕಾಡು ಪಟ್ಟಣವಾಗಿ ಪರಿಣಮಿಸುವುದು ಯಾವ ಕೆಲಸವೂ ಅವನಿಗೆ ಗಣನೀಯವಲ್ಲ, ಅವನು ಹಿಡಿದ ಕಲ್ಲು ಚಿನ್ನವಾಗುವುದು ॥ ೧೯೪ ॥ ರಾವಣನು ಮಡಿದು ಭೂಮಿಗೆ ಬೀಳಲು ಅವನ ಸೈನ್ಯವು ದಿಕ್ಕುಗೆಟ್ಟು ಓಡಿತು, ಚದರಿಹೋಯಿತು ಆಗ ಲಕ್ಷ್ಮಣನ ಕಡೆಯವರು ಅವರಲ್ಲಿ ಹಲವರನ್ನು ಸೆರೆಹಿಡಿದರು ॥ ೧೯೫ ॥ ಆಗ ಶ್ರೀರಾಮನು ಧರ್ಮದ ಕಹಳೆಯನ್ನು ಹಿಡಿಸಿದನು, ರಾವಣನು ಸೆರೆಯಲ್ಲಿಟ್ಟಿದ್ದವರನ್ನೆಲ್ಲ ಬಂಧ ವಿಮೋಚನೆ ಮಾಡಿದನು ರಾಜರುಗಳಿಗೆಲ್ಲ ಉಡುಗೊರೆಗಳನ್ನು ಕೊಡಿಸಿದನು, ಸೈನ್ಯವನ್ನು ಲಂಕೆಯೊಳಗೆ ನಡೆಸಿದನು ॥ ೧೯೬ ॥ ಶ್ರೀರಾಮನು ಊದಿಸಿದ ಧರ್ಮಗಹಳೆಗಳ ಸ್ವರವನ್ನು ಕೇಳಿದಾಗ ಅಲ್ಲಿ ಹಿಂದಿರುಗಿ ಓಡುತ್ತಿದ್ದ ಸೈನ್ಯವು ನಿಂತಿತು ಆ ಸೈನ್ಯದಲ್ಲಿರುವ ರಾಜರು ಬಂದು ಬಹಳ ಭಯದಿಂದ ಕೂಡಿ ಶ್ರೀರಾಮನಿಗೆ ವಂದಿಸಿದರು ॥ ೧೯೭ ॥ ಕಿರೀಟಧಾರಿಗಳೂ, ಮಂಡಲಾಧಿಪತಿಗಳೂ, ವಿದ್ಯಾಧರರೂ, ಮಂತ್ರಿಗಳೂ, ಸೇನಾಧಿಪತಿಗಳೂ ಶ್ರೀರಾಮನ ಪಾದದರ್ಶನವನ್ನು ಮಾಡಿದರು ॥ ೧೯೮ ॥ ಸೈನ್ಯದ ಗೊಂದ

---

[1] ಯಿಂದದನಾಡುವೆನೇನ (ಚ) [2] ಘೋರಾರಣ್ಯವವನಿಗಾವ (ಚ) [3] ನಿಂದುದು (ಕ) [4] ರಾಮಚಂದ್ರನಿಂ (ಕ) [5] ಬಂದಾ ರಾಮಚಂದ್ರನಿ (ಚ)

ಉಡುಗೊಱೆವೆರಸಿಯಭಯವಿತ್ತು ವಿನಯವ । ನುಡಿದು ದಶಾಸ್ಯ ರಣದಲಿ ॥
ಮಡಿದನೆಂದೆಣಿಸಲು ಬೇಡ ವಿಭೀಷಣ । ನೊಡೆಯ ನಿಮಗೆ ಸುಖವಿಹುದು ॥ ೨೦೦ ॥

ಎಂದು ನಿರೂಪಿಸಿ ಲಂಕೆಯ ಜನಪದ । ಕಂದು ಭೀತಿಗಳನು ಬಿಡಿಸಿ ॥
ಬಂದು ಪೊಕ್ಕನು ರಾಮಚಂದ್ರ ಲಂಕೆಯ ಭೋ । ಯೆಂದು ಕೊಂಡಾಡೆ ವಂದಿಗಳು ॥ ೨೦೧ ॥

ನರನಾಥಾಹಿತ ಶೋಣಿತ ಪಂಕಿಲ । ವರ ಖಡ್ಗಧಾರಾ ಪಥದೆ ॥
ಸಿರಿವೆಣ್ಣು ಬಂದುದು ಜಸವೆಣ್ಣು ಪೋದುದು । ಪಿರಿದು ಕೌತುಕವಂಬುಜಾಕ್ಷಿ ॥ ೨೦೨ ॥

ಭೇರಿಯ ದನಿ[1] ನಿಸ್ಸಾಳದ ರವವಂ । ದಾ ರಾಯಗಿಡುಬಿಡಿ ನಿನದ[2] ॥
ಭೂರಿವಾದ್ಯದ ಬಲು ಘೋಷವೆಸೆಯಲಂ । ದಾ ರಾಯ ಪೊಕ್ಕ ಲಂಕೆಯನು ॥ ೨೦೩ ॥

ಉಭಯ ಬಲದ ಕೋಟಾಕೋಟಿ ವಾದ್ಯದ । ರಭಸದಿಂದಾ ನಗರವನು ॥
ಶುಭ ಲಗ್ನದಿಂ ಪೊಕ್ಕರವರು ಪೊಗುವುದೇನು । ಶುಭಪುಣ್ಯರಿಗರಿದಲ್ಲ ॥ ೨೦೪ ॥

ಆ ರಾವಣನ ಜಸ ಜಯ ಸಿರಿ ಭೂರವೆ । ಯಾ ರಾಮಚಂದ್ರಗೆ ಸೋಲ್ತು ॥
ಸಾರಿದಳೆನೆ ಪುಣ್ಯವುಳ್ಳರನಾರಾರು । ಸಾರರು ಸಾಮಜಗಮನೆ ॥ ೨೦೫ ॥

ಸುರರು ಕೈಯೆತ್ತಿ ಪೊಗಳುತಿರೆ ಜ್ಯೋತಿ । ಷ್ಕರುಗಳು ಕೊಂಡಾಡುತಿರಲು ॥
ಉರಗನಾಯಕರು ಬಣ್ಣಿಸುತಿರೆ ಲಂಕೆಯ । ಹರುಷದಿಂ ಪೊಕ್ಕ ಶ್ರೀರಾಮ[3] ॥ ೨೦೬ ॥

---

ಲವು ಸ್ತಬ್ಧವಾಯಿತು ರಾವಣನ ಪ್ರಜೆಗಳು, ಪರಿವಾರದವರು, ಸತ್ಪುರುಷರು, ಕುದುರೆ ಸವಾರರು,—ಮುಂತಾದವರೆಲ್ಲ ಬಂದು ಶ್ರೀರಾಮನ ಚರಣವನ್ನು ಕಂಡರು. ॥ ೧೯೯ ॥ ಆಗ ಶ್ರೀರಾಮನು ಅವರಿಗೆ ಉಡುಗೊರೆಗಳನ್ನು ಕೊಟ್ಟು, ಧೈರ್ಯೋಕ್ತಿಯನ್ನು ಹೇಳಿ, ವಿನಯ ವಚನವನ್ನಾಡುತ್ತ—'ರಾವಣನು ಯುದ್ಧದಲ್ಲಿ ಮಡಿದನೆಂದು ಬೇಸರಗೊಳ್ಳಬೇಡಿ. ನಿಮಗಿನ್ನು ಒಡೆಯನಾಗಿ ವಿಭೀಷಣನಿರುವನು. ನೀವು ಸುಖದಿಂದ ಇರಿ" ಎಂದು ಹೇಳಿದನು ॥ ೨೦೦ ॥ ಶ್ರೀರಾಮನು ಹೀಗೆ ಹೇಳಿ, ಲಂಕಾನಿವಾಸಿಗಳ ಭಯವನ್ನು ನಿವಾರಿಸಿ ಬಂದು ಲಂಕೆಯನ್ನು ಪ್ರವೇಶಿಸಿದನು. ಆಗ ಸ್ತುತಿಪಾಠಕರು ಭೋ ಯೆಂದು ಹೊಗಳುತ್ತಿದ್ದರು. ॥ ೨೦೧ ॥ ಎಲೈ ಚೆಲುವೆಯೇ, ಶ್ರೀರಾಮನ ವೈರಿಗಳ ರಕ್ತದಿಂದ ಕೆಸರಾದ ಶ್ರೇಷ್ಠ ಖಡ್ಗ ಧಾರೆಯೆಂಬ ದಾರಿಯಲ್ಲಿ ಐಶ್ವರ್ಯವೆಂಬ ಹೆಣ್ಣು ಬಂದಳು, ಕೀರ್ತಿಯೆಂಬ ಹೆಣ್ಣು ಹೋದಳು—ಅರ್ಥಾತ್, ಕೀರ್ತಿಯು ವಿಸ್ತರಿಸಿತು. ಇದು ಬಹಳ ಆಶ್ಚರ್ಯವೇ ಸರಿ. ॥ ೨೦೨ ॥ ಭೇರಿಯ ಧ್ವನಿಯೂ ನಿಸ್ಸಾಳಗಳ ಶಬ್ದವೂ ಗಿಡುಬಿಡಿಗಳೆಂಬ ವಾದ್ಯಗಳ ನಿನಾದವೂ ಬಹುವಿಧ ವಾದ್ಯಗಳ ಘೋಷವೂ ಕೇಳಿಸುತ್ತಿರಲು ಆ ಶ್ರೀರಾಮನು ಲಂಕೆಯನ್ನು ಹೊಕ್ಕನು. ॥ ೨೦೩ ॥ ಎರಡೂ ಕಡೆಯ ಸೈನ್ಯದ ಕೋಟಿಗಟ್ಟಳೆಯ ವಾದ್ಯದ ಗದ್ದಲದೊಡನೆ, ಶ್ರೀರಾಮಲಕ್ಷ್ಮಣರು ಶುಭಮುಹೂರ್ತ ದಲ್ಲಿ ಆ ನಗರವನ್ನು ಪ್ರವೇಶಿಸಿದರು. ಶುಭಕರವಾದ ಪುಣ್ಯವಂತರಿಗೆ ಹೀಗೆ ಪ್ರವೇಶಿಸುವುದು ಏನೊಂದೂ ಅಸಾಧ್ಯ ಕಾರ್ಯವಲ್ಲ. ॥ ೨೦೪ ॥ ಎಲೈ ಚೆಲುವೆಯೇ ಆ ರಾವಣನ ಕೀರ್ತಿ, ವಿಜಯ, ಐಶ್ವರ್ಯ, ಭೂಮಿ—ಎಂಬ ಸ್ತ್ರೀಯರು ಶ್ರೀರಾಮನಿಗೆ ಸೋತು ಅವನನ್ನು ಸೇರಿದರು ಪುಣ್ಯವಂತರನ್ನು ಯಾರು ತಾನೇ ಸೇರುವುದಿಲ್ಲ! ॥ ೨೦೫ ॥ ದೇವತೆಗಳು ಕೈಯೆತ್ತಿ ಹೊಗಳುತ್ತಿರಲು, ಜ್ಯೋತಿಷರು ಕೊಂಡಾಡುತ್ತಿರಲು, ಉರಗಲೋಕದ ಒಡೆಯರು ವರ್ಣಿಸುತ್ತಿರಲು ಶ್ರೀರಾಮನು ಸಂತೋಷದಿಂದ ಲಂಕೆ ಯನ್ನು ಹೊಕ್ಕನು ॥ ೨೦೬ ॥ ಜಯಶೀಲನಾದ ಶ್ರೀರಾಮನು ಜಯಜಯಕಾರ ಮಾಡುವ ಬ್ರಾಹ್ಮಣರಿಂದಲೂ ಸಜ್ಜನ

---

[1] ರವ (ಚ) [2] ರಾಯನಿದ್ದ ಬಡಿಸಿದ (ಕ) [3] ರಾಘವನು (ಚ)

ಜಯ ಜಯ ಎಂಬವನೀಸುರರಿಂದಾಗ । ಜಯವೆಂದೆಂಬ[1] ಸುಜನರಿಂ ॥
ಜಯಜಯ ಎಂದೆಂಬ ಘೋಷದಿಂ[2] ಪೊಕ್ಕನು । ಜಯಶೀಲನಾನದಾ[3] ಪುರಿಯ ॥ ೨೦೭ ॥

ಬಂದರಮನೆಯ[4] ಬಾಗಿಲ ಮುಂದೆ ಶ್ರೀರಾಮ । ನಿಂದು ಬೆಂಬಿಡದೆ ತನ್ನೊಡನೆ ॥
ಬಂದ ಸೇನಾಶರನಿಧಿಯ ನಿರೀಕ್ಷಿಸು । ತಂದು ಸಂತಸದೊಳಿಂತೆಂದ ॥ ೨೦೮ ॥

ಕೊಡಿಸು ಬಿಡಾರ ಜೀವಿತದೊಳಗತಿಹಿತ । ವಿಡಿದು[5] ವಿನಯದೊಡಗೂಡಿ ॥
ಪೊಡವೀಶರಿಗೆ ವಿಭೀಷಣನೆನ್ನುತಲವ । ನಡೆವುತಲರಮನೆಗಾಗಿ ॥ ೨೦೯ ॥

ಕಳುಪಿದ ಮಕುಟಬದ್ಧರ ದೊರೆದೊರೆಗಳ । ಕಳುಪಿದ ಮಂತ್ರಿ ಮನ್ನೆಯರ ॥
ಕಳುಪಿದನರಸುಮಕ್ಕಳನಳಿಯಂದಿರ । ಕಳುಪಿದ ವಿದ್ಯಾಧರರ ॥ ೨೧೦ ॥

ಕಳುಪಿದ ಮಂಡಳಿಕರ ಮಂಡಲೇಶರ । ಕಳುಪಿದ ದಂಡಾಧಿಪರ ॥
ಕಳುಪಿದ ಚಂಡವಿಕ್ರಮರ[6] ವಿದ್ವಾಂಸರ । ಕಳುಪಿದ ಗಡಿಯ ಮನ್ನೆಯರ[7] ॥ ೨೧೧ ॥

ಕಳುಪಿದ ತುಳುವ ಪಾರಕರ ಮೈಗಾಪಿನ । ತುಳಿಲಾಳ್ಗಳ ಮಾವತಿಗರ ॥
ಕಳುಪಿದ ಬಲು ಸಹಣಿಗಳ[8] ಸಂತೋಷದಿಂ । ಕಳುಪಿದ ಪಾರಕತತಿಯ ॥ ೨೧೨ ॥

ತೇಜಿಷ್ಠರ ನೇಹಿತರ[9] ನಿಜದಿ ತನ । ಗೋಜೆವೇಳುವ ನೀತಿವಿದರ ॥
ಆ ಜನಪತಿ ಕಳುಪುತ ಪೊಕ್ಕನು ಸುರ । ರಾಜತೇಜದೊಳರಮನೆಯ ॥ ೨೧೩ ॥

ಅರಮನೆಯನು ಪೊಕ್ಕು ರಾವಣನೃಪತಿಯ । ಸಿರಿವೆಣ್ಣ ಸರಸಮೇಳದೊಳು ॥
ಹರುಷದೊಳಿರ್ದನವನಿಗಚ್ಚರಿಯಲ್ಲ । ಚರಮಾಂಗನಿಗೆ ಚಟುಲಾಕ್ಷಿ ॥ ೨೧೪ ॥

---

ರಿಂದಲೂ ವಾದ್ಯಘೋಷದಿಂದಲೂ ಲಂಕಾಪುರವನ್ನು ಪ್ರವೇಶಿಸಿದನು ॥ ೨೦೭ ॥ ಶ್ರೀರಾಮನು ಹೀಗೆ ಬಂದು, ಅರಮನೆಯ ಬಾಗಿಲ ಮುಂದೆ ನಿಂತು, ತನ್ನನ್ನು ಅನುಸರಿಸಿ ಬಂದ ಸೈನ್ಯಸಮುದ್ರವನ್ನು ನೋಡಿ, ಸಂತೋಷದಿಂದ ಹೀಗೆಂದನು ॥ ೨೦೮ ॥ ಎಲೈ ವಿಭೀಷಣನೆ ರಾಜರಿಗೆಲ್ಲ ಹಿತಕರವಾಗಿ ಪಡಿ ಬಿಡಾರಗಳನ್ನು ಕೊಡಿಸು—ಎಂದು ಹೇಳಿ, ಅರಮನೆಯ ಕಡೆಗೆ ನಡೆದನು ॥ ೨೦೯ ॥ ಆ ಮೇಲೆ ಕಿರೀಟಧಾರಿಗಳನ್ನೂ, ರಾಜರುಗಳನ್ನೂ, ಮಂತ್ರಿಗಳನ್ನೂ, ಜನನಾಯಕರನ್ನೂ, ರಾಜಕುಮಾರರನ್ನೂ, ಅಳಿಯಂದಿರನ್ನೂ, ವಿದ್ಯಾಧರರನ್ನೂ ಕಳುಹಿಸಿದನು ॥ ೨೧೦ ॥ ಸಾಮಂತರಾಜರನ್ನೂ, ಮಂಡಲೇಶ್ವರರನ್ನೂ, ಸೈನ್ಯಾಧಿಪತಿಗಳನ್ನೂ, ಮಹಾಪರಾಕ್ರಮಿಗಳನ್ನೂ, ವಿದ್ವಾಂಸರನ್ನೂ ನಾಡಿನ ಗಡಿಯ ಮುಖಂಡರನ್ನೂ ಕಳುಹಿಸಿದನು ॥ ೨೧೧ ॥ ತುಳುವಪಾರಕರನ್ನೂ, ಅಂಗರಕ್ಷಕರನ್ನೂ ಸೇವಕರನ್ನೂ, ಮಾವುತರನ್ನೂ, ಕುದುರೆ ಪಳಗಿಸುವವರನ್ನೂ. ಸ್ತುತಿಪಾರಕರನ್ನೂ ಸಂತೋಷದಿಂದ ಕಳುಹಿಸಿದನು ॥ ೨೧೨ ॥ ಅಶ್ವಾರೋಹಿಗಳನ್ನೂ, ಸ್ನೇಹಿತರನ್ನೂ ವಾಸ್ತವಿಕವಾಗಿ ತನಗೆ ಮಾರ್ಗದರ್ಶನ ಮಾಡುವ ನೀತಿಜ್ಞರನ್ನೂ ಕಳುಹಿಸಿ, ರಾಜನಾದ ಶ್ರೀರಾಮನು ರಾಜತೇಜದಿಂದ ಅರಮನೆಯನ್ನು ಹೊಕ್ಕನು ॥ ೨೧೩ ॥ ಎಲೈ ಚೇಳಿನಿಯೇ ಶ್ರೀರಾಮನು ಅರಮನೆಯನ್ನು ಹೊಕ್ಕು, ರಾವಣೇಶ್ವರನ ಐಶ್ವರ್ಯವೆಂಬ ಕಾಂತೆಯ ಸರಸವಾದ ಒಡನಾಟದಲ್ಲಿ ಸಂತೋಷದಿಂದ ಇದ್ದನು ಚರಮದೇಹಿಯಾದ ಅವನಿಗೆ ಇದೇನೂ ಆಶ್ಚರ್ಯಕರವಾದುದಲ್ಲ ॥ ೨೧೪ ॥ ಆ ಮೇಲೆ ಶ್ರೀರಾಮನು ಮನದಲ್ಲೇ ಮರುಗುತ್ತ ಸೆರೆಯಲ್ಲಿದ್ದ

---

[1] ಜಯ ಜಯ ಎಂಬ (ಚ) [2] ಜಯ ಎಂಬ ಬಬುಪೋಷದಿಂ ಬಂದು (ಚ) [3] ಜಯಶೀಲಗುಣೆಯಾ (ಚ) [4] ಬಂದು ಮನೆಯ (ಕ), [5] ಬಿಡಾರವನುಲುಪಿಯ ಮಾಡಿಸು । ನುಡಿದು (ಚ) [6] × (ಚ) [7] ನಾಯಕರ (ಚ) [8] ಸಾಣಿಗಳ (ಚ) [9] ನೇಹದವರ (ಚ).

ಮಱುಕ ಮನದೊಳೊಗೆಯಲು ರಾಮಚಂದ್ರಮ । ಸೆಱೆಯಿರ್ದ ಸೀತೆಯ ಕರಸಿ ॥
ಮಱುಗಿದೆಯಲ್ಲಿಂದುವರೆಂದು ಕಣ್ಬನಿ । ಗಱೆವುತಲುಪಚರಿಸಿದನು[1] ॥ ೨೧೫ ॥

ಸದಮಲಚರಿತ ಸದ್ಗುಣಸಾಗರ ಚಂದ್ರ । ಮದಕರಿವೈರಿ ವಿಕ್ರಮನು ॥
ಮದನವಿಜಯ ಜಿನಪದಭಕ್ತ ಮಾನವ । ಮದನನೊಪ್ಪಿದನಂಬುಜಾಕ್ಷಿ ॥ ೨೧೬ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೨೧೭ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದುದು[3] ಪದಿನೆಂಟನೆಯ ವಿಸುಪಸಂಧಿ ॥ ೨೧೮ ॥

---

ಸೀತೆಯನ್ನು ಕರೆಸಿದನು  ಇದುವರೆಗೂ ನೀನು ವ್ಯಸನದಿಂದಲೇ ಇದ್ದೆಯಲ್ಲವೆ?—ಎನ್ನುತ್ತ. ಕಣ್ಣೀರು ಸುರಿಸುತ್ತ. ಆಕೆಯನ್ನು ಉಪಚರಿಸಿದನು. ॥ ೨೧೫ ॥ ಎಲೈ ಚೇಳಿನಿಯೇ, ಪರಿಶುದ್ಧವಾದ ನಡತೆಯುಳ್ಳವನೂ, ಸದ್ಗುಣವೆಂಬ ಸಮುದ್ರವನ್ನು ಉಕ್ಕಿಸುವ ಚಂದ್ರನಂತಿರುವವನೂ. ಮದವೆಂಬ ಆನೆಗೆ ಸಿಂಹಪರಾಕ್ರಮಿಯೂ, ಮನ್ಮಥನನ್ನು ಜಯಿಸಿದವನೂ ಜಿನನ ಪಾದಭಕ್ತನೂ. ಮನುಷ್ಯರೂಪದ ಮನ್ಮಥನೂ ಆದ ಶ್ರೀರಾಮನು ಹೀಗೆ ಶೋಭಿಸಿದನು. ॥ ೨೧೬ ॥ ಇಂದು ನಾನು ನಿನಗೆ ಮುಂದಿನ ಕಥೆಗಳನ್ನು ಹೇಳುತ್ತೇನೆಂದು ಹೇಳಿದಂತೆ ಮುಂದುವರಿಯುತ್ತ ಬಂದು ಇಲ್ಲಿಗೆ ಸಂಧಿಯು ಪೂರ್ಣವಾಯಿತು. ಆ ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು—ಎಂದು ಶ್ರೇಣಿಕನು ಚೇಳಿನಿಗೆ ಹೇಳಿದನು. ॥ ೨೧೭ ॥ ಬ್ರಾಹ್ಮಣ ಕುಲದವನೂ. ಅಭಿನವ ಮನ್ಮಥನೂ. ಪರಿಶುದ್ಧವಾದ ಗುಣಗಳುಳ್ಳವನೂ. ಜಿನಭಕ್ತನೂ, ವಿದ್ಯಾದೇವಿಯ ಮುಖಕ್ಕೆ ಕನ್ನಡಿಯಂತಿರುವವನೂ. ನಿರ್ಮಲಚಾರಿತ್ರನೂ ಆದ ದೇವಪ್ಪ ಮಂತ್ರಿಯು ಸಂತೋಷದಿಂದ ತಿಳಿಸಿರುವ ರಾಮವಿಜಯ ಕಾವ್ಯದಲ್ಲಿ ಹದಿನೆಂಟನೆಯ ಉಜ್ವಲವಾದ ಸಂಧಿಯಿದು ಪ್ರಖ್ಯಾತವಾಯಿತು. ॥ ೨೧೮ ॥

---

[1] ೨೧೫ ಈ ಪದ್ಯ ಚದಲ್ಲಿಲ್ಲ   [2] ಪಡೆವತಿಜಸವೆತ್ತುದು (ಕ)

# ೧೯. ಸಾಕೇತ ಪುರಾಗಮನ

ಕೋಕನ ನಯನ ಕೋಕನಜಾತ ಪೂಜಿತ । ಕೋಕನ ಬಾಣ ವಿಜಯನ ॥
ಕೋಕನ ಸಖತೇಜ ಮುನಿಸುವ್ರತನ ಪಾದ । ಕೋಕನಗಳಿಗೆಱಗುವೆನು ॥ ೧ ॥

ಕೇತಕಿನಖದಳೆ ಕೆಂಬಜೆಯುಳೆ ಅಂಬು । ಜಾತ[1]ವದನೆಯಾಯತಾಕ್ಷಿ ॥
ಶಾತೋದರಿಯರರಸಿ ಕೇಳು ನೀನಂಗ । ಜಾತವಿಜಯನ ಕಥೆಯನು ॥ ೨ ॥

ಸಿತಭಾನುಮುಖಿಯತಿಹಿತ ಮಿತವಾಣಿ ಸ । ನ್ಮತಿವಂತೆ ಮಾಯಾವಿದೂರೆ ॥
ಶತಪತ್ರನಯನೆ ಲಾಲಿಸು ನಿನ್ನಸುವಿಗೆ । ಹಿತಮಪ್ಪ ಕಥೆಯ ಪೇಳುವೆನು ॥ ೩ ॥

ಮಡದಿ ರನ್ನಳೆ[2] ಮದದಾನೆಗಮನೆ ಕೇ । ಸಡಿಯುಳೆ ಕೆಂಪುದುಟಯುಳೆ ॥
ಮುಡಿವಮಾಲೆಯಾಂತೆನ್ನಸುವೆ ಲಾಲಿಸು ಮನ । ವಿಡಿದೀ ಜೈನಕಥೆಯನು[3] ॥ ೪ ॥

ಪರಮ ದಯಾಪರ ದಾಕ್ಷಿಣ್ಯಪರ ಪರ । ಪುರುಷಾರ್ಥಿ ಪಾವನಚರಿತ ॥
ಪರಧನ ಪರಸತಿ ವಿಮುಖ ಪೇಳೆನಗಾ । ಪರಮನ ಕಥೆಯನಳ್ತಿಯಲಿ ॥ ೫ ॥

ವಿತರಣಶೀಲ ವಿವಿಧ ವಿದ್ಯಾನಂದ । ಶತಕ್ರತುವಿಭವ ಸುಜ್ಞಾನಿ ॥
ಸಿತಭಾನು ಶಾಂತಾಸು ನಿಜಭಾನು ತೇಜ ಭೂ । ಪತಿ ಪೇಳು ಮುಂದಣ ಕಥೆಯ ॥ ೬ ॥

ಗುಣಗಣನಿಳಯನುನ್ನತ ಕೀರ್ತಿಯುತ ಕಮ್ಮ । ಗಣೆಯನ ರೂಪ ಗಂಭೀರ ॥
ರಣಧೀರ ನಿನ್ನ ನುಡಿಗೆ ಮನ ಕಿವಿಗಳು । ದಣಿಯವು ಕೇಳುವ ಜನಕೆ ॥ ೭ ॥

---

ವಿಷ್ಣು ಬ್ರಹ್ಮರಿಂದ ಪೂಜಿಸಲ್ಪಡುವವನೂ, ಮನ್ಮಥನನ್ನು ಜಯಿಸಿದವನೂ ಸೂರ್ಯನಂತಹ ತೇಜಸ್ಸುಳ್ಳವನೂ ಆದ ಮುನಿಸುವ್ರತ ಜಿನೇಶನ ಪಾದಕಮಲಗಳಿಗೆ ನಮಸ್ಕರಿಸುತ್ತೇನೆ ॥ ೧ ॥ ಶ್ರೇಣಿಕರಾಜನು ಮಡದಿಯಾದ ಚೇಳಿನಿಯೊಡನೆ ಹೀಗೆಂದನು—'ಕೇದಗೆಯಂತಹ ಉಗುರುಳ್ಳ, ಕೆಂಪಾದ ಪಾದಗಳುಳ್ಳ, ತಾವರೆಯಂತಹ ಮುಖವುಳ್ಳ, ವಿಶಾಲವಾದ ಕಣ್ಣುಳ್ಳ, ತೆಳುಬಸಿರಿನ ಹೆಂಗುಸರಿಗೆ ಒಡತಿಯೇ, ಮನ್ಮಥನನ್ನು ಜಯಿಸಿದ ಜಿನೇಶನ ಕಥೆಯನ್ನು ಕೇಳು ॥ ೨ ॥ ಚಂದ್ರ ಮುಖಿಯೇ, ಅತ್ಯಂತ ಹಿತವೂ ಮಿತವೂ ಆದ ಮಾತುಳ್ಳವಳೇ ಒಳ್ಳೆಯ ಬುದ್ಧಿವಂತೆಯೇ, ಕಪಟರಹಿತೆಯೇ, ತಾವರೆ ಯೆಸಳಿನಂತಹ ಕಣ್ಣಿನವಳೇ, ನಿನ್ನ ಜೀವಕ್ಕೆ ಹಿತಕರವಾದ ಕಥೆಯನ್ನು ಹೇಳುವೆನು ಕೇಳು ॥ ೩ ॥ ಎಲೈ ಸ್ತ್ರೀರತ್ನವೇ, ಸೊಕ್ಕಿದಾನೆಯ ನಡಿಗೆಯವಳೇ, ಕೆಂಪಾದ ಪಾದವುಳ್ಳವಳೇ, ಕೆಂದುಟಿಯವಳೇ, ತುರುಬು ಮಾಲೆಗಳನ್ನು ಧರಿಸಿರುವ ನನ್ನ ಪ್ರಾಣವೇ ಈ ಜೈನ ಕಥೆಯನ್ನು ಮನಸ್ಸಿಟ್ಟು ಕೇಳು ॥ ೪ ॥ ಆಗ ಚೇಳಿನಿ ಹೀಗೆಂದಳು—"ಅತ್ಯಂತ ದಯೆಯಿಂದ ಕೂಡಿದ, ದಾಕ್ಷಿಣ್ಯವುಳ್ಳ, ಪರೋಪಕಾರಿಯಾದ, ಪವಿತ್ರವಾದ ನಡತೆಯುಳ್ಳ, ಪರರ ಧನದಿಂದಲೂ ಪರಸ್ತ್ರೀಯರಿಂದಲೂ ವಿಮುಖನಾಗಿರುವವನೇ, ನನಗೆ ಆ ಜಿನೇಶನ ಕಥೆಯನ್ನು ಪ್ರೀತಿಯಿಂದ ಹೇಳು ॥ ೫ ॥ ದಾನಗುಣವುಳ್ಳವನೇ, ಹಲವು ವಿಧಗಳಾದ ವಿದ್ಯೆಯಲ್ಲಿ ಸಂತೋಷಪಡುವವನೇ, ದೇವೇಂದ್ರನಂತೆ ವೈಭವವುಳ್ಳವನೇ, ಒಳ್ಳೆಯ ಜ್ಞಾನವುಳ್ಳವನೇ, ಚಂದ್ರ ನಂತೆ ಶಾಂತವಾಗಿರುವ ಜೀವವುಳ್ಳವನೇ, ಸೂರ್ಯನಂತೆ ತೇಜಸ್ವಿಯೇ, ಭೂಮಿಗೆ ಒಡೆಯನೇ, ಮುಂದಿನ ಕಥೆಯನ್ನು ಹೇಳು ॥ ೬ ॥ ಸದ್ಗುಣಗಳಿಗೆ ಮನೆಯಂತಿರುವ, ಕೀರ್ತಿಶಾಲಿಯಾಗಿರುವ ಮನ್ಮಥ ಸ್ವರೂಪನಾಗಿರುವ, ಗಂಭೀರನಾಗಿರುವ, ರಣ ಧೀರನಾಗಿರುವ ನಿನ್ನ ಮಾತನ್ನು ಕೇಳುವ ಜನರ ಮನಸ್ಸಿಗೂ ಕಿವಿಗೂ ಎಂದಿಗೂ ದಣಿವಾಗದು ॥ ೭ ॥ ಎಲೈ ರಾಜನೇ

---

[1] ಕೆಂಬಚ್ಚೆಯೆಳೆಯ ಕಂಜಾತ (ಕ) [2] ರನ್ನವೆ (ಚ) [3] ಮನವಿಡಿದೀ ವಿಜಯನ ಕಥೆಯ (ಚ)

ಗಂಡಿಗೆ ಹೆಣ್ಣು ಮೋಹಿಸುವುದು ಹೆಣ್ಣಿಗೆ । ಗಂಡು ಮೋಹಿಸುವುದುಂಟರಸ ॥
ಗಂಡಿಗೆ ಗಂಡು ಮೋಹಿಸುವಂತಿದೆ ನಿನ್ನ । ಗಂಡಗಾಡಿಯು ಪೇಳ್ವರಾರು[1] ॥ ೮ ॥

ದೇವ ಚಿತ್ತೈಸು ನೀನೆನಗೆ ಮುಂದಣ ಕಥೆ । ಯಾವುದದರ ವೃತ್ತಾಂತವನು ॥
ಭಾವಶುದ್ಧಿಯಲಿ ಲಾಲಿಸಿ ಪಡೆದೆನು[2] ಜಿನ । ದೇವನಿಂದತಿ ಸಂಪದವನು[3] ॥ ೯ ॥

ಸಂಕುಗೊರಲ ಸಾಮಜವೈರಿಮಧ್ಯದೇ । ಶಾಂಕವದನದ ತೀವಿದುದ[4] ॥
ಪಂಕೇರುಹ ಕುಚದಬಲೆ ಲಾಲಿಸು ಮಕ । ರಾಂಕವಿಜಯನ ಕಥೆಯನು ॥ ೧೦ ॥

ಅಂಚಗಮನೆಯರೆವೆಱೆ[3]ನೊಸಲಳೆ ನವ । ಚಂಚಲಾಂಬಕಿ ಮೃದ್ವಂಗಿ ॥
ನೀಂ ಚದುರಿಂದ[3] ಲಾಲಿಸು ಜಿನಕಥೆಯಿದ । ಚಂಚಲವಿಲ್ಲದೆದೆಯೊಳು ॥ ೧೧ ॥

ರಾವಣನಾಳುವ ಸೀಮೆಯ ಪಟ್ಟವ । ನಾ ವಿಭೀಷಣನಿಗೆ ಕಟ್ಟಿ ॥
ಆ ವಿಭು ಸೀತೆವೆರಸು ತೆರಳುತಲಿರ । ಲೇವಣ್ಣಿಸುವೆ ವಿಭೀಷಣನು ॥ ೧೨ ॥

ಮಣಿಗಣಖಚಿತದ ವಿಷ್ಟರದೊಳು ಗುಣ । ಮಣಿ ಸೀತೆ ಶ್ರೀರಾಮವೆರಸು ॥
ಅಣಿಯರ ವೈಭವದಿಂದ ಪೂಜಿಸಿ ಮಣಿ । ಗಣದೊಡವಿಂ ಸಿಂಗರಿಸಿದ ॥ ೧೩ ॥

ನಾನಾ ವಾದ್ಯದಾರತಿಗಳ ಮೊತ್ತದಿಂ । ದಾ ನಾಕಸ್ತ್ರೀಯರು ಕೂಡಿ ॥
ಮಾನನಿಧಾನ ವಿಭೀಷಣ ಕರವೆತ್ತಿ । ನಾನಾ ವಿಧದಿ ಪೊಗಳಿದನು ॥ ೧೪ ॥

ದೇವರಧೀನ ಪಟ್ಟಣ ಸೀಮೆ ಸಾಮ್ರಾಜ್ಯ । ದೇವರ ಕಿಂಕರ ನಾನು ॥
ದೇವರ ಕೂಡೆ ಬರುವೆನೆಂದು ಪೇಳಿದ । ನಾ ವಿಭೀಷಣ ಹರುಷದೊಳು ॥ ೧೫ ॥

---

ಲೋಕದಲ್ಲಿ ಗಂಡಸಿಗೆ ಹೆಂಗಸೂ ಹೆಂಗಸಿಗೆ ಗಂಡಸೂ ಮೋಹಗೊಳ್ಳುವುದಿದೆ. ಆದರೆ ನಿನ್ನ ಗಂಡಸುತನದ ಸೊಬಗು ಗಂಡಸಿಗೆ ಗಂಡಸು ಮೋಹಪಡುವಂತೆ ವರ್ಣನಾತೀತವಾಗಿದೆ ॥ ೮ ॥ ಒಡೆಯನೇ ಮುಂದಿನ ಸಂಗತಿಯೇನೆಂಬುದನ್ನು ನನಗೆ ನೀನು ತಿಳಿಸು, ನಾನು ಆ ವೃತ್ತಾಂತವನ್ನು ಭಕ್ತಿಪೂರ್ವಕವಾಗಿ ಕೇಳಿ. ಆ ಜಿನೇಶ್ವರನಿಂದ ಶ್ರೇಷ್ಠವಾದ ಸಂಪತ್ತನ್ನು ಪಡೆಯುವೆನು." ॥ ೯ ॥ ಆಗ ಶ್ರೇಣಿಕನು ಹೀಗೆಂದನು—"ಶಂಖದಂತಹ ಕೊರಲಿನ, ಸಿಂಹಕಟಿಯಾಗಿರುವ, ಚಂದ್ರನಂತಹ ಮುಖದ. ತಾವರೆ ಮುಗುಳಿನಂತಹ ತುಂಬಿದ ಪಯೋಧರವುಳ್ಳ ಮಡದಿಯೇ. ಮನ್ಮಥ ವಿಜಯನಾದ ಜಿನೇಶನ ಕಥೆಯನ್ನು ಕೇಳು ॥ ೧೦ ॥ ಹಂಸದಂತಹ ನಡಿಗೆಯ, ಅರ್ಧಚಂದ್ರನಂತಹ ಮುಖದ. ಹೊಸ ಚಂಚಲತೆಯುಳ್ಳ ಕಣ್ಣಿನ. ಕೋಮಲ ಅವಯವದ ಚೇಳಿನಿಯೇ, ಈ ಜಿನಕಥೆಯನ್ನು ಏಕಮನಸ್ಸಿನಿಂದ ಮತ್ತು ಚಾತುರ್ಯದಿಂದ ಕೇಳು ' ಎನ್ನುತ್ತ ಕಥೆಯನ್ನು ಮುಂದುವರಿಸಿದನು. ॥ ೧೧ ॥ ರಾವಣನು ಆಳುತ್ತಿದ್ದ ರಾಜ್ಯದ ಪಟ್ಟವನ್ನು ವಿಭೀಷಣನಿಗೆ ಕಟ್ಟಿ ಶ್ರೀರಾಮನು ಸೀತಾ ಸಮೇತನಾಗಿ ತೆರಳುವುದರಲ್ಲಿದ್ದನು ಆಗ ವಿಭೀಷಣನು ಆದರಿಸಿದ ಸಂಗತಿಯನ್ನು ಏನೆಂದು ವರ್ಣಿಸಲಿ ! ॥ ೧೨ ॥ ವಿಭೀಷಣನು ಶ್ರೀರಾಮ ಸೀತೆಯರನ್ನು ರತ್ನ ಸಮೂಹದಿಂದ ನಿರ್ಮಿತವಾದ ಆಸನದಲ್ಲಿ ಕುಳಿತುಗೊಳಿಸಿ. ಒಹಳ ವೈಭವದಿಂದ ಪೂಜಿಸಿ ರತ್ನಾಭರಣಗಳಿಂದ ಶೃಂಗಾರಗೊಳಿಸಿದನು ॥ ೧೩ ॥ ಹಲವಾರು ವಿಧದ ಮಂಗಲವಾದ್ಯಗಳೊಡನೆ ಸ್ವರ್ಗಲೋಕದ ಹೆಂಗಸರಿಂದಲೂ ಕೂಡ ಆರತಿಗಳನ್ನು ಎತ್ತಿ, ಅಭಿಮಾನಕ್ಕೆ ಆಶ್ರಯನಾದ ವಿಭೀಷಣನು ಕೈಯೆತ್ತಿ ಹಲವಾರು ವಿಧವಾಗಿ ಹೊಗಳಿದನು ॥ ೧೪ ॥ ವಿಭೀಷಣನು "ಈ ಲಂಕಾನಗರ. ಸೀಮೆ. ಸಾಮ್ರಾಜ್ಯಗಳೆಲ್ಲವೂ ದೇವರ ಅಧೀನವಾಗಿವೆ. ನಾನು

---

[1] ಪೇಳ್ವನೇನ (ಜ). [2] ಪಡವನು (ಜ). [3] × (ಜ) [4] ತೀವಿರುವ (ಜ) ೧೩, ೧೪, ೧೫ ಈ ಪದ್ಯಗಳು (ಜ ದಲ್ಲಿಲ್ಲ)

. . . . . . . . . . ರತ್ನಂಗಳ । ತಂದಿರಿಸಿದ ಹಯಗಜವ ॥
ತಂದಿರಿಸಿದ ವಸನಾದಿ ಭೂಷಣಗಳ । ತಂದಿರಿಸಲು ಕಂಡು ನೃಪತಿ ॥ ೧೬ ॥

ಏಕೆ ವಿಭೀಷಣ ನಿನಗಿನಿತುಪಚಾರ । ವೇಕೆ ನಿನಗೆ ಕೇಳು ನಮಗೆ ॥
ಬೇಕಾದ ಬಳಿಕ ತರಿಸಿಕೊಂಬೆವು ನಿನ । ಗೇಕೆ ಸಂದೇಹ ನಮ್ಮೆಡೆಗೆ ॥ ೧೭ ॥

ದೇವ ಬಿನ್ನಪ ನೀವೆನಗೆ ಮಾಡಿದುದೆನ್ನ । ಜೀವಾವಧಿಯುಳ್ಳನಕ ॥
ಭಾವಶುದ್ಧಿಯೊಳು ಮಱೆದೆನಾದೊಡೆ ಜಿನ । ದೇವನ ನಿಜಭಕ್ತನಲ್ಲ ॥ ೧೮ ॥

ಎಂದು ನುಡಿದ ವಿಭೀಷಣನ ಮನಕೆಯಾ । ನಂದ ಜನಿಸುವಂದದಲಿ ॥
ಅಂದುಡುಗೊಱೆಯಿತ್ತು ವಿನಯವ ನುಡಿದ । ಲ್ಲಿಂದ ತೆರಳಿದನಾ ನೃಪತಿ ॥ ೧೯ ॥

ಓಪಳಿ ಕೇಳು ಶ್ರೀರಾಮಚಂದ್ರನು ತನ್ನ । ವೋಪಳುವೆರಸಿ[1] ಸಂಭ್ರಮದಿಂ ॥
ಶ್ರೀಪತಿಗೂಡಿ ಸುರೇಂದ್ರವಿಭವದಿಂ । ದೇ ಪೊಗಳುವೆ ಪೊಱಮಟ್ಟ ॥ ॥ ೨೦ ॥

ವಿದ್ಯಾಧರರಂದೊಡವರೆ[2] ಲಂಕೆಯ । ಸಾಧ್ಯವ ಮಾಡಿ ರಾಘವನು ॥
ವಾದ್ಯದ ನಿನದದಿ ಸಲೆಪೊಗಳ್ವಮರರು । ಚೋದ್ಯವ ಮಾಡೆ ತೆರಳಿದ ॥ ೨೧ ॥

ಕಟ್ಟಿಗೆಯವರ ಕೂಗಾಟದಿಂ ಪೊಗಳುವ । ಭಟ್ಟರಿಂ ಮಂತ್ರಾಕ್ಷತೆಯ ॥
ಕೊಟ್ಟು ಪರಸುತ ಭೂಸುರರೊಡವರೆ ಪೊಱ । ಮಟ್ಟನಂದಾ ರಾಘವನು ॥ ೨೨ ॥

ಭೇರಿ ನಿಸ್ಸಾಳ ಡವುಡೆ ಚಿನ್ನತಿತ್ತಿರಿ । ವೀರವಂದದ ಗಿಡುಬಿಡಿಯ ॥
ಘೋರನಿನಾದ ವೆಸೆಯಲಂದ್ಯೆದಿದ । ಶ್ರೀರಾಮಚಂದ್ರಮನಬಲೆ[3] ॥ ೨೩ ॥

---

ದೇವರ ಸೇವಕನು ಆದುದರಿಂದ ದೇವರಾದ ತಮ್ಮೊಡನೆ ನಾನು ಬರುತ್ತೇನೆ' ಎಂದು ಸಂತೋಷದಿಂದ ಹೇಳಿದನು ॥ ೧೫ ॥ ವಿಭೀಷಣನು ಶ್ರೀರಾಮನಿಗೆ ಅರ್ಪಿಸುವುದಕ್ಕಾಗಿ ರತ್ನಗಳನ್ನೂ, ಆನೆ ಕುದುರೆಗಳನ್ನೂ ವಸ್ತ್ರಭೂಷಣಗಳನ್ನೂ ತಂದಿರಿಸಿದನು ಶ್ರೀರಾಮನು ಅವುಗಳನ್ನು ನೋಡಿ, ಹೀಗೆ ಹೇಳಿದನು ॥ ೧೬ ॥ "ಎಲೈ ವಿಭೀಷಣನೇ, ಇಷ್ಟೊಂದು ಉಪಚಾರವನ್ನು ಏಕೆ ಮಾಡುತ್ತೀ? ಈ ವಸ್ತುಗಳು ನಿನ್ನಲ್ಲೀ ಇರಲಿ ನಮಗೆ ಬೇಕಾದಾಗ ತರಿಸಿಕೊಳ್ಳುವೆವು ನಮ್ಮ ವಿಷಯದಲ್ಲಿ ನಿನಗೆ ಸಂಶಯವೇಕೆ?" ॥ ೧೭ ॥ ಆಗ ವಿಭೀಷಣನು ಹೀಗೆಂದನು—"ದೇವ, ನನ್ನ ವಿಜ್ಞಾಪನೆಗಳು—ನೀವು ನನಗೆ ಮಾಡಿದ ಉಪಕಾರವನ್ನು ಪ್ರಾಣವಿರುವ ವರೆಗೂ ಮರೆಯೆನು ಇದನ್ನು ಮರೆತರೆ ನಾನು ಜಿನಭಕ್ತನೇ ಅಲ್ಲ" ॥ ೧೮ ॥ ಹೀಗೆ ಹೇಳಿದ ವಿಭೀಷಣನ ಮನಸ್ಸಿಗೆ ಸಂತೋಷವುಂಟಾಗುವಂತೆ ಶ್ರೀರಾಮನು ಅಂದು ಉಡುಗೊರೆಗಳನ್ನು ಕೊಟ್ಟು, ವಿನಯೋಕ್ತಿಗಳನ್ನಾಡಿ, ಅಲ್ಲಿಂದ ತೆರಳಿದನು ॥ ೧೯ ॥ ಎಲೈ ಚೇಳಿನಿಯೇ ಕೇಳು ಶ್ರೀರಾಮನು ಸೀತೆಯನ್ನೂ ಲಕ್ಷ್ಮಣನನ್ನೂ ಕೂಡಿಕೊಂಡು ಇಂದ್ರನಂತಹ ವೈಭವದಿಂದ ಹೊರಟನು. ಅದನ್ನು ಏನು ಹೊಗಳಲಿ! ॥ ೨೦ ॥ ಶ್ರೀರಾಮನು ಲಂಕೆಯನ್ನು ಜಯಿಸಿ ವಾದ್ಯದ ಧ್ವನಿಯೊಂದಿಗೆ ತೆರಳಿದನು. ಆಗ ವಿದ್ಯಾಧರರು ಒಟ್ಟಿಗೆ ಬಂದರು ದೇವತೆಗಳ ಹೊಗಳಿಕೆಯು ಆಶ್ಚರ್ಯವನ್ನು ಉಂಟುಮಾಡುತ್ತಿತ್ತು ॥ ೨೧ ॥ ಕಟ್ಟಳೆಗಾರರ ಕೂಗಾಟದಿಂದಲೂ ಭಟ್ಟರ ಹೊಗಳಿಕೆಯಿಂದಲೂ ಕೂಡಿದವನಾಗಿ ಮಂತ್ರಾಕ್ಷತೆ ಕೊಟ್ಟು ಆಶೀರ್ವಾದ ಮಾಡುವ ಬ್ರಾಹ್ಮಣರೂ ಒಟ್ಟಿಗೆ ಬರುತ್ತಿರಲು ಶ್ರೀರಾಮನು ಹೊರಟನು ॥ ೨೨ ॥ ಎಲೈ ಚೇಳಿನಿಯೇ. ಶ್ರೀರಾಮನು ಭೇರಿ ನಿಸ್ಸಾಳ, ಡಿಂಡಿಮ ಚಿನ್ನದ ತುತ್ತೂರಿ

---

೧೬, ೧೭, ೧೮ ಈ ಪದ್ಯಗಳು (ಕದಲ್ಲಿಲ್ಲ) [1] ತನ್ನೋಪಳುವೆರಸಿ (ಚ) [2] ವಿದ್ಯಾಧರರೊಡವರಲಂದು (ಚ). [3] ಚಂದ್ರನಂದಬಲೆ (ಕ)

ಲಂಕೆಯ ಸಾಧ್ಯವ ಮಾಡಿ ರಾಘವ ತನ್ನ । ಪಂಕಜಾಕ್ಷಿಯ ಕೂಡಿಕೊಂಡು ॥
ಪಂಕಜೋದರಗೂಡಿ[1] ತೆರಳ್ದನೊಯ್ಯನೆಯಾ । ಲಂಕೆ[2]ಯಿಂದತಿ ವಿಭವದೊಳು ॥ ೨೪ ॥

ಪೊಳಲಿಗೆ ಮಂತ್ರಿಯನಿರಿಸಿ ವಿಭೀಷಣ । ತಳುವದೆ ಬಲು ಬಲಗೂಡಿ ॥
ಕಳುಪಲ್ಕೈದಿದನಂದು ರಾಮಚಂದ್ರನ ಜೆಂ । ಬಳಿಯೊಳು ಬಿಟ್ಟ ಮೊಲೆಯುಳೆ ॥ ೨೫ ॥

ತೆರಳಿ ಬರುತ ಬಳ ಪೀವರಗಿರಿಯೊಳು । ಸ್ಥಿರಲಗ್ನದಿಂದ ಜಾನಕಿಗೆ ॥
ಅರಸ ಸಾವಿರದೆಂಟು ಕನಕಕಳಶಗಳಿಂ । ದಿರದಭಿಷೇಕ ಗೈಸಿದನು ॥ ೨೬ ॥

ಅಸಿಯುಳೆ ಲಕ್ಷ್ಮಣ ಕೋಟಿಕೆ ಶಿಲೆಯೊಳಂ । ದೊಸೆದೆತ್ತಲಲ್ಲಿ ಕಾದಿರ್ದ ॥
ವಸುನಂದನನೆಂಬ ಯಕ್ಷನವನ ಸಾ । ಹಸಕತಿ ಮೆಚ್ಚಿ ಭಕ್ತಿಯೊಳು ॥ ೨೭ ॥

ರಾಮಕೇಶವರ ಪೂಜಿಸಿ ಖಡ್ಗರತ್ನವ । ತಾಮಸವಿಲ್ಲದಾ ಯಕ್ಷ ॥
ಪ್ರೇಮದಿಂ ಕೊಡೆ ಗಂಗಾತೀರವಿಡಿದಂ । ದಾಮುದದಿಂ ಬಂದರವರು ॥ ೨೮ ॥

ಬಿಡದೆ ಗಂಗಾದ್ವಾರವನೈದಿ ರಥವನಂ । ದಡರಿ ಬರಲು (ಮಾಗಧನು)[3] ॥
ಕಡು ಸೋತು ಬೆದಱಿ ಬಂದೊಯ್ಯನೆ ಕಂಡನಾ । ಪೊಡವಿಪತಿಯ ಕಾಣುತವೆ ॥ ೨೯ ॥

ಉತ್ತಮಮಪ್ಪ ರತ್ನದ ಹಾರವ ತೋರ । ಮುತ್ತಿನ ಬಲು ಕಿರೀಟವನು ॥
ಮತ್ತೆ ವಜ್ರದ ಕುಂಡಲವ ಶ್ರೀರಾಮನಿ । ಗಿತ್ತು ಬಿನ್ನವಿಸಿದನಿಂತು ॥ ೩೦ ॥

ದೇವರ ಸೇವೆಗೊದಗಿ ಬರ್ಪನಿವನೆಂದು । ಭಾವಿಸಿ ನನ್ನ ನೀ ಬಿಡದೆ[4] ॥
ಈವುದಭಯವನೆಂದವನು ಪೂಜಿಸಿ ಪೋಗ । ಲಾ ವಿಭು ನಡೆದನಲ್ಲಿಂದ ॥ ೩೧ ॥

---

ವೀರವಂದ. ಗಿಡಬಿಡಿ—ಮುಂತಾದ ವಾದ್ಯಗಳ ಧ್ವನಿಯೊಡನೆ ತೆರಳಿದನು ॥ ೨೩ ॥ ಶ್ರೀರಾಮನು ಲಂಕೆಯನ್ನು ಗೆದ್ದು ತನ್ನ ಮಡದಿಯನ್ನೂ ಲಕ್ಷ್ಮಣನನ್ನೂ ಕೂಡಿಕೊಂಡು, ಆ ಲಂಕೆಯಿಂದ ಮೆಲ್ಲನೆ ಬಹಳ ವೈಭವದಿಂದ ತೆರಳಿದನು ॥ ೨೪ ॥ ಎಲೈ ಚೇಳಿನಿಯೇ. ವಿಭೀಷಣನು ತನ್ನ ಪಟ್ಟಣಕ್ಕೆ ಮಂತ್ರಿಯನ್ನು ನೇಮಿಸಿ, ಕೂಡಲೇ ದೊಡ್ಡ ಸೈನ್ಯವನ್ನು ಕೂಡಿಕೊಂಡು ಶ್ರೀರಾಮನನ್ನು ಕಳುಹಿ ಕೊಡುವುದಕ್ಕಾಗಿ ಅವನೊಡನೆ ತೆರಳಿದನು ॥ ೨೫ ॥ ಶ್ರೀರಾಮನು ಸೈನ್ಯಸಮೇತನಾಗಿ ಬರುತ್ತಾ ಪೀವರ ಗಿರಿಯಲ್ಲಿ ಸ್ಥಿರಲಗ್ನದಲ್ಲಿ ಸಾವಿರದ ಎಂಟು ಚಿನ್ನದ ಕಲಶಗಳಿಂದ ಸೀತೆಗೆ ಅಭಿಷೇಕವನ್ನು ಮಾಡಿಸಿದನು ॥ ೨೬ ॥ ಎಲೈ ಚೇಳಿನಿಯೇ. ಲಕ್ಷ್ಮಣನು ಆ ಪರ್ವತದಲ್ಲಿ ಕೋಟಿಕೆಯೆಂಬ ಶಿಲೆಯನ್ನು ಎತ್ತಿದನು ಆಗ ಅಲ್ಲಿ ಕಾದುಕೊಂಡಿದ್ದ ವಸುನಂದನನೆಂಬ (ಸುನಂದ—ಉತ್ತರಪುರಾಣ) ಯಕ್ಷನು ಅವನ ಸಾಹಸಕ್ಕೆ ಬಹಳವಾಗಿ ಮೆಚ್ಚಿ ಭಕ್ತಿಯನ್ನು ತಾಳಿದನು ॥ ೨೭ ॥ ಯಕ್ಷನು ರಾಮಲಕ್ಷ್ಮಣರನ್ನು ಪೂಜಿಸಿ, ಪ್ರೀತಿಯಿಂದ, ಒಡನೆಯೇ ಸೌನಂದಕವೆಂಬ ಶ್ರೇಷ್ಠವಾದ ಖಡ್ಗವನ್ನು ಲಕ್ಷ್ಮಣನಿಗೆ ಕೊಟ್ಟನು ಅಲ್ಲಿಂದ ರಾಮಲಕ್ಷ್ಮಣರು ಗಂಗಾನದಿಯ ದಡದಲ್ಲೇ ಬಂದರು ॥ ೨೮ ॥ ಅವರು ರಥವನ್ನೇರಿಕೊಂಡು. ಗಂಗಾದ್ವಾರಕ್ಕೆ ಬರಲು, ಮಗಧರಾಜನು ಸೋತು. ಹೆದರಿ ಬಂದು, ಶ್ರೀರಾಮನನ್ನು ಕಂಡನು. ॥ ೨೯ ॥ ಮಾಗಧನು ಶ್ರೀರಾಮನಿಗೆ ಶ್ರೇಷ್ಠವಾದ ರತ್ನದ ಹಾರವನ್ನೂ. ಮುತ್ತಿನ ಕಿರೀಟವನ್ನೂ. ವಜ್ರದ ಕುಂಡಲಗಳನ್ನೂ ಕೊಟ್ಟು ವಿಜ್ಞಾಪಿಸಿದನು ॥ ೩೦ ॥ ತಮ್ಮ ಸೇವೆಗೆ ಒದಗುವ ಕಿಂಕರನೆಂದು ನನ್ನನ್ನು ತಿಳಿದು. ನನಗೆ ಅಭಯವನ್ನು ನೀಡಬೇಕು. ಎಂದು ಪ್ರಾರ್ಥಿಸಿ ಪೂಜಿಸಿ. ಅವನು ತೆರಳಲು. ಶ್ರೀರಾಮನು ಅಲ್ಲಿಂದ ಮುಂದಕ್ಕೆ ಹೋದನು. ॥ ೩೧ ॥ ಅಲ್ಲಿಂದ

---

[1] ಪಂಕರಗೂಡಿ (ಕ). [2] ಲಂಕೆ (ಜ) [3] ಗಂಗಧನು (ಕ), ಗಗನದೊಳು (ಜ), ಉತ್ತರ ಪುರಾಣದ ಆಧಾರದಿಂದ ಮಾಗಧನು" ಎಂದು ಇಲ್ಲಿ ತಿದ್ದುಪಡಿ ಮಾಡಿದೆ [4] ಭಾವಿಸಿ ನಿಮ್ಮ ಮನದೊಳು (ಕ)

ವಾರಿಧಿ ತಡಿವಿಡಿದಾ ವೈಜಯಂತಿಯ । ದ್ವಾರದೊಳ್ ಪೋಗಿ ಬೆದರಿಸಿ ॥
ಶ್ರೀರಾಮಚಂದ್ರನ ವರತನುವೆಂದೆಂಬ । ಭೂರಮಣನು ಬಂದು ಕಂಡು ॥ ೩೨ ॥

ವರ ಕಟಕಾಂಗದ ಕಟಿಸೂತ್ರವನವ । ಗಿರದೆ ಗ್ರೈವೇಯಕವೆಂಬ ॥
ಸಿರಿದಪ್ಪ ಚೂಡಾಮಣಿ ಕಿರೀಟವನಾ । ನರನಾಥಗಿತ್ತು ಕೈಮುಗಿದು ॥ ೩೩ ॥

ಬಿನ್ನಪ ಕೇಳಿಂದು ಮೊದಲಾಗಿ ನೃಪವರ । ನಿನ್ನವಸರಗಳಿಗೊದಗಿ ॥
ಮನ್ನಿಸಿಕೊಂಬೆನೆನುತ ಪೋದನವನ । ಲ್ಲಿನ್ನದೆತಂದಿತ್ತಲೊಂದು ॥ ೩೪ ॥

ವರ ಸಿಂಧುಗೋಪುರದೊಳು ಪ್ರಭಾಸನನೆಂ । ಬರಸನ ಕಾಣಿಸಿಕೊಂಡು ॥
ಇರದೆ ಪ್ರಳಂಬಸೂತ್ರವ ಮುತ್ತುದೊಡವನು । ತರಿಸಿಕೊಂಡವರಲ್ಲಿಂದ[1] ॥ ೩೫ ॥

ನಡೆತಂದು ವನವೇದಿಕೆಯಿಂದಲಾ ನೃಪ । ಪಡುವಣ[2] ಖಾಂಡವಾಸಿಗಳ ॥
ಬಿಡದೆ ಬಾಯ್ಕೇಳಿಸಿ ಬಹುವಿದ ವಸ್ತುವ । ಪಡೆದು ಬಂದರು ಪೂರ್ವದೆಸೆಗೆ ॥ ೩೬ ॥

ವಿಜಯಾರ್ಧಪರ್ವತವಾಸಿಗಳನು ಗೆಲ್ದು । ಗಜ ಹಯ ವಿದ್ಯಾಧರರ ॥
ನಿಜಕನ್ನಿಕೆಯರ ಕೈಕೊಂಡು ನಡೆದರಂ । ಬುಜದಳನೇತ್ರೆ ಕೇಳವರು ॥ ೩೭ ॥

ಅಲ್ಲಿಂದ ಬಂದು ಪೂರ್ವಾಖಾಂಡದ ನೃಪ । ರೆಲ್ಲರ ಸಾಧಿಸಿ[3] ಬಳಿಕ ॥
ನಿಲ್ಲದನರ್ಘ್ಯ ರತ್ನವ ಪಡೆದವರಾಗ । ಳುಲ್ಲಾಸದಿಂದಂಬುಜಾಕ್ಷಿ ॥ ೩೮ ॥

ಸಕಲ ವಿದ್ಯೆಯೊಳು ಬಲ್ಲಿದ ವಿದ್ಯಾಧರ । ನಿಕರವ ಗೆಲಿದು ಕೇಳವರ ।
ಸುಕುಮಾರಿಯರ ಕೈಕೊಂಡು ತಮ್ಮಾಜ್ಞೆಯ । ಪ್ರಕಟಿಸುತವರೈದಿದರು ॥ ೩೯ ॥

---

ಸಮುದ್ರತೀರದಲ್ಲೇ ಹೋಗಿ, ವೈಜಯಂತಿಯ ಗೋಪುರಕ್ಕೆ ಬಂದನು ಅಲ್ಲಿ ಅವರ ಬೆದರಿಕೆಯಿಂದ 'ವರತನು' ಎಂಬ ರಾಜನು ಬಂದು ಶ್ರೀರಾಮನನ್ನು ಕಂಡನು ॥ ೩೨ ॥ ವರತನು ರಾಜನು ಶ್ರೀರಾಮನಿಗೆ ಶ್ರೇಷ್ಠವಾದ ಕಡಗ, ಭುಜಕೀರ್ತಿ, ಉಡಿದಾರ, ಕಂಠಾಭರಣ, ಚೂಡಾಮಣಿ, ಕಿರೀಟಗಳನ್ನು ಕೊಟ್ಟು ನಮಸ್ಕರಿಸಿ, ಹೀಗೆ ಹೇಳಿದನು ॥ ೩೩ ॥ ಎಲೈ ಮಹಾರಾಜನೇ, ಬಿನ್ನಪವು ಇಂದಿನಿಂದ ತೊಡಗಿ ನಾನು ಯಾವಾಗಲೂ ನಿನ್ನ ಕೆಲಸಗಳಿಗೆ ಸಹಾಯಕನಾಗಿದ್ದು, ಮನ್ನಣೆಗೊಳ್ಳುವೆನು—ಎಂದು ಹೇಳಿ ಹೋದನು ಇವರು ಅಲ್ಲಿಂದ ಇತ್ತ ನಡೆತಂದರು ॥ ೩೪ ॥ ರಾಮಲಕ್ಷ್ಮಣರು ಸಿಂಧುಗೋಪುರಕ್ಕೆ ಬಂದು, ಅಲ್ಲಿದ್ದ ಪ್ರಭಾಸನನೆಂಬ ರಾಜನಿಗೆ ಕಾಣಿಸಿಕೊಂಡು, ಅವನಿಂದ ಪ್ರಳಂಬ ಸೂತ್ರವೆನಿಸುವ ಮುತ್ತಿನ ತೊಡಿಗೆಯನ್ನು ಪಡೆದುಕೊಂಡರು ॥ ೩೫ ॥ ಆ ಮೇಲೆ ಅಲ್ಲಿಂದ ವನವೇದಿಕೆಯಲ್ಲಿ ಬಂದು, ಪಡುವಣ ದೇಶವಾಸಿಗಳನ್ನು ಅಧೀನಗೊಳಿಸಿ ಅವರಿಂದ ಬಹಳ ವಿಧವಾದ ಒಡವೆಗಳನ್ನು ಸ್ವೀಕರಿಸಿ, ಮೂಡಣ ದಿಕ್ಕಿಗೆ ಬಂದರು ॥ ೩೬ ॥ ಎಲೈ ಚೇಳಿನಿಯೇ, ಕೇಳು. ಆ ರಾಮಲಕ್ಷ್ಮಣರು ವಿಜಯಾರ್ಧ ಪರ್ವತದಲ್ಲಿ ವಾಸಿಸುವವರನ್ನು ಗೆದ್ದು, ಆನೆಕುದುರೆಗಳನ್ನೂ ವಿದ್ಯಾಧರರ ಕನ್ನೆಯರನ್ನೂ ಸ್ವೀಕರಿಸಿ, ಮುಂದೆ ತೆರಳಿದರು ॥ ೩೭ ॥ ಅವರು ಅಲ್ಲಿಂದ ಬಂದು ಪೂರ್ವಖಂಡದ ರಾಜರೆಲ್ಲರನ್ನೂ ವಶಗೊಳಿಸಿ, ಅವರಿಂದ ಅಮೂಲ್ಯವಾದ ರತ್ನಗಳನ್ನು ಕಾಣಿಕೆಯಾಗಿ ಪಡೆದರು ॥ ೩೮ ॥ ರಾಮಲಕ್ಷ್ಮಣರು ಎಲ್ಲಾ ವಿದ್ಯೆಗಳನ್ನರಿತ ವಿದ್ಯಾಧರರ ಸಮೂಹವನ್ನು ಸೋಲಿಸಿ, ಅವರ ಸುಕುಮಾರಿಯರನ್ನು ಸ್ವೀಕರಿಸಿ, ಅಲ್ಲೆಲ್ಲಾ ತಮ್ಮ ಆಜ್ಞೆಯು ಪ್ರಚಲಿತವಾಗುವಂತೆ ಮಾಡಿ, ಮುಂದೆ ತರಳಿದರು ॥ ೩೯ ॥ ಅವರು ಅಲ್ಲಲ್ಲಿ ಬೀಡುಬಿಡುತ್ತ, ಅಲ್ಲಲ್ಲಿ ಇರುವ ರಾಜರಿಗೆ

---

[1] ಕೊಂಡವನು ತಡೆಯದೆ (ಬ). [2] ಪಡುವಳ (ಬ) [3] ಬಗ್ಗಿಸಿ (ಬ)

ಅಲ್ಲಲ್ಲಿ ಬೀಡಬಿಡುತ ಕಾಣಿಸಿಕೊಳು । ತಲ್ಲಲ್ಲಿಯು ನೃಪರುಗಳ ॥
ಬಲ್ಲಿದರಾದರಸುಗಳ ಕಾಣಿಸಿಕೊಳು । ತಲ್ಲಿರದ್ಯೆದಿದರವರು[1] ॥ ೪೦ ॥

ಉಳಿದರಸುಗಳ ಬಳಿಗೆ ತಮ್ಮ ಚರರನು । ಕಳುಹಿಸಿ ಕಾಣಿಸಲವರ[2] ॥
ಪೊಳಲನವರಿಗಿತ್ತು ತಮ್ಮೊಳಗಾಗಿಸಿ[3] । ತಳರ್ದರವರು ಮುಂದಕಾಗಿ ॥ ೪೧ ॥

ನಡೆದು ಪಶ್ಚಿಮ ಪೂರ್ವ ಖಂಡವನಾಳುವ । ಪೊಡವಿಪತಿಗಳೆಲ್ಲರನು ॥
ಅಡಿಗೆಱಗಿಸಿಕೊಂಡು ನಡೆದರಾ ನೃಪತಿಗೆ । ಪಡಿಯುಂಟೆ ಪದ್ಮದಳಾಕ್ಷಿ ॥ ೪೨ ॥

ಬಂದು ಕಾಣಿಕೆಯಿತ್ತು ಕಾಣ್ಬವರಲ್ಲದೆ । ನಿಂದು ಮಲೆತು ಅವರೊಡನೆ ॥
ಸಂದಿಗ್ಧವಿಲ್ಲ ಮಂದರಧೀರರವರಿಗೆ । ನಿಂದವರಿಲ್ಲ ಬಲ್ಮೆಯೊಳು ॥ ೪೩ ॥

ಉತ್ತಮಮಪ್ಪ ನಾನಾ ರತ್ನಂಗಳ । ಉತ್ತಮಮಪ್ಪ ವಿದ್ಯೆಗಳ ॥
ಉತ್ತಮಮಪ್ಪ ಪೆಣ್ಗಳ ಪಡೆದಾ ಭೂ । ಪೋತ್ತಮರ್ಯೆದಿದರಬಳೆ ॥ ೪೪ ॥

ಖೇಚರಬಲ ನಭದೊಳು ಬರೆ[4] ಲೆಕ್ಕಕೆ । ಗೋಚರಿಸದೆ ಪೊಡವಿಯೊಳು ॥
ಭೂಚರ ಬಲ ಬರೆ ನಡೆದರವರು ಸಚ । ರಾಚರ ಬಣ್ಣಿಸುತಿರಲು ॥ ೪೫ ॥

ಮಾಸದ ದಿವ್ಯಾಂಬರ ದಿವ್ಯಭೂಷಣ । ಪೂಸರದಿಂದ ಪೂಜಿಸಿದ ॥
ವಾಸವ ಕಲ್ಪವೃಕ್ಷವ ಕಾಮಧೇನು ಚಿಂ । ತಾ ಸುಮಣಿಯುನಿತ್ತು ಕಳುಹೆ ॥ ೪೬ ॥

ನೀಱಿ ಲಾಲಿಪುದು ಮಕುಟಬದ್ಧರು ಹದಿ । ನಾಱು ಸಾವಿರವಾ ನೃಪಗೆ ॥
ನೂಱಿಪ್ಪತ್ತೆಣ್ಬ ವಿದ್ಯಾಧರ ರಾಜರು । ಮೂಱು ಖಾಂಡದ ವೆಂತರರು ॥ ೪೭ ॥

---

ಕಾಣಿಸಿಕೊಳ್ಳುತ್ತ, ಬಲಿಷ್ಠರಾದ ರಾಜರಿಗೂ ದರ್ಶನವನ್ನಿತ್ತು ತೆರಳಿದರು. ॥ ೪೦ ॥ ಉಳಿದ ರಾಜರುಗಳ ಬಳಿಗೆ ತಮ್ಮ ದೂತರನ್ನು ಕಳುಹಿಸಿದಾಗ ಅವರು ಬಂದಲ್ಲಿ ಅವರನ್ನು ತಮ್ಮ ಆಶ್ರಿತರಾಗಿ ಮಾಡಿ, ಅವರ ರಾಜ್ಯವನ್ನು ಅವರಿಗೇ ಕೊಟ್ಟು ಮುಂದಕ್ಕೆ ತೆರಳಿದರು. ॥ ೪೧ ॥ ಎಲೈ ಚೇಳಿನಿಯೇ ಅವರು ಹೀಗೆ ನಡೆಯುತ್ತ ಪೂರ್ವ ಪಶ್ಚಿಮ ಖಂಡಗಳನ್ನಾಳುವ ರಾಜರೆಲ್ಲರನ್ನೂ ಪಾದಾಕ್ರಾಂತರಾಗಿ ಮಾಡಿ. ಮುಂದೆ ತೆರಳಿದರು. ಆ ಶ್ರೀರಾಮನಿಗೆ ಎಣೆಯಾದವರಿರುವರೆ? ॥ ೪೨ ॥ ಅವರಿಗೆ ಬಂದು ಕಾಣಿಕೆ ಕೊಡುವವರೇ ಇದ್ದರಲ್ಲದೆ. ಮಂದರ ಪರ್ವತದಂತೆ ಧೈರ್ಯಶಾಲಿಗಳಾದ ಆ ರಾಮಲಕ್ಷ್ಮಣರನ್ನು ಪರಾಕ್ರಮದಿಂದ ಎದುರಿಸಬಲ್ಲವರಿಲ್ಲ. ॥ ೪೩ ॥ ಎಲೈ ಚೇಳಿನಿಯೇ ರಾಜಶ್ರೇಷ್ಠರಾದ ರಾಮಲಕ್ಷ್ಮಣರು ಉತ್ತಮವೆನಿಸಿದ ಹಲವಾರು ವಿಧದ ರತ್ನಗಳನ್ನೂ, ಶ್ರೇಷ್ಠವಾದ ವಿದ್ಯೆಗಳನ್ನೂ, ಉತ್ತಮ ಸ್ತ್ರೀಯರನ್ನೂ ಪಡೆದು ಮುಂದುವರಿದರು. ॥ ೪೪ ॥ ಖೇಚರರ ಸೈನ್ಯವು ಅಗಣಿತ ಸಂಖ್ಯೆಯಲ್ಲಿ ಆಕಾಶದಲ್ಲಿ ಬರುತ್ತಿರಲು, ನೆಲದ ಮೇಲೆ ಭೂಚರರ ಸೈನ್ಯವು ಬರುತ್ತಿರಲು. ಎಲ್ಲಾ ಚರಾಚರ ಜೀವಿಗಳು ಹೊಗಳುತ್ತಿರಲು, ಅವರು ನಡೆದರು. ॥ ೪೫ ॥ ದೇವೇಂದ್ರನು ಕಲ್ಪವೃಕ್ಷ. ಕಾಮಧೇನು, ಚಿಂತಾಮಣಿಗಳನ್ನು ಕೊಟ್ಟು. ಮಲಿನವಾಗದ ದಿವ್ಯವಸ್ತ್ರದಿಂದಲೂ ಶ್ರೇಷ್ಠ ಅಲಂಕಾರಗಳಿಂದಲೂ ಹೂಮಾಲೆಗಳಿಂದಲೂ ಅವರನ್ನು ಪೂಜಿಸಿ. ಕಳುಹಿಸಿದನು. ॥ ೪೬ ॥ ಎಲೈ ಚೇಳಿನಿಯೇ ಕೇಳು ಆ ಶ್ರೀರಾಮನಿಗೆ ಹದಿನಾರು ಸಾವಿರ ಕಿರೀಟಧಾರಿರಾಜರೂ ನೂರಿಪ್ಪತ್ತೆಂಟು ವಿದ್ಯಾಧರರಾಜರೂ ಮೂರುಖಂಡದ ಪಿಶಾಚರೂ ಅಧೀನರಾದರು ॥ ೪೭ ॥

---

[1] ಯ್ದಿದನವನು (ಜ) [2] ಕಳುಪಿ ಕರಸಿಯವರವರ (ಜ) [3] ತನ್ನೊಳಗಾಗಿಸಿ (ಜ). [4] ಬರೆ ಗಗನದೆ (ಜ).

ವೆರಸಿ ದಿಗ್ವಿಜಯವ ಮಾಡಿಯವರು ನಾಲ್ವ । ತ್ತೆರಡು ವರುಷ ತುಂಬಿ ತಿರುಗಿ[1] ॥
ಪರಮ ಸಂತೋಷದಿಂ ಸಾಕೇತಪುರಕಾಗಿ । ತೆರಳಿಯವರು ಬರುತಿರಲು ॥ ೪೮ ॥

ಇಂದುವದನೆ ಕೇಳಾ ನೃಪ ಬರ್ಪುದ । ಬಂದೋರ್ವ ಚರ ಪೇಳಲವಗೆ ॥
ಅಂದುಡುಗೊರೆಯಿತ್ತು ಮಂತ್ರೀಶ ಸಂತಸ । ದಿಂದ ಪೊಳಲ ಸಿಂಗರಿಸಿದ ॥ ೪೯ ॥

ಡಂಗುರವೊಯ್ದರಲ್ಲಲ್ಲಿ ಬೀದಿಯ[2] ನೀವು । ಸಿಂಗರಮಾಡುವುದೆಂದು ॥
ಕಂಗೆಸೆವಂತು ಪೊಳಲ ಸಿಂಗರಿಸಿತು । ಸಿಂಗವಸುಳಿ ನಡುವಿನಳೆ ॥ ೫೦ ॥

ಕಸ್ತುರಿಯಿಂದ ಸಾರಿಸಿ ಕುಂಕುಮದಿಂದ । ಬಿತ್ತರಿಸಿದರು ಕಾರಣೆಯ[3] ॥
ಮುತ್ತಿನ ರಂಗವಲಿಯನಿಕ್ಕಲಲ್ಲಲ್ಲಿ । ಪತ್ತನ ಸಿಂಗರವಾಯ್ತು ॥ ೫೧ ॥

ಕುಸಕವನೇಳಿಸಿದರು ನೋಡುವರ ಕ । ಣ್ಗೆಸೆವಂತು ಕುರುಜುಗಟ್ಟಿದರು[4] ॥
ಮಿಸುಪ ತೋರಣವ ನಿಲಿಸಿದರಂದಲ್ಲಲ್ಲಿ । ಕುಸುರಿಗಲಶವ ಕಾಣಿಸುತ ॥ ೫೨ ॥

ತಳಿಗೆದೋರಣವು[5] ಮಕರತೋರಣಗಳು । ತಳಿರ ತೋರಣಗಳಲ್ಲಲ್ಲಿ ॥
ತಳಿತವು ತಳುವದೆ ಗಾಡಿಯಿಂದೊಯ್ಯನೆ । ಪೊಳಲೊಳು ನಿಲುಕದೆಣಿಕೆಗೆ ॥ ೫೩ ॥

ನಿಡುಜಲ್ಲಿಯ ಪವಳದ ಪಚ್ಚೆಯ ಕುಚ್ಚ[6] । ಪಿಡಿದ ಚಿನ್ನದ ಬೊಂಬೆ ಸಾಲು ॥
ಗುಡಿ ತೋರಣ ಕೋಟಾಕೋಟಿಯೆಸೆಯಲು । ನುಡಿವುದೇನದಱ ಗಾಡಿಯನು ॥ ೫೪ ॥

ಇಂದ್ರಗೋಪದ ಮೇಲುಕಟ್ಟನ[7] ಪಟ್ಟೆಯ । ಚಂದ್ರಗಾವಿಯ ದೂವಟಿದ ॥
ಇಂದ್ರಾಣಿಯ ವಸನದಲಿ ನೆರೆದುದು ನ । ರೇಂದ್ರನ ಪುರ ಸಿಂಗರಿಸಿತು ॥ ೫೫ ॥

---

ಆ ಶ್ರೀರಾಮಲಕ್ಷ್ಮಣರು ನಲುವತ್ತೆರಡು ವರ್ಷ ತುಂಬುವ ವರೆಗೆ ದಿಗ್ವಿಜಯವನ್ನು ಮಾಡುತ್ತ ಬಹಳ ಸಂತೋಷದಿಂದ ಅಯೋಧ್ಯಾನಗರದ ಕಡೆಗೆ ಬರುತ್ತಿದ್ದರು ॥ ೪೮ ॥ ಎಲೈ ಚೇಳನಿಯೇ ಹೀಗೆ ರಾಮನೃಪನು ಬರುತ್ತಿರುವುದನ್ನು ಒಬ್ಬ ದೂತನು ಬಂದು ಮಂತ್ರೀಶ್ವರನಿಗೆ ತಿಳಿಸಿದನು ಆಗ ಮಂತ್ರಿಯು ಅವನಿಗೆ ಉಡುಗೊರೆಯನ್ನು ಕೊಟ್ಟು. ಸಂತೋಷ ದಿಂದ ಪಟ್ಟಣವನ್ನು ಶೃಂಗಾರಗೊಳಿಸಿದನು ॥ ೪೯ ॥ ಎಲೈ ಸಿಂಹದ ಮರಿಯ ಕಟಿಯುವಳೇ, ಆ ಅಯೋಧ್ಯೆಯ ಬೀದಿ ಬೀದಿಗಳಲ್ಲಿ ಪಟ್ಟಣವನ್ನು ಶೃಂಗಾರ ಮಾಡಬೇಕೆಂದು ಡಂಗುರವನ್ನು ಹೊಯ್ದರು ಒಡನೆಯೇ ಪಟ್ಟಣವನ್ನು ಶೃಂಗರಿಸಿದರು ॥ ೫೦ ॥ ಕಸ್ತೂರಿಯಿಂದ ಸಾರಣೆಯನ್ನೂ ಕುಂಕುಮದಿಂದ ಕಾರಣೆಯನ್ನೂ ಮಾಡಿ, ಮುತ್ತಿನ ರಂಗೋಲೆಯನ್ನಿಕ್ಕಿದರು ಹೀಗೆ ಪಟ್ಟಣವು ಶೃಂಗಾರವಾಯಿತು ॥ ೫೧ ॥ ಅಲ್ಲಲ್ಲಿ ಕೆತ್ತನೆ ಕೆಲಸಗಳನ್ನು ಮಾಡಿದರು ನೋಟಕರ ಕಣ್ಣಿಗೆ ಸೊಗಸಾಗಿ ತೋರುವಂತೆ ಮಂಟಪಗಳನ್ನು ನಿರ್ಮಿಸಿದರು ಅಲ್ಲಲ್ಲಿ ಕುಸುರಿ ಕಲಶಗಳೊಡನೆ ಪ್ರಕಾಶಮಾನವಾದ ತೋರಣಗಳನ್ನು ನಿಲ್ಲಿಸಿದರು ॥ ೫೨ ॥ ಆ ಪಟ್ಟಣದಲ್ಲಿ ತಳಿಗೆ ತೋರಣಗಳೂ ಮಕರ ತೋರಣಗಳೂ, ಚಿಗುರಿನ ತೋರಣಗಳೂ, ಬಹಳ ಸೊಗಸಾಗಿ ಅಲ್ಲಲ್ಲಿ ವಿಸ್ತರಿಸಿ ಕಾಣಿಸಿದವು ॥ ೫೩ ॥ ಉದ್ದವಾದ ಜಲ್ಲಿಯ ಹವಳವೂ, ಪಚ್ಚೆಯ ಗೊಂಚಲುಗಳನ್ನು ಹಿಡಿದ ಚಿನ್ನದ ಗೊಂಬೆಗಳ ಸಾಲುಗಳೂ ಅಸಂಖ್ಯವಾದ ಗುಡಿ ತೋರಣಗಳೂ ಶೋಭಿಸುತ್ತಿರುವಾಗ ಆ ಪಟ್ಟಣದ ಸೊಗಸನ್ನು ಏನೆನ್ನಲಿ ! ॥ ೫೪ ॥ ಅಲ್ಲಿನ ಅರಮನೆಯು ಇಂದ್ರಗೋಪದ ಮೇಲುಕಟ್ಟಿನ ರೇಶ್ಮೆಯಿಂದಲೂ ಚಂದ್ರಗಾವಿಯ ದೂಪಟ್ಟಿದಿಂದಲೂ ಇಂದ್ರಾಣಿಯ ವಸ್ತ್ರದಿಂದಲೂ ಕೂಡಿ ಶೃಂಗಾರವೆನಿಸಿತು ॥ ೫೫ ॥ ನಾಜೂಕು

---

[1] ತುಂಬಲಾಗಿ (ಚ) [2] ಕೇರಿಯ (ಚ) [3] ಕಾರಣೆಯಿಂ (ಚ) [4] ಕುರುಜಗಟ್ಟಿದರು (ಚ) [5] ದೋರಣಗಳು (ಚ) [6] ಪಟ್ಟೆಯ ನುಟ್ಟ (ಚ) [7] ಮೇಲುಕಟ್ಟಿಂದ (ಚ)

ಹೊಂಬಾಳೆಗಳ ಹೊಂಗೇದಗೆ ದಳಗಳ[1] । ಹೊಂಬಣ್ಣದಾವರೆಗಳನು[2] ॥
ತುಂಬ ಕಟ್ಟಿದರಲ್ಲಲ್ಲಿ ಕುಸಕ ಕ । ಣ್ಗೆಂಬಾಗುವಂತಂಬುಜಾಕ್ಷಿ ॥　　॥ ೫೬ ॥

ಮರುಗ ಮಲ್ಲಿಗೆ ಮುಡಿವಾಳ ಮಂದಾರದೊ । ಳ್ಪರಲ ಸೇವಂತಿ ಸಂಪಗೆಯು ॥
ಬಿರಿ ಮೊಗ್ಗೆಗಳ ಸರಗಳ ಕಟ್ಟಲಾ ಪುರ । [3]ಸುರಪುರಿಯಂತೆ ಶೋಭಿಸಿತು[3]　　॥ ೫೭ ॥

ಮನೆನೆಲ ಕರುವಾಡ ಚಾವಡಿ ಚಪ್ಪರ । ಮಿನುಗುವ ಭಿತ್ತಿ ಬೀದಿಗಳು ॥
ಪನಿನೀರು ಕತ್ತುರಿ ಪೂಗಳ ಕಂಪಿಂದ । ಜನಿಸಿದಂದದಿ ಕಮ್ಮಗಿಹುದು[4]　　॥ ೫೮ ॥

ಅಗರು ಧೂಪದ ಪೊಗೆಗಳು[5] ಮಗಮಗಿಸುತ । ನೆಗೆದವಲ್ಲಲ್ಲಿ ಬೀದಿಯುಲಿ ॥
ಸೊಗಸಿತೆಂತೆನೆ ದಿವ್ಯಾಮೋದ ತುಂಬಿದ । ಪಗದ ಮುಚ್ಚುಳ ತೆಗೆದಂತೆ　　॥ ೫೯ ॥

ಪರಿಮಲಗೆಡದೆ ಸುಗಂಧವಳಿಯದೆ ನೀ । ನಿರು ಕಂಪಡಗದೆಂದೆಂದು[6] ॥
ವಿರಚಿಸಿದನೊ[7] ಬಿದಿಯಾಜ್ಞೆಯಿಂದೆಂಬಂತೆ । ಪುರ ಕಮ್ಮ[8] ನಿಹುದನವರತ　　॥ ೬೦ ॥

ಬಂದನು ಗಡ ನಮ್ಮರಸನು ಸೀತೆಯ[9] । ತಂದನು ಗಡ ದಶಶಿರನ ॥
ಕೊಂದನು ಗಡ ಲೇಸು ಲೇಸೆಂಬ ಮಾತಿನ । ಸಂದಣಿಯೆಸೆದುದಂದಲ್ಲಿ[10]　　॥ ೬೧ ॥

ಕೊಟ್ಟನು ಗಡ ಸುರಲೋಕವ ಬಾಲಿಗೆ । ಕೊಟ್ಟ ಗಡವ ಮೊದಲಾಳ್ಪ ॥
ಪಟ್ಟವ ಸುಗ್ರೀವನಿಗೆ ಶ್ರೀರಾಮನು । ಮುಟ್ಟಿದ ಮೋಹದಿಂದೊಲಿದು[11]　　॥ ೬೨ ॥

ಅಣುರೇಣು ತೃಣಕಾಷ್ಠವಾಗುವ[12]ಗಡ ಪೆಸ । ರಣುವ ಗಡತಿವಿದ್ಯೆಯಿಂದೆ ॥
ರಣಕೆ ಸುಗಿವನಲ್ಲ ಗಡ ಶ್ರೀರಾಮಗೆ । ಮಣಿದು ಸೇರಿದ ಗಡ ಬಂದು　　॥ ೬೩ ॥

---

ತನವು ಕಣ್ಣಿಗೆ ಸೊಗಸುವಂತೆ ಹೊಂಬಾಳೆಗಳನ್ನೂ, ಹೊಂಗೇದಗೆಯ ಎಸಳುಗಳನ್ನೂ, ಹೊಂಬಣ್ಣದ ತಾವರೆಗಳನ್ನೂ ಅಲ್ಲಲ್ಲಿ ಬಹಳವಾಗಿ ಕಾಣುವಂತೆ ಕಟ್ಟಿದರು ॥ ೫೬ ॥ ಮರುಗ, ಮಲ್ಲಿಗೆ, ಮುಡಿವಾಳ, ಮಂದಾರದ ಹೂ, ಸೇವಂತಿಗೆ ಸಂಪಗೆ— ಮುಂತಾದವುಗಳ ಬಿರಿಮೊಗ್ಗೆಗಳನ್ನು ಮಾಲೆ ಕಟ್ಟಲು, ಆ ಪಟ್ಟಣವು ಅಮರಾವತಿಯಂತೆ ಶೋಭಿಸಿತು ॥ ೫೭ ॥ ಅಲ್ಲಿನ ಮನೆನೆಲ, ಉಪ್ಪರಿಗೆ ಚಾವಡಿ ಚಪ್ಪರ, ಹೊಳೆವ ಗೋಡೆ, ಬೀದಿಗಳು ಎಲ್ಲವೂ ಪನ್ನೀರು ಕಸ್ತೂರಿ ಹೂವುಗಳ ಪರಿಮಳ ದಿಂದ ಹುಟ್ಟಿಕೊಂಡಿರುವಂತೆ ಗಮಗಮಿಸುವುದು. ॥ ೫೮ ॥ ಅಲ್ಲಲ್ಲಿ ಬೀದಿಗಳಲ್ಲಿ ಗಮಗಮಿಸುತ್ತ ಅಗರು-ಧೂಪಗಳ ಹೊಗೆ ಮೇಲಕ್ಕೆದ್ದು, ದಿವ್ಯವಾದ ಸುವಾಸನೆ ತುಂಬಿದ ಕರಡಿಗೆಯ ಮುಚ್ಚಳ ತೆಗೆದಂತೆ ಸೊಗಸಾಯಿತು. ॥ ೫೯ ॥ ಸುವಾ ಸನೆ ಕೆಡದ, ಸುಗಂಧವು ನಾಶವಾಗದೆ, ಪರಿಮಳವು ಮರೆಯಾಗದೆ ನೀನಿರು—ಎಂದು ಬ್ರಹ್ಮನು ಆ ಪಟ್ಟಣಕ್ಕೆ ಆಜ್ಞೆ ಮಾಡಿರುವನೋ ಎಂಬಂತೆ ಆ ಪಟ್ಟಣವು ಯಾವಾಗಲೂ ಸುವಾಸನೆ ಕೆಡದೆ ಇರುವುದು ॥ ೬೦ ॥ ಆಗ ಅಲ್ಲಿ—"ನಮ್ಮ ಅರಸನು ಬಂದನಂತೆ! ಸೀತೆಯನ್ನು ತಂದನಂತೆ! ರಾವಣನನ್ನು ಕೊಂದನಂತೆ! ಒಳ್ಳಿತು, ಒಳ್ಳಿತು"—ಎಂಬ ಮಾತುಗಳು ಕೇಳಿಸುತ್ತಿದ್ದುವು ॥ ೬೧ ॥ ಶ್ರೀರಾಮನು ವಾಲಿಗೆ ದೇವಲೋಕವನ್ನು ಕೊಟ್ಟನಂತೆ ಸುಗ್ರೀವನಿಗೆ ಆತನು ಮೊದಲು ಆಳುತ್ತಿದ್ದ ರಾಜ್ಯಾಧಿಕಾರವನ್ನು ಕೊಟ್ಟನಂತೆ—ಎನ್ನುತ್ತಿದ್ದರು ॥ ೬೨ ॥ ಅಣುವನೆಂಬ ಹೆಸರುಳ್ಳ ವಿದ್ಯಾಧರನು ತನ್ನ ಶ್ರೇಷ್ಠವಾದ ವಿದ್ಯಾಬಲದಿಂದ ಅಣು-ರೇಣು-ತೃಣ-ಕಾಷ್ಠ-ಎಂಬ ಯಾವ ರೂಪವನ್ನೂ ತಾಳಬಲ್ಲನಂತೆ! ಯುದ್ಧಕ್ಕೆ ಅಂಜು

---

[1] ಹೊಂಗೇದಗೆಗಳ ಪೊಸ (ಚ) [2] ದಾವರೆಯರಲ (ಚ) [3] ಪರಿಮಳವಪೆದಂತಾಯ್ತು [ಚ) [4] ಕಮ್ಮನಿಹುದು (ಚ) [5] ಪೊಂಘಟ (ಕ). [6] ಕಮ್ಮನೆಯೊಂದೆನುತ (ಚ). [7] ಇರಿಸಿದನೋ (ಕ) [8] ಪುರಮದು (ಕ) [9] ನಮ್ಮರಸು ತನ್ನರಸಿಯ (ಚ) [19] ಯೆಸೆದುದಲ್ಲಲ್ಲಿ (ಚ) [11] ಮೋಹದಿಂದವನು (ಕ) [12] ವಾರುವ (ಕ)

ಊರ ಮುಂದಣ ವನವನು ಕಿತ್ತ ಗಡ ಹೊಕ್ಕ । ಕೇರಿಯ ಸುಟ್ಟುಬಿಟ್ಟ ಗಡ ॥
ಚಾರಿವರಿದು ರಕ್ಕಸರ ಕೊಂದ ಗಡವ । ನಾ ರಾವಣನಿಗಂಜ ಗಡ ॥ ೬೪ ॥

ಲಂಕೆಯನವನಿಂದ ಸಾಧಿಸಿದನು ಗಡ । ಶಂಕೆಯಿಲ್ಲದೆ ನೃಪವರನ ॥
ಅಂಕವ ನೋಡಬೇಕೆಂಬರರೆಬರೇ । ಣಾಂಕವದನೆ ನಿನ್ನಾಣೆ ॥ ೬೫ ॥

ಕಟ್ಟಿದ ಗಡ ರಾವಣನಾಳ್ವ ಸೀಮೆಯ । ಪಟ್ಟವನಾ ವಿಭೀಷಣಗೆ ॥
ಕೊಟ್ಟನು ಗಡ ಬೇಡಿದುದ[1] ರಾಘವನಂತೆ । ಪುಟ್ಟಲಿಲ್ಲವೆ ಭೂವಿಪರು ॥ ೬೬ ॥

ಕೂಡಿದ ಗಡ ಖೇಚರ ಭೂಚರ ಬಲ । ಗೂಡಿ ದಿಗ್ವಿಜಯವ ಮಾಡಿ ॥
ನಾಡ ಸಾಧಿಸಿ[2] ಬಲುಗೈಯನಾದನ ನಾವು । ನೋಡಬೇಕೆಂಬರರೆಬರು ॥ ೬೭ ॥

ಎಂದಲ್ಲಿಯಲ್ಲಿ ಗಾಜರು ಪಡೆಪಡೆಯಾಗಿ । ನಿಂದು ಕೋವಿದರು ಕೊಂಡಾಡಿ[3] ॥
ಅಂದು ಬಣ್ಣಿಸಿ ಪೊಗಳುತಿರೆ ಶ್ರೀರಾಮನು । ಬಂದನು ಬಲು ಬಲವೆರಸಿ ॥ ೬೮ ॥

ಪರಿಜನ ಪುರಜನ ಬಂಧುಜನರುಗಳು । ನೆರೆದು ನೋಡುವ ನೋಟಕರು ॥
ಹರುಷದಿಂ[4] ಬಂದರು ರಾಮಚಂದ್ರನ ಸಿರಿ । ಚರಣವ ಕಾಣಬೇಕೆಂದು ॥ ೬೯ ॥

ಕಳಸ ಕನ್ನಡಿ ಗುಡಿಗೂಡಿ ಪಣ್ಯಾಜನ । ಬಳಸಿ ಬರಲು ಮಂತ್ರೀಶ ॥
ತಳುವದಿದಿರುವಂದು ಕಂಡ ನಾನಾ ವಾದ್ಯ । ವೊಳಗಲು ರಾಮಚಂದ್ರಮನ ॥ ೭೦ ॥

ನಾನಾ ವಾದ್ಯದ ರವದಿಂದ ಭೋರೆಯೆಂ । ದಾನದುಗ್ಗಡಿಸುವರಿಂದ ॥
ಆ ನರನಾಥನು ಬಂದು ಪೊಕ್ಕನು ಕೇ । ಳಾ ನಗರವನಳ್ತಿಯೊಳು ॥ ೭೧ ॥

---

ವವನಲ್ಲವಂತೆ! ಅವನು ಶ್ರೀರಾಮನಿಗೆ ವಿನತನಾಗಿ ಬಂದು ಸೇರಿದನಂತೆ! ॥ ೬೩ ॥ ಅಣುವನು ಲಂಕೆಯ ಊರ ಮುಂದಿನ ಉದ್ಯಾನವನ್ನು ಕಿತ್ತುಹಾಕಿದನಂತೆ! ಹೊರಗಿನ ಬೀದಿಯನ್ನೇ ಸುಟ್ಟು ಬಿಟ್ಟನಂತೆ! ಆ ಮೇಲೆ ರಾಕ್ಷಸರನ್ನು ಸಂಹಾರ ಮಾಡಿದನಂತೆ! ರಾವಣನಿಗೆ ಹೆದರಲಿಲ್ಲವಂತೆ! ॥ ೬೪ ॥ ಶ್ರೀರಾಮನು ಅಣುವನ ಮೂಲಕ ಲಂಕೆಯನ್ನು ಗೆಲಿದನಂತೆ! ಅಂತಹ ಶ್ರೀರಾಮನನ್ನು ನೋಡಬೇಕು—ಎಂದು ಹಲವರು ಹೇಳುತ್ತಿದ್ದರು ॥ ೬೫ ॥ ರಾವಣನು ಆಳುತ್ತಿದ್ದ ರಾಜ್ಯದ ಪಟ್ಟವನ್ನು ವಿಭೀಷಣನಿಗೆ ಕಟ್ಟಿದನಂತೆ! ಆ ಮೇಲೆ ಬೇಡಿದುದನ್ನೆಲ್ಲ ದಾನವಾಗಿ ಕೊಟ್ಟಿದ್ದಾನಂತೆ! ಶ್ರೀರಾಘವನಂತಹ ರಾಜರು ಹುಟ್ಟಲೇ ಇಲ್ಲವಲ್ಲವೆ? ॥ ೬೬ ॥ ಶ್ರೀರಾಮನು ಖೇಚರರ ಮತ್ತು ಭೂಚರರ ಸೈನ್ಯವನ್ನು ಕೂಡಿ ದಿಗ್ವಿಜಯ ಮಾಡಿ ರಾಜ್ಯವನ್ನೆಲ್ಲ ಗೆದ್ದು ಮಹಾ ಪರಾಕ್ರಮಿಯೆನಿಸಿದ್ದಾನೆ ಅವನನ್ನು ನಾವು ನೋಡಬೇಕು—ಎಂದು ಹಲವರು ಹೇಳಿಕೊಳ್ಳುತ್ತಿದ್ದರು ॥ ೬೭ ॥ ಹೀಗೆ ಅಲ್ಲಿ ಗುಂಪುಗುಂಪಾಗಿ ಪ್ರೀತಿಯವರೂ, ವಿದ್ವಾಂಸರೂ, ಶ್ರೀರಾಮನನ್ನು ಹೊಗಳುತ್ತಲೂ ವರ್ಣಿಸುತ್ತಲೂ ಇರುವಾಗ ಶ್ರೀರಾಮನು ದೊಡ್ಡ ಸೇನೆಯೊಡನೆ ಬಂದನು ॥ ೬೮ ॥ ಆಗ ಸೇವಕರೂ, ಪಟ್ಟಣಿಗರೂ ಬಾಂಧವರೂ, ಗುಂಪಾಗಿ ನಿಂತು ನೋಡುವವರೂ ಶ್ರೀರಾಮನ ಕಾಂತಿಯುಕ್ತವಾದ ಪಾದವನ್ನು ಕಾಣಬೇಕೆಂದು ಸಂತೋಷದಿಂದ ಬಂದರು ॥ ೬೯ ॥ ಮಂತ್ರೀಶನು ತನ್ನ ಸುತ್ತಲೂ ಕಳಶ, ಕನ್ನಡಿ ಪತಾಕೆಗಳನ್ನು ಹಿಡಿದ ಗಣಿಕೆಯರು ಬರುತ್ತಿರಲು ತಡವಿಲ್ಲದೆ ಇದಿರು ಬಂದು ಶ್ರೀರಾಮಚಂದ್ರನನ್ನು ಕಂಡನು ಆಗ ಹಲವು ವಿಧದ ವಾದ್ಯಗಳು ಧ್ವನಿಗೈಯುತ್ತಿದ್ದವು ॥ ೭೦ ॥ ಹಲವು ವಿಧದ ವಾದ್ಯದ ಧ್ವನಿಯಿಂದಲೂ ಬೋರೆಂದು ನಿಲ್ಲದೆ ಬೊಬ್ಬಿಡುವವರಿಂದಲೂ ಕೂಡಿಕೊಂಡು ಶ್ರೀರಾಮನು ಬಂದು ಪ್ರೀತಿಯಿಂದ ಅಯೋಧ್ಯಾನಗರವನ್ನು ಪ್ರವೇಶಿಸಿದನು ॥ ೭೧ ॥ ಎಲ್ಲೈ

---

[1] ಗಡ ಸಾಮ್ರಾಜ್ಯ (ಕ) [2] ಪಾದಪಂಪವ (ಚ) [3] ಕೊಂಡಾಡೆ (ಚ) [4] ಹರುಷದಿಂ (ಚ)

ಕೋಕಿಲಾಲಾಪೆ ಶ್ರೀರಾಮಲಕ್ಷ್ಮಣರಂದ । ನೇಕಬಲವ ಕೂಡಿಕೊಂಡು ॥
ನಾಕನಾಯಕರು ಕೊಂಡಾಡುತಿರಲು ಬಂದು । ಸಾಕೇತಪುರವನೈದಿದರು ॥ ೭೨ ॥

ಗಜ ಹಯ ರಥ ಕಾಲಾಳ ಮೋಹರದಿಂದೆ । ದ್ವಿಜರಾಶೀರ್ವಾದದಿಂದೆ ॥
ಪ್ರಜೆಗಳ ಸಂದಣಿಯಿಂದಲವರು ದಿ । ಗ್ವಿಜಯದಿಂ ಪೊಕ್ಕರಾ ಪೊಳಲ ॥ ೭೩ ॥

ಕಣ್ಣು ದಣಿಯವು ನುಡಿವ[1] ನಾಲಗೆಗಳು । ಬಣ್ಣಿಸಿ ದಣಿಯವು ಜನರ ॥
ಹೆಣ್ಣ ಕೇಳವರತಿವೈಭವದಿಂ ಬಂದು । ತಣ್ಣನೈದಿದರಾ ಪೊಳಲ ॥ ೭೪ ॥

ಮಂಗಲನಾಡುವರಿಂದ ಆರತಿಯೆತ್ತಿ । ಪಂಗನಾ ಜನದುಲುಪಿಂದೆ ॥
ಸಿಂಗರಿಸಿದ ರಾಜವೀಥಿಯ ನಡುವೆಯಾ । ತುಂಗವಿಕ್ರಮರೈದಿದರು ॥ ೭೫ ॥

ಬಂದು ಪೊಳಲ ಪೊಕ್ಕು ಭಾನುವೀಥಿಯಲವ[2] । ನಂದು ನಡೆಯಲಾರತಿಗಳ ॥
ತಂದು ಪಿಡಿದು ಪಡೆಪಡೆಯಾಗಿ[3] ಪೆಣ್ಗಳು । ನಿಂದೆತ್ತಿತು ನೃಪವರಗೆ ॥ ೭೬ ॥

ಮುಡಿಯ ಭಾರಕೆ ಕೊರಲ್ ಮೊಲೆಯ ಭಾರಕೆ ಸಣ್ಣ । ನಡು ಕಟಭರಕೆ ತೊಡೆಗಳು ॥
ದಡದಡ[4]ದಡಿಸುತ [5]ನಡೆದರು ಮನ್ಮಥ । ಮಡದಿಯಂದದಿ ನೀಱೆಯರು[5] ॥ ೭೭ ॥

ತೋರ ಮೊಲೆಯ ತೋರದುಱುಬಿನ[6] ಕಣ್ಗಳ । ಪೋರೆನೋಟದ ಮೃದುನುಡಿಯ ॥
ಮಾರನಾನೆಯ ಯಾನದ ನೀಱೆಯರು ನೃಪ । ಗಾರತಿಯೆತ್ತಿದರಾಗ[6] ॥ ೭೮ ॥

ಚಲ್ಲೆಗಂಗಳ ಚಾಟುನೋಟದ ತಳಪದ । ಗಲ್ಲದ ಗಾಡಿ ಗಮಕದ ॥
ಕೊಲ್ಲಿನೋಟದ ಕೋಮಲೆಯರಾರತಿಯ ಭೂ । ವಲ್ಲಭಗೆತ್ತಿದರಾಗ ॥ ೭೯ ॥

---

ಕೋಕಿಲವಾಣಿ ಚೇಳಿನಿಯೇ, ಅಂದು ಶ್ರೀರಾಮಲಕ್ಷ್ಮಣರು ಅನೇಕ ಸೈನ್ಯದೊಡನೆ ಬಂದು, ಸಾಕೇತಪುರವನ್ನು ಹೊಕ್ಕರು. ಆಗ ಸ್ವರ್ಗದ ಒಡೆಯರು ಕೊಂಡಾಡುತ್ತಿದ್ದರು ॥ ೭೨ ॥ ದಿಗ್ವಿಜಯವನ್ನು ಮುಗಿಸಿದ ರಾಮಲಕ್ಷ್ಮಣರು ಆನೆ, ಕುದುರೆ, ತೇರು, ಕಾಲಾಳುಗಳ ಸೈನ್ಯದಿಂದಲೂ, ಪ್ರಜಾಜನರ ಸಮೂಹದಿಂದಲೂ ಕೂಡಿದವರಾಗಿ, ಬ್ರಾಹ್ಮಣರ ಆಶೀರ್ವಾದವನ್ನು ಪಡೆದುಕೊಂಡು, ಆ ಪಟ್ಟಣವನ್ನು ಹೊಕ್ಕರು. ॥ ೭೩ ॥ ಎಲೈ ಚೇಳಿನಿಯೇ. ಜನರ ಕಣ್ಣುಗಳು ಅವರನ್ನು ನೋಡಿ ದಣಿಯವು. ಮಾತಾಡುವ ನಾಲಗೆಗಳು ಅವರನ್ನು ವರ್ಣಿಸಿ ತೃಪ್ತಿಹೊಂದವು. ಹೀಗಿರಲು ಅವರು ಬಹಳ ಸಂಭ್ರಮದಿಂದ ಬಂದು ಪಟ್ಟಣವನ್ನು ಹೊಕ್ಕರು. ॥ ೭೪ ॥ ಮಂಗಳಗೀತಗಳನ್ನು ಹಾಡುವವರಿಂದಲೂ ಆರತಿಯನ್ನೆತ್ತುವ ಸ್ತ್ರೀಯರ ಮಾತುಗಳಿಂದಲೂ ಕೂಡಿ, ಆ ಮಹಾಪರಾಕ್ರಮಿಗಳಾದ ರಾಮಲಕ್ಷ್ಮಣರು ಶೃಂಗಾರ ಮಾಡಿರುವ ರಾಜಬೀದಿಯ ನಡುವೆ ಬಂದರು ॥ ೭೫ ॥ ಹೀಗೆ ಬಂದು ಪಟ್ಟಣವನ್ನು ಪ್ರವೇಶಿಸಿ ರವಿಕಾಂತದ ಬೀದಿಯಲ್ಲಿ ಬರುತ್ತಿರುವಾಗ. ಹೆಂಗುಸರು ಗುಂಪುಗುಂಪಾಗಿ ಬಂದು ಶ್ರೀರಾಮನಿಗೆ ಆರತಿಗಳನ್ನು ಎತ್ತಿದರು. ॥ ೭೬ ॥ ತಲೆಯ ತುರುಬಿನ ಭಾರಕ್ಕೆ ಕೊರಲೂ, ಮೊಲೆಯ ಭಾರಕ್ಕೆ ಚಿಕ್ಕದಾದ ಸೊಂಟವೂ. ನಿತಂಬದ ಭಾರಕ್ಕೆ ತೊಡೆಗಳೂ ಕುಸಿಯಲು. ಸುಂದರಿಯರಾದ ಹೆಂಗುಸರು ರತಿದೇವಿಯರಂತೆ ನಡೆದರು. ॥ ೭೭ ॥ ತೋರ ಮೊಲೆ. ದೊಡ್ಡ ಮುಡಿ, ಕಣ್ಣ ಓರೆನೋಟ. ಮೆಲುನುಡಿ, ಮನ್ಮಥನ ಆನೆಯಂತೆ ನಿಧಾನವಾದ ನಡಿಗೆ—ಇವುಗಳಿಂದ ಕೂಡಿದ ಸುಂದರಿಯರು ಶ್ರೀರಾಮನಿಗೆ ಆರತಿಯೆತ್ತಿದರು. ॥ ೭೮ ॥ ಸಂತೋಷವನ್ನು ಪ್ರಕಟಿಸುವ ಕಣ್ಣುಗಳುಳ್ಳ, ಭಾವನಾಯುಕ್ತವಾದ ನೋಟವುಳ್ಳ, ಹೊಳೆಯುವ ಗಲ್ಲದಿಂದ ಕೂಡಿದ.

---

[1] ನೋಡುವರ (ಕ). [2] ವೀಥಿಯೊಳವ (ಚ) [3] ಪಿಡಿದು ಪರಿಪ್ಪರಜನ (ಕಿ). [4] × × (ಚ) [5] ಪೆಣ್ಗಳಾರತಿಗಳ ತಂದು । ಪಿಡಿದೆತ್ತಿದರಂದವಗೆ (ಚ) [6] ಕಣ್ಗತಿ ತೋರವಡೆದ ಪೊಜವಾಜಿ । ತೋರಮುತ್ತಿನ ಮೂಕುತಿಯ ಪೆರ್ಗಡಪೂಡಾರತಿಯೆತ್ತಿದರವಗೆ (ಚ)

ಬಟ್ಟಿದುಱುಂಬಿನ ಬಟ್ಟಮೊಲೆಯ ಚೆಲ್ವ । ಬಟ್ಟಮೊಗದ ಬಿಣ್ಪಾದ[1] ॥
ಬಟ್ಟ ಜವ್ವನೆಯರಾರತಿವಿಡಿದವನಿಗೆ । ತೆಟ್ಟೆ ತೆಟ್ಟೆಯೊಳೆತ್ತಿದರು[2] ॥ ೮೦ ॥

ನುಣ್ಣಿದಮಾದ ತೊಡೆಗಳ ನುಣ್ಣೊಸಲಿನ[3] । ನುಣ್ಣಿದಮಡೆದ ಮೊಲೆಗಳ[4] ॥
ನುಣ್ಣಿದ ನುಡಿಯ ನೀಱೆಯರಾರತಿಯ ತಂದು । ಪಣ್ಣೆ ಪಣ್ಣೆಯೊಳೆತ್ತಿತವಗೆ ॥ ೮೧ ॥

ಹಲವು ವರ್ಣಂಗಳ ಹಲವು ಬಂಧಂಗಳ[5] । ಹಲವು ಬಗೆಯ ಬಣ್ಣಗಳ ॥
ಹಲವು ಬಗೆಯೊಳಪ್ಪಾರತಿಗಳ ತಂದು । ಲಲನೆಯರೆತ್ತಿದುದವಗೆ ॥ ೮೨ ॥

ಆರತಿಯಿಂದಲಾರತಿಯ ಪಿಡಿದು ಬಂ । ದಾ ರತಿಸಮದ ನಾರಿಯರು ॥
ಆ ರತಿಯಿಂ ತೊಡವಿತ್ತ[6]ನವರಿಗವ । ನಾ ರತಿಮುಡಿಯ ಮಾಣಿಕಮೆ ॥ ೮೩ ॥

ಕೊಟ್ಟನೊಂದೊಂದು ತೊಡಿಗೆಯ[7] ಬಂಗಾರವ । ಕೊಟ್ಟ ನಾನಾ ಬಣ್ಣಬಗೆಯ ॥
ಪಟ್ಟೆಯ ಸೀರೆಯನಾರತಿಗಳ ತಂ । ದಿಟ್ಟಣಿಸಿದ ಪೆಣ್ಣುಗಳಿಗೆ[8] ॥ ೮೪ ॥

ಬಡವರೊಡೆಯರೆನ್ನದಾರತಿಗಳ ತಂದು । ಪಿಡಿದೆತ್ತಿದ ಪೆಣ್ಣುಗಳಿಗೆ ॥
ಉಡತೊಡಲಿತ್ತವಗವರಿವರೆಣೆಯೆಂದು । ನುಡಿವವರಿಗೆ ದೋಷಬಹುದು[9] ॥ ೮೫ ॥

ಶುಭಯೋಗದೊಳು ಶುಭತಿಥಿಯೊಳು ವಾರದೊಳ್ । ಶುಭತಾರೆಯೊಳು ಶುಭದಿನದಿ ॥
ಶುಭ ಶುಭ ಶುಭವೆನುತಿರೆ ಬಂದು ಪುರವನು । ಶುಭಲಗ್ನದೊಳು ಪೊಕ್ಕರವರು ॥ ೮೬ ॥

---

ಸೊಬಗು ಠೀವಿಗಳಿಂದ ಕೂಡಿದ ಓರೆನೋಟದ ಸ್ತ್ರೀಯರು ಆಗ ಶ್ರೀರಾಮನಿಗೆ ಆರತಿಯೆತ್ತಿದರು. ॥ ೭೯ ॥ ದುಂಡಗಾದ ಮುಡಿಯುಳ್ಳ, ದುಂಡುಮೊಲೆಗಳುಳ್ಳ, ದುಂಡಗಿನ ಮುಖವುಳ್ಳ, ದುಂಡಾಗಿ ಭಾರವಾಗಿರುವ ತಾರುಣ್ಯದಿಂದ ಕೂಡಿದ ಹೆಂಗುಸರು ತಟ್ಟೆಗಳಲ್ಲಿ ಆರತಿಗಳನ್ನು ಹಿಡಿದು ಶ್ರೀರಾಮನಿಗೆ ಎತ್ತಿದರು ॥ ೮೦ ॥ ನುಣ್ಣಗಾಗಿರುವ ತೊಡೆ ಹಣೆ, ಮೊಲೆ ಮಾತುಗಳಿಂದ ಕೂಡಿದ ಚೆಲುವೆಯರು ಆರತಿಗಳನ್ನು ತಂದು ಸಾಲುಸಾಲಾಗಿ ಎತ್ತಿದರು ॥ ೮೧ ॥ ಹಲವು ವರ್ಣಗಳಿಂದಲೂ ಹಲವು ವಿಧದ ರೂಪರಚನೆಯಿಂದಲೂ ಕೂಡಿದ ಹಲವು ಬಗೆಯ ಆರತಿಗಳನ್ನು ತಂದು, ಆ ಹೆಂಗುಸರು, ಶ್ರೀರಾಮನಿಗೆ ಎತ್ತಿದರು ॥ ೮೨ ॥ ಎಲೈ ರತಿದೇವಿಯ ಮುಡಿಯ ರತ್ನದಂತಿರುವ ಚೇಳಿನಿಯೇ, ರತಿದೇವಿಗೆಣೆಯಾದ ಸ್ತ್ರೀಯರು ಪ್ರೀತಿಪೂರ್ವಕವಾಗಿ ಆರತಿಗಳನ್ನು ಹಿಡಿದುಕೊಂಡು ಬಂದು ಎತ್ತಿದಾಗ, ಶ್ರೀರಾಮನು ಅವರಿಗೆ ಪ್ರೀತಿಯಿಂದ ತೊಡಿಗೆಗಳನ್ನು ಕೊಟ್ಟನು ॥ ೮೩ ॥ ಆರತಿಗಳನ್ನು ತಂದು ಗುಂಪು ನೇರಿದ ಹೆಂಗುಸರಿಗೆ ಶ್ರೀರಾಮನು ಒಬ್ಬೊಬ್ಬರಿಗೆ ಒಂದೊಂದರಂತೆ ಚಿನ್ನದ ಆಭರಣಗಳನ್ನೂ ಹಲವಾರು ಬಣ್ಣಗಳ ಪಟ್ಟೆಸೀರಗಳನ್ನೂ ಕೊಟ್ಟನು ॥ ೮೪ ॥ ಆರತಿಗಳನ್ನು ತಂದು ಎತ್ತಿದ ಹೆಂಗುಸರಲ್ಲಿ ಬಡವರು ಶ್ರೀಮಂತರು ಎಂಬ ತಾರತಮ್ಯವನ್ನೆಣಿಸದೆ ಉಡಿಗೆ-ತೊಡಿಗೆಗಳನ್ನು ಕೊಟ್ಟ ಶ್ರೀರಾಮನಿಗೆ ಅವರನ್ನು ಇವರನ್ನು ಸರಿಗಟ್ಟುವವರಿಗೆ ಪಾಪ ಬರುವುದು ॥ ೮೫ ॥ ಶ್ರೀರಾಮಲಕ್ಷ್ಮಣರು ಶುಭಯೋಗ, ಶುಭತಿಥಿ ಶುಭವಾರ ಶುಭ ನಕ್ಷತ್ರ ಶುಭದಿನದಲ್ಲಿ ಬಂದು, ಎಲ್ಲರೂ ‘ಶುಭ ಶುಭ’ ಎಂದು ಹೇಳುತ್ತಿರಲು ಶುಭಲಗ್ನದಲ್ಲಿ ಪಟ್ಟಣವನ್ನು ಪ್ರವೇಶಿಸಿದರು ॥ ೮೬ ॥ ಬ್ರಾಹ್ಮಣರ ಆಶೀರ್ವಾದದಿಂದಲೂ ಸ್ತ್ರೀಯರ ಸುಸ್ವರದಿಂದಲೂ ಶುಭಕರವಾದ

---

[1] ಬಿಣ್ಪೊಗೆದ (ಚ) [2] ತಟ್ಟೆತಟ್ಟೆಯೊಳೆತ್ತಿದರು (ಕ) [3] ನುಣ್ಣಿದ ತೊಡೆಗಳ ನುಣ್ಣಿದ ನೊಸಲ್ಗಳ (ಚ) [4] ಕದಪಿನ (ಚ) [5] ಬಣ್ಣಂಗಳ (ಚ) [6] ತೊಡಲಿತ್ತ (ಚ) [7] ಕೊಟ್ಟನಂದೊಂದು ಮೈದೊಡಿಗೆ (ಚ) [8] ಪೆಣ್ಗಳಿಗೆ (ಚ) [9] ಪಾಪ ಬಹುದು (ಚ)

ಭೂಸುರರುಗಳಾಶೀರ್ವಾದದಿಂದ ವಿ । ಲಾಸಿನೀ ಜನದುಲುಪಿಂದ ॥
ಆ ಶಶಿ ತಾರಾಬಲದಿಂದ ಗೃಹವ ಪ್ರ । ವೇಶವಾದರು ನೃಪವರರು　　॥ ೮೭ ॥

ಅವರ ಸಿರಿಯ ಪೇಳ್ದೊಡೆ ನಾಗೇಂದ್ರನಿ । ಗವರ ಸಂಪದವ ನಿಟ್ಟಿಪೊಡೆ ॥
ದಿವಿಜೇಶನಲ್ಲದುಳಿದ ಮಾನವರಿಗೆ । ಹವಣಿಗೆ ನಿಲುಕದಬ್ಜಾಕ್ಷಿ[1]　　॥ ೮೮ ॥

ನೆರೆದ ಮುಕುಟಬದ್ಧರು ವಿದ್ಯಾಧರ । ದೊರೆಗಳು ವೆಂತರರುಗಳು[2] ॥
ಪರಮ ಸಂತೋಷದಿಂ ರಾಮಲಕ್ಷ್ಮಣರ ತಂ । ದಿರಿಸಿ ಸಿಂಹಾಸನದೊಳಗೆ[3]　　॥ ೮೯ ॥

ಕೋವಿದೆ ಕೇಳು ಕನಕ ಕುಂಭದೊಳು ಹಾಲ । ತೀವಿ ತಂದವುರರು ಕೂಡಿ ॥
ಆ ವಿಭುಗಳಿಗಭಿಷೇಕವ ಮಾಡಿದ । ರೇವಣ್ಣಿಸುವೆ ಜಗದೊಳಗೆ　　॥ ೯೦ ॥

ಸಾವಿರದೆಂಟು ಸುವರ್ಣಕುಂಭಗಳಿಗೆ । ತೀವಿ ನಿರ್ಮಲವಾದ ಜಲವ ॥
ಆ ವಿಭುಗಳಿಗಭಿಷೇಕ ಮಾಡಿದರಂ । ದೇವಣ್ಣಿಸುವೆ ಕೇಳು ಬಳಿಕ　　॥ ೯೧ ॥

ರಾಮಕೇಶವರು ನೀವೀರ್ವರು ಭರತದ । ಸೀಮೆಯ ಮೂಱು ಖಂಡವನು ॥
ಪ್ರೇಮದೊಳಾಳಿ ಸುಖದೊಳಿರಿಯೆಂದು ತ । ಮ್ಮಾ ಮಣಿಮುಕುಟವನೆಱಗಿ　　॥ ೯೨ ॥

ಪರಮಾಶೀರ್ವಾದದಿಂದಂದೊಯ್ಯನೆ । ಪರಸಿಯವರನಾ ನೃಪರು ॥
ನೆರೆದಿರಲವರಿಗುಚಿತ ಪುಡುಗೊಱೆಯನಾ । ಧರಣೀಶನಿತ್ತ ಕೇಳಬಲೆ　　॥ ೯೩ ॥

ಖೇಚರೇಶರಿಗೆ ತಕ್ಕುಡುಗೊಱೆಗಳ ನೃಪ । [4]ಭೂಚರರಿಗೆ ತಕ್ಕಂತೆ ॥
ಯಾಚಕರಿಗೆ[4] ಕೊಟ್ಟು ಕಳುಹಿದ ವಿನಯದ । ವಚನವ ನುಡಿದು ರಾಘವನು[5]　　॥ ೯೪ ॥

---

ಚಂದ್ರಬಲ-ತಾರಾಬಲಗಳಿಂದ ಕೂಡಿ ಆ ರಾಜರು (ರಾಮಲಕ್ಷ್ಮಣರು) ಪಟ್ಟಣವನ್ನು ಪ್ರವೇಶಿಸಿದರು. ॥ ೮೭ ॥ ಎಲೈ ಚೇಳಿನಿಯೇ, ಅವರ ಐಶ್ವರ್ಯವನ್ನು ವರ್ಣಿಸಬೇಕಾದರೆ ಮಹಾಶೇಷನೇ ಆಗಬೇಕು. ಅವರ ಸಂಪತ್ತನ್ನು ನೋಡಬೇಕಾದರೆ ಸಾವಿರ ಕಣ್ಣುಗಳಿರುವ ದೇವೇಂದ್ರನಿಗೇ ಸಾಧ್ಯ. ಉಳಿದ ಮನುಷ್ಯರಿಗೆ ನಿಲುಕದ ಸಂಗತಿಯದು. ॥ ೮೮ ॥ ಅಲ್ಲಿ ಬಂದು ಸೇರಿದ ಕಿರೀಟಾಧಿಪತಿಗಳೂ ವಿದ್ಯಾಧರರಾಜರೂ ವ್ಯಂತರರೂ ರಾಮಲಕ್ಷ್ಮಣರನ್ನು ಅತ್ಯಂತ ಸಂತೋಷದಿಂದ ಸಿಂಹಾಸನದಲ್ಲಿ ಕುಳಿತುಗೊಳಿಸಿದರು. ॥ ೮೯ ॥ ಎಲೈ ಚೇಳಿನಿಯೇ ಕೇಳು ' ಆ ಮೇಲೆ ಅವರು ಚಿನ್ನದ ಕಲಶಗಳಲ್ಲಿ ಹಾಲನ್ನು ತುಂಬಿಸಿ ತಂದು. ದೇವತೆಗಳ ಸಹಿತವಾಗಿ ರಾಮಲಕ್ಷ್ಮಣರಿಗೆ ಅಭಿಷೇಕವನ್ನು ಮಾಡಿದರು. ಇದನ್ನು ಲೋಕದಲ್ಲಿ ಏನೆಂದು ವರ್ಣಿಸಲಿ ! ॥ ೯೦ ॥ ಸಾವಿರದ ಎಂಟು ಚಿನ್ನದ ಕಲಶಗಳಲ್ಲಿ ಶುದ್ಧವಾದ ನೀರನ್ನು ತುಂಬಿಸಿ ರಾಮಲಕ್ಷ್ಮಣರಿಗೆ ಅಭಿಷೇಕ ಮಾಡಿದರು. ಅದನ್ನು ನಾನು ಏನೆಂದು ವರ್ಣಿಸಲಿ ! ॥ ೯೧ ॥ ರಾಜರುಗಳು ಬಂದು, ತಮ್ಮ ರತ್ನಮಯ ಕಿರೀಟಗಳನ್ನು ಬಗ್ಗಿಸಿ —' ರಾಮ ಮತ್ತು ಕೇಶವರಾದ ನೀವಿಬ್ಬರೂ ಭರತಭೂಮಿಯ ಮೂರು ಖಂಡಗಳನ್ನು ಪ್ರೀತಿಯಿಂದ ಆಳುತ್ತ. ಸುಖವಾಗಿರಿ" ಎಂದು ಹೇಳಿದರು. ॥ ೯೨ ॥ ಎಲೈ ಚೇಳಿನಿಯೇ, ಹೀಗೆ ರಾಜರುಗಳು ಶ್ರೇಷ್ಠವಾದ ಆಶೀರ್ವಚನಗಳಿಂದ ಹರಸಿದರು ಆಗ ಶ್ರೀರಾಮನು ಅವರಿಗೆಲ್ಲಾ ಯೋಗ್ಯವೆನಿಸುವ ಉಡುಗೊರೆಗಳನ್ನಿತ್ತನು ॥ ೯೩ ॥ ಖೇಚರ ರಾಜರಿಗೂ. ಭೂಲೋಕದ ರಾಜರುಗಳಿಗೂ. ಬೇಡುವವರಿಗೂ ಅವರವರಿಗೆ ಉಚಿತವಾದ ಉಡುಗೊರೆಗಳನ್ನು ಕೊಟ್ಟು ವಿನಯದ ಮಾತುಗಳನ್ನಾಡಿ. ಶ್ರೀರಾಮನು ಕಳುಹಿಸಿ ಕೊಟ್ಟನು ॥ ೯೪ ॥ ಎಲೈ ವಿಶಾಲಾಕ್ಷಿ ಚೇಳಿನಿಯೇ. ಶ್ರೀರಾಮನು

---

[1] ಹವಣಿಲ್ಲ ಹರಿಣಾಂಕವದನೆ (ಚ)　[2] ವ್ಯಂತರರುಗಳು (ಚ)　[3] ತಂದಿರಿಸಿದರ್ ಸಿಂಹಾಸನದೊಳು (ಚ)　೯೧ ಈ ಪದ್ಯ ಕದಲ್ಲಿಲ್ಲ.
[4] ನಿಜಯುಕ್ತಿ ತಕ್ಕತಕ್ಕಂತೆ । ಪ್ರಚುರತೆಯಿಂ (ಚ).　[5] ವಿನಯದಿ । ಭೂಚಕ್ರದೊಳು ಸಂಯಮಾನು (ಕ).

ಮೂಱು ಬೀದಿಯ ವೆಂತರ[1]ರಿಗುಡುಗೊಱೆಗೊಟ್ಟು । ಮೀಱಿ ನಡೆಯಬೇಡವೆಂದು[2] ॥
ಕೇಱಿ ನುಡಿದು ಕಳುಪಿದ ಕಿವಿಗಳ ಬಂದು । ಮೀಱುವ ಕಂಗಳ ಕಾಂತೆ ॥ ೯೫ ॥

ರತ್ನದಿಂ ಸಮೆದ ಜಂಗಾರವ ಕೆಲರಿಗೆ । ರತ್ನದ ಪಲ್ಲಕ್ಕಿಗಳ ॥
ರತ್ನದ ಕುಂಡಲಗಳ ಕೊಟ್ಟು ಕಳುಪಿದ । ಪತ್ನಿ ಲಾಲಿಸು ರಾಮಚಂದ್ರ ॥ ೯೬ ॥

ಕರ್ಪೂರವೀಟಿಕೆಗೂಡಿಯುವರ ಮನ । ವೊಪ್ಪುವಂತುಡುಗೊಱೆಗೊಟ್ಟು ॥
ತಪ್ಪದೆ ನಡೆಯಿರಿಯೆಂದವರಿಗೆ ಪೇಳಿ । ಯೊಪ್ಪಿ ಕಳುಪಿದ ಮನ್ನೆಯರ ॥ ೯೭ ॥

ನಲ್ಲಂಡಿಗೆಯ ಸೀಮೆಯ ಕೆಲಬರಿಗವ । ಪಲ್ಲಕ್ಕಿಯನರೆಬರಿಗೆ ॥
ನಲ್ಲವೆಣ್ಗಳ[3] ನೃಪರಿಚ್ಚೆಯಱಿದು ಕೊ । ಟ್ಟೆಲ್ಲರ ಕಳುಪಿದನಬಲೆ ॥ ೯೮ ॥

ಸಾಹಸಗೊಂಡ ದೊರೆಗಳಱಿದವರಿಗೆ ಬಾಹು । ಪೂರಗಳಾದಿಯಾದ[4] ॥
ಬಾಹುಳ್ಯಮಪ್ಪ ಜಂಗಾರವ ಕೊಟ್ಟವ । ನೋಹದಿಂ ಕಳುಪಿದನವರ ॥ ೯೯ ॥

ವಾರಣಘಟೆಗಳ ಕೆಲರಿಗೆ ತೇಜದ । ವಾರುವಗಳನರೆಬರಿಗೆ[5] ॥
ಹಾರ ಪದಕ ಸೆಂಡೆಯ ಲುಳಿಕೊಟ್ಟು ಮ । ತ್ತಾ[6] ರಾಮ ಕಳುಪಿದನವರ ॥ ೧೦೦ ॥

ಚಿನ್ನದ ಹರಿವಾಣ ಹರವಿ ಕೊಪ್ಪರಿಗೆಯ । ಚಿನ್ನದ ಕಾಲ[7] ಮಂಚಗಳ ॥
ಮನ್ನೆಯರಿಗೆ ಕೊಟ್ಟು ದುರ್ಗಾಧಿಪರನು[8] । ಮನ್ನಿಸಿ ಕಳುಪಿದನಬಲೆ[9] ॥ ೧೦೧ ॥

ಗಡಿಯ ಮನ್ನೆಯರಿಗೆ ನಾಯಕರಿಗೆಯುಂ । ಕಡುಪುಳ್ಳ ಬಲುದೊರೆಗಳಿಗೆ ॥
ಕಡಗ[10] ಕಂಠಾಭರಣವ ಕೊಟ್ಟು ಕಳುಪಿದ । ಪಡಿಯಾರಂಬುಜನೇತ್ರೆ[10] ॥ ೧೦೨ ॥

---

ಮೂರು ಬೀದಿಗಳಲ್ಲಿರುವ ವ್ಯಂತರರಿಗೆಲ್ಲ ಉಡುಗೊರೆಗಳನ್ನಿತ್ತು, ಅವರು ಯಾರೂ ಮೀರಿ ನಡೆಯಕೂಡದೆಂದು ಕಟ್ಟಾಜ್ಞೆ ಮಾಡಿ, ಕಳುಹಿಸಿದನು ॥ ೯೫ ॥ ಶ್ರೀರಾಮನು ಕೆಲವರಿಗೆ ರತ್ನಖಚಿತವಾದ ಚಿನ್ನದ ತೊಡಿಗೆಗಳನ್ನೂ, ಕೆಲವರಿಗೆ ರತ್ನದ ಪಲ್ಲಕಿಗಳನ್ನೂ, ಕೆಲವರಿಗೆ ರತ್ನದ ಕುಂಡಲಗಳನ್ನೂ ಕೊಟ್ಟು ಕಳುಹಿಸಿದನು ॥ ೯೬ ॥ ಜನನಾಯಕರಿಗೆಲ್ಲ ಮನಸ್ಸಿಗೆ ಮೆಚ್ಚುಗೆಯಾಗುವಂತೆ ಕರ್ಪೂರದ ವೀಳ್ಯದೊಡನೆ ಉಡುಗೊರೆಗಳನ್ನು ಕೊಟ್ಟು, ತಪ್ಪದೆ ನಡೆಯಿರಿ—ಎಂದು ಅವರಿಗೆ ಹೇಳಿ, ಕಳುಹಿಸಿದನು ॥ ೯೭ ॥ ಎಲೈ ಚೆಲುವೆಯೇ, ಶ್ರೀರಾಮನು ಕೆಲವರಿಗೆ ಸರಿಯಾದ ಮೇರೆಗಳಿಂದ ಮುದ್ರಿತವಾದ ಸೀಮೆಗಳನ್ನೂ, ಕೆಲವರಿಗೆ ಪಲ್ಲಕ್ಕಿಗಳನ್ನೂ, ಕೆಲವರಿಗೆ ಅವರ ಇಚ್ಛೆಯನ್ನು ತಿಳಿದು ಒಳ್ಳೆಯ ಸ್ತ್ರೀಯರನ್ನೂ ಕೊಟ್ಟು, ಎಲ್ಲರನ್ನೂ ಕಳುಹಿಸಿದನು ॥ ೯೮ ॥ ಸಾಹಸಿಗಳಾಗಿದ್ದ ರಾಜರನ್ನು ತಿಳಿದು, ಅವರಿಗೆ ತೋಳಿನ ಬಳೆಗಳೇ ಮೊದಲಾದ ಬಹುವಿಧ ಆಭರಣಗಳನ್ನು ಕೊಟ್ಟು, ಪ್ರೀತಿಯಿಂದ ಕಳುಹಿಸಿದನು ॥ ೯೯ ॥ ಶ್ರೀರಾಮನು ಕೆಲವರಿಗೆ ಆನೆಗಳ ಹಿಂಡನ್ನೂ, ಕೆಲವರಿಗೆ ಒಳ್ಳೆಯ ತ್ವರಿತವೇಗದ ಕುದುರೆಗಳನ್ನೂ, ಇನ್ನು ಇತರರಿಗೆ ಹಾರ, ಪದಕ, ಕಾಲ್ತೊಡಿಗೆ, ಲುಳಿ—ಮುಂತಾದ ಆಭರಣಗಳನ್ನು ಕೊಟ್ಟು ಕಳುಹಿಸಿದನು ॥ ೧೦೦ ॥ ಮುಖಂಡರಿಗೆಲ್ಲ ಚಿನ್ನದ ಹರಿವಾಣ ಹರವಿ ಕೊಪ್ಪರಿಗೆ, ಚಿನ್ನದ ಕಾಲಿನ ಮಂಚ—ಮುಂತಾದುವನ್ನು ಕೊಟ್ಟು, ದುರ್ಗದ ಅಧಿಕಾರಿಗಳಿಗೆ ಮರ್ಯಾದೆ ಮಾಡಿ, ಕಳುಹಿಸಿದನು ॥ ೧೦೧ ॥ ಎಲೈ ಚೆಲುವೆಯೇ, ಶ್ರೀರಾಮನು ತನ್ನ ಸೀಮೆಯ ಗಡಿಯಲ್ಲಿರುವ ಜನನಾಯಕರಿಗೂ ಇತರ ಮುಖಂಡರಿಗೂ ಬಹಳ ಪರಾ

---

[1] ವ್ಯಂತರ (ಬಿ) [2] ನಡೆಯಬೇಡೆಂದು (ಬಿ) [3] ನಲ್ಲಮೆಂಗಳ (ಬಿ). [4] ಬಾಹುಪೂರಾದಿಗಳಂದ (ಬಿ) [5] ಕೆಲಬರಿಗೆ (ಬಿ) [6] ಲುಳಿ ಸರಪಿತ್ತಾ (ಬಿ) [7] ಕಾಲ್ (ಬಿ) [8] ದುರ್ಗಾಧಿಪತಿಗಳ (ಬಿ) [9] ಕಳುಪಿದನನು (ಬಿ) [10] ಕಂಕಣ ಕಂಠಸರಾಳಿ ಮುತ್ತಿನ ಬಟ್ಟು । ಕೊಟ್ಟ ಚಿತ್ರವರ ಕಳುಪಿದ (ಬಿ).

ಕೂಟದ ಮನ್ನೆಯರುಗಳನಱಿದು[1] ಹೊಱ । ಲೂಟಿಯ ದೊರೆಗಳನಱಿದು ॥
ನೋಟಕರನು[2] ನೋಡಿ ಕೊಟ್ಟನು ಕರ್ಪೂರ । ವೀಟಕೆಯಿಂದುಡುಗೊಱೆಯ ॥ ೧೦೩ ॥

ಕೊಟ್ಟನು ವಿದ್ವಾಂಸರಿಗುಡುಗೊಱೆಗಳ । ಪಟ್ಟೆ ಹಚ್ಚಡ ವಾದಿಗಳಿಗೆ[3] ॥
ಕೊಟ್ಟನಕ್ಕರಿಗ ಪಾಠಕರಿಗುಚಿತಗಳ । ಕೊಟ್ಟು ಕಳುಹಿದನೆಲ್ಲರಿಗೆ ॥ ೧೦೪ ॥

ದಣಿದುದು ಸಕಲ ದೊರೆಗಳು ಯಾಚಕಜನ । ದಣಿದುದು ಸರ್ವಸಮಸ್ತ ॥
ದಣಿಯಿತು ಸರ್ವರು ಕೈಯಾಂತು ಕೊಟ್ಟಿಂದು[4] । ದಣಿದುದಿಲ್ಲಾ ರಾಮಚಂದ್ರ ॥ ೧೦೫ ॥

ವೀರಪುರುಷನಾದುದೊ ವಿತರಣಗುಣ । ಶ್ರೀರಾಮನಾಗಿ ಪುಟ್ಟಿದುದೊ ॥
ಚಾರುವಿನಯ ತನುವಾಂತುದೊ ಭಾಪೆಂ । ದಾ ರಾಮನ ಕೀರ್ತಿಸುವರು ॥ ೧೦೬ ॥

ಎರೆದೊಡೆ ಚಿಂತಿಸಿದೊಡೆ ಕಾಮಿಸಲು ಸುರ । ತರು ಮಣಿ ಪಶು ಕೊಟ್ಟಪುದು ॥
ಎರೆಯದೆ ನೆನೆಯದೆ ಕಾಮಿಸದರಿಗೀವ । ದೊರೆಗವು ಸರಿಬಂದಪವೆ ॥ ೧೦೭ ॥

ಕೊಡಲಱಿಯದೆ ಕೊಳಲಱಿಯದೆ ವಿನಯವ । ನುಡಿಯಲಱಿಯದೆ ಮನುಜರ ॥
ನಡಸಿಕೊಂಬುದನಱಿಯದೆ ನರಪತಿಯ ಕೈ । ವಿಡಿವಳೆ ಸಿರಿವೆಣ್ಣು ಬಂದು ॥ ೧೦೮ ॥

ದಯವಿಲ್ಲದ ದಾಕ್ಷಿಣ್ಯವಿಲ್ಲದ ನೀತಿ । ನಯವಿಲ್ಲದ ದುರಿತದಲಿ ॥
ಭಯವಿಲ್ಲದ ನರನಾಥಗೊಲಿದು ಬಂದು । ಜಯವೆಣ್ಣು ಜಯಿಸಿ ಬಂದಪಳೆ ॥ ೧೦೯ ॥

ಹೆಚ್ಚಿ ನಡೆದು ಹೊನ್ನು ಹಣ ವಸ್ತ್ರಂಗಳ । ವೆಚ್ಚವ ಮಾಡದೆ ನೆಲದಿ[5] ॥
ಬೆಚ್ಚುಕೊಂಡಿದ್ದರಸರ ಕಂಡಿಂದಿರೆ । ಮಚ್ಚಿ ಬಪ್ಪಳೆ[6] ಮಧುರಾಕ್ಷಿ ॥ ೧೧೦ ॥

---

ಕ್ರಮಿಗಳಾವ ರಾಜರಿಗೂ ಕಡಗ, ಕೊರಳಿನ ಆಭರಣ—ಮುಂತಾದುವನ್ನು ಕೊಟ್ಟು ಕಳುಹಿದನು ಅವನಿಗೆ ಎಣೆಯೆನಿಸುವವರು ಯಾರಿರುವರು? ॥ ೧೦೨ ॥ ತನ್ನ ಒಡನಾಟದ ಜನನಾಯಕರನ್ನು ತಿಳಿದು, ಹೊರನಾಡುಗಳಲ್ಲಿ ತೊಂದರೆಗಳನ್ನು ಮಾಡತಕ್ಕ ರಾಜರುಗಳನ್ನೂ ತಿಳಿದು, ನೋಟಕ್ಕೆ ಒದಗುವವರನ್ನೂ ನೋಡಿ, ಕರ್ಪೂರದ ವೀಳ್ಯದೊಡನೆ ಉಡುಗೊರೆಗಳನ್ನು ಕೊಟ್ಟನು. ॥ ೧೦೩ ॥ ವಿದ್ವಾಂಸರಿಗೆ ಉಡುಗೊರೆಗಳನ್ನಿತ್ತನು ವಾದಿಗಳಿಗೆ ಪಟ್ಟೆಯ ಹಚ್ಚಡಗಳನ್ನೂ ವಿದ್ಯಾವಂತರಿಗೆ ಪಾಠಕರಿಗೆ ಉಚಿತವಾದುದನ್ನೂ ಕೊಟ್ಟು ಕಳುಹಿಸಿದನು ॥ ೧೦೪ ॥ ಶ್ರೀರಾಮನು ಹೀಗೆ ಕೊಟ್ಟುದರಿಂದ ಎಲ್ಲಾ ದೊರೆಗಳೂ, ಬೇಡುವ ಜನರೂ ಎಲ್ಲರೂ ತೃಪ್ತಿ ತಾಳಿದರು. ಆದರೆ ಶ್ರೀರಾಮನು ಇಷ್ಟೆಲ್ಲ ಕೊಟ್ಟು ಮತ್ತೂ ತೃಪ್ತಿ ತಾಳಲಿಲ್ಲ. ॥ ೧೦೫ ॥ ವೀರತ್ವವೇ ಗಂಡುರೂಪವನ್ನು ತಾಳಿತೋ ! ದಾನವೆಂಬ ಸದ್ಗುಣವೇ ಶ್ರೀರಾಮನಾಗಿ ಹುಟ್ಟಿತೋ ! ಮನೋಹರವಾದ ವಿನಯಗುಣವೇ ದೇಹಧಾರಣೆ ಮಾಡಿತೋ ! ಭಾಪು!—ಎಂದು ಆ ಶ್ರೀರಾಮನನ್ನು ಎಲ್ಲರೂ ಕೊಂಡಾಡುತ್ತಿದ್ದರು. ॥ ೧೦೬ ॥ ಬೇಡಿದರೆ ಕಲ್ಪವೃಕ್ಷವೂ, ಚಿಂತಿಸಿದ ಮಾತ್ರಕ್ಕೆ ಚಿಂತಾಮಣಿಯೂ, ಬಯಸಿದರೆ ಕಾಮಧೇನುವೂ ಬೇಕಾದುದನ್ನು ಕೊಡುವವು. ಆದರೆ ಬೇಡದೆ, ಚಿಂತಿಸದೆ, ಬಯಸದೆ ಕೊಡತಕ್ಕ ಶ್ರೀರಾಮನಿಗೆ ಅವು ಎಣೆಯಾಗುವವೆ? ॥ ೧೦೭ ॥ ಕೊಡಲೂ, ಕೊಳ್ಳಲೂ, ವಿನಯವನ್ನು ನುಡಿಯಲೂ. ಪ್ರಜಾಜನರನ್ನು ನಡೆಸಿಕೊಳ್ಳಲೂ ತಿಳಿಯದಿರುತ್ತಿದ್ದರೆ. ಆ ಶ್ರೀರಾಮನನ್ನು ಸಂಪತ್ತೆಂಬ ಹೆಣ್ಣು ಕೈಹಿಡಿಯುತ್ತಿದ್ದಳೆ? ॥ ೧೦೮ ॥ ದಯೆ. ದಾಕ್ಷಿಣ್ಯ. ನೀತಿ. ವಿನಯ. ಪಾಪಭೀರುತ್ವ—ಎಂಬ ಗುಣಗಳಿಲ್ಲದಿರುವ ರಾಜನನ್ನು ಮೆಚ್ಚಿ. ಎಂದಾದರೂ ಜಯಾಂಗನೆಯು ಬಂದು ನೆಲಸುವಳೆ? ॥ ೧೦೯ ॥ ಎಲ್ಲೈ

---

[1] ಮೀಟಿನ ದೊರೆವೊರೆದೊರೆಗಳಱಿದು (ಕ). [2] ನೋಟದವರ (ಚ). [3] ವಿದ್ವಾಂಸರಿಗೆ ವಿನಯದೊಳು । ಕೊಟ್ಟನು ಕವಿ ವಾದಿಗಳಿಗೆ (ಚ). [4] ದಣಿಯಿತುಚಿತಮುಡುಗೊಱೆಯಾಂತು ಕೊಟ್ಟುದು (ಚ) [5] ಮಾಡಲಱಿಯದೆ (ಚ) [6] ಬರ್ಪಳೆ (ಚ).

ಸಿರಿ ಜಸ ಜಯವೆಂಬ್ಬ ಪ್ರೌಢೆಯರಲ್ಲವೆ । ಪುರುಷ ಪಕ್ಷಕೆ ಸೋಲುವರೆ ॥
ವರಗುಣ ಪಕ್ಷಕೆ ಸೋಲ್ತುಗುಣಿಯನಾ । ವರಿಸಿಕೊಂಡಿಹರನವರತ ॥ ೧೧೧ ॥

ತರಳಾಕ್ಷಿ ಕೇಳು ನೆರೆದ ನೃಪರೆಲ್ಲರು । ತೆರಳಿತು ತಂತಮ್ಮ ಪುರಕೆ ॥
ವಿರಚಿಸುವೆನು ರಾಮಲಕ್ಷ್ಮಣ ನೃಪತಿಯ । ಸಿರಿಯ ವಿಸ್ತರವ[1] ಲಾಲಿಪುದು ॥ ೧೧೨ ॥

ಚದುರೆ ಕೇಳ್ ಪೃಥ್ವೀ ಸೌಂದರಿ ಮೊದಲಾದ । ಸುದತಿಯರಾ ಲಕ್ಷ್ಮಣಗೇ ॥
ಹದಿನಾಱು ಸಾವಿರವಿಹುದತಿ ಚೆಲ್ವಿನ । ಸದನವೆಂಬಂತೆ ರಾಜಿಸುತ[2] ॥ ೧೧೩ ॥

ಆ ವಿಭು ರಾಮಚಂದ್ರಮನಿಗೆ ಸೀತಾ । ದೇವಿ ತಾ ಮೊದಲಾದೆಂಟು ॥
ಸಾವಿರ ಪೆಣ್ಗಳಿಹರು ರೂಪಿಗೆಯಾ । ದೇವಸತಿಯರನಲ್ಲೆನುತ ॥ ೧೧೪ ॥

ಪದಿನಾಱು ಸಾವಿರ ಮಕುಟಬದ್ಧರು ಕೇಳು । ಪದಿನಾರು ಸಾವಿರ ವಿಷಯ ॥
ಒದವಿದೊಂಬತ್ತು ಸಾಸಿರದೆಂಟುನೂಱೆಪ್ಪ । ತ್ತದೆ ದ್ರೋಣಾಮುಖವವಗೆ ॥ ೧೧೫ ॥

ನಗರವಿಪ್ಪತ್ತೈದು ಸಾಸಿರ ಖರ್ವಡ । ಮಿಗೆ ಪನ್ನೆರಡು ಸಾಸಿರವು ॥
ಮಿಗಗಣ್ಣಬಲೆ ಕೇಳೀರಾಱು ಸಾಸಿರ ಮಡಂ । ಬಗಳು ಬಳಸಿಹವಾ ನೃಪಗೆ ॥ ೧೧೬ ॥

ದೇವಿಯೆ ಕೇಳು ಭಾವಿಸಿ ನೋಡಲಾ ಸುರ । ದೇವ ಸತಿಯರು ಮತ್ತೆಂಟು ॥
ಸಾವಿರ ಪೆಣ್ಗಳಿಹರು ರೂಪಿಗೆಣೆಯಾರು । ಭಾವಜ ಸತಿಯಂತಿಹರು ॥ ೧೧೭ ॥

ಆ ದೇವಸತಿಯರ ಗೆಲ್ವ ರೂಪಿನ ಚೆಲ್ವ । ಭೂದೇವಿಯರು ಮತ್ತೆಂಟು ॥
ಆದ ಸಾವಿರ ಸತಿಯರುಗೂಡಿ ಸುಖದೊಳ । ಗಾ ಧರಣೀಪಾಲನಿಹನು ॥ ೧೧೮ ॥

---

ಚೇಳಿನಿಯೇ ಗರ್ವದಿಂದ ವರ್ತಿಸಿ, ಧನ-ಕನಕ-ವಸ್ತ್ರಗಳನ್ನು ದಾನಮಾಡದೆ, ರಾಜ್ಯಾಧಿಕಾರಕ್ಕೆ ಅಂಟಿಕೊಂಡಿರುವ ರಾಜರನ್ನು ಕಂಡು, ಲಕ್ಷ್ಮೀದೇವಿಯು ಮೆಚ್ಚಿ ಬರಲಾರಳು ॥ ೧೧೦ ॥ ಸಂಪತ್ತು, ಕೀರ್ತಿ, ಜಯ—ಎಂಬ ಸ್ತ್ರೀಯರು ಪ್ರೌಢೆಯರಾಗಿರುತ್ತಾರೆ ಅವರು ಸುಮ್ಮನೆ ಗಂಡಸರಿಗೆ ವಶರಾಗುವವರಲ್ಲ ಶ್ರೇಷ್ಠವಾದ ಗುಣಗಳಿದ್ದಲ್ಲಿ ಮಾತ್ರ ಅವರು ಆಕರ್ಷಿತರಾಗಿ, ಗುಣವಂತರಾದವರನ್ನು ವರಿಸುವರು ॥ ೧೧೧ ॥ ಎಲೈ ಚೇಳಿನಿಯೇ, ಕೇಳು ಅಯೋಧ್ಯೆಯಲ್ಲಿ ಬಂದು ಸೇರಿದ ರಾಜರೆಲ್ಲರೂ ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದರು ಇನ್ನು ಆ ಶ್ರೀರಾಮ ಲಕ್ಷ್ಮಣರಾಜರ ಐಶ್ವರ್ಯದ ವಿಸ್ತಾರವನ್ನು ತಿಳಿಸುವೆನು, ಕೇಳು ॥ ೧೧೨ ॥ ಚದುರೆಯಾದ ಚೇಳಿನಿಯೇ, ಕೇಳು ಆ ಲಕ್ಷ್ಮಣನಿಗೆ ಪೃಥ್ವೀಸೌಂದರಿ ಮೊದಲಾದ ಹದಿನಾರು ಸಾವಿರ ಹೆಂಡಿರು, ಸೌಂದರ್ಯದ ಮನೆಯೋ ಎಂಬಂತೆ ಶೋಭಿಸುತ್ತ ಇದ್ದರು ॥ ೧೧೩ ॥ ರಾಜನಾದ ಶ್ರೀರಾಮನಿಗೆ ಸೀತಾದೇವಿ ಮೊದಲಾದ ಎಂಟು ಸಾವಿರ ಮಂದಿ ಹೆಂಡಿರಿದ್ದರು ಅವರು ಸೌಂದರ್ಯದಲ್ಲಿ ದೇವತಾಸ್ತ್ರೀಯರನ್ನು ಅಲ್ಲಗಳೆಯುತ್ತಿದ್ದರು ॥ ೧೧೪ ॥ ಆ ರಾಮನಿಗೆ ಹದಿನಾರು ಸಾವಿರ ಕಿರೀಟಧಾರಿಗಳಾದ ಅಧೀನರಾಜರೂ, ಹದಿನಾರು ಸಾವಿರ ನಾಡುಗಳೂ ಒಂಬತ್ತು ಸಾವಿರದ ಎಂಟುನೂರ ಎಪ್ಪತ್ತು ದ್ರೋಣಾಮುಖಗಳೂ ಇದ್ದವು ॥ ೧೧೫ ॥ ಇಪ್ಪತ್ತೈದು ಸಾವಿರ ಪಟ್ಟಣಗಳೂ ಹನ್ನೆರಡು ಸಾವಿರ ಖರ್ವಡಗಳೂ, ಹನ್ನೆರಡು ಸಾವಿರ ಮಡಂಬಗಳೂ ಸೇರಿದ್ದವು ॥ ೧೧೬ ॥ ಚೇಳಿನಿಯೇ ಕೇಳು ಯೋಚಿಸಿ ನೋಡಿದರೆ ರಾಮನಿಗೆ ಚೆಲುವೆಯರಾದ ದೇವತಾಸ್ತ್ರೀಯರು ಎಂಟು ಸಾವಿರ ಮಂದಿ ಹೆಂಡಿರು ಇದ್ದರು ರೂಪಿನಲ್ಲಿ ಅವರು ರತಿದೇವಿಯಂತಿದ್ದರು ॥ ೧೧೭ ॥ ದೇವತಾಸ್ತ್ರೀಯರನ್ನು ಗೆಲ್ಲುವ ಸೌಂದರ್ಯ

---

[1] ವಿಸ್ತರಿಪೆ (ಕ) [2] ಪೆಣ್ಗಳು । ವಿದುಮುಖಿಯರು ರಾಜಿಸುವರು (ಕ) ೧೧೪, ೧೧೫, ೧೧೬ ಇವು ಕದಲ್ಲಿಲ್ಲ ೧೧೭, ೧೧೮ ಇವು ಚದಲ್ಲಿಲ್ಲ

ಪತ್ತನ ಮೂರು ಲಕ್ಷವು ದ್ರೋಣಾಮುಖ । ಹತ್ತು ಲಕ್ಷವು ಗಿರಿದುರ್ಗ ॥
ಹತ್ತು ಲಕ್ಷವು ಜಲದುರ್ಗೋನ ದುರ್ಗವ । ವತ್ತಿಯಾಳಿದರಾ ನೃಪರು ॥ ೧೧೯ ॥

ಅಗಣಿತಮಪ್ಪಂಥ ರತ್ನಸಿಂಹಾಸನ । ವಿಂಗೆ ಪನ್ನೆರಡು ಸಾವಿರವು ॥
ವಿಂಗಗಣ್ಣಬಲೆ ಕೇಳೀರಾರು ಸಾವಿರ ಪಡ । ಬಗಳಿಹವಾ ನೃಪವರಗೆ ॥ ೧೨೦ ॥

ಉಂಟೆಂಟು ಸಾವಿರ ಖೇಡವೆಂತರ[1] ದ್ವೀಪ । ವುಂಟು ಸಾಸಿರ ಖರ್ವಡವು[2] ॥
ಎಂಟು ಕೋಟಿಯು[3] ಗ್ರಾಮಗಳಿಹವವರಿಗಿ । ನ್ನುಂಟಾದವ[4] ಪೇಳ್ವೆನಬಲೆ ॥ ೧೨೧ ॥

ಕರಿಗಳು ನಾಲ್ವತ್ತೆರಡು ಲಕ್ಷ[5]ವನಿತುಂಟು । ವರರಥವೊಂಬತ್ತು ಕೋಟಿ ॥
ತುರಗ ಕಾಲಾಳ್ಗಳು ಮೂವತ್ತೆರಡು[6] ಕೋಟಿ । ನೆರೆದಿಹುದವರಿಗಬ್ಜಾಕ್ಷಿ ॥ ೧೨೨ ॥

ತರುಣಿ ಕೇಳೆಂಟು ಸಾಸಿರ ಗಣಬದ್ಧ[7] ದೇ । ವರುಗಳಿಗೊಡೆಯು ತಾನೆನಿಸಿ ॥
ಇರುತಿರ್ಪರವರ ಕೈಸಾರ್ದ ಕೈದುವ ನಾ । ನೊರೆವೆನು ಲಾಲಿಪುದೊಲಿದು ॥ ೧೨೩ ॥

ಇರದಪರಾಜಿತ ಹಲ ಮೋಘವೆಂದೆಂಬ । ಶರ ಕೌಮುದಿಯೆಂಬ ಗದೆಯು ॥
ವರ ರತ್ನಾವತಂಸಕವೆಂಬ ಮಾಲೆಯು । ಚ್ಚರಿಯಿಂದ ನೆರೆದೀ ನಾಲ್ಕು ॥ ೧೨೪ ॥

ಬಂದಿರೆ ರಾಮಚಂದ್ರಮನಿಗೆಯುದಕೊಂ । ದೊಂದಕ್ಕೆ [8]ಯಕ್ಷಸಹಸ್ರ ॥
ಅಂದು ರಕ್ಷಿಸಿಕೊಂಡಿರ್ಪವೆಂದೆನಲದ । ಱಂದವನೇನ ಬಣ್ಣಿಪೆನು ॥ ೧೨೫ ॥

ಲಲಿತಾಂಗಿ ಕೇಳು ಸುದರ್ಶನಚಕ್ರ ಸು । ಲಲಿತ ಕೌಮುದಿಯೆಂಬ ಗದೆಯು ॥
ಚೆಲುವಿಗೆ ಬೀಡಾದ ಮೋಘವೆನಿಪ ಶಕ್ತಿ । ಯೊಲಿದು ಬಂದವು ಲಕ್ಷ್ಮಣಗೆ ॥ ೧೨೬ ॥

---

ವುಳ್ಳ, ಭೂಲೋಕದ ಹೆಂಗುಸರು ಆತನಿಗೆ ಎಂಟು ಸಾವಿರ ಇದ್ದರು ಇವರಿಂದ ಕೂಡಿ ಸೌಖ್ಯದಿಂದಿದ್ದನು. ॥ ೧೧೮ ॥ ಆ ರಾಮಲಕ್ಷ್ಮಣರು ಮೂರು ಲಕ್ಷ ಪಟ್ಟಣಗಳನ್ನೂ ಹತ್ತು ಲಕ್ಷ ದ್ರೋಣಾಮುಖಗಳನ್ನೂ (ದ್ರೋಣಾಮುಖ, ಅಂದರೆ ನಾನೂರು ಗ್ರಾಮಗಳಿಗೆ ಮುಖ್ಯವಾದ ಪಟ್ಟಣ) ಹತ್ತುಲಕ್ಷ ಗಿರಿದುರ್ಗ. ಜಲದುರ್ಗ ವನದುರ್ಗಗಳನ್ನೂ ವಶದಲ್ಲಿಟ್ಟು ಕೊಂಡು ಆಳಿದರು ॥ ೧೧೯ ॥ ಎಲೈ ಚೇಳಿನಿಯೇ, ಆ ರಾಜನಿಗೆ ಅಸಂಖ್ಯವಾದ ರತ್ನಗಳಿಂದ ಕೂಡಿದ ಹನ್ನೆರಡು ಸಾವಿರ ಸಿಂಹಾಸನಗಳೂ. ಹನ್ನೆರಡು ಸಾವಿರ ಕುದುರೆಗಳೂ ಇದ್ದವು. ॥ ೧೨೦ ॥ ರಾಮಲಕ್ಷ್ಮಣರಿಗೆ ಎಂಟು ಸಾವಿರ ಗ್ರಾಮಗಳಷ್ಟು ವ್ಯಂತರ ದ್ವೀಪಗಳೂ. ಸಾವಿರ ಖರ್ವಡಗಳೂ (ಎರಡು ಲಕ್ಷ ಗ್ರಾಮಗಳು), ಎಂಟು ಕೋಟಿಯ ಹಳ್ಳಿಗಳೂ ವಶವಾಗಿದ್ದವು ॥ ೧೨೧ ॥ ಆನೆಗಳು ನಾಲ್ವತ್ತೆರಡು ಲಕ್ಷ. ಅಷ್ಟೇ ರಥಗಳು. ಒಂಬತ್ತು ಕೋಟಿ ಕುದುರೆಗಳು, ಮೂವತ್ತೆರಡು ಕೋಟಿ ಕಾಲಾಳುಗಳ ಸೈನ್ಯಗಳಿದ್ದವು ॥ ೧೨೨ ॥ ಎಲೈ ಚೇಳಿನಿಯೇ. ರಾಮಲಕ್ಷ್ಮಣರು ಎಂಟು ಸಾವಿರ ಗಣಬದ್ಧರಾದ ದೇವತೆಗಳಿಗೆ ಒಡೆಯರೆನಿಸಿ ಇದ್ದರು. ಅವರಿಗೆ ಕೈ ಸೇರಿದ ಆಯುಧಗಳನ್ನು ತಿಳಿಸುವೆನು ಪ್ರೀತಿಯಿಂದ ಕೇಳು. ॥ ೧೨೩ ॥ ಶ್ರೀರಾಮನಿಗೆ ಅಪರಾಜಿತವೆಂಬ ನೇಗಿಲಿನ ಆಯುಧ. ಅಮೋಘವೆಂಬ ಹೆಸರಿನ ಬಾಣ, ಕೌಮುದಿಯೆಂಬ ಗದೆ. ರತ್ನಾವತಂಸಕವೆಂಬ ಮಾಲೆ—ಈ ನಾಲ್ಕೂ ಬಂದಿದ್ದವು ॥ ೧೨೪ ॥ ಶ್ರೀರಾಮನ ಈ ಆಯುಧಗಳಲ್ಲಿ ಒಂದೊಂದನ್ನು ಸಾವಿರ ಮಂದಿ ಯಕ್ಷರು ರಕ್ಷಿಸುತ್ತಿರುವರೆನ್ನುವಾಗ ಅದರ ಒಂದು ಚೆಲುವನ್ನು ಏನು ಹೇಳಲಿ ! ॥ ೧೨೫ ॥ ಎಲೈ ಚೇಳಿನಿಯೇ ಲಕ್ಷ್ಮಣನಿಗೆ ಸುದರ್ಶನವೆಂಬ ಚಕ್ರವೂ. ಸುಂದರವಾದ ಕೌಮುದಿಯೆಂಬ ಗದೆಯೂ. ಚೆಲುವಾದ

---

೧೧೯, ೧೨೦ ಇವು ಚದಲ್ಲಿಲ್ಲ [1] ವ್ಯಂತರ (ಚ) [2] ನಾಲ್ವತ್ತು (ಚ) [3] × (ಚ). [4] ವವಗಿನ್ನುಂಟಾದವ (ಚ) [5] ಲಕ್ಕ (ಚ). [6] ನಾಲ್ವತ್ತೆರಡು (ಚ) [7] ಗಣಬದ್ಧ (ಚ) [8] ಯವಕೊಂಡೊಂದಕ್ಕೆ (ಚ).

ಮತ್ತೆ ಸೌನಂದಕ ಬಾಳು ಶಾರ್ಂಗಗಳೆಂ । ಬುತ್ತಮ ಧನು ಪಂಚಮುಖವ ॥
ಪೊತ್ತ ಸುಶಂಖ ಕೌಸ್ತುಭರತ್ನ ಲಕ್ಷ್ಮಣ । ನೊತ್ತಿನೊಳಿಹವಂಬುಜಾಕ್ಷಿ ॥ ೧೨೭ ॥

ಅವರವರೊಂದಕೆ ಯಕ್ಷಸಹಸ್ರವು । ತವೆ ರಕ್ಷಿಸಿಕೊಂಡಿಹವು ॥
ಅವರ ಶಕ್ತಿಯನನಿತಿನಿತೆಂದು ಪೇಳುವ । ಕವಿಯಾರು ಕಮಲದಳಾಕ್ಷಿ ॥ ೧೨೮ ॥

ಈರೆಂಟು ಸಾಸಿರ ವರುಷದಾಯುಷ್ಯವು[1] । ಶ್ರೀರಾಮಚಂದ್ರನಿಗಬಲೆ ॥
ಈರಾರು ಸಾಸಿರ ವರುಷದ ಪರಮಾಯು । ಸೇರಿ ನಿಂದುದು ಲಕ್ಷ್ಮಣಗೆ ॥ ೧೨೯ ॥

ಅವರಿರ್ವರು ಪದಿನೈದು ಬಿಲ್ಮಿಡಿಯರಂ । ದವರು ದ್ವಾತ್ರಿಂಶ ಲಕ್ಷಣರು ॥
ನವವಜ್ರ ವೃಷಭನಾರಾಚಸಂಹನನರು ಮ । ತ್ತವರನಂತವೀರ್ಯರಬಲೆ ॥ ೧೩೦ ॥

ಅವರಿಗೆ ಸಮ ಚತುರಸ್ರ ಸಂಸ್ಥಾನವ । ನವರು ಧವಲ ನೀಲವರ್ಣ ॥
ಅವರ ಯೌವನ ರೂಪಾತಿಶಯವ ಪೇ । ಳ್ವವರಾರಂಬುಜನೇತ್ರೆ ॥ ೧೩೧ ॥

ಕುವಲಯನೇತ್ರೆ ಶ್ರೀರಾಮಲಕ್ಷ್ಮಣರಿಗೆ । ಅವಯವದೊಳು ನೆಲಸಿರ್ಪ ॥
ನವವಜ್ರ ವೃಷಭ ನಾರಾಚ ಕುಲಿಶ ಪದ್ಮ । ಪವಿ ಶಂಖಚಕ್ರಗಳಿಹವು ॥ ೧೩೨ ॥

ಅವರ ಸುಲಕ್ಷಣ ಲಕ್ಷಣಾಂಗವನಿಂತು । ವಿವರಿಪರಾರು ಯೀ ಜಗದಿ ॥
ದಿವಿಜೇಶನ ಸಿರಿ ಸರಿಯಲ್ಲವವರ ಪೇ । ಳ್ವವರಾರಂಬುಜನೇತ್ರೆ ॥ ೧೩೩ ॥

ಶ್ರೀರಾಮಗೈವತ್ತೆರಡು ವರುಷ ಮ । ತ್ತಾರಯ್ಯಲಾ ಲಕ್ಷ್ಮಣಗೆ ॥
ನಾರಿ ಲಾಲಿಸು ನಾಲ್ವತ್ತೈದು [2]ವರುಷ ಕು । ಮಾರಗಾಲವು ಸಲ್ದುದವರ್ಗೆ[2] ॥ ೧೩೪ ॥

---

ಅಮೋಘವೆಂಬ ಶಕ್ತಿಯೂ ಬಂದಿದ್ದವು ॥ ೧೨೬ ॥ ಲಕ್ಷ್ಮಣನಿಗೆ ಇವಲ್ಲದೆ ಸೌನಂದಕವೆಂಬ ಖಡ್ಗವೂ, ಶಾರ್ಂಗವೆಂಬ ಧನುಸ್ಸೂ, ಐದು ಮುಖಗಳಿರುವ ಶ್ರೇಷ್ಠವಾದ ಪಾಂಚಜನ್ಯವೆಂಬ ಶಂಖವೂ, ಕೌಸ್ತುಭವೆಂಬ ರತ್ನವೂ ಸೇರಿದ್ದುವು ॥೧೨೭॥ ಅವು ಒಂದೊಂದಾಗಿ ಸಹಸ್ರಯಕ್ಷರಿಂದ ರಕ್ಷಿತವಾಗಿದ್ದವು ಎಲೈ ಚೇಳಿನಿಯೇ, ರಾಮಲಕ್ಷ್ಮಣರ ಶಕ್ತಿಯನ್ನು ಅಷ್ಟು ಇಷ್ಟೆಂದು ಹೇಳಬಲ್ಲ ಕವಿ ಯಾವನು? ॥ ೧೨೮ ॥ ಶ್ರೀರಾಮನಿಗೆ ಹದಿನಾರು ಸಾವಿರ ವರ್ಷದ ಆಯುಷ್ಯವೂ ಲಕ್ಷ್ಮಣನಿಗೆ ಹನ್ನೆರಡು ಸಾವಿರ ವರ್ಷದ ಆಯುಷ್ಯವೂ ಸೇರಿದ್ದವು ॥ ೧೨೯ ॥ ಅವರಿಬ್ಬರೂ ಹದಿನೈದು ಬಿಲ್ಲಿನಷ್ಟು ಎತ್ತರವುಳ್ಳವರು, ಮೂವತ್ತೆರಡು ಲಕ್ಷಣಗಳಿಂದ ಕೂಡಿದವರು, ಹೊಸತಾದ ವಜ್ರ, ಎತ್ತು, ಬಾಣ ಚಿಹ್ನೆಗಳುಳ್ಳವರು; ಮತ್ತು ಕೊನೆಯಿಲ್ಲದ ಮಹಾವೀರ್ಯವನ್ನುಳ್ಳವರು ॥ ೧೩೦ ॥ ಎಲೈ ಚೇಳಿನಿಯೇ, ನಾಲ್ಕೂ ಕಡೆಯಲ್ಲಿ ಸರಿಸಮಾನವಾದ ಆಕಾರವುಳ್ಳವರೂ, ಬಿಳಿಯ ಮತ್ತು ನೀಲಿಯ ಮೈ ಬಣ್ಣವುಳ್ಳವರೂ ಆದ ರಾಮಲಕ್ಷ್ಮಣರ ತಾರುಣ್ಯವನ್ನೂ ಸೌಂದರ್ಯವನ್ನೂ ವರ್ಣಿಸಬಲ್ಲವರಾರು? ॥ ೧೩೧ ॥ ಎಲೈ ಚೇಳಿನಿಯೇ, ಶ್ರೀರಾಮಲಕ್ಷ್ಮಣರ ಶರೀರದಲ್ಲಿ ಹೊಸತಾದ ವಜ್ರ, ಎತ್ತು, ಬಾಣ, ಕಮಲ, ಶಂಖ, ಚಕ್ರ ಚಿಹ್ನೆಗಳಿರುವವು ॥ ೧೩೨ ॥ ಅವರ ಒಳ್ಳೆಯ ಲಕ್ಷಣವನ್ನೂ ಲಕ್ಷಣಾಂಗಗಳನ್ನು ಹೀಗೆ ವಿವರಿಸಬಲ್ಲವರು ಈ ಲೋಕದಲ್ಲಿ ಯಾರೂ ಇಲ್ಲ ಅವರ ಐಶ್ವರ್ಯಕ್ಕೆ ದೇವೇಂದ್ರನ ಐಶ್ವರ್ಯವು ಸಾಟಿಯಲ್ಲ ॥ ೧೩೩ ॥ ಶ್ರೀರಾಮನಿಗೆ ಆಗ ಐವತ್ತೆರಡು ವರ್ಷವೂ, ಲಕ್ಷ್ಮಣನಿಗೆ ನಲುವತ್ತೈದು ವರ್ಷವೂ ಕೌಮಾರ್ಯಾವಸ್ಥೆಯ ಕಾಲವಾಗಿ

---

೧೩೦, ೧೩೧ ಕದಲ್ಲಿಲ್ಲ ೧೨೭, ೧೨೮ ಪೂರ್ವಾರ್ಧ, ೧೩೨, ೧೩೩ ಚದಲ್ಲಿಲ್ಲ [1] ವರುಷದ ಪರಮಾಯು (ಚ) [2] ಕುಮಾರಾಂಗ । ಆರದ ಪೇಳ್ವವರಾರು (ಕ).

ಇಂತಪ್ಪ ಸೌಭಾಗ್ಯದೊಳು ರಾಮಲಕ್ಷ್ಮಣ । ರಂತರಿಸದೆ ಪಲ ಪಗಲು ॥
ಸಂತಸದೊಳಗಿರ್ದರಿರಬೇಡವೆ ಕೇಳ । ನಂತ ಪುಣ್ಯವ ಮಾಡಿದವರು[1] ॥ ೧೩೫ ॥

ಪರಮನ ಪಾದವ ಪರಮಭಕ್ತಿಯೊಳೊಲ್ದು । ಪರಮಾರ್ಥದಿಂ ಪೂಜಿಸಿದರು ॥
ಪರಮ ಸುಖವನುಂಬುದೆರವಲ್ಲವವರಿಗ । ಚ್ಚರಿಯಲ್ಲ ಮೃಗಶಿಶುನಯನೆ ॥ ೧೩೬ ॥

ಸರಸ ಸನ್ಮಾನಿ ಸದ್ಗುಣ ಚಿಂತಾಮಣಿ । ಸರಸಿಜವದನ ಸುಮದನ ॥
ಗರಗರಿಕೆಯು[2] ಗರುವರ ತಲೆವಣಿಯಾದ[3] । ಪರಮ ಚರಿತನೊಪ್ಪಿದನು[4] ॥ ೧೩೭ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೩೮ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆ(ಯಾದುದು)[5] ಪತ್ತೊಂಬತ್ತನೆಯ ವಿಸುಪ ಸಂಧಿ ॥ ೧೩೯ ॥

---

ಸುದಿದ್ದಿತು ॥ ೧೩೫ ॥ ಶ್ರೀರಾಮಲಕ್ಷ್ಮಣರು ಈ ರೀತಿಯ ಸೌಭಾಗ್ಯದಿಂದ ಹಲವಾರು ವರ್ಷಗಳ ಕಾಲ ಸಂತೋಷ ದಿಂದ ಇದ್ದರು ಅನಂತವಾದ ಪುಣ್ಯವನ್ನು ಆರ್ಜಿಸಿದವರು ಮತ್ತೇನು ಹೀಗಿರಬೇಡವೆ? ॥ ೧೩೫ ॥ ಎಲೈ ಚೇಳಿನಿಯೇ. ಪರಮಜಿನೇಶನ ಪಾದವನ್ನು ಅತ್ಯಂತ ಭಕ್ತಿಯಿಂದ. ಪರಮೋದ್ದೇಶದಿಂದ ಪೂಜಿಸಿದವರು ಅತೀಶ್ರೇಷ್ಠ ಸುಖವನ್ನು ಪಡೆಯು ವುದರಲ್ಲಿ ಏನೂ ಆಶ್ಚರ್ಯವಿಲ್ಲ. ॥ ೧೩೬ ॥ ರಸಿಕತೆಯುಳ್ಳವನೂ, ಮರ್ಯಾದೆಯುಳ್ಳವನೂ, ಒಳ್ಳೆಯ ಗುಣಗಳಿಗೆ ಚಿಂತಾ ಮಣಿಯಂತೆ ಇರುವವನೂ. ತಾವರೆಯಂತಹ ಮುಖವುಳ್ಳವನೂ, ಮನ್ಮಥಸ್ವರೂಪನೂ, ಸೌಂದರ್ಯದ ಘನತೆಯುಳ್ಳವರಿಗೆ ಶಿರೋಮಣಿಯೂ. ಶ್ರೇಷ್ಠವಾದ ನಡತೆಯುಳ್ಳವನೂ ಆದ ಶ್ರೀರಾಮನು ಹೀಗೆ ಶೋಭಿಸಿದನು ॥ ೧೩೭ ॥ ಎಲೈ ಚೇಳಿನಿಯೇ, ಇಂದು ನಾನು ನಿನಗೆ ಮುಂದಿನ ಕಥೆಗಳನ್ನು ತಿಳಿಸುವೆನೆಂದು ಹೇಳಿ. ಮೆಲ್ಲನೆ ಮುಂದುವರಿಯುತ್ತ ಈಗ ಇಲ್ಲಿಗೆ ಸಂಧಿಯು ಪೂರ್ಣವಾಯಿತು ಇನ್ನು ಇಲ್ಲಿಂದ ಮುಂದಿನ ಕಥೆಯನ್ನು ಸಂತೋಷದಿಂದ ಹೇಳುವೆನು ॥ ೧೩೮ ॥ ಬ್ರಾಹ್ಮಣ ಕುಲದಲ್ಲಿ ಜನಿಸಿದ. ಹೊಸ ಮನ್ಮಥನಂತಿರುವ, ನಿರ್ಮಲ ಗುಣಗಳಿರುವ, ಜಿನಭಕ್ತನಾದ, ಸರಸ್ವತೀ ದೇವಿಯ ಮುಖದ ಕನ್ನಡಿಯಂತಿರುವ. ನಿರ್ಮಲ ಚಾರಿತ್ರವುಳ್ಳ. ಮಂತ್ರಿ ದೇವಪ್ಪನು ಸಂತೋಷದಿಂದ ಹೇಳಿರುವ ರಾಮವಿಜಯ ಕಾವ್ಯದಲ್ಲಿ ರಚಿತವಾದ ಹತ್ತೊಂಬತ್ತನೆಯ ಈ ಸಂಧಿಯು ಪ್ರಸಿದ್ಧಿ ಪಡೆಯಿತು. ॥ ೧೩೯ ॥

---

[1] ಮಾಡಿದವರೋ (ಕ). [2] ಸೆರೆಗಲಿ (ಕ) [3] ತಲೆಮಣಿಯಾದನ (ಕ). [3] ಪರಮನ ಚರಿತವೊಪ್ಪಿದುದು (ಕ), [5] ರಚನೆಯಂ ಪಡ ದಃ ಜಸವೆತ್ತುದು (ಕ)

# ೨೦. ರಾಮ ಮೋಕ್ಷ

## ರಾಮವಿಜಯ ಸತ್ಕಾವ್ಯ*

ಅಷ್ಟಮದವನೆಂಟು [ಬಗೆಯ] ದೋಷಂಗಳ । ಸೃಷ್ಟಿಯರಿಯೆ ಗೆಲ್ದ ಬಿದಿಯ ॥
ಸೃಷ್ಟಿಗೆ ನಿಲುಕದ ಮುನಿಸುವ್ರತನಿಗೆ । ಸಾಷ್ಟಾಂಗ ವಿನಮಿತನಹೆನು ॥ ೧ ॥

ತಣ್ಗದಿರನ ಚೆಲ್ವನೇಳಿಪ ವದನದ । ನುಣ್ಗದಪಿನ ದಾಡಿಮದ ॥
ಪಣ್ಗಳ ಬಿತ್ತಿನಂತೆಸೆವ ಪಲ್ಗಳ ಸುರ । ವೆಣ್ಗಳರಸಿ ಕೇಳು ಕಥೆಯ ॥ ೨ ॥

ಸೊಬಗು ನುಡಿಯಳೆ ಶೋಭನವಾದ ನಡೆಯಳೆ । ಅಬುಜಾನನೆಯಾಯತಾಕ್ಷಿ ॥
ನಿಬಿಡಸ್ತನೆ ನೀಳಾಳಕಿಯತಿ ಚೆಲ್ವ । ಕಬರಿಯ ಕಾಂತೆ ಲಾಲಿಪುದು ॥ ೩ ॥

ಜಾತಿವೆಣ್ಗಳ ತಲೆರನ್ನವೆ ಕೇಳಂಗ । ಜಾತನೃಪನ ಪಟ್ಟದರಸಿ ॥
ನೀ ತಿಳಿವಂತು ಪೇಳುವೆ ಕೇಳೆಲೆಯಬು । ಜಾತವದನೆ ಬಕತಿಯೊಳು ॥ ೪ ॥

ಎಂದು ನುಡಿದ ನಿಜಪತಿಯ ಮಾತಿಗೆಯುವ । ಳಂದು ಸಂತಸಗಡಲೊಳಗೆ ॥
ಮಿಂದಳು ಮೀಯಬೇಡವೆ ಮಾನಸಕಾ । ನಂದವೆರಸಿದೀ ನುಡಿಗೆ ॥ ೫ ॥

ಪೊಸಜವ್ವನೆಯರ ಕೊರಲ ಹೊನ್ನ ತಾಲಿಯೆ । ಅಸಮಬಾಣನ ಮಸೆದಲಗೆ ॥
ಅಸಹಾಯ ಶೂರ ಶ್ರೇಣಿಕನೃಪವರ ಲಾ । ಲಿಸು ನನ್ನ ಬಿನ್ನಪವಿದನು ॥ ೬ ॥

ಇಲ್ಲಿಂದ ಮುಂದಣ ಕಥೆಯಾವುದದ ನೀನು । ಸೊಲ್ಲಿಸು ಸೊಗ ಸಾರುವಂತು ॥
ಪೊಲ್ಲಮೆ ಪೋಪಂತು ಕೇಳುವೆನಾ ಪ್ರಾಣ । ವಲ್ಲಭ ನಿನ್ನ ಕೃಪೆಯಲಿ ॥ ೭ ॥

---

ಎಂಟು ವಿಧವಾದ ಮದಗಳನ್ನೂ 'ಎಂಟು ಬಗೆಯ ದೋಷಗಳನ್ನೂ ಲೋಕವೇ ತಿಳಿದಿರುವಂತೆ ಗೆದ್ದ, ಬ್ರಹ್ಮನ ಸೃಷ್ಟಿಶಕ್ತಿಗೆ ಎಟುಕದಂತೆ ಇರತಕ್ಕ ಮುನಿಸುವ್ರತ ಜಿನೇಶನಿಗೆ ನಾನು ಸಾಷ್ಟಾಂಗವಂದನೆಯನ್ನು ಮಾಡುತ್ತೇನೆ ॥ ೧ ॥ ಶ್ರೇಣಿಕನು ಚೇಳಿನಿಗೆ ಹೀಗೆಂದನು—"ಚಂದ್ರನ ಚೆಲುವನ್ನು ಹೀನೈಸುವ ಮುಖವುಳ್ಳ, ನಯವಾದ ಕೆನ್ನೆಯುಳ್ಳ, ದಾಳಿಂಬದ ಬೀಜದಂತಿರುವ ಹಲ್ಲುಗಳುಳ್ಳ ಅಪ್ಸರಸ್ತ್ರೀಯರಿಗೆ ಒಡತಿಯೆನಿಸತಕ್ಕವಳೇ, ಕಥೆಯನ್ನು ಕೇಳು ॥ ೨ ॥ ಸೊಗಸಾದ ಮಾತಿನ ಸುಂದರವಾದ ನಡಿಗೆಯ ತಾವರೆಯಂತಹ ಮುಖದ ವಿಶಾಲವಾದ ಕಣ್ಣಿನ, ಒತ್ತೊತ್ತಾಗಿರುವ ಮೊಲೆಯ, ಉದ್ದವಾದ ತಲೆಗೂದಲಿನ ಮುಡಿಯೇ ಕೇಳು ॥ ೩ ॥ ಒಳ್ಳೆಯ ಜಾತಿಯ ಸ್ತ್ರೀಯರಿಗೆ ಶಿರೋರತ್ನವೇ, ಮನ್ಮಥನ ಪಟ್ಟದ ರಾಣಿಯೇ, ಕಮಲಮುಖಿಯೇ ನಿನಗೆ ತಿಳಿಯುವಂತೆ ಹೇಳುತ್ತೇನೆ ಭಕ್ತಿಯಿಂದ ಕೇಳು" ॥ ೪ ॥ ಹೀಗೆ ಹೇಳಿದ ತನ್ನ ಗಂಡನ ಮಾತನ್ನು ಕೇಳಿ, ಚೇಳಿನಿಯು ಸಂತೋಷವೆಂಬ ಸಮುದ್ರದಲ್ಲಿ ಮಿಂದಂತಾದಳು ಮನಸ್ಸಿಗೆ ಸಂತೋಷಕರವಾದ ಮಾತನ್ನು ಕೇಳಿದವರು ಹಾಗೆ ಆಗದೆ ಇರುವರೆ? ॥ ೫ ॥ ಆಗ ಚೇಳಿನಿಯು ಹೀಗೆಂದಳು—'ನವಯೌವನವತಿಯರ ಕೊರಳಿನ ಮಾಂಗಲ್ಯಸ್ವರೂಪನೆ ಮನ್ಮಥನ ಹರಿತವಾದ ಕತ್ತಿಯಂತೆ ಇರುವವನೇ ಸಹಾಯಕರಿಲ್ಲದಿದ್ದರೂ ಶೂರನಾಗಿರುವ ಶ್ರೇಣಿಕರಾಜನೇ ನನ್ನ ಈ ವಿಜ್ಞಾಪನವನ್ನು ಕೇಳು ॥ ೬ ॥ ಎಲೈ ಪ್ರಾಣಕಾಂತನೇ, ಇಲ್ಲಿಂದ ಮುಂದಿನ ಕಥೆಯಾವುದೆಂಬುದನ್ನು ಸುಖವುಂಟಾಗುವಂತೆಯೂ ದೋಷಗಳು ನಿವಾರಣೆಯಾಗುವಂತೆಯೂ ಹೇಳು ನಿನ್ನ ದಯೆಯಿಂದ ನಾನು

---

* ಈ ಸಂಧಿ ಚ ಪ್ರತಿಯಲ್ಲಿ ಮಾತ್ರ ಇದೆ ಕ ಪ್ರತಿಯಲ್ಲಿ ೨೦, ೨೧ ಸಂಧಿಗಳು ಅನ್ಯಕರ್ತೃಕವಾಗಿ ಸೇರಿಕೊಂಡಿವೆ (ಅನುಬಂಧ ನೋಡಿ)

ಅದೊಡೆ ಮಾನನಿಧಿಯೆ ಲಾಲಿಪುದು ಹಿಂ । ದಾದ ಕಥೆಯ ಕಡೆಮೆಯನು ॥
ಆದರದಿಂದೊಯ್ಯನೆ ಪೇಳುವೆನನು । ಮೋದ ಮನಕೆ ಪುಟ್ಟುವಂತೆ ॥ ೮ ॥

ದೀಕ್ಷೆವಡೆದು ದುರಿತವ ದೂರ ಪೋಗಾಡಿ । ಮೋಕ್ಷಸತಿಯ ಜನಪತಿಯ ॥
ಸಾಕ್ಷಿಯಿಂದವೆ ಹಸೆನಿಂದನ ಕಥೆಯ ನ್ಯಾ । ಗಾಕ್ಷಿ ಪೇಳುವೆನು ಲಾಲಿಪುದು ॥ ೯ ॥

ಸರಸಿಜಾನನೆ ಕೇಳಯೋಧ್ಯಾಪುರದೊಳು । ಸಿರಿವೆಣ್ಣ ತೋಳ ತಕ್ಕೆಯೊಳು ॥
ಹರಿಸದಿಂ ಪಲವು ಪಗಲು ಸುಖಮಿರ್ದನಾ । ನರನಾಥ ರಾಮಚಂದ್ರಮನು ॥ ೧೦ ॥

ಒಂದು ದಿವಸ ತತ್ಪುರದ ನಂದನದೊಳ । ಗಂದಿದ್ದ ಶಿವಗುಪ್ತ ಮುನಿಯ ॥
ಬಂದಿಸಿ ಧರ್ಮವ ಕೇಳಲಾ ಮುನಿಪನಿಂ । ತೆಂದು ಪೇಳಿದನು ರಾಘವಗೆ ॥ ೧೧ ॥

ನರನಾಥ ಕೇಳು ಜಂಬೂದ್ವೀಪದ ನವ । ಭರತದಮಳ ವಿಷಯದಲಿ ॥
ವರ ರತ್ನಪುರವನಾಳುವನು ಪ್ರಜಾಪತಿ । ಧರಣೇಶಗೆ ಗುಣಕಾಂತೆ ॥ ೧೨ ॥

ಅವರಿರ್ವರಿಗೆ ಚಂದ್ರಚೂಳನೆಂಬಣುಗನಂ । ದವನೀಶನ ಸಚಿವನಿಗೆ ॥
ಸವಿವಿಲ್ಲಗೆಣೆಯ ವಿಜಯನೆಂಬ ಮಗನಂ । ದವರಿರ್ವರತಿ ನೇಹದಲಿ ॥ ೧೩ ॥

ತಂದೆತಾಯಿಗಳು ಲಾಲಿಸುತಿರೆ ಮನಕೆ ಬಂ । ದಂದದೆ ದುರ್ವ್ಯಸನದಲಿ ॥
ಅಂದು ತಮ್ಮಿದೆಯೊಳ್ನಡೆಯಲಾ ಪುರದೊಳ । ಗೊಂದಾನೊಂದು ದಿನದೊಳು ॥ ೧೪ ॥

ವರವೈಶ್ಯ ಗೌತಮನಣುಗ ಶ್ರೀದತ್ತಗೇ । ನಿರದೆ ಕುಬೇರನ ಸುತೆಯ ॥
ಹರುಷದಿಂ ಮದುವೆಯ ಮಾಡುತಲಿರಲಾ । ತರುಣಿಯ ರೂಪಾತಿಶಯವ ॥ ೧೫ ॥

---

ಅದನ್ನು ಕೇಳುವೆನು?" ॥ ೭ ॥ ಆಗ ಶ್ರೇಣಿಕನು ಹೀಗೆಂದನು—'ಎಲೈ ಚೇಳಿನಿಯೇ. ನಾನು ಹಿಂದೆ ಹೇಳಿ. ಉಳಿದ ಕಥಾಭಾಗವನ್ನು ಆದರದಿಂದ ಮೆಲ್ಲನೆ ಹೇಳುವೆನು, ನಿನ್ನ ಮನಸ್ಸಿಗೆ ಸಂತೋಷವಾಗುವಂತೆ ಹೇಳುವೆನು. ॥ ೮ ॥ ಜಿನ ದೀಕ್ಷೆಯನ್ನು ತಾಳಿ. ಪಾಪವನ್ನು ದೂರಕ್ಕೆ ಹೋಗುವಂತೆ ಮಾಡಿ ಜಿನೇಶ್ವರನ ಸಾಕ್ಷಿಯಾಗಿ ಮೋಕ್ಷವೆಂಬ ಸ್ತ್ರೀಯನ್ನು ಮದುವೆಯಾದವನ ಕಥೆಯನ್ನು ಈಗ ಹೇಳುವೆನು. ಕೇಳು ॥ ೯ ॥ ಎಲೈ ಕಮಲಮುಖಿಯೇ. ಕೇಳು ರಾಜನಾದ ಶ್ರೀರಾಮಚಂದ್ರನು ಹಲವು ವರ್ಷಗಳ ಕಾಲ ಅಯೋಧ್ಯಾ ಪಟ್ಟಣದಲ್ಲಿ ಸಂಪತ್ತೆಂಬ ವನಿತೆಯ ಆಲಿಂಗನದಲ್ಲಿ ಸಂತೋಷ ದಿಂದ ಇದ್ದನು. ॥ ೧೦ ॥ ಒಂದು ದಿವಸ ಶ್ರೀರಾಮನು ಆ ಪುರದ ಉದ್ಯಾನದಲ್ಲಿದ್ದ ಶಿವಗುಪ್ತರೆಂಬ ಮುನಿಗಳಿಗೆ ವಂದಿಸಿ. ಧರ್ಮವಿಚಾರವನ್ನು ತನಗೆ ತಿಳಿಸಬೇಕೆನ್ನಲು. ಅವರು ಹೀಗೆಂದರು ॥ ೧೧ ॥ ಎಲೈ ರಾಜನೇ ಕೇಳು ಜಂಬೂ ದ್ವೀಪದಲ್ಲಿರುವ ಭರತ ದೇಶದಲ್ಲಿ ಶ್ರೇಷ್ಠವಾದ ರತ್ನಪುರವನ್ನು ಪ್ರಜಾಪತಿಯೆಂಬ ರಾಜನು ಆಳುತ್ತಿದ್ದನು. ಅವನ ಅರಸಿ ಗುಣಕಾಂತೆ ॥ ೧೨ ॥ ಆ ರಾಜದಂಪತಿಗಳಿಗೆ ಚಂದ್ರಚೂಳನೆಂಬ ಮಗನಾದನು ಆ ರಾಜನ ಮಂತ್ರಿಗೆ ಮನ್ಮಥನಿಗೆ ಸಮನಾದ ವಿಜಯನೆಂಬ ಮಗನಾದನು. ಈ ಇಬ್ಬರೂ ಪರಸ್ಪರ ಸ್ನೇಹಿತರಾದರು. ॥ ೧೩ ॥ ಈ ಇಬ್ಬರು ಕುಮಾರಕ ರನ್ನೂ ಅವರ ತಂದೆತಾಯಿಗಳು ಪ್ರೀತಿಯಿಂದ ಸಾಕುತ್ತಿರಲು. ಇವರು ಕೆಟ್ಟ ಚಾಳಿಗೆ ವಶರಾಗಿ. ತಂದೆತಾಯಿಗಳ ಎದೆ ಮೇಲೆ ನಡೆಯುವಂತೆ ವರ್ತಿಸುತ್ತಿದ್ದರು ॥ ೧೪ ॥ ಅವರ ಪಟ್ಟಣದಲ್ಲಿ ಒಂದಾನೊಂದು ದಿನ ಶ್ರೇಷ್ಠವ್ಯಾಪಾರಿಯಾದ ಗೌತಮ ನೆಂಬವನ ಮಗನಾದ ಶ್ರೀದತ್ತನಿಗೆ ಕುಬೇರನೆಂಬವನ ಮಗಳನ್ನು ಮದುವೆ ಮಾಡುತ್ತಿದ್ದರು ಆ ಸಂದರ್ಭದಲ್ಲಿ ದೂತರು ಇವರ ಬಳಿಗೆ ಬಂದರು. ॥ ೧೫ ॥ ದೂತರು ಬಂದು ಕುಬೇರನ ಮಗಳ ಚೆಲುವನ್ನು ವಿಜಯ—ಚಂದ್ರಚೂಳರೆಂಬ ಈ

ಚರರು ಬಂದಱುಪೆ ವಿಜಯು ಚಂದ್ರಚೂಳರು । ಪರಿತಂದವರ ಮನೆವೊಕ್ಕು ॥
ತರುಣಿಯುನೆಳೆದು ತಂದಪೆವೆಂಬ ಕಾಲದೊಳ್ । ಪುರಜನ ಪುಯ್ಯಲನಿಡಲು ॥ ೧೬ ॥

ಅದ ಕೇಳ್ದಾ ನೃಪ ಕರಸಿ ತಳಾಱನ । ಮದವಮುಖರಿವರಿರ್ವರನು ॥
ಕದುಕೆಱ ತಿವಿದು ಶೂಲದೊಳಿಕ್ಕಿ ಬಾರೆಂದು । ಹೃದಯುಶುದ್ಧಿಯೊಳು ಪೇಳಿದನು ॥ ೧೭ ॥

ಆ ನುಡಿಗೇಳಿ ಸಚಿವನಾ ಪೊಳಲ ಪ್ರ । ಧಾನರ್ಕೈತಂದು ಕೈಮುಗಿದು ॥
ಆ ನರನಾಥಗೆ ಪೇಳ್ದರಿದೊಮ್ಮೆಗೆ । ನೀನು ಕ್ಷಮಿಸಿಕೊಂಬುದು ಮಂತ್ರೀಶ ॥ ೧೮ ॥

. . . . . . . . . .

ಎಂದವನಿವರಿಗಾಜ್ಞೆಯು ನಾನೇ ಮಾಳ್ಪೆ । ನೆಂದೆನಲರಸನೊಪ್ಪಿದನು ॥ ೧೯ ॥

ಆ ಕುವರರ ವನಗಿರಿಪರ್ವತಾಗ್ರದ । ಯೇಕ ಶಿಲೆಯೊಳಿಟ್ಟು ನಿಂದು ॥
ಆಕಾರಗೆಡದೆ ಮರಣವಡೆದಪುದೆಂದ । ನೇಕ ಪರಿಯೊಳಾ ಮಂತ್ರಿ ॥ ೨೦ ॥

ನುಡಿದ ನುಡಿಯು ಕೇಳಿ ನಾವಿನಿಸಲ್ಲದ । ನಡೆಯು ನಡೆದರಿಗೀ ಮರಣ ॥
ಪಡೆವುದಚ್ಚರಿಯಲ್ಲ ನಿಮ್ಮ ಮಾತಿಗೆ ನಾವು । ಪಡಿಮಾತುಗೊಡುವವರಲ್ಲ ॥ ೨೧ ॥

ಎಂದೆನಲಾ ಕುವರರಿಗಾ ನೃಪತಿಗಾ । ನಂದ ಪುರದ ಜನಗಳಿಗೆ ॥
ಅಂದು ಸಂತಸ ಪುಟ್ಟುವಂತೆ ಮಂತ್ರೀಶ್ವರ । ನೊಂದು ಕಾರ್ಯವನೆಣಿಸಿದನು ॥ ೨೨ ॥

ಆ ಗಿರಿಶಿಖರದೊಳಿರ್ದ ಮಹಾಬಳ । ಯೋಗಿಯ ಬಳಿಗೈತಂದು ॥
ರಾಗದಿಂ ವಂದಿಸಿ ತದ್ವೃತ್ತಾಂತವ । ನಾಗಲಱುಪಲಾ ಮುನಿಪ ॥ ೨೩ ॥

---

ಕುಮಾರಕರಿಗೆ ತಿಳಿಸಿದರು ಆಗ ಇವರು ಹೊರಟು ಬಂದು, ವಿವಾಹಗೃಹವನ್ನು ಹೊಕ್ಕು ಮದುಮಗಳನ್ನು ಸೆಳೆದು ತರುವೆವೆಂದು ಹೋದಾಗ ಪಟ್ಟಣದ ಜನರು ರಾಜನಿಗೆ ಮೊರೆಯಿಟ್ಟರು. ॥ ೧೬ ॥ ರಾಜನು ಈ ಸಂಗತಿಯನ್ನು ಕೇಳಿ ಪಟ್ಟಣದ ತಳಾರನನ್ನು ಕರೆದು, ರಾಕ್ಷಸಸ್ವಭಾವದ ಈ ಇಬ್ಬರು ಕುಮಾರರನ್ನೂ ಚೆನ್ನಾಗಿ ತಿವಿದು ಶೂಲಕ್ಕೆ ಹಾಕಿ ಬನ್ನಿ, ಎಂದು ಆಜ್ಞೆಮಾಡಿದನು ॥ ೧೭ ॥ ಆ ಮಾತನ್ನು ಕೇಳಿ ಪಟ್ಟಣದ ಮಂತ್ರಿಗಳು ಬಂದು ರಾಜನಿಗೆ ನಮಸ್ಕರಿಸಿ, ಈ ಒಂದು ಬಾರಿಗೆ ಅವರನ್ನು ಕ್ಷಮಿಸಬೇಕೆಂದು ಬಿನ್ನೈಸಿದರು ॥ ೧೮ ॥ ಆಗ ಮಂತ್ರಿಯು ಅವರಿಗೆ ತಕ್ಕ ಆಜ್ಞೆಯನ್ನು ತಾನೇ ಮಾಡುವೆನೆಂದು ಹೇಳಲು, ಅದಕ್ಕೆ ರಾಜನು ಒಪ್ಪಿದನು ॥ ೧೯ ॥ ಮಂತ್ರಿಯು ಆ ಕುಮಾರರನ್ನು ವನಗಿರಿಯೆಂಬ ಪರ್ವತದ ತುದಿಗೆ ಕೊಂಡೊಯ್ದು ಅಲ್ಲಿ ನಿಲ್ಲಿಸಿ, ಅವರಿಗೆ ಮರಣದ ಆಜ್ಞೆಯಿರುವುದನ್ನು ತಿಳಿಸಿದನು ॥ ೨೦ ॥ ಆಗ ಆ ಕುಮಾರಕರು—'ನಾವು ಇಷ್ಟೊಂದು ಅಯೋಗ್ಯ ರೀತಿಯಲ್ಲಿ ವರ್ತಿಸಿದುದಕ್ಕೆ ಈ ರೀತಿಯ ಮರಣದಂಡನೆ ಏನೂ ಆಶ್ಚರ್ಯಕರವಲ್ಲ ನಾವು ನಿಮ್ಮ ಮಾತಿಗ ಪ್ರತಿಯಾಗಿ ಮಾತಾಡುವವರಲ್ಲ" ಎಂದರು ॥ ೨೧ ॥ ಹೀಗೆ ಹೇಳಲು ಮಂತ್ರಿಯು ಆ ಕುಮಾರಕರಿಗೂ, ರಾಜನಿಗೂ, ಪಟ್ಟಣಿಗರಿಗೂ ಸಂತೋಷವಾಗುವಂತಹ ಒಂದು ಕಾರ್ಯವನ್ನು ಯೋಚಿಸಿದನು ॥ ೨೨ ॥ ಮಂತ್ರಿಯು ಅವರಿಬ್ಬರನ್ನೂ ಅದೇ ಪರ್ವತದ ತುದಿಯಲ್ಲಿದ್ದ ಮಹಾಬಳನೆಂಬ ಯೋಗಿಯ ಬಳಿಗೆ ಕರೆತಂದು, ನಮಸ್ಕಾರ ಮಾಡಿಸಿ, ಎಲ್ಲಾ ವೃತ್ತಾಂತವನ್ನೂ ಯೋಗಿಗಳಿಗೆ ತಿಳಿಸಿದನು ॥ ೨೩ ॥ ಆಗ ಮುನಿಗಳು ಅವಧಿ

---

೧೮ ಕೊನೆಯ ಪಾದ ಸರಿಯಿಲ್ಲ ೧೯ ಪೂರ್ವಾರ್ಧ ಪಾತವಾಗಿದೆ

ಅವಧಿಯಿಂದಱಿದು ತೃತೀಯ ಜನ್ಮಕ್ಕೀ । ಕುವರರು ರಾಮಕೇಶವರು ।
ವಿವರಿಸೆ ಭರತದ ಮೂಱು ಖಂಡವನಾ । ಳ್ವವರೆಂದು ನುಡಿಯೆ ಮಂತ್ರೀಶ ॥ ೨೪ ॥

ಪಿರಿದು ಸಂತಸವಟ್ಟು ಧರ್ಮಾಧರ್ಮವ । ನಿರವಿಸಿ ಮುನಿಯಿಂದಲವರ್ಗೆ ॥
ಇರದೆ ದೀಕ್ಷೆಯನು ಕೊಡಿಸಿ ಕಳುಹಿಸಿಕೊಂಡು । ನರನಾಥನೆಡೆಗೈದಿದನು ॥ ೨೫ ॥

ಬಂದ ವೃತ್ತಾಂತದೊಳೊಂದುಳಿಯದೆ ಮಂತ್ರಿ । ಬಂದು ನೃಪತಿಗಱುಪಿದೊಡೆ ॥
ಅಂದು ಸಂತಸವಟ್ಟುಭಯ ಲೋಕಕೆ ಹಿತ । ವೆಂದ ನೀ ಮಾಡಿದ ಕಾರ್ಯ ॥ ೨೬ ॥

ಹಿತವರಿಲ್ಲೆಮಗೆ ನೀನಲ್ಲದೆಂದಾ ಭೂ । ಪತಿ ಮಂತ್ರಿಗುಡುಗೊಱೆಗೊಟ್ಟು ॥
ನುತಿಯಿಸಿ ಬುದ್ಧಿಗಳನು ಪೇಳಿ ತನ್ನಗ್ರ । ಸುತನ ಕರಸಿ ಪಟ್ಟಗಟ್ಟಿ ॥ ೨೭ ॥

ವನಗಿರಿಯಲಿ ತಪಗೈವ ಕುಮಾರಕ । ಮುನಿಗಳೆಡೆಗೆ ಬಂದು ನಮಿಸಿ ॥
ಮನಕೆ ಮಱುಕ ಪುಟ್ಟುವಂತೆ ಬಿನ್ನವಿಸಿದ । ಜನನಾಥನತಿ ಬಕತಿಯಲಿ ॥ ೨೮ ॥

ಮಱೆವುದು ನಾನು ಮಾಡಿದ ದೋಷಂಗಳ । ಮೆಱೆವುದು ನಿಮ್ಮ ಸದ್ಗುಣವ ॥
ಅಱುಪುದು ಧರ್ಮಾಧರ್ಮವನೆನಗೆಂ । ದೆಱಗಿದನವನಡಿಗಳಿಗೆ ॥ ೨೯ ॥

ಬಿಡು ಮನಸಿನ ಖೇದವ ದುರಿತವ ನೀನು । ಕೆಡಿಪುದನೆಣಿಸು ಚಿತ್ತದಲಿ ॥
ಕಡು ಕಷ್ಟ ಸಂಸಾರವೆಂಬುದ ನೀನತಿ । ದೃಢವಿಡಿಯೆಂದು ಪೇಳುತವೆ ॥ ೩೦ ॥

ತಂದೆಗೆ ಮಗ ಮುನಿವನು ಮಗನಿಗೆ ಯಾ । ತಂದೆ ಮುನಿವ ಸತಿಪತಿಗೆ ॥
ಅಂದು ಮುನಿವರೆಲೆ ಭೂಪಾಲಕ ಅದ । ಱಿಂದ ಸಂಸಾರವೆ ಕಷ್ಟ ॥ ೩೧ ॥

---

ಜ್ಞಾನದಿಂದ ತಿಳಿದು, 'ಈ ಕುಮಾರರು ತಮ್ಮ ಮೂರನೆಯ ಜನ್ಮದಲ್ಲಿ ರಾಮ ಕೇಶವರಾಗಿ. ಭರತ ಭೂಮಿಯ ಮೂರು ಖಂಡಗಳನ್ನೂ ಆಳುವರು" ಎಂದು ನುಡಿದರು. ॥ ೨೪ ॥ ಆಗ ಮಂತ್ರೀಶನು ಸಂತೋಷವನ್ನು ತಾಳಿ, ಅದೇ ಮಹಾಬಳ ಮುನಿಗಳಿಂದ, ಅವರಿಗೆ ಧರ್ಮೋಪದೇಶವನ್ನು ಕೊಡಿಸಿ ಜಿನದೀಕ್ಷೆಯನ್ನೂ ಕೊಡಿಸಿ, ಅಲ್ಲಿಂದ ಬೀಳ್ಕೊಟ್ಟು ರಾಜನ ಬಳಿಗೆ ಬಂದನು. ॥ ೨೫ ॥ ಮಂತ್ರಿಯು ರಾಜನಿಗೆ ನಡೆದ ಎಲ್ಲಾ ಸಂಗತಿಯನ್ನೂ ತಿಳಿಸಲು ರಾಜನು ಸಂತೋಷಪಟ್ಟು— "ನೀನು ಮಾಡಿದ ಕೆಲಸವು ಇಹಪರಗಳೆರಡಕ್ಕೂ ಹಿತಕರವಾದುದು' ಎಂದನು. ॥ ೨೬ ॥ "ನಿನಗಿಂತ ಹೆಚ್ಚಿನ ಹಿತವಂತರು ನಮಗೆ ಯಾರೂ ಇಲ್ಲ" ಎಂದು ರಾಜನು ಹೇಳಿ. ಮಂತ್ರಿಗೆ ಉಡುಗೊರೆಗಳನ್ನು ಕೊಟ್ಟು, ಕೊಂಡಾಡಿ. ಯೋಗ್ಯ ನೀತಿಗಳನ್ನು ಬೋಧಿಸಿ. ತನ್ನ ಹಿರಿಯ ಮಗನಿಗೆ ಪಟ್ಟಕಟ್ಟಿದನು ॥ ೨೭ ॥ ಆ ಮೇಲೆ ರಾಜನು ಅರಮನೆಯಿಂದ ಹೊರಟು ವನಗಿರಿಯಲ್ಲಿ ತಪಸ್ಸುಮಾಡುವ ಕುಮಾರಕ ಮುನಿಗಳ ಬಳಿಗೆ ಬಂದು, ವಂದಿಸಿ. ಮನಸ್ಸಿಗೆ ಮರುಕವುಂಟಾಗುವಂತೆ ಹೀಗೆ ವಿಜ್ಞಾಪಿಸಿದನು. ॥ ೨೮ ॥ 'ನಾನು ಮಾಡಿರುವ ತಪ್ಪುಗಳೆಲ್ಲವನ್ನೂ ಮರೆಯುವುದು, ನಿಮ್ಮ ಒಳ್ಳೆಯ ಗುಣಗಳನ್ನು ಮೆರೆಯಿಸುವುದು. ತನಗೆ ಧರ್ಮ ಅಧರ್ಮಗಳ ವಿವರವನ್ನು ತಿಳಿಸುವುದು" ಎಂದು ಅವರ ಪಾದಕ್ಕೆ ನಮಸ್ಕರಿಸಿದನು. ॥ ೨೯ ॥ ಆಗ ಕುಮಾರಕ ಮುನಿಗಳು ಹೀಗೆಂದರು—"ನಿನ್ನ ಮನಸ್ಸಿನ ಕಳವಳವನ್ನು ಬಿಡು. ಪಾಪವನ್ನು ನಾಶ ಮಾಡುವ ವಿಚಾರವನ್ನೇ ಎಣಿಸು, ಸಂಸಾರವೆಂಬುದು ಬಹಳ ಕಷ್ಟತರವಾದುದೆಂದು ನಿರ್ಧರಿಸು. ॥ ೩೦ ॥ ಎಲೈ ರಾಜನೇ. ಲೋಕದಲ್ಲಿ ಮಗನು ತಂದೆಯ ಮೇಲೆ ಸಿಟ್ಟಾಗುವನು. ಮಗನ ಮೇಲೆ ತಂದೆ ಕ್ರೋಧಗೊಳ್ಳುವನು. ಪತ್ನಿಯು ಗಂಡನ ಮೇಲೆ ಕೋಪಗೊಳ್ಳುವಳು, ಆದುದರಿಂದ ಸಂಸಾರವು ಕಷ್ಟಕರವಾದುದು"—ಎಂದರು ॥ ೩೧ ॥ ಆಗ ರಾಜನು ತನಗೆ ಜಿನ

ಕರುಣಿಸಿ ಜಿನದೀಕ್ಷೆಯ ಹಿಂದುಮುಂದಣ । ದುರಿತವನೀ ತೆಱದೊಳಗೆ ॥
ಪರಿಹರಿಸೆಂದು ನಿರೂಪಿಸೆನಲು ಪೇಳ್ದ । ರರಸನಿಗಾ ಮುನಿವರರು ॥ ೩೨ ॥

ಕೊಟ್ಟು ದೀಕ್ಷೆಯ ಕರ್ಮಗಳೆಡೆಯಾಡುವ । ಬಟ್ಟೆಯ ಕೆಡಿಸಿ ಸಂಸೃತಿಯ ॥
ಹುಟ್ಟುಗೆಡಿಪ ತೆಱನನು ಕಣ್ಣುದೆಱಪಾಗಿ । ನೆಟ್ಟನೆ ಪೇಳೆ ಕೈಕೊಂಡು ॥ ೩೩ ॥

ಉಗ್ರೋಗ್ರ ತಪವ ನೆಗಳಿಯವರುಭಯ ಪ । ರಿಗ್ರಹವನು ಪಱಿಪಡಿಸಿ ॥
ಉಗ್ರ ಕರ್ಮಗಳಿಗಳುಕದೆ ಮುಡುಪಿ ಲೋ । ಕಾಗ್ರಮನೈದಿದರಿತ್ತ ॥ ೩೪ ॥

ಅರಸ ಕೇಳವರ ಸಂಗಡ ಕೆಲ ಭೂಪರು । ಧರಿಸಿ ದೀಕ್ಷೆಯ ತಂತಮ್ಮ ॥
ಪರಿಣಾಮಕೆ ತಕ್ಕ ಗತಿವಡೆದರು ಮ । ತ್ತಿರದೆ ಕುಮಾರಮುನಿಗಳು ॥ ೩೫ ॥

ಇರದಲ್ಲಿ ಕಷ್ಟತಪದಿ ನೆಗಳುತ ಖಡ್ಗ । ಪುರದೊಳು ತಪಯೋಗವಿರಲು ॥
ಅರಸು ಸುಪ್ರಭ ಪುರುಷೋತ್ತಮರವರಲ್ಲಿ । ಯಿರುತಿರೆ ರಾಮಕೇಶವರು ॥ ೩೬ ॥

ಅವಱೊಳು ಪುರುಷೋತ್ತಮನ ಸಂಪದಗಾಣು । ತವೆ ಚಂದ್ರಚೂಳ ಮುನೀಂದ್ರ ॥
ಹವಣಿಗನೊಲಿಸಿ ನಿಧ್ಯಾನಿಸಿದನು ಮ । ತ್ತವರಿರ್ವರಿರುತಿರ್ದು ಬಳಿಕ ॥ ೩೭ ॥

ತನುವನುಳಿದು ಸತ್ಕುಮಾರಕಲ್ಪದ ನವ । ಕನಕಪ್ರಭ ವಿಮಾನದಲಿ ॥
ಕನಕಚೂಳನೆಂಬ ದೇವನಾಗಿಯೆ ಬಂದು । ಜನಿಸಿದ ವಿಜಯಮುನೀಶ ॥ ೩೮ ॥

ಆ ದಿವದೊಳು ಮಣಿಪ್ರಭವಿಮಾನದಿ ಬಂ । ದಾದರದಿಂ ಚಂದ್ರಚೂಳ ॥
ಆದನು ಮಣಿಚೂಳನೆಂದೆಂಬ ದೇವ ಶು । ಭೋದಯದಿಂದವರಲ್ಲಿ ॥ ೩೯ ॥

---

ದೀಕ್ಷೆಯನ್ನು ದಯೆಪಾಲಿಸಿ ಹಿಂದಿನ ಮತ್ತು ಮುಂದಿನ ಪಾಪಗಳೆಲ್ಲವನ್ನೂ ಪರಿಹಾರಮಾಡಬೇಕೆನ್ನಲು, ಅರಸನಿಗೆ ಆ ಮುನೀಶ್ವರರು ಧರ್ಮೋಪದೇಶವನ್ನು ಮಾಡಿದರು ॥ ೩೨ ॥ ಆ ಮುನಿಗಳು ರಾಜನಿಗೆ ಜಿನದೀಕ್ಷೆಯನ್ನು ಕೊಟ್ಟು. ಕರ್ಮಗಳು ಸಂಚಾರಮಾಡುವ ದಾರಿಯನ್ನೇ ಕೆಡಿಸಿ ಸಂಸಾರದ ಹುಟ್ಟನ್ನೇ ನಾಶಮಾಡುವ ವಿಧಾನವನ್ನು ಸ್ಪಷ್ಟವಾಗಿ ತಿಳಿಸಿದರು ರಾಜನು ಆ ಬೋಧನೆಯನ್ನು ಸ್ವೀಕರಿಸಿದನು ॥ ೩೩ ॥ ರಾಜನೂ ಅವನ ಸಂಗಡಿಗರೂ ಅತಿ ಭಯಂಕರವಾದ ತಪವನ್ನು ಮಾಡಿ. ಎಲ್ಲಾ ಪರಿಗ್ರಹಗಳನ್ನೂ ಕಿತ್ತೊಗದು. ಕಠಿಣವಾದ ಕರ್ಮಗಳಿಗೆ ಅಂಜದೆ ಅವನ್ನೆಲ್ಲಾ ಕೆಡಿಸಿ, ಲೋಕಾಗ್ರವನ್ನೇರಿದರು ॥ ೩೪ ॥ ಎಲೈ ರಾಜನೇ (ರಾಮನೇ). ಕೇಳು ಅವರೊಡನೆ ಇನ್ನೂ ಹಲವರು ರಾಜರು ದೀಕ್ಷೆ ತಾಳಿ, ತಂತಮ್ಮ ಫಲಕ್ಕೆ ತಕ್ಕ ಗತಿಯನ್ನು ಪಡೆದರು ಆ ಮೇಲೆ ಕುಮಾರ ಮುನಿಗಳ ವಿಷಯವನ್ನು ಕೇಳು ॥ ೩೫ ॥ ಕುಮಾರ ಮುನಿಗಳು ಕಠಿಣವಾದ ತಪಸ್ಸನ್ನು ಮಾಡುತ್ತ ಖಡ್ಗಪುರದಲ್ಲಿದ್ದರು ಅವರೊಡನೆ ಈ ಸುಪ್ರಭಪುರುಷೋತ್ತಮರು—ಅಂದರೆ. ರಾಮಕೇಶವರು ಇದ್ದರು ॥ ೩೬ ॥ ಅವರಲ್ಲಿ ಚಂದ್ರಚೂಳ ಮುನಿಯೂ ವಿಜಯ ಮುನಿಯೂ ಧ್ಯಾನ ಮಾಡುತ್ತ ಇದ್ದರು. ॥ ೩೭ ॥ ವಿಜಯನು ತಪಸ್ಸನ್ನೆಸಗಿ ದೇಹವನ್ನು ಬಿಟ್ಟು. ಸತ್ಕುಮಾರ ಕಲ್ಪದ ಕನಕಪ್ರಭವೆಂಬ ವಿಮಾನದಲ್ಲಿ ಹೋಗಿ ಕನಕಚೂಳನೆಂಬ ದೇವನಾಗಿ ಜನಿಸಿದನು ॥ ೩೮ ॥ ಚಂದ್ರಚೂಳನು ದೇಹಾವಸಾನದಲ್ಲಿ ಮಣಿಪ್ರಭವೆಂಬ ವಿಮಾನದಲ್ಲಿ ಬಂದು, ಮಣಿಚೂಳನೆಂಬ ಗಂಧರ್ವನಾದನು ಇವರಿಬ್ಬರು ಒದಗಿದ ಶುಭ ಪರಂಪರೆಗಳಿಂದಿದ್ದರು ॥ ೩೯ ॥ ಹೀಗೆ ಈ ಮಣಿಚೂಳ ಕನಕಚೂಳರು ಸಪ್ತಸಾಗರ ಕಾಲದ ಆಯುಷ್ಯವನ್ನು ಹೊಂದಿ. ಸುಖವನ್ನು ಅನುಭವಿಸಿ ಮನ್ಮಥನಿಗೆ ಐದು ಮಡಿ ಬೆಳಗುವ ರೂಪಿನಿಂದ ಪುನಃ ಹುಟ್ಟಿದರು ॥ ೪೦ ॥ ಜಂಬೂದ್ವೀಪದ ಭರತ ಕ್ಷೇತ್ರದಲ್ಲಿ ರಮಣೀಯವಾಗಿರುವ ಕಾಶಿ

ಎಣಿಸದೆ ಸಪ್ತಸಾಗರ ಕಾಲದಾಯುವ । ದಣಿಯಲುಂಡಲ್ಲಿಂದ ಬಂದು ॥
ಮಣಿಚೂಳ ಕನಕಚೂಳನು ಎಂಬ ದೇವ ಪೂ । ಗಣಿಯುಗ್ಗೈವಡಿಯು ರೂಪಿನಲಿ ॥ ೪೦ ॥

ಜಂಬೂದ್ವೀಪದ ಭರತಕ್ಷೇತ್ರದ ಕ । ಣ್ಗೆಂಬಪ್ಪ ಕಾಶೀವಿಷಯದ ॥
ತುಂಬಿದ ನಾಡ ಮಧ್ಯದ ವಾರಣಾಸಿಯೆಂ । ದೆಂಬ ಪಟ್ಟಣವ ಪಾಲಿಸುವ ॥ ೪೧ ॥

ದಶರಥ ನೃಪತಿಗೆ ಸುಬಳಾದೇವಿಗೆ । ಯೆಸೆವ ಕನಕಚೂಳದೇವ ॥
ಪೊಸಗಾಡಿವೆತ್ತು ಶ್ರೀರಾಮಚಂದ್ರಮನೆಂಬ । ಪೆಸರವ ನೀನಾದೆ ಮಗನೆ ॥ ೪೨ ॥

ಅವನಿಪ ಕೇಳವನಿಗೆ [1][ಕೈಕಾದೇವಿ][1] । ಯುವತಿಯಂತವರಿರ್ವರಿಗೆ ॥
ವಿವರಿಸೆ ಮಣಿಚೂಳದೇವ ಲಕ್ಷ್ಮಣನೆಂಬ । ಕುವರನಿವನು ಪುಟ್ಟಿದನು ॥ ೪೩ ॥

ರಾಜ್ಯಾಧಿಪತಿ ನಿಮ್ಮ ಭವವಿಂದು ಸಂಸಾರ । ಪೂಜ್ಯವೆಂಬುದ ಕೇಳ್ದಱಿಯ ॥
ತ್ಯಾಜ್ಯವ ಮಾಡಿ ಪಡೆದರು ಬಲ್ಲವರತಿ । ಪೂಜ್ಯವಡೆದ ಪುಣ್ಯಕಥೆಯ ॥ ೪೪ ॥

ಆಗಲವರು ಪರಿಗ್ರಹಿತ ಶ್ರಾವಕಧರ್ಮ । ರಾಗೆ ಲಕ್ಷ್ಮಣ ನಿದಾನದಲಿ ॥
ಭೋಗೋಪಭೋಗಾ ಶಕ್ತದಿಂ ಧರ್ಮಾನು । ರಾಗಮಾತ್ರದೊಳಿರೆ ಮುನಿಯ ॥ ೪೫ ॥

ಬಂದಿಸಿ ರಾಮಲಕ್ಷ್ಮಣರು ಸಾಕೇತಕ್ಕೆ । ಬಂದೊಯ್ಯನೆ ಪಲಪಗಲು ॥
ಅಂದು ಸಂತಸದೊಳಗಿರುತಿರ್ದರಬಲೆ ಕೇ । ಳೊಂದಾನೊಂದು ದಿನದೊಳು ॥ ೪೬ ॥

ಭರತ ಶತ್ರುಘ್ನರಿಗಾ ಸಾಕೇತದ । ಅರಸುತನವ ಕೊಟ್ಟವರು ॥
ಭರದಿ ಬಂದರು ವಾರಣಾಸಿಗೆ ಸಂತಸ । ಶರಧಿಯೊಳೋಲಾಡುತಿರಲು ॥ ೪೭ ॥

ಅಲ್ಲಿಯವರು ಪುತ್ರ ಪೌತ್ರಾದಿಗಳತಿ । ಸಲ್ಲೀಲೆಯಿಂದವೆ ಪಡೆದು ॥
ತಲ್ಲಣವಿಲ್ಲದೆ ಪಲವು ಪಗಲು ಸುಖ । ದಲ್ಲಿರುತಿರ್ದೊಂದು ದಿವಸ ॥ ೪೮ ॥

---

ಯೆಂಬ ನಾಡಿನ ನಡುವಣ ವಾರಣಾಸಿಯೆಂಬ ಪಟ್ಟಣವನ್ನು ಆಳುವ – ॥ ೪೧ ॥ ದಶರಥನೆಂಬ ರಾಜನಿಗೆ ಅವನ ಮಡದಿಯಾದ ಸುಬಳಾದೇವಿಯಲ್ಲಿ ಕನಕಚೂಳದೇವನು ಸುಂದರನಾದ ಪುತ್ರನಾಗಿ ಜನಿಸಿದನು. ಆ ಶ್ರೀರಾಮಚಂದ್ರನೆಂಬ ಮಗನೇ ನೀನು ॥ ೪೨ ॥ ಎಲೈ ರಾಮನೇ ಕೇಳು, ಅದೇ ದಶರಥನಿಗೆ ಕೈಕೆಯೆಂಬ ಮಡದಿಯಿದ್ದಳು. ಅವರಿರ್ವರಿಗೆ ಮಗನಾಗಿ ಮಣಿಚೂಳದೇವನು ಲಕ್ಷ್ಮಣನೆಂಬ ಹೆಸರಿನಲ್ಲಿ ಬಂದವನು ಇವನೇ ॥ ೪೩ ॥ ಎಲೈ ರಾಜನಾದ ರಾಮನೇ, ನಿಮ್ಮ ಜನ್ಮವು ಇಂದು ಸಂಸಾರದಲ್ಲಿ ಅತ್ಯಂತ ಪೂಜ್ಯವೆನಿಸಿದೆ ಜ್ಞಾನಿಗಳು ತ್ಯಾಗವನ್ನು ಮಾಡಿ, ಪುಣ್ಯದಿಂದ ಈ ಕಥೆಯನ್ನು ಕೇಳುವರು ॥ ೪೪ ॥ ಆಗ ರಾಮಲಕ್ಷ್ಮಣರಿಬ್ಬರೂ ಶ್ರಾವಕಧರ್ಮವನ್ನು ಸ್ವೀಕಾರಮಾಡಿ, ಭೋಗಾದಿಗಳನ್ನು ಬಿಟ್ಟು ಧರ್ಮದಲ್ಲಿ ಅನುರಾಗವುಳ್ಳವರಾದರು. ॥ ೪೫ ॥ ಎಲೈ ಚೇಳಿನಿಯೇ, ಆ ರಾಮಲಕ್ಷ್ಮಣರು, ಮುನೀಶ್ವರನನ್ನು ನಮಸ್ಕರಿಸಿ, ಅಯೋಧ್ಯೆಗೆ ಬಂದು, ಹಲವಾರು ವರ್ಷ ಹೀಗೆ ಸಂತೋಷದಿಂದ ಇದ್ದರು ಆ ಮೇಲೆ ಒಂದಾನೊಂದು ದಿವಸ ॥ ೪೬ ॥ ಭರತ ಶತ್ರುಘ್ನರಿಗೆ ಆ ಸಾಕೇತ ಪಟ್ಟಣದ ಒಡೆತನವನ್ನು ಕೊಟ್ಟು, ರಾಮಲಕ್ಷ್ಮಣರಿಬ್ಬರೂ ವಾರಣಾಸಿಗೆ ಬಂದು ಸಂತೋಷವೆಂಬ ಸಾಗರದಲ್ಲಿ ತೇಲಾಡುತ್ತಿದ್ದರು. ॥ ೪೭ ॥ ವಾರಣಾಸಿಯಲ್ಲಿ ಅವರು ಮಕ್ಕಳು ಮೊಮ್ಮಕ್ಕಳನ್ನು ಪಡೆದು, ಸಂತೋಷ ಸುಖಗಳಿಂದ ಹಲವು

---

[1] ಪೃಥ್ವೀಸೌಂದರಿ (?).

ನಾಗವಾಹಿನಿಯೆಂಬ ಶಯನಸ್ಥಳದೊಳ । ನಾಗ ಸ್ವಪ್ನತ್ರಯಗಂಡು ।
ಆ ಗುಣಮಣಿ ಲಕ್ಷ್ಮಣ ಬಂದು ಪೇಳಿದ । ಬೇಗದಿಂ ರಾಮಚಂದ್ರಮಗೆ ॥ ೪೯ ॥

ಅದನವ ಕೇಳಿ ಪುರೋಹಿತಗಱುಪಲಂ । ದದಱ ಫಲವನವನಿರದೆ ॥
ಚದುರೋಕ್ತಿಯಿಂದ ಪೇಳಿದನಿಂತೆಂದೆಲೆ । ಮದದಾನೆಗಮನೆ ಲಾಲಿಪುದು ॥ ೫೦ ॥

ತರಣಿಮಂಡಲ ರಾಹುಗ್ರಸ್ತದಿಂದಸ್ತ । ಗಿರಿಯನೈದಿದುದಱಿಂ ನಿನಗೆ ॥
ಇರದೆ ಪೋಪವು ಭೋಗೋಪಭೋಗಂಗಳು । ನರನಾಥ ಧವಲಪ್ರಸಾದ ॥ ೫೧ ॥

ಧರೆಗೇಕಭಾಗ ಬಿದ್ದುದಱಿಂದ ದೀಕ್ಷೆಯ । ಧರಿಸುವೆಯಾಲದ ಮರನ ॥
ಕರಿಕಿತ್ತುದಱಿಂದ ಬಲುರುಜೆ ಲಕ್ಷ್ಮಣ । ಗಿರದೆ ಬಾಧಿಸುತಿಹುದರಸ ॥ ೫೨ ॥

ಮಾಡಿಸು ನಾನಾ ಶಾಂತಿಕರ್ಮಗಳ ನೀ । ಮಾಡಿಸು ಹೋಮಾದಿಗಳ ॥
ಮಾಡಿಸು ಜಪವನ್ನ-ಹೇಮ-ಭೂದಾನವ । ಮಾಡಿಸು ಮನವೊಲಿದರಸ ॥ ೫೩ ॥

ಎಂದು ಪುರೋಹಿತ ಪೇಳಲದಕೆಯುವ । ನಂದು ಸಕಲದಾನಗಳೊಳು ॥
ಒಂದುಳಿಯದೆ ಮಾಡಿಸಬೇಕೆನುತ ಮನ । ದಂದನು ಬೇಗದೊಳಿಂದು ॥ ೫೪ ॥

ಜಪವ ಮಾಡಿಸುವರು ಮಂತ್ರವೇಳಿಸುವರು । ವಿಪುಲ ಹೋಮವನೆಸಗುವರು ॥
ತಪಗೊಡಿಸುವರು ವಿತ್ತವನಿರದೀವರು । ಕೃಪೆಯಿಂದ ಸಕಲಜೀವರಿಗೆ ॥ ೫೫ ॥

ಜಿನಪೂಜೆಗಳ ಮಾಡಿಸಿ ಜಿನಶಾಸ್ತ್ರವ । ಜಿನಮುನಿಗಳಿಗಿತ್ತಿರದೆ ॥
ಜಿನಭಕ್ತರಿಗೆ ಸತ್ಕರಿಸುವರವರಂದು । ಜಿನಬಿಂಬಗಳ ತಿರ್ದಿಸುವರು ॥ ೫೬ ॥

---

ಕಾಲ ಇದ್ದರು ॥ ೪೮ ॥ ಹೀಗಿರಲು ಒಂದಾನೊಂದು ದಿವಸ ಲಕ್ಷ್ಮಣನು ನಾಗವಾಹಿನಿಯೆಂಬ ಶಯನಸ್ಥಳದಲ್ಲಿ ಮೂರು ಕನಸುಗಳನ್ನು ಕಂಡು, ಅವನ್ನು ಅಣ್ಣನಾದ ರಾಮಚಂದ್ರನಿಗೆ ತಿಳಿಸಿದನು ॥ ೪೯ ॥ ಎಲೈ ಚೇಳಿನಿಯೇ ಕೇಳು ಶ್ರೀರಾಮನು ಆ ಕನಸಿನ ಸಂಗತಿಯನ್ನು ಕೇಳಿ, ಅದರ ಫಲವೇನೆಂದು ಪುರೋಹಿತನನ್ನು ಕೇಳಿದನು ಆಗ ಪುರೋಹಿತನು ಹೀಗೆಂದನು ॥ ೫೦॥ ಸೂರ್ಯಮಂಡಲವು ರಾಹುವಿನಿಂದ ನುಂಗಲ್ಪಟ್ಟು ಅಸ್ತಮಾನ ಹೊಂದಿದ ಕಾರಣ, ನಿನ್ನ ಸುಖಭೋಗಗಳೆಲ್ಲವೂ ಕೆಡುವವು ॥ ೫೧ ॥ ಆ ಸೂರ್ಯಮಂಡಲದ ಒಂದು ಭಾಗವು ಭೂಮಿಗೆ ಬಿದ್ದಂತೆ ಕಂಡುದರಿಂದ, ನೀನು ಜಿನದೀಕ್ಷೆಯನ್ನು ವಹಿಸುವೆ ಆನೆಯು ಆಲದ ಮರವನ್ನು ಕಿತ್ತಂತೆ ಕಂಡುದರ ಫಲವಾಗಿ ಲಕ್ಷ್ಮಣನು ಅತಿಶಯವಾದ ರೋಗಕ್ಕೆ ಗುರಿಯಾಗುವನು ॥ ೫೨ ॥ ಆದುದರಿಂದ ಇದಕ್ಕೆ ಪರಿಹಾರವಾಗಿ ಶಾಂತಿಕರ್ಮಗಳನ್ನು ಮಾಡಿಸು ಹೋಮಾದಿಗಳನ್ನೂ ಅನ್ನದಾನ, ಸುವರ್ಣದಾನ ಭೂದಾನ ಮೊದಲಾದುವನ್ನೂ ಮನಮೆಚ್ಚಿನಿಂದ ಮಾಡಿಸು ॥ ೫೩ ॥ ಹೀಗೆ ಪುರೋಹಿತನು ಸ್ವಪ್ನ ಫಲವನ್ನೂ ಅದಕ್ಕೆ ಶಾಂತಿಯನ್ನೂ ಹೇಳಲು ಅವನು ಎಲ್ಲಾ ದಾನಗಳಲ್ಲಿ ಯಾವುದೊಂದನ್ನೂ ಉಳಿಯದಂತೆ ಬೇಗನೆ ಮಾಡಲು ಯೋಚಿಸಿದನು ॥ ೫೪ ॥ ಅದರಂತೆ ಜಪ ಮಾಡಿಸುವುದು, ಮಂತ್ರ ಹೇಳಿಸುವುದು, ಬಹು ವಿಧದ ಹೋಮ ಗಳನ್ನು ನಡೆಸುವುದು ತಪಸ್ಸು ಮಾಡಿಸುವುದು, ಎಲ್ಲರಿಗೂ ದ್ರವ್ಯವನ್ನು ದಾನ ಮಾಡುವುದು—ಮುಂತಾದ ಕಾರ್ಯಗಳು ನಡೆದವು ॥ ೫೫ ॥ ಜಿನೇಶ್ವರರ ಪೂಜೆ, ಜಿನಮುನಿಗಳಿಗೆ ಜಿನಶಾಸ್ತ್ರದಾನ, ಜಿನಭಕ್ತರಿಗೆ ಆದರಾತಿಥ್ಯ, ಜಿನಬಿಂಬಗಳ ರಚನೆ—ಮುಂತಾದ ಕಾರ್ಯಗಳು ನಡೆದವು ॥ ೫೬ ॥ ಮುತ್ತು, ಹವಳ, ನೀಲರತ್ನ, ಪದ್ಮರಾಗ, ವೈಡೂರ್ಯ, ವಜ್ರ ಗಳಿಂದಲೂ, ಮಾಣಿಕ್ಯದ ಕಿಸಗಳಿಂದಲೂ ಶ್ರೇಷ್ಠವಾದ ಜಿನಪ್ರತಿಮೆಗಳನ್ನು ಕೆತ್ತಿದರು ॥ ೫೭ ॥ ಆ ಜಿನಪ್ರತಿಮೆಗಳಿಗೆ

ಮುತ್ತಿನಿಂ ಪವಳದಿಂ ಪಚ್ಚೆಯಿಂ ಪದ್ಮದಿಂ । ಮತ್ತೆ ವೈಡೂರ್ಯ ವಜ್ರಗಳಿಂ ॥
ಕೆತ್ತಿಸುವರು ಮಾಣಿಕದೆಸೆ ರಾಜಿಯಿಂ । ದುತ್ತಮ ಜಿನಬಿಂಬಗಳನು ॥ ೫೭ ॥

ಆ ಜಿನಬಿಂಬಗಳಿಗೆ ತಕ್ಕ ಭವನವ । ರಾಜಿಸುವಂತೆ ಕೈಗೈಸಿ ॥
ಪೂಜೆಗಳನು ಮಾಡಿಸಿಯುವರುರುಪುಣ್ಯ । ಭಾಜನರಾದರಬ್ಜಾಕ್ಷಿ ॥ ೫೮ ॥

ಕ್ಷೇತ್ರವ ಸಾಧುವಿಪ್ರರಿಗಿರದೀವರು । ಪಾತ್ರವಱಿದು ದಾನವಾಳ್ವ ॥
ಗೋತ್ರವಱಿದು ಕನ್ನಿಕೆಯ ಕೊಡುವರೇಣ । ನೇತ್ರೆಯಾ ರಾಮಚಂದ್ರಮನು ॥ ೫೯ ॥

ಬಿಡದಿಂತು ನಾನಾ ಶಾಂತಿಕರ್ಮಗಳನಾ । ಪೊಡವೀಶ ಮಾಡಿಸುತಿರ್ದ ॥
ಅಡಸಿ ಬಂದುದು ದುಷ್ಕರ್ಮಲಕ್ಷಣ ವದ । ನುಡಿವೊಡರಿದು ಮೃಗನೇತ್ರೆ ॥ ೬೦ ॥

ಏನಮಾಡಿದೊಡೊಮ್ಮೆಗೆ ಜನ್ಮಾಂತರದಿಂ । ತಾನು ಮಾಡಿದ ದುಷ್ಕರ್ಮ ॥
ತಾನನುಭವಿಸಿದಲ್ಲದೆ ಪೋಗಲಱಿಯದು । ಮಾನಿನಿ ನೀನಱಿತಿಹುದು ॥ ೬೧ ॥

ಪೂರೈಸಲು ಬಲುರುಜೆ ಕಟ್ಟಿದಾಯುಷ್ಯ । ತೀರಲು ಸತ್ತು ಲಕ್ಷ್ಮಣನು ॥
ಸಾರಿದ ಪಂಕಪ್ರಭೆಯೆಂಬ ನರಕವ । ಸಾರರೆ ವಿಕಲ ಮಾನಸರು ॥ ೬೨ ॥

ತಮ್ಮನ ಶಾರೀರ ಸಂಸ್ಕಾರವನವ । ಹಮ್ಮನೆ ಮಾಡಿದ ಮನಕೆ ॥
ಉಮ್ಮಳ ಪುಟ್ಟಿತು ಪುಟ್ಟಲೊಲ್ಲವೆ ತನ್ನ । ನೆಮ್ಮುಗೆಯಾದವರಳಿಯೆ ॥ ೬೩ ॥

ಚಿಂತೆಯು ಬಿಡದು ದುಃಖದ ನೆಲೆಯಾದನ । ತ್ಯಂತ ವ್ಯಾಕುಲದರಸಾದ ॥
ಸಂತಸವಱತೆದೆಯವನಾದನವನಂ । ತಿಂತಾದನವನಳಿವಿನಲಿ ॥ ೬೪ ॥

ಹಿಂದೆ ಜಾನಕಿಯ ವಿಯೋಗದಿಂದೈವಡಿ । ಬಂದಡಸಿತು ಬಲು ಚಿಂತೆ ॥
ಎಂದೆನೆ ಬಲರಾಮನೆಣೆಯುನಿನ್ನಂತಿಂ । ತೆಂದು ನುಡಿವ ಕವಿ ಯಾರು ॥ ೬೫ ॥

---

ತಕ್ಕದಾದ ಜಿನಾಲಯವನ್ನೂ ರಚಿಸಿ, ಅಲ್ಲಿ ಅಲಂಕಾರದಿಂದ ಪೂಜೆಗಳನ್ನು ಮಾಡಿಸಿ, ಆ ರಾಮಲಕ್ಷ್ಮಣರು ಪುಣ್ಯಕ್ಕೆ ಪಾತ್ರರಾದರು ॥ ೫೮ ॥ ಸಾಧು ಜನರಿಗೂ ಬ್ರಾಹ್ಮಣರಿಗೂ ಪಾತ್ರವನ್ನರಿತು ಗದ್ದೆಗಳನ್ನು ದಾನವಾಗಿ ಕೊಟ್ಟರು ಕುಲಗೋತ್ರವನ್ನು ತಿಳಿದು ಕನ್ಯೆಯರನ್ನು ಮದುವೆಮಾಡಿ ಕೊಡುವ ಏರ್ಪಾಡುಗಳೂ ನಡೆದವು. ॥ ೫೯ ॥ ಹೀಗೆ ಶ್ರೀರಾಮನು ನಾನಾ ವಿಧವಾದ ಶಾಂತಿಕರ್ಮಗಳನ್ನು ಮಾಡಿಸುತ್ತಿದ್ದನು ಎಲೈ ಚೇಳಿನಿಯೇ. ಹೀಗಿರಲು ದುಷ್ಕರ್ಮದ ಲಕ್ಷಣವು ಸಮೀಪಿಸಿ ಬಂದುದನ್ನು ಹೇಳುವುದೇ ಅಸಾಧ್ಯವಾಗಿದೆ ! ॥ ೬೦ ॥ ಎಲೈ ಚೇಳಿನಿಯೇ, ಏನು ಮಾಡಿದರೂ ಕೂಡ, ತಾನು ಬೇರೆ ಜನ್ಮದಲ್ಲಿ ಮಾಡಿದ ಕೆಟ್ಟ ಕೆಲಸದ ಫಲವು ಅನುಭವಿಸಿದಲ್ಲದೆ ಹೋಗಲಾರದು ಇದನ್ನು ನೀನು ತಿಳಿದುಕೋ ॥ ೬೧ ॥ ಲಕ್ಷ್ಮಣನಿಗೆ ಬಹಳವಾದ ವ್ಯಾಧಿಯು ಬಂದು, ಅವನನ್ನು ಸಮಾಪ್ತಿಗೊಳಿಸಿತು ಅವನು ಪಡೆದ ಆಯುಷ್ಯವೆಲ್ಲವೂ ತೀರಿದಾಗ ಅವನು ಸತ್ತು ಪಂಕಪ್ರಭೆಯೆಂಬ ನರಕಕ್ಕೆ ಹೋದನು. ಪಾಪ ಮಾಡಿದವರು ಹೀಗೆ ನರಕಕ್ಕೆ ಹೋಗದಿರುವರೆ? ॥ ೬೨ ॥ ಶ್ರೀರಾಮನು ಆಗ ತನ್ನ ತಮ್ಮನ ದೇಹಸಂಸ್ಕಾರವನ್ನು ಕೂಡಲೇ ಮಾಡಿದನು. ಅವನ ಮನಸ್ಸಿಗೆ ಬಹಳ ವ್ಯಥೆಯಾಯಿತು ತನ್ನನ್ನು ಅನುಸರಿಸಿ ಬಂದ ವ್ಯಕ್ತಿಗಳು ಅಳಿದಾಗ ಹೀಗೆ ವ್ಯಥೆಯಾಗದೆ ಇದ್ದೀತೆ? ॥ ೬೩ ॥ ಲಕ್ಷ್ಮಣನ ಮರಣದಿಂದ ಚಿಂತೆಯು ರಾಮನನ್ನು ಅಂಟಿಕೊಂಡಿತು ಅವನು ದುಃಖಿತನಾದನು, ವ್ಯಾಕುಲಕ್ಕೆ ಒಡೆಯನಾದನು ಸಂತೋಷವು ಆರಿಹೋದ ಮನಸ್ಸಿನವನಾದನು. ಲಕ್ಷ್ಮಣನ ಅಳಿವಿನಿಂದ ರಾಮನ ಮನಸ್ಸೇ ಕದಡಿತು. ॥ ೬೪ ॥ ಪೂರ್ವದಲ್ಲಿ ಸೀತೆಯ ಅಗಲಿಕೆಯಿಂದಾದ ದುಃಖಕ್ಕೆ

ಒಡಹುಟ್ಟಿದವನ ವಿಯೋಗದಿಂ ಮನದೊಳು । ಕಡುನೊಂದು ಕರೆಸಿ ಮಂತ್ರಿಯನು ॥
ನುಡಿದ ಮುಂದಣ ಕಾರ್ಯಭಾಗೆಯ ಮಾತನು । ಪೊಡವಿಪನತಿ ವಿವರದಲಿ ॥ ೬೬ ॥

ಏಕೆ ನಿಮಗೆ ಚಿತ್ತದಲಿ ಕೇಳಿಂತಪ್ಪ । ವ್ಯಾಕುಲವನು ಬೇಗದಲಿ ॥
ಸಾಕುಮಾಡುವುದೆಂದು ಬುದ್ಧಿಯ ಬಲದಿಂದ । ನೇಕಪರಿಯಲಿ ಪೇಳಿದೊಡೆ ॥ ೬೭ ॥

ಪಡಿಮಾತುಗೊಳಬೇಡಾಪ್ತ ಸಚಿವ ಕೇಳು । ಪೊಡವಿಯ ಸುತರ ಕೈಯಿಂದ ॥
ಬಿಡದಾಳಿಸಿಕೊಂಡು ಬುದ್ಧಿಗಲಿಸಿಕೊಂಡು । ನಡೆಯೆಂದವ ನಿರವಿಸಿದ ॥ ೬೮ ॥

ತರುಣಿ ಲಾಲಿಪುದು ಲಕ್ಷ್ಮಣನಿಗೆ ಪೃಥ್ವೀಸೌಂ । ದರಿಯೆಂಬಳರಸಿಯವರಿಗೆ ॥
ಇರದೆ ಪುಟ್ಟಿದ ಪೃಥ್ವೀಚಂದ್ರಂಗೆ ರಾಜ್ಯವ । ಭರದಿ ಪಟ್ಟವ ಕಟ್ಟಿ ನೃಪತಿ ॥ ೬೯ ॥

ತನಗೆ ಸೀತೆಗೆ ಪುಟ್ಟಿದೆಣ್ಬರು ಮಕ್ಕಳ । ವಿನಯದಿಂ ಕರಸಿ ಕೇಳಿದೊಡೆ ॥
ಜನನಾಥನೊಡನೊಲ್ಲೆವೆಂದರು ತನ್ನಗ್ರ । ತನುಜ ವಿಜಯರಾಮಾದಿಗಳು ॥ ೭೦ ॥

ಕಿಱಿಯ ಸುತರೊಳಜಿತಂಜಯನಿಗೆ ಕಣ್ಣು । ದೆಱಪಾಗಿ ಬುದ್ಧಿಯ ತೆಱನ ॥
ಅಱುಪಿ ಮಂತ್ರಿಯ ಕೈಲೆಡೆಗೊಟ್ಟು ಕುವರಗೆ । ಮಱುಕದಿಂದಾ ರಾಮಚಂದ್ರ ॥ ೭೧ ॥

ಕಟ್ಟಿದ ಯುವರಾಜಪಟ್ಟವ ಜನಕಗೆ । ಪುಟ್ಟಿದ ಸುತರಿಲ್ಲದಿರಲು ॥
ಕೊಟ್ಟು ಸೀತೆಯರನುಮತದಿಂದ ಮಿಥಿಳಾ । ಪಟ್ಟಣದರಸುತನವನು ॥ ೭೨ ॥

ಈ ತೆಱದೊಳು ನಂದನರಿಗೆ ರಾಜ್ಯವನಿತ್ತು । ಭೂತಳಪತಿಯಲ್ಲಿರದೆ ॥
ಮಾತೇನು ಮನಸಿನ ಸಂತಸದಿಂ ಸಾ । ಕೇತಪುರಕೆ ಬಂದನಬಲೆ ॥ ೭೩ ॥

---

ಐದು ಮಡಿಯಾದ ಚಿಂತೆ ರಾಮನಿಗೆ ಉಂಟಾಯಿತು ಹೀಗೆನ್ನುವಾಗ ರಾಮನಿಗೆ ಸಮಾನನಾದವನು ಹಾಗೆ ಹೀಗೆ ಎಂದು ಹೇಳುವ ಕವಿ ಯಾವನು? ॥ ೬೫ ॥ ಶ್ರೀರಾಮನು ತನ್ನ ಒಡಹುಟ್ಟಿದವನಾದ ಲಕ್ಷ್ಮಣನ ಅಗಲಿಕೆಯಿಂದ ಮನಸ್ಸಿನಲ್ಲಿ ಬಹಳ ವ್ಯಥೆಗೊಂಡು, ಮಂತ್ರಿಯನ್ನು ಕರೆಸಿದನು ಅವನು ಮುಂದಿನ ಕಾರ್ಯಭಾಗದ ಮಾತನ್ನು ಹೀಗೆ ಹೇಳಿದನು. ॥ ೬೬ ॥ ಮಂತ್ರಿಯು ರಾಮನೊಡನೆ, ನಿಮಗೆ ಮನಸ್ಸಿನಲ್ಲಿ ಇಂತಹ ಕಳವಳವೇಕೆ? ಅದನ್ನು ಬಿಡಿ—ಎಂದು ತನ್ನ ಬುದ್ಧಿಯ ಬಲದಿಂದ ಅನೇಕ ರೀತಿಯಲ್ಲಿ ಹೇಳಿದನು ॥ ೬೭ ॥ ಆಗ ರಾಮನು—"ಎಲೈ ಮಂತ್ರಿಯೇ, ನನಗೆ ವಿರೋಧದ ಮಾತನ್ನು ಆಡದಿರು ನನ್ನ ಈ ರಾಜ್ಯವನ್ನು ಮಕ್ಕಳ ಕೈಯಿಂದ ಆಳಿಸಿಕೊಳ್ಳುತ್ತ, ಅವರಿಗೆ ಯೋಗ್ಯವಾದ ಮಾರ್ಗದರ್ಶನ ಮಾಡುತ್ತ ಇರು' ಎಂದು ಆಜ್ಞೆ ಮಾಡಿದನು ॥ ೬೮ ॥ ಎಲೈ ಚೆಲುವೆಯೇ ಕೇಳು ಲಕ್ಷ್ಮಣನಿಗೆ ಪೃಥ್ವೀಸೌಂದರಿಯೆಂಬ ಅರಸಿಯಲ್ಲಿ ಜನಿಸಿದ ಪೃಥ್ವೀಚಂದ್ರನಿಗೆ ಶ್ರೀರಾಮನು ರಾಜ್ಯದ ಪಟ್ಟವನ್ನು ಕಟ್ಟಿದನು ॥ ೬೯ ॥ ಶ್ರೀರಾಮನಿಗೆ ಸೀತೆಯಲ್ಲಿ ಜನಿಸಿದ ಎಂಟುಮಂದಿ ಮಕ್ಕಳನ್ನು ವಿನಯದಿಂದ ಕರೆದು ಕೇಳಿದಾಗ, ಅವರಲ್ಲಿ ಹಿರಿಯರಾದ ವಿಜಯರಾಮ ಮೊದಲಾದ ಏಳು ಮಂದಿಯೂ ರಾಜ್ಯಸಂಪತ್ತಿಯನ್ನು ಒಲ್ಲೆವೆಂದರು ॥ ೭೦ ॥ ಶ್ರೀರಾಮನು ಆ ಮೇಲೆ ತನ್ನ ಕಿರಿಯ ಮಗನಾದ ಅಜಿತಂಜಯನಿಗೆ ಕಣ್ಣು ತೆರೆವಂತೆ ಬುದ್ಧಿನೀತಿಗಳನ್ನು ಹೇಳಿ, ಮಂತ್ರಿಯ ವಶದಲ್ಲಿ ಕೊಟ್ಟನು ॥ ೭೧ ॥ ಮಿಥಿಳೆಯ ರಾಜನಾದ ಜನಕನಿಗೆ ಗಂಡುಮಕ್ಕಳಿಲ್ಲದುದರಿಂದ ಮಿಥಿಳೆಯ ಯುವರಾಜ ಪಟ್ಟವನ್ನು ಅಜಿತಂಜಯನಿಗೆ ಸೀತಾದೇವಿಯ ಅನುಮತಿಯಿಂದ ಕೊಟ್ಟನು ॥ ೭೨ ॥ ಎಲೈ ಚೆಲುವೆಯೇ, ಹೀಗೆ ಶ್ರೀರಾಮನು ಮಕ್ಕಳಿಗೆ ರಾಜ್ಯಾಧಿಕಾರವನ್ನು ಕೊಟ್ಟು, ಅಲ್ಲಿ ನಿಲ್ಲದೆ ಮನಸ್ಸಂತೋಷದಿಂದ ನಾಕೇತ ನಗರಕ್ಕೆ ಬಂದನು ॥ ೭೩ ॥ ಆ ಮೇಲೆ ಶ್ರೀರಾಮನು

ಆ ವಿಭು ವರಸಿದ್ಧಾರ್ಥವನದೊಳಾದಿ । ದೇವನ ಪರಿನಿಷ್ಕ್ರಮಣದ ॥
ಪಾವನಮಪ್ಪ ಭೂಮಿಯೊಳಿರ್ದ ಶಿವಗುಪ್ತ । ಕೇವಳಿಗಳ ಕಂಡು ನಮಿಸಿ　　॥ ೭೪ ॥

ಅಂದು ನಿಟ್ಟಿಸಿ ಮೂಮೆ ಬಲವಂದು ಸಂಸಾರ । ದಂದವಾವುದು ಮುನಿರಾಯ ॥
ಎಂದೆನಲವರಾ ರಾಮಚಂದ್ರನಿಗಿಂ । ತೆಂದು ನಿರವಿಸಿದರಬಳೆ　　॥ ೭೫ ॥

ಅರಸ ಸಂಸಾರ ಸಂಸಾರಕ್ಕೆ ಕಾರಣ । ವಿರದೆ ಸಂಸಾರಫಲವದು ॥
ವರಮೋಕ್ಷ ಮೋಕ್ಷಕ್ಕೆ ಕಾರಣವದ ಕಿ । ನ್ನುರುಮೋಕ್ಷ ಫಲವೆಂದರವರು　　॥ ೭೬ ॥

ಮುನಿನಾಥ ಕೇಳೆನ್ನ ತಮ್ಮ ಲಕ್ಷ್ಮಣನೆಲ್ಲಿ । ಜನಿಸಿದ ನೆಲನಾವುದೆನಲು ॥
ಜನನಾಥ ಕೇಳು ಪಂಕಪ್ರಭೆಯೊಳು ಪುಟ್ಟಿ । ಮನದಿ ನೋವುತಲಿರ್ದನವನು　　॥ ೭೭ ॥

ಕೆಲವು ಕಾಲದ ಮೇಲೆ ಬಂದವನಲ್ಲಿಂದ ಕೆಲವು ಭವವನನುಭವಿಸಿ ॥
ತೊಲಗದ ಸುಖವ ಪಡೆದು ಮುಕ್ತಿಯೆಂದೆಂಬ ಲಲನೆಯನಾಲಿಂಗಿಸುವನು　　॥ ೭೮ ॥

ಎಂದೆನಲದ ಕೇಳಿ ಪೂರ್ವಜನ್ಮದ ನೇಹ । ದಿಂದ ಮನದೊಳಾ ನೃಪತಿ ॥
ನೊಂದನವನ ಬೋಧಿಸಬೇಕೆನುತ ಮನ । ದಂದಿರ್ದಾ ಸಮಯದಲಿ　　॥ ೭೯ ॥

ಮಡದಿ ಕೇಳ್ ಸುಗ್ರೀವನಣುವ ವಿಭೀಷಣ । ಪೊಡವೀಶರೈನೂರ್ವರೆರಸು ॥
ಬಿಡದೆಂಟುಸಾವಿರ ಪುತ್ರ ಪೌತ್ರರುಗೂಡಿ । ಪಡೆದನರಸ ದೀಕ್ಷೆಯನು　　॥ ೮೦ ॥

ಸೀತೆ ಪೃಥ್ವೀಸೌಂದರಿ ಮೊದಲಾಗಿಯಂ । ದಾ ತರಳಾಯತಾಕ್ಷಿಯರು ॥
ನೀತಿಯಿಂ ಶ್ರುತವತಿಕಂತಿಕೆಯರ ಕೈಯ । ಲೋತು ದೀಕ್ಷೆಯ ಕೊಂಡರಬಲೆ　　॥ ೮೧ ॥

---

ಆದಿತೀರ್ಥಂಕರನಾದ ವೃಷಭ ಸ್ವಾಮಿಯು ಪರಿನಿಷ್ಕ್ರಮಣ ಹೊಂದಿದ ಪವಿತ್ರವಾದ ಸ್ಥಳದಲ್ಲಿ ಇದ್ದ ಶಿವಗುಪ್ತರೆಂಬ ಕೇವಲಿಗಳನ್ನು ಕಂಡು ನಮಸ್ಕರಿಸಿದರು. ॥ ೭೪ ॥ ಎಲೈ ಚೇಳಿನಿಯೇ, ಹೀಗೆ ರಾಮನು ಆ ಮುನಿಗಳನ್ನು ನೋಡಿ, ಮೂರು ಬಾರಿ ಪ್ರದಕ್ಷಿಣೆ ಬಂದು, ಎಲೈ ಮುನೀಶ್ವರನೇ, ಈ ಸಂಸಾರಕ್ಕೆ ಕಾರಣ ಮತ್ತು ಫಲಗಳಾವುವು? ಎಂದು ಕೇಳಿದನು. ಅದಕ್ಕೆ ಅವರು ಹೀಗೆಂದರು—॥ ೭೫ ॥ "ಎಲೈ ರಾಜನೇ, ಸಂಸಾರಕ್ಕೆ ಕಾರಣವೂ ಫಲವೂ ಸಂಸಾರವೇ ಆಗಿರುತ್ತದೆ. ಶ್ರೇಷ್ಠವೆನಿಸುವ ಮೋಕ್ಷವೇ ಮೋಕ್ಷಕ್ಕೆ ಕಾರಣ, ಅದಕ್ಕೆ ಫಲವೂ ಮೋಕ್ಷವೇ"—ಎಂದರು. ॥ ೭೬ ॥ ಎಲೈ ಮುನೀಶನೇ, ನನ್ನ ತಮ್ಮನಾದ ಲಕ್ಷ್ಮಣನು ಎಲ್ಲಿದ್ದಾನೆ? ಅವನು ಯಾವ ಕಡೆ ಜನಿಸಿದ್ದಾನೆ?—ಎಂದು ರಾಮನು ಕೇಳಿದನು. ಆಗ ಶಿವಗುಪ್ತರು ಹೀಗೆಂದರು—"ಎಲೈ ರಾಜನೇ. ಲಕ್ಷ್ಮಣನು ಪಂಕಪ್ರಭೆಯೆಂಬ ನರಕದಲ್ಲಿ ಹುಟ್ಟಿ ಯಾತನೆ ಪಡುತ್ತಿರುವನು. ॥ ೭೭ ॥ ಕೆಲವು ಕಾಲ ಕಳೆದ ಮೇಲೆ ಅವನು ಆ ನರಕದಿಂದ ಬಂದು, ಹಲವು ಪುನರ್ಜನ್ಮಗಳನ್ನು ಅನುಭವಿಸಿ, ಶಾಶ್ವತವಾದ ಸುಖವನ್ನು ಪಡೆಯುವನು—ಮೋಕ್ಷಾಂಗನೆಯನ್ನು ವರಿಸುವನು" ಎಂದು ಹೇಳಿದರು ॥ ೭೮ ॥ ಹೀಗೆ ಮುನಿಗಳು ಹೇಳಿದುದನ್ನು ಕೇಳಿ ಶ್ರೀರಾಮನು ತನ್ನ ಪೂರ್ವಜನ್ಮದ ಸ್ನೇಹವಶನಾಗಿ, ಮನಸ್ಸಿನಲ್ಲಿ ವ್ಯಥೆಪಟ್ಟು, ಅವನಿಗೆ ಬೋಧಿಸಬೇಕೆಂದು ನಿಶ್ಚಯಿಸಿದನು. ॥ ೭೯ ॥ ಎಲೈ ಮಡದಿ ಚೇಳಿನಿಯೇ ಕೇಳು ಆ ಸಂದರ್ಭದಲ್ಲಿ ಶ್ರೀರಾಮನು ಸುಗ್ರೀವ, ಅಣುವ, ವಿಭೀಷಣ, ಐನೂರು ಮಂದಿ ರಾಜರು. ಎಂಟು ಸಾವಿರ ಮಂದಿ ಮಕ್ಕಳು ಮೊಮ್ಮಕ್ಕಳು ಕೂಡಿ, ಜಿನದೀಕ್ಷೆಯನ್ನು ಪಡೆದನು. ॥ ೮೦ ॥ ಎಲೈ ಚೇಳಿನಿಯೇ. ಸೀತೆ-ಪೃಥ್ವೀಸೌಂದರಿ ಮೊದಲಾದ ಅರಸಿಯರು ಶ್ರುತವತಿ-ಕಂತಿಕೆಯರ ಕೈಯಿಂದ ದೀಕ್ಷೆಯನ್ನು ಪಡೆದುಕೊಂಡರು. ॥ ೮೧ ॥ ಚೇಳಿನಿಯೇ ಕೇಳು. ಪೃಥ್ವೀಚಂದ್ರ-ಅಜಿತಂಜಯರು ಒಟ್ಟಿಗೆ

ಮಡದಿ ಕೇಳ್ ಪೃಥ್ವೀಚಂದ್ರಮನಜಿತಂಜಯ । ರೊಡನೆ ಶ್ರಾವಕಧರ್ಮರಾಗಿ ॥
ಪೊಡವಟ್ಟು ಮುನಿಜನಗಳಿಗೆ ತತ್ಪುರಕಾಗಿ । ನಡೆದರಿರದೆಯತ್ತಲಿತ್ತ ॥ ೮೨ ॥

ವರದರುಶನ ಬೋಧ ಚಾರಿತ್ರ ತಪದೊಳು । ಪರಿಸದೆ ನೆಗಳೆ ಮುನಿಗಳು ॥
ಪರಿಹರಿಸುತಲಿರ್ದರು ದುರಿತವನ । ಚ್ಚರಿಯಲ್ಲ ಶುಭಚಿತ್ತರಿಗೆ ॥ ೮೩ ॥

ಮಾಸೋಪವಾಸ ಪಕ್ಷೋಪವಾಸಗಳಿಂದೆ । ಗಾಸಿ ಮಾಡುತ ಕರ್ಮಗಳನು ॥
ಮೀಸಲಳಿಯದೆ ತಪದಿ ನಡೆದರು ಮುಕ್ತಿ । ಯಾಸೆಯಿಂದಾ ಮುನಿನಿಕರ ॥ ೮೪ ॥

ಮಳೆಗಾಲದಿ ವಟತರುವಿಲಿ ಬೇಸಗೆ । ಗಳೊಳು ಕೋಡುಂಗಲ್ಲ ಮೇಲೆ ॥
ಕುಳಿರ್ವ ಹಿಮದೊಳು ಜಲಧಿಯ ತಡಿಯೊಳವ । ರಳುಕದೆ ತಪವ ಮಾಡಿದರು ॥ ೮೫ ॥

ಮಿಡುಕಲೀಯದೆಯಿಂದ್ರಿಯಗಳ ನಿಜಾತ್ಮನ । ತುಡುಕಿ ಜಾನಿಸಿ ದುರಿತವನು ॥
ಕೆಡಿಸುವ ಮುನಿಗಳು ಕೃಪೆಯುಳ್ಳವರೆಂದು । ನುಡಿವವರಿಂತು ನುಡಿವರು ॥ ೮೬ ॥

ಹಿಂದಣ ಕರ್ಮವ ತನುತನು ಮಾಳ್ಪರು । ಮುಂದಡಸುವ ಕರ್ಮ ನಿಚಯ ॥
ನಿಂದು ನಿಣುಕಿ ನಿಟ್ಟಿಸಲಮ್ಮವು ತಪ । ದಂದವನೇನೆಂಬೆನವರ ॥ ೮೭ ॥

ಎದೆಗೆಡಿಸಿದರೇಳು ವ್ಯಸನಂಗಳನೆಂಟು । ಮದದ ಮುಡುಕನಿಲಿಸಿದರು ॥
ಕದುಬ ನಿಲಿಸಿದರು ಮೋಹಮಲ್ಲನ ತಪ । ದೊದವ ನಾನೇನೆಂಬೆನವರ ॥ ೮೮ ॥

ನಿಲುವರು ಪಗಲಿರುಳೊಳು ಪ್ರತಿಮಾಯೋಗ । ಬಲಿವರು ಪದುಮಾಸನವ ॥
ತೊಲಗದೆ ಕುಕ್ಕುಟಾಸನದೊಳಾ ಜತಿಗಳು । ಒಲು ತಪಗೈವರಬ್ಜಾಕ್ಷಿ ॥ ೮೯ ॥

---

ಶ್ರಾವಕಧರ್ಮವನ್ನು ಕೈಗೊಂಡು, ಮುನಿಗಳಿಗೆ ನಮಸ್ಕರಿಸಿ, ತಮ್ಮ ಪಟ್ಟಣಕ್ಕೆ ತೆರಳಿದರು ॥ ೮೨ ॥ ಮುನಿಗಳು ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರ-ಎಂಬ ರತ್ನತ್ರಯಗಳನ್ನು ಪಡೆದು, ಬಿಡದೆ ತಪಸ್ಸನ್ನು ಮಾಡಿ, ತಮ್ಮ ಪಾಪಗಳ ಪರಿಹಾರವನ್ನು ಮಾಡುತ್ತಿದ್ದರು ಮಂಗಲಕರವಾದ ಮನಸ್ಸುಳ್ಳವರಿಗೆ ಇದು ಆಶ್ಚರ್ಯಸಂಗತಿಯಲ್ಲ ॥ ೮೩ ॥ ತಿಂಗಳ ಉಪವಾಸ, ಪಕ್ಷದ ಉಪವಾಸ-ಇತ್ಯಾದಿಗಳಿಂದ ಕರ್ಮಗಳನ್ನು ನಾಶಗೊಳಿಸಿ, ಸ್ಥಿರಚಿತ್ತದಿಂದ, ಮೋಕ್ಷಾಪೇಕ್ಷಿಗಳಾಗಿ ಮುನಿಗಳು ತಪಸ್ಸುಮಾಡಿದರು ॥ ೮೪ ॥ ಋಷಿಗಳು ಮಳೆಗಾಲದಲ್ಲಿ ಆಲದ ಮರದಲ್ಲಿಯೂ, ಬೇಸಗೆಯಲ್ಲಿ ಬೆಟ್ಟದ ತುದಿಯ ಬಂಡೆಗಲ್ಲಿನ ಮೇಲೆಯೂ, ಚಳಿ ಕೊರೆಯುತ್ತಿರುವ ಚಳಿಗಾಲದಲ್ಲಿ ಸಮುದ್ರತೀರದಲ್ಲಿಯೂ ತಪಸ್ಸು ಮಾಡಿದರು ॥ ೮೫ ॥ ಪಂಚೇಂದ್ರಿಯಗಳನ್ನು ಸ್ಥಿರವಾಗಿ ನಿಲ್ಲಿಸಿ, ಆತ್ಮಧ್ಯಾನವನ್ನು ಮಾಡುತ್ತ ಪಾಪವನ್ನು ನಾಶಗೊಳಿಸುವ ಮುನಿಗಳು ದಯಾವಂತರೆಂದು, ತಿಳಿದವರು ಹೇಳುವರು ॥ ೮೬ ॥ ಋಷಿಗಳು ತಪಸ್ಸಿನಿಂದ ತಮ್ಮ ಹಿಂದಿನ ಕರ್ಮಗಳನ್ನು ಚೂರು ಚೂರು ಮಾಡುವರು ಮುಂದೆ ಬಾಧಿಸತಕ್ಕ ಕರ್ಮಗಳು ಅವರನ್ನು ಇಣಿಕಿಯೂ ನೋಡಲಾರವು ॥ ೮೭ ॥ ಅವರು ತಪಸ್ಸಿನಿಂದ ಸಪ್ತವ್ಯಸನಗಳನ್ನು ಜಯಿಸಿದರು, ಅಷ್ಟಮದಗಳ ಡೊಂಕನ್ನು ತಿದ್ದಿದರು, ಮನ್ಮಥನ ಗರ್ವವನ್ನು ಭಂಗಿಸಿದರು ಅವರ ತಪಶ್ಶಕ್ತಿಯನ್ನು ನಾನೇನೆನ್ನಲಿ! ॥ ೮೮ ॥ ಎಲೈ ಚೆಳಿನಿಯೇ, ಆ ಯತಿಗಳು, ಹಗಲೂ ಇರುಳೂ ಪ್ರತಿಮಾಯೋಗದಲ್ಲಿ ನಿಲ್ಲುವರು, ಪದ್ಮಾಸನದಲ್ಲಿ ಕುಳಿತುಕೊಳ್ಳುವರು ಕೆಲವರು ಕುಕ್ಕುಟಾಸನದಲ್ಲಿ ಮಹಾ ತಪಸ್ಸನ್ನು ಆಚರಿಸುವರು ॥ ೮೯ ॥ ಮಡದಿಯೇ ಕೇಳು ಆ ಜೈನಯೋಗಿಗಳು ಸ್ವತಃ ಅಡಿಗೆಯನ್ನು ಮಾಡರು ಇತರರಿಂದ ಅಡಿಗೆಯನ್ನು ಮಾಡಿಸಲೂ ಒಪ್ಪುವವರಲ್ಲ ಹೀಗೆ ಅವರು ತಮ್ಮ ಶ್ರೇಷ್ಠವಾದ ಭಕ್ತಿಯಿಂದಲೇ ಇಷ್ಟಾರ್ಥವನ್ನು

ಆಡುವರಲ್ಲಡಿಸುವರಲ್ಲಡುವರಿಗೊಡ । ಬಡುವರಲ್ಲವರೆರ್ದೆಯೊಳಗೆ ॥
ಮಡದಿ ಲಾಲಿಸು ವೀರಭಾವರೆಯಿಂದವೆ । ಪಡೆವರಾ ಜೈನಯೋಗಿಗಳು ॥ ೬೦ ॥

ಎಡಗಯ್ಯ ಕುಂಛ ಕಮಂಡಲ ಪೆಗಲೊಳು । ಮಡಿದ ದಕ್ಷಿಣಹಸ್ತದಿಂದೆ ॥
ನಡೆವರು ನೊಗದ ಪ್ರಮಾಣ ನಿಟ್ಟಿಸಿ ಜೀವ । ಮಡಿವವೆಂದಂಜಿ ಯತಿಗಳು ॥ ೬೧ ॥

ತನುವ ತಪಕೆ ಜಿನರಾಜನೆಡೆಗೆ ತಮ್ಮ । ಮನವ ಸ್ತುತಿಗೆ ವಚನವನು ॥
ಮುನಿಜನಗಳು ಕೊಟ್ಟು ಬಲು ತಪಗೈವರು । ತನು ಮನ ವಚನದಿಂದಬಲೆ ॥ ೬೨ ॥

ಪಕ್ಷೋಪವಾಸ ಮಾಸೋಪವಾಸಕೆಯೊಮ್ಮೆ । ಭಿಕ್ಷವ ಕೊಂಡು ದೇಹವನು ॥
ರಕ್ಷಿಪರೆಂತೆನೆ ಜೈನಮುನಿಗಳು ಮು । ಮುಕ್ಷುಗಳಾದುದಱಿಂದ ॥ ೬೩ ॥

ಸಿಂಗ ಶರಭ ಶಾರ್ದೂಲ ಕರಡಿ ಪುಲಿ । ಸಂಗಡವಾ ಮುನಿಗಳಿಗೆ ॥
ಹಿಂಗದೆ ಶಾಂತದಿಂ ನಮಿಪವು ಕ್ರೂರ ಮೃ । ಗಂಗಳಿಲ್ಲವರಿರ್ದೆಡೆಯಲಿ ॥ ೬೪ ॥

ಮುಟ್ಟಲಮ್ಮವು ಮೋಹ ಮೊಯ್ಯನಿಣಿಕಿ ನಿಂದು । ನಿಟ್ಟಿಸದಾ ವೇದನೆಯು ॥
ಹುಟ್ಟುಗೆಟ್ಟುದು ಅಂತರಾಯುವವರು ಮನ । ಮುಟ್ಟಿ ಮಾಡುವ ತಪಕಬಲೆ ॥ ೬೫ ॥

ಹಸು ತೃಷೆ ನಿದ್ರೆಯಾ ತೃಷೆ ನಾನಾಬಲು । ವೆಸನ ಮುನೀಂದ್ರರುಗಳನು ॥
ಮಿಸುಕಲಂಜುವವೆನಲಾ ತಪಸ್ಸಿನದೊಂ । ದೆಸಕವನೇನೆಂಬೆನಬಲೆ ॥ ೬೬ ॥

ನಾಸಿಕಾಗ್ರದಲಿ ದಿಟ್ಟಿಯನಿಕ್ಕಿ ಮನದೊಳು । ಸೂಸಲೀಯದೆ ನಿಜಾತ್ಮನನು ॥
ಮೋಸಬಾರದೆ ಜಾನಿಸಿದರು ಜಾನಿಸರೆ ವಿ । ಲಾಸ ಮನದ ಮುನಿವರರು ॥ ೬೭ ॥

---

ಪಡೆಯುವರು. ॥ ೬೦ ॥ ಜೈನ ಯತಿಗಳು ನಡೆಯುವಾಗ, ಎಡಗೈಯಲ್ಲಿ ಕುಂಚಿ ಕಮಂಡಲುವನ್ನು ಹಿಡಿದುಕೊಂಡು, ಬಲಗೈಯನ್ನು ಹೆಗಲಿಗೆ ಮಡಚಿಟ್ಟುಕೊಂಡು, ಜೀವಿಗಳು ಪಾದದ ಅಡಿಗೆ ಬಿದ್ದು ಸಾಯದಂತೆ ನೊಗದ ಪ್ರಮಾಣದ ದಾರಿಯನ್ನು ನೋಡುತ್ತ ನಡೆವರು ॥ ೬೧ ॥ ದೇಹವನ್ನು ತಪಸ್ಸಿಗೂ, ಮನಸ್ಸನ್ನು ಜಿನೇಶನಿಗೂ, ಮಾತನ್ನು ಜಿನಸ್ತುತಿಗೂ ಕೊಟ್ಟು, ಮುನಿಗಳು ತ್ರಿಕರಣ ಪೂರ್ವಕವಾಗಿ ಮಹಾತಪಸ್ಸನ್ನು ಮಾಡುವರು ॥ ೬೨ ॥ ಜೈನ ಮುನಿಗಳು ಮೋಕ್ಷವನ್ನು ಅಪೇಕ್ಷಿಸುವವರಾದುದರಿಂದ ಅವರು ಒಮ್ಮೊಮ್ಮೆ ಪಕ್ಷೋಪವಾಸವನ್ನೂ ಒಮ್ಮೊಮ್ಮೆ ಮಾಸೋಪವಾಸವನ್ನೂ ಮಾಡುತ್ತ, ಭಿಕ್ಷವನ್ನು ಸ್ವೀಕರಿಸಿ ದೇಹರಕ್ಷಣೆ ಮಾಡುವರು. ॥ ೬೩ ॥ ಸಿಂಹ, ಶರಭ, ಶಾರ್ದೂಲ, ಕರಡಿ, ಹುಲಿ— ಮುಂತಾದ ಕ್ರೂರ ಪ್ರಾಣಿಗಳು ಆ ಋಷಿಗಳಿಗೆ ಶಾಂತತೆಯಿಂದ ನಮಿಸುವವು ಜೈನ ಮುನಿಗಳಿದ್ದಲ್ಲಿ ಮೃಗಗಳು ತಮ್ಮ ಕ್ರೂರತ್ವವನ್ನು ಬಿಡುವವು ॥ ೬೪ ॥ ಅವರು ಮಾಡುವ ತಪಸ್ಸಿಗೆ ಹೆದರಿ ಮೋಹವೆಂಬುದು ಅವರನ್ನು ಸ್ಪರ್ಶಿಸಲಾರದು. ನೋವು ಒಮ್ಮೆಯಾದರೂ ಅವರನ್ನು ಇಣಕಿಯೂ ನೋಡದು ವಿಘ್ನವೆಂಬುದು ಎಂದೂ ಉಂಟಾಗದು. ॥ ೬೫ ॥ ಎಲ್ಗೆ ಚೇಳಿನಿಯೇ, ಹಸಿವು, ಬಾಯಾರಿಕೆ, ನಿದ್ರೆ—ಇವಲ್ಲದೆ ಹಲವು ವಿಧದ ವ್ಯಸನಗಳು ಆ ಮುನೀಶ್ವರರನ್ನು ನೋಕಲಾರವು. ಹೀಗಿರುವಾಗ ಅವರ ತಪಸ್ಸಿನ ರಚನೆಯನ್ನು ಏನೆನ್ನಲಿ ! ॥ ೬೬ ॥ ಆ ಮುನೀಶ್ವರರು ಮೂಗಿನ ತುದಿಯಲ್ಲಿ ತಮ್ಮ ದೃಷ್ಟಿಯನ್ನು ನೆಲೆಗೊಳಿಸಿ, ಆತ್ಮವನ್ನು ತಮ್ಮ ಹೃದಯದಲ್ಲಿ ನಿಲ್ಲಿಸಿ, ಕದಲದೆ ಧ್ಯಾನ ಮಾಡುವರು. ॥ ೬೭ ॥ ಆ ಮುನೀಶ್ವರರು ಗ್ರಾಮ, ನಗರ, ಹಳ್ಳಿ, ಗ್ರಾಮ ಸಮೂಹ ಪಡಬ (ಗ್ರಾಮ), ದ್ರೋಣಾಮುಖ— ಮುಂತಾದ

ಗ್ರಾಮ ನಗರ ಖೇಡ ಖರ್ವಡ ಮಡಬ ದ್ರೋ । ಣಾಮುಖವೆಂಬಿವಱೊಳಗೆ ॥
ಆ ಮುನಿವರರು ಚರಿಸಿ ತಪ ಮಾಡುವ । ರಾಮುದ ಮಿಗೆ ಮನದೊಳಗೆ ॥ ೯೮ ॥

ಕಣ್ಣಿದ್ದು ಕಾಣರು ಕಿವಿಯಿದ್ದು ಕೇಳರು । ಹೆಣ್ಣೆಂಬ ಹೆಸರ ಹಿಡಿಯರು ॥
ಉಣ್ಣರುಣಿಸನು ಉಡರು ಮೀಯರು ತಪ । ಬಣ್ಣಿಸಲಳವೆ ಜತಿಗಳ ॥ ೯೯ ॥

ಗಿರಿಯಲಿ ಗಹ್ವರದಲಿ ಕಲ್ಲ ಗುಹೆಯಲಿ । ವರ ಪರ್ವತದಗ್ರದಲಿ ॥
ತರುಮೂಲದಲಿ ಭೀಮಾಟವಿಯಲಿ ಮುನಿ । ವರರುಗ್ರತಪವ ಮಾಡುವರು ॥ ೧೦೦ ॥

ಕಱೆವರು ಧರ್ಮಾಮೃತವ ಮಿಥ್ಯಾತ್ವವ । ಮಱೆವರು ಕಾಸಿ(?) ಪಂಚಕವ ॥
ತೊಱೆವರು ಶುದ್ಧಾತ್ಮನ ನೆಲೆಗಳನವ । ರಱಿವರು ಮೃಗಶಿಶುನಯನೆ ॥ ೧೦೧ ॥

ನುಡಿಯೆಲ್ಲ ಪುಣ್ಯದ ಬೀಜ ಭಾವಿಸೆ ಮೃದು । ನಡೆಯೆಲ್ಲ ಸುಗತಿಯ ತಾಣ ॥
ಬಿಡದೆ ನೋಡುವ ನೋಟವೆಲ್ಲ ದುರಿತದೋಜೆ (?) । ನುಡಿವುದೇನಾ ಮುನಿವರರ ॥ ೧೦೨ ॥

ಕಂಡೊಡೆ ನೆನೆದೊಡವರ ಪಾದಪದ್ಮವ । ಕೊಂಡಾಡಿದವರ ದುಷ್ಕರ್ಮ ॥
ಖಂಡಿಸಿ ಪೋಪವಾ ಜತಿಗಳ ತಪಕೆ ಭೂ । ಮಂಡಲದೊಳಗೆಣೆಯಾರು ॥ ೧೦೩ ॥

ಏನೆಂಬೆನವರುಗ್ರೋಗ್ರ ತಪವ ನಾ । ನೇನೆಂಬೆನವರ ಶಾಂತತೆಯ ॥
ಏನೆಂಬೆನವರ ದಯಾಪರತ್ವವ ನಾ । ನೇನೆಂಬೆನಂಬುಜನೇತ್ರೆ ॥ ೧೦೪ ॥

ಆರು ಬಣ್ಣಿಸರಾರು ಕೊಂಡಾಡದರಾ । ರಾರು ಪೊಗಳರು ನುತಿಸರು ॥
ಆರು ಕೀರ್ತಿಸರಾರು ನಮಿಸದರಾರವ । ರಾರಯ್ದು ನಡೆವ ತಪಸಿಗೆ ॥ ೧೦೫ ॥

---

ವುಗಳಲ್ಲೆಲ್ಲಾ ಸಂಚಾರ ಮಾಡಿ, ಸಂತೋಷದಿಂದ ತಪಸ್ಸನ್ನು ಎಸಗುವರು ॥ ೯೮ ॥ ಆ ಋಷಿಗಳು ಕಣ್ಣಿದ್ದರೂ ಕಾಣಬಾರದುದನ್ನು ಕಾಣರು, ಕಿವಿಯಿದ್ದರೂ ಕೇಳಲಾಗದುದನ್ನು ಕೇಳರು ಹೆಣ್ಣಿನ ಹೆಸರನ್ನೇ ಎತ್ತುವವರಲ್ಲ ಅವರು ಊಟ ಮಾಡದೆ, ಬಟ್ಟೆಯುಡದೆ ಸ್ನಾನ ಮಾಡದೆ ಇರುವರು ಅವರ ತಪಸ್ಸನ್ನು ವರ್ಣಿಸಲು ಸಾಧ್ಯವೇ? ॥ ೯೯ ॥ ಆ ಮುನಿವರರು ಬೆಟ್ಟ, ಕಾಡು ಕಲ್ಲಿನ ಗವಿ, ಪರ್ವತದ ತುದಿ, ಮರದ ಕೆಳಗೆ, ಭಯಂಕರ ವನ—ಮುಂತಾದ ಕಡೆಗಳಲ್ಲಿ ಘೋರ ತಪಸ್ಸನ್ನು ಮಾಡುವರು ॥ ೧೦೦ ॥ ಎಲೈ ಜೇಳಿನಿಯೇ. ಅವರು ಧರ್ಮವೆಂಬ ಅಮೃತವನ್ನು ಸುರಿಸುವರು, ಮಿಥ್ಯೆಯನ್ನು ಮರೆಯುವರು. ಅನ್ನ-ಪ್ರಾಣ-ಮನೋ-ವಿಜ್ಞಾನ-ಆನಂದ ಎಂಬ ಪಂಚಕೋಶಗಳನ್ನು ತೊರೆಯುವರು ಪರಿಶುದ್ಧನಾದ ಆತ್ಮನ ನೆಲೆಯನ್ನು ತಿಳಿಯುವರು ॥ ೧೦೧ ॥ ಅವರ ಮಾತು ಪುಣ್ಯದ ಬೀಜ. ಅವರ ನಡೆಯು ಸ್ಥಳವಲ್ಲ ಸದ್ಗತಿಯ ಸ್ಥಾನ ಅವರ ನೋಟವು ಪಾಪನಾಶಕ—ಹೀಗಿರುವಾಗ ಆ ಮುನಿವರರ ಮಹಿಮೆಯನ್ನು ಏನೆನ್ನಲಿ! ॥ ೧೦೨ ॥ ಆ ಜೈನಯತಿಗಳನ್ನು ನೋಡಿದರೆ ಸ್ಮರಿಸಿದರೆ ಪಾದಕಮಲವನ್ನು ಸ್ತುತಿಸಿದರೆ ಪಾಪಗಳೆಲ್ಲವೂ ಕಡಿದುಹೋಗುವುವು ಅವರ ತಪಸ್ಸಿಗೆ ಈ ಲೋಕದಲ್ಲಿ ಎಣೆಯಿಲ್ಲ ॥ ೧೦೩ ॥ ಎಲೈ ಜೇಳಿನಿಯೇ ಅವರ ಅತ್ಯಂತ ಘೋರವಾದ ತಪಸ್ಸನ್ನೂ, ಶಾಂತತೆಯನ್ನೂ, ದಯಾಗುಣವನ್ನೂ ನಾನು ಏನೆನ್ನಲಿ! ॥ ೧೦೪ ॥ ಹೀಗೆ ವಿಚಾರಪೂರ್ವಕವಾಗಿ ವರ್ತಿಸುವ ಯತಿಗಳನ್ನು ಯಾರು ವರ್ಣಿಸರು, ಯಾರು ಕೊಂಡಾಡದವರು, ಯಾರು ಹೊಗಳರು. ಯಾರು ಸ್ತುತಿಗೈಯರು? ಯಾರು ಕೀರ್ತಿಸರು! ಯಾರು ವಂದಿಸರು! ॥ ೧೦೫ ॥ ಮಾತಿನಲ್ಲಿ ಒಂದು, ಮನಸ್ಸಿನಲ್ಲಿ ಇನ್ನೊಂದು, ಕಾರ್ಯದಲ್ಲಿ ಮತ್ತೊಂದಾಗಿ

ಮಾತಿನೊಳೊಂದು ಮನದೊಳೊಂದು ವರ್ತನ । ರೀತಿಯೊಳೊಂದು ಲೋಕದೊಳು ॥
ಖ್ಯಾತಿ ಪೂಜೆಗೆ ಮೈಯೊಡ್ಡಿ ಮಾಡುವ ಮಿಂ । ಧ್ಯಾತಪಸ್ಸಿನ ತೆಱನಲ್ಲ ॥ ೧೦೬ ॥

ಮನವ ಮಾನಿನಿಗಿತ್ತು ತನುವ ತಪಸಿಗಿತ್ತು । ವನದಿ ಪಂಚಾಗ್ನಿಮಧ್ಯದಲಿ ॥
ಜನರಂಜನೆಗೆ ಮೈಯಿಕ್ಕಿ ಮಾಡುವರನ್ಯ । ಮುನಿಗಳ ತಪಸಿನಂತಲ್ಲ ॥ ೧೦೭ ॥

ವಲ್ಮೀಕವನು ಬಡಿದೊಡೆ ಪಾವು ಸಾವುದೆ । ಬಲ್ಮೆಯಿಂ ತನುವ ದಂಡಿಸಲು ॥
ಜಲ್ಮಾಂತದೆ ಬಂದ ದುರಿತ ಜೀವನ ಬಿಟ್ಟು । ಬಲ್ಮೊಲೆಯುಳೆ ಪೋದಪುದೆ ॥ ೧೦೮ ॥

ಜ್ಞಾನ ಬಂದಂತೆ ಜಪಿಸಿ ಕಂಗಳ ಮುಚ್ಚಿ । ಯೇನಾದೊಡೊಂದ ಮನದಲಿ ॥
ಜಾನಿಸಿ ಕರ್ಮಕತ್ತಲೆಯೊಳು ತೊಳಲುವ । ಜ್ಞಾನಿಯ ತಪಸಿನಂತಲ್ಲ ॥ ೧೦೯ ॥

ಬಱಿದೆ ಮಣಿಯ ತಿರುಪುತ ಕಣ್ಣನರೆ ಮುಚ್ಚಿ । ತಱಗೆಲೆಗಳ ತಿಂದು ತಮ್ಮ ॥
ತೆಱನಱಿಯದೆ ತಪ ಮಾಡಲು ದುಷ್ಕರ್ಮ । ಬಱಿವುದೆ ಬಟ್ಟವೊಲೆಯುಳೆ ॥ ೧೧೦ ॥

ಅಱಿಯಬೇಕಬಲೆ ತನ್ನಾತ್ಮನ ತೆಱನನು । ತೊಱೆಯಬೇಕುಭಯ ಭೋಗವನು ॥
ಮಱೆಯೇಕೆ ಜೈನಮುನೀಂದ್ರರ ತಪಸಿನ । ತೆಱನುಳಿದರಿಗೆ ಗೋಚರವೆ ॥ ೧೧೧ ॥

ಅಱುವಿನಂತಲ್ಲ ಮಱವೆಯಂತಲ್ಲದು । ಅಱಿವ ಮಱವೆಯ ಬೆರಕೆಯ ॥
ತೆಱನಂತಲ್ಲಾತ್ಮನ ನೆಲೆ ಜ್ಞಾನಿಗೆ । ಅಱಿಯಬಹುದು ಮೃಗನೇತ್ರೆ ॥ ೧೧೨ ॥

ನೆನೆಯಲರಿಯದು ನೆನೆದೊಡೆ ನಾಲಗೆಯ ತುದಿ । ಗೊನೆಗೆ ಬಾರದು ಬಂದಡಸುವ ॥
ಅನುವಡಿಸುವೊಡರಿದರಿದನವಧಿಭೋದ । ಮುನಿಗಲ್ಲದೊರ್ವರಿಗಬಲೆ ॥ ೧೧೩ ॥

---

ಲೋಕದಲ್ಲಿ ಕೀರ್ತಿಗಾಗಿಯೂ, ಹೊಗಳಿಸಿಕೊಳ್ಳುವುದಕ್ಕಾಗಿಯೂ ದೇಹವನ್ನು ಉಪಯೋಗಿಸಿ ಮಾಡುವ ಕಪಟದ ತಪಸ್ಸು ಆ ಜಿನಮುನಿಗಳದ್ದಲ್ಲ ॥ ೧೦೬ ॥ ಮನಸ್ಸನ್ನು ಹೆಣ್ಣಿನಲ್ಲಿಟ್ಟು, ದೇಹವನ್ನು ತಪಸ್ಸಿಗೆ ಕೊಟ್ಟು. ಕಾಡಿನಲ್ಲಿ ಪಂಚಾಗ್ನಿಯ ನಡುವೆ ಇದ್ದು, ಜನರನ್ನು ಆಕರ್ಷಿಸುವುದಕ್ಕಾಗಿ ದೇಹವನ್ನೊಡ್ಡಿ ಮಾಡುವ ಬೇರೆ ಮುನಿಗಳ ತಪಸ್ಸಿನಂತೆ ಇದಲ್ಲ. ॥ ೧೦೭ ॥ ಎಲೈ ಚೇಳಿನಿಯೇ, ಹುತ್ತವನ್ನು ಬಡಿದರೆ ಹಾವು ಸಾಯುವುದೆ? ಹಾಗೆಯೇ ಸಾಮರ್ಥ್ಯದಿಂದ ಈ ದೇಹವನ್ನು ಮಾತ್ರ ದಂಡಿಸಿದರೆ ಹಿಂದಿನ ಜನ್ಮಗಳಿಂದ ಬಂದ ಪಾಪವು ಈ ಜೀವನನ್ನು ಬಿಟ್ಟು ಹೋಗುವುದೆ? ॥ ೧೦೮ ॥ ಜ್ಞಾನ ಪಡೆದವನಂತೆ ಜಪಮಾಡುತ್ತ, ಕಣ್ಣುಗಳನ್ನು ಮುಚ್ಚಿ, ಮನಸ್ಸಿನಲ್ಲಿ ಏನಾದರೊಂದನ್ನು ನೆನೆಸುತ್ತ, ಕರ್ಮವೆಂಬ ಕತ್ತಲೆಯಲ್ಲಿ ಸುತ್ತಾಡುವ ಅಜ್ಞಾನಿಗಳ ತಪಸ್ಸಿನಂತಹದು ಜಿನಮುನಿಗಳದಲ್ಲ. ॥ ೧೦೯ ॥ ಎಲೈ ಚೇಳಿನಿಯೇ, ಜಪಮಣಿಯನ್ನು ಸುಮ್ಮನೆ ತಿರುಗಿಸುತ್ತ, ಕಣ್ಣನ್ನು ಅರ್ಧ ಮುಚ್ಚಿ, ತರಗೆಲೆಗಳನ್ನು ತಿಂದು, ತಮ್ಮ ವಿಚಾರವೇ ಇಲ್ಲದೆ, ತಪಸ್ಸನ್ನು ಮಾಡಿದ ಮಾತ್ರದಲ್ಲಿ ಪಾಪವು ಪರಿಹಾರವಾಗುವುದೆ? ॥ ೧೧೦ ॥ ತನ್ನ ಆತ್ಮನ ಸ್ಥಿತಿಯನ್ನು ತಿಳಿಯಬೇಕು. ಉಭಯ ಭೋಗಗಳನ್ನೂ ಬಿಡಬೇಕು. ಇದರಲ್ಲಿ ಮುಚ್ಚುಮರೆಯಿಲ್ಲ, ಜೈನ ಮುನಿಗಳ ವಿಚಾರವು ಇತರರಿಗೆ ತಿಳಿಯದು. ॥ ೧೧೧ ॥ ಎಲೈ ಚೇಳಿನಿಯೇ, ಆತ್ಮನ ನೆಲೆಯೆಂಬುದು ಅರಿವಿನಂತೆಯೂ ಅಲ್ಲ, ಮರವೆಯಂತೆಯೂ ಅಲ್ಲ, ಅರಿವು ಮತ್ತು ಮರವೆ ಎಂಬ ಎರಡರ ಬೆರಕೆಯಂತೆಯೂ ಅಲ್ಲ. ಅದು ಜ್ಞಾನಿಗೆ ಮಾತ್ರ ತಿಳಿಯಲು ಸಾಧ್ಯವಾಗುವಂಥದು ॥ ೧೧೨ ॥ ಅವಧಿಜ್ಞಾನವುಳ್ಳ ಮುನಿಗೆ ಮಾತ್ರವಲ್ಲದೆ, ಇತರರಿಗೆ ಆತ್ಮನನ್ನು ಸ್ಮರಿಸಲು ಸಾಧ್ಯವಾಗದು ಸ್ಮರಿಸಿದರೂ ಅದು ಉಚ್ಚಾರಣೆಗೆ ಬರಲಾರದು. ಬಂದರೂ ಅದನ್ನು ತಿಳಿದು ವಿವರಿಸಲು ಸಾಧ್ಯವಾಗದು. ॥ ೧೧೩ ॥ ಆತ್ಮನ ಪ್ರಕಾಶಕ್ಕೆ ಕೋಟಿಸೂರ್ಯರ

ಕೋಟಿ ರವಿಯುನೆಂಟು ಕೋಟಿ ಶಶಿಯು ಕೋಟಾ । ಕೋಟಿ ಕಾರ್ಮಿಂಚ ಸಹಸ್ರ ॥
ಕೋಟಿ ಸಪ್ತಾರ್ಚಿಯು ನಿಜಕಾಂತಿ ಸರಿದೊರೆ । ಪಾಟಿಯಲ್ಲಾತ್ಮನಿರವಿಗೆ ॥ ೧೧೪ ॥

ನೆಲನಾಗನ ತುಂಬ ಬಲ್ಲುದಲ್ಲಿಂ ಮೇಲೆ । ತೊಲಗಬಲ್ಲುದು ಮೂಜಗದ ॥
ಹೊಲಬ ತತ್‌ಕ್ಷಣದೊಳಱಿವುದಾತ್ಮನ ನೆಲೆ । ಬಲುಹು ಗೋಚರಿಸದೋರ್ವರಿಗೆ ॥ ೧೧೫ ॥

ಬಲುದೀವಿಗೆಯು ತುದಿ ಮೊದಲ ಸವಱಲು । ಜ್ವಲಿಪ ಮಧ್ಯದ ಕಾಂತಿಯಂತೆ ॥
ನೆಲಸಿ ನಿಲುವುದು ಜ್ಞಾನಿಯು ಚಿತ್ತದಲಿ ಕರ್ಮ । ತೊಲಗಿದ ಶುದ್ಧಾತ್ಮನಬಲೆ ॥ ೧೧೬ ॥

ಹಲವು ವರ್ಣದ ಪಶುಗಳ ಪಾಲೆಂತಂತೆ । ಹಲವು ನದಿಯು ಸಂಗಮದ ॥
ಜಲನಿಧಿಯಂತೆ ದುರಿತವಳಿದಾತನು । ತೊಲಗಿ ನಿಲಲು ಬೊಮ್ಮದಲ್ಲಿ ॥ ೧೧೭ ॥

ಹಲವು ಪುಟವನಿಕ್ಕಿ ಕಿಟ್ಟಕಾಳಿಕೆ ಬಿಟ್ಟು । ತೊಲಗೆ ಹೇಮದೊಳಾ ಕಾಂತಿ ॥
ಜ್ವಲಿಸುವಂದದೊಳು ದುರಿತವಳಿದಾತ್ಮನು । ತೊಲಗಿ ನಿಲಲು ಬೊಮ್ಮದಲ್ಲಿ ॥ ೧೧೮ ॥

ರವಿತೇಜ ಸುರವಿಯೋಗದೊಳಗ್ನಿಯ ತೇಜ । ಹವಿಯೊಳಗೆರವಿಲ್ಲದಂತೆ ॥
ಭವದೂರನಾದ ನಿಜಾತ್ಮ ಬೊಮ್ಮವನೈದಿ । ವಿವರಿಸಲೊಡನೊಂದಿಹುದು ॥ ೧೧೯ ॥

ಪಂಚಭೂತಿಕವಪ್ಪ ದೇಹವಳಿಯಲದು । ಪಂಚಭೂತಿಕವೈದಲದಱ ॥
ಸಂಚು ಗೋಚರಿಪುದೆ ಆತ್ಮ ಬೊಮ್ಮದ ಪ್ರಾ । ಪಂಚಕ ರೂಪಾಗಿಹುದು ॥ ೧೨೦ ॥

ತನ್ನೊಳು ತಾನೆ ವಿಚಾರಿಸಿಯಾತ್ಮನ । ತನ್ನಿಂದ ತಾನೆ ಜಾನಿಸಲು ॥
ತನ್ನಿಂದ ತಾನೆಯಳಿವುದು ದುರಿತ ಬೇ । ಱನ್ನೊಂದು ಜಾನಿಪೊಡಿಲ್ಲ ॥ ೧೨೧ ॥

---

ಪ್ರಕಾಶವೂ, ಎಂಟು ಕೋಟಿ ಚಂದ್ರರ ಕಾಂತಿಯೂ, ಎಷ್ಟೋ ಕೋಟಿ ಮಳೆಗಾಲದ ಮಿಂಚುಗಳೂ, ಸಾವಿರ ಕೋಟಿ ಅಗ್ನಿಯ ಪ್ರಕಾಶವೂ ಸಮಾನವೆನಿಸಲಾರವು ॥ ೧೧೪ ॥ ಆತ್ಮನು ನೆಲ ಬಾನುಗಳನ್ನು ತುಂಬಿ, ಅಲ್ಲಿಂದ ತೊಲಗಬಲ್ಲನು ಮೂರು ಲೋಕಗಳ ವಿವರವನ್ನೂ ಆತ್ಮಜ್ಞಾನದಿಂದ ತಿಳಿಯಲು ಸಾಧ್ಯ ಅಂತಹ ಆತ್ಮನ ನೆಲೆಯೂ ಸಾಮರ್ಥ್ಯವೂ ಯಾರೊಬ್ಬರಿಗೂ ಸುಲಭದಲ್ಲಿ ಕೈಸೇರಲಾರವು ॥ ೧೧೫ ॥ ದೊಡ್ಡದಾದ ದೀಪದ ತುದಿಯನ್ನೂ ಮೊದಲನ್ನೂ ತೆಗೆದು ಹಾಕಿದರೆ, ಪ್ರಕಾಶಮಾನವಾಗಿ ತೋರುವ ನಡುವಣ ಪ್ರಕಾಶದಂತೆ, ಜ್ಞಾನಿಯ ಮನಸ್ಸಿನಲ್ಲಿ ಕರ್ಮವು ತೊಲಗಿ ಹೋದಾಗ ಶುದ್ಧನಾದ ಆತ್ಮನು ನೆಲಸುವನು ॥ ೧೧೬ ॥ ಹಲವು ಬಣ್ಣಗಳುಳ್ಳ ಹಸುಗಳ ಹಾಲಿನಂತೆಯೂ, ಹಲವು ನದಿಗಳು ಸಂಗಮವಾದ ಸಮುದ್ರದಂತೆಯೂ ಪಾಪಗಳನ್ನು ನಾಶಮಾಡಿದಾತನ ಮನಸ್ಸು ಬ್ರಹ್ಮದಲ್ಲಿ ನೆಲೆನಿಲ್ಲುವುದು ॥ ೧೧೭ ॥ ಪಾಪಗಳನ್ನು ನಾಶಗೊಳಿಸಿ, ಪರಬ್ರಹ್ಮದಲ್ಲಿ ನೆಲೆನಿಂತ ಆತ್ಮನು, ಹಲವಾರು ಬಾರಿ ಪುಟವಿಕ್ಕಿ ಕಶ್ಮಲವನ್ನೆಲ್ಲ ಹೋಗಾಡಿಸಿದಾಗ ಚಿನ್ನದಲ್ಲಿ ಉಜ್ವಲ ಕಾಂತಿಯು ಕಾಣುವಂತೆ ಶೋಭಿಸುವವನು ॥ ೧೧೮ ॥ ಸೂರ್ಯನ ತೇಜವು ಸೂರ್ಯಮಂಡಲದಲ್ಲಿಯೂ, ಅಗ್ನಿಯ ಕಾಂತಿಯು ಹವಿಸ್ಸಿನಲ್ಲಿಯೂ ಇರುವಂತೆ ಜನ್ಮಕ್ಕೆ ದೂರವೆನಿಸಿರುವ ಆತ್ಮನು ಬ್ರಹ್ಮವನ್ನು ಸೇರಿ ಒಂದಾಗುವನು ॥ ೧೧೯ ॥ ಪಂಚಭೂತಾತ್ಮಕವಾದ ಶರೀರವು ನಾಶವಾದಾಗ ಪಂಚಭೂತಗಳನ್ನೇ ಸೇರಿದ ಮೇಲೆ, ಅದರ ಅಂಶವೇನೂ ಕಾಣಿಸದು ಹಾಗೆಯೇ ಆತ್ಮವು ಪರಬ್ರಹ್ಮದ ಪ್ರಾಪಂಚಿಕ ರೂಪವು ॥ ೧೨೦ ॥ ತನ್ನಲ್ಲಿ ತಾನೇ ವಿಚಾರಿಸಿಕೊಂಡು, ತಾನು ತಾನಾಗಿಯೇ ಆತ್ಮಧ್ಯಾನವನ್ನು ಮಾಡಿದಾಗ, ಪಾಪವು ತನ್ನಿಂದ ತಾನಾಗಿಯೇ ನಾಶವಾಗುವುದು ॥ ೧೨೧ ॥ ಎಲೈ ಚೆಳೆನಿಯೇ, ಆದುದರಿಂದಲೇ ಆತ್ಮನು ತಾನೇ ಸದಾಶಿವನೂ, ಜಿನನೂ, ಅರುಹನೂ, ಬುದ್ಧಿವಂತನೂ, ಶ್ರೇಷ್ಠಜ್ಞಾನಿಯೂ, ಶ್ರೇಷ್ಠ

ಅದಱಿಂದಲಾತ್ಮನೆ ತಾನೆ ಸದಾಶಿವ । ನದಱಿಂ ಜಿನಬುಧನರುಹ ॥
ಸದಮಲ ಜ್ಞಾನಿ ಪರಂಜ್ಯೋತಿ ಪರಬೊಮ್ಮ । ವದನೇನ ಬಣ್ಣಿಪೆನಬಲೆ ॥ ೧೨೨ ॥

ಆ ನಿಜಾತ್ಮನ ನೆಲೆಯಱಿಯದೆ ಮನದೊಳು । ಜಾನಿಸಲಘವಳಿದಪುದೆ ॥
ಆ ನಿಜಾತ್ಮನ ನೆಲೆಯಱಿದಗೆ ಬೇಱೊಂದು । ಜಾನಿಪೊಡಿಲ್ಲಂಬುಜಾಕ್ಷಿ ॥ ೧೨೩ ॥

ಅರಯ್ದು ನುಡಿವವರಾರಯ್ದು ನಡೆವವ । ರಾರಯ್ದು ತಪವ ಮಾಡುವರು ॥
ಆರಯ್ದುಣಿಸನುಂಬರು ಜೈನಮುನಿಗಳಿ । ಗಾರೆಣೆಯಂಬುಜನೇತ್ರೆ ॥ ೧೨೪ ॥

ನೆನೆಯರನ್ಯವ ನುಡಿಯರು ವಚನದಿ ತಮ್ಮ । ತನುವ ಬೀಸರವೋಗಿಸರು ॥
ವನಿತೆ ತ್ರಿಗುಪ್ತಿಸಂಪನ್ನರಾಗಿಯೆ ಜೈನ । ಮುನಿಗಳು ತಪವ ಮಾಡುವರು ॥ ೧೨೫ ॥

ಅಡವಿಯೆನ್ನರು ಹಲಬರು ಕೆಲಬರು ಕಾದಿ । ಮಡಿದ ತಾಣವಿದೆಂದೆಣಿಸರು ॥
ಸುಡುಗಾಡೆನ್ನದೆ ಯೇಕದಾರೇಶ್ವಡಿಂ (?) । ದೃಢವಾಗಿ ತಪವ ಮಾಡುವರು ॥ ೧೨೬ ॥

ಕೋಟರವಿದು ಕೋಡುವ ಭೂಮಿಯಿದು ಭೂ । ತಾಟದ ನೆಲನಿದೆಂಬುದನು ॥
ಪಾಟಮಾಡದೆ ತಪಮಾಡಿ ದುರಿತವ ನಿ । ರ್ದ್ದಾಟಿಸುವರು ಮುನಿವರರು ॥ ೧೨೭ ॥

ಕಾಡ ಕಿಚ್ಚಿಗೆಯರೆಬರು ಸೋಳ್ಪವೆಂದತಿ । ಮಾಡುವ ವಿಸರ್ವ್ಯಣೆಗಳಿಗೆ (?) ॥
ಹೇಡಿಗೊಳದೆ ಹೆದಱದೆ ನಿಜಮನ ನೀ । ರೋಡದೆ ತಪವ ಮಾಡುವರು ॥ ೧೨೮ ॥

ಬಱಸಿಡಿಲಿಗೆ ಬಲುಮಿಂಚಿಗೆ ಯೆಡೆಗೂಡಿ । ಕಱೆವುತಿರ್ಪಾನೆಕಲ್ಗಳಿಗೆ ॥
ಬಿಱುಗಾಳಿಗೆ ಭೀತಿ ಮಾಡದೆಯವರ । ಕ್ಕಱುಮಿಗೆ ತಪವ ಮಾಡುವರು ॥ ೧೨೯ ॥

ಮೊರೆವ ಪುಲಿಗೆ ಪೆರ್ಬಾವಿಗೆ ಗರ್ಜಿಪ । ಕರಿವೈರಿಗೆ ಜಕ್ಕುಲಿಸುವ ॥
ಕರಡಿಯ ದನಿಗೆ ಕಂಗೆಡದ ಮುನೀಶರು । ಪರಮಾತ್ಮನ ಜಾನಿಸುವರು ॥ ೧೩೦ ॥

---

ಪ್ರಕಾಶರೂಪನೂ, ಪರಬ್ರಹ್ಮನೂ ಆಗಿರುವನು ಅದನ್ನು ನಾನು ಏನೆಂದು ವರ್ಣಿಸಲಿ! ॥ ೧೨೨ ॥ ಎಲೈ ಕಮಲಾಕ್ಷಿಯೇ, ಆ ನಿಜಾತ್ಮನ ನೆಲೆಯನ್ನು ತಿಳಿಯದೆ, ಮನಸ್ಸಿನಲ್ಲಿ ಸುಮ್ಮನೆ ಧ್ಯಾನಮಾಡಿದ ಮಾತ್ರದಿಂದ ಪಾಪವು ನಾಶವಾಗುವುದೆ? ಆ ನಿಜಾತ್ಮನ ನೆಲೆಯನ್ನು ತಿಳಿದವನಿಗೆ ಧ್ಯಾನಿಸಲು ಬೇರೆ ಯಾವುದೊಂದೂ ಇರುವುದಿಲ್ಲ. ॥ ೧೨೩ ॥ ಎಲೈ ಚೆಲುವೆಯೇ, ವಿಚಾರ ಯುಕ್ತವಾಗಿ ಮಾತಾಡುವಂತಹ, ಆರಯ್ದು ನಡೆಯುವಂತಹ, ಆರಯ್ದು ತಪಸ್ಸುಮಾಡುವಂತಹ, ಆರಯ್ದು ಭೋಜನವನ್ನು ಮಾಡುವ ಜೈನಯತಿಗಳಿಗೆ ಎಣೆಯಾದವರು ಯಾರೂ ಇಲ್ಲ. ॥ ೧೨೪ ॥ ಎಲೈ ಮಡದಿಯೇ, ಜೈನ ಮುನಿಗಳು ತಪಸ್ಸನ್ನು ಮಾಡುವಾಗ ಬೇರೇನನ್ನೂ ಯೋಚಿಸರು, ಮಾತ ನ್ನಾಡರು, ತಮ್ಮ ಶರೀರವನ್ನು ಬೇರೆ ವಿಷಯಕ್ಕೆ ಹೊಂದಿಸರು. ಅವರು ತ್ರಿಗುಪ್ತಿಗಳಿಂದ ಕೂಡಿ ತಪಸ್ಸನ್ನು ಮಾಡುವರು ॥ ೧೨೫ ॥ ಜೈನ ಯತಿಗಳಲ್ಲಿ ಹಲವರು 'ಇದು ಕಾಡು' ಎನ್ನದೆ, ಇದು ಯುದ್ಧ ಮಾಡಿ ಸತ್ತ ಸ್ಥಳವೆನ್ನದೆ, 'ಇದು ಶ್ಮಶಾನ'ವೆನ್ನದೆ, ದೃಢಚಿತ್ತರಾಗಿ ತಪಸ್ಸು ಮಾಡುವರು ॥ ೧೨೬ ॥ ಇದು ಮರದ ಪೊಟರೆ, ಇದು ತಣ್ಣಗಾದ ನೆಲ, ಇದು ಭೂತಸಂಚಾರವುಳ್ಳ ಪ್ರದೇಶ—ಎಂಬ ಯಾವುದೊಂದನ್ನೂ ಲಕ್ಷಿಸದೆ, ಮುನಿಗಳು ತಪಸ್ಸನ್ನು ಮಾಡಿ ಪಾಪವನ್ನು ನೀಗುವರು. ॥ ೧೨೭ ॥ ಕಾಡುಗಿಚ್ಚಿಗಾಗಲೀ, ಇತರ ಬಾಧೆಗಳಿಗಾಗಲೀ ಹೆದರದೆ, ಮನಸ್ಸನ್ನು ಹಿಂದೆಗೆಯದೆ ಋಷಿಗಳು ತಪಸ್ಸನ್ನು ಮಾಡುವರು ॥ ೧೨೮ । ಬರಸಿಡಿಲು, ದೊಡ್ಡ ಮಿಂಚು, ಎಡೆಬಿಡದೆ ಬೀಳುವ ಆಲಿಕಲ್ಲು, ಬಿರುಗಾಳಿ—ಮುಂತಾದವುಗಳಿಗೆ ಸ್ವಲ್ಪವೂ ಹೆದರದೆ, ಅವರು ಪ್ರೀತಿ ಪೂರ್ವಕವಾಗಿ ತಪಸ್ಸನ್ನು ಮಾಡುವರು. ॥ ೧೨೯ ॥ ಆರ್ಭಟಿಸುವ ಹುಲಿಗೂ. ಹೆಬ್ಬಾವಿಗೂ. ಗರ್ಜನೆ ಮಾಡುವ

ಹುತ್ತವೇಳುವ ಪಱಿಯಲಿ ದಿವ್ಯಾಂಗವ । ಚಿತ್ತು ಬಳಸಿಕೊಂಡಿಹುದು ॥
ಸುತ್ತಿರ್ಪ ಪಾವನಱಿಯದವರೇಕಾಂಗ । ಚಿತ್ತದಿಂದಸುವ ಜಾನಿಪರು ॥ ೧೩೧ ॥

ಹೆಮ್ಮಾರಿಗೆ ಹೆದಱದೆ ಬಲುಭೂತಕ್ಕೆ । ಹಮ್ಮೈಸದೆ ಬೊಬ್ಬಿಡುವ ॥
ಬೊಮ್ಮರಕ್ಕಸನಿಗಂಜದೆಯವರಾತ್ಮನ । ತಮ್ಮೊಳು ತಾವೆ ಜಾನಿಪರು ॥ ೧೩೨ ॥

ಮಱಿಯೆಂಬುದ ಮಾಯೆಯೆಂಬುದ ಮಾತಿಲಿ । ಬಿಱುಬನು ಭೀತಿಯೆಂಬುದನು ॥
ಕಱುಬೆಂಬುದ ಕಾಂಕ್ಷೆಯ ಲೋಭವೆಂಬುದ । ನಱಿಯರವರು ಕೇಳಬಲೆ ॥ ೧೩೩ ॥

ಸಪ್ತವ್ಯಸನ ಸಾಗಿದವೆಂದು ಮದಗಳು । ಗುಪ್ತವಡೆದವು ಕಷಾಯ ॥
ಆಪ್ತರಾದವು ಮುನಿಗಳು ತಳೆದುದಱಿಂದ । ಸಪ್ತವೃದ್ಧಿಯನಂಬುಜಾಕ್ಷಿ ॥ ೧೩೪ ॥

ಕಾಯಜ ಕಂಗೆಟ್ಟಡಗಿದ ದುರಿತವ । ನಾಯಕವಾಗಿ ಸಾಗಿದವು ॥
ಮಾಯವು ಮಾಯವಾದುದು ಮುನಿಗಳ ನಿ । ರ್ಮಾಯದ ತಪಸಿನೇಳಿಗೆಗೆ ॥ ೧೩೫ ॥

ಮೂಱು ಮೂಢಗಳು ಮುಳುಗಿದವನಾಯತ । ವಾಱೆಱಿದವು ದುಷ್ಕರ್ಮ ॥
ಹಾಱಿದವಾ ಮುನಿಗಳು ಮಾಡುವ್ಯೆ । ರಾಱುತ ತಪಸಿನೇಳಿಗೆಗೆ ॥ ೧೩೬ ॥

ಧರಣಿ ಮೆಚ್ಚಿತು ಧರಣೇಂದ್ರ ಮೋಹಿಸಿದನು । ಸುರತತಿ ಸೋಲ್ತರುಳಿದರು ॥
ಅರರೆಯರರೆ ಭಾಪು ಭಾಪೆಂದೊಡಾ ಮುನಿ । ವರರುಗ್ರೋಗ್ರತಪಸಿಗೆ ॥ ೧೩೭ ॥

ಈ ತೆಱದಿಂದ ತಪವ ಮಾಡುವ ನಾ । ನಾ ತೆಱದಿಂ ಬಂದಡಸುವ ॥
ಪಾತಕವನು ಪರಿಹರಿಸುವರಾ ಜೈನ । ಜಾತರೂಪರು ನಿನ್ನಾಣೆ ॥ ೧೩೮ ॥

---

ಸಿಂಹಕ್ಕೂ, ಸಂಚರಿಸುವ ಕರಡಿಯ ಧ್ವನಿಗೂ ಹೆದರದೆ ಮುನೀಂದ್ರರು ಪರಮಾತ್ಮನನ್ನು ಧ್ಯಾನಮಾಡುವರು ॥ ೧೩೦ ॥ ತಪವನ್ನೆಸಗುವ ಮುನಿಗಳ ದೇಹಕ್ಕೆ ಹುತ್ತವೆದ್ದು ಕವಿಯುವಂತೆ, ಅವರ ದೇಹವನ್ನು ಜ್ಞಾನವು ಆವರಿಸಿರುವುದು ಅವರು ಮೈಗೆ ಸುತ್ತಿದ ಹಾವನ್ನು ಕೂಡ ತಿಳಿಯದೆ, ಏಕಮನಸ್ಸಿನಿಂದ ಆತ್ಮಧ್ಯಾನವನ್ನು ಮಾಡುವರು ॥ ೧೩೧ ॥ ದೊಡ್ಡ ಮಾರಿ ದೇವತೆಗೆ ಹೆದರದೆಯೂ, ದೊಡ್ಡ ಭೂತಕ್ಕ ಹೆದರಿ ಮೂರ್ಛೆಹೊಂದದೆಯೂ. ಬೊಬ್ಬಿಡುವ ಬ್ರಹ್ಮರಾಕ್ಷಸಕ್ಕೆ ಅಂಜದೆಯೂ ಅವರು ಆತ್ಮಧ್ಯಾನವನ್ನು ಮಾಡುವರು ॥ ೧೩೨ ॥ ಎಲೈ ಚೇಳಿನಿಯೇ, ಅವರು ವಂಚನೆ ಮೋಸಗಳನ್ನಾಗಲೀ, ಮಾತಿನಲ್ಲಿ ಕಠೋರತೆಯನ್ನಾಗಲೀ, ಭಯವನ್ನಾಗಲೀ ಮತ್ಸರವನ್ನಾಗಲೀ ಜಿಪುಣತನವನ್ನಾಗಲೀ ತಿಳಿಯರು ॥ ೧೩೩ ॥ ಎಲೈ ಚೇಳಿನಿಯೇ, ಆ ಮುನಿಗಳು ಬುದ್ಧಿ, ತಪ ವೈಕುರ್ವಣ, ಔಷಧಿ, ರಸ, ಬಲ, ಅಕ್ಷೀಣ—ಎಂಬ ಸಪ್ತ ವೃದ್ಧಿಗಳನ್ನು ತಾಳಿದುದರಿಂದ ಜೂಜು, ಬೇಟೆ, ಮದ್ಯ, ಹಾದರ, ಮಾಂಸ, ಕಳವು, ಪರಸ್ತ್ರೀ, ಮುಂತಾದ ಏಳು ವ್ಯಸನಗಳು ದೂರ ಹೋದವು ಜಾತಿ, ಕುಲ, ಬಲ, ಪೂಜೆ, ಜ್ಞಾನ, ಶರೀರ, ಐಶ್ವರ್ಯ, ತಪಸ್ಸು—ಎಂಬ ಎಂಟು ಮದಗಳು ಮರೆಯಾದವು ಕಲ್ಮಶಗಳೆಲ್ಲವೂ ಅಧೀನವಾದುವು ॥ ೧೩೪ ॥ ಮುನಿಗಳು ಮಾಡಿದ ಜ್ಞಾನಯುಕ್ತವಾದ ತಪಸ್ಸಿನ ಉನ್ನತಿಗೆ ಹೆದರಿ, ಮನ್ಮಥನು ದಿಕ್ಕು ತೋರದೆ ಅಡಗಿದನು ಪಾಪಗಳು ನಾಯಕರಿಲ್ಲದಂತಾಗಿ ಚೆದರಿ ಹೋದವು ಮಾಯೆಯು ಮಾಯವಾಯಿತು ॥ ೧೩೫ ॥ ಆ ಮುನಿಗಳು ಮಾಡುವ ತಪಸ್ಸಿನ ಏಳಿಗೆಗೆ ಹೆದರಿ, ಮೂರು ಮೂಢತ್ವಗಳು ಮುಳುಗಿ ಹೋದವು, ದುಷ್ಕರ್ಮಗಳೆಲ್ಲವೂ ಹಾರಿಹೋದವು ॥ ೧೩೬ ॥ ಆ ಮುನಿವರರ ಅತ್ಯಂತ ಘೋರ ತಪಸ್ಸಿಗೆ ಲೋಕವೇ ಪ್ರೀತಿಪಟ್ಟಿತು ರಾಜನು ಮೋಹಗೊಂಡನು ದೇವತೆಗಳು ಸೋತರು ಇತರರು ಭಾಪು ಭಾಪೆಂದು ಹೊಗಳಿದರು. ॥ ೧೩೭ ॥ ಈ ರೀತಿಯಲ್ಲಿ ಜಿನಮುನಿಗಳು ತಪಸ್ಸನ್ನು ಮಾಡುತ್ತ, ತಮಗೆ ಹಲವಾರು ವಿಧಗಳಿಂದ ಬಂದು

ರವಿಯ ಮುಂದಣ ತಮದಂದದೊಳಾ ಬಲು । ಹವಿಯ ಮುಖದ ರಸದಂತೆ ॥
ಕಿವಿಗಿವಿಯಱಿಯದೆ ದುರಿತಂಗಳು ಪೋಪ । ವವರ ತಪಸಿನೇಳಿಗೆಗೆ ॥ ೧೪೯ ॥

ದಳಿಯ ತಾವರೆಯಂತೆ ಬಿಸಿಲರಿಸಿನದಂತೆ । ಮಳೆಗಾಲದ ದೂಳಿನಂತೆ ॥
ಕಳಿತ ಪಣ್ಣುಗಳಂತೆ ಕರಗಿ ಪೋಪವು ಮುನಿ । ಗಳ ತಪಸಿಗೆ ಕರ್ಮನಿಚಯ ॥ ೧೫೦ ॥

ಬಿಱುಗಾಳಿಯ ಮುಂದಣ ಮೇಘಾಳಿಯ । ತೆಱನಂತೆ ಮಳಲೆರೆಯಂತೆ ॥
ಮಱೆಯೇಕೆ ಮಂಜಿನ ನೆರವಿಯಂತಳಿವವು । ಹೊಱಗೆಯ ತಪಕಘವವರ ॥ ೧೫೧ ॥

ಸಿರಿಯ ಮುಂದಣ ಬಡತನದಂತಾ ಬಲು । ಹರಿಯ ಮುಂದಣ ಕರಿಯಂತೆ ॥
ಗರುಡನ ಮುಂದಣ ಗರಳ ಸರಿವವೊಲು । ಸರಿವವು ಮುನಿವರರಘವು ॥ ೧೫೨ ॥

ಬಲು ತಪವನು ಮಾಡಿ ಬಲುದುರಿತಂಗಳ । ಬಲುಹ ಮುಱಿದು ಮುನಿವರರು ॥
ಬಲುಗೈಯರಾದರು ಬಣ್ಣಿಪರಾರೆಲೆ । ಲಲಿತ ರಕ್ತಾಂಬುಜವದನೆ ॥ ೧೫೩ ॥

ಹುಟ್ಟುಗೆಡಿಸಿ ಚೆಲುವಾದ ಕರ್ಮಂಗಳ । ದಟ್ಟಿಸಿ ರಾಮನಣುವನು ॥
ನೆಟ್ಟನೆ ಶ್ರುತಕೇವಳಿಗಳಾದರು ಮನ । ಮುಟ್ಟಿಯೆ ಮಾಡಿದ ತಪದೆ ॥ ೧೫೪ ॥

ಉಳಿದರು ತಮ್ಮ ಮತಿಗೆ ತಕ್ಕ ಮತಿಗಳ । ತಳೆದರು ರಾಮಕೇವಳಿಗೆ ॥
ತಳುವದೆ ಛದ್ಮಸ್ಥಕಾಲ ನಾನೂಱ್ ವರ್ಷ । ಕಳಿಯಲು ಚಿತ್ತಶುದ್ಧಿಯಲಿ ॥ ೧೫೫ ॥

ಧ್ಯಾನವಿಶೇಷದಿಂ ಘಾತಿಕರ್ಮಂಗಳ । ನಾನದೆ ಕೆಡಿಸಿ ಕೇವಳಿಯು ॥
ಮಾನಸ್ತಂಭ ಚತುರ್ದ್ವನಹಿಮದ । ಮಾನಿತ ಪ್ರಾಕಾರವೆರಸು ॥ ೧೫೬ ॥

---

ಬಾಧಿಸುವ ಪಾಪಗಳನ್ನು ಪರಿಹಾರ ಮಾಡುವರು ॥ ೧೪೮ ॥ ಅವರ ತಪಸ್ಸಿನ ಏಳಿಗೆಯಿಂದ ಪಾಪಗಳೆಲ್ಲವೂ ಸೂರ್ಯನ ಮುಂದೆ ಇರುವ ಕತ್ತಲಂತೆಯೂ, ತುಪ್ಪದ ಮೇಲಿರುವ ನೀರಿನಂತೆಯೂ, ಯಾರಿಗೂ ತಿಳಿಯದ ರೀತಿಯಲ್ಲಿ ಹೋಗಿಬಿಡುವವು ॥ ೧೪೯ ॥ ದಳಿಯ (?) ತಾವರೆಯಂತೆಯೂ, ಬಿಸಿಲಿನ ಅರಿಸಿನ ಬಣ್ಣದಂತೆಯೂ, ಮಳೆಗಾಲದ ದೂಳಿನಂತೆಯೂ. ಪಕ್ವವಾದ ಹಣ್ಣುಗಳಂತೆಯೂ, ಮುನಿಗಳ ತಪಸ್ಸಿನಿಂದ ಕರ್ಮಗಳೆಲ್ಲವೂ ಕರಗಿ ಹೋಗುವವು. ॥ ೧೫೦ ॥ ಅವರ ಕಠಿನ ತಪಸ್ಸಿಗೆ ಪಾಪಗಳು ಬಿರುಗಾಳಿಯ ಮುಂದೆ ಇರುವ ಮೋಡಗಳಂತೆಯೂ, ಮಳಲಿನ ದಿಣ್ಣೆಯಂತೆಯೂ, ಮಂಜಿನ ರಾಶಿಯಂತೆಯೂ ನಾಶವಾಗುವವು. ॥ ೧೫೧ ॥ ಸಂಪತ್ತಿನ ಮುಂದೆ ಇರುವ ಬಡತನದಂತೆಯೂ, ದೊಡ್ಡದಾದ ಸಿಂಹದ ಮುಂದಿರುವ ಆನೆಯಂತೆಯೂ. ಗರುಡನ ಮುಂದೆ ಇರುವ ವಿಷದಂತೆಯೂ ಮುನಿಗಳ ಪಾಪಗಳು ಮರೆಯಾಗುವವು. ॥ ೧೫೨ ॥ ಎಲೈ ಚೇಳಿನಿಯೇ, ಮುನಿವರರು ದೊಡ್ಡದಾದ ತಪವನ್ನು ಮಾಡಿ, ದೊಡ್ಡ ಪಾಪಗಳ ಶಕ್ತಿಯನ್ನು ಮುರಿದು, ಸಾಮರ್ಥ್ಯಶಾಲಿಗಳೆನಿಸಿದರು ಅವರನ್ನು ವರ್ಣಿಸುವವರು ಯಾರು? ॥ ೧೫೩ ॥ ಶ್ರೀರಾಮನೂ ಅಣುವನೂ ಮಾಡಿದ ತಪಸ್ಸಿನಿಂದ ಪುನರ್ಜನ್ಮವನ್ನು ನಾಶಗೊಳಿಸಿ, ಕರ್ಮಗಳನ್ನೆಲ್ಲ ಅಣಗಿಸಿ ನೇರವಾಗಿ ಶ್ರುತಕೇವಲಿಗಳಾದರು ॥ ೧೫೪ ॥ ಇನ್ನು ಉಳಿದವರು ತಮ್ಮ ಬುದ್ಧಿಗೆ ಅನುಗುಣವಾದ ಉನ್ನತಿಯನ್ನು ತಾಳಿದರು ಕೇವಲಿಯಾದ ರಾಮನಿಗೆ ನಾನೂರು ವರ್ಷ ಪರಿಮಿತವಾದ ಛದ್ಮಸ್ಥ ಕಾಲವು ಮನಶ್ಶುದ್ಧತೆಯಿಂದ ಕಳೆಯಿತು ॥ ೧೫೫ ॥ ರಾಮ ಕೇವಲಿಯು ವಿಶೇಷವಾದ ಧ್ಯಾನದಿಂದ ಘಾತಿಕರ್ಮಗಳನ್ನೆಲ್ಲ ನಾಶಮಾಡಿ, ಕೇವಲ ಜ್ಞಾನವನ್ನು ಪಡೆದನು ॥ ೧೫೬ ॥ ಆ ಮೇಲೆ ಏಕಚ್ಛತ್ರವೇ ಮೊದಲಾದ ಪ್ರಾತಿಹಾರ್ಯಗಳಿಂದ ಅಲಂಕೃತನಾಗಿ ಮೂರು ಲೋಕಗಳಿಂದ ಪೂಜೆಯನ್ನು ಸ್ವೀಕರಿಸುತ್ತ. ಲೋಕಕ್ಕೆ ಧರ್ಮವೆಂಬ

ಏಕಚ್ಛತ್ರಪ್ರಾತಿಹಾರ್ಯ ಭೂಷಿತನಾಗಿ । ಲೋಕಮೂಱರ ಪೂಜೆಗೊಳುತ ॥
ಸಾಕೆನೆ ಧರ್ಮಾಮೃತಗಱೆವುತಲಿರ । ಲಾ ಕೇವಳಿಗುಳ್ಳನಕ ॥ ೧೪೭ ॥

ಅಱುನೂಱು ವರುಷ ಪೋಗಲು ಫಾಲ್ಗುಣ ಶುದ್ಧ । ನೆಱೆದ ಚತುರ್ದಶಿಯದಕೆ ॥
ಉಱುವ ಪೂರ್ವಾಹ್ಣದಿ ಸಮ್ಮೇದ ಗಿರಿಯಲಿ । ಬಱಿಸಿಯೆ ಘಾತಿಕರ್ಮವನು ॥ ೧೪೮ ॥

ರಾಮ ಮುನೀಂದ್ರನಣುವ ಮುನಿವರರಂದು । ಕ್ಷೇಮದೆ ಮೋಕ್ಷವಡೆದರು ॥
ಸಾಮವಿಲ್ಲದೆಯನುಟ್ಟಪದೆ ವಿಭೀಷಣ । ರಾ ಮುನಿವರರು ಪುಟ್ಟಿದರು ॥ ೧೪೯ ॥

ಮಡದಿ ಲಾಲಿಸು ಪೃಥ್ವೀ ಸೌಂದರಿಯರಂ । ದೊಡನಿರ್ದಾ ಕಂತಿಕೆಯರು ॥
ಪಡೆದರಚ್ಯುತಕಲ್ಪವ ಸೌಧರ್ಮವ । ಪಡೆದರು ಪದ್ಮದಳಾಕ್ಷಿ ॥ ೧೫೦ ॥

ಹೂವಳೆಗಱೆವುತ ಸುರರು ನಮಿಸಿದರು । ದೇವದುಂದುಭಿ ಪೊಗಳಿದುದು ॥
ಹಾವಿನೂರವರು ಹರಿದು ಬಂದು ಹರಿಹರ । ದೇವನ ಪೂಜೆಮಾಡಿದರು ॥ ೧೫೧ ॥

ಸ್ತೋತ್ರ ಮಾಡುತ್ತ ಧರಣಿಗೀಡಾಡುತ । ಗಾತ್ರವ ಕಡುಬಕುತಿಯಲಿ ॥
ಗೋತ್ರಾರಿ ಪರಮನ ಪೂಜೆಮಾಡಿದ ಮೃಗ । ನೇತ್ರೆ ಕೇಳತಿಸಂಭ್ರಮದಲಿ ॥ ೧೫೨ ॥

ಬಂದರು ಚಕ್ರೇಶ್ವರರು ಹರುಷದಿಂದ । ಬಂದರು ವಿದ್ಯಾಧರರು ॥
ಬಂದರು ದಿಕ್ಪಾಲಕರು ಜಿನೇಶನ । ಬಂದಿಸಿ ಪೂಜೆಮಾಡಿದರು ॥ ೧೫೩ ॥

ಸುರವೆಣ್ಗಳು ವಿದ್ಯಾಧರ ಸತಿಯರು । ಗರುಡ ಗಂಧರ್ವ ಕಿನ್ನರರ ॥
ತರುಣೀಜನವು ಬಂದು ಪೂಜೆಮಾಡಿದುದಾ । ಪರಮನ ಪರಮ ಭಕ್ತಿಯಲಿ ॥ ೧೫೪ ॥

ಮರುಗ ಮಲ್ಲಿಗೆ ಮಾಂದಳಿರು ಪಚ್ಚೆ ಮಂದಾರ । ಸರಸಿಜ ಸಂಪಗೆ ಜಾಜಿ ॥
ಸುರಹೊನ್ನೆ ಸುರಗಿ ಸುಗಂಧಿ ಸೇವಂತಿಗೆ । ಯರವಿಂದವನರ್ಚಿಸಿದರು ॥ ೧೫೫ ॥

---

ಅಮೃತವನ್ನು ಮಳೆಗರೆಯುತ್ತಿದ್ದನು ॥ ೧೪೭ ॥ ಈ ರೀತಿಯಾಗಿ ಕೇವಲ ಜ್ಞಾನದಿಂದ ಆರುನೂರು ವರ್ಷಗಳು ಕಳೆಯಲು, ಫಾಲ್ಗುಣ ಮಾಸದ ಶುಕ್ಲಪಕ್ಷದ ಚತುರ್ದಶಿಯ ಪೂರ್ವಾಹ್ನ ಸಮಯದಲ್ಲಿ ಸಮ್ಮೇದ ಪರ್ವತದಲ್ಲಿ ಘಾತಿಕರ್ಮಗಳೆಲ್ಲವನ್ನೂ ಬತ್ತಿಸಿ ॥ ೧೪೮ ॥ ರಾಮ ಮತ್ತು ಅಣುವ ಎಂಬಿಬ್ಬರು ಮುನೀಂದ್ರರು ಸುಕ್ಷೇಮವಾಗಿ ಮೋಕ್ಷವನ್ನು ಪಡೆದರು ವಿಭೀಷಣ ಮೊದಲಾದವರು ಅತುಲವಾದಂಥ ಅನುದಿಶ ಪದವಿಯನ್ನು ಪಡೆದರು ॥ ೧೪೯ ॥ ಎಲೈ ಚೆಲುವೆಯೇ ಕೇಳು ಪೃಥ್ವೀಸೌಂದರಿ ಮೊದಲಾದ ದೇವಿಯರು ಕಂತಿಕೆಯರೊಡನೆ ಇದ್ದು ಅಚ್ಯುತ ಕಲ್ಪವನ್ನೂ ಇನ್ನು ಕೆಲವರು ಸೌಧರ್ಮಕಲ್ಪವನ್ನೂ ಪಡೆದರು ॥ ೧೫೦ ॥ ದೇವತೆಗಳು ಪುಷ್ಪವೃಷ್ಟಿಮಾಡಿ, ನಮಸ್ಕರಿಸಿದರು ದೇವದುಂದುಭಿಗಳು ಶಬ್ದಗಳ ಮೂಲಕ ಹೊಗಳಿದವು ನಾಗಲೋಕದವರು ಬಂದು ಹರಿಹರದೇವನನ್ನು ಪೂಜಿಸಿದರು ॥ ೧೫೧ ॥ ಎಲೈ ಮೃಗಾಕ್ಷಿ ಚೆಲುವೆಯೇ. ದೇವೇಂದ್ರನು ಬಂದು ಸ್ತುತಿಸುತ್ತಲೂ, ಅತ್ಯಂತ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮ ಮಾಡುತ್ತಲೂ ಜಿನೇಶನನ್ನು ಪೂಜಿಸಿದನು ॥ ೧೫೨ ॥ ಚಕ್ರಾಧಿಪತಿಗಳೂ ವಿದ್ಯಾಧರರೂ, ದಿಕ್ಪಾಲಕರೂ ಸಂತೋಷದಿಂದ ಬಂದು ಜಿನೇಶನನ್ನು ಪೂಜಿಸಿದರು ॥ ೧೫೩ ॥ ದೇವತಾಸ್ತ್ರೀಯರೂ ವಿದ್ಯಾಧರ ಸ್ತ್ರೀಯರೂ ಗರುಡ-ಗಂಧರ್ವ-ಕಿನ್ನರರ ನಾರೀಜನರೂ ಬಂದು, ಆ ಪರಮಜಿನೇಶನನ್ನು ಪರಮ ಭಕ್ತಿಯಿಂದ ಪೂಜಿಸಿದರು ॥ ೧೫೪ ॥ ಮರುಗ, ಮಲ್ಲಿಗೆ,

ಬಂದುಗೆ ಬಕುಳ ದಾಸಣ ಕೇದಗೆ ನವ । ಇಂದೀವರ ನಾಗಕಮಲ ॥
ಸಂದ ಪೊಗವು ಪಚ್ಚೆ ಮಂದಾರ ಸರಸಿಜ । ದಿಂದವರವರರ್ಚಿಸಿದರು ॥ ೧೫೬ ॥

ಅಷ್ಟಕರ್ಮಂಗಳ ಗೆಲಿದಭವಗೆ ಮನ । ಸಿಟ್ಟಡಿಗಭಿಷೇಕವನು ॥
ಅಷ್ಟವಿಧಾರ್ಚನೆ ಮಾಡಿ ಪಡೆದರು ತ । ಮ್ಮಿಷ್ಟವ ಭವ್ಯಾಳಿಗಳು ॥ ೧೫೭ ॥

ದಾಳಿಂಬ ದ್ರಾಕ್ಷೆ ಕರ್ಜೂರ ನಿಂಬೆ ಪಲಸಿಂದೆ । ಬಾಳೆವಣ್ಣಿಂ ಮಾವಿಂದೆ ॥
ನಾಳಿಕೇರಗಳಿಂ ಜಿನಭಕ್ತಿಶರಧಿಯೊ । ಳಾಳುತವರು ಪೂಜಿಸಿದರು ॥ ೧೫೮ ॥

ಬೀಸುಚವರದಿಂದಾಲಿವಟ್ಟಲುಗಳಿಂ । ಸೂಸುವ ಪೂವಲಿಯಿಂದೆ ॥
ಸಾಸಿರ ನಾಮದೊಳರ್ಘ್ಯವೆತ್ತುತ ಜಗ । ದೀಶನ ಪೂಜೆಮಾಡಿದರು ॥ ೧೫೯ ॥

ಇಂತತಿ ಪೂಜೆ ಮಾಡುತ ಬಂದ ಭವ್ಯರು । ಸಂತಸದಿಂ ಜಿನಪತಿಯ ॥
ಅಂತರಂಗದೊಳು ಜಾನಿಸಿ ತುತಿಸಿದರು ಸೀ । ಮಂತಿನಿಯರ ತಲೆಮಣಿಯೆ ॥ ೧೬೦ ॥

ನಿಟ್ಟಿಸಿ ಮನದಿ ಜಾನಿಸಿ ಕರಕಂಜದಿಂ । ನೆಟ್ಟನೆ ನಿನ್ನಡಿದಳವ ॥
ಮುಟ್ಟಿ ಪೂಜಿಸಿ ಜಾನಿಸುವವರಘವನು । ಹುಟ್ಟುಗೆಡಿಪೆ ಜಿನರಾಜ ॥ ೧೬೧ ॥

ನಾಸಿಕಾಗ್ರದಲಿ ದಿಟ್ಟಿಯನಿಟ್ಟತ್ತಿತ್ತ । ಸೂಸದೆ ಮನವ ನಿನ್ನಡಿಯ ॥
ಬಾಸಣಿಸಿದ ಭಕ್ತರ ಪಾಪವ ನೀರ । ಸೂಸಿ ಬಿಡಿಸು ಜಿನರಾಜ ॥ ೧೬೨ ॥

ಏಕಾಂತದೊಳು ನಿನ್ನ ಪದಪದ್ಮಂಗಳ । ನೇಕಾಗ್ರಚಿತ್ತದಿಂದೊಲಿದು ॥
ಹಾಕತೆವೆತ್ತು ಜಾನಿಸೆ ಕೆಡದಿಹುದೆಯ । ನೇಕ ಕಿಲ್ಬಿಶ ಜಿನರಾಜ ॥ ೧೬೩ ॥

---

ಮಾವಿನ ಚಿಗುರು, ಪಚ್ಚೆಕದಿರು, ಮಂದಾರ, ತಾವರೆ, ಸಂಪಗೆ, ಜಾಜಿ, ಸುರಹೊನ್ನೆ, ಸುರಗಿ, ಸುಗಂಧಿ, ಸೇವಂತಿಗೆ, ಅರವಿಂದ—ಮುಂತಾದ ಹೂವುಗಳಿಂದ ಪೂಜಿಸಿದರು. ॥ ೧೫೫ ॥ ಕಿಸುಗಾರ, ರೆಂಜೆ, ದಾಸಣ, ಕೇದಗೆ, ಹೊಸನೈದಿಲೆ, ಬೆಟ್ಟದಾವರೆ. ಹಿಂಗಾರ, ಪಚ್ಚೆಕದಿರು, ಮಂದಾರ, ತಾವರೆ–ಮೊದಲಾದ ಹೂವುಗಳಿಂದ ಅವರವರು ಪೂಜೆ ಮಾಡಿದರು ॥ ೧೫೬ ॥ ಮೋಕ್ಷಾಪೇಕ್ಷಿಗಳಾದ ಜೈನರು ಘಾತಿ-ಅಘಾತಿ ಕರ್ಮಗಳನ್ನು ಜಯಿಸಿದ ಜಿನೇಶನಿಗೆ ಮನಸ್ಸಿಟ್ಟು ಅಭಿಷೇಕವನ್ನೂ ಎಂಟು ವಿಧವಾದ ಅರ್ಚನೆಯನ್ನೂ ಮಾಡಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದರು. ॥ ೧೫೭ ॥ ಜಿನಭಕ್ತಿಯೆಂಬ ಸಮುದ್ರದಲ್ಲಿ ಮುಳುಗುತ್ತ-ಅವರು ದಾಳಿಂಬ, ದ್ರಾಕ್ಷೆ, ಖರ್ಜೂರ, ನಿಂಬೆ, ಹಲಸು, ಬಾಳೆ, ಮಾವು, ತೆಂಗು ಮುಂತಾದ ವೃಕ್ಷಗಳ ಫಲಗಳಿಂದ ಪೂಜೆ ಮಾಡಿದರು. ॥ ೧೫೮ ॥ ಚಾಮರಗಳಿಂದಲೂ ಬೀಸಣಿಗೆಗಳಿಂದಲೂ ಬೀಸಿ, ಪುಷ್ಪಸಮರ್ಪಣೆಯನ್ನು ಮಾಡಿ, ಸಹಸ್ರ ನಾಮಗಳನ್ನು ಪಾರಾಯಣ ಮಾಡಿ, ಅರ್ಘ್ಯವನ್ನೆತ್ತಿ – ಲೋಕಕ್ಕೆ ಒಡೆಯನಾದ ಜಿನೇಶನನ್ನು ಪೂಜಿಸಿದರು. ॥ ೧೫೯ ॥ ಎಲೈ ಚೇಳಿನಿಯೇ, ಹೀಗೆ ಬಹಳವಾಗಿ ಪೂಜೆ ಮಾಡುತ್ತ, ಬಂದ ಭವ್ಯ ಜನರು ಜಿನೇಶನನ್ನು ತಮ್ಮ ಮನಸ್ಸಿನಲ್ಲಿ ಸಂತೋಷದಿಂದ ಧ್ಯಾನಿಸುತ್ತ ಸ್ತುತಿಸಿದರು ॥ ೧೬೦ ॥ ಎಲೈ ಜಿನೇಶನೇ! ನಿನ್ನನ್ನು ನೋಡಿ. ಮನಸ್ಸಿನಲ್ಲಿ ನೆನೆದು, ಕರಕಮಲದಿಂದ ನಿನ್ನ ಪಾದತಳವನ್ನು ಮುಟ್ಟಿ, ಪೂಜಿಸಿ, ಧ್ಯಾನ ಮಾಡುವವರ ಪಾಪದ ಹುಟ್ಟನ್ನೇ ನೀನು ಇಲ್ಲದಂತೆ ಮಾಡುತ್ತಿ ॥ ೧೬೧ ॥ ಎಲೈ ಜಿನೇಶನೇ, ಮೂಗಿನ ತುದಿಯಲ್ಲಿ ದೃಷ್ಟಿಯನ್ನು ನಿಲ್ಲಿಸಿ, ಮನಸ್ಸನ್ನು ಕದಲದಂತೆ ಇಟ್ಟು, ನಿನ್ನ ಪಾದವನ್ನು ಧ್ಯಾನ ಮಾಡುವ ಭಕ್ತರ ಪಾಪವನ್ನು ಪರಿಹಾರಗೊಳಿಸು. ॥ ೧೬೨ ॥ ಎಲೈ ಜಿನರಾಜನೇ. ನಿನ್ನ ಪಾದಕಮಲಗಳನ್ನು ಏಕಾಂತದಲ್ಲಿ ಒಂದೇ ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಧ್ಯಾನಿಸಿದರೆ, ಅನೇಕ ಪಾಪಗಳು ಕೆಡದೆ ಇರುವವೆ?

ನಿಡುಕುವಿಂದ್ರಿಯಗಳ ನಡಿಯಿಡಲೀಯದೆ । ತುಡುಕಿ ನಿನ್ನಡಿದಾವರೆಯ ॥
ಬಿಡದೆ ಜಾನಿಪ ನಿಜಭವ್ಯರ ಕಿಲ್ಬಿಶ । ಕೆಡದಿರ್ಪುದೆ ಜಿನರಾಜ ॥ ೧೬೪ ॥

ಮನ-ಬುದ್ಧಿ-ಚಿತ್ತವಹಂಕಾರವ ನಿನ್ನ । ನೆನಹಿನೊಳೈಕ್ಯವ ಮಾಡಿ ॥
ನೆನೆಯಲು ಶುದ್ಧಾತ್ಮನಾಗಿ ಸಂಸಾರದ । ಜನನವಳಿಯದೆ ಜಿನೇಂದ್ರ ॥ ೧೬೫ ॥

ಪರಮ ನಿನ್ನಯ ನೆನಹೆಂಬ ವಜ್ರಾಂಗಿಯ । ಧರಿಸಿದ ಜೀವಕೇನಾನು ॥
ಪರಿಯೊಳು ಬಂದಘಸಂಕುಲವೆಂದೆಂಬ । ಸರಲು ನಟ್ಟಿಪವೆ ಜಿನೇಂದ್ರ ॥ ೧೬೬ ॥

ನಾಡಿಗಳನು ಬಲಿದತ್ತಿತ್ತ ವಾಯುವ । ನಾಡಲೀಯದೆ ಚಿತ್ತವನು ॥
ಓಡಲೀಯದೆ ನಿನ್ನ ಜಾನಿಪರಘ ಕೆ । ಟ್ಟೋಡದಿಹುದೆ ಜಿನರಾಜ ॥ ೧೬೭ ॥

ನನ್ನಿ ಕದಡುಙು[1] ವನ್ಯ ಪುಳುವ ತಂದು । ತನ್ನಂತೆ ಮಾಡುವುದಭವ ॥
ನಿನ್ನಡಿವಿಡಿದು ಬಿಡದೆ ಜಾನಿಪ ಜೀವ । ನಿನ್ನಂಗವಡೆವುದಚ್ಚರಿಯೆ ॥ ೧೬೮ ॥

ನಿನ್ನಾಗಮ ನಿನ್ನಱಿವು ನಿನ್ನ ಚಾರಿತ್ರ । ನಿನ್ನ ಮಹಿಮೆ ನಿನ್ನ ಮಾರ್ಗ ॥
ನಿನ್ನಿರವನ್ಯರೊಳಿಲ್ಲದಱಿಂ ನನ್ನ । ನಿನ್ನಂತೆ ಮಾಡುವುದಭವ ॥ ೧೬೯ ॥

ಜಿನ ನಿನ್ನ ನಿಜಪದ ಪೂಜಿಪ ಪೊಗಳುತಿ । ರ್ಪನುವೆಯೆನಗೆ ಮೋಕ್ಷಮಾರ್ಗ ॥
ನಿನಗಕ್ಕನಂತಲೋಚನ ಕರ ನಾಲಗೆ । ನನಗಕ್ಕು ನಿನ್ನ ಕೃಪೆಯಲಿ ॥ ೧೭೦ ॥

ಹೆಸರ ಹಿಡಿದೊಡೆ ನೆನೆದೊಡೆ ನಿನ್ನಂಘ್ರಿಯ । ದೆಸೆಯ ನೋಡಿದರಘನಿಚಯ ॥
ದೆಸೆಗೆಟ್ಟು ಪೋಪವೆಂದೆನೆ ನಿನ್ನ ಮಹಿಮೆಯ । ನುಸುರಬಲ್ಲವರಾರಭವ ॥ ೧೭೧ ॥

---

॥ ೧೬೩ ॥ ಎಲೈ ಜಿನರಾಜನೇ, ಚಂಚಲವಾಗಿರುವ ಇಂದ್ರಿಯಗಳನ್ನು ಸ್ಥಿರವಾಗಿ ನಿಲ್ಲಿಸಿ, ನಿನ್ನ ಪಾದಕಮಲವನ್ನು ಮುಟ್ಟಿ ಎಡೆಬಿಡದೆ ಧ್ಯಾನಿಸತಕ್ಕ ಭವ್ಯಜನರ ಪಾಪವು ಕೆಡದೆ ಇರದು ॥ ೧೬೪ ॥ ನಿನ್ನ ಧ್ಯಾನದಲ್ಲಿಯೇ ಮನ-ಬುದ್ಧಿ-ಚಿತ್ತ-ಅಹಂಕಾರಗಳನ್ನು ಲೀನಗೊಳಿಸಿ, ಧ್ಯಾನ ಮಾಡುತ್ತ ಇದ್ದರೆ, ಆತ್ಮಶುದ್ಧಿಯನ್ನು ಹೊಂದಿ, ಸಂಸಾರದ ಹುಟ್ಟು ನಾಶವಾಗದೆ ಇರುವುದೆ? ॥ ೧೬೫ ॥ ಎಲೈ ಪರಮ ಜಿನೇಂದ್ರನೇ ನಿನ್ನ ಧ್ಯಾನವೆಂಬ ವಜ್ರದ ಕವಚವನ್ನು ಧರಿಸಿದ ಜೀವನಿಗೆ, ಯಾವ ರೀತಿಯಲ್ಲಾದರೂ ಬಂದ ಪಾಪ ಸಮೂಹವೆಂಬ ಬಾಣವು ತಗಲುವುದೆ? ॥ ೧೬೬ ॥ ನಾಡಿಗಳನ್ನು ಬಂಧಿಸಿ, ಉಸಿರಾಟವನ್ನು ತಡೆದು, ಮನಸ್ಸನ್ನು ಸ್ಥಿರಗೊಳಿಸಿ ನಿನ್ನನ್ನು ಧ್ಯಾನಮಾಡುವವರ ಪಾಪವು ಕೆಟ್ಟು, ಓಡಿಹೋಗದೆ ಇರುವುದೆ? ॥ ೧೬೭ ॥ ಎಲೈ ಜನನರಹಿತನೇ ಕಣಜದ ಹುಳುವು ಬೇರೆ ಹುಳುವನ್ನು ತಂದು, ತನ್ನಂತೆಯೇ ಮಾಡುವುದು ನಿಜ ಅದರಂತೆ ನಿನ್ನ ಪಾದವನ್ನು ಎಡಬಿಡದೆ ಧ್ಯಾನಮಾಡುವವನು ನಿನ್ನಂತೆ ಆಗುವುದರಲ್ಲಿ ಏನೂ ಆಶ್ಚರ್ಯವಿಲ್ಲ ॥ ೧೬೮ ॥ ಎಲೈ ಅಭವನೇ, ನಿನ್ನ ಶಾಸ್ತ್ರಜ್ಞಾನ ನಿನ್ನ ತಿಳಿವಳಿಕೆ ನಿನ್ನ ನಡತೆ ನಿನ್ನ ಮಹಿಮೆ ನಿನ್ನ ಪಂಥ, ನಿನ್ನ ಇರವು—ಇವು ಯಾವುವೂ ಇತರರಲ್ಲಿಲ್ಲ ಆದುದರಿಂದ ನನ್ನನ್ನು ನಿನ್ನಂತೆಯೇ ಮಾಡುವವನಾಗು ॥ ೧೬೯ ॥ ಎಲೈ ಜಿನನೇ, ನಿನ್ನ ಪಾದವನ್ನು ಪೂಜಿಸುವ ಮತ್ತು ಸ್ತುತಿಸುವ ನನಗೆ ಮೋಕ್ಷದ ದಾರಿಯು ಲಭಿಸಲಿ ! ನಿನ್ನ ಕೃಪೆಯಿಂದ ನಿನ್ನಂತೆಯೇ ಅನಂತವಾದ ಕಣ್ಣುಗಳೂ ಕೈಗಳೂ ನಾಲಗೆಗಳೂ ನನಗ ಆಗಲಿ ! ॥ ೧೭೦ ॥ ಎಲೈ ಅಜನನೇ, ನಿನ್ನ ಹೆಸರನ್ನೆತ್ತಿದರೆ, ಸ್ಮರಿಸಿದರೆ, ನಿನ್ನ

---

[1] ಕಡುಂಮುಙು

ಅರೆ ಮುಗುಳ್ದಕ್ಷಿಗಳನು ನಾಸಾಗ್ರದೊ । ಳಿರಿಸಿ ಹೃತ್ಕಮಲ ಮಧ್ಯದಲಿ ॥
ಪರಮ ನಿನ್ನಯ ಚರಣವ ನೆಲೆಗೊಳಿಸಲು । ಪರಿಯದಿಹುದೆ ಪಾಪ ಜನರ ॥ ೧೭೨ ॥

ಎಂದಿಂತು ಸ್ತೋತ್ರವ ಮಾಡುವರರೆಬರು । ಬಂದು ಪೂಜಿಸುವರರೆಬರು ॥
ವಂದಿಸುವರು ಪರಮನ ಪರಮಾನಂದ । ದಿಂದಂಬುಜಾಕ್ಷಿ ಮತ್ತಲ್ಲಿ ॥ ೧೭೩ ॥

ಜಪವ ಮಾಳ್ಪರು ಕೆಲಬರು ತಮ್ಮ ಮನಸಿನ । ಕಪಟವ ಬಿಟ್ಟು ಪೂಜಿಪರು ॥
ಅಪಗತ ದುರಿತನ ಜಾನಿಪರರೆಬರು । ಚಪಳಾಯತಾಕ್ಷಿ ಕೇಳೊಲಿದು ॥ ೧೭೪ ॥

ಪೊಡವಟ್ಟರು ವ್ಯಂತರರು ಜ್ಯೋತಿಷ್ಕರ । ಗಡಣ ಗರುಡ ಕಿನ್ನರರ ॥
ಪಡೆ ಕಿಂಪುರುಷ ಗಂಧರ್ವ ಯಕ್ಷರುಗಳಂ । ದೊಡನೆ ಬಂದಾ ಜಿನಪತಿಗೆ ॥ ೧೭೫ ॥

ಪೊಡಮಡುವರು ಲೆಕ್ಕವಿಲ್ಲ ನುತಿಸುವರು । ನುಡಿವುದೇನೆಣಿಸುವಡರಿದು ॥
ಬಿಡದೆ ಪೊಗಳುವರ ಹವಣಿಸಬಾರದಂ । ದುಡುಪತಿವದನೆ ನಿನ್ನಾಣೆ ॥ ೧೭೬ ॥

ಪಡೆದರು ನಮಿಸಿ ಸಿರಿಯ ಸ್ತುತಿಯನು ಮಾಡಿ । ಪಡೆದರು ದಿವ್ಯಸುಖವನು ॥
ಪಡೆದರು ಪೊಗಳಿ ಸತ್ಕೀರ್ತಿಯ ರಾಗಿಸಿ । ಪಡೆದರವರು ಗತಿಗಳನು ॥ ೧೭೭ ॥

ನೋಡಿ ದಣಿಯನು ದೇವೇಂದ್ರ ಸಂತಸವನು । ಮಾಡಿ ದಣಿಯನಸುರೇಂದ್ರ ॥
ಕೂಡೆ ಕೊಂಡಾಡಿ ದಣಿಯ ಧರಣೇಂದ್ರನ । ನಾಡಲೇನವರ ಸಂತಸವ ॥ ೧೭೮ ॥

ಕುಣಿವವರಿಂ ಮನವೊಲಿದು ಬಕತಿಯೊಳು । ಮಣಿವವರಿಂ ಕೊಂಡಾಡಿ ॥
ದಣಿಯದರಿಂ ನಿಟ್ಟಿಸಿ ರಾಗಿಪರ ಸಂ । ದಣಿಯದನಾರು ಬಣ್ಣಿಪರು ॥ ೧೭೯ ॥

---

ಚರಣವಿರುವ ದಿಕ್ಕನ್ನು ನೋಡಿದರೆ ನಾಕು—ಅಂಥವರ ಪಾಪಗಳು ದಿಕ್ಕು ಪಾಲಾಗಿ ಓಡಿಹೋಗುವವು—ಹೀಗಿರುವಾಗ ನಿನ್ನ ಮಹಿಮೆಯನ್ನು ಹೇಳಬಲ್ಲವರು ಯಾರು? ॥ ೧೭೧ ॥ ಎಲೈ ಪರಮನೇ, ಅರೆಮುಚ್ಚಿದ ಕಣ್ಣುಗಳನ್ನು ಮೂಗಿನ ತುದಿಯಲ್ಲಿ ನಿಲ್ಲಿಸಿ, ನಿನ್ನ ಪಾದವನ್ನು ಹೃದಯ ಕಮಲದ ನಡುವೆ ನೆಲೆಮಾಡಿ, ಧ್ಯಾನಿಸುವವರ ಪಾಪವು ಪರಿಹಾರವಾಗದಿರುವುದೆ? ॥ ೧೭೨ ॥ ಎಲೈ ಚೇಳಿನಿಯೇ, ಹೀಗೆ ಅಲ್ಲಿ ಜಿನೇಶ್ವರನನ್ನು ಅತ್ಯಂತ ಆನಂದದಿಂದ ಕೆಲವರು ಸ್ತುತಿಸುವರು, ಕೆಲವರು ಪೂಜಿಸುವರು, ಕೆಲವರು ನಮಸ್ಕರಿಸುವರು. ॥ ೧೭೩ ॥ ಎಲೈ ಚಂಚಲವಾದ ವಿಶಾಲವಾದ ಕಣ್ಣೆನವಳೇ, ಕೇಳು. ಪಾಪರಹಿತನಾದ ಜಿನನನ್ನು ಹಲವರು ಜಪಿಸುವರು; ಕೆಲವರು ನಿಷ್ಕಪಟ ಭಾವದಿಂದ ಪೂಜಿಸುವರು; ಕೆಲವರು ಧ್ಯಾನ ಮಾಡುವರು. ॥ ೧೭೪ ॥ ವ್ಯಂತರರೂ, ಜ್ಯೋತಿಷ್ಕರೂ, ಗರುಡಕಿನ್ನರರೂ, ಕಿಂಪುರುಷ ಗಂಧರ್ವರೂ, ಯಕ್ಷರೂ ಒಡನೆಯೇ ಬಂದು ಆ ಜಿನೇಶನಿಗೆ ನಮಸ್ಕರಿಸಿದರು. ॥ ೧೭೫ ॥ ಎಲೈ ಚೇಳಿನಿಯೇ, ಆ ಜಿನೇಶನಿಗೆ ನಮಸ್ಕಾರ ಮಾಡುವವರಿಗೆ ಲೆಕ್ಕವೇ ಇಲ್ಲ. ಸ್ತುತಿಮಾಡುವವರ ಸಂಖ್ಯೆಯನ್ನು ಎಣಿಸಲು ಅಸಾಧ್ಯ. ಎಡೆಬಿಡದೆ ಹೊಗಳುವವರ ಪ್ರಮಾಣವನ್ನು ಅಳೆಯಲು ಸಾಧ್ಯವಾಗದು—ಇದು ನಿನ್ನಾಣೆಯಾಗಿಯೂ ಹೌದು. ॥ ೧೭೬ ॥ ಜಿನೇಶನನ್ನು ನಮಸ್ಕರಿಸಿ ಸಂಪತ್ತನ್ನು ಪಡೆದರು. ಸ್ತುತಿಮಾಡಿ ದಿವ್ಯವಾದ ಸುಖವನ್ನು ಪಡೆದರು. ಹೊಗಳಿ ಒಳ್ಳೆಯ ಕೀರ್ತಿಯನ್ನು ಪಡೆದರು. ಭಕ್ತಿಯಿಂದ ಅವರು ಸದ್ಗತಿಗಳನ್ನು ಪಡೆಯುವರು ॥ ೧೭೭ ॥ ದೇವತೆಗಳ ಒಡೆಯನು ಜಿನೇಶನನು ನೋಡಿ ದಣಿಯನು ಅಸುರರ ರಾಜನು ಸಂತೋಷಪಡಿಸಿ, ತೃಪ್ತಿಯನ್ನೈದನು. ಧರಣಿಯ ಒಡೆಯನು ಹೊಗಳಿ ದಣಿಯನು ಹೀಗಿರುವಾಗ ಅವರ ಸಂತೋಷವನ್ನು ಏನೆನಲಿ! ॥ ೧೭೮ ॥ ಕುಣಿವವರಿಂದಲೂ ಮನಃಪೂರ್ವಕ ಭಕ್ತಿಯಿಂದ ನಮಿಸುವವರಿಂದಲೂ, ಕೊಂಡಾಡಿ ದಣಿಯದಿರುವವರಿಂದಲೂ, ನೋಡಿ

ಅವರ ಹರುಷವನವರ ಸಂತಸವನಂ । ದವರ ಮನಸಿನ ಮುದವನು ॥
ಅವರ ಹೆಚ್ಚುಗೆಯನವರ ರಾಗವ ನೋಡ । ಲವರ ಭಕ್ತಿಯ ಪೇಳ್ವರಾರು ॥ ೧೮೦ ॥

ಜಯಜಯ ಚಿನ್ಮಯರೂಪ ಚಿದಾನಂದ । ಜಯಜಯ ಭವರೋಗವೈದ್ಯ ॥
ಜಯಜಯ ಕಾಲದುರಿತದೂರನೆಂದೆಂಬ । ಜಯಜಯರವವೆಸೆದತ್ತು ॥ ೧೮೧ ॥

ಈ ತೆಱದಿಂದ ಸಕಲ ದೇವರ್ಕಳು । ಗೀತಿಯಿಂ ಭವಭಂಜನನ ॥
ಪ್ರೀತಿಯಿಂ ಪೂಜಿಸಿ ಪೊಡಮಟ್ಟು ಪೋದರು । ಮಾತೇನು ತಂತಮ್ಮ ಪುರಕೆ ॥ ೧೮೨ ॥

ತಿರುಗಿ ತಿರುಗಿ ನೋಡುತ ಕೈಯ ಮುಗಿಯುತ । ಮರಳಿ ಮರಳಿ ತುತಿಯಿಸುತ ॥
ಹರುಷದಿಂ ಮಗುಳಿ ಮಗುಳಿ ಮಣಿವುತ ಬ । ಲ್ಸಿರವಿ ತೆರಳಿತು ಬೇಗದೊಳು ॥ ೧೮೩ ॥

ಮುಂದೆ ಕೇಳ್ದಟ್ಟಡಿಯಿಡುವರು ಭುಜ್ಜನೆ । ಹಿಂದಕೆ ತಿರುಗಿ ನಮಿಪರು ॥
ಹಿಂದುಳಿಯದೆ ಮುಂದುವರಿಯದೆ ತೆರಳಿತು । ಮಂದಗತಿಯೊಳಾ ನೆರವಿ ॥ ೧೮೪ ॥

ನಡೆವವರಿಗೆ ಕಾಲೇಳವಗಸೆವಟ್ಟ । ಗಡರ್ವವರಿಗೆ ತಮ್ಮ ಚಿತ್ತ ॥
ಒಡಬಡದಾ ತಾಣವ ಬಿಟ್ಟು ಪೋಪರು । ಸಿಡಿಮಿಡಿಗೊಳುತ್ತೈದುವರು ॥ ೧೮೫ ॥

ಬಿಟ್ಟರು ರಾಜ್ಯವ ಸಂಸಾರ ಸುಖಗಳ । ಬಿಟ್ಟರುಳಿದ ಭೋಗಗಳನು ॥
ಬಿಟ್ಟರಾ ಧರಣಿಯ ಬಿಟ್ಟು ಪೋಪರೆ ಮನ । ಪುಟ್ಟದೆ ತೆರಳಿದರವರು ॥ ೧೮೬ ॥

ಕೊಂಡಾಡುತ ಕೊನರಿಸುತಡ್ಡ ಬೀಳುತ । ಮಂಡೆಗೆ ಕೈಯೆತ್ತಿಕೊಳುತ ॥
ಮಂಡಲೇಶ್ವರ ಚಕ್ರಿಯೊಡನೆ ತೆರಳಿದರಾ । ಖಂಡಲಪತಿ ಪೋಗಲೊಡನೆ ॥ ೧೮೭ ॥

---

ಸಂತೋಷಪಡುವವರಿಂದಲೂ ಕೂಡಿದ ಆ ಸಮೂಹವನ್ನು ಯಾರು ತಾನೇ ವರ್ಣಿಸಬಲ್ಲರು? ॥ ೧೭೯ ॥ ಅವರ ಹರ್ಷವನ್ನು, ಅವರ ಸಂತೋಷವನ್ನು ಅವರ ಮನಸ್ಸಿಗೆ ಆದ ಮುದವನ್ನು, ಅವರ ಹಿಗ್ಗನ್ನು, ಅವರ ಪ್ರೀತಿಯನ್ನು ಹಾಗೂ ಅವರ ಭಕ್ತಿಯನ್ನು ಹೇಳುವವರು ಯಾರು! ॥ ೧೮೦ ॥ ಎಲೈ ಚಿನ್ಮಯರೂಪನೇ, ಜ್ಞಾನ ಮತ್ತು ಆನಂದ ಸ್ವರೂಪನೇ, ಪುನರ್ಜನ್ಮವೆಂಬ ರೋಗಕ್ಕೆ ವೈದ್ಯನೇ ಮರಣದಿಂದಲೂ ಪಾಪದಿಂದಲೂ ದೂರವಾಗಿರುವವನೇ ಜಯ ಜಯ! ಜಯ ಜಯ! ಎಂಬ ಸ್ವರವು ಎಲ್ಲೆಡೆಯೂ ಕೇಳಿಸುತ್ತಿತ್ತು ॥ ೧೮೧ ॥ ಈ ರೀತಿಯಾಗಿ ಎಲ್ಲಾ ದೇವತೆಗಳೂ ಹಾಡುಗಳಿಂದ ಆ ಜಿನೇಶ್ವರನನ್ನು ಪ್ರೀತಿಯಿಂದ ಪೂಜಿಸಿ ನಮಸ್ಕರಿಸಿ ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದರು ॥ ೧೮೨ ॥ ತಿರುಗಿ ತಿರುಗಿ ನೋಡುತ್ತಲೂ ಕೈಮುಗಿಯುತ್ತಲೂ ಪುನಃಪುನಃ ಸ್ತುತಿಮಾಡುತ್ತಲೂ ಸಂತೋಷದಿಂದ ಮರಳಿ ಮರಳಿ ನಮಸ್ಕರಿಸುತ್ತಲೂ ಆ ಜನಸಮೂಹವು ತೆರಳಿತು ॥ ೧೮೩ ॥ ಆ ಸಮೂಹದಲ್ಲಿದ್ದವರು ಮುಂದಕ್ಕೆ ಮೆಲ್ಲಗೆ ನಡೆಯುತ್ತ, ಥಕ್ಕನೆ ಹಿಂದಿರುಗಿ ನಮಿಸುವರು ಇದರಿಂದಾಗಿ ಹಿಂದೆ ಉಳಿಯದೆ ಮತ್ತು ಮುಂದೆಯೂ ಹೋಗದೆ, ನಿಧಾನವಾದ ನಡಿಗೆಯಿಂದ ಹೋದರು ॥ ೧೮೪ ॥ ಅಲ್ಲಿಂದ ನಡೆದು ಹೋಗುವವರಿಗೆ ಕಾಲುಗಳೇ ಏಳದಾದವು ಹೆಬ್ಬಾಗಿಲ ದಾರಿಯನ್ನೇರುವವರಿಗೆ ಮನಸ್ಸೇ ಒಪ್ಪದು ಇದರಿಂದ ಅಲ್ಲಿನ ಸ್ಥಾನವನ್ನು ಬಿಟ್ಟು ಹೋಗುವವರು ಬಹಳ ಬೇಸರದಿಂದ ತೆರಳಿದರು ॥ ೧೮೫ ॥ ಅವರು ರಾಜ್ಯವನ್ನು ಬಿಟ್ಟಾರು, ಸಂಸಾರದ ಸುಖಗಳನ್ನೂ ಬಿಟ್ಟಾರು, ಇತರ ಸುಖಗಳಾವುವನ್ನೂ ಬಿಟ್ಟಾರು ಆದರೆ, ಜಿನೇಶ್ವರನಿದ್ದ ಸ್ಥಾನವನ್ನು ಬಿಟ್ಟು ಹೋಗಲು ಮನಸ್ಸಿಲ್ಲದೆ ತೆರಳಿದರು ॥ ೧೮೬ ॥ ದೇವೇಂದ್ರನು ಅಲ್ಲಿಂದ ತೆರಳಿದೊಡನೆ ಇತರರೆಲ್ಲರೂ ಕೊಂಡಾಡುತ್ತ ಹೊಗಳುತ್ತ, ಸಾಷ್ಟಾಂಗವಂದನೆ ಮಾಡುತ್ತ, ಕೈಮುಗಿಯುತ್ತ ರಾಮ-ಕೇಶವ

ಕೇಳಿದವರು ಕೇಣಿಗೊಂಬರು ಸಿರಿವೆಣ್ಣ । ಹೇಳಿದವರು ಮುಕ್ತಿವಧುವ ॥
ಆಳುವರೀ ಕವಿತೆಯ ನೋಡಿ ಬರೆದರು । ಕೋಳುಗೊಂಬರು ಸ್ವರ್ಗಸುಖವ ॥ ೧೮೮ ॥

ಹೆಱೆಯ ನೊಸಲ ಹೆಣ್ಣುದುಂಬಿಗುರುಳ ಬಲು । ಪೊಱವಾಱ ಪೊಂಬಾಳೆದೊಡೆಯ ॥
ನಱುಮಿಂಡಿಯರ ಕೂಟವ ಪಡೆವರು ಕೇಳ್ದು । ಮಱೆಯದ ಮಾನವರಿದನು ॥ ೧೮೯ ॥

ಬಣ್ಣದಾವರೆ ಮೈಯ ಬಣ್ಣದುಟಿಯ ನಿಡು । ಗಣ್ಣ ಗಜೋಪಮ ಗತಿಯ ॥
ಹೆಣ್ಣುಗಳೊಡನಾಟವ ಪಡೆವರು ಕೇಳಿ । ದಣ್ಣಗಳೀ ಜಿನಕಥೆಯ ॥ ೧೯೦ ॥

ರಾಯತನವ ರಾಜಕಲೆಗಳನಾ ಸುರ । ನಾಯಕತನುವನನುಕೂಲ ॥
ನಾಯಕಿಯರ ಬಹುಧನವ ಪಡೆವರು ನಿ । ರ್ಮಾಯದಿಂದಿದ ಕೇಳಿದವರು ॥ ೧೯೧ ॥

ಪುತ್ರರ ನಿರ್ಮಾಯದ ರೂಪುಳ್ಳ ಕ । ಳತ್ರದ ನಿರ್ವಂಚನೆಯ ॥
ಮಿತ್ರರ ಸರಸ ಕವಿತೆಯ ಪಡೆವರಿದ । ಶಾಸ್ತ್ರದಿಂ ಕೇಳ್ದವರಬಲೆ ॥ ೧೯೨ ॥

ಪಡೆವರು ದಿವ್ಯಜ್ಞಾನದುದಯವನು । ಪಡೆವರು ನಿತ್ಯಸುಖವನು ॥
ಪಡೆವರು ದಿವ್ಯದೇಹವ ಸಮ್ಯಕ್ತ್ವವ । ಪಡೆವರೀ ಕೃತಿಯ ಕೇಳ್ದವರು ॥ ೧೯೩ ॥

ಜಾತಿಕುಲಾನ್ವಿತರಾಗಿ ಪುಟ್ಟುವರಂಗ । ಜಾತನ ರೂಪ ಪಡೆವರು ॥
ನೀತಿ ಗುಣವ ಪಡೆವವರೀ ಕೃತಿಯ । ಸಂ ಪ್ರೀತಿಯಿಂ ಕೇಳ್ದವರು ॥ ೧೯೪ ॥

ಮಕರಾಂಕವಿಜಯನ ನಿಜಭಕ್ತರಪ್ಪರು । ಸುಕುಮಾರರಾಗಿ ಪುಟ್ಟುವರು ॥
ಸಕಲ ಕಲಾನ್ವಿತರಪ್ಪರೀ ಕಾವ್ಯವ । ವಿಕಲವಿಲ್ಲದೆ ಕೇಳಿದವರು ॥ ೧೯೫ ॥

---

ರೊಡನೆ ತೆರಳಿದರು ॥ ೧೮೭ ॥ ಈ ಕಾವ್ಯವನ್ನು ಕೇಳಿದವರು ಐಶ್ವರ್ಯವೆಂಬ ಹೆಣ್ಣನ್ನು ಕೊಂಡುಕೊಳ್ಳುವರು; ಹೇಳಿದವರು ಮೋಕ್ಷಾಂಗನೆಗೆ ಒಡೆಯರಾಗುವರು ಇದನ್ನು ನೋಡಿ ಬರೆದವರು ಸ್ವರ್ಗದ ಸುಖವನ್ನು ಪಡೆಯುವರು. ॥ ೧೮೮ ॥ ಈ ಕಾವ್ಯವನ್ನು ಕೇಳಿ, ಮರೆಯದಿರುವ ಮನುಷ್ಯರು ಚಂದ್ರನಂತಹ ಹಣೆಯುಳ್ಳ, ಹೆಣ್ಣು ದುಂಬಿಯಂತಹ ಕೂದಲುಳ್ಳ, ದೊಡ್ಡ ನಿತಂಬವುಳ್ಳ, ಹೊಂಬಾಳೆಯಂತಹ ತೊಡೆಯುಳ್ಳ ಕನ್ನಿಕೆಯರ ಒಡನಾಟವನ್ನು ಪಡೆಯುವರು. ॥ ೧೮೯ ॥ ಈ ಜಿನಕಥೆಯನ್ನು ಕೇಳಿದ ಸಹೋದರರು – ಬಣ್ಣದಾವರೆಯ ಹಾಗಿರುವ ಶರೀರ, ಬಣ್ಣದ ತುಟಿ, ನೀಳವಾದ ಕಣ್ಣು, ಆನೆಯ ನಡಿಗೆ—ಇವುಗಳಿಂದ ಕೂಡಿದ ಹೆಣ್ಣುಗಳ ಒಡನಾಟವನ್ನು ಪಡೆಯುವರು. ॥ ೧೯೦ ॥ ಏನೂ ಕಪಟವಿಲ್ಲದೆ ಇದನ್ನು ಕೇಳಿದವರು ಅರಸುತನವನ್ನೂ, ರಾಜವಿದ್ಯೆಗಳನ್ನೂ, ದೇವೇಂದ್ರನ ದೇಹವನ್ನೂ, ಅನುಕೂಲೆಯರಾದ ವನಿತೆಯರನ್ನೂ, ಹೆಚ್ಚು ಐಶ್ವರ್ಯವನ್ನೂ ಪಡೆಯುವರು. ॥ ೧೯೧ ॥ ಎಲೈ ಚೆಲುವಿನಿಯೇ, ಇದನ್ನು ಶಾಸ್ತ್ರೀಯವಾಗಿ ಕೇಳಿದವರು ಮಕ್ಕಳನ್ನೂ, ನಿಷ್ಕಪಟದ ರೂಪವಂತೆಯಾದ ಹೆಂಡತಿಯನ್ನೂ. ಏನೂ ವಂಚನೆ ಮಾಡದಿರುವ ಗೆಳೆಯರನ್ನೂ, ಸರಸ ಕವಿತಾ ಶಕ್ತಿಯನ್ನೂ ಪಡೆಯುವರು ॥ ೧೯೨ ॥ ಈ ಕಾವ್ಯವನ್ನು ಕೇಳಿದವರು ದಿವ್ಯವೆನಿಸುವ ಜ್ಞಾನೋದಯವನ್ನೂ, ಶಾಶ್ವತ ಸೌಖ್ಯವನ್ನೂ, ದಿವ್ಯ ಶರೀರವನ್ನೂ, ಜೈನಧರ್ಮದಲ್ಲಿ ಪೂರ್ಣವಿಶ್ವಾಸವನ್ನೂ ಪಡೆಯುವರು. ॥ ೧೯೩ ॥ ಈ ಕಾವ್ಯವನ್ನು ಪ್ರೀತಿಯಿಂದ ಕೇಳುವ ಮನುಷ್ಯರು-ಉತ್ತಮ ಜಾತಿ-ಕುಲಗಳಿಂದ ಕೂಡಿದವರಾಗಿ ಜನಿಸುವರು ಮನ್ಮಥನಂತಹ ರೂಪವನ್ನು ಪಡೆಯುವರು ಅಲ್ಲದೆ ಉತ್ತಮ ನೀತಿ ಗುಣಗಳನ್ನೂ ಪಡೆಯುವರು. ॥ ೧೯೪ ॥ ಈ ಕಾವ್ಯವನ್ನು ವಂಚನೆಯಿಲ್ಲದೆ ಕೇಳಿದವರು, ಜಿನೇಶನ ಭಕ್ತರಾಗಿಯೂ ಒಳ್ಳೆಯ ಮಕ್ಕಳೆನಿಸಿಯೂ ಹುಟ್ಟುವರು ಅಲ್ಲದೆ, ಅವರು ಎಲ್ಲಾ ಕಲೆ

ನಿರ್ಮಲಚಿತ್ತರಪ್ಪರು ಕೀರ್ತಿವಡೆವರು । ಧರ್ಮನಾಯಕರಾಗುವರು ॥
ಕರ್ಮವಿದೂರರಪ್ಪರು ತಪ್ಪದೀ ಜಿನ । ಧರ್ಮಕಥೆಯ ಪೇಳಿದವರು ॥ ೧೯೬ ॥

ಬಹುಪುತ್ರರುಗಳ ಬಹುಶಾಸ್ತ್ರಂಗಳ । ಬಹು ಧನಗಳ ರೂಪುಳ್ಳ ॥
ಮಹಿಳೆಯರುಗಳ ಪಡೆವರೀ ಕಾವ್ಯದ । ಮಹಿಮೆಯ ಕೇಳ್ದ ಮಾನವರು ॥ ೧೯೭ ॥

ಮೂಜಗದೊಡೆತನವನು ಕೋಟಿ ಸೂರ್ಯನ । ತೇಜವ ಮುಕ್ತ್ಯಂಗನೆಯ ॥
ಓಜೆಯಿಂದೊಲಿಸಿಕೊಂಬುದ ಪಡೆವರು ಜಿನ । ರಾಜನ ನೆಱೆ ನಂಬಿದವರು ॥ ೧೯೮ ॥

ಎಂತಪ್ಪ ಚೆನ್ನಾದುದೊ ನೃಪವರ ನಿ । ನ್ನಂತಪ್ಪರಾರೀ ತೆಱದಿ ॥
ಇಂತಪ್ಪ ಕಥೆಯ ನಿರವಿಪರಾರಿದ ಕೇಳಿ । ಮುಂತಪ್ಪ ಕರ್ಮ ಪೋದಪುದು ॥ ೧೯೯ ॥

ತುದಿಯಿಂದ ಮೊದಲಿಗೆ ಸವಿಯನು ಕಬ್ಬು ತಾ । ನೊದವಿಸಿ ಕೊಡುವುದಚ್ಚರಿಯೆ ॥
ಮೊದಲಿಂದ ತುದಿಗೆ ಪೇಳಿದ ಕಥೆಯನು ಕೇಳೆ । ಮುದವನೇಳಿಸುವುದು ಚಿತ್ರ ॥ ೨೦೦ ॥

ತೀರೆ ಮುಗಿದು ಸಂಪೂರ್ಣವಡೆದು ತುಂಬಿ । ಪೂರೈಸಿಯೆ ನಿಂದುದಿಲ್ಲಿ ॥
ಶ್ರೀರಾಮಚಂದ್ರದೇವರ ಲಕ್ಷ್ಮಣನ ಸು । ಚಾರು ಚರಿತ ಚಂದ್ರವದನೆ ॥ ೨೦೧ ॥

ಜೀಯ ಹಸಾದವೆನುತ ಶ್ರೇಣಿಕಗೆ ತನ್ನ । ಕೈಯ ಮುಗಿದು ಲಾಲಿಪರಿಗೆ ॥
ರಯ್ಯವಪ್ಪಂತು ಪೇಳಿದೆನೀ ಮೂಜಗ । ದಯ್ಯನ ಕಥೆಯ ನಿನ್ನಾಣೆ ॥ ೨೦೨ ॥

ತೊಲಗಿತು ದುಷ್ಕರ್ಮದೆಳೆ ನನ್ನನು ಬಿಟ್ಟು । ತೊಲಗಿತು ಮಿಥ್ಯಾಂಧಕಾರ ॥
ತೊಲಗಿತು ಮಾಯೆ ನಿಮ್ಮಡಿಗಳಿಂ ಸಮ್ಯಕ್ತ್ವ । ನೆಲಸಿತು ಸುಖಿಯಾಯಿತಾತ್ಮ ॥ ೨೦೩ ॥

---

ಗಳಿಂದಲೂ ಕೂಡಿದವರಾಗುವರು ॥ ೧೯೫ ॥ ಈ ಜಿನಧರ್ಮದ ಕಥೆಯನ್ನು ಹೇಳಿದವರು ನಿರ್ಮಲ ಮನಸ್ಸುಳ್ಳವರಾಗುವರು ಕೀರ್ತಿಶಾಲಿಗಳಾಗುವರು ಧರ್ಮಕ್ಕೆ ಒಡೆಯರಾಗುವರು ಕರ್ಮದಿಂದ ದೂರವಾಗುವರು ॥ ೧೯೬ ॥ ಬಹಳ ಮಹತ್ವವುಳ್ಳ ಈ ಕಾವ್ಯವನ್ನು ಕೇಳಿದವರು ಹೆಚ್ಚು ಮಂದಿ ಮಕ್ಕಳನ್ನೂ, ಬಹುವಿಧ ಶಾಸ್ತ್ರಗಳನ್ನೂ, ಬಹಳ ಧನಗಳನ್ನೂ, ರೂಪವುಳ್ಳ ಹೆಂಗುಸರನ್ನೂ ಪಡೆಯುವರು ॥ ೧೯೭ ॥ ಜಿನೇಶ್ವರನನ್ನು ನಂಬಿದವರು ಮೂರು ಲೋಕದ ಒಡೆತನವನ್ನೂ, ಕೋಟಿಸೂರ್ಯರ ತೇಜಸ್ಸನ್ನೂ ಮೋಕ್ಷವೆಂಬ ಸ್ತ್ರೀಯನ್ನು ಒಲಿಸಿಕೊಳ್ಳುವ ಯೋಗ್ಯತೆಯನ್ನೂ ಪಡೆಯುವರು ॥ ೧೯೮ ॥ ಚೇಳಿನಿಯು ಶ್ರೇಣಿಕನೊಡನೆ ಹೀಗೆಂದಳು— ಎಲೈ ಮಹಾರಾಜನೇ, ನೀನು ಹೇಳಿದ ಈ ಕಥೆ ಎಷ್ಟೊಂದು ಚೆನ್ನಾಗಿದೆಯೋ! ನಿನ್ನಂಥವರು ಯಾರು ತಾನೇ ಈ ರೀತಿಯ ಕಥೆಯನ್ನು ಹೇಳುವರು! ಇದನ್ನು ಕೇಳಿದವರಿಗೆ ಮುಂದೆ ಬರತಕ್ಕ ಕರ್ಮಗಳು ಹೋಗುವವು ॥ ೧೯೯ ॥ ತುದಿಯಿಂದ ಮೊದಲ ವರೆಗೆ ಕಬ್ಬು ಹೆಚ್ಚು ಹೆಚ್ಚಾದ ಸವಿಯನ್ನು ಕೊಡುವುದು ಏನೂ ಆಶ್ಚರ್ಯವಲ್ಲ ಆದರೆ ಮೊದಲಿಂದ ತುದಿ ತನಕವೂ ಸವಿಯಾಗುವಂತೆ ಹೇಳಿದ ಈ ಕಥೆಯು ಸಂತೋಷವನ್ನು ಕೊಡುತ್ತಿರುವುದು ಆಶ್ಚರ್ಯವೇ ಸರಿ" ॥ ೨೦೦ ॥ ಆಗ ಶ್ರೇಣಿಕನು—"ಎಲೈ ಚಂದ್ರಮುಖಿಯೇ, ಶ್ರೀರಾಮಚಂದ್ರ ದೇವರ ಮತ್ತು ಲಕ್ಷ್ಮಣನ ಮನೋಹರವಾದ ಚಾರಿತ್ರವು ಇಲ್ಲಿಗೆ ಪೂರ್ಣವಾಗಿ ಕೊನೆಗೊಂಡಿತು ಇಲ್ಲಿ ನಿಂತಿತು ॥ ೨೦೧ ॥ ಜೀಯ, ಹಸಾದ! ಎನ್ನುತ್ತ ಕೈಮುಗಿದು ಕೇಳುವವರಿಗೆಲ್ಲ ರಮ್ಯವಾಗುವಂತೆ, ನಿನ್ನಾಣೆಯಾಗಿ ನಾನು ಈ ಮೂರು ಲೋಕದ ಒಡೆಯನ ಕಥೆಯನ್ನು ಹೇಳಿದೆನು' ಎಂದನು ॥ ೨೦೨ ॥ ಆಗ ಚೇಳಿನಿ ಹೀಗೆಂದಳು—'ನಿಮ್ಮಿಂದಾಗಿ ನನ್ನ ಪಾಪದ ಎಳೆಯು ಬಿಟ್ಟು ಹೋಯಿತು, ಮಿಥ್ಯೆಯೆಂಬ ಕತ್ತಲು ತೊಲಗಿತು ಮಾಯೆಯು ಹೋಯಿತು, ಸಮ್ಯಗ್ದರ್ಶನವು ನನ್ನಲ್ಲಿ ನೆಲ

ಎಂದು ನುಡಿದ ಚೇಳಿನಿದೇವಿಯು ವದ । ನೇಂದುವ ನೋಡಿ ನಲಿವುತ ॥
ನಿಂದುದಿಲ್ಲಿಗೆ ರಾವುಚಂದ್ರನ ಕಥೆಯನಾ । ನಂದದಿಂದಂಬುಜನೇತ್ರೆ ॥ ೨೦೪ ॥

ಓದಿದವರು ಕೇಳಿದವರು ಹೇಳಿದರಿದ । ನಾದರದಿಂ ಬರೆದವರು ॥
ಆದಿತ್ಯ-ಧರೆ-ಚಂದ್ರ-ತಾರೆಯುಳ್ಳನಕವು । ಮೋದದಿಂದವೆ ಸುಖವಿರಲೊ ॥ ೨೦೫ ॥

ಬೆಳಗಲಿ ಜಿನಧರ್ಮ ಶಶಿ-ರವಿ-ತಾರಗೆ । ಯಿಳೆಯುಳ್ಳನಕವೀ ಕಾವ್ಯ ॥
ತಳೆಯುಲಿ ಸತ್ಕೀರ್ತಿಯ ಪತ್ತುದಿನಕೊಮ್ಮೆ । ಮಳೆ ಸುರಿಯುಲಿ ಜಗದೊಳಗೆ ॥ ೨೦೬ ॥

ಜೀವರಾಶಿಗಳೆಲ್ಲ ಸುಖಿಯಾಗಲಿ ಜಿನ । ದೇವನ ಭಕ್ತರಾದವರು ॥
ಭಾವಿಸಿ ಭವದೂರರಾಗಲಾಗಲಿಯೆಂದು । ಭಾವಶುದ್ಧಿಯುಲಿ ಪೇಳಿದೆನು ॥ ೨೦೭ ॥

ಉತ್ತಮ ವರ್ಣನುನ್ನತಕೀರ್ತಿಯುತ ಪುರು । ಷೋತ್ತಮ ದುಷ್ಕರ್ಮವನು ॥
ಒತ್ತರಿಸುವ ಪುಣ್ಯವಂತ ಪರಮಭಕ್ತ । ಚಿತ್ತಜರೂಪನೊಪ್ಪಿದನು ॥ ೨೦೮ ॥

ದ್ವಿಜಕುಲಾಂಬುಧಿ ಚಂದ್ರ ಸುಜನಜನಾಸ್ಯಾಂ । ಬುಜ ದಿನನಾಯಕನಮಲ
ನಿಜವಾಣಿ ದಾನಿ ದಯಾಪರನತಿ ಶಾಂತ । ವೃಜಿನಾರಿ ಭಕ್ತನೊಪ್ಪಿದನು ॥ ೨೦೯ ॥

ದರಹಸಿತಾನನ ದಾಕ್ಷಿಣ್ಯಪರ ಪರ । ಪುರುಷಾರ್ಥಿ ಪಾವನಚರಿತ ॥
ಪರಮ ದಯಾಪರನತಿನಿರ್ಮಲಚಿತ್ತ । ಪರವಧುವಿಮುಖನೊಪ್ಪಿದನು ॥ ೨೧೦ ॥

ಮಂದರಧೈರ್ಯ ಮದನರೂಪ ನವಪೂ । ರ್ಣೇಂದು ವದನ ಗುಣನಿಳಯ ॥
ಕಂದರ್ಪವಿಜಯನ ಭಕ್ತದೇವಪ್ಪನಾ । ನಂದದಿಂದಿರ್ಪ ಸುಖದಲಿ ॥ ೨೧೧ ॥

---

ಸಿತು, ಆತ್ಮಸುಖ ಲಭಿಸಿತು.” ॥ ೨೦೩ ॥ ಹೀಗೆ ಹೇಳಿದ ಚೇಳಿನೀದೇವಿಯ ಚಂದ್ರನಂತಹ ಮುಖವನ್ನು ನೋಡಿ ಆನಂದ ಪಡುತ್ತ, ಶ್ರೇಣಿಕನು ಹೀಗೆಂದನು—“ಎಲೈ ತಾವರೆಯಂತಹ ಕಣ್ಣಿನ ಚೇಳಿನಿಯೇ, ಶ್ರೀರಾಮಚಂದ್ರನ ಕಥೆಯು ಸಂತೋಷದಿಂದ ಮುಂದುವರಿದು ಇಲ್ಲಿಗೆ ನಿಂತಿತು ॥ ೨೦೪ ॥ ಇದನ್ನು ಓದಿದವರೂ, ಕೇಳಿದವರೂ, ಹೇಳಿದವರೂ, ಪ್ರೀತಿಯಿಂದ ಬರೆದವರೂ ಸೂರ್ಯ, ಭೂಮಿ. ಶಶಿ, ನಕ್ಷತ್ರಗಳು ಇರುವ ವರೆಗೆ ಸಂತೋಷ ಸುಖಗಳಿಂದ ಇರುವರು. ॥ ೨೦೫ ॥ ಜೈನಧರ್ಮವು ಬೆಳಗಲಿ! ಚಂದ್ರ-ಸೂರ್ಯ-ನಕ್ಷತ್ರ-ಭೂಲೋಕಗಳಿರುವ ವರೆಗೆ ಈ ಕಾವ್ಯವು ಒಳ್ಳೆಯ ಕೀರ್ತಿಯನ್ನು ತಾಳಲಿ! ಲೋಕದಲ್ಲಿ ಹತ್ತು ದಿನಕ್ಕೊಮ್ಮೆ ಮಳೆ ಸುರಿಯಲಿ! ॥ ೨೦೬ ॥ ಜೀವರಾಶಿಗಳೆಲ್ಲವೂ ಸುಖವನ್ನು ಅನುಭವಿಸಲಿ ಎಂತಲೂ, ಜಿನಭಕ್ತರು ಮೋಕ್ಷವನ್ನು ಗಳಿಸಲಿ ಎಂತಲೂ ಪರಿಶುದ್ಧವಾದ ಮನಸ್ಸಿನಿಂದ ಇದನ್ನು ಹೇಳಿರುತ್ತೇನೆ” ॥ ೨೦೭ ॥ ಉತ್ತಮ ಜಾತಿಯವನೂ. ಹೆಚ್ಚಾದ ಕೀರ್ತಿಶಾಲಿಯೂ. ಮನುಷ್ಯರಲ್ಲಿ ಶ್ರೇಷ್ಠನೂ, ದುಷ್ಕರ್ಮವನ್ನು ತಳ್ಳಿಹಾಕುವ ಪುಣ್ಯಶಾಲಿಯೂ, ಶ್ರೇಷ್ಠಭಕ್ತನೂ. ಮನ್ಮಥಸ್ವರೂಪನೂ ಆದ ದೇವಪ್ಪನು ಹೀಗೆ ಮೆರೆಯುತ್ತಿದ್ದನು. ॥ ೨೦೮ ॥ ಬ್ರಾಹ್ಮಣ ವಂಶವೆಂಬ ಸಮುದ್ರಕ್ಕೆ ಚಂದ್ರನೂ, ಸತ್ಪುರುಷರ ಮೊಗದಾವರೆಗೆ ಸೂರ್ಯನೂ, ಪರಿಶುದ್ಧವಾದ ಮಾತಿನಿಂದ ಕೂಡಿದವನೂ, ದಾನಿಯೂ, ದಯೆಯುಳ್ಳವನೂ, ಬಹಳ ಶಾಂತಸ್ವಭಾವದವನೂ, ಪಾಪಕ್ಕೆ ಶತ್ರುವೆನಿಸಿದ ಜಿನೇಶನ ಭಕ್ತನೂ ಆದ ದೇವಪ್ಪನು ಹೀಗೆ ಮೆರೆಯುತ್ತಿದ್ದನು ॥ ೨೦೯ ॥ ಮುಗುಳುನಗೆಯ ಮುಖವುಳ್ಳ. ವಿನಯದಿಂದ ಕೂಡಿದ, ಪರೋಪಕಾರಿಯಾದ. ಪವಿತ್ರವಾದ ನಡತೆಯುಳ್ಳ, ಅತ್ಯಂತ ದಯಾಶೀಲನಾದ. ಬಹಳ ಸ್ವಚ್ಛವಾದ ಮನಸ್ಸಿನ, ಪರಸ್ತ್ರೀಯರಿಗೆ ವಿಮುಖನಾದ ದೇವಪ್ಪನು ಇದ್ದನು. ॥ ೨೧೦ ॥ ಮಂದರಾದ್ರಿಯಂತೆ ಧೈರ್ಯವುಳ್ಳ. ಮನ್ಮಥನಂತೆ ರೂಪವುಳ್ಳ, ಹೊಸ ಪೂರ್ಣ

ಭಾವಜ ಭವದೂರನ ದಾಸ ನಾನಾ । ಜೀವ ದಯಾಪರ ಪರಮ ॥
ಕೋವಿದಾಮಾತ್ಯ ಮನೋಹರರೂಪನು । ದೇವಪ್ಪರಸನೊಪ್ಪಿದನು ॥ ೨೧೨ ॥

ಇದು ಸರಸತಿಯಂಗ ಭೂಷಣ ಕೇಳ್ವರ । ಹೃದಯಕಮಲ ದಿವಸೇಂದ್ರ ॥
ಇದು ರಸಿಕರ ಕಿವಿಗಮೃತರಸಾಯನ । ವಿದು ಭವ್ಯಕುಮುದ ಚಂದ್ರಮನು ॥ ೨೧೩ ॥

ಕೋವಿದರುಗಳ ಹೃತ್ಕಮಲ ಭಾಸ್ಕರ ವಾ । ಗ್ದೇವಿಯ ಮುಖಮಣಿಮುಕುರ ॥
ಭಾವಕರುಗಳ ಸಂತಸಸಾಗರ ಮಿತ್ರ । ದೇವಪ್ಪನೊರೆದ ಸತ್ಕಾವ್ಯ ॥ ೨೧೪ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರ ನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತ ಸಚಿವದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದತಿ ಜಸವೆತ್ತುದು ವಿಂಶತಿಸಂಧಿ ॥ ೨೧೫ ॥

---

ಚಂದ್ರನಂತೆ ಮುಖವುಳ್ಳ, ಗುಣಗಳಿಗೆ ಆಶ್ರಯನಾದ ಮನ್ಮಥನನ್ನು ಜಯಿಸಿದ ಜಿನೇಂದ್ರನ ಭಕ್ತನಾದ ದೇವಪ್ಪನು ಸುಖ-ಸಂತೋಷದಿಂದ ಇದ್ದನು ॥ ೨೧೧ ॥ ಮನ್ಮಥನಿಂದಲೂ ಪುನರ್ಜನ್ಮದಿಂದಲೂ ದೂರವಾಗಿರುವ ಜಿನೇಂದ್ರನ ಭಕ್ತನೂ, ಎಲ್ಲಾ ಜೀವಿಗಳಲ್ಲಿ ದಯೆಯುಳ್ಳವನೂ, ಶ್ರೇಷ್ಠನೂ ವಿದ್ವಾಂಸನಾದ ಮಂತ್ರಿಯೂ, ಮನವನ್ನು ಸೆಳೆವ ರೂಪವುಳ್ಳವನೂ ಆದ ದೇವಪ್ಪರಸನು ಶೋಭಿಸುತ್ತಿದ್ದನು ॥ ೨೧೨ ॥ ಈ ಕಾವ್ಯವು ಸರಸ್ವತೀದೇವಿಯ ಶರೀರಕ್ಕೆ ಅಲಂಕಾರ ಪ್ರಾಯವೂ, ಕೇಳುವವರ ಹೃದಯವೆಂಬ ತಾವರೆಗೆ ಸೂರ್ಯನೂ, ರಸಿಕರ ಕಿವಿಗೆ ಅಮೃತದ ರಸಾಯನವೂ, ಭವ್ಯರೆಂಬ ನೈದಿಲೆಗೆ ಚಂದ್ರನೂ ಆಗಿದೆ ॥ ೨೧೩ ॥ ವಿದ್ವಾಂಸರ ಹೃದಯಕಮಲಕ್ಕೆ ಸೂರ್ಯನೂ, ಸರಸ್ವತೀದೇವಿಯ ಮುಖಕ್ಕೆ ರತ್ನದ ಕನ್ನಡಿಯಂತಿರುವವನೂ, ರಸಿಕಜನರ ಸಂತೋಷಕ್ಕೆ ಸಮುದ್ರನೂ, ಮಿತ್ರನೂ ಆದ ದೇವಪ್ಪನು ರಚಿಸಿದ ಕಾವ್ಯವಿದು ॥ ೨೧೪ ॥ ಬ್ರಾಹ್ಮಣ ಕುಲದಲ್ಲಿ ಜನಿಸಿದ, ಹೊಸ ಮನ್ಮಥನೆನಿಸಿದ, ಶುದ್ಧವಾದ ಗುಣಗಳುಳ್ಳ, ಜಿನಭಕ್ತನಾದ, ಅತಿಶ್ರೇಷ್ಠ ವಾಗ್ದೇವಿಯ ಮುಖದ ಕನ್ನಡಿಯಂತಿರುವ, ನಿರ್ಮಲ ಚಾರಿತ್ರನಾದ, ಮಂತ್ರಿ ದೇವಪ್ಪನು ಸಂತೋಷದಿಂದ ಹೇಳಿರುವ ರಾಮವಿಜಯವೆಂಬ ಕಾವ್ಯದಲ್ಲಿ ಒಳಗೊಂಡಂತೆ ರಚಿತವಾದ ಇಪ್ಪತ್ತನೆಯ ಸಂಧಿಯಿದು ಪ್ರಸಿದ್ಧವಾಯಿತು ॥ ೨೧೫ ॥

# ಅನುಬಂಧ ೧

‘ಕ’ ಪ್ರತಿಯ ಪದ್ಯಪಾಠಾಂತರ. ೧೫ನೆಯ ಸಂಧಿಯ ಪದ್ಯ ೧೦೨ರಿಂದ ೧೧೫ ವರೆಗಿನ ೧೪ ಪದ್ಯಗಳ ಸ್ಥಾನದಲ್ಲಿ ಬಂದಿರುವ ‘ಕ’ ಪ್ರತಿಯ ೨೨ ಪದ್ಯಗಳು

## ಪದಿನೈದನೆಯ ಸಂಧಿ

ಎನಲಾ ಬಾಲಿ ನಾನಱಿಯದವನೆ ರಾಮ । ನನು ಕೊಂಡಾಡಿದೆ ನೀನು ॥
ಜನನಿ ಜನಕರು ನಾನಱಿಯದವರೆ ಯೆಂ । ದೆನುತಾಗ ರಾಮನ ಜಱಿದ ॥ ೧೦೧ ॥

ಜಱಿಯಲೊಡನೆ ರಾಮಚಂದ್ರನ ಚರನಿಂ । ತೊಱಿದನು ಸಮರಾಂಗಣಕೆ ॥
ನೆಱಿದ ಬಲವು ಕೂಡಿಯೇಳೇಳೆನುತ ಬಾಲಿ । ಸೆಱಗ ಪಿಡಿಯಲೊಡನಾಗ ॥ ೧೦೨ ॥

ಸೆರಗನು ಬಿಡುಬಿಡು ನಿನ್ನೊಡೆಯಗೆ ಪೇಳು । ಧುರಕೆ ಸನ್ನಹವಾಗುವಂತೆ ॥
ಚರನ ಕಳುಹಿ ಸನ್ನಾಹಭೇರಿಯ ಪೊಯ್ಸಿ । ನೆರಪಿದ ತನ್ನಯ ಬಲವ ॥ ೧೦೩ ॥

ಕೂಡಿದ ಬಲಗೂಡಿ ಬಾಲಿಯು ಹೊರಟನು । ಆಡಿದ ಮಂತ್ರಿಯವನೊಳು ॥
ನಾಡಾಡಿ ಪುರುಷನೆ ಶ್ರೀರಾಮಚಂದ್ರನ । ಬೇಡಿಕೊಂಬುದು ಲೇಸು ನಮಗೆ ॥ ೧೦೪ ॥

ನಿನಗೆ ತಕ್ಕುದನಾಡಿದೆ ಮಂತ್ರಿ ಸಮರದೊಂ । ದನುವ ನೀನೇನ ಬಲ್ಲಪೆಯೆಂ ॥
ಎನಲಾ ಬಾಲಿಗೆ ಕರವ ಮುಗಿದು ಮಂತ್ರಿ । ವಿನಯದಿ ಪೇಳ್ದನಿಂತೆಂದು ॥ ೧೦೫ ॥

ಈ ಕಾಲದ ಬಲ ವಾಸುದೇವರ್ಕಳು । ಲೋಕೈಕವೀರರು ಮತ್ತೆ ॥
ಕಾಕುಬುದ್ಧಿಯ ಬಿಟ್ಟು ಶ್ರೀರಾಮಚಂದ್ರನ । ನೀಕಾಣೆ ಮನ್ನಿಸುವವನು ॥ ೧೦೬ ॥

ಶರಣುಹೊಕ್ಕರ ಮನ್ನಿಸಿ ಧುರದೊಳು ನಿಂದ । ನೆರೆಗಲಿಗಳ ಸಿರವರಿದು ॥
ಧರೆಯ ಪಾಲಿಸುವಂಥ ಪರಪುರುಷಾರ್ಥಿಯ । ಚರಣ ಕಾಣ್ಬುದು ಲೇಸು ನಮಗೆ ॥ ೧೦೭ ॥

ಎನಲಾ ಬಾಲಿಗೆ ಕಣ್ಣೊಳಗನಲನು । ಕೊನರಿ ಕುಣಿಯೆ ಕೊನೆಮೀಸೆ ॥
ಕೊನೆಮೂಗು ಬೆಮರೆ ನಡೆದ ಬಾಲಿ ತನ್ನಯ । ಘನಸೇನೆಯ ಕೂಡಿಕೊಂಡು ॥ ೧೦೮ ॥

ನಾನಾ ವಾದ್ಯದ ರವಮುಣ್ಕೆ ಬಾಲಿಯು । ಆನೆಯನೇರಿ ನಡೆದನು ॥
ಸೇನೆಯ ನೋಡುತ ಯೆಡಬಲ ಹಾರುತ । ತಾನಿಳಿದನು ಬಯಲೊಳಗೆ ॥ ೧೦೯ ॥

ಇತ್ತ ಚರನು ಪೋಗಿ ರಾಮಚಂದ್ರಗೆ ಬಾಲಿ । ವೃತ್ತಾಂತವ ಪೇಳಿದನು ॥
ಮತ್ತವ ನಸುನಕ್ಕು ಚೆನ್ನಾಯಿತೆನುತಾಗ । ವತ್ತಿನಣುವ ಸುಗ್ರೀವನಿಗೆ ॥ ೧೧೦ ॥

ಪೇಳಿ ತನ್ನಯ ಸೇನೆ ಸಮರಸನ್ನಾಹವ । ನಾಳೆ ಕೋಳಾಹಳವೆನುತ ॥
ಬಾಲ ಶ್ರೀರಾಮಚಂದ್ರನು ಲಕ್ಷ್ಮಣಸಹ । ಲೀಲೆಯಿಂ ಪೊರಮಟ್ಟರಾಗ ॥ ೧೧೧ ॥

ತರುಣಿಯೆ ಕೇಳು ವುಭಯ ಬಲವೀ ತೆರ । ಸೆರೆಯಲು ಮಸಗಿತಾಕ್ಷಣವೆ ॥
ಎರಡು ಬಲವನಿತ್ತಟ್ಟಿಗೆ ನಿಲ್ಲಿಸಿ । ಧುರದೊಳು ನಿಲೆ ರಾಮಚಂದ್ರ ॥ ೧೧೨ ॥

ಎರಡು ಥಟ್ಟಿನೊಳು ನೋಡುವ ಬಲ ನಭದೊಳು । ಸುರರುಘೋಯೆನುತಿರಲಿತ್ತ ॥
ಶರವರುಷವ ಕರೆದನು ಬಾಲಿ ಶರಗಳ । ತರಿದ ಶ್ರೀರಾಮಚಂದ್ರಮನು ॥ ೧೧೩ ॥

ಕಕ್ಕಸಕುಚೆ ಕೇಳು ಬಾಲಿ ಮಂತ್ರಾಸ್ತ್ರವ । ನಿಕ್ಕಲು ಶ್ರೀರಾಮಚಂದ್ರ ॥
ಇಕ್ಕಡಿ ಮಾಡೆ ಯಿಕ್ಕರ್ತರ ಮಧ್ಯದೊ । ಳಿಕ್ಕಿತು ಘನ ನಗದಂತೆ ॥ ೧೧೪ ॥

ಈ ಪರಿಯೊಳು ಮೂದಲಿಸುತಲಿರ್ವರು । ಚಾಪವಿದ್ಯಾಗಮದಿಂದ ॥
ಕೋಪವಂಕುರಿಸಿದ ಬಾಲಿಯ ಕಾಣುತ । ಶ್ರೀಪತಿ ನಸುನಗುತಿರ್ದ ॥ ೧೧೫ ॥

ತಾಳಿಕೋ ಯೆನುತ ಬಾಲಿಯು ಕೋಪದೊಳು ಶರ । ಜಾಲವ ಖಂಡಿಸುತಾಗ
ಮೇಲೆ ಶ್ರೀರಾಮನು ದಿವ್ಯಾಸ್ತ್ರವ ಬಿಡೆ । ಕೀಲಿಸಿತವನೆದೆಯೊಳಗೆ ॥ ೧೧೬ ॥

ಧರೆಯೊಳೊರಗಿದ ಬಾಲಿಯ ಕಂಡು ಮೇಗಣ । ಸುರರು ಪೂಮಳೆಯಗರೆದರು ॥
ನೆರೆದವುಭಯ ಬಲ ಕೊಂಡಾಡಿತು ಲಕ್ಷ್ಮಿ । ಯೆರೆಯಗೆ ಸರಿಯುಂಟೆಯೆಂದು ॥ ೧೧೭ ॥

ಕೂಡಿತುಭಯಬಲವೊಂದಾಗಿ ಜಯಘೋಷ । ಮಾಡಿತು ಸುಗ್ರೀವನಿಗೆ ॥
ಬೇಡಿದಿಷ್ಟಾರ್ಥವನಿತ್ತು ಶ್ರೀರಾಮನು । ನಾಡ ನೃಪರ ಕರಸುತವೆ ॥ ೧೧೮ ॥

ಕೊಟ್ಟನು ಕಿಷ್ಕಿಂಧಾ ಸಾಮ್ರಾಜ್ಯಪಟ್ಟವ । ಕೊಟ್ಟು ನಾಡ ಮನ್ನೆಯರಿಗೆ ॥
ಕೊಟ್ಟುಡುಗೊರೆಗಳ ಮನ್ನಿಸಿ ಕಳುಹಿದ । ಪಟ್ಟಣಕವರವರಾಗ ॥ ೧೧೯ ॥

ಬಾಲಿಯ ಸಂಸ್ಕರಿಸಿದನು ಸುಗ್ರೀವನು । ಮೇಳೈಸಿದನು ರಾಮನೊಳಗೆ ॥
ಪಾಳೆಯ ಪೊಕ್ಕನು ವುಭಯಬಲವು ಸಹ । ಲೋಲಾಕ್ಷಿ ಕೇಳು ಕೇಳೊಲಿದು ॥ ೧೨೦ ॥

ಶರಣಾಗತ ವಜ್ರಪಂಜರ ಗಿರಿಧೈರ್ಯ । ಶರಧಿಗಾಂಭೀರ್ಯ ಬೇಡಿದುದ ॥
ಕರೆದು ಕೊಡುವ ಶ್ರೀರಾಮಚಂದ್ರಮನಲ್ಲಿ । ಹರುಷದಿಂದೊಪ್ಪಿದನಬಲೆ ॥ ೧೨೧ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವೆತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೨೨ ॥

---

# ಅನುಬಂಧ ೨

‘ಕ’ ಪ್ರತಿಯಲ್ಲಿರುವ ೧೬ನೆಯ ಸಂಧಿಯ ಆದಿಯ ೫ ಪದ್ಯಗಳು.

## ಪದಿನಾರನೆಯ ಸಂಧಿ

ರಕ್ತಿಯ ತೊರೆದನೆ ಮುಕ್ತಿಯನಾಳ್ದನೆ । ಭಕ್ತರ ಭವರುಜಾಹರನೆ ॥
ಶಕ್ತರೊಡೆಯ ಮುನಿ ಸುವ್ರತಜಿನರಂಘ್ರಿ । ಭಕ್ತಿಪೂರ್ವಕದೊಳೆಱಗುವೆ ॥ ೧ ॥

ಮಂದಣ ಕಥೆಯ ನಾನುಸುರುವೆ ಲಾಲಿಸು । ಮಂದಗಮನೆ ಮಧುವಾಣಿ ॥
ಮಂದರಧೀರ ಶ್ರೀರಾಮಚಂದ್ರನ ಕಥೆ । ಯಿಂದೆನ್ನ ಭವಹರವಹದು ॥ ೨ ॥

ಕಾಲವಿಜಯನ ಕಥೆಯ ಪೇಳುವೆ ಕೇಳು । ಲೋಲಾಕ್ಷಿ ಚೇಳಿನೀ ದೇವಿ ॥
ಬಾಲೆ ಬಾಲೇಂದುವದನೆ ಸಗ್ಗ ಸುಖವನು । ಪಾಲಿಪ ಮುಕ್ತಿವಲ್ಲಭನು ॥ ೩ ॥

ಜಾಣೆಯೆ ಕೇಳು ಜಾಣ್ಮೆಯ ಮಾತಲ್ಲಿದು । ಜಾಣರೆರೆಯರಾದ ಜಿನರ ॥
ವಾಣಿಯ ನುಡಿಯಿದು ಪೇಳುವೆನಾ ಸು । ಶ್ರೇಣಿ ಸಗ್ಗದ ಸುಖವಹುದು ॥ ೪ ॥

ಕೆನೆವಾಲು ಸಕ್ಕರೆಯಿನಿಯ ಮಾವಿನ ರಸ । ಯಿನೆಯನಗಲಿ ಕೂಡಿದಂತೆ ॥
ಮನುಜೇಶ ನಿನ್ನಯ ಸವಿಮಾತು ಮುಂಗಥೆ । ಯನು ಪೇಳು ಕೇಳುವೆ ನಾನು ॥ ೫ ॥

# ಅನುಬಂಧ ೩

(ರಾಯಣ್ಣಕವಿ ಕೃತ ಸಂಧಿಗಳು)
(ಸ್ವಾಮಿ ಪಂಚಕಲ್ಯಾಣ)

## ಇಪ್ಪತ್ತನೆಯ ಸಂಧಿ

ಕರ್ಮಗೋಲನ ಖಂಡಿಸಿ ಯಮಧರ್ಮನ । ಹರ್ಮ್ಯ ಮುರಿದು ಮುಕ್ತಿವಡೆದು ॥
ಸರ್ಮತಿಯಿತ್ತು ಸಲಹು ಮುನಿಸುವ್ರತ । ಯೆರ್ಮ ಜಿಹ್ವಾಗ್ರದಿ ನೆಲಸಿ ॥ ೧ ॥

ಮುಂದಣ ಕಥೆಯಂ ತರಿಸಲು ಭವ್ಯರು । ಇಂದಿದ ಪೇಳುವುದೆನಲು ॥
ಮುಂದಣ ಗತಿಯಾಗಬೇಕೆಂದು ಮನದೊಳು । ತಂದು ಪೇಳಿದೆನು ಲಾಲಿಪುದು ॥ ೨ ॥

ಮುಂದಣ ಕಥೆಯಂ ತರವಾಗೆ ನಾಗೇಂದ್ರ । ನಂದನ ಬೊಮ್ಮಣ ಕವಿಯು ॥
ಕಂದ ರಾಯಣ್ಣನು ವೇಣಾಖ್ಯ ಶ್ರೀ ಜಿನ । ಚಂದ್ರನ ಬಸದಿಯೊಳಿರ್ದಾ ॥ ೩ ॥

ಜೀರ್ಣವಾಗಿರೆ ರಾಮಚರಿತದ ಪುಸ್ತಕ । ಜೀರ್ಣೋದ್ಧಾರ ಮಾಡಿದೆನು ॥
ಕರ್ಣರಸಾಯನಾಮೃತವಾಗಿ ಪೇಳಿದೆ । ಸ್ವರ್ಣಕಲಶಕುಚದಬಲೆ ॥ ೪ ॥

ರಾಜವದನೆ ರಾಜೀವವದನೆ ಸುರ । ರಾಜವಿಭವ ದಿನಮಣಿಯು ॥
ತೇಜವೆ ಜಿನಚರಿತವ ಪೇಳುವೆ ಕರ್ಣ । ಭಾಜನಕಮೃತವಪ್ಪಂತೆ ॥ ೫ ॥

ಸುಪ್ಪಾಣಿಯು ಮುತ್ತೆ ಸುಲಿಪಲ್ಲ ಜಾಣೆಯೆ । ಪುಷ್ಪಚಾಪನ ಸತಿಸೊಬಗೆ ॥
ತುಪ್ಪ ಸಕ್ಕರೆ ಚಿಲಿವಾಲ ಸವಿವವೋಲು । ವೊಪ್ಪು ಕಥೆಯು ಪೇಳುವೆನು ॥ ೬ ॥

ತತ್ವಪುರುಷ ಕವಿ ತತ್ವಚಿಂತಾಮಣಿ । ತತ್ವಗರೆವ ಸುರಧೇನು ॥
ತತ್ವದ ಸುರಭೂಜವೆ ಕೇಳು ಶ್ರೀ ಜಿನ । ತತ್ವದ ಮುಂದಣ ಕಥೆಯು ॥ ೭ ॥

ಅನ್ಯಥಾ ಶರಣಂ ನಾಸ್ತಿಯುಮೆಂದೆಂ । ಬನ್ಯಥಾ ಕೃತಿ ಕಿವಿವೊಗದ ॥
ದೈನ್ಯವಡೆಯುದ ಶ್ರೀಮಂದರ ಲೋಕಕೆ । ಮಾನ್ಯವೆ ಕೇಳು ಮಂಗಥೆಯು ॥ ೮ ॥

ಜಿನಪೂಜೆ ಮಾಳ್ಪುದು ಜಿನಶಾಸ್ತ್ರ ಕೇಳ್ವುದು । ಜಿನಮುನಿಗನ್ನ ಕೊಡುವುದು ॥
ಮನವಲ್ಲದೆಯನ್ಯ ಮನವಿಲ್ಲ ಜಿನಕಥೆ । ಯನು ಕೇಳು ಪೇಳ್ವೆ ನಾನೊಲಿದು ॥ ೯ ॥

ಇಷ್ಟ ಯೆನ್ನೊಳು ದಯೆ ಯಿಷ್ಟೇಕೆ ಮಮತೆಯು । ಯಿಷ್ಟಾರ್ಥವನೀವ ದೇವ ॥
ಪಟ್ಟವರ್ಧನ ರಾಮಚರಿತವ ನಾ ಕಿವಿ । ಗೊಟ್ಟು ಕೇಳುವೆನು ಮುಂಗಥೆಯು ॥ ೧೦ ॥

ಪುರುಷರತ್ನವೆ ಪರಹಿತ ಚರಿತವೆ ಜಿನ । ಚರಣ ಷಟ್ಟರಣ ಸ್ಮರಿಸಿದ ॥
ಪುರುಷ ಚಿಂತಾಮಣಿ ಪೇಳು ಕೇಳುವೆ ರಾಮ । ಚರಿತೆಯು ಮುಂಗಥೆಯಾನು ॥ ೧೧ ॥

ಮುಂದಣಕಥೆ ಶ್ರೀರಾಮಚಂದ್ರಮ ರಾಜ್ಯ । ವಂದದೊಳಿರೆ ಸ್ವಾಮಿಯುದಯ ॥
ಒಂದನುಸುರುವೆ ಲಾಲಿಸು ಲಾಲಿಸು ನೀನು । ಚಂದನಗಂಧಿ ಮೋಲ್ಗತೆಯ ॥ ೧೨ ॥

ವರ ಜಂಬೂದ್ವೀಪದ ಭರತಕ್ಷೇತ್ರ । ಸುರುಚಿರ ಮಗಧವಿಷಯದ ॥
ಸಿರಮಣಿ ಕುಶಲಗ್ರಾಮ ಧರೆಗೆ ಸುರ । ಪುರಿಯ ಸೋಲಿಪುದಬ್ಜನೇತ್ರೆ ॥ ೧೩ ॥

ಆ ನಗರವನಾಳ್ವ ಹರಿವಂಶಾಗ್ರಣ್ಯ । ಸೂನು ಕಾಶ್ಯಪಗೋತ್ರದೊಳು ॥
ತಾನೆ ತಾನಾಗಿ ಸುಮಿತ್ರನೆಂಬರಸನ । ಮಾನಿನಿ ಸೋಮಹಾದೇವಿ ॥ ೧೪ ॥

ಇಂತೀರ್ವರು ರಾಜ್ಯವನಾಳುತಿರಲ । ತ್ಯಂತ ಸುಖಾಂಬುಧಿಯೊಳಗೆ ॥
ಅಂತರಿಸದೆ ಜಿನಪತಿಯುದ್ಭವ ಕಾ । ಲಾಂತರಕರುದಿಂಗಳೊಳು ॥ ೧೫ ॥

ಸುರರಾಜನರಿದು ಜಿನೇಂದ್ರನುದ್ಭವಿಸುವ । ಪರಿಯಂತ ದಾದಿಯರಾಗಿ ॥
ಇರಿಮೆಂದು ಶಚಿಗೂಡಿ ಸುರವನಿತೆಯರನು । ತೆರಳಿಸಿದಾ ಪುರಕಾಗಿ ॥ ೧೬ ॥

ಅವರ್ಕೈತಂದಾ ಪುರವರ ಮನೆವೊಕ್ಕು । ಯುವತಿಗೆ ಸ್ನಾನಭೋಜನವ ॥
ವಿವಿಧ ವಸ್ತ್ರಾಭರಣಗಿಳಿಂದುಪಚರಿ । ಸುವರು ದಿವಿಜರನುದಿನವು ॥ ೧೭ ॥

ಅತ್ತ ಸುರೇಂದ್ರ ಧನಪಗುಸುರಲ್ಕವ । ನಿತ್ತ ರತ್ನದ ವೃಷ್ಟಿಯನು ॥
ಮತ್ತಿಲ್ಲಿ ಮುಚ್ಚಂಜೆಯೊಳು ಕರೆಯುತಲಿಹ । ವೃತ್ತಕುಚದ ಪೆಣ್ಮಣಿಯೆ ॥ ೧೮ ॥

ಈ ರೀತಿಯುತ್ಸಾಹದೊಳಗಿರೆ ದಿವಿಜರ । ನಾರೇರೊಳಗೆ ಸೋಮದೇವಿ ॥
ಊರೆಲ್ಲರ ಬರ ಬರತುದು ಸರಿಷರಿ । ಧಾರುಣಿಯೊಳಗಿಲ್ಲವಬಲೆ ॥ ೧೯ ॥

ಇರಲೊಂದು ದಿನ ಸೋಮ ಮಹದೇವಿಗೆ ಋತು । ವರಿದು ಸುರೇಂದ್ರನ ಸತಿಯು ॥
ಧರಿಸಿ ರತ್ನಾಭರಣವ ರತ್ನಾಂಬರವನು । ಯಿರಿಸಿದಳಂತಸ್ತಿನೊಳು ॥ ೨೦ ॥

ದಿನನಾಲ್ಕರೊಳು ಸ್ನಾನವ ಮಾಡಿಸಿ ಶಚಿ । ವನಿತೆಗೆ ದಿವ್ಯಾಂಬರವ ॥
ಅನುಕರಿಸಿಯು ದಿವ್ಯಾಭರಣ ಭೂಷಣವನು । ಕನಕ ಕಲಶ ಕುಚದಬಲೆ ॥ ೨೧ ॥

ಸತಿಪತಿಗಳು ಸ್ವರ್ಣಭಾಜನದೊಳಗತಿ । ಹಿತಮಪ್ಪ ಭೋಜನಮಾಡಿ ॥
ಶತಕ್ರತು ಸತಿಗೂಡಿಯೋಲಗವನು ಕೊಡೆ । ಶತಪತ್ರಸಖನಸ್ತಮಿಸಿದ ॥ ೨೨ ॥

ಆ ರಾತ್ರಿಯೊಳಗೆ ಸುಮಿತ್ರ ಸಜ್ಜಾಗೃಹ । ಸೇರಲರಿದು ಶಚೀದೇವಿ ॥
ನಾರೀಮಣಿ ಸೋಮ ಮಹದೇವಿಗೆ ರತ್ನ । ವಾರದೊಡಿಗೆಯನು ತೊಡಿಸಿ ॥ ೨೩ ॥

ಪಾವುಗೆ ಮೆಟ್ಟಿಸಿ ಕೈಲಾಗಿಲಿ ಶಚಿ । ದೇವಿಯ ದಾದೇರುವೆರಸು ॥
ತೀವಿದರತಿ ಸೌಭಾಸ್ಕರವಾಂತು ಸೋಮಹಾ । ದೇವಿಯೊಡನೆ ಸಾರಿದರು ॥ ೨೪ ॥

ಪತಿಯರ್ಧಶಯ್ಯಾಗೃಹಕ್ಕೈದಿ ಸಾರ್ದಳು । ಪತಿಯಿರ್ದ ತೂಗುಮಂಚವನು ॥
ರತಿ ಪತಿಯಂತೆಯೋರೋರ್ವರು ನೋಡುತ । ಮತಿವಂತರಂಬುಜನೇತ್ರೆ ॥ ೨೫ ॥

ಆ ಸಮಯದಿ ಶಚಿ ತೊಲಗಲು ದಾದೇರು । ಸಾಸಿರ್ವರು ಪೋದರಿತ್ತ ॥
ಈ ಸತಿಪತಿಗಳು ರತಿಸುಖದೊಳಗತಿ । ಲೇಸ ತೋರುತ ಕೂಡಿದರು ॥ ೨೬ ॥

ರತಿಸುಖಸಾಗರದೊಳಗಾಗಿ ಬಳಲಿಯಾ । ಸತಿಪತಿಗಳು ಮೈಮರೆದು ॥
ಅತಿನಿದ್ರೆಯೊಳಗಿರಲರೆದುದು ನಿಶಿ ಮೂಡ । ಶತಪತ್ರಸಖನುದಯದೊಳು ॥ ೨೭ ॥

ಶ್ರಾವಣಬಹುಳ ಬಿದಿಗೆ ರಾತ್ರಿ ನಾಲ್ಕನೆ । ಜಾವ ಶ್ರಾವಣತಾರೆಯೊಳು ॥
ದೇವರ ದೇವಿಯು ಸೋಮದೇವಿಯು ಗರ್ಭ । ಕಾವಿರಿಸಿದ ಸುರನಾಗ ॥ ೨೮ ॥

ಕಂಡಳು ಸೋಮಮಹಾದೇವಿ ಸ್ವಪ್ನವ । ಕಂಡುಪ್ಪವಡಿಸಿ ಬೇಗದೊಳು ॥
ತೊಂಡೆವಾಯ್ದೆರೆಮುಖದೊಳೆದಾ ಪತಿಯನು । ಕಂಡು ಕುಳಿತಳರ್ಧಾಸನದಿ ॥ ೨೯ ॥

ಎನ್ನಯ ಜೀವಿತೇಶ್ವರ ಕೇಳ್ಮನೋಹರ । ಮನ್ನು ತೋರುವ ಯಾಮದೊಳು ॥
ನಿನ್ನಾಣೆ ಕಂಡೆ ಷೋಡಶಸ್ವಪ್ನಂಗಳ । ಚೆನ್ನಾಗಿ ನಿರವಿಸೆಂದೆನುತ ॥ ೩೦ ॥

ತರಣಿ ಚಂದ್ರಮ ಕರಿ ಹರಿ ರತ್ನ ಮಂದರ । ಗಿರಿ ಕುಲಿಶೋಜ್ರ[1] ದರ್ಪಣದ ॥
ಸುರಪುಷ್ಪಫಲ ಸುರಧೇನು ಚಿಂತಾಮಣಿ । ಪುರುಷವು ಕಡೆಯಾಗಿ ಕಂಡೆ ॥ ೩೧ ॥

ಎನಲು ತರಣಿಯ ಕಿರಣ ಚಂದ್ರನ ಶಾಂತಿ । ಯನು ಕರ್ಮ ಕರಿಗಿರಿಸಿಂಹ ॥
ಸಿರಿ ರತ್ನ ಮಂದರ ಧೈರ್ಯಗಿರಿಗೆ ವಜ್ರ । ಧರೆಗೆ ದರ್ಪಣ ನಿರ್ಮಲಾಂಗ ॥ ೩೨ ॥

ಸುರಪೂಜಿತ ಪುಷ್ಪವಾಸನ ಸುಫಲವು । ಸುರಧೇನ ಗರೆವ ಧರೆಯೊಳು ॥
ವರವೀರಚಿಂತಾಮಣಿ ಕಥೆಯಾಣೆಯು । ಪುರುಷ ಮುಕ್ತಿಯನೈದುವನು ॥ ೩೩ ॥

ಜಿನಮಾತೆ ಕಂಡ ಷೋಡಶಸ್ವಪ್ನಂಗಳ । ಮನವೊಲ್ದು ಕೇಳಿ ಸುಮಿತ್ರ ॥
ವನಿತೆಗದರ ಫಲವನು ಪೇಳಿ ಸರಸಿಜ । ವನು ಕಂಡ ಷಟ್ಪದದಂತೆ ॥ ೩೪ ॥

ವನಿತೆಯ ಗರ್ಭದಿ ಪ್ರಣತೇಂದ್ರಮಚರ । ಜನಿಸುವನೆಂದು ರಾಜೇಂದ್ರ ॥
ವನಧಿಯು ಕಂಡ ಚಂದ್ರಮನಂತೆ ನಲಿವುತ । ಜಿನಮಾತೆಗಿಂತು ಪೇಳಿದನು ॥ ೩೫ ॥

ಇಂತು ಗುಣಾಂಬುಧಿಚಂದ್ರ ನಿನ್ನಯ ಗರ್ಭ । ಕಂತರಿಸದೆ ಸುರ ಬಂದು ॥
ನಿಂತು ಬೆಳೆದು ಮುಕ್ತಿಯನೈದುವನೆನೆ । ತಾಂ ತಳೆದಳು ಸಂತಸವ ॥ ೩೬ ॥

ಈ ರೀತಿ ಸಂತಸದೊಳಗಿರೆ ಸತಿಪತಿ । ಯಾರಾತ್ರೆ ಪ್ರಣತೇಂದ್ರಮನು ॥
ನಾರಿಯ ಗರ್ಭಶೋಧನೆಯೊಳಗುದಿಸಿದ । ನಾರೀಮಣಿಯೆ ಲಾಲಿಪುದು ॥ ೩೭ ॥

ಸುರಸತಿಯರ ವೋಲಗದೊಳು ನವಮಾಸ । ನೆರೆದು ಶುಭಮುಹೂರ್ತದೊಳು ॥
ತರಳನುದಿಸೆ ಪಂಚಾಶ್ಚರ್ಯ ವೊಳಗಲು । ಸುರರುಘೋ ಜಯಜಯಯೆಂದು ॥ ೩೮ ॥

---

[1] ಕುಲಿಶ ವಜ್ರ—ಸಂಧಿ ಕೆಟ್ಟಿದೆ

ವರಚೈತ್ರ ಬಹುಳ ಪಂಚಮಿ ಶ್ರಾವಣ ತಾರೆ । ತರಣಿಯುದಯಕಾಲದೊಳು ॥
ಶರಧಿ ಸ್ವರ್ಣಾಚಲವನು ಪಡೆದಂದದಿ । ತರಳ ಶ್ರೀಜಿನನನುದಿಸಿದನು ॥ ೩೯ ॥

ಬಂದು ಸುರೇಂದ್ರ ತನ್ನವರೊಡಗೂಡಿಯು । ನಿಂದು ಶ್ರೀಜಿನಶಿಶುನೋಡಿ ॥
ತಂದು ನೊಸಲಿಗೆ ಕರವ ಸೋಮದೇವಿಗೆ । ತಂದು ಮಾಯಾನಿದ್ರೆಯನು ॥ ೪೦ ॥

ಸುರರಾಜನ ಸತಿ ಜಿನಶಿಶುವನ್ನೆತ್ತಿ । ಕರಿಯೇರಿ ದಂಪತಿಗೂಡಿ ॥
ಸುರರು ಪೊಗಳೆ ನಡೆದರು ಮಂದರಕಾಗಿ । ವರಪಾಂಡುಕ ಶಿಲಾತಳದಿ ॥ ೪೧ ॥

ನವರತ್ನ ಖಚಿತದ ಪೀಠದೊಳಿರಿಸಿಯಾ । ತರಳ[1] ಶ್ರೀ ಜಿನಶಿಶುವಿಂಗೆ ॥
ದಿವಿಜ ತಾಳಿದ ಸಾವಿರದೆಂಟು ಹಸ್ತದಿ । ಪವಿಯು ಕಲಶಗಳ ಪಿಡಿದು ॥ ೪೨ ॥

ಇಂಗಡಲಮೃತಾಂಬುವ ತೀವಿ ಸುರಮಿಥು । ನಂಗಳು ಕೊಡಲು ಸುರೇಂದ್ರ ॥
ಕಂಗಳ ಪುಣ್ಯವೆನುತಲಭಿಷವಣವ । ಮಂಗಳದೊಳು ಮಾಡಿದರು ॥ ೪೩ ॥

ಪಾಡುವರ್ ಕೆಲರು ಕೊಂಡಾಡುವರ್ ಕೆಲರು ಮಾ । ತಾಡಿ ಪೊಗಳುವರು ಕೆಲರು ॥
ಕೂಡಿ ಕುಣಿವರು ಕೆಲರು ಸುರಸಭೆಯೊಳು । ನೋಡಲಚ್ಚರಿ ಮೃಗನಯನೆ ॥ ೪೪ ॥

ಇಂತಭಿಷೇಕವ ಮಾಡಿ ಶ್ರೀಜಿನರನು । ಸಂತೋಷದೊಳು ಶಚಿಯೆತ್ತಿ ॥
ಅಂತರಿಸದೆ ಗಜವೇರಿ ನಡೆದು ಬಂದು । ನಿಂತರು ಕಲಶಪುರಿಯೊಳು[2] ॥ ೪೫ ॥

ಜಿನಮಾತಾಪಿತರನು ಪೂಜಿಸುತತಿ । ಯನಿಮಿಷಪತಿ ಜಿನಶಿಶುಗೆ ॥
ಮುನಿಸುವ್ರತರೆಂದು ಪೆಸರಿಟ್ಟು ಪೋದನು । ವನಿತೆ ಶಚಿಯು ಸಾಕುತಿರಲು ॥ ೪೬ ॥

ತೊಟ್ಟಿಲ ತುಂಬಿಸಿ ಬಾಲದುಡಿಗೆಯ । ನ್ನಿಟ್ಟು ಜನರು ನಲಿನಲಿದು ॥
ಕಟ್ಟಾಣಿ ಮುತ್ತಿನಂದದೊಳು ಬೆಳದು ತನ್ನ । ಪಟ್ಟಣದೊಳಗಾಡುತಿರಲು ॥ ೪೭ ॥

ಕಾಲಕಾಲದೊಳು ಬಾಲರೊಳಾಡಿ ಬೆಳೆದನು । ಬಾಲಚಂದಿರನಂದದೊಳು ॥
ತಾಳಿ ಸಕಲ ಕಲೆಗಳ ಮುನಿಸುವ್ರತ । ಬಾಲಕನೊಪ್ಪಿದನಲ್ಲಿ ॥ ೪೮ ॥

ವರಮಿಪ್ಪತ್ತುತ್ಸೇಧ ಬಿಲ್ಲುಡಿಯನು । ಹರಿನೀಲವರ್ಣದಂಗದನು ॥
ದುರಿತ ವಿದೂರನು ತ್ರಿಂಶತ್‌ಸಹಸ್ರಾರು । ಪರಮಾಯುಷ್ಯನುಮಾಗಿ ॥ ೪೯ ॥

ಇರಲೆಣ್ಸಾಸಿರದೈನೂರು ವರುಷ ಕು। ವರ ಕಾಲ ಕಳೆದು ರಾಜ್ಯದೊಳು ॥
ಸ್ಥಿರ ನಿಂದು ಹದಿನೈದು ಸಾಸಿರ ವರುಷಾಂ । ತರ ಪೋಗಲೊಂದು ದಿವಸದಿ ॥ ೫೦ ॥

ಓಲಗಮಿರ್ದು ಕಾಣಿಕೆಗಳ ಕೈಕೊಂಡು । ಪಾಲಿಸಿ ಮೂರು ಲೋಕವನು ॥
ಕಾಲಿಗೆಯೆರಗಿಸಿಕೊಂಡು ಸುಖದಿ ರಾಜ್ಯ । ವಾಳುತಮಿರಲುತ್ಸಹದಿ ॥ ೫೧ ॥

---

[1] ಪ್ರಾಸ ಕೆಟ್ಟಿದೆ　　[2] ಕುಶಲಪುರಿಯೊಳು

ಮೂರು ಕಾಲದೊಳು ಸುರೇಂದ್ರನು ಪೂಜಿಸಿ । ಚಾರು ಚರಣಕೆರಗುವನು ॥
ಧಾರುಣಿನೃಪರು ನೊಸಲೊಳು ಕರವನಿಟ್ಟು । ನಾರಧರ್ಮವ ಕೇಳುತಿಹರು ॥ ೫೨ ॥

ಇಂತು ಮೂಲೋಕವ ಪಾಲಿಸುವನಿತರೊ । ಳಂತರಿಸದೆ ಹೇಯಪುಷ್ಟಿ ॥
ಮುಂತಣ ಗತಿಯನು ಬಿಟ್ಟು ರಾಜ್ಯದಿ ಸಿಲ್ಕಿ । ಮಂತಣಗೊಳಬೇಕೆಂದು ॥ ೫೩ ॥

ಧರೆಯ ಭಾರವ ಪಾಲಿಸುಯೆಂದು ವಿಜಯನೆಂ । ಬರಸಗೆ ಪಟ್ಟವ ಕಟ್ಟಿ ॥
ತೆರಳುವೆನೆಂಬನಿತರೊಳು ಸುರಪನಾಗ । ಪರಿವಾರ ಸಹ ಬಂದನಬಲೆ ॥ ೫೪ ॥

ನರಪತಿಗಳು ಸುರಪತಿಗಳುರಗಪತಿ । ನೆರೆದುದಾ ಪುರದ ಮಧ್ಯದೊಳು ॥
ಮೊರೆವ ನಾನಾವಾದ್ಯ ರಭಸದಿಂದರುಹನ । ಚರಣವ ಪೂಜಿಸಿ ಬಳಿಕ ॥ ೫೫ ॥

ನವರತ್ನ ಖಚಿತದ ಸಿಬಿಕೆಯನೇರಿಸಿ । ದಿವಿಜರು ಪೆಗಲೊಳು ಪೊತ್ತು ॥
ಸುವಿಧಾನದಿಂದ ಸಾಗುತಲಿರೆ ಜಯಜಯ । ರವಮುಣ್ಮುತಿಡೆವಿಡದಾಗ ॥ ೫೬ ॥

ಪೋಗೀ ವನದೊಳು ಬಿಸಿಕೆಯ[1] ನಿಳಿದು ಮ । ತ್ತಾಗ ಷಷ್ಠೋಪವಾಸದೊಳು ॥
ಭೋಗವನುಳಿದು ಮೂಲೋಕವಂದ್ಯನು ತಪೋ । ಭೋಗದೊಳಭಿಮುಖನಾದ ॥ ೫೭ ॥

ವೈಶಾಖಬಹುಳ ದಶಮಿಯಪರಾಹ್ಣದೊ । ಳಾ ಶ್ರಾವಣ ತಾರೆಯೊಳು ॥
ಸಾಸಿರ್ವರರಸುಗಳ್ವೆರಸು ಸಂಯಮವ । ನ್ನಾ ಸುಜ್ಞಾನಿ ಕೈಕೊಂಡು ॥ ೫೮ ॥

ನಿಲಲಾ ದೇವನ ಪೂಜಿಸಿ ಸುರಪತಿ । ತೊಲಗಲು ತನ್ನಯ ಪುರಿಗೆ ॥
ಕಲಿಲ ವಿಜಯ ಮುನಿಸುವ್ರತ ಯತಿಯಾಗ । ತೊಲಗಿದ ಪಾರಣೆಗೆಂದು ॥ ೫೯ ॥

ರಾಜಗೃಹವ ಪೊಗೆ ವೃಷಭಸೇನನು ಯತಿ । ರಾಜನ ನಿಲಿಸಿ ಭಿಕ್ಷೆಯನು ॥
ರಾಜನು ಕೊಡಲಕ್ಷಯವೆನೆ ಪುರರತ್ನ । ಭಾಜನದಂತೆ ಯಬ್ಜಾಕ್ಷಿ ॥ ೬೦ ॥

ತೋರಿತು ಪಂಚಾಶ್ಚರ್ಯವಾ ಕ್ಷಣದೊಳು । ಹಾರಿತು ಬಡತನ ಪುರಕೆ ॥
ಮಾರವಿಜಯ ಜಿನಪತಿ ತೆರಳಿದನತ್ತ । ತೋರುವರಣ್ಯಕಬ್ಜಾಕ್ಷಿ ॥ ೬೧ ॥

ಪನ್ನೊಂದು ತಿಂಗಳು ದದ್ಮಸ್ತಕಾಲ । ವಿನ್ನು ಪೋಗಲು ಮುನ್ನ ದೀಕ್ಷೆ ॥
ಯನ್ನು ತಳೆದು ವನದೊಳು ಚಂಪಕವೃಕ್ಷ । ವನ್ನು ಸಾರಿದನಾ ಮುನಿಯು ॥ ೬೨ ॥

ಆ ಮರದಡಿಯೊಳು ಷಷ್ಠೋಪವಾಸದಿ । ಸ್ವಾಮಿ ನಿಲಲು ಕಾರ್ಮುಗಿಲು ॥
ಕೋಮಲ ದೇಹದೊಳಗೆ ಥಳಥಳಿಸುವ । ಸ್ವಾಮಿ ವಿದ್ಯುಲ್ಲತೆಯಂತೆ ॥ ೬೩ ॥

ವೈಶಾಖ ಬಹಳ ದಶಮಿಯಪರಾಹ್ಣದೊ । ಳಾ ಶ್ರಾವಣ ತಾರೆಯೊಳು ॥
ಆ ಸುಜ್ಞಾನಿ ಮುನಿಗೆ ಕೇವಲ ಜ್ಞಾ । ನಾ ಸಮಯದಿ ಪುಟ್ಟಿದುದು ॥ ೬೪ ॥

---

[1] ಶಿಬಿಕೆ?

ಇದನಂದಮರೇಶ ಧನಪತಿಗುಸುರಲು । ಮೊದಗಿ ಬಂದಾಕ್ಷಣದೊಳಗೆ ॥
ಚದುರಿಂದ ಸಮವಸರಣವನು ರಚಿಸಿದ । ನದರ ಮಧ್ಯದಿ ಹೊಂದಾವರೆಯು ॥ ೬೫ ॥

ಸೋಂಕದೊಪ್ಪುತ್ತಿರ್ಪ ದೇವಾಧಿದೇವನ । ಕಿಂಕರನಾಗಿ ದೇವೇಂದ್ರ ॥
ಅಂಕಿತ ಸಾವಿರದೆಂಟು ನಾಮಂಗಳ । ಪಂಕಜಗಂಧಿ ಸ್ತುತಿಸಿದ ॥ ೬೬ ॥

ಪೊಳೆದಡಗಡ ಮಿಂಗೆ ಮಿಂಚಿನಂದದಿ ತಳ । ತಳಿಸುವ ದೇವನ ಕಂಡು ॥
ಇಳೆಯಾಣ್ಮ ಸುರ ನಾಗೇಂದ್ರರು ಪೂಜಿಪ । ರೆಲೆ ಚೇಳಿನಿ ಮಹಾದೇವಿ ॥ ೬೭ ॥

ಆ ಸಮವಶ್ರುತಿಯೋಗಕೊಪ್ಪುತ್ತಿರ್ಪ । ದೇಸಿಗ ಮಲ್ಲಿನಾಥಾದಿ ॥
ಭಾಸಿಪ ಪದಿನೇಣ್ಬರು ಗಣಧರರು ನಿ । ವಾಸಿಯಾಗಿಹರಬುಜಾಕ್ಷಿ ॥ ೬೮ ॥

ತೋರುವೈನೂರ್ವರು ಪೂರ್ವದವರು ಮತ್ತೆ । ತೋರುವಿಪ್ಪತ್ತಿರ್ಛಾಸಿರವು[1] ॥
ಸಾರಶಿಕ್ಷಕರು ಸಾವಿರದೆಂಟು ನೂರ್ವರು । ನಾರಿಯವಧಿ ಜ್ಞಾನಿಗಳು ॥ ೬೯ ॥

ಅನಿಬರು ಕೇವಲಿಗಳು ಮುಂಚಿ ನೋಡಿ ಮ । ತ್ತನಿಬರು ಶ್ರುತಕೇವಲಿಗಳು ॥
ಇನಿತುಯಿರ್ಛಾಸಿರದೈನೂರ್ವರಿರೆಯುನ । ಮನವೃದ್ಧಿ ಪ್ರಾಪ್ತರಲ್ಲಿಹರು ॥ ೭೦ ॥

ಸಾಸಿರದೈನೂರ್ವರು ಮನೋಜ್ಞಾನಿಗಳ್ । ಸಾಸಿರದೇಳ್ನೂರ್ವಾದಿಗಳು ॥
ಸಾಸಿರ ಸಂಖ್ಯಾತ ಯತಿಗಳಾಗೈವತ್ತು । ಸಾಸಿರ್ವರಬ್ಜಾಕ್ಷೆರಿಹರು ॥ ೭೧ ॥

ಶ್ರಾವಕರೊಂದು ಲಕ್ಷವು ಮೂರು ಲಕ್ಷವು । ಶ್ರಾವಕಿಯರುಮಸಂಖ್ಯಾತ ॥
ದೇವದೇವಿಯರುಮಸಂಖ್ಯಾತ ತಿರ್ಯ । ಗ್ಜೀವಗಳೊಪ್ಪುತಲಿಹರು ॥ ೭೨ ॥

ಸುರನರನಾಗಪೂಜಿತ ಸಮವಶ್ರುತಿಯೊಳ್ । ಚರಿಸುವ ಚೌಸೀತಿ ಲಕ್ಷ ॥
ಧರೆಯ ಜೀವನಗಳು ತಂತಮ್ಮ ವೈರವ । ಮರೆದು ಬೋಧನೆಯೊಳಗಿಹವು[2] ॥ ೭೩ ॥

ಇಂತೊಪ್ಪುತಿಹ ಸಮವಶ್ರುತಿ ಲೋಕಕ್ಕೆ । ಸಂತೋಷಾಮೃತಗರೆವ ॥
ಚಿಂತನೆಯಿಂದ ಸಾಗಿತು ಚಪ್ಪನ್ನ ದೇ । ಶಾಂತವನಾವರಿಸುತ್ತ ॥ ೭೪ ॥

ಧರೆಯೊಳು ಬೋಧಾಮೃತವನು ಕರೆಯುತ । ಧರೆಯ ಚರಾಚರಗಳಿಗೆ ॥
ಪರಮನ ಸಮವಶ್ರುತಿ ತೆರಳಿತು ಕೇ । ಳರವಿಂದ ಮುಖದ ಚೇಳಿನಿಯೆ ॥ ೭೫ ॥

ಈ ರೀತಿಯೊಳು ಬಂದಾಗಲಯೋಧ್ಯಾ । ವಾರಿಗಿ ತಡಿಯ ನಂದನಕೆ ॥
ಸಾರ ಪೊರಿಸಿ ಕಾಲವಲ್ಲದ ಕಾಲದಿ । ತೋರಿತು ಫಲಪುಷ್ಪವಾಗ ॥ ೭೬ ॥

ವನಪಾಲಕ ಕಂಡು ಬೇಗದಿ ಬಂದಾಗ । ವನು ಶ್ರೀರಾಮಲಕ್ಷ್ಮಣರ ॥
ವನಜ ಪದಕೆ ಮುಗ್ಗಿ ಪೊಟ್ಟಣ ಮುಂದಿಟ್ಟು । ದಿನೆಯಳಿ ಪೇಳ್ದನಿಂತೆಂದು ॥ ೭೭ ॥

---

[1] ಎಪ್ಪತ್ತಿರ್ಛ್ಯಾರವು (ಕ)  [2] ೨ ಪಾದಗಳು ಲುಪ್ತವಾಗಿವೆ ಅಥವಾ ಅಧಿಕವಾಗಿವೆ

ದೇವ ಚಿತ್ತೈಸು ನಮ್ಮಯ ನಂದನಕಾಗಿ । ದೇವನ ಸಮವಶ್ರುತಿಯ ॥
ಭಾವ ಬರಲು ಕಾತು ಪೂತುದುಮೆನೆಯಾ । ದೇವನ ದೆಸೆಗೇಳಡಿಯ ॥ ೭೮ ॥

ನಡೆದಂಗಚಿತ್ತವ ವನಪಾಲಕಗಿತ್ತು । ಹೊಡೆಸಿಯಾನಂದಭೇರಿಯನು ॥
ಅಡರೆ ಗಜವ ರಾಮ ಲಕ್ಷ್ಮಣ ಹನುಮಂತ । ನಡೆದನಾ ಸುಗ್ರೀವ ಸಹಿತ ॥ ೭೯ ॥

ಪರಿಜನ ಪುರಜನ ಹಿರಿಯರು ಕಿರಿಯರು । ವೆರಸಿ ನಡೆದು ಪುರವರವ ॥
ತೆರಳಿ ದೂರಾಂತರದೊಳು ಗಜವಿಳಿದಾಗ । ಚರಣಮಾರ್ಗದಿ ನಡೆದವರು ॥ ೮೦ ॥

ಏರಿದರಾಗ ಸಮವಶ್ರುತಿಗೊಳಪೊಕ್ಕು । ನೀರವಿಂದು ಮಡಿಯುಟ್ಟು ॥
ವಾರಿಜದಲರ ತಿರಿದು ತಂದು ದೇವನ । ಚಾರುಚರಣವನು ಕಂಡು ॥ ೮೧ ॥

ಜಲಗಂಧಾಕ್ಷತೆ ಚರುದೀಪಧೂಪ ಸ । ತ್ಫಲಮರ್ಘ್ಯ ಪುಷ್ಪಾಂಜಲಿಯ ॥
ನೆಲೆಗೊಳಿಸಿಯು ರಾಮಲಕ್ಷ್ಮಣ ಸುಗ್ರೀವ । ಕಲಿಯಣುವನು ಸಹ ನಿಂದು ॥ ೮೨ ॥

ನೊಸಲಿಗೆ ಕರವನು ತಂದು ದೇವನ ಮುಖ । ಬಿಸಜವ ನೋಡಿ ನಲಿವುತ ॥
ಪಸರಿಸಿದರು ಸ್ತುತಿ ಶತಸಹಸ್ರಗಳಿಂದ । ಮಸುರಿದರವರಿಂತೆಂದು ॥ ೮೩ ॥

ಭವರೋಗ ವೈದ್ಯನೆ ಭಾವಜವಿಜಯನೆ । ಭವಶರಧಿಯ ದಾಂಟದನೆ ॥
ರವಿಶಶಿಕೋಟಿ ತೇಜನೆ ಯೆನ್ನ ಸಂಸಾರ । ದವಗಡವನು ಬಿಡಿಸೆಂದ ॥ ೮೪ ॥

ರಕ್ತಿಯ ತೊರೆದನೆ ಭಕ್ತರ ಭಾಗ್ಯವಿ । ರಕ್ತಿವೆಣ್ಗಿದ್ದ ಮಹಿಮನೆ ॥
ರಕ್ತಿವೆಣ್ಣೊಳು ಸಿಲ್ಕಿ ನೊಂದೆನು ಶ್ರೀಜಿನ । ಭಕ್ತನ ಕಡೆ ಸೇರಿಸಭವ ॥ ೮೫ ॥

ಪನ್ನಗ ಸುರನರವಂದಿತಭವ ಭವ । ಬನ್ನಣೆಯೊಳು ಬಂದು ನೊಂದೆ ॥
ಎನ್ನ ನಿನ್ನಂತೆ ಮಾಡುವ ಸುಮತಿಯ ತೋರೊ । ರನ್ನವೆ ಮನ್ನಿಸೊ ಜಿನಪ ॥ ೮೬ ॥

ಅರಿಯದೆ ನಿನ್ನ ಮಹಿಮೆಯನು ಭವ ಭವ । ಶರಧಿಯೊಳಾಳಿ ನಾನೊಂದೆ ॥
ದುರಿತವ ಹಿಂಗಿಸಾ ನಿನ್ನಯ ಸಿರಿಪದ । ಕಿರಿಸುವೆ ಮಂಡೆಯನೆಂದು ॥ ೮೭ ॥

ಇವು ಮೊದಲಾದ ಹಲವು ಸ್ತುತಿಶತಗಳಿಂ । ದವೆ ಕೊಂಡಾಡಿಯಭವನ ॥
ಭುವನೇಶ ಬಲಗೊಂಡು ತೆರಳಿದ ಶ್ರುತಮಂಟ । ಪವ ಸಾರ್ದನತಿರಾಗದೊಳು ॥ ೮೮ ॥

ಎರಗಿ ಪೂಜಿಸಿ ಗಣಧರರಡಿಗಳ ಬೇಗ । ಹರಕೆಯನಾಂತು ಕುಳಿತರು ॥
ಪರಮ ಧರ್ಮಾಮೃತವನು ಕೇಳಿ ತಂತಮ್ಮ । ಸಿರಿಯಿರವನು ಕೇಳ್ದರಾಗ ॥ ೮೯ ॥

ಕರವ ಮುಗಿದು ಶ್ರೀರಾಮಚಂದ್ರಮನಿಂ । ತೊರೆದನು ಗಣಧರರೊಡನೆ ॥
ಸಿರಿಧರೆಯಾಳ್ವುದು ಸ್ಥಿರಮಸ್ಥಿರಮೊಯೆಂದು । ನಿರವಿಸೆನಲು ಪೇಳ್ದರಿಂತು ॥ ೯೦ ॥

ಎಲೆ ರಾಮಚಂದ್ರಮ ಮುನಿಸುವ್ರತ ಕಾಲ । ಬಲನಾರಾಯಣರುವೀ ಧರೆಯ ॥
ಲಲನೆಯಾಣ್ಮರು ನೀವು ಕಲಿಗಳು ಲೋಕಕ್ಕೆ । ಬಲಿಗಳು[1] ನಿಲುಕಡೆಯೊಳು ॥ ೯೧ ॥

[1] ದಲಿಗಳು (ಕ).

ರಾಮಸುಗ್ರೀವಣುಮನು ವಿಭೀಷಣನಿಗೆ । ತಾಮಸವಿಲ್ಲದೆ ಮುಕ್ತಿ ॥
ಆ ಮಹಿಮೆಯ ಪಡೆವರು ಲಕ್ಷ್ಮಣ ನರ । ಕಾವನಿಯೊಳು ಪುಟ್ಟುವನು ॥ ೯೨ ॥

ಎನಲಾ ದೇವನ ಬೀಳ್ಕೊಂಡು ಪುರದರ । ಮನೆಯನು ಪೊಕ್ಕು ಸುಖದೊಳು ॥
ಅನುಭವಿಸುತ್ತಿರಲಿತ್ತ ಸಮವಶ್ರುತಿ । ವನವನು ಬಿಟ್ಟು ಸಾಗಿದುದು ॥ ೯೩ ॥

ಈ ರೀತಿ ಧರೆಯೊಳು ಧರ್ಮಾಮೃತವನು । ಧಾರುಣಿ ಸುಜನರಿಗೆರೆದು ॥
ತೋರಿತು ಧರೆಯಾಕಾಶ ದಿಕ್ತಟ ತುಂಬಿ । ಮೀರಿತು ದಿವ್ಯಧ್ವನಿಯು ॥ ೯೪ ॥

ಏಳುಸಾಸಿರದ ನಾನೂರು ತೊಂಬತ್ತೊಂಬ । ತ್ತೇಳಿ ವರುಷವೊಂದು ಮಾಸ ॥
ಧಾರುಣಿಯೊಳು ವಿಹರಿಸಿಕೊಂಡು ಸಮ್ಮೇದ । ಚಾರುಗಿರಿಯೊಳೊಂದು ಮಾಸ ॥ ೯೫ ॥

ನಿಂದು ಸಮವಸರಣವನುಳಿದಾಕ್ಷಣ । ನಿಂದ ಗಿರಿಯ ಮಸ್ತಕದೊಳು ॥
ಒಂದಾಗಿ ಬಂದ ಸಹಸ್ರಮುನೀಶ್ವರ । ವೃಂದಸಹಿತ ಯೋಗದೊಳು ॥ ೯೬ ॥

ಪ್ರತಿಮಾಯೋಗದಿ ಘಾತಿಯ ಘಾತಿಯ । ಹತಿಸಿ ಚಿಜ್ಜ್ಯೋತಿಯ ನಿಲಿಸಿ ॥
ಮಥಿಸುವ ದೇಹ ಕರ್ಪೂರಕಿಟ್ಟುರಿಯಂತೆ । ಹತಿಸಿ ಪೋದುದುಮಂಬುಜಾಕ್ಷಿ ॥ ೯೭ ॥

ವರಫಾಲ್ಗುಣ ಕೃಷ್ಣಪಕ್ಷ ದ್ವಾದಶಿ ಪ । ಶ್ಚಿಮರಾತ್ರೆ ಶ್ರವಣತಾರೆಯೊಳು ॥
ನೆರೆದನು ಮುಕ್ತಿವೆಣ್ಣೊಳು ಮುನಿಸುವ್ರತ । ಗುರು ಗುರುಕುಚದ ಕಂಜಾಕ್ಷಿ ॥ ೯೮ ॥

ಗೀರ್ವಾಣರಾಜ ಪನ್ನಗರಾಜರುಗೂಡಿ । ಗೀರ್ವಾಣಪೂಜೆಯ ಮಾಡಿ ॥
ಶಾರ್ವರಿಯೊಳು ಭಸ್ಮವ ಕೂಡಿಯಾನಂದ । ಪರ್ವಿತು ಸರ್ವರಿಗಾಗ ॥ ೯೯ ॥

ಕನಕನಿರ್ಮಿತ ನವರತ್ನಖಚಿತದೊಳು । ಧನಪತಿ ಬಸದಿಯ ರಚಿಸಿ ॥
ಮುನಿಸುವ್ರತಜಿನರನು ಪ್ರತಿಕೃತಿಯೊಳ । ಗನುಗೊಳಿಸಿದರಬ್ಜನೇತ್ರೆ ॥ ೧೦೦ ॥

ನಿರ್ವಾಣಕಲ್ಯಾಣಪೂಜೆಯನೆಸಗಿ ಸು । ಪರ್ವಲೋಕಕೆ ಪೋದರವರು ॥
ಉರ್ವೀಶರು ತಂತಮ್ಮ ಪುರವನೈದಿ । ನಿರ್ವಾಣವಿಭವದೊಳಿಹರು ॥ ೧೦೧ ॥

ಕವಿಜನ ಕಮಲಭಾಸ್ಕರ ಕುವಲಯನೇತ್ರ । ಯುವತೀರ ಮನೋಹರ ಗಾತ್ರ ॥
ದಿವಿಜವಂದಿತ ಶ್ರೀರಾಮನೊಪ್ಪಿದನಲ್ಲಿ । ಯುವತಿಮಣಿಯೆ ಲಾಲಿಪುದು ॥ ೧೦೨ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೧೦೩ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ।
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಂ ಪಡೆದತಿ ಜಸವೆತ್ತುದು[1] ವಿಂಶತಿ ಸಂಧಿ ॥

---

[1] ಯಿಪ್ಪತ್ತನೆಯ ಮಿಸುಪಸಂಧಿ (ಕ).

# ಅನುಬಂಧ ೪

## (ರಾಮಸ್ವಾಮಿ ಮುಕ್ತಿಗೆ ಸಂದದ್ದು)

## ಇಪ್ಪತ್ತೊಂದನೆಯ ಸಂಧಿ

ಪರಮ ಪರಂಜ್ಯೋತಿ ಪುರುಷಕೃತಿಯ ಮೂರ್ತಿ । ದುರಿತಾರಣ್ಯಕುಠಾರ ॥
ಕರುಣಿಸೊ ಮುನಿಸುವ್ರತ ಜಿನಪತಿ ಬೇಗ । ಸಿರಿ ಸುಖಸಂಪದಗಳನು ॥ ೧ ॥

ತುಂಬುವೆರೆಯ ಮೊಗದಂಬುಜನೇತ್ರಿಯೆ । ಬಿಂಬಾಧರೆ ಕಂಬುಕಂಠಿ ॥
ಕುಂಭ ಕುಚೆಯೆ ಕುಂಭಿಯಾನೆ ಶ್ರೀರಾಮನ । ಸಂಭ್ರಮವನು ಕೇಳೊಲಿದು ॥ ೨ ॥

ಗಂಡುರೂಪಿಸೊಳೊಪ್ಪುವ ಶಾರದೆ ನೀನು । ಪಂಡವಾಸಕೆ ಸ್ಮರರಾಜ ॥
ಚಂಡವಿಕ್ರಮಿ ಭೂಮಂಡಲಧವರಿಗು । ದ್ದಂಡ ಪೇಳೊಲಿದೀ ಕಥೆಯ ॥ ೩ ॥

ಜಿನಭಕ್ತೆ ಜೀವದಯಾಪರೆ ಮುನಿಪದ । ವಿನತೆಯೆನ್ನಯ ಭವಭವದ ॥
ವನಧಿಯ ದಾಂಟಿಪ ಚೈತ್ರೆ ಶ್ರೀರಾಮನ । ಘನಕೃತಿಯನು ಕೇಳೊಲಿದು ॥ ೪ ॥

ಅರಿರಾಯ ಮಸ್ತಕಶೂಲನೆ ಜಿನಭಕ್ತ । ಕರುಣಾರ್ಣವ ಪೂರ್ಣಚಂದ್ರ ॥
ಶರಧಿಗಂಭೀರನೆ ಶ್ರೀರಾಮಚಂದ್ರನ । ಚರಿತೆಯ ಪೇಳು ಪೇಳೆನಗೆ ॥ ೫ ॥

ಜಿನವಾರಾಯಣೆ ಕವಿಜನ ರಕ್ಷಣೆ । ವಿನಯನಿಧಾನಿ ಸುಜ್ಞಾನಿ ॥
ಮುನಿಪದವಂದಿತೆ ಶ್ರೀರಾಮಚರಿತವ । ಮನವೊಲಿದಿದ ಕೇಳೆನಲು ॥ ೬ ॥

ಪುರುಷರತ್ನವೆ ಪುರುಷಾರ್ಥಿಯೆ ಕವಿಜನ । ಕರೆದು ಕೊಡುವ ಕಾಮಧೇನು ॥
ಸ್ಮರರೂಪ ಅರಿಭೂಪ ಮುರತಾಪ ಕುಲದೀಪ । ನಿರವಿಸು ಮುಂದಣ ಕಥೆಯ ॥ ೭ ॥

ಸರಿದೊರೆ ನೀನು ನನಗೆ ಬೇರುಬೇರಲ್ಲ । ಯರವಲ್ಲ ಜನಬಲ್ಲ ನಲ್ಲಾ ॥
ಗರಿಗಟ್ಟಿಸಿದೆ ಮನವೆಲ್ಲವ ಕುಮುದಾಕ್ಷಿ । ಯೊರವೆ ಲಾಲಿಸು ಲಾಲಿಸೊಲಿದು ॥ ೮ ॥

ದುಷ್ಟಮರ್ದನ ಶಿಷ್ಟಪ್ರತಿಪಾಲಕರೆಂಬ । ಕಷ್ಟವ ಮರೆದು ಸರ್ವರೊಳು ॥
ಇಷ್ಟಾರ್ಥವನೀವ ಪುರುಷಚಿಂತಾಮಣಿ । ಕೊಟ್ಟು ನೀ ಪೇಳು ಮುಂಗಥೆಯ ॥ ೯ ॥

ಮುಂದಣ ಕಥೆ ಶ್ರೀರಾಮಚಂದ್ರಮ ನಾಗ । ಬಂದು ಸಮವಶ್ರುತಿಯಿಂದ ॥
ನಿಂದು ತನ್ನಯ ರಾಜ್ಯವನಾಳುತಿರಲೊಂದಾ । ನೊಂದು ಪ್ರಸಂಗಾಯತದೊಳು ॥ ೧೦ ॥

ಬರಲು ಚಾರಣರು ಕಂಡೊನವಾಲಕ[1] ಬಂ । ದರುಪಲು ದಶರಥ ಪೋಗಿ ॥
ಚರಣವ ಪೂಜಿಸಿ ಧರ್ಮಾಧರ್ಮವ । ಹರುಷದಿ ಕೇಳಿ ಬೇಗದೊಳು ॥ ೧೧ ॥

---

[1] ಕಂಡು ವನವಾಲಕ—ಸಂದಿದೋಷ ಪರಿಹಾರ

ಚಕ್ರಿಯು ಕರೆದು ಭೂಚಕ್ರವನೊಪ್ಪಿಸಿ । ಚಕ್ರವಂದ್ಯನ ಪಾದಕೆರಗಿ ॥
ರಕ್ತಿಯು ತೊರೆದು ವಿರಕ್ತನಾದನು ತಪೋ । ಶಕ್ತಚಿತ್ತದಿ ದಶರಥನು ॥ ೧೨ ॥

ದಶರಥ ಮುನಿಯೊಡನಾಗ ದೀಕ್ಷೆಯ ಕೊಂಡ । ರೋಪತಿಗಳು[2] ಬಹುಜನರು ॥
ಶಶಿಮುಖಿಯರು ಕಂತಿಕೆಯರೊಳು ದೀಕ್ಷೆಯ । ಹಸನಾಗಿ ಧರಿಸಿದರಾಗ ॥ ೧೩ ॥

ಈ ಮುನಿಗಳು ಮತ್ತುಗ್ರೋಗ್ರ ತಪದೊಳು । ಕಾಮಿಸಿ ಸ್ವರ್ಗಪದವಿಯ ॥
ತಾಮಸವಿಲ್ಲದೆ ಪಡೆದ ದೇಹವ ಬಿಟ್ಟು । ಯೀ ಮಹಿಯೊಳು ಜಸವಾಂತು ॥ ೧೪ ॥

ಇರಲಿತ್ತ ಶ್ರೀರಾಮ ಲಕ್ಷ್ಮಣರಾದಿಯು । ಪರಮಸಖರು ಕೂಡಿ ತಮ್ಮ ॥
ಪುರದೊಳು ಸುಖವಿರ್ದು ಮತ್ತೊಂದು ದಿನದೊಳು । ಕರಸಿ ಹೇಳಿದರಿಂತೆಂದು ॥ ೧೫ ॥

ಭರತ ಶತ್ರುಘ್ನರಿರ್ವರ ಸಾಕೇತದೊ । ಳಿರಿಸಿ ವಿಭೀಷಣನೃಪಗೆ ॥
ಸ್ಥಿರವಿತ್ತು ಲಂಕೆಯ ಸುಗ್ರೀವ ನೃಪನಿಗೆ । ಕರೆದಿತ್ತ ಮೊದಲ ಪಟ್ಟಣವ ॥ ೧೬ ॥

ಕಡಮೆ ನೃಪಾಲರ್ಗೆ ತಕ್ಕಟ್ಟು ರಾಜ್ಯವ । ನಡೆಸಿಕೊಡುತ ಲಕ್ಷ್ಮಣನ ॥
ಒಡನೆ ಶ್ರೀರಾಮ ತಾ ಪಾರಣಾಸಿಯನಾಳ್ದ । ಪಡಿಯಾರು ಲೋಕದ ನೃಪರು ॥ ೧೭ ॥

ವಿಜಯರಾಮನು ಪೃಥ್ವೀಚಂದ್ರಾದಿ ಬಹುವಿಧ । ನಿಜಪುತ್ರ ಪೌತ್ರಾದಿಯೊಳು ॥
ಭಜಕನು ಹನುಮಂತ ಸಹ ರಾಮಚಂದ್ರನು । ನಿಜರಾಜ್ಯದೊಳಿರುತಿರಲು ॥ ೧೮ ॥

ಮನೋಹರವೆಂಬ ಉದ್ಯಾನಕೆ ಶಿವಗುಪ್ತ । ಮುನಿ ಕೇವಲಿಗಳು ಬಂದಿರಲು ॥
ವನಪಾಲಕನಿಂದರಿದಲ್ಲಿಗೆ ಪೋಗಿ । ಮುನಿಗೆ ವಂದಿಸಿ ಕುಳ್ಳಿರ್ದು ॥ ೧೯ ॥

ಕೇಳಿ ಧರ್ಮಾಧರ್ಮದಿರವನು ಶ್ರೀರಾಮ । ತಾಳಿ ಶ್ರಾವಕಧರ್ಮವನು ॥
ಪಾಲಿಸಿ ಸಮ್ಯಕ್ತ್ವ ಚೂಡಾಮಣಿಯೆಂಬ । ಮೂಲೋಕ ಬಿರುದ ತಾಳಿದನು ॥ ೨೦ ॥

ಅನಿತರೊಳಗೆ ಲಕ್ಷ್ಮಣ ಬಾ ಶಕ್ತಮೋ । ಹನಿಯೊದಯದೊಳು ನೆಗಳಿ ॥
ಮನದಿ ನಿಧಾನ ಶಲ್ಯದಿ ಸಮುಪಲಬ್ಧಿ । ಯನು ತಾಳಿ ಪೂರ್ವಕೃತದೊಳು ॥ ೨೧ ॥

ಕೇವಲಿಗಳುವಿಂದ ನರಿದಿರೆ ಬೀಳ್ಕೊಂಡು । ತಾವೀರ್ವರು ಪುರಕ್ಕೈದಿ ॥
ರಾವಣಾದಿಯು ಕೂಡಿ ರಾಮಚಂದಿರ ರಾಜ್ಯ । ಭಾವೆಯೊಳಗೆ ಕೂಡಿಹರು ॥ ೨೨ ॥

ಒಂದಾನೊಂದು ದಿವಸ ನಾಗವಾಹಿನಿ । ಯೆಂದೆಂಬ ಶಯನದಿ ಕಂಡ ॥
ನಂದು ದುಃಸ್ವಪ್ನತ್ರಯವ ಲಕ್ಷ್ಮಣ ರಾಮ । ಗಂದು ಪೇಳಿದ ಪೇಳಲೊಡನೆ ॥ ೨೩ ॥

ಕರಸಿದ ನೈಮಿತ್ಯಕನೊಳು ಪೇಳಲು । ವಿರಚಿಸಿದನು ತತ್ಫಲವ ॥
ಕರಿಯಾಲಕೀಳ್ಪುದರಿಂ ಪೃಥ್ವಿ ಪೀಡೆಯು । ನೆರೆವುದು ಲಕ್ಷ್ಮಣಗಾಗ ॥ ೨೪ ॥

---

[2] ಪಾದ ಮತ್ತು ಅರ್ಥ ಕೆಟ್ಟಿದೆ.

ಮತ್ತಾ ರಾಹುಗ್ರಸ್ತವ ಕಂಡುದರಿಂದ । ಮತ್ತೆ ಭೋಗಾವಸಾನದೊಳು ॥
ತತ್ತರುಣಾಸ್ತಮಾನವ ಕಂಡುದರಿಂದ । ಉತ್ತಮ ಲಕ್ಷಣಗಳಿವು ॥ ೨೫ ॥

ಶ್ವೇತಾತಪತ್ರಭಂಗವ ಕಂಡುದರಿಂದ । ಸೀತಾಪತಿ ದೀಕ್ಷೆಯನು ॥
ತಾ ತಳೆವನು ಯೆನಲವನ ಬಿಳ್ಕೊಟ್ಟಾಗ । ಭೂತಳದೊಳಗುಳ್ಳ ದ್ವಿಜರ ॥ ೨೬ ॥

ಕರಸಿ ಮುಖ್ಯರೊಳು ಸ್ವಾಮಿಯ ದಿವ್ಯಧ್ವನಿಯೊಳು । ಮೊರೆದುದು ಪುರೊಹಿತ ಪೇಳ್ದ ॥
ದುರಿತಫಲವು ಪರಿಹರವಾಗುವಂತೆನ್ನ । ಲೊರೆದ ಲಕ್ಷ್ಮಣನವರೊಡನೆ ॥ ೨೭ ॥

ಷೋಡಶ ಮಹಾದಾನಗಳನು ಮಾಡಿಸಿ । ಬೇಡಿದಷ್ಟು ವಿತ್ತವನು ॥
ಮೂಢತನದಿ ಕೊಟ್ಟು ನಾಡ ದಣಿಸುತಿರಲ್ । ಕೂಡಿತು ಕರ್ಮೋದಯದಿ ॥ ೨೮ ॥

ನವೆದು ರೋಗದೊಳು ಕೆಲವು ದಿನವಿರ್ದು ಮ । ತ್ತವ ಮಾಘದವಮಾಸೆಯೊಳು[1] ॥
ಕವಿವಾರದೊಳು ಲಕ್ಷ್ಮಣ ಸತ್ತು ನಾಲ್ಕನೆ । ಯವಿ ಪಂಕಪ್ರಭೆಯೊಳು ಪುಟ್ಟಿ ॥ ೨೯ ॥

ಧರೆಯರಿಕೆಯೊಳು ನಾರಕದೊಳು ಪುಟ್ಟಿ ಮ । ತ್ತರಿದು ಶ್ರೀರಾಮಚಂದ್ರಮನು ॥
ತರಿಸಿಯವನ ಶವವನು ಸಂಸ್ಕಾರಿಸಿ । ಯಿರುತ್ತಿರ್ದ ರಾಜ್ಯಭಾರದೊಳು ॥ ೩೦ ॥

ಮೂರು ಖಂಡವನೇಕಚ್ಛತ್ರದಿಂದಾಳುವ । ವೀರ ಲಕ್ಷ್ಮಣ ಸತ್ತ ಬಳಿಕ ॥
ದಾರುಣಿ ಯೊಳಗಿರಬಾರದೆನುತಲಾಗ । ನಾರೇರು ಪಲುಬುತವಿರಲು ॥ ೩೧ ॥

ಆವರ ಸಂತೈಸಿ ಲಕ್ಷ್ಮಣ ಪೃಥ್ವೀಸುಂದರಿ । ಗವತರಿಸಿದ ಪೃಥ್ವೀಚಂದ್ರ ॥
ಗವನಿಭಾರವ ಕೊಟ್ಟು ರಾಜ್ಯಾಭಿಷೇಕವ । ದಿವಿಜ ವಿಭವದೊಳಗೆಸಗಿ ॥ ೩೨ ॥

ಅವರ ಬೀಳ್ಕೊಂಡು ತನ್ನಯ ಪುರಕ್ಕೈದಿ ಮ । ತ್ತವಗೆ ಸೀತೆಗೆ ಪುಟ್ಟಿದವರು ॥
ಕುವರರೆಣ್ಬರೊಳರುವರು ರಾಜ್ಯಭಾರಾ । ಯುವತಿಯ ನಾವೊಲ್ಲೆವೆನಲು ॥ ೩೩ ॥

ಅಜಿತಂಜಯನೆಂಬ ಕಿರಿಯ ಕುಮಾರಗೆ । ನಿಜ ರಾಜ್ಯಪಟ್ಟವ ಕಟ್ಟಿ ॥
ಸುಜನ ಜನಾನಂದ ಶ್ರೀರಾಮಚಂದ್ರಮ । ತ್ಯಜಿಸಿ ಸಂಸಾರಭೋಗವನು ॥ ೩೪ ॥

ಮಿಥಿಲಾಪುರದೊಳಗಿರಿಸಿ ಕುಮಾರನ । ಸತಿ ಸೀತೆ ಸಹ ಸಾಕೇತಕ್ಕೆ ॥
ಕ್ಷಿತಿಪತಿ ಶ್ರೀರಾಮ ಬಂದು ಸದ್ಭಾವನೆ । ಸತಿಯೊಳು ದಿನಗಳೆವುತಲಿ ॥ ೩೫ ॥

ದಾನಪೂಜಾ ಸೇವೋಪವಾಸಗಳನು । ತಾನೆಸಗುತ ತ್ರೈರತ್ನ ॥
ಧ್ಯಾನ ಪೂರ್ವಕದೊಳು ತೀರ್ಥವಂದನೆಯನು । ಮಾನವಪತಿ ಮಾಡುತಲಿ ॥ ೩೬ ॥

ಜಿನಪೂಜೆ ಮುನಿಗನ್ನ ಜಿನಶಾಸ್ತ್ರದೊಳು । ದಿನ ನಡೆವುತ ಕೆಲದಿವಸ ॥
ವನುಗಳೆವುತಲಿರಲೀ ವಾರ್ತೆಯು ದಿನ । ದಿನಕೆ ಬೆಳೆಯೆ ಮೃಗನಯನೆ ॥ ೩೭ ॥

---

[1] ಮಾಗದಮವಾಸೆಯೊಳು (ಕ)

ಕೇಳಿ ವಿಭೀಷಣ ಸುಗ್ರೀವನಣುವನು । ತಾಳಿ ಮನಕೆ ಹೇಯವನು ॥
ಪಾಲಿಸಿ ಧರೆಯಯೆನುತ ತಮ್ಮ ಕುವರರ್ಗೆ । ಪಾಲಿಸಿ ಧರೆಯ ಭಾರವನು ॥ ೩೮ ॥

ಬಂದು ನುಡಿದರು ರಾಮಸ್ವಾಮಿಯ ಕಂಡು । ನಿಂದು ಕರಗಳನು ಮುಗಿದು ॥
ಮಂದಹಾಸದೊಳಿರಲಾ ಸಾಕೇತದ । ಮುಂದಣ ಧ್ಯಾನದೊಳಾಗ ॥ ೩೯ ॥

ಸಿದ್ಧಾರ್ಥವನದೊಳಗಾದೀಶ್ವರ ನಿಂದು । ಬದ್ಧಕರ್ಮವನೀಡಾಡಿ ॥
ಶುದ್ಧದಿ ಪರಿನಿಷ್ಕ್ರಮಣ ತೀರ್ಥಭೂಮಿಗೆ । ಹೊದ್ದಿ ಬಂದರು ಕೇವಲಿಗಳು ॥ ೪೦ ॥

ಶಿವಗುಪ್ತರೆಂದೆಂಬ ಕೇವಲಿಗಳು ಬರೆ । ಕವಿ ಕಮಲವ ಕಂಡಂತೆ ॥
ತವಕದಿ ವನಪಾಲ ಬಂದು ಪೇಳಲು ಕೇಳಿ । ಭುವನೇಶ ರಾಮಚಂದ್ರಮನು ॥ ೪೧ ॥

ತನ್ನಯ ಸಖರು ಸಹಿತ ಪೋಗಿಯಾ ಮುನಿ । ಯನ್ನು ಪೂಜಿಸಿ ಪೊಡಮಟ್ಟು ॥
ಚೆನ್ನಾಗಿ ಧರ್ಮಾಧರ್ಮವ ಕೇಳಿ ಸಂ । ಪನ್ನನು ಮತ್ತಿಂತೆಂದಾ ॥ ೪೨ ॥

ಎಲೆ ಮುನಿರಾಯನೆ ಲಕ್ಷ್ಮಣ ನವೆಗುತ್ತ । ದೊಳು ಸತ್ತ ಕಾರಣವೇನು ॥
ತಿಳುಹಿಮೆನಲು ಯೆಲೆ ಶ್ರೀರಾಮಚಂದ್ರನು । ತಿಳಿದು ನೀನೆನ್ನ ಕೇಳುವರೆ ॥ ೪೩ ॥

ಮುನಿಸುವ್ರತ ಸ್ವಾಮಿ ಸಮಸಂಸೃತಿ ದಿವ್ಯ । ಧ್ವನಿಯೊಳು ಕೇಳಿ ಕನಸಿನೊಳ್ ॥
ಅನುಭವವಾಗಿ ಯೆನ್ನನು ನೀನು ಕೇಳ್ದರೆ । ಮನುಜೇಶರಿಂತೆಂದು ಮುನಿಯು ॥ ೪೪ ॥

ನವಕೇಶವರಿಗೆ ನರಕ ತಪ್ಪದು ಯೆಂಬ । ಭುವನಾಧಿಪತಿ ದಿವ್ಯಧ್ವನಿಯು ॥
ಅವರೊಳಗಿವನು ನಾಲ್ಕನೆ ನರಕದಿ ಜನಿ । ಸುವನು ಕೇಳೆಲೆ ಭೂಮಿಪಾಲ ॥ ೪೫ ॥

ಕಡೆಯೊಳು ಪದ್ಮಪ್ರಭ ತೀರ್ಥಂಕರ ಕಾಲ । ಕಡೆಯೊಳು ಜನಿಸುವರಿವರು ॥
ಪಡೆದು ಸಾಮ್ರಾಜ್ಯವ ಕಡೆಯೊಳು ಮುಕ್ತಿಯ । ಪಡೆವರು ಕೇಳೆಲೆ ಭೂಪ ॥ ೪೬ ॥

ಈ ವಾಕ್ಯ ಹುಸಿಯಲ್ಲಾದಿ ತೀರ್ಥೇಶನ । ದೇವವಚನಮೆನಲಾಗ ॥
ತೀವಿತು ಮನದೊಳು ದುಃಖಾಂಬುಧಿಯೊಳ । ಗಾಳುತೇಳುತ ಪಲುಬಿದನು ॥ ೪೭ ॥

ರಾವಣಮರ್ದನ ಮೂರು ಖಂಡವನಾಳ್ದ । ದೇವನವಗೆ ಯಿಂತಪ್ಪ ॥
ತೀವಿದ ದುಃಖ ನರಕದೊಳು ತೊಳಲುವ । ಭಾವಭಾವನೆ ತೋರಿತಬಲೆ ॥ ೪೮ ॥

ಯಕ್ಷರಕ್ಷಿತ ದಿವ್ಯ ಚಕ್ರನಾನಾರತ್ನ । ರಕ್ಷಿತದೇವಗಿಂತಪ್ಪ ॥
ಕುಕ್ಷಿಹೊರಕರಂತೆ ನರಕದೊಳಾಳುವ । ನೀಕ್ಷಿಸಲಾರೆ ಕೇಳಭವ ॥ ೪೯ ॥

ಸುರನರನಾಗರೊಳಿಲ್ಲದ್ವೈಸಿರಿಯನು । ತೊರೆದು ನವೆದು ನರಕದೊಳು ॥
ನೆರೆದುವಕೆಂತು ಜೀವಿಪೆನೆಂಬ ಶ್ರೀರಾಮ । ನಿರವ ಕೇವಲಿಗಳು ಕಂಡು ॥ ೫೦ ॥

ಇವರು ನಾಲ್ವರು ಮುಕ್ತಿಯನೈವ ಜೀವ ಮ । ತ್ತಿವರು ಮೋಹಾಂಧಕಾರದೊಳು ॥
ಇವರಿಗಿಂತಪ್ಪ ಮರಪೆ ಪುಟ್ಟುತಿದೆ ನಾವು । ವಿವರಿಸಿ ತಿಳುಹುವೆನೆಂದು ॥ ೫೧ ॥

ನೋಡಿ ಶ್ರೀರಾಮನ ನಿಸ್ಪೃ ಮನದಿ । ಚಿಂತೆ ಮಾಡುವರೇ ಮೂಢರಂತೆ ॥
ನಾಡೈಸಿರಿ ನಾಡನಾಳ್ದರ ಕಥೆಗಳ । ನೋಡಿ ನೀ ಮರುಳಾಗಿಹರೆ ॥ ೫೨ ॥

ಸಂಸಾರದಿಂದ ಸಂಸಾರಕಾರಣಗಳ । ಸಂಸಾರಫಲ ಸುಫಲವನು ॥
ಸಂಸಾರದಿಂದ ಹಿಂಸಾನಂದ ಕಾರಣ । ಹಂಸನೆ ಕೇಳು ಕೇಳೊಲಿದು ॥ ೫೩ ॥

ಮೋಕ್ಷದಿಂದಲಿ ಮೋಕ್ಷಕೆ ಕಾರಣಗಳು । ಮೋಕ್ಷಫಲವ ಸುಫಲವನು ॥
ಈಕ್ಷಿಸೆನುತ ರಾಮಚಂದ್ರನ ತಿಳುಹಿ ಮು । ಮುಕ್ಷುಗಳಾಡಿದರಾಗ ॥ ೫೪ ॥

ಅರಿವಂತೆ ಸಕಲ ತತ್ವಾರ್ಥವ ನಿರವಿಸಿ । ತೊರೆದು ತಂತಮ್ಮ್ಯಸಿರಿಯ ॥
ಧರಿಸಿ ತಪವ ರಾಮ ಸುಗ್ರೀವ ಲಂಕೇ । ಶ್ವರನಣುವನು ಮೊದಲಾಗಿ ॥ ೫೫ ॥

ಧರಿಸಿ ದೀಕ್ಷೆಯನೈನೂರ್ವರರಸುಗಳು । ವೆರಸಿ ಕೂಡಿ ಸಖರುಗಳು ॥
ತರಳರಸೀತೀ ಶತಪುತ್ರರು ಗೂಡಿ । ಧರೆಯಾಣ್ಮರು ದೀಕ್ಷೆಗೊಳಲು ॥ ೫೬ ॥

ಸ್ರ್ರಿತಿಮತಿ ಕಂತಿಕೆಯರ ಸಮಕ್ಷಮದೊಳು । ಪೃಥ್ವೀಸುಂದರಿ ಸೀತೆಯಾದಿ ॥
ಸತಿಯರು ದೀಕ್ಷೆಗೊಳಲು ಪೃಥ್ವಿಮತಿಗಳ । ನತಿಯರು ದೀಕ್ಷೆ ತಾಳಿದರು ॥ ೫೭ ॥

ಧರಿಸೆ ದೀಕ್ಷೆಯ ತಂದೆತಾಯ್ಗಳ ಪಾದವ । ಸ್ಮರಿಸಿ ಪೂಜಿಸಿ ಬೀಳ್ಕೊಂಡು ॥
ಪುರಕ್ಕೈದಿದರು ಕುಮಾರಕರು ತಂತಮ್ಮಯ । ಸಿರಿಯೊಳಗಿಹರಬ್ಜಾಕ್ಷಿ ॥ ೫೮ ॥

ಅಜಿತಂಜಯ ಪೃಥ್ವಿಚಂದ್ರನು ಧರಿಸಿದ । ನಿಜವಾಗಿ ಶ್ರಾವಕವ್ರತವ ॥
ನಿಜರಾಜ್ಯದೊಳು ಕೀರ್ತಿಯನಾಂತುವಿರ್ಪರು । ಭಜಕರ ಭಾಗ್ಯವೆ ಕೇಳು ॥ ೫೯ ॥

ಇತ್ತಲು ರಾಮವಿಭೀಷಣ ಸುಗ್ರೀವ । ನುತ್ತಮ ಹನುಮ ಮುನಿಗಳು ॥
ಉತ್ತಮ ತಪದೊಳು ನೆಗಳೆ ತ್ರೈರತ್ನವ । ಚಿತ್ತದೊಳಗೆ ಧರಿಸಿದರು ॥ ೬೦ ॥

ಶ್ರೀರಾಮ ಮುನಿ ಸಮ್ಯಗ್ದರುಶನ ಜ್ಞಾನ । ಚಾರಿತ್ರ ತಪದೊಳು ನೆಗಳ್ದ ॥
ವೀರ ಹನುಮ ಮುನಿ ಶ್ರುತಕೇವಲಿಗಳಾಗಿ । ಧಾರುಣಿಯೊಳೊಪ್ಪುತಿಹರು ॥ ೬೧ ॥

ಉಳಿದ ವಿಭೀಷಣ ಸುಗ್ರೀವ ಮುನಿಗಳ್ಗೆ । ನೆಲಸಿತು[1] ವೃದ್ಧಿಕ್ರಿಯವು ॥
ಪಲಬರು ಮುನಿಗಳು ತಂತಮ್ಮ ಸುಗತಿಯ । ನೆಲೆಯೊಳಗಾಳುತೇಳುವರು ॥ ೬೨ ॥

ಈ ರೀತಿ ತಪದೊಳು ಶ್ರೀರಾಮಮುನಿ ನಾ । ಲ್ಮೂರು ವರುಷ ನೆಗಳಿದನು ॥
ಹಾರಿತು ಕರ್ಮವು ನಿಜಧ್ಯಾನದೊಳು ಜ್ಞಾನ । ತೋರಿತು ಕೆಲವರುದಯವು ॥ ೬೩ ॥

ಇಂತು ಶ್ರೀರಾಮಮುನಿಗೆ ಕೇವಲಜ್ಞಾನ । ನಂ ತೋರೆ ಸುರಪ ... ॥
ತಾಂ ತಳುವದೆ ಧನಪತಿಗುಸುರಲ್ಕವ । ನಂತರಿನದೆ ಬಂದು ಬಳಿಕ ॥ ೬೪ ॥

---

[1] ನೆರೆತು (ಕ)

ನವರತ್ನಖಚಿತ ಗಂಧಕುಟಿಯು ಸುತ್ತ । ಪವಿಯು ಪ್ರಾಕಾರ ಸ್ವರ್ಣದೊಳು ॥
ದಿವಿಜನಿರ್ಮಿತ ಮಾನಸ್ತಂಭವೊಪ್ಪಲುಮುದ । ವಿವರಿಪ ಕವಿಯಾರು ಜಗದಿ ॥ ೬೫ ॥

ಗಂಧಕುಟಿಯು ಮಧ್ಯದಿ ರಾರಾಜಿಪ । ಹೊಂದಾವರೆಯು ಪೀಠದೊಳು ॥
ಕುಂದಣದಂತೆ ಪೊಳೆವ ರಾಮಮುನಿಪಕೆ । ನಿಂದನು ಪ್ರತಿಕೃತಿಯಲ್ಲಿ ॥ ೬೬ ॥

ಅಲ್ಲಿಗೆ ಶ್ರುತಕೇವಲಿಯಣುಮುನಿ ಮ । ತ್ತಲ್ಲಿ ಸುಗ್ರೀವಿಭೀಷಣರು ॥
ಬಲ್ಲಿದ ವೃದ್ಧಿಕ್ರಿಯೆಯು ಸಂಪನ್ನರು । ಅಲ್ಲಿ ಮುನಿಗಳೊಪ್ಪುತಿಹರು ॥ ೬೭ ॥

ಸುರಸಭೆ ನೆರೆದು ಸ್ತುತಿಸಿ ಪೂಜಿಸಿ ಮತ್ತೆ । ಧರೆಯು ಚೌಸೀತಿ ಜೀವರಿಗೆ ॥
ಎರೆವುತ ಧರ್ಮಾಮೃತವನು ಚರಿಸುತ । ಬರಲು ಕಂಡರು ಕುಮಾರಕರು ॥ ೬೮ ॥

ಗಂಧಕುಟಿಗೆ ಬಂದು ಪೂಜಿಸಿ ಸ್ತುತಿಯಿಸಿ । ಯೊಂದಾಗಿ ಬರುತಿರಲಾಗ ॥
ಸಂದುದುವರುನೂರು ವರುಷವೀ ಪರಿಯೊಳು । ಬಂದು ಸಮ್ಮೇದಗಿರಿಯೊಳು ॥ ೬೯ ॥

ಗಂಧಕುಟಿಯು ಪರಿಹರಿಸಿ ಕೇವಲಿಗಳು । ನಿಂದು ಯೋಗದಿ ಮುನೀಶ್ವರರು ॥
ನಿಂದರು ತಂತಮ್ಮ ಯೋಗಾನುಷ್ಠಾನದಿ[1] । ನಿಂದರು ಎಡಬಲದೊಳಗೆ ॥ ೭೦ ॥

ಘಾತಿಯಘಾತಿಯು ಕೆಡಿಸಿ ನಿರ್ಮಲನಾಗಿ । ಜ್ಯೋತೀಶ ರೂಪ ತಾನಾದ ॥
ಮಾತೇನು ಹನುಮ ವಿಭೀಷಣ ಸುಗ್ರೀ । ವಾ ತಪಸಿಗಳು ಕರ್ಮವನು ॥ ೭೧ ॥

ಕೆಡಿಸಿ ಚಿಜ್ಯೋತಿಯೊಡವೆರೆದರು ಸುರ । ರೊಡಗೂಡಿ ಪೂಜಿಸಿ ಬಳಿಕ ॥
ಅಡರಲು ಫಾಲ್ಗುಣ ಶುದ್ಧಚತುರ್ದಶಿ । ಕಡೆಯು ಜಾವದಿ ಮುಕ್ತಿಯಾಯ್ತು ॥ ೭೨ ॥

ಅವರ ಕುಮಾರರು ಕುಂದಣನಿರ್ಮಿತ । ನವರತ್ನಖಚಿತ ಬಸದಿಯು ॥
ತವೆ ಮಾಡಿಸಿ ಕುಂದಣದೊಳು ಪ್ರತಿಕೃತಿ । ಯುವನು ಮಾಡಿಸಿ ನಿಲಿಸಿದನು ॥ ೭೩ ॥

ರಾಮ ಸುಗ್ರೀವ ಹನುಮ ವಿಭೀಷಣರನು । ಸ್ವಾಮಿಯು ತದ್ರೂಪಿನೊಳು ॥
ಕಾಮಿಸಿ ಕುಂದಣದೊಳು ಪ್ರತಿಕೃತಿಯನು । ವ್ಯೋಮಚುಂಬಿತ ಬಸದಿಯೊಳು ॥ ೭೪ ॥

ನಿಲಿಸಿ ಪೂಜಿಸಿ ಸ್ತುತಿಯಿಸಿ ತಂತಮ್ಮಯ । ನೆಲೆಗೆ ಪೋದರು ಮತ್ತಿತ್ತ ॥
ಲಲನೆ ಸೀತೆಯು ಪೃಥ್ವಿ ಸುಂದರಿಯುಚ್ಯುತ । ನೆಲೆಯೊಳು ಪುಟ್ಟಿದರಬಲೆ ॥ ೭೫ ॥

ಪಲಬರು ಸತಿಯರು ಸೌಧರ್ಮಕಲ್ಪದ । ನೆಲೆಯೊಳು ಜನಿಸಿದರವರು ॥
ಕಲಿಲವಿಜಯು ಜಿನರಾಜನ ಚರಿತೆಯು । ನೆಲೆಗೊಳಿಸಿದನು ದೇವಪ್ಪ ॥ ೭೬ ॥

ಜಿನಮತವಾರ್ಧಿವರ್ಧನ ಚಂದ್ರಸೆನಿಸುವ । ದಿನಕರ ಸಮತೇಜನಾದ ॥
ವನಧಿಗಂಭೀರ ದೇವಪ್ಪನೊರೆದ ಕಾವ್ಯ । ವನು ಕೇಳಿ ದರೆಯು ಸುಜನರು ॥ ೭೭ ॥

---

[1] ಯೋಗಾನುಷ್ಠದಿ (ಕ).

ತರಣಿಚಂದ್ರಮರುಳ್ಳನ್ನ ಈ ಸತ್ಕೃತಿ । ಸ್ಥಿರವಾಗಿ ಯಿರಲೆಂದೆನುತ ॥
ಒರೆದನು ದೇವಪ್ಪ ಧರೆಯ ಸುಜನರಿದ । ನಿರುತ ಲಾಲಿಸಿ ಹರುಷದೊಳು ॥ ೭೮ ॥

ಈ ರಾಮಚರಿತವ ಬರೆದೋದಿ ಕೇಳಿದ । ಧಾರುಣಿ ಸುಜನರ್ಗೆ ನಿರುತ ॥
ನಾರೇರು ಪುತ್ರರೈಶ್ವರ್ಯಸಂಪದಗಳ । ಮಾರವಿಜಯ ಜಿನ ಕೊಡುವ ॥ ೭೯ ॥

ಮಂಗಳ ಶ್ರೀರಾಮಗೆ ಹನುಮಂತಗೆ । ಮಂಗಳ ಸುಗ್ರೀವನಿಗೆ ॥
ಮಂಗಳ ಲಂಕೇಶ್ವರ ವಿಭೀಷಣನಿಗೆ । ಮಂಗಳ ಜಯ ಜಯ ಜಯತು ॥ ೮೦ ॥

ಜಯತು ಜಯತು ಕಾಲಾಂತಕದೇವಗೆ । ಜಯತು ಜಯತು ಮುಕ್ತಿರಮಗೆ ॥
ಜಯತು ಜಯತು ಮಾರ ಮದಹರಣಗೆ ಜಯ । ಜಯ ಜಯ ಎಂದು ಪಾಡುವರು ॥ ೮೧ ॥

ಧನಧಾನ್ಯ ವಸ್ತುವಾಹನ ಪುತ್ರಮಿತ್ರರು । ಘನತರ ಬಂಧುನಿಚಯವು ॥
ಅನುದಿನ ನಿಮಗಿರಲೆಂದು ಹರಸಿ ಕೃತಿ । ಯನು ರಚಿಸಿದೆ ಬರೆದೋದಿ ॥ ೮೨ ॥

ಇಂದು ಮುಂದಣ ಕಥೆಗಳನಾಶ್ರಯಿಸುವೆ । ನೆಂದೊಯ್ಯನೆ ನಡೆತಂದು ॥
ನಿಂದುದಿಲ್ಲಿಗೆ ಸಂಧಿ ನಲವತ್ತು ಪೇಳ್ವೆನಾ । ಮುಂದಣ ಕಥೆಯ ಮೃಗಾಕ್ಷಿ ॥ ೮೩ ॥

ಇದು ಭೂಸುರವಂಶೋದ್ಭವನಭಿನವ
ಮದನನಮಲಗುಣ ಜಿನಪಾದಾಂಬುಜ
ಮದಮಧುಕರನತ್ಯುತ್ತಮ ವಾಣೀ [ನಿರ್ಮಲ] ಮುಖಮುಕುರಂ ॥
ಸದಮಲಚರಿತ ಸಚಿವ ದೇವಪ್ಪಂ
ಮುದದಿಂ ಪೇಳಿದ ರಾಮವಿಜಯದೊಳ
ಗೊದವಿ ರಚನೆಯಾದುದು[1] ಇಪ್ಪತ್ತೊಂದನೆಯ ಮಿಸುಪಸಂಧಿ ॥ ೮೪ ॥

---

[1] ರಚನೆಯುಂ ಪಡೆದತಿ ಜಸವೆತ್ತುದು (ಕ)

# ಅನುಬಂಧ ೪

## ಶಬ್ದಕೋಶ

| | ಶಬ್ದಗಳು | ಸಂಧಿ – ಪದ್ಯಗಳ ವಿವರ | ಅರ್ಥ |
|---|---|---|---|
| ಅ | ಅಗಸಿವಟ್ಟೆ | 20-185 | ಹೊರಹೆಬ್ಬಾಗಿಲಿನ ದಾರಿ |
| | ಅಗಿ | 3-59, 60, 4-135, 16-88 | ಹೆದರು |
| | ಅಂಗದಟ್ಟಿ | 7-65 | ಪಾದದ ಕೆಳಗೆ ಹಾಸುವ ಬಟ್ಟೆ |
| | ಅಚ್ಚುಗ | 18-155 | ಸ್ನೇಹ, ಪ್ರೀತಿ |
| | ಅಟ್ಟಕಳಿ | 7-64 | ತಲೆಯ ಜಿಡ್ಡನ್ನು ಹೋಗಲಾಡಿಸಲು [ಹಚ್ಚುವಂಥದು |
| | ಅಟ್ಟೆ | 16-95 | ರಾಶಿ |
| | ಅಟ್ಟೆ | 18-81 | ಮುಂಡ, ಕಬಂಧ |
| | ಅಡಗು | 12-93 | ಮಾಂಸ |
| | ಅಡ್ಡಾಕ | 17-76 | ತಡೆ |
| | ಅಣಿಯರ | 12-41 | ಅತಿಶಯ |
| | ಅಣುಗು | 8-66 | ಪ್ರೀತಿ |
| | ಅಣೆ | 17-85 | ಮೇಲೇರು |
| | ಅಂಡಿಸು | 13-120 | ಸಂಕೋಚಪಡಿಸು |
| | ಅಣ್ಣೆವಾಲು | 12-32 | ಶುದ್ಧವಾದ ಹಾಲು; ಕೆನೆವಾಲು |
| | ಅಣ್ಪು | 3-152 | ಅನುಲೇಪ |
| | ಅದಿರ್ಗಂತಿ | 13-21 | ದುಂಡುಮಲ್ಲಿಗೆ; ಅದಿಮುರ್ತ್ತೆ, ಮಾಧವಿ |
| | ಅನು | 7-20 | ಸಿದ್ಧತೆ, ಸಾಧನ; ಉಪಾಯ |
| | ಅನುಬಂಧಿಕೆ | 15-26 | ಸ್ನೇಹ |
| | ಅನುವಡಿಸು | 12–86 | ಸುಲಭಮಾಡು, ತಿಳಿಸು |
| | ಅನುವದಿಸು | 6-19, 14-65, 15-12 | ತಿಳಿಸು |
| | ಅನುವರ | 13-94, 15-26, 18-171 | ಯುದ್ಧ; ಆಪತ್ತು |
| | ಅಂತರಾಯ | 20-95 | ವಿಘ್ನ |
| | ಅಂತರಿಸು | 7-50, 8-97 | ವ್ಯತ್ಯಾಸಗೊಳ್ಳು, ವ್ಯತ್ಯಾಸಗೊಳಿಸು |
| | ಅನ್ನ | 17-3 | ಅಂತಹ |
| | ಅನ್ನಕರ | 14-116 | ಅದುವರೆಗೆ |
| | ಅಮ್ಮಾಲೆ | 3-82, 111 | ಕೈಯ ಹೊಡೆಚೆಂಡು |
| | ಅರಿದಲೆ | 14-43 | ಅರಿದಳ (ಹರಿತಾಲ–ಸಂ.) |
| | ಅರೆಯೆಡೆ | 2-68 | ಕೆಲವೆಡೆ |
| | ಅಲವಜು | 6-40 | ಆಯಾಸಗೊಳ್ಳು |
| | ಅಸಗ | 13-147 | ಅಗಸ |
| | ಅಹನೆ | 14-67 | ಇರುವನು (ಅಪನೆ) |
| | ಅಳಗ | 15-69 | ಕೂದಲು ನಾಯಿ |
| | ಅಳಟಿಸು | 14-28 | ಪೆದರಿಸು |
| ಆ | ಆಕೆ | 7-7 | ತಡೆ (ಆಜ್ಞೆ) |
| | ಆಕೆವಾಳ | 13-110 | ಶೂರ, ಪಟುಭಟ |
| | ಆಂಕೆಗಂಬ | 2-13 | ಆಧಾರಸ್ತಂಭ |
| | ಆಡುಂಬೊಲ | 2-96 | ಆಟದ ಬಯಲು |
| | ಆದು | 14-21 | ಆದ್ದು |

| | ಶಬ್ದಗಳು | ಸಂಧಿ - ಪದ್ಯಗಳ ವಿವರ | ಅರ್ಥ |
|---|---|---|---|
| ಆ | ಆನದೆ | 7-182, 8-81, 11-23, 12-154; 14-187, 15-57, 18-167, 19-71, 20-146 | ಸಹಿಸದೆ; ತಡಮಾಡದ |
| | ಆನೆಕಲ್ಲು | 20-129 | ಆಲಿಕಲ್ಲು, ವರ್ಷೋಪಲ |
| | ಆಮಯ | 3-62 | ರೋಗ |
| | ಆಯತ | 8-135 | ಆಯತನ, ಮನೆ |
| | ಆಲವಟ್ಟಲು | 18-166, 20-159 | ಬೀಸಣಿಗೆ |
| | ಆಸುರ | 5-84 | ಅಧಿಕ |
| | ಆಳಿ | 3-70, 4-53, 10-105 | ಸಖಿ, ಆಲಿ-(ಸಂ) |
| | ಆಱಡಿ | 2-39 | ಷಟ್ಪದ, ತುಂಬಿ |
| ಇ | ಇಂದೂಪಲ | 10-134 | ಚಂದ್ರಕಾಂತ ಶಿಲೆ |
| | ಇಟ್ಟಿಸು | 4-186 | ಈಕ್ಷಿಸು, ನೋಡು |
| | ಇಡಿಸಲು (ಇಱಿಸಲ್) | 15-64 | ಮೃಗವನ್ನು ಕೆಡಹುವ ಸ್ಥಾನ |
| | ಇಭನಿಭ | 7-73 | ಆನೆಯಂತಹ |
| | ಇರದೆ | 9-9 | ತಡಮಾಡದೆ |
| | ಇಳಲೆ | 1-148, 13-13, 14-173, 14-130, 15-86, 16-13 | ಹೆಂಡತಿ |
| | ಈಯಕ | 4-171 | ಈ ಅಕ್ಕ, ಈ ಹೆಂಗುಸು |
| ಉ | ಉಗಿಬಗಿ | 7-69 | ಸೀಳುವಿಕೆ |
| | ಉಡುಗು | 13-65 | ಗುಡಿಸು |
| | ಉಣ್ಣದರೂರು | 14-93 | ಸ್ವರ್ಗಲೋಕ |
| | ಉತ್ತರಿಗೆ | 7-102 | ಹೆಗಲ ವಸ್ತ್ರ, ಉತ್ತರೀಯಕ (ಸಂ) |
| | ಉದ್ದಂಡ | 14-81 | ಗರ್ವ |
| | ಉದ್ದಂಡಿಕೆ | 16-96 | ಗರ್ವದ ಕೆಲಸ |
| | ಉದ್ದಂಡಿಸು | 8-63, 13-120 | ದೀರ್ಘಗೊಳಿಸು, ಮೀರು |
| | ಉಪ್ಪುಸೊಪ್ಪು | 1-49 | ಹೆಚ್ಚುಕಡಮೆ, ಒಂದು ಇನ್ನೊಂದು |
| | ಉರುಣಿ | 12-57 | ರಾಶಿ |
| | ಉಲುಪು | 10-77 | ಮಾತು, ಧ್ವನಿ |
| | ಉಲುಪೆ | 8-129 | ಊಟವಸತಿ ವ್ಯವಸ್ಥೆ, ಪಡಿ |
| | ಉಱುಬು | 18-102, 107 | ಯುದ್ಧಕ್ಕೆ ಸಂಚಲನ ಮಾಡು |
| | ಉಱುಬೆ | 12-85, 18-64 | ಶಕ್ತಿ, ಒತ್ತಡ |
| | ಉಱುವದ | 16-62 | ಶ್ರೇಷ್ಠ |
| | ಊಳು | 1-49 | ಬೊಗಳು |
| ಎ | ಎಗುಪೆ | 16-81, 90 | ಭಯೋದ್ಗಾರ, ಏನು ಮಾಡುವೆನು |
| | ಎಗ್ಗ | 1-6 | ಪೆದ್ದ |
| | ಎಣ್ಣೆನೂಲು | 5-53 | ಎಣಿನೂಲು, ಜತೆನೂಲು |
| | ಎಯ್ವಂದಿ | 15-67 | ಮುಳ್ಳುಹಂದಿ |
| | ಎಱೆ | 20-141 | ರಾಶಿ |
| | ಎಸು | 10-134 | ಎಸೆ, ಬೀಸಾಡು |
| | ಏಡಿಸು | 1-50 | ಮುಖವಿಕಾರದಿಂದ ಹೀನೈಸು |
| | ಐಹಿತ | 14-148 | ಅಹಿತ |
| ಒ | ಒಗ್ಗು | 9-19, 10-136, 17-1, 16-49 | ಒಗ್ಗಟ್ಟು, ಗುಂಪು |

| ಶಬ್ದಗಳು | ಸಂಧಿ–ಪದ್ಯಗಳ ವಿವರ | ಅರ್ಥ |
|---|---|---|
| ಒಜ್ಜಿರೆಗಣ್ಣು | 17-2 | ಬೊಗಸೆಗಣ್ಣು (ಒರ್+ಸೆರೆ) |
| ಒಟ್ಟೆ | 3-123 | ಒಂಟೆ |
| ಒಡ್ಡು | 17-76 | ಸೈನ್ಯ |
| ಒಡ್ಯಾಣ | 12-35 | ಉಡಿಯ ಆಭರಣ, ಕಾಂಚೀಧಾಮ |
| ಒತ್ತೆ | 10-38 | ಸಾಮೀಪ್ಯ |
| ಒಬ್ಬುಳಿ | 9-1, 10-52, 12-58, 18-72 | ಹೆಚ್ಚಳ, ಹಿಗ್ಗು; ರಾಶಿ |
| ಒಯ್ಯನೆ | 1-107 | ಮೆಲ್ಲನೆ |
| ಒಱಲೆ | 16-10 | ಗೆದ್ದಲ ಹುಳ |
| ಓದು | 1-79 | ಮುಸುಕು, ಮುಚ್ಚು |
| ಓಯರ | 3-84 | ಒಯ್ಯಾರ |
| ಓರೆಗಿತ್ತಿ | 8-65 | ಓರಗಿತ್ತಿ; ಗಂಡನ ಸೋದರನ ಹೆಂಡತಿ |
| ಓರ್ವೆ | 10-39 | ಒರ್ವಳು; ಒಬ್ಬಳು |
| ಓವರಿ | 2-106, 13-19 | ಒಳಮನೆ, ಉಪಗೃಹ-(ಸಂ) |
| ಓಸರಿಸು | 7-107, 13-130 | ಓರೆಮಾಡು, ವ್ಯತ್ಯಾಸಗೊಳಿಸು |
| ಔದುಂಬರ (ಸಂ) | 15-60 | ಅತ್ತಿಮರ |
| ಕಕ್ಕಸ | 3-146 | ಕರ್ಕಶ |
| ಕಟ್ಟಿಗೆಯವ | 7-182, 8-91 | ನಿಯಾಮಕ; ಪ್ರತೀಹಾರಿ |
| ಕಟ್ಟುಕುಟ್ಟು | 2-44 | ಅವಗಡ |
| ಕಟ್ಟುಮುಟ್ಟು | 14-109 | ಸುವ್ಯವಸ್ಥೆ |
| ಕಂಟುಕಪೋತ | 7-22 | ಗಂಡುಪಾರಿವಾಳ (?) |
| ಕಡುಂದುಱು (ಕದದುಱು) | 13-31, 20-168 | ಕಣಜ ಹುಳು, ಕೂಡಲು ಹುಳು |
| ಕಡುಕು | 13-133, 17-40 | ಕುಟುಕು, ಕಿವಿಯ ಆಭರಣ |
| ಕಡೆ | 14-96 | ರಂಗೋಲಿ |
| ಕಣ್ಣೆ | 10-30 | ಹಗ್ಗ |
| ಕದುಕಿಱಿ | 20-17 | ಕೊಕ್ಕಿನಿಂದ ಕುಟುಕಿದ ಗಾಯವಾಗುವಂತೆ |
| ಕದುಬು | 20-88 | ಗರ್ವ |
| ಕದುಬು | 18-142 | ಬಿಗಿಹಿಡಿ, ಬಲಾತ್ಕರಿಸು |
| ಕಂದುಕ | 10-44, 47 | ಕಂದುಕ; ಚೆಂಡು |
| ಕನಕದಾಯಕ | 3-61 | ಕುಬೇರ |
| ಕಮ್ಮಗಣೆಯ | 10-66 | ಮನ್ಮಥ |
| ಕರ | 5-32, 10-17 | ಬಹಳ |
| ಕರಗ | 2-74, 4-6; 7-97, 13-132, 10-127 | ನೀರಿನ ಗಡಿಗೆ; ಕರಕ (ಸಂ) |
| ಕರಡೆ | 17-100 | ಉದ್ದವಾದ ಡೋಲು |
| ಕರಮುತ್ತು (ವಿರಮುಕ್ತಿ?) | 1-55 | ಕಣಜದ ಹುಳು (?); ಕಡುಂದುಱು (?) |
| ಕರುಮಾಡ | 8-123 | ಉಪ್ಪರಿಗೆ |
| [illegible] | 4-142; 7-28 | ಕೊಕ್ಕಿನ ಕುಟುಕು |
| [illegible] | 14-34 | ಪಾಪ, ಕಲಂಕ |
| [illegible] | 7-57 | [illegible] |
| [illegible] | 2-28 | ಬಲಾತ್ಕಾರದ ಸೆರೆ, ಸೂರೆ |
| [illegible] | 2-44 | [illegible] |
| [illegible] | 7-125 | [illegible] |

| ಶಬ್ದಗಳು | ಸಂಧಿ – ಪದ್ಯಗಳ ವಿವರ | ಅರ್ಥ |
|---|---|---|
| ಗಾನ | 8-24 | ಗಾಯಕ |
| ಗಾಂಪ | 11-36 | ಗಾವಿಲ, ಅಜ್ಞ |
| ಗಾವರಿ | 2-60 | ಗಾವರ; ಸದ್ದು |
| ಗಾಜುಮಾಡು | 15-55 | ಒಣಗಿಸು; ನಾಶಮಾಡು |
| ಗಾಹು | 3-93 | ಮೋಸ |
| ಗಿಡುಬಿಡಿ | 13-156 | ವಾದ್ಯವಿಶೇಷ |
| ಗಿಣ್ಣಲು | 12-32 | ಗಿಣ್ಣಲು, ಚಿಕ್ಕ ಬಟ್ಟಲು |
| ಗುಜ್ಜರಿಗಾಲು | 5-12 | ಗಿಡ್ಡಕಾಲು |
| ಗುಡ್ಡೈಸು | 12-173, 16-87, 92 | ಬಯಸು (?) |
| ಗುಂಟಿ | 14-44 | ಗೂಟ |
| ಗುಣ್ಪು | 3-15 | ಆಳ |
| ಗುಸ್ಸಲುಗೂಡು | 15-64 | ಚಿಕ್ಕಗೂಡು |
| ಗುರ್ವ | 16-61 | ಧೀರತ್ವ; ಗುಬ್ಬ್, ಅಗುರ್ವ |
| ಗೂಡೆ | 8-171 | ರಾಶಿ |
| ಗೂಹೆ | 13-53 | ಗುಹೆ |
| ಗೆಡೆ | 10-61 | ಜತೆ, ಸ್ನೇಹ |
| ಗೆಂಟು | 17-26 | ದೂರ |
| ಗೆಯ್ಕಲಿ | 13-33 | ಗೆಯ್ಕಲು |
| ಗೆಲಿದೊ | 4-156 | ಗೆಲಿದವು, ಗೆದ್ದವು |
| ಗೋತ್ರಾರಿ (ಸಂ) | 4-151 | ಇಂದ್ರ |
| ಗೋವಿಂದಗಲಿ | 18-179 | ಕಪಟ, ಇಂದ್ರಜಾಲ |
| ಗೌಸರ | 8-46 | ಹಾರವಿಶೇಷ |
| ಘಟ್ಟಿ | 11-42 | ಗಂಧದ ಕೊರಡು |
| ಘನಸಾರ | 7-37 | ಕರ್ಪೂರ |
| ಚಕ್ರಿ | 8-58 | ಕುಂಬಾರ |
| ಚಂಡಿ | 13-120; 14-80 | ಹಟ, ಹೋರಾಟ |
| ಚಯ್ಯವಾಡು | 16-86 | ಚೆಲ್ಲಾಟವಾಡು |
| ಚವರ | 4-6 | ಚಾಮರ |
| ಚಳಕಗೆ | 7-74; 8-46 | ಆಭರಣ ವಿಶೇಷ |
| ಚಾರಿವರಿ | 19-64 | ಕ್ರಮಾಂದಂತೆ ಮುಂದುವರಿ |
| ಚಿಪ್ಪೆ | 12-32 | ಮೊಣಕಾಲ ಗಂಟು |
| ಚಿಂತಾಕು | 7-72, 98, 8-45; 10-84 | ನಡುವಿನ ಆಭರಣ |
| ಚಿಮ್ಮುರಿ | 17-43 | ಜುಟ್ಟು; ಕೂದಲ ಚೌರಿ |
| ಚಿಲಿಪಾಲು | ಅನುಬಂಧ III 20-6 | ಕಾಲುಭಾಗ ನೀರು ಸೇರಿಸಿ, ನೀರಿನ ಅಂಶವು ಬತ್ತುವಂತೆ ಕಾಯಿಸುವ ಶುದ್ಧ ಹಾಲು |
| ಚೀರ | 8-59 | ವಸ್ತ್ರ |
| ಚೀರ್ಣ | 1-58 | ಮುಚ್ಚಿದ, ಪೂರೈಸಲಾದ |
| ಚುನ್ನ | 3-29, 86 | ನಿಂದೆ, ಟೀಕೆ |
| ಚುಳುಕು | 14-35 | ಅಂಗೈಯಲ್ಲಿ ಹಿಡಿದ ನೀರು |
| ಚೂಣಿ | 15-109 | ಮುಂಭಾಗ |
| ಚೆಂಡೆ | 12-25 | ಚೆಂಡು |
| [illegible] | 7-12; 8-71 | ವಾದ್ಯವಿಶೇಷ (ಕಹಳೆಯ ಜಾತಿ) |

| | ಶಬ್ದಗಳು | ಸಂಧಿ – ಪದ್ಯಗಳ ವಿವರ | ಅರ್ಥ |
|---|---|---|---|
| | ಜೋಹ | 14-42 | ವೇಷ, ಜೋಹ |
| | ಚಾಪಳಿಗೆ | 7-30 | ಚೌಕಮಂಟಪ |
| ಛ | ಛಷ್ಣೆ | 17-76 | ಸಡ್ಡೆ, ಶ್ರದ್ಧೆ, ಕಾಂಕ್ಷೆ |
| ಜ | ಜಕ್ಕುಲಿಸು | 20-130, 4-43 | ಸಂಚರಿಸು, ಚಕ್ಕಲಗುಳಿ ಮಾಡು |
| | ಜಂಬೀರ (ಸಂ) | 10-116 | ನಿಂಬೆ |
| | ಜಂಬುಕಾನ | 7-15 | ದಪ್ಪದ ಹಾಸು, ಜಮಖಾನೆ |
| | ಜಗಜಾಪು | 14-42 | ದೂರಹಾರಿಕೆ |
| | ಜಲ್ಮ | 20-108 | ಜನ್ಮ |
| | ಜಾಗುಮತಿ | 4-110 | ಅಲ್ಪಬುದ್ಧಿ |
| | ಜಾತರೂಪ (ಸಂ) | 20-138 | ಚಿನ್ನ |
| | ಜೂಳಯ | 7-69, 74, 8-49 | ತಿಂಗಳಿಗೆ, ಹಣೆಯ ನೇರಬೊಟ್ಟು |
| | ಜೇಗಟೆ | 14-42 | ಜಾಗಟೆ, ಜಯಘಂಟೆ |
| | ಜೇವಣ | 2-80 | ಬೋಜನ (ಜೇಮನ-ಸಂ) |
| | ಜೋಗುಳೆವಾಡು | 5-50 | ಜೋಗುಳ ಹಾಡು |
| | ಜೋಡು | 18-25, 77 | ಕವಚ, ಸವಗ, ದಗಲೆ, ವಾರವಾಣ |
| ಡ | ಜೋಲಿಯನಿಕ್ಕು | 13-128 | ತಡಮಾಡು |
| | ಡವಕೆ | 2-112, 4-6, 13-143, 17-32 | ಉಗುಳುಬುಡ್ಡಿ |
| | ಡವುಡೆ | 8-71, 9-28, 13-156, 17-100 19-23 | ವಾದ್ಯವಿಶೇಷ, ಡಿಂಡಿಮ |
| | ಡೆಂಕಣಿ | 17-71 | ಧ್ವಜಸ್ತಂಭ |
| | ಡೋಳಾಯ (ಸಂ) | 13-99 | ಅತ್ತಿತ್ತ ಅಲ್ಲಾಡುವ |
| ತ | ತಕ್ಕೆ | 1-87, 20-10 | ಆಲಿಂಗನ |
| | ತಟ್ಟುಗಿ | 18-27 | ತಗಲಿ ಹೊರಬರು |
| | ತಡಗ | 7-13 | ತಟ್ಟೆ (?) |
| | ತಡಬಡಿಸು | 15-32 | ವ್ಯತ್ಯಾಸವಾಗು |
| | ತಡಸ | 15-58 | ದಡಸ ಎಂಬ ಮರ |
| | ತತ್ತರಿವಡು | 14-75 | ತುಂಡು ತುಂಡು ಮಾಡು |
| | ತಸು | 20-87 | ಕೃಶ |
| | ತಪ್ಪಟೆ | 7-12 | ತಮಟೆ, ತಂಬಟೆ ಎಂಬ ವಾದ್ಯ |
| | ತರಗು | 18-34 | ಒಣ ಎಲೆ |
| | ತರತರ | 7-48 | ಯೋಗ್ಯತೆ |
| | ತರಹರ | 12-147, 15-28 13-64 | ತ್ವರೆ, ಚಾತುರ್ಯ, ತಾಳ್ಮೆ |
| | ತಲ್ಲಣ | 2-84, 14-113 | ತಳ್ಳಂಕ, ಭೀತಿ |
| | ತವೆ | 14-129 | ಸವೆ, ಕಡಮೆಯಾಗು |
| | ತಳ | 17-83, 18-175 | ಕಪಟ |
| | ತಳಪ | 19-79 | ಕಾಂತಿ, ತೊಳಪ |
| | ತಳಲುಗೆಂಡ | 18-118 | ಕೆದರಿದ ಕೆಂಡ |
| | ತಳಿ | 19-53 | ಪ್ಯಾಪಿಸು |
| | ತಳಸು | 15-75, 76 | ಬತ್ತ ಕುಟ್ಟು |
| | ತಳುಗು | 2-58 | ತಳುವು, ತಡ, ತಂಗು |
| | ತಳುವು | 14-12 | ತಡಮಾಡು |
| | ತಳೆ | 3-65; 15-180 | ಸವೆ, ಕೊಡೆ |

| ಶಬ್ದಗಳು | ಸಂಧಿ-ಪದ್ಯಗಳ ವಿವರ | ಅರ್ಥ |
|---|---|---|
| ತಱವಾಱ | 16-73 | ತಳವಾರ; ತಳಾರ |
| ತಱುಗೆಂಡ | 18-44 | ಕೋಪದ ಜೋರು |
| ತಱುಬು | 18-44, 46, 107 | ತಡೆ, ಪ್ರತಿಭಟಿಸು |
| ತಾಷೆ | 8-71, 9-29, 17-100 | ವಾದ್ಯ ವಿಶೇಷ |
| ತಾಮಸ | 6-45, 7-21 42, 43, 81; 9-58 | ತಡ, ದಡ್ಡತನ |
| ತಾಱು | 15-58 | ತಾಳೆಮರ |
| ತಿತ್ತಿರಿ | 7-12; 8-71, 9-29, 13-156, 17-100 | ತುತ್ತೂರಿ |
| ತಿಬ್ಬಳಿ | 9-1, 18-95 | ತಿಳಿವಳಿಕೆ |
| ತಿರುಗೋಲ್ | 8-110 | ತಿರುಕೂಳಿ |
| ತುಬ್ಬು | 9-31, 16-63 | ನಿರ್ದೇಶಿಸು |
| ತುತ್ತುಱುಬು | 10-77 | ಗದ್ದಲ |
| ತುಳುವ | 7-80, 8-132, 10-77, 18-212 | ತುಳುನಾಡಿನವ ಅಥವಾ ತುಳು ಭಾಷೆಯವ |
| ತೆಕ್ಕೆತೆಕ್ಕೆ | 7-39, 18-112 | ರಾಶಿ ರಾಶಿ, ಗುಂಪು ಗುಂಪು |
| ತೆಗಬಗಿ | 2-57 | ವಿರಾಮ (?) |
| ತೆಟ್ಟಿ | 19-80 | ತಟ್ಟು |
| ತೆರೆಸೀರೆ | 8-17 | ಪರದೆ |
| ತೆಱಪು | 20-33 | ತೆರೆಯುವಿಕೆ |
| ತೊಡಚು | 8-109 | ಸಿಕ್ಕಿಸು |
| ತೊಂಡು | 16-27 | ತುಂಟು; ತುಂಟತನ |
| ತೋಟಿ | 17-54 | ಹೋರಾಟ |
| ದಗಡು | 7-12, 105, 8-71, 9-28 | ವಾದ್ಯವಿಶೇಷ |
| ದಡಿ | 10-21 | ದಡ, ತಟ |
| ದಂತಾವಳ (ಸಂ) | 10-70, 148 | ಆನೆ |
| ದಸಿ | 15-64 | ಬೆಣೆ |
| ದಳದುಳ | 12-112 | ಮಿಂಡೆ, ದೊಡ್ಡ ಸೂರೆ |
| ದಾಸಣ | 20-156 | ದಾಸವಾಳ |
| ದಿಕ್ಕನೆ | 10-56 | ಪಕ್ಕನೆ, ಒಡನೆ |
| ದಿಟ್ಟದಂಡೆ | 4-49, 5-53 | ಹಾರವಿಶೇಷ |
| ದಿವಾಣ | 3-126 | ಓಲಗಶಾಲೆ |
| ದೀರ್ಘಿಕೆ (ಸಂ) | 2-27, 14-48 | ಉದ್ದವಾದ ಬಾವಿ |
| ದೀವ | 2-60, 4-7, 12-30 | ಕೃತಕ ಪ್ರಾಣಿ |
| ದೋಟಿ | 7-137 | ಕೊಕ್ಕೆ |
| ದೋಹಳ (ದೋಹಲ) | 9-28, 17-100 | ವಾದ್ಯವಿಶೇಷ |
| ದೋಱಜಿಗೆ | 18-50 | [illegible] |
| ದೋರಸಮುದ್ರ | 19-115, 119, 20-98 | [illegible] |
| ಧಮ್ಮಿಲ್ಲ | 14-126 | ತುರುಬು |
| [illegible] | 10-88 | [illegible] |
| [illegible] | 7-142 | [illegible] |
| [illegible] (ಸಂ) | 10 148 | [illegible] |
| [illegible] | 13-119 | [illegible] |

| ಶಬ್ದಗಳು | ಸಂಧಿ-ಪದ್ಯಗಳ ವಿವರ | ಅರ್ಥ |
|---|---|---|
| ನಾಗದಾವರೆ | 14-17 | ಬೆಟ್ಟದಾವರೆ (?) |
| ನಾಡಾಡಿ | 2-43 | ನಿಕೃಷ್ಟ |
| ನಾಣೆಯ | 13-138 | ನಾಣ್ಯ |
| ನಾವಿದ | 8-58 | ನಾಪಿತ, ಕ್ಷೌರಿಕ |
| ನಿಗರ್ವ (ಸಂ) | 15-56 | ಅಧಿಕಗರ್ವ |
| ನಿತ್ತರ | 14-95 | ದಾಟುವಿಕೆ |
| ನಿರ್ಮಾಯ | 20-191 | ನಿಷ್ಕಪಟ |
| ನಿವಾಳಿ | 8-96 | ಅತ್ತಿತ್ತ ಚಲನೆ |
| ನಿಶಾಂತ (ಸಂ) | 17-113 | ಮನೆ, ವಾಸಸ್ಥಾನ |
| ನೀರೋಡು | 5-87, 20-128 | ಬೆವರು, ಹೆದರು |
| ನುರುವ | 14-42 | ಬರ್ಚಿ |
| ನೆಟ್ಟಿ | 16-88 | ಕೈಗಂಟು ಮುರಿವ ಶಬ್ದ |
| ನೆಲಗಪ್ಪು | 15-64 | ನೆಲದಲ್ಲಿ ಮಾಡಿದ ಹೊಂಡ |
| ನೆಲಬಲಿಕೆ | 11-26 | ಸುಭದ್ರತೆ |
| ನೇಜೆಯ | 7-32, 8-84, 3-128 | ಖಡ್ಗದ ಮೊನೆ, ಬಾಣದ ಆಕೃತಿ, ನಾರಾಚ —(ಸಂ) |
| ನೇತ್ರ | 8-57 | ಸೀರೆ |
| ನೇವಳ | 14-26 | ನೆಯ್ದುಸರಿಗೆ, ಗೋಪು |
| ನೇಹಿತ | 18-213 | ಸ್ನೇಹಿತ |
| ಪ ಪಗ | 19-59 | ಕರಡಿಗೆ |
| ಪಚಾರಿಸು | 18-181 | ನಿಂದಿಸು |
| ಪಚ್ಚೆವಳುಕು | 7-36 | ಪಚ್ಚೆಕರ್ಪೂರ |
| ಪಂಜು | 14-43 | ದೀವಟಿಗೆ |
| ಪಟ್ಟೆಯ | 18-20 | ಮಹಾಖಡ್ಗ |
| ಪಡಲಿಗೆ | 4-96, 102, 105, 8-15 | ತಟ್ಟೆ |
| ಪಡುಗ (ಪಡಿಗ) | 7-16, 97 | ಡವಕೆ, ಪೀಕದಾಣಿ, ಉಗುಳುಬುಡ್ಡಿ |
| ಪಣ್ಣೆ | 19-81 | ಗುಂಪು, ಸಾಲು |
| ಪತ್ತಿಗ | 16-40 | ನಂಟ, ಪಾಲುಗಾರ |
| ಪದ | 10-150 | ಸಮಯ |
| ಪನಿನೀರು | 10-67 | ಪನ್ನೀರು |
| ಪನ್ನೆ | 10-67 | ಕರ್ಪೂರ |
| ಪಂದಿಪುಟ್ಟು | 18-27 | ಆಯುಧ ವಿಶೇಷ |
| ಪರಪತಿ | 11-66 | ಪಾರುಪತ್ಯ, ಅಧಿಕಾರ |
| ಪರಿಜು | 8-7 | ಪ್ರತಿಮೆ, ಗೊಂಬೆ |
| ಪರಿಭವ | 14-26 | ಅಪಜಯ |
| ಪರಿವೃಢ (ಸಂ) | 11-84 | ಒಡೆಯ |
| ಪರೆ | 7-126 | ಒಂದು ಅಳತೆ (ಹತ್ತು ಸೇರು) |
| ಪಸರ | 3-57, 58 | ಅಂಗಡಿ |
| ಪೞಮೆ | 4-80, 169 | ತುಂಬಿ |
| ಪೞಿಪಡಿಸು | 20-34 | ಕೆಡಹು |
| ಪಾಗುಡ (ಪಾವುಡ) | 4-27, 10-91, 14-104 3-129 | ವಸ್ತ್ರದ ಉಡುಗೊರೆ, ಉಡುಗೊರೆ, ಉಪಗ್ರಾಹ್ಯ (ಪ್ರಾಭೃತ-ಸಂ) |

| ಶಬ್ದಗಳು | ಸಂಧಿ – ಪದ್ಯಗಳ ವಿವರ | ಅರ್ಥ |
|---|---|---|
| ಪಾಟಿ | 20-114 | ಸಮಾನತೆ |
| ಪಾಂಡುಮುಖಿ (ಪಾಡುಮುಖಿ) | 13-140 | ಬಿಳಿಮೋರೆಯುವ (?) ಹಾಡುವವ |
| ಪಾದಪ (ಸಂ.) | 1-96 | ಮರ |
| ಪಾಯಿಕ | 8-131 | ಪದಾತಿ |
| ಪಾಳೆ | 10-31 | ಸೂಳೆ |
| ಪಾವುಗೆ | 5-12, 7-16, 13-143 | ಪಾದುಕೆ |
| ಪಿಡಿಯಾಳು | 14-76, 18-195, 196 | ಕೈದಿ |
| ಪಿನಾಕಿ | 8-71, 9-29 | ವೀಣೆ |
| ಪಿಲ್ಲಿ | 8-44 | ಕಾಲುಂಗುರ |
| ಪಿಸುಣ | 11-35 | ಚಾಡಿ |
| ಪೀಲಿ | 15-80 | ನವಿಲ ಗರಿ |
| ಪುತ್ರಿಕೆ | 8-57 | ಗೊಂಬೆ |
| ಪುಷ್ಪ | 8-84 | ಒಪ್ಪಾದ ಗುರುತು |
| ಪೆಡಮಗೆಯು | 14-10 | ಮಹಾಶೇಷ |
| ಪೆಂಟೆಯ (ಪೆಂಡೆಯ) | 8-48 | ಪಾದದ ಆಭರಣ ವಿಶೇಷ |
| ಪೈರಣೆ | 13-135 | ಪಾದದ ವರೆಗೆ ಜೋಲುವ ಉಡಿಗೆ, ಪೈಜಾಮ (?), ಪೈಜಣೆ ಎಂಬ ಪಾದಾಭರಣ |
| ಪೈಸರಿಸು | 5-86, 7-139 | ಹಿಚ್ಚೆಯಿಡು, ಕಾಲ್ತೆಗೆ |
| ಪೊಟ್ಟಣ | 10-93 | ಕಟ್ಟು |
| ಪೊಂಗೋವಿ | 4-139 | ಚಿನ್ನದ ಕೋವಿ |
| ಪೌಜು | 10-102 | ಸೈನ್ಯ |
| ಬಕ್ಕೆ | 2-86 | ಬಲಿತ ಸೊಳೆಯ ಹಲಸು |
| ಬಗದಗೆ | 2-27 | ನೀರಾರಿದ ನದಿಯ ನೀರಿನ ಗುಳಿ |
| ಬತ್ತೀಸ | 19-70 | ಮೂವತ್ತೆರಡು |
| ಬಂಡಣ | 14-51, 80, 17-79 | ಯುದ್ಧ |
| ಬಂದಮಾಮರ | 2-114 | ಹಣ್ಣುತುಂಬಿದ ಮಾವಿನ ಮರ |
| ಬಂದಿಸು | 20-11, 46, 153 | ವಂದಿಸು |
| ಬಲುಗೈಯುಬ್ಬಸ | 16-86 | ಪರಾಕ್ರಮಾತಿಶಯ |
| ಬಸನೀರು | 10-42 | ಕೊಳಕು ನೀರು (?) |
| ಬಳಸು | 20-148 | ಬರಿದುಮಾಡು |
| ಬಳಿ | 8-105, 9-91, 14-48; 20-110 | ಅಳಿದೋಗು; ಬಲಿಯಾಗು |
| ಬಾಜಿಸು | 6-47 | ವಾದಿಸು |
| ಬಾದ | 8-80 | ಕೃಷಿಭೂಮಿ; ಗದ್ದೆನೆಲ |
| ಬಾಯಲಿ (ಬಾವಲಿ) | 8-48 | ಬಾಹುಪೂರ; ಕೇಯೂರ |
| [illegible] | 6-53; 8-89 | [illegible] |
| ಬಾಯಿನ | 5-47 | ಬಾಗಿನ, ಮುತ್ತೈದೆಯರಿಗೆ ದಾನ |
| [illegible] | 19-36 | [illegible] |
| [illegible] | 1?-42 | ಚಿಕ್ಕ ದೊಣ್ಣೆ |
| [illegible] | 10-117 | ಶೃಂಗಾರ |
| [illegible] | 20-162 | ಮುಕ್ತಿ |
| [illegible] | 12-15 | [illegible] |

| | ಶಬ್ದಗಳು | ಸಂಧಿ - ಪದ್ಯಗಳ ವಿವರ | ಅರ್ಥ |
|---|---|---|---|
| | ಬಾಳೆ | 7-94, 8-118 | ಒಂದು ಜಾತಿಯ ಮೀನು |
| | ಬಿಸಿಕೆ | ಅನುಬಂಧ III 20-57 | ಸಿಬಿಕೆ, ಪಲ್ಲಕ್ಕಿ |
| | ಬಿಜುಬು | 20-133 | ಕರೋರತೆ |
| | ಬುದ್ಧಿವೇಳು | 6-11 | ತಿಳಿಸು, ಸೂಚಿಸು |
| | ಬುಂಭುಕ | 4-171, 6-61 | ವಿಖ್ಯಾತ, ಪ್ರತಾಪಿ |
| | ಬೆಚ್ಚು | 3-78 | ಬೆಳೆಹುಲ್ಲಿನ ಮನುಷ್ಯಾಕೃತಿ, ಬೆದರಿಸುವ ಸಾಧನ |
| | ಬೆಂಚೆ | 2-107 | ಚಿಕ್ಕ ಕೊಳ |
| | ಬೆಟ್ಟಿ | 15-17 | ಹಗುರ, ನೀರಸ, ಅಲ್ಪ |
| | ಬೆಳಗೈ | 3-79 | ಬತ್ತದ ಪೈರು |
| | ಬೆಳ್ಳೈರಲೆ | 7-176 | ಬಿಳಿಹುಲ್ಲೆ |
| | ಬೇಳಾಗು | 10-39 | ಕಂಗೆಡು, ಮರುಳಾಗು |
| | ಬೊಜಂಗ | 10-39 | ವಿಟ |
| | ಬೊಡ್ಡಿ | 12-88 | ದಾಸಿ |
| | ಬೋದಿಗೆ | 7-22 | ಕಟ್ಟಡದ ಕಂಬ ಅಡ್ಡಗಳ ನಡುವಣ ಮರತುಂಡು ಅಥವಾ ಕಲ್ಲು |
| | ಬೋನಗುಡಿಕೆ | 7-13 | ಅನ್ನದ ಮಡಕೆ |
| | ಬೋಸರ | 3-87 | ಕಪಟ ಪ್ರೇಮ |
| ಭ | ಭಾಜನ (ಸಂ.) | 4-103 | ಪಾತ್ರ |
| | ಭಾವರಿ | 11-48, 20-90 | ಬಾಹುಪೂರ, ಬಾವುಲಿ |
| | ಬೂತಾಟ | 10-117 | ಬೂಟಾಟ, ಕಪಟೋಕ್ತಿ |
| | ಭೂತಾಳ | 10-117 | ದಟ್ಟಟಿ, ದಡ್ಡೋಲೆ |
| ಮ | ಮಂಚಿಗೆ | 2-68, 10-117 | ಹೊಲಕಾವ ಅಟ್ಟಳೆ |
| | ಮಂಜಸ | 8-44 | ಅರಿಸಿನ, ಮಂಜಳ (?) |
| | ಮಂಟಿಗೆ | 8-44 | ಒಂದು ಆಭರಣ |
| | ಮಡಿ | 20-91 | ಮಡಚು |
| | ಮಡ್ಡು | 8-71 | ವಾದ್ಯವಿಶೇಷ |
| | ಮತ್ತವಾರಣ (ಸಂ) | 3-121 | ಉಪ್ಪರಿಗೆಯ ಹೊರಜಗಲಿ |
| | ಮದಿಲು | 8-98 | ಹೊರಗೋಡೆ |
| | ಮಂತಸ್ತೆ (ಮಂತ್ರಸೆ) | 13-152 | (?) |
| | ಮಂದಸೆ (ಮದಾಸು) | 6-37, 44, 46, 47, 14-68 | ಚಿನ್ನದ ಪೆಟ್ಟಿಗೆ, ಮಂಜೂಷಾ (ಸಂ) |
| | ಮಲೀಮಸತೆ (ಸಂ) | 16-24 | ಮಲಿನತೆ |
| | ಮಸಗೆ | 14-146 | ಜಳ್ಳು |
| | ಮಾರ್ತಾಂಡ | 1-95 | ಸೂರ್ಯ |
| | ಮಾಸಾಳು | 3-14, 41 | ವೀರ, ಮುಂದಾಳು |
| | ಮಾಜುಗೊಳ್ | 1-85 | ಪ್ರತಿಭಟಿಸು |
| | ಮಿಡುಕು | 14-116 | ಅಲ್ಲಾಡು |
| | ಮಿಂಚೆ | 3-28, 67 | ಮಿಡಿತೆ |
| | ಮಿಂಟೆ | 4-155, 7-174, 12-15 | ಮಣ್ಣಿನ ಗಟ್ಟಿ |
| | ಮಿಸ್ಸು | 12-15 | ಮಿರುಗು, ಹೊಳಪು |
| | ಮಿಸುನಿ | 2-52, 115, 3-52 | ಚಿನ್ನ |
| | ಮುಕ್ಕಿಜು | 17-103 | ಕಷ್ಟದಿಂದ ನೋಯು |
| | ಮುಷುಕು | 20-88 | ಬಾಗುವಿಕೆ |

| ಶಬ್ದಗಳು | ಸಂಧಿ-ಪದ್ಯಗಳ ವಿವರ | ಅರ್ಥ |
|---|---|---|
| ಮುಂದಳ | 14-146 | ಮುಂದಣ |
| ಮುಜು | 8-71; 9-29, 17-100 | ಕೊಂಬುವಾದ್ಯ ವಿಶೇಷ |
| ಮೈಭೋಗ | 7-14 | ದೇಹಸುಖ |
| ಮೊಕ್ಕಳ | 3-127 | ಅತಿಶಯ |
| ಮೊಗರುಂಬ | 4-115 | ಮೊಗವಾಡ |
| ರಣರಣಕ (ಸಂ) | 9-40 | ವಿರಹ ಕಾತರತೆ |
| ರನ್ನಗರು | 8-7 | ರತ್ನದ ಗೊಂಬೆ |
| ರಯ್ಯ | 1-69, 108, 2-116, 3-73, 20-202 | ರಮ್ಯ |
| ರಾಣುವೆ | 13-130, 14-130, 131 | ಸೈನ್ಯ |
| ರಾವು | 12-55 | ರಾಹು |
| ರುಂದ್ರ | 11-1 | ವಿಸ್ತಾರವಾದ |
| ರೂಪುರೂಪು | 2-47 | ಎದುರೆದುರು; ಪ್ರತ್ಯಕ್ಷ |
| ರೂಪ್ಯ (ಸಂ) | 10-24 | ಬೆಳ್ಳಿ |
| ಲಂಬಣ | 8-86 | ಗೊಂಚಲು |
| ಲುಳಿ | 8-44, 46, 10-84; 13-134, 17-41 | ಒಂದು ಆಭರಣ |
| ಲೂಟಿ | 7-173 | ಜಗಳ, ದೊಂಬಿ |
| ವಡಬ (ಸಂ) | 19-120, 20-98 | ಕುದುರೆ, ಗ್ರಾಮ (ಮಡಂಬ) |
| ವಸುದಾಯಕ (ಸಂ) | 3-51 | ಕುಬೇರ (ಕನಕದಾಯಕ-ನೋಡಿ) |
| ವಿಡಾಯ | 1-132 | ಆಡಂಬರ |
| ವಿತರಣ (ಸಂ) | 19-6 | ದಾನ |
| ವೀಟಿಕೆ (ಸಂ) | 19-102 | ವೀಳ್ಯ |
| ವೀರಣ | 7-105 | ಜೆಂಡೆ, ವಾದ್ಯವಿಶೇಷ |
| ವೀರವಂದ | 8-72, 13-156 | ವಾದ್ಯವಿಶೇಷ |
| ವೃಜಿನ (ಸಂ) | 1-74 | ಪಾಪ |
| ವೆಗ್ಗಲಿಸು | 5-85 | ಹೆಚ್ಚಾಗು |
| ವೆಚ್ಚಿಸು | 8-41 | ವೆಚ್ಚಮಾಡು |
| ವೆಂತರ (ವ್ಯಂತರ) | 19-47, 89, 121; 20-175 | ಪಿಶಾಚ-ಗರುಡ-ಗಂಧರ್ವಾದಿ ದೇವತೆಗಳಲ್ಲಿ ಒಂದು ವರ್ಗ |
| ವೈಜಯಂತಿ | 7-32, 8-85 | ಧ್ವಜ |
| ವೃಷಿಕ (ವೈಶಿಕ) | 9-32, 10-40 | ಮೋಸ, ವಶೀಕರಣ |
| ವೈಹಾಳಿ | 1-134, 2-12 | ಕುದುರೆಸವಾರಿ |
| ಶರ್ವರಿ (ಸಂ) | 5-38 | ರಾತ್ರಿ |
| ಶ್ಯಾನಭಾವ | 10-80 | ಶಾನಭಾಗ, ಸೇನಬೋವ |
| ಶಿಖಿ (ಸಂ) | 1-109 | ನವಿಲು |
| ಶೋಣ (ಸಂ) | 10-128 | ಕೆಂಪು |
| ಸಪಾಟಿಕೆ | 11-17 | ಧೈರ್ಯ, ಹಿಗ್ಗು, ವಿಶ್ವಾಸ |
| ಸಮ್ಮದ | 10-66 | ಸಂತೋಷ |
| ಸಂಬಳ | 13-122 | ವೇತನ |
| ಸಂವರಿಸು | 13-122, 125 | ಸರಿಮಾಡು; ವ್ಯವಸ್ಥೆಪಡಿಸು |
| ಸರವಿ | 18-34 | ಹಗ್ಗ |

| | ಶಬ್ದಗಳು | ಸಂಧಿ - ಪದ್ಯಗಳ ವಿವರ | ಅರ್ಥ |
|---|---|---|---|
| | ಸರಾತಿ | 7-13 | ಪಟಭಿತ್ತಿ |
| | ಸಋಿಮಿಂಡಿ | 3-88, 18-78, 20-189 | ಪ್ರಥಮಋತುವಾಗದವಳು |
| | ಸಲಿಗೆ | 12-38 | ಶಲಾಕೆ |
| | ಸವಡುನುಡಿ | 10-40 | ಬಂಡುಮಾತು |
| | ಸಸಿ | 18-60 | ಚಿಕ್ಕದಾಗು, ನಾಶವಾಗು |
| | ಸಸಿನ | -10-13 | ಸರಿ |
| | ಸಹಣಿ (ಸಂ) | 3-13, 8-130, 132, 18-212 | ಅಶ್ವಶಿಕ್ಷಕ |
| | ಸಾದು | 8-82 | ಜಾಜು, ಕೆಂಪು ಸಾರಣೆ ಕಲ್ಲು |
| | ಸಾಧ್ಯ (ಸಂ) | 9-21 | ವಶ |
| | ಸಾಮಜ (ಸಂ) | 19-10 | ಆನೆ |
| | ಸಾಳುವ | 15-70 | ಬೇಟೆಗೆ ಉಪಯೋಗಿಸುವ ಡೇಗೆ ಹಕ್ಕಿ |
| | ಸಿಗುಡಿ (ಸಿಗಡ) | 12-130 | ಅಶ್ಲೀಲೆ |
| | ಸಿತಭಾನು (ಸಂ) | 19-6, 19-3 | ಚಂದ್ರ |
| | ಸಿಂದ | 7-32 | ಪತಾಕೆಯ ವಸ್ತ್ರ |
| | ಸಿರಪಾಣಿ | 10-120 | ಸೀರ್ಪಾನಿ, ತುಂತುರುಹನಿ |
| | ಸಿರಿದಾರ | 11-48 | ಶ್ರೀದ್ವಾರ |
| | ಸೀಸಕ | 18-77 | ಶೀರ್ಷಕ, ಶಿರಸ್ತ್ರಾಣ |
| | ಸುಗಾಡಿ | 5-74, 8-98 | ಚೆಲುವು |
| | ಸುಜ್ಜಲು | 15-59 | ಒಂದು ಮರ |
| | ಸುನಲವು | 11-5 | ಒಳ್ಳೆಯ ಪ್ರೀತಿ |
| | ಸುಪಾಣಿ | ಅನುಬಂಧ III 20-6 | ಸ್ವಚ್ಛವಾದ |
| | ಸುಱಿ | 18-41 | ಸದ್ದಾಗುವಂತೆ ಹೀರು |
| | ಸೂಡಗ (ಸೂಡಂಗ) | 8-46, 10-84 | ಬಳೆ, ಕಟಕ, ವಲಯ |
| | ಸೂಡುಪಾಡು | 10-16 | ಪಂಥ ಪೌರುಷ |
| | ಸೆಕ್ಕುಂದುಱುಬು | 7-103 | ಸಿಕ್ಕಿನಿಂದ ಕೂಡಿದ ತುರುಬು |
| | ಸೆಜ್ಜೆವನೆ | 3-126 | ಶಯ್ಯಾಗೃಹ |
| | ಸೇವಲ | 18-148 | ಶೈವಲ (ಸಂ), ಹಾವಸೆ |
| | ಸೇಸರಿಸು | 18-177 | ಚೇತರಿಸು |
| | ಸೊಕ್ಕು | 10-57 | ಮದಹೊಂದು |
| | ಸೊನ್ನಾರಿ | 3-65 | ಸೊನ್ನೆಗಾರ |
| | ಸೊಪ್ಪು | 10-55 | ಪುಡಿ, ಕಾರ್ಶ್ಯ |
| | ಸೊರೆ | 14-33 | ಸೋರೆಕಾಯಿ |
| | ಸೋನೆ | 1-89 | ಮಳೆ |
| | ಸೋಮಗತಿ (ಸಂ) (ಏಣಾಂಕಗತಿ) | 10-112 | ಮೆಲುನಡೆ |
| | ಸ್ವಸ್ತ್ರೀ | 11-74 | ಹೆಂಡತಿ, ಸ್ವರ್ಗದ ಸ್ತ್ರೀ, |
| ಹ | ಹಜಾರ | 3-126 | ಚಾವಡಿ |
| | ಹತ್ತಗಟ್ಟು (ಹತ್ತೆಗಟ್ಟು) | 7-73, 8-47, 13-133, 16-40, 17-40 | ಕೈಯ ಆಭರಣ |
| | ಹದಿರು | 3-86 | ಯುಕ್ತಿ, ಜಾಣ್ಮೆಯ ಮಾತು |
| | ಹಮ್ಮೈಸು | 16-88 | ಮೂರ್ಛೆಹೋಗು |
| | ಹರಗು | 10-146 | ಹಗುರ, ಸುಲಭ |
| | ಹರಿಗೆ | 13-137, 17-110 | ಫಲಕ, ಅಡ್ಡಣ, ಗುರಾಣಿ |

| ಶಬ್ದಗಳು | ಸಂಧಿ - ಪದ್ಯಗಳ ವಿವರ | ಅರ್ಥ |
|---|---|---|
| ಹಲಿನೀಲ | 3-82 | ಹರಿನೀಲ; ನೀಲಿಬಣ್ಣ |
| ಹಸೆನಿಲ್ಲು | 20-9 | ಮದುವೆಯಾಗು |
| ಹಸ್ತರವಿ (ಸಂ) | 8-46 | ಕೈಯ ಆಭರಣ |
| ಹಱಿವು | 15-53 | ದಾರಿ, ಪರಿಹಾರ |
| ಹಾಕತೆ | 20-163 | (?) |
| ಹಿಡಿಯಾಳು | 12-95 | ಸೆರೆಯಾಳು |
| ಹಿಳ್ಕು | 7-177 | ಮರಿ |
| ಹೀಹೇಳಿಕೆ | 18-164 | ಹೀಯಾಳಿಕೆ |
| ಹುಡುಕುನೀರು | 10-129 | ಸುಡುನೀರು, ಬತ್ತನೆನೆಸಿದ ಬಿಸಿನೀರು |
| ಹೂನ್ಯ | 11-82 | ಪುಣ್ಯ |
| ಹೆಣ್ಣೀಳಿಸು | 16-94 | ಸುಲಭವಾಗಿ ಏಳಿಸು |
| ಹೊಕ್ಕರಣಿ | 2-27 | ಕೊಳ, ಪುಷ್ಕರಿಣಿ-(ಸಂ.) |
| ಹೊತ್ತುಹೋಕು | 14-75 | ಕಾಲಯಾಪನೆ |
| ಹೊರಜೆ | 4-116 | ಆನೆಯ ಕೊರಲ ಹಗ್ಗ, ಆಭರಣ |
| ಹೊಲಬು | 9-39 | ದಾರಿ, ಉಪಾಯ |
| ಹೊಱಿಗೆ | *12-85*, *14-84*, *15-7*, *36*, *49*, 16-112, 20-141 | ತೀವ್ರತೆ, ಪರಿಪಕ್ವತೆ, ಹೊಣೆಗಾರಿಕೆ |
| ಹೋಕು | 16-9 | ಅಸ್ಥಿರ; ಹೋಗುವಂತಹದು |
| ಱಂಚೆ | 4-116 | ಗುಳ, ಕುದುರೆ ಆನೆಗಳ ಪಕ್ಕರಕ್ಕೆ |
| ಱುಂಚೆ | 8-71, 9-29 | ಒಂದು ಯುದ್ಧವಾದ್ಯ |
| ಱೋಡಾಡು | 16-83 | ಅಪಹಾಸ್ಯ ಮಾಡು |

# ಅನುಬಂಧ ೫

## ಟಿಪ್ಪಣಿ

೧. **ಅಷ್ಟಕರ್ಮಗಳು** (1-12, 16, 20-157)

ಘಾತಿಕರ್ಮಗಳು ೪ ಅಘಾತಿಕರ್ಮಗಳು ೪—ಒಟ್ಟು ೮

**ಘಾತಿಕರ್ಮಗಳು**—ಜೀವವನ್ನು ಸಂಸಾರದಲ್ಲಿ ಸಿಲುಕಿಸಿ, ಅದು ತನ್ನ ಸಹಜ ಸ್ಥಿತಿಯನ್ನು ಪಡೆಯದಂತೆ ಮಾಡುವುವು— (1) ಜ್ಞಾನಾವರಣೀಯ, (2) ದರ್ಶನಾವರಣೀಯ, (3) ಅಂತರಾಯ, (4) ಮೋಹನೀಯ

**ಅಘಾತಿಕರ್ಮಗಳು**—ಜೀವವು ಸಂಸಾರದಲ್ಲಿ ಹುಟ್ಟಿಬರುವ ಸಂದರ್ಭ—ಶರೀರ ಮುಂತಾದುವನ್ನು ನಿರ್ಧರಿಸುವವು, ಇವು ಕೇಡುಮಾಡುವವಲ್ಲ— (1) ಆಯುಃಕರ್ಮ, (2) ನಾಮಕರ್ಮ, (3) ಗೋತ್ರಕರ್ಮ, (4) ವೇದನೀಯಕರ್ಮ

೨. **ಉಪಸರ್ಗ** (1-2) ಜೈನಮುನಿಗಳ ತಪಸ್ಸಿಗೆ ವಿಘ್ನಕರವಾದ ಕಿರುಕುಳಗಳು

೩. **ಕೇವಳಿ** (20-74) ಕೇವಲ ಜ್ಞಾನ ಪಡೆದವನು

ರತ್ನತ್ರಯದಲ್ಲಿ ಸಮ್ಯಗ್‌ಜ್ಞಾನವೆಂಬುದೊಂದು, ಇದರಲ್ಲಿ ಐದು ಬಗೆ—(1) ಮತಿಜ್ಞಾನ, (2) ಶ್ರುತಜ್ಞಾನ, (3) ಅವಧಿಜ್ಞಾನ, (4) ಮನಃಪರ್ಯಯಜ್ಞಾನ, (5) ಕೇವಲಜ್ಞಾನ

(1) ಮತಿಜ್ಞಾನ— ಇಂದ್ರಿಯ ಮನಸ್ಸುಗಳಿಂದ ಪಡೆವಂಥದು

(2) ಶ್ರುತಜ್ಞಾನ—ಓದಿ, ಕೇಳಿ, ತಿಳಿವಂಥದು

(3) ಅವಧಿಜ್ಞಾನ—ದೂರವಾಗಿರುವ ಕಾಲ-ದೇಶಗಳ ವಿಷಯಗಳನ್ನು ಕೆಲವು ಮಿತಿಗಳಿಗೆ ಒಳಪಟ್ಟು ತಿಳಿವಂಥದು ಇದನ್ನು "ಭವಪ್ರತ್ಯಯಜ್ಞಾನ" ಎಂತಲೂ ಕರೆವರು ಆಯಾ ರ್ಮಕ್ಷಯ ಮಾಡಿದವರು ಇದನ್ನು ಪಡೆಯಬಲ್ಲರು ದೇವನಾರಕರಿಗೆ ಇದು ಸಹಜವಾಗಿ ಬರುತ್ತದೆ

(4) ಮನಃಪರ್ಯಯ ಜ್ಞಾನ–ಇತರರ ಮನಸ್ಸಿನಲ್ಲಿರುವುದನ್ನು ತಿಳಿವ ಮನೋವಿಜ್ಞಾನ, ಇದು ಸಂಯಮಿಗಳಿಗೆ ಲಭಿಸುವುದು

(5) ಕೇವಲಜ್ಞಾನ—ಪರಿಶುದ್ಧವೂ ಪರಿಪೂರ್ಣವೂ ಸರ್ವವ್ಯಾಪಿಯೂ ಅನಂತವೂ ಆಗಿರುವ ಜ್ಞಾನವಿದು ಕರ್ಮಬಂಧವನ್ನು ಹರಿದೊಗೆದ ಮುಕ್ತಜೀವಿಗೆ ಇದು ಸಹಜವಾಗಿ ಸಿದ್ಧಿಸುವುದು

೪. **ಗಣಧರರು**—ತೀರ್ಥಂಕರರ ಶಿಷ್ಯೋತ್ತಮರು

೫. **ತ್ರಿಗುಪ್ತಿ** (20-125)

(1) ಮನೋಗುಪ್ತಿ—ಸುಖ-ದುಃಖ, ರಾಗ-ದ್ವೇಷ ವಿಷಯಗಳಲ್ಲಿ ಸಮಬುದ್ಧಿಯಿಂದ ವರ್ತಿಸಿ ಆತ್ಮಕಲ್ಯಾಣವನ್ನು ನೆಸೆಯುವುದು

(2) ವಚನಗುಪ್ತಿ—ಮೌನ, ಅಥವಾ ಮಿತವಾಗಿ ಮಾತಾಡುವುದು

(3) ಕಾಯಗುಪ್ತಿ—ಶಾಸ್ತ್ರಗಳಲ್ಲಿ ಹೇಳಿರುವಂತೆ ಆಚರಣೆ

೬. **ಪಂಚಕಲ್ಯಾಣ** (1-1, 22)

ತೀರ್ಥಂಕರರ ಚರಿತ್ರೆಗೆ ಸಂಬಂಧಪಟ್ಟ ಐದು ಬಗೆಯ ಉತ್ಸವಗಳಿವು—

(1) ಗರ್ಭಾವತರಣ ಕಲ್ಯಾಣ (ಸುರಲೋಕಾವತರೋತ್ಸವ)

(2) ಜನ್ಮಾಭಿಷೇಕ ಕಲ್ಯಾಣ (ಜನ್ಮಾಭಿಷೇಕೋತ್ಸವ)

(3) ಪರಿನಿಷ್ಕ್ರಮಣ ಕಲ್ಯಾಣ (ಪರಿನಿಷ್ಕ್ರಾಂತಿ ಮಹೋತ್ಸವ)

(4) ಕೇವಲಜ್ಞಾನ ಕಲ್ಯಾಣ (ಕೈವಲ್ಯ ಬೋಧೋತ್ಸವ)

(5) ಪರಿನಿರ್ವಾಣ ಕಲ್ಯಾಣ (ಪರಿನಿರ್ವಾಣ ಮಹೋತ್ಸವ)

೭. **ಪಂಚಪರಮೇಷ್ಠಿಗಳು** (1-22)

(1) ಅರ್ಹಂತರು, (2) ಸಿದ್ಧರು, (3) ಆಚಾರ್ಯರು, (4) ಉಪಾಧ್ಯಾಯರು, (5) ಸಾಧುಗಳು—ಈ ಐವರು

(1) **ಅರ್ಹಂತರು**—ತಪಸ್ಸುಮಾಡಿ, ಘಾತಿಕರ್ಮಗಳನ್ನು ನಾಶಗೊಳಿಸಿ, ಕೇವಲ ಜ್ಞಾನ ಪಡೆದ ಜೀವನ್ಮುಕ್ತರು, ಸದೇಹಮುಕ್ತರು

(2) **ಸಿದ್ಧರು**—ಘಾತಿ ಮತ್ತು ಅಘಾತಿಕರ್ಮಗಳನ್ನು ಬಿಟ್ಟು, ದೇಹತ್ಯಾಗ ಮಾಡಿ, ಶಾಶ್ವತಸುಖದಲ್ಲಿ ನೆಲಸಿದವರು ಸಿದ್ಧರಲ್ಲಿ ಎರಡು ಬಗೆ—ತಾವು ಮಾತ್ರ ಸಿದ್ಧಿಯನ್ನು ಸಾಧಿಸಿದವರು **ಸಾಮಾನ್ಯಸಿದ್ಧರು**; ಧರ್ಮಬೋಧೆ ಮಾಡಿ ಇತರರಿಗೂ ಸಿದ್ಧಿಗೆ ನೆರವಾದವರು, **ತೀರ್ಥಂಕರ ಸಿದ್ಧರು.**

(3) **ಆಚಾರ್ಯರು**—ಅರ್ಹಂತ, ಕೇವಲಿಗಳಿಗಿಂತ ಕೆಳಗಿನ ಮಟ್ಟದಲ್ಲಿದ್ದು, ದ್ವಾದಶ ತಪಸ್ಸುಗಳು–ದಶಧರ್ಮಗಳು–ಷಡಾವಶ್ಯಕಗಳು – ಪಂಚಾಚಾರಗಳು – ತ್ರಿಗುಪ್ತಿಗಳು ಎಂಬೀ ಮೂವತ್ತಾರು ಗುಣಗಳಿಂದ ಕೂಡಿದ್ದು, ಲೋಕಕಾರುಣ್ಯದಿಂದ ಶಿಷ್ಯರಿಗೆ ಧರ್ಮೋಪದೇಶ ಮಾಡಿ, ಅವರ ಆಚಾರಗಳನ್ನು ತಿದ್ದಿ, ದಾರಿ ತೋರಿಸುವವರು

(4) **ಉಪಾಧ್ಯಾಯರು** – ಆಚಾರ್ಯರಿಗಿಂತ ದೈವಿಕ ಸಂಪತ್ತಿನಲ್ಲಿ ಕೆಳಗಿನ ಮಟ್ಟದಲ್ಲಿದ್ದು, ಜೈನಾಗಮಗಳನ್ನು ಭವ್ಯಜನರಿಗೆ (ಮೋಕ್ಷಾರ್ಥಿಗಳಿಗೆ) ತಿಳಿಸುವವರು

(5) **ಸಾಧುಗಳು**—ದಯಾವಂತರೂ ಮಹಾವ್ರತಗಳನ್ನು ಆಚರಿಸುವವರೂ ಚಾರಿತ್ರ – ಶೀಲಗಳನ್ನು ನಡೆಸುವವರೂ ಆದ ಸಾಮಾನ್ಯ ಸನ್ಯಾಸಿಗಳು

ಈ ಪಂಚಪರಮೇಷ್ಠಿಗಳಿಗೆ ನಿತ್ಯಪ್ರಾರ್ಥನಾರೂಪದಲ್ಲಿ ಸಲ್ಲಿಸುವ ಐದು ಬಗೆಯ ನಮಸ್ಕಾರಗಳು 'ಪಂಚ ನಮಸ್ಕಾರಗಳು'; ಇವನ್ನು 'ಪಂಚಪದ'ಗಳೆಂದೂ ಹೇಳುವರು

**ಪಂಚಾಚಾರಗಳು (1–17)**

(1) ದರ್ಶನಾಚಾರ—ಜಿನಧರ್ಮದಲ್ಲಿ ತೀವ್ರವಾದ ಮತ್ತು ಸ್ಥಿರವಾದ ನಂಬಿಕೆ

(2) ಜ್ಞಾನಾಚಾರ—ಜ್ಞಾನವನ್ನು ಹೆಚ್ಚಿಸುವುದು

(3) ಚಾರಿತ್ರಾಚಾರ—ನಿತ್ಯಜೀವನವನ್ನು ಉತ್ತಮಪಡಿಸುವುದು

(4) ತಪ ಆಚಾರ—ದೊಡ್ಡ ತಪಸ್ವಿಯಾಗುವುದು

(5) ವೀರ್ಯಾಚಾರ—ಆತ್ಮಬಲವನ್ನು ಹೆಚ್ಚಿಸುವುದು.

**ರತ್ನತ್ರಯ (1-24, 3-168, 4-151, 20-83)**

ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ— ಎಂಬೀ ಮೂರು.

(1) ಸಮ್ಯಗ್ದರ್ಶನ—ತೀರ್ಥಂಕರರು,ಗುರುಗಳು, ಶಾಸ್ತ್ರಗಳು —ಇವುಗಳಲ್ಲಿ ಶ್ರದ್ಧೆಯನ್ನೂ ವಿಶ್ವಾಸವನ್ನೂ ಇಡುವುದು

(2) ಸಮ್ಯಗ್‌ಜ್ಞಾನ—ಸಮ್ಯಗ್ದರ್ಶನದಿಂದ ಗ್ರಹಿಸಿದುದನ್ನು ಚೆನ್ನಾಗಿ ತಿಳಿದುಕೊಳ್ಳುವುದು. ಸಮ್ಯಗ್‌ಜ್ಞಾನದಲ್ಲಿ ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಯಜ್ಞಾನ, ಕೇವಲಜ್ಞಾನ ಎಂದು ಐದು ವಿಧಗಳಿವೆ

(3) ಸಮ್ಯಕ್ಚಾರಿತ್ರ— ಸಮ್ಯಗ್ದರ್ಶನ–ಸಮ್ಯಗ್‌ಜ್ಞಾನಗಳಿಂದ ತಿಳಿದುದನ್ನು ಆಚರಣೆಯಲ್ಲಿ ತರುವುದು. ಇದನ್ನೇ 'ಸದಾಚಾರ' ಎಂತಲೂ ಹೇಳುವರು.

**೧೦. ಪರಿನಿಷ್ಕ್ರಮಣ (20-74)**

ತೀರ್ಥಂಕರ ಜೀವನದಲ್ಲಿ ನಡೆವ ಪಂಚಕಲ್ಯಾಣಗಳಲ್ಲಿ ಮೂರನೆಯದು ತೀರ್ಥಂಕರನಾಗುವವನ ಮನಸ್ಸಿನಲ್ಲಿ ವೈರಾಗ್ಯಮೂಡಿ, ದೀಕ್ಷೆಪಡೆದು, ತಪಸ್ಸಿಗೆ ನಡೆವ ಕಾರ್ಯವಿದು.

**೧೧. ಸಮವಸರಣ (6-59, ಅನುಬಂಧ III 20-58)**

ಇದು ತೀರ್ಥಂಕರನ ಧರ್ಮೋಪದೇಶ ಸಭೆ—ಇಲ್ಲಿ ಲೋಕಕ್ಕೆ ಧರ್ಮೋಪದೇಶ ಮಾಡುವ ತೀರ್ಥಂಕರನ ದಿವ್ಯ ಬೋಧನೆಗೆ ಅನುಕೂಲವಾಗುವಂತೆ ಕುಬೇರನು ನಿರ್ಮಿಸಿದ ಮಂಟಪವಿರುವುದು ಈ ಸಮವಸರಣದಲ್ಲಿ ಮಾನವರೂ ದೇವತೆಗಳೂ ಮಾತ್ರವಲ್ಲದೆ, ಸಮಸ್ತ ಜೀವಿಗಳೂ ಒಂದು ಸೇರಿ ಉಪದೇಶವನ್ನು ಕೇಳುವರು. ಸ್ವಾಮಿಯ ಸನ್ನಿಧಿಯಿಂದ ಅಲ್ಲಿನ ಸಮಸ್ತ ಪ್ರಾಣಿಗಳಲ್ಲಿಯೂ ಪರಸ್ಪರ ದ್ವೇಷವು ನಾಶವಾಗುವುದು

**೧೨. ಸಮ್ಯಕ್ತ್ವ**

ಜೈನಧರ್ಮತತ್ವಗಳಲ್ಲಿ ಪರಿಪೂರ್ಣವಾದ ನಂಬಿಕೆ ಸಮ್ಯಕ್ತ್ವವೆನಿಸುವುದು ಇದನ್ನು ಸಮ್ಯಗ್ದರ್ಶನವೆನ್ನಬಹುದು.

**೧೩. ಕಲ್ಪ (4-170)**

ಸೌಧರ್ಮ, ಈಶಾನ, ಸಾನತ್ಕುಮಾರ, ಮಾಹೇಂದ್ರ, ಬ್ರಹ್ಮ, ಲಾಂತವ, ಮಹಾಶುಕ್ರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ—ಎಂಬೀ ಹನ್ನೆರಡು ಕಲ್ಪಗಳು

# ಅನುಬಂಧ ೬

## ಗ್ರಂಥಸಹಾಯ


1 ಕನ್ನಡ ನಾಡಿನ ಚರಿತ್ರೆ—ಬಾಗ ೧, 1953—ಕ ಸಾ ಪರಿಷತ್ತು

2 Epigraphia Carnatica, Vol I 1914—Coorg Inscriptions, By B Lewis Rice, C I E

3 Epigraphia Carnatica, Vol IV 1898—Inscriptions of Mysore District, By B Lewis Rice, C I E

4 ಕವಿಚರಿತೆ ಭಾಗ ೧, ೨, ೩

5 ನಂಜುಂಡ ಕವಿ—ರಾಮನಾಥ ಚರಿತ

6 ಮಂಗರಸ ಕವಿ—ಜಯನೃಪ ಕಾವ್ಯ

7 ಮಂಗರಸ ಕವಿ—ಸಮ್ಯಕ್ತ್ವ ಕೌಮುದಿ

8 ಗುಣಭದ್ರಾಚಾರ್ಯ—ಉತ್ತರಪುರಾಣ

9 ನಾಗಚಂದ್ರ—(ಪಂಪರಾಮಾಯಣ)

10 ಪಂಪರಾಮಾಯಣ ಸಂಗ್ರಹ—(ಮೈಸೂರು ವಿಶ್ವವಿದ್ಯಾಲಯ)

11 ನಾಗಚಂದ್ರ—ಮಲ್ಲಿನಾಥ ಪುರಾಣ

12 ನೇಮಿಚಂದ್ರ—ಲೀಲಾವತೀ ಪ್ರಬಂಧ

13 ಸಮಂತಭದ್ರ—ರತ್ನಕರಂಡಕ ಶ್ರಾವಕಾಚಾರ

14 ಮಿರ್ಜಿ ಅಣ್ಣಾರಾಯ—ಜೈನಧರ್ಮ

15 ಪ್ರೊ ಡಿ ಎಲ್ ನರಸಿಂಹಾಚಾರ್—ಗ್ರಂಥಸಂಪಾದನೆ

16 ಪ್ರೊ ಡಿ ಜವರೇಗೌಡ—ನಂಜುಂಡ ಕವಿ

17. ಕೇಶಿರಾಜ—ಶಬ್ದಮಣಿದರ್ಪಣ

18 Kittel Dictionary

# ತಿದ್ದುಪಡಿ ಪಟ್ಟಿ

| ಪುಟ | ಪದ್ಯ | ಅನುವಾದ | ಪಂಕ್ತಿ | ಪದ | ತಿದ್ದುಪಡಿ |
|---|---|---|---|---|---|
| 80 | ೩೬ | ೧೧೮ | ೧ | ಕಣ್ಣಿನ | ದಾಡೆಯ |
| 145 | | | ೨ | ದೊಡಬಟ್ಟಿ | ದೊಡಬಟ್ಟಿ |
| 171 | ೧೭ | ೮೨ | ೧ | ಹುಟ್ಟ | ಹುಟ್ಟಿ |
| 172 | | ೪ | ೨ | ಸಂತಪ | ಸಂತಹ |
| 174 | ೧೭ | | ೨ | ಪಾದಬ್ಬಾಕ್ಷಿ | ಪಾದುದಬ್ಬಾಕ್ಷಿ |
| 175 | ೨೨ | | ೧ | ಸುದಶಿ | ಸುದತಿ |
| 239 | ೩೮ | | ೨ | ಸಿರಿದ | ಸಿರಿಸದ |
| 269 | ೧೦೦ | | ೨ | ದೈದಿನಬಲೆ | ದೈದಿವನಬಲೆ |
| 278 | ೧೭೦ | | ೨ | ತಪ್ಪಡು | ತಪ್ಪದು |
| 292 | ೬೮ | | ೧ | ತಗೆವ | ತೆಗೆವ |
| 317 | ೩೨ | | ೧ | ಪಾವುಗೆಯ[4] | ಪಾವುಗೆಯ[3] |
| ,, | ೩೪ | | ೨ | ದಬ್ಬಾಕ್ಷಿ[5] | ದಬ್ಬಾಕ್ಷಿ[4] |
| 319 | ೪೯ | | ೧ | ರಟ್ತಿದ | ರಟ್ಟಿದ |
| 330 | ೭ | | ೨ | ದಲಂಕ | ದಕಲಂಕ |
| 332 | ೨೫ | | ೨ | ನಜೆಗಲಿ | ನೆಜೆಗಲಿ |
| 333 | ೩೧ | | ೧ | ದೊಪಣ | ದೂಪಣ |
| 341 | ೯೭ | | ೧ | ಸವಳ್ವವರಿಂ | ಸರಳ್ವವರಿಂ |
| ,, | ೯೮ | | ೧ | ದಜೆಂದು | ದಜ್ಜೆಂದು |
| 346 | ೧೩೬ | | ೧ | ದವರೆಗೆ | ದವರಿಗೆ |
| 348 | ೧೫೧ | | ೨ | ತೊಡದೊಡೆ | ಕೊಡದೊಡೆ |
| 350 | ೧೬೨ | | ೧ | ಸಮುಸಹು | ಸಮುದಹು |
| 351 | | ೧೭೫ | ೩ | ಆಗೆ | ಆಗ |